# ವರಾಹ ಮಹಾಪುರಾಣ

ಪಂ. ಪಂಢರೀನಾಥಾಚಾರ್ಯ ಗಲಗಲಿ





ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ವರಾಹ ಮಹಾಪುರಾಣ

ಅನುವಾದ-ಲೇಖಕರು
ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯ ಗಲಗಲಿ**

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ
ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ

-: ಪ್ರಕಾಶಕರು :--

**ಖೋಡೇ ಫೌಂಡೇಶನ್**

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 26320014 ಫ್ಯಾಕ್ಸ್ : 0091-80-26321416

VARĀHA MAHĀPURĀṆA of Bhagavan Sri Vedavyasa,
Edited and Translated in to Kannada by Rastraprashasti, Rajyaprashasti,
Ramakrishna Dhalmia Lakshmi Shreevani Alankarana Prashasti
Puraskrutha Panditha Sri Pandarinathacharya Galagali
Vishveswara Nagar, Shanti Colony, Hubli-580032 Ph : (0836) 250250

First Edition : 1972

Second Edition : 2004

No. of Pages : xxxiv + 487

No. of Copies : 1,000



Price : Rs. 180 = 00

Designed &
Printed at : SRI VENKATESHWARA PRINTERS
No. 3, Yellappa Road, Susheela Road Cross
Chick mavalli, Lalbagh - Crumbigal Road Cross
BANGALORE-560 004
Phone : 26573001

# ಪುರಾಣ ಪರಿಶೀಲನ

## ಪುರಾಣಗಳ ಪ್ರಾಚೀನತೆ ಹಾಗೂ ಸಮೀಚೀನತೆಗಳ ಸಪ್ರಮಾಣ ಮಂಡನೆ

ಪುರಾಣಗಳು ಭಾರತೀಯ ಸಂಸ್ಕೃತಿಯ ಉಸಿರು. ಸೃಷ್ಟಿಯ ಪ್ರಾರಂಭ ಕಾಲದಿಂದ ಮಾನವನ ಮಿದುಳಿನಿಂದ ಹೊರಟ ವಿಚಾರ ಧಾರೆಗಳೆಲ್ಲವೂ ಅಲ್ಲಿ ಮಡುಗಟ್ಟಿ ನಿಂತಿವೆ. ಪ್ರಾಗೈತಿಹಾಸಿಕ ಕಾಲದಿಂದ ವಿಚಾರವಂತ ಜೀವಿಯ ನಡೆ, ನುಡಿ, ಶ್ರದ್ಧೆ, ಸಂಪ್ರದಾಯಗಳಿಗೂ ವೈಚಾರಿಕ ವಿಕಾಸಕ್ಕೂ ಆ ಪೌರಾಣಿಕ ನುಡಿ ಕನ್ನಡಿ ಹಿಡಿಯುತ್ತದೆ.

"**ಆತ್ಮಾ ಪುರಾಣಂ ವೇದಾನಾಂ**" ಎಂಬಂತೆ ವೇದವಾಙ್ಮಯದ ಆತ್ಮವೇ ಪುರಾಣ. ವೇದ ಎಲ್ಲರಿಗೂ ನಮ್ಯವಾದರೂ ಎಲ್ಲರಿಗೂ ಗಮ್ಯವಿಲ್ಲ. ಯೋಗ್ಯತೆ ಇಲ್ಲದವರು ಅದನ್ನು ಓದಿದರೆ ಅದು ಕ್ಷಮ್ಯವೂ ಅಲ್ಲ. ಆದರೆ ಆ ಊದಿನಕಡ್ಡಿಯ ವಾಸನೆ ಎಲ್ಲರಿಗೂ ದೊರಕಬೇಕು. ಆ ಬಲ್ಬಿನ ಬೆಳಕು ಎಲ್ಲೆಡೆಗು ಚೆಲ್ವರಿಯಬೇಕೆಂಬ ಉದ್ದೇಶದಿಂದಲೇ ಪುರಾಣಗಳ ಪ್ರವೃತ್ತಿ. ವೇದ ಪಾರಿಜಾತವನ್ನು ಎಲ್ಲಿಯೇ ನೆಟ್ಟಿದ್ದರೂ ಹೇಗೆ ಇಟ್ಟಿದ್ದರೂ ಆ ಜ್ಞಾನಪುಷ್ಪದ ಪರಿಮಳವನ್ನು ಪ್ರತಿಯೊಬ್ಬನ ನಾಸಿಕ ಕ್ಷೇತ್ರಕ್ಕೆ ತಲುಪಿಸುವ ಕೆಲಸವನ್ನು ಪುರಾಣಗಳು ಮಾಡುತ್ತವೆ.

ಪಶುತ್ವದ ಮಟ್ಟದಿಂದ ಮೇಲೆದ್ದು ಮಾನವತೆಯ ಹಂತಕ್ಕೆ ಏರಿನಿಂತ ಮನುಷ್ಯನ ಒಲವು-ನಿಲುವುಗಳೂ ಪ್ರವೃತ್ತಿ ಪ್ರಕಾರಗಳೂ ಹ್ರಾಸದ ಹಾದಿ ಹಿಡಿಯದೇ ವಿಕಾಸೋನ್ಮುಖವಾಗಿ ಅರಳಬೇಕಾದರೆ ಅವನಿಗೆ ಧಾರ್ಮಿಕಪ್ರಜ್ಞೆ ಅತ್ಯಗತ್ಯ. ಈ ಮಾನವೀಯ ಜೀವನದ ಇತಿಕರ್ತವ್ಯತೆಯ ಅರಿವು ಐಂದ್ರಿಯಕ ಸೆಳೆತಗಳ ಸುಳಿ ಸುಳಿವುಗಳಲ್ಲಿ ಸಿಲುಕದೇ ನಿಚ್ಚ ಎಚ್ಚರದ ಸ್ಥಿರ ನಿಲುವಿನಲ್ಲಿ ನೆಲೆ ನಿಲ್ಲಬೇಕಾದರೆ ಪುರಾಣಶಾಸ್ತ್ರಗಳ ಪ್ರೇರಣೆ ಕಾರಣವಾಗುತ್ತದೆ. ಮನುಷ್ಯನ ಬಾಳಿನ ಪಯಣದಲ್ಲಿಯ ಪ್ರತಿಯೊಂದು ಸ್ಥಿತಿಗತಿ, ಇರುವು ತಿರುವುಗಳಲ್ಲಿಯೂ ದಾರಿ ತೋರುವ ಬೆಳಕಿನ ಬಳ್ಳಿಗಳೇ ಈ ಸಂಸ್ಕೃತ ಪುರಾಣಗಳು. ಇಂಥ ವ್ಯಾಪಕವಾದ ಉದ್ದೇಶ ಅವುಗಳ ಹುಟ್ಟು ಕಟ್ಟುಗಳಲ್ಲಿ ಅಂತರ್ಗರ್ಭಿತ ವಾದುದರಿಂದಲೇ ಅವುಗಳ ಹರವು ವಿಸ್ತಾರಗೊಂಡಿದೆ. ಹದಿನೆಂಟು ಪುರಾಣ, ಅಷ್ಟೇ ಉಪಪುರಾಣ, ಭಾರತ, ರಾಮಾಯಣಾದಿ ಪೌರಾಣಿಕ ವಾಙ್ಮಯವು ಮಾನವೀಯ ಜೀವಿತದ ಮೌಲ್ಯ ಮಹತಿಗಳನ್ನು ತಿಳಿಸಿ ಹೇಳಿ ಬಾಳಿನಗತಿಗೆ ಚೋದನೆಯನ್ನು ಮಾತ್ರವಲ್ಲದೇ ಚಾಲನೆಯನ್ನೂ ಕೊಡುತ್ತದೆ. ಅವುಗಳ ಉದ್ದೇಶದ ವ್ಯಾಪ್ತಿಗನುಗುಣವಾಗಿ ಕಾರ್ಯಕ್ಷೇತ್ರವೂ ಬಿತ್ತರ ಗೊಂಡದ್ದರಿಂದ ಅರ್ಥಶಾಸ್ತ್ರ, ಉದ್ಯೋಗ, ಅಧ್ಯಾತ್ಮ, ಆಚಾರ, ಭೂಗೋಲ ಖಗೋಲ, ವನವಾಸ, ಸುಖವಿಲಾಸ, ಕ್ರಾಂತಿ ಶಾಂತಿ, ಸೋಲು ಗೆಲವು, ಹರ್ಷ ಕ್ಲೇಶ ಕೋಪ ಅನುತಾಪ, ನಿಗ್ರಹ ವಿಗ್ರಹ, ಪ್ರತೀಕಾರ ಉಪಕಾರ, ರಾಗ ವಿರಾಗ, ಕಲಾಕೌಶಲ್ಯ ಎಲ್ಲವನ್ನೂ ಈ ಪುರಾಣ ಸಾಹಿತ್ಯ ಒಳಗೊಂಡು ವಿರಾಡ್ ರೂಪವನ್ನು ತಾಳಿನಿಂತಿದೆ.

ಅಂದರೆ ಜೀವನದ ಯಾವುದೇ ಅವಸ್ಥೆಯಲ್ಲಿದ್ದರೂ ಎಂಥದ್ದೇ ಸ್ಥಿತಿಗತಿಯಲ್ಲಿ ನಿಂತಿದ್ದರೂ ಮನುಷ್ಯನಿಗೆ ಮಾರ್ಗದರ್ಶನ ಮಾಡಿ ಸ್ಫೂರ್ತಿ ಪ್ರೇರಣೆಗಳನ್ನು ಒದಗಿಸುವಂಥ ಸತ್ವ ತತ್ವಗಳಿಂದ ಸನಾಥವಾಗಿದೆ ಈ ಪೌರಾಣಿಕ ಸಾಹಿತ್ಯ. ಅಂತೆಯೇ

ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಕು ವಿಧ ಪುರುಷಾರ್ಥಗಳಲ್ಲಿ ಯಾವುದನ್ನಾದರೂ ಪಡೆಯಬೇಕಾದರೆ ಪುರಾಣಗಳ ಮಾರ್ಗದರ್ಶಿತ್ವದಲ್ಲಿ ಮುಂದುವರೆಯಬೇಕು. ಇವುಗಳಲ್ಲಿ ಯಾವದಾದರೊಂದನ್ನು ಆರಿಸಿಗೊಂಡರೂ ಅವನಿಗೆ ಆ ನಾಲ್ಕು ಪುರುಷಾರ್ಥಗಳನ್ನು ದೊರಕಿಸಿಕೊಡುವದೇ ಪುರಾಣ ಸಾಹಿತ್ಯದ ವೈಶಿಷ್ಟ್ಯವಾಗಿದೆ. ಪುರಾಣಗಳು ಮಾನವನಿಗೆ ಮನೆ ಮಾರು ತೊರೆದು ಮಡದಿ ಮಕ್ಕಳನ್ನು ಜರಿದು ಕಾಡು ಸೇರಲು ಕಲಿಸುವದಿಲ್ಲ. ಧರ್ಮದ ಹೊಂಬೆಳಗಿನಲ್ಲಿಯೇ ಅರ್ಥ ಕಾಮಗಳ ತಂಬೆಲರನ್ನು ಕಾಣುವ ಕೌಶಲವನ್ನು ಅವು ತಿಳಿಸುತ್ತವೆ.

ಸಂತಾನ, ಸಂಪತ್ತು, ಅಧಿಕಾರ, ಭೋಗ ಭಾಗ್ಯಗಳನ್ನು ಸಂಪಾದಿಸುವ ದಾರಿಯನ್ನು ತಿಳಿಸಿ ಆ ಭೋಗೋಪಭೋಗದಲ್ಲಿಯೂ ಧರ್ಮ ದೃಷ್ಟಿ, ತ್ಯಾಗದ ತೂಕ, ಸಂಯಮದ ವಿವೇಕ, ಆದರ್ಶದ ಅರಿವುಗಳನ್ನು ಇಟ್ಟುಕೊಂಡರೆ ಆ ಭೋಗವು ಒಂದು ಯೋಗವಾಗುವದು. ಆ ರಾಗವೂ ವಿರಾಗೋಪಯೋಗಿಯಾಗುವದು. ಇಂಥ ಧರ್ಮಾವಿರುದ್ಧವಾದ ಕಾಮ, ಸ್ವಾರ್ಥರಹಿತ ಅರ್ಥೋಪಾರ್ಜನ, ತ್ಯಾಗೋನ್ಮುಖ ಭೋಗಾನುಭೋಗಗಳ ಬಗೆಯನ್ನು ಕಲಿಸಿ, ಧರ್ಮದ ಮರ್ಮ ಹಾಗೂ ಕರ್ಮಯೋಗದ ಕೌಶಲ್ಯವನ್ನು ತಿಳಿಸಿ ಹೇಳುವ ಕಾರ್ಯವನ್ನು ಪುರಾಣಗಳು ಮಾಡುತ್ತ ಬಂದಿವೆ. ಆದುದರಿಂದಲೇ ಈ ಪುರಾಣ ವಾಙ್ಮಯವು ಎಂದಿಗೂ ಹಳೆಯದಾಗುವುದಿಲ್ಲ. "**ಪುರಾ ನವಂ ಭವತಿ ಇತಿ ಪುರಾಣಂ**". ಸೂರ್ಯನ ಬೆಳಕಿನಂತೆ ಅದು ನವೋನವ. ಚಂದ್ರಜ್ಯೋತ್ಸ್ನೆಯಂತೆ ನಿತ್ಯನೂತನ. ಮಂದಾನಿಲದಂತೆ ಬಂದಾಗೆಲ್ಲ ಹೊಸ ಗಂಧಿಯೇ. ಸಹಸ್ರ ಸಹಸ್ರ ವರ್ಷಗಳಿಂದ ಈ ಪುರಾಣಗಳು ಜೀವನದ ಒಂದೊಂದು ಪ್ರಕಾರದ ಪರಿಗಳನ್ನು ಬಿಚ್ಚಿ ಮತ್ತೆ ಹೊಸ ಹರೆ ಹೊಸ ಸಿರಿಗಳಿಂದ ಮೆರೆಯುತ್ತವೆ. ಇತಿಹಾಸದ ಈ ಬಗೆಬಗೆಯ ಮೆರವಣಿಗೆಗಳು ನರರಿಗೆ ಬಾಳಿನ ಗುರಿಯನ್ನು ಗುರುತಿಸಿ ಸರಿಯಾದ ಹೆಜ್ಜೆ ಹಾಕಲಿಕ್ಕೆ ಕಲಿಸುತ್ತವೆ. ಪರಿಸ್ಥಿತಿಯೊಂದಿಗೆ ಹೋರಾಡಿ ವಿರಾಡಿ ತಮ್ಮ ಪೌರುಷ ಪ್ರಯತ್ನಗಳಿಂದ ದೈವವನ್ನೂ ಕೂಡ ಆತ್ಮಾಭಿಮುಖವಾಗಿ ಮಾಡಿಕೊಂಡ ಆದರ್ಶ ಪುರುಷರ ಗೈಮೆ, ದುಡಿಮೆ, ನಲ್ಮೆ, ಬಲ್ಮೆ, ಮೈಮೆ ಹಿರಿಮೆಗಳು ಜೀವನದ ಜಂಜಾಟದಲ್ಲಿ ಉದಾಸೀನರಾದವರಿಗೆ ಉತ್ಸಾಹವನ್ನೂ, ಉಚ್ಛೃಂಖಲರಾದವರಿಗೆ ಸಂಯಮದ ಕಟ್ಟನ್ನೂ ಕಟ್ಟುನಿಟ್ಟಾಗಿ ಕಲಿಸಿಕೊಡುತ್ತವೆ. ಧರ್ಮ ಮೋಕ್ಷಗಳ ಸಂಧ್ಯಂತರದಲ್ಲಿ ಅರ್ಥ ಕಾಮಗಳ ವಿಕಾಸ ವಿಲಾಸಗಳನ್ನು ಸಾಧಿಸಿ ಮಾನವನಿಗೆ ಸಂತಸದ ಸುಗ್ಗಿಯನ್ನು ತಂದುಕೊಡುವದೇ ಈ ಪವಿತ್ರ ಸಾಹಿತ್ಯದ ಪ್ರಯೋಜನ.

ಈ ದೃಷ್ಟಿಯಿಂದ ಭಗವಾನ್ ಬಾದರಾಯಣರು ನಿರ್ಮಿಸಿದ ಹದಿನೆಂಟು ಪುರಾಣ ಹಾಗೂ ಉಪಪುರಾಣಗಳು ಶತಕಾನು ಶತಕಗಳಿಂದ ಭಾರತೀಯರ ಜನಜೀವನವನ್ನು ಆದರ್ಶೋನ್ಮುಖವಾಗಿ ರೂಪಿಸುತ್ತ ಬಂದಿವೆ. ದಾರಿತಪ್ಪಿ ನಡೆದ ದುರುಳ ಚೇತನಗಳ ದುಖದುರವಸ್ಥೆಗಳನ್ನು ಮಾರ್ಮಿಕವಾಗಿ ಚಿತ್ರಿಸಿ ಮನುಕುಲದ ಮಕ್ಕಳೆಲ್ಲರೂ ಪಾಪಪೈಶೂನ್ಯಗಳಿಂದ ಪರಾಙ್ಮುಖರಾಗುವಂತೆ ಮಾಡುತ್ತಲಿವೆ. ಶಿಬಿ, ರಂತಿ, ಭೀಷ್ಮ, ರಾಮ, ಭರತ, ಸೀತೆ, ಸಾವಿತ್ರಿ, ಅರುಂಧತಿ, ಮುಂತಾದವರ ಉದಾತ್ತ ಜೀವನಗಳ

ಆದರ್ಶವನ್ನು ಮುಂದಿಟ್ಟು ತ್ಯಾಗ ಪರೋಪಕಾರಗಳಿಗೆ ಸಂಸಾರದಲ್ಲಿ ಒಂದು ಧ್ರುವಸ್ಥಾನ ದೊರಕುವಂತೆ ಮಾಡುತ್ತಲಿವೆ. ಇಂಥ ಮಾನವನ ಜೀವನವನ್ನು ಸರ್ವಾಂಗ ಸುಂದರವನ್ನಾಗಿ ಮಾಡಿ ಎಲ್ಲ ದೇಹಿಗಳಲ್ಲಿಯೂ ದೈವೀಗುಣಗಳ ವಿಕಾಸವುಂಟಾಗಲು ಕಾರಣೀಭೂತವಾದ ಶ್ರೀ ವೇದ ವ್ಯಾಸ ದೇವರ ಆ ಹದಿನೆಂಟು ಪುರಾಣಗಳು ಸಂಸ್ಕೃತದಲ್ಲಿ ಇರುತ್ತವೆ. ಸಂಸ್ಕೃತ ಜ್ಞಾನದ ಗಂಧಗಾಳಿಯೂ ಕೂಡ ಸೋಂಕದ ಇಂದಿನ ಜನಾಂಗಕ್ಕೆ ಅತ್ಯುಪಯುಕ್ತವೂ, ನಮ್ಮ ಜೀವನದ ಪರಿಷ್ಕಾರಕವೂ ಆದ ಆ ಪವಿತ್ರ ಸಾಹಿತ್ಯವು ಇದ್ದೂ ಇಲ್ಲದಂತಾಗಿದೆ. ಅಂಥ ದಿವ್ಯ ಭವ್ಯ, ರಮ್ಯ ನಮ್ಯ, ಸುಂದರ ಬಂಧುರ ಶ್ಲಾಘ್ಯ ಯೋಗ್ಯ, ಅನುಚಿಂತ್ಯ, ಅಧ್ಯೇಯ, ಶುಚಿ-ರುಚಿಯಾದ ಸರ್ವ ಶ್ರೇಷ್ಠವಾದ ಸಾಹಿತ್ಯದಿಂದ ಇಂದಿನ ಪ್ರಪಂಚವೆಲ್ಲವೂ ವಂಚಿತವಾಗುತ್ತಲಿರುವದು ನಿಜವಾಗಿಯೂ ಲಜ್ಜಾಸ್ಪದ ಮತ್ತು ವಿಷಾದನೀಯವಾಗಿದೆ. ಅದಕ್ಕಾಗಿ ಆ ವೇದ ಪುರಾಣ ಶಾಸ್ತ್ರ ಸಾಹಿತ್ಯವನ್ನೆಲ್ಲ ನಮ್ಮ ಆಡುನುಡಿಯಾದ ಕನ್ನಡಕ್ಕೆ ಇಳಿಸುವ ಸತ್ಯ ಸಂಕಲ್ಪದಿಂದ ವೇದಪುರಾಣ ಸಾಹಿತ್ಯಮಾಲೆಯನ್ನು ಪ್ರಾರಂಭಿಸಲಾಗಿದೆ. ನಾಲ್ಕು ವೇದ, ಆರು ಶಾಸ್ತ್ರ, ಹದಿನೆಂಟುಪುರಾಣ, ಹಾಗೂ ಹದಿನೆಂಟು ಉಪಪುರಾಣ ಮತ್ತು ಮಹಾ ಭಾರತ, ರಾಮಾಯಣ, ಗೀತೋಪನಿಷದಾದಿ ಪವಿತ್ರಗ್ರಂಥ ರಾಶಿಯನ್ನು ಕನ್ನಡಿಗರೆಲ್ಲರ ಮನೆ ಮನೆಗೆ ಅವರ ಮನೆ ಮಾತಿನಲ್ಲಿಯೇ ಮಾರ್ಪಡಿಸಿ ಮುಟ್ಟಿಸುವ ಬೃಹದ್ಯೋಜನೆ ಈಗಾಗಲೇ ಕಾರ್ಯ ಪ್ರವೃತ್ತವಾಗಿದೆ. ಪರಾಶರ ಪ್ರಣೀತವಾದ ವಿಷ್ಣು ಪುರಾಣ ಎಂಬ ಗ್ರಂಥದ ಕನ್ನಡ ಅನುವಾದದ ನಂತರ ಈಗ ಈ ಶ್ರೀ ವರಾಹ ಮಹಾ ಪುರಾಣವನ್ನು ಓದುಗರ ಮುಂದೆ ಕನ್ನಡಿಸಿ ಇರಿಸುತ್ತಿಲಿದ್ದೇವೆ.

ಶ್ರೀ ವ್ಯಾಸರ ಹದಿನೆಂಟು ಮಹಾ ಪುರಾಣಗಳಲ್ಲಿ ಒಂದಾದ ಈ ವರಾಹ ಮಹಾ ಪುರಾಣವು ಶೈಲಿ, ಸನ್ನಿವೇಶ, ವಸ್ತು ವಿನ್ಯಾಸ, ತತ್ವನಿರೂಪಣೆ, ಆದರ್ಶದರ್ಶನ, ಜೀವನ ಪರಾಮರ್ಶನ, ಆಚಾರ ಬೋಧನ, ಪ್ರಮೇಯ ಶೋಧನ, ಅಧ್ಯಾತ್ಮ ಸಾಧನ ಮುಂತಾದ ಅನೇಕ ದೃಷ್ಟಿಯಿಂದ ವಿಶಿಷ್ಟವಾಗಿದೆ. ವೈವಿಧ್ಯ ಪೂರ್ಣವೂ ಆಗಿದೆ. ಈ ಮಹಾಪುರಾಣವು ಇಪ್ಪತ್ತುನಾಲ್ಕು ಸಾವಿರ ಪದ್ಯಾತ್ಮಕವಿದೆಯೆಂದು ಮತ್ಸ್ಯ ಹಾಗೂ ನಾರದಪುರಾಣಗಳಲ್ಲಿ ಹೇಳಲಾಗಿದೆ. ಶ್ರೀ ಮನ್ನಾರಾಯಣನ ಮಹಾಮಹಿಮೆಯನ್ನು ಹೇಳುವದೇ ಈ ಪುರಾಣದ ಮುಖ್ಯ ಉದ್ದೇಶ. ಇದಲ್ಲದೇ ನಾನಾ ವಿಧವಾದ ಲೋಕಚರಿತವನ್ನು ರಸಭರಿತವಾಗಿ ಇಲ್ಲಿ ಚಿತ್ರಿಸಲಾಗಿದೆ. ಮನುಷ್ಯರ ಆಚಾರ-ವಿಚಾರಗಳ ಕಡೆಗೆ ಇಲ್ಲಿ ಹೆಚ್ಚು ಗಮನವನ್ನು ಕೊಡಲಾಗಿದೆ.

ಮನುಷ್ಯನ ಶೀಲ ಚಾರಿತ್ರ್ಯ ಹಾಗೂ ವ್ಯಕ್ತಿತ್ವಗಳು ಆದರ್ಶಸಮ್ಮಿತವಾಗ ಬೇಕಾದರೆ ಮುಖ್ಯ ಅಂತಃಕರಣ ಶುದ್ಧಿಯು ಅತ್ಯಾವಶ್ಯಕ. ಅಂತಃಕರಣ ಶುದ್ಧಿಯಾಗಬೇಕಾದರೆ ಸತ್ಕರ್ಮಾನುಷ್ಠಾನವನ್ನು ಮಾಡಬೇಕು. ತೀರ್ಥ ಸ್ನಾನ, ಪುಣ್ಯ ಕ್ಷೇತ್ರಗಳಲ್ಲಿ ಭಗವದ್ದರ್ಶನ, ಸದಾಚಾರಗಳಿಂದ ಚಿತ್ತಶುದ್ಧಿಯಾಗುವದು. ಶುದ್ಧ ಚಿತ್ತದಿಂದ ಭಗವದುಪಾಸನೆಯನ್ನು ಮಾಡಿದರೆ ಆತ್ಮಾನುಭವವುಂಟಾಗುವದು. ಹೀಗೆ ಮಾನವ ಜೀವನದ ಪರಿಪೂರ್ಣತೆಯ ಸಿದ್ಧಿಗಾಗಿ ಅತ್ಯಾವಶ್ಯಕವಾದ ಅಂತಃಕರಣ ಶುದ್ಧಿಯನ್ನು ಸಾಧಿಸುವ ಅನೇಕ ಉಪಾಯಗಳನ್ನು ಈ ವರಾಹ ಪುರಾಣದಲ್ಲಿ ನಿರೂಪಿಸಲಾಗಿದೆ.

## ಪ್ರೊ. ಹಜರಾ ಮುಂತಾದ ಆಧುನಿಕ ವಿಮರ್ಶಕರ ತಪ್ಪು ಹೇಳಿಕೆಗಳ ಖಂಡನೆ. ಪುರಾಣಗಳ ಪ್ರಾಚೀನತ್ವ ಸಮರ್ಥನೆ

ಈ ವರಾಹ ಪುರಾಣದಲ್ಲಿಯೂ ನಾಲ್ಕು ವಿಭಾಗಗಳನ್ನು ಮಾಡಬಹುದು. ೧ ರಿಂದ ೧೧೨ನೇ ಅಧ್ಯಾಯ ವರೆಗೆ ಒಂದು ೧೧೩ ರಿಂದ ೧೯೨ನೇ ಅಧ್ಯಾಯದವರೆಗೆ ಎರಡು. ೧೯೩ ರಿಂದ ೨೧೨ನೇ ಅಧ್ಯಾಯದವರೆಗೆ ಮೂರು. ೨೧೩ ರಿಂದ ೨೧೮ರವರೆಗೆ ನಾಲ್ಕು. ಹೀಗೆ ಈಗಿದ್ದ ವರಾಹ ಪುರಾಣದಲ್ಲಿ ಎದ್ದು ಕಾಣುವ ನಾಲ್ಕು ಪ್ರತ್ಯೇಕ ವಿಭಾಗಗಳು ಉಂಟು. ಶ್ರೀ ಹರಪ್ರಸಾದ ಶಾಸ್ತ್ರೀಯವರು ೧೯೩ನೇ ಅಧ್ಯಾಯದಿಂದ ಕೊನೆಯವರೆಗೆ ಒಂದೇ ಭಾಗವೆಂದು ಗಣಿಸಿ ಮೂರು ವಿಭಾಗ ಮಾಡಿದ್ದಾರೆ. ವಸ್ತುತಸ್ತು ನಾರದ ಪುರಾಣದಲ್ಲಿ ಹದಿನೆಂಟು ಮಹಾ ಪುರಾಣಗಳ ವಸ್ತು, ವ್ಯಾಪ್ತಿ, ವಿಷಯ ಸೂಚಿ, ವಿಭಾಗ, ಗ್ರಂಥಸಂಖ್ಯಾ ಮುಂತಾದವುಗಳನ್ನು ಹೇಳುವಾಗ ವರಾಹ ಪುರಾಣದ ಪೂರ್ವ ಭಾಗದಲ್ಲಿ ಐದು ಉಪಭಾಗಗಳು ಉಂಟೆಂದು ಸೂಚಿಸಲಾಗಿದೆ. ಸರ್ಗ ಪ್ರತಿಸರ್ಗ ಮತ್ತು ಅನೇಕ ಉಪಾಖ್ಯಾನಗಳಿಂದ ಕೂಡಿದ ಶ್ವೇತೋಪಾಖ್ಯಾನ, ಗೋದಾನದಿ ನಿರೂಪಣೆಯವರೆಗೆ ಪ್ರಥಮೋದ್ದೇಶ ಎಂದು ಹೇಳಿದ್ದಾರೆ. ಶುರುವಾದ ದ್ವಿತೀಯೋದ್ದೇಶಕ್ಕೆ "ಭಗವದ್ಧರ್ಮ" ಎಂದು ಹೆಸರಿಟ್ಟಿದೆ. ಇದರಲ್ಲಿ ಧರ್ಮರಹಸ್ಯವನ್ನೂ ಸತ್ಕರ್ಮಾನುಷ್ಠಾನದ ಬಗೆಯನ್ನೂ ಸದಾಚಾರದ ಮಹತಿಯನ್ನೂ ತಿಳಿಸಿ, ಅನಾಚಾರಗಳಿಗೆ ಪ್ರಾಯಶ್ಚಿತ್ತ ಹೇಳಿ, ನಂತರ ತೀರ್ಥಕ್ಷೇತ್ರಗಳ ಮಹಿಮೆಯನ್ನು ಬಣ್ಣಿಸಲಾಗಿದೆ.

"ಮಥುರಾ ಮಹಾತ್ಮ್ಯ" ಎಂಬ ಮೂರನೇ ಉದ್ದೇಶ ಪ್ರಾರಂಭ ವಾಗುತ್ತದೆ. ಅದರಲ್ಲಿ ಬೇರಾವ ವಿಷಯವೂ ಇಲ್ಲ. ಕೇವಲ ಮಧುರಾಮಂಡಲದಲ್ಲಿದ್ದ ತೀರ್ಥಕ್ಷೇತ್ರಗಳ ಮಹಿಮೆ, ಸ್ನಾನ, ಪಿಂಡದಾನಗಳ ಫಲಪ್ರಯೋಜನಗಳು ಮಾತ್ರ ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ಜನಮೇಜಯ ವೈಶಂಪಾಯನರ ಸಂಭಾಷಣೆಯಿಂದ ಶುರುವಾಗುವ ನಾಲ್ಕನೆಯ ಉದ್ದೇಶ ಇದರಲ್ಲಿ ಔಪನಿಷದಿಕ ವ್ಯಕ್ತಿಯಾದ ನಚಿಕೇತನ. ಯಮಲೋಕಕ್ಕೆ ಹೋಗಿ ಬಂದು ತನ್ನ ಅನುಭವವನ್ನು ವಿವರಿಸಿದ್ದಾನೆ. ಕರ್ಮವಿಪಾಕವೆಂಬ ಹೆಸರಿನ ಈ ನಾಲ್ಕನೇ ಉದ್ದೇಶದಲ್ಲಿ ನರಕಯಾತನೆಗಳಿಗೆ ಕಾರಣವಾದ ಪಾತಕಗಳನ್ನು ತಿಳಿಸಿ ಕೊನೆಗೆ ಈ ಯಮಗಂಡದಿಂದ ಪಾರಾಗಬೇಕಾದರೆ ವಿಷ್ಣುವ್ರತವನ್ನು ಭಕ್ತಿಯಿಂದ ಆಚರಿಸಬೇಕೆಂದು ಉಪಸಂಹರಿಸಿದ್ದಾರೆ. ಕೊನೆಯದಾದ ಗೋಕರ್ಣ ಮಹಿಮೆ ಎಂಬ ಐದನೆಯ ಉದ್ದೇಶ.

"ಕ್ವಚಿದ್ ಗ್ರಂಥಾನ್ ಪ್ರಕ್ಷಿಪಂತಿ ಕ್ವಚಿಂದಂತರಿತಾನಪಿ" ಎಂದು ಆಚಾರ್ಯರು ಅಪ್ಪಣೆಕೊಡಿಸಿದಂತೆ ಈ ಪುರಾಣದಲ್ಲಿಯೂ ಸಾಕಷ್ಟು ಆವಾಪೋದ್ವಾಪಗಳು ನಡೆದಿರುತ್ತವೆ. ಅದನ್ನು ಮುಂದೆ ವಿವೇಚಿಸಲಾಗುವದು.

ಪ್ರಕೃತ ಈ ಪುರಾಣದ ಕಾಲ ನಿರ್ಣಯದ ಬಗ್ಗೆ ಭಿನ್ನಾಭಿಪ್ರಾಯವಿದ್ದುದರಿಂದ ವಿಮರ್ಶೆ ಅವಶ್ಯ ಕರ್ತವ್ಯವಾಗಿದೆ. ವಿಲ್ಸನ್, ಪರ್ಗಿಟರ, ಫರುಕರ, ಸ್ಮಿಥ್, ಹಜರಾ, ಹರ ಪ್ರಸಾದ ಶಾಸ್ತ್ರಿ, ವೈದ್ಯ ಮುಂತಾದ ಆಧುನಿಕ ಪುರಾಣ ಪರಿಶೋಧಕರು ಎಲ್ಲ ಪುರಾಣಗಳಂತೆ ವರಾಹ ಪುರಾಣದ ಕಾಲವನ್ನು ವಿಮರ್ಶಿಸಿದ್ದಾರೆ. ಅವರಲ್ಲಿ ಕೆಲವರು ಈ

ವರಾಹ ಪುರಾಣವು ಉಳಿದೆಲ್ಲ ಪುರಾಣ ಗ್ರಂಥಗಳಿಗಿಂತ ಅತ್ಯಾಧುನಿಕ ಎಂದರೆ ಹತ್ತನೆಯ ಶತಮಾನಕ್ಕಿಂತ ಇತ್ತೀಚಿನದೆಂದು ಸಾಧಿಸ ಹೊರಟಿದ್ದಾರೆ. ಡಾಕಾ ಯುನಿವರ್ಸಿಟಿಯ ಪ್ರೊಫೆಸರ್ ಶ್ರೀ ಆರ್.ಸಿ. ಹಝುರಾರರವರಂತೂ ಈ ಪುರಾಣಕ್ಕೆ ಕೇವಲ ಆರುನೂರು ವರ್ಷದ ಆಯುರ್ದಾನವನ್ನು ಮಾಡಿದ್ದಾರೆ. ಕೆಲವು ಭಾಗಕ್ಕೆ ಎಂಟುನೂರು ಕೆಲವಕ್ಕೆ ಹನ್ನೆರಡುನೂರು. ಒಟ್ಟಾರೆ ಕ್ರಿಸ್ತ ಪೂರ್ವದಲ್ಲಿ ಭಾರತದಲ್ಲಿ ಅಂಥ ಯಾವ ಬೆಲೆ ಬಾಳುವ ಸಾಹಿತ್ಯವೂ ಹುಟ್ಟಿತೆಂದು ಒಪ್ಪಿಕೊಳ್ಳುವದು ಆಧುನಿಕ ಕೆಲವು ಪರಾಮರ್ಶಕರಿಗೆ ಅಶಕ್ಯದ ಮಾತಾಗಿದೆ. ಈ ಪೂರ್ವಗ್ರಹದೊಂದಿಗೆ ಪುರಾಣಗಳ ಆಯುರ್ಮಾನವನ್ನು ಅಳೆಯ ಹೊರಟ ಅವರು ಎಲ್ಲ ಪ್ರಮಾಣ ಪುರಾವೆಗಳನ್ನೂ ತಮ್ಮ ದೃಷ್ಟಿಕೋನಕ್ಕೆ ಅನುಗುಣವಾಗಿಯೇ ಅರ್ಥವಿಸುತ್ತ ಹೋಗುತ್ತಾರೆ. ಮುಖ್ಯವಾಗಿ ಪಾಶ್ಚಿಮಾತ್ಯರ ಹಾಗೂ ಅವರ ವಿಚಾರ ಪ್ರಣಾಲಿಕೆಯಿಂದ ಪ್ರಭಾವಿತರಾದ ಪೌರಸ್ತ್ಯ ಪರಿಶೋಧಕರ ವಿಚಾರದ ವೈಖರಿಯು ಯಾವದೇ ಪುರಾಣದ ಹಿಂದು ಮುಂದಿನ ಕಾಲದ ಗಡುವನ್ನು ನಿರ್ಧರಿಸುವಲ್ಲಿಯೇ ತಪ್ಪಿಹೋಗುತ್ತದೆ.

ಕ್ರಿಸ್ತಶಕದ ೩ನೇ ಶತಕಕ್ಕಿಂತ ಮೊದಲು ಹದಿನೆಂಟು ಪುರಾಣ ಎಂಬ ಮಾತೇ ಇದ್ದಿರಲಿಲ್ಲ ಎಂದು ಅವರ ಅಭಿಪ್ರಾಯವಾಗಿದೆ As a matter of Fact This conon can Scarcely be dated earlier than the third century A.D.

ಇದು ಶುದ್ಧ ತಪ್ಪು. ಕ್ರಿಸ್ತಶಕದ ಮೂರುಸಾವಿರ ವರ್ಷಕ್ಕಿಂತ ಮೊದಲೇ ರಚಿತವಾದ ಮಹಾಭಾರತದಲ್ಲಿಯೂ ಅದಕ್ಕಿಂತ ಮೊದಲಿನ ವೇದ, ಉಪನಿಷತ್ ಬ್ರಾಹ್ಮಣ, ಆರಣ್ಯಕ ಹಾಗೂ ಸ್ಮೃತಿ ಗ್ರಂಥಗಳಲ್ಲಿಯೂ ಪುರಾಣ ಉಲ್ಲೇಖ ಕಂಡುಬರುತ್ತವೆ.

''ಅಷ್ಟಾದಶ ಪುರಾಣಾನಾಂ ಶ್ರವಣಾತ್ ಯತ್‌ಫಲಂ ಲಭೇತ್ ।
ತತ್ಫಲಂ ಸಮವಾಪ್ನೋತಿ ವೈಷ್ಣವೋ ನಾತ್ರ ಸಂಶಯಃ ॥''

''ಪುರಾಣೇಹಿ ಕಥಾ ದಿವ್ಯಾ ಆದಿವಂಶಾಶ್ಚ ಧೀಮತಾಂ''
.......................................................
ನಿಗದಾಮಿ ಯಥಾ ಯುಕ್ತಂ ಪುರಾಣಶ್ರಯ ಸಂಯುತಂ ॥
.......................................................
ವಿದ್ವದ್ಭಿಃ ಕಥ್ಯತೇ ಲೋಕೇ ಪುರಾಣೇ ಕವಿಸತ್ತಮೈಃ ॥
...................... ಪುರಾಣಮ್ ಋಷಿ ಸಂಸ್ತುತಮ್

ಹೀಗೆ ಮಹಾಭಾರತದಲ್ಲಿ ಅನೇಕ ಕಡೆ ಪುರಾಣಗಳ ಉಲ್ಲೇಖವಿದ್ದುದು ಕಂಡು ಬರುತ್ತದೆ. ಇಲ್ಲಿ ಪುರಾಣ ಎಂದು ಏಕವಚನವಿದ್ದರೂ ಸಮುದಾಯೈಕ ವಚನ ವಿದ್ದುದರಿಂದ ಹದಿನೆಂಟು ಪುರಾಣಗಳೆಂದೇ ಅರ್ಥ ಮಾಡಬೇಕು.

''ಅಷ್ಟಾದಶ ಪುರಾಣಾನಿ ಕೃತ್ವಾ ಸತ್ಯವತೀಸುತಃ
ಭಾರತಾಖ್ಯಾನಮತುಲಂ ಚಕ್ರೆ ತದುಪಬೃಂಹಿತಮ್ ॥

ಈ ಪ್ರಮಾಣದಿಂದ ವ್ಯಾಸರು ಮೊದಲು ಹದಿನೆಂಟು ಪುರಾಣಗಳನ್ನು ರಚಿಸಿದ ನಂತರ ಭಾರತವನ್ನು ಬರೆದರೆಂದು ತಿಳಿದು ಬರುತ್ತದೆ. ಆದುದರಿಂದ ಭಾರತದಲ್ಲಿ

ಬರುವ ಪುರಾಣ ಶಬ್ದಕ್ಕೆ ಹದಿನೆಂಟು ಪುರಾಣಗಳ ಸಮೂಹ ಎಂದೇ ಅರ್ಥ ಮಾಡಬೇಕು. ಇದೇ ಅಭಿಪ್ರಾಯದಿಂದ ಮಹಾಭಾರತದಲ್ಲಿ 'ಪುರಾಣಂ' ಎಂದು ಏಕವಚನ ಪ್ರಯೋಗವಿದ್ದ ಬಹುಸ್ಥಳದಲ್ಲಿ ಮೊದಲು 'ಅಖಿಲಂ' 'ಸರ್ವಂ' ಎಂದು ಮುಂತಾಗಿ ವಿಶೇಷಣಗಳನ್ನು ಕೊಟ್ಟಿರುತ್ತಾರೆ ಪುರಾಣ ಪದಗಳಿಗೆ.

**"ಪುರಾಣ ಮಖಿಲಂ ತಾತ ಪಿತಾ ತೇಽಧೀತವಾನ್ ಪುರಾ ॥**
**ಕ್ವಚಿತ್ ತ್ವಮಪಿ ತತ್ಸರ್ವಮಧೀಷೆ ಲೋಮಹರ್ಷಿಣೆ ।**

ಮಹಾಭಾರತ ಆದಿ ಪರ್ವ ೫।೧೨

"ಲೋಮಹರ್ಷಿಣಯೇ, ನಿಮ್ಮ ತಂದೆ ಹಿಂದೆ ಎಲ್ಲ ಪುರಾಣಗಳನ್ನೂ ಓದಿದನು. ನೀನಾದರೂ ಅವನಂತೆ ಆ ಎಲ್ಲ ಪುರಾಣಗಳನ್ನೂ ಅಧ್ಯಯನ ಮಾಡಿರುವಿಯಷ್ಟೇ । ಒಂದು ಅಥವಾ ಎರಡೇ ಪುರಾಣಗಳು ಮಹಾಭಾರತದ ಕಾಲದಲ್ಲಿದ್ದರೆ 'ಅಖಿಲ', 'ಸರ್ವ' ಎಂದು ಬಹುತ್ವದರ್ಶಕ ಸರ್ವನಾಮಗಳನ್ನು ಏಕೆ ಬಳಸುತ್ತಿದ್ದರು ।

ಬೃಹದಾರಣ್ಯ ಕೋಪನಿಷತ್ತಿನಲ್ಲಿ "**ವಾಚಾ ವೈ ಸಮ್ರಾಡ್ ಬಂಧುಃ ಪ್ರಜಾಯತ ಋಗ್ವೇದೋ ಯಜುರ್ವೇದಃ ಸಾಮವೇದಃ ಅಥರ್ವಾಂಗಿರಸ ಇತಿಹಾಸಃ ಪುರಾಣ ವಿದ್ಯಾ**" ಎಂದು ಕರೆದಿದ್ದಾರೆ. ಪುರಾಣವು ಒಂದೇ ಆಗಿದ್ದರೆ ಅದೊಂದು ವಿದ್ಯೆ ಎಂತಾದೀತು । ಅನೇಕ ಪುರಾಣಸಂಹಿತೆಗಳಿದ್ದುದರಿಂದಲೇ ಅದೊಂದು ಪುರಾಣ ವಿದ್ಯಾ ಎಂದು ಕರೆಯಲ್ಪಟ್ಟಿತ್ತು ಆ ಕಾಲದಲ್ಲಿ ಎಂದು ತಿಳಿದು ಬರುವದು.

ಮಹಾ ಭಾರತದ ಖಿಲ ಪರ್ವವೆನಿಸಿದ ಹರಿ ವಂಶದಲ್ಲಿ

**"ಶೃಣುಷ್ವಾದಿಪುರಾಣೇಷು ವೇದೇಭ್ಯಶ್ಚ ಯಥಾಶ್ರುತಂ ।**
**ಬ್ರಾಹ್ಮಣಾನಾಂಚ ಚ ವದತಾಂ ಶ್ರುತಾ ವೈ ಸುಮಹಾತ್ಮನಾಮ್ ॥**

ಹರಿವಂಶ ಭವಿಷ್ಯಪರ್ವ ೭ನೇ ಅಧ್ಯಾಯ ೧೨ನೇ ಪದ್ಯ.

"ಪುರಾಣೇಷು" ಎಂದು ಬಹುವಚನ ಪ್ರಯೋಗವೇ ಕಂಡು ಬರುತ್ತದೆ. ಮತ್ತು ಹರಿವಂಶದ ಕೊನೆಯ ಅಧ್ಯಾಯದಲ್ಲಿಯೂ -

**"ಅಷ್ಟಾದಶ ಪುರಾಣಾನಾಂ ಶ್ರವಣಾತ್ ಯತ್ಫಲಂ ಭವೇತ್**
**ತತ್ಫಲಂ ಸಮವಾಪ್ನೋತಿ ವೈಷ್ಣವೋ ನಾತ್ರ ಸಂಶಯಃ ॥**

ಎಂದು ಹದಿನೆಂಟು ಪುರಾಣಗಳ ಸ್ಪಷ್ಟ ಉಲ್ಲೇಖವು ಕಂಡು ಬರುತ್ತದೆ. ಇದರ ಮೇಲಿಂದ ಮಹಾಭಾರತದಲ್ಲಿ ಬರುವ ಪುರಾಣ ಶಬ್ದದ ಅನೇಕ ಸ್ಥಳಗಳಲ್ಲಿ ಕಾಣುವ ಬಹುವಚನ ಪ್ರಯೋಗಕ್ಕೆ ಹದಿನೆಂಟು ವ್ಯಾಸರ ಪುರಾಣಗಳು ಎಂದು ಅರ್ಥವಿದ್ದಂತೆ ಏಕವಚನದಲ್ಲಿ ಪುರಾಣ ಪದ್ಯ ಪ್ರಯೋಗಕ್ಕೂ "ಜಾತೌ ಏಕವಚನಂ" ಎಂಬ ವ್ಯಾಕರಣ ನಿಯಮದಂತೆ ಪುರಾಣಗಳ ಸಮುದಾಯ ಅರ್ಥಾತ್ ಹದಿನೆಂಟು ಪುರಾಣಗಳು ಎಂದು ಅರ್ಥಮಾಡುವದೇ ಯುಕ್ತವಾಗಿದೆ.

ಶ್ರೀ ವೇದವ್ಯಾಸ ಪ್ರಣೀತವಾದ ಪುರಾಣಗಳು ಕ್ರಿಸ್ತಪೂರ್ವ ಕಾಲದಲ್ಲಿಯೂ ಇದ್ದವೆನ್ನುವದಕ್ಕೆ ಮಹಾಭಾರತವಲ್ಲದೇ ಇನ್ನೂ ಅನೇಕ ಶ್ರುತಿ, ಸ್ಮೃತಿ, ಸೂತ್ರ, ಬ್ರಾಹ್ಮಣ, ಆರಣ್ಯಕ, ಉಪನಿಷತ್, ಪುರಾಣೇತಿಹಾಸಾದಿ ಅನೇಕಾನೇಕ ಪ್ರಮಾಣಗಳನ್ನು

ಉದಾಹರಿಸ ಬಹುದು. ಇಲ್ಲಿ ಕೆಲವೊಂದು ಆಧಾರ ಪ್ರಮಾಣಗಳನ್ನು ಮಾತ್ರ ಉದಾಹರಿಸುತ್ತೇವೆ. ಅವುಗಳ ಭಾಷಾಂತರ ಬರೆಯುತ್ತ ಹೋದರೆ ಈ ಪೀಠಿಕೆಯೇ ಒಂದು ಪುರಾಣವಾದೀತು. ಕಾರಣ ಮೂಲ ಪ್ರಮಾಣ ವಚನ ಪದ್ಯಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಲಾಗಿದೆ. ಇಲ್ಲಿ ಉದಾಹರಿಸಿದ ಕ್ರಿಸ್ತಪೂರ್ವ ಸಾವಿರಾರು ವರ್ಷ ಪ್ರಾಚೀನವಾದ ಗ್ರಂಥಗಳಲ್ಲೆಲ್ಲ 'ಪುರಾಣ'ಗಳ ಉಲ್ಲೇಖವಿದ್ದುದರಿಂದ ಶ್ರೀ ವ್ಯಾಸ ಪುರಾಣಗಳು ಇಸವಿಸನ್ ವರ್ಷಗಳಲ್ಲಿ ಅವತರಿಸಿದ ಅರ್ವಾಚೀನ ಕತೆಗಳಲ್ಲ ಎಂಬುದೇ ಇವುಗಳ ತಾತ್ಪರ್ಯವಾಗಿದೆ.

"ಋಚಃ ಸಾಮಾನಿ ಛಂದಾಂಸಿ ಪುರಾಣಂ ಯಜುಷಾ ಸಹ
ಉಚ್ಛಿಷ್ಟಾಜ್ಜಜ್ಞಿರೆ ಸರ್ವೇ ದಿಶಿ ದೇವಾ ದಿವಿಶ್ರಿತಾಃ ॥"

*ಅಥರ್ವಣವೇದ (೭೦।೭।೨೪)*

"ಏವಮಿಮೇ ಸರ್ವೇ ವೇದಾಃ ನಿರ್ಮಿತಾಃ ಸಕಲ್ಪಾಃ ಸರಹಸ್ಯಾಃ
ಸಬ್ರಾಹ್ಮಣಾಃ ಸೋಪನಿಷತ್ಕಾಃಸೇತಿಹಾಸಾಃ ಸಾನ್ವಾಖ್ಯಾನಾಃ
ಸಪುರಾಣಾಃ ಸಸ್ವರಾಃ ......................"

*ಗೋಪಥಬ್ರಾಹ್ಮಣ (ಪೂರ್ವ ಭಾಗ ೨ ಪ್ರ.)*

"ಅಧ್ವರ್ಯುಸ್ತಾರ್ಕ್ಷ್ಯೋರ್ವೈ ಪಶ್ಯತೋ ರಾಜೇತ್ಯಾಹ ।
ತಾನುಪದಿಶತಿ ಪುರಾಣಂ । ವೇದಃಸೋಯಮಿತಿ । ಕಿಂಚಿತ್
ಪುರಾಣಮಾಚಚಕ್ಷೀತ "।

*ಶತಪಥ ಬ್ರಾಹ್ಮಣ (೧೩।೪।೧೩)*

"ಏವಂವಾऽರೇ ಅಸ್ಯ ಮಹತೋ ಭೂತಸ್ಯ ನಿಶ್ವಸಿತಂ ಏತದ್
ಯದ್ ಋಗ್ವೇದಃ ಯಜುರ್ವೇದಃ ಸಾಮವೇದೋऽಥರ್ವಾಂಗಿರಸಃ
ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ॥"

*ಬೃಹದಾರಣ್ಯಕೋಪನಿಷದ್ (೨।೪।೧೦)*

ಸಹೋವಾಚ ಋಗ್ವೇದಂ ಭಗವೋऽಧ್ಯೇಮಿ
ಯಜುರ್ವೇದಂ ಸಾಮವೇದಮಾಥರ್ವಣಂ
ಚತುರ್ಥಮಿತಿಹಾಸ ಪುರಾಣಂ ಪಂಚಮಂ ವೇದಾನಾಂ ವೇದಂ ॥

*ಛಾಂದೋಗ್ಯೋಪನಿಷತ್ (೭।೧।೧)*

ಏವಂ ವಿದ್ವಾನ್ ವಾಕೋವಾಕ್ಯಮಿತಿಹಾಸಃ ಪುರಾಣಂ
ಇತ್ಯಹರಹಃ ಸ್ವಾಧ್ಯಾಯಮಧೀತೇ
ತ ಏನಂ ತೃಪ್ತಾಃ ತರ್ಪಯಂತಿ ಸರ್ವೈಃ ಕಾಮ್ಯೈಃ ಸಾರ್ವಭೌಮ್ಯೈಃ

*ಶತಪಥ ಬ್ರಾಹ್ಮಣ (೧೦।೫।೭।೯)*

ಅಥ ಯೇಽಸ್ಯೋದಂಚೋ ರಶ್ಮಯಸ್ತಾ ಏವಾಸ್ಯ
ಉದೀಚ್ಯೋ ಮಧುನಾಡ್ಯೋ ಅಥರ್ವಾಂಗಿರಸ ಏವ
ಮಧುಕೃತ ಇತಿಹಾಸ ಪುರಾಣಂ ಪುಷ್ಪಂ ತಾ ಅಮೃತಾ ಆಪಃ ॥

ಸಾಮವೇದ ಬ್ರಾಹ್ಮಣ (೩-೪)

ಸ ಕಲ್ಪಾನಧೀತೆ, ಸ ನಾರಾಶಂಸೀರಧೀತೆ ಸ ಪುರಾಣಾನ್ಯಧೀತೇ ॥

ಬೃಹಜ್ಜಾಬಾಲೋಪನಿಷತ್

ತಥಾ ಇತಿಹಾಸಸ್ಯ ಚ ವೈ ಸಪುರಾಣಸ್ಯ ಗಾಥಾನಾಂ
ನಾರಾಶಂಸೀನಾಂ ಸ ಪ್ರಿಯಂ ಧಾಮ ಭವತಿ ಯ ಏವಂ ವೇದ ॥

ಅಥರ್ವಣಸಂಹಿತಾ (೧೫।೬।೧೨)

ಪುರಾಣಂ ಮಾನವೋ ಧರ್ಮಃ ಸಾಂಗೋ ವೇದಶ್ಚಿಕಿತ್ಸಿತಮ್ ॥

(ವಿಷ್ಣು ಸ್ಮೃತಿ)

ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್

(ಅತ್ರಿಸ್ಮೃತಿ)

ಇಲ್ಲಿ ಉದಾಹರಿಸಿದ ಗ್ರಂಥಗಳೆಲ್ಲವೂ ಕ್ರಿಸ್ತ ಪೂರ್ವಕಾಲದವು ಎನ್ನುವಲ್ಲಿ ಯಾರಿಗೂ ಸಂದೇಹವೇ ಇಲ್ಲ. ಇಷ್ಟೆಲ್ಲ ಪ್ರಾಚೀನತಮವಾದ ಪ್ರಾಗೈತಿಹಾಸಿಕ ಕಾಲದ ಪುರಾತನ ಗ್ರಂಥಗಳಲ್ಲಿ ಪುರಾಣಗಳ ಉಲ್ಲೇಖವು ಸ್ಪಷ್ಟವಾಗಿ ಇದ್ದ ಬಳಿಕ ಆ ಪುರಾಣಗಳಿಗೆಲ್ಲ ಕ್ರಿಸ್ತೋತ್ತರ ಕಾಲೀನತ್ವವನ್ನು ಸಾಧಿಸುವದು ಸಾಹಸದ ಮಾತೂ ಆಗಿದೆ. ಸೋಜಿಗದ ಮಾತೂ ಆಗಿದೆ. ಮೇಲ್ಕಾಣಿಸಿದ ಪ್ರಮಾಣೋದಾಹರಣ ವಾಕ್ಯಗಳಲ್ಲಿ ಪ್ರಾಯಃ ಏಕವಚನದಲ್ಲಿಯೇ ಪುರಾಣ ಶಬ್ದ ಪ್ರಯೋಗವಿದ್ದರೂ ಅವೆಲ್ಲವೂ ಜಾತ್ಯೈಕವಚನಾರ್ಥಕವಾದುದರಿಂದ ಪುರಾಣ ಎಂದರೆ ಪುರಾಣಗಳ ಸಮುದಾಯ ಅರ್ಥಾತ್ ಹದಿನೆಂಟು ಪುರಾಣಗಳು ಎಂದೇ ಅರ್ಥ ಕೊಡುತ್ತವೆಯೆಂದು ತಿಳಿಯಬೇಕು. "ಪುರಾಣಾನಿ" ಎಂದು ಬಹುವಚನ ಉಲ್ಲೇಖವಿದ್ದರೆ ಮಾತ್ರ ಹದಿನೆಂಟು ಪುರಾಣಗಳ ಕ್ರಿಸ್ತ ಪೂರ್ವಕಾಲದ ಅಸ್ತಿತ್ವವನ್ನು ಒಪ್ಪಬೇಕು ಎಂದಿದ್ದರೆ ಅಂಥ ಕ್ರಿಸ್ತ ಪೂರ್ವ ಕಾಲದ ಸ್ಮೃತಿ ಸೂತ್ರ ವಾಙ್ಮಯದಲ್ಲಿಯ ಬಹುವಚನದಲ್ಲಿ ಪುರಾಣ ಪದ ಪ್ರಯೋಗಗಳನ್ನೂ ಬೇಕಾದಷ್ಟು ತೋರಿಸಬಹುದು.

ಸ್ವಾಧ್ಯಾಯಂ ಶ್ರಾವಯೇದ್ ವಿಪ್ರೇ ಧರ್ಮಶಾಸ್ತ್ರಾಣಿ ಚೈ ವಹಿ
ಆಖ್ಯಾನಾನೀತಿಹಾಸಾಂಶ್ಚ ಪುರಾಣಾನಿ ಖಿಲಾನಿ ಚ ॥

ಮಾನವಸ್ಮೃತಿ (೩।೨।೩೨)

ಯತೋ ವೇದಾಃ ಪುರಾಣಾನಿ ವಿದ್ಯೋಪನಿಷದಸ್ತಥಾ
ಶ್ಲೋಕಾಃ ಸೂತ್ರಾಣಿ ಭಾಷ್ಯಾಣಿ ಯತ್ಕಿಂಚನ ವಾಙ್ಮಯಮ್ ॥

ಯಾಜ್ಞವಲ್ಕ್ಯಸ್ಮೃತಿ (೩।೮।೧೮೯)

ಜಪೇಯುರಭ್ರಸೂಕ್ತಂ ತು ಸರ್ವಶಾಖಾಃ ಪಠಂತಿ ವೈ
ಇತಿಹಾಸ ಪುರಾಣಾನಿ ಸಷಡಂಗಾನಿ ಸದರ್ಥಕಮ್ ॥

ಶೌನಕೀಯ ಋಗ್ವಿಧಾನ

ಆಯುಷ್ಮತಾಂ ಕಥಾಃ ಕೀರ್ತಯಂತೋ ಮಾಂಗಲ್ಯಾನಿ
ಇತಿಹಾಸ ಪುರಾಣಾನಿ ಇತಿ ಆಖ್ಯಾಯಮಾನಾಃ ॥

*ಆಶ್ವಲಾಯನಗೃಹ್ಯ ಸೂತ್ರ (೪।೬)*

"ಸ ಕಲ್ಪಾನಧೀತೆ ಸ ನಾರಾಶಂಸೀರಧೀತೆ
ಸ ಪುರಾಣಾನ್ಯಧೀತೆ ಸ ಬ್ರಾಹ್ಮಣಮಧೀತೆ ॥

ಬೃಹಜ್ಜಾಬಾಲೋಪನಿಷತ್

ಮಾಂಸ ಕ್ಷೀರೌದನ ಮಧು ಕುಲ್ಯಾಭಿಸ್ತರ್ಪಯೇತ್ ಪಠನ್
ವಾಕೋವಾಕ್ಯಂ ಪುರಾಣಾನಿ ಇತಿಹಾಸಾನಿ ಚಾನ್ವಹಮ್ ॥

*ಕಾತ್ಯಾಯನಸ್ಮೃತಿ (೧೪।೧೧)*

ಶ್ರೂಯತಾಂ ಯತ್ ಪುರಾವೃತ್ತಂ ಪುರಾಣೇಷು ಮಯಾ ಶ್ರುತಂ ॥

ರಾಮಾಯಣ ಬಾಲಕಾಂಡ

ಅಷ್ಟಾದಶ ಪುರಾಣಾನಾಂ ಶ್ರವಣಾದ್ ಯತ್ಫಲಂ ಲಭೇತ್
ತತ್ಫಲಂ ಸಮವಾಪ್ನೋತಿ ಭಾರತ ಶ್ರವಣಾನ್ನರಃ

ಜೈಮಿನಿಭಾರತ ಅಶ್ವಮೇಧ ಪರ್ವ (೬೮।೯)

ಹೀಗೆ ಕ್ರಿಸ್ತ ಪೂರ್ವ ಸಾವಿರಾರು ವರ್ಷಗಳ ಪೂರ್ವದಲ್ಲಿಯೇ ಇದ್ದವುಗಳೆಂದು ಅನೇಕ ಪಾಶ್ಚಾತ್ಯ ಪಂಡಿತರು ಒಪ್ಪಿದ ಈ ಎಲ್ಲ ಸ್ಮೃತಿ ವಾಙ್ಮಯ ಮತ್ತು ಸೂತ್ರ ವಾಙ್ಮಯ ಮುಂತಾದ ಪ್ರಾಚೀನ ಸಾಹಿತ್ಯಗಳಲ್ಲಿ ಪುರಾಣಗಳ ಉಲ್ಲೇಖವು ಬಹುವಚನದಲ್ಲಿಯೇ ಬೇಕಾದಷ್ಟು ಇರುವಾಗ "ಕ್ರಿಸ್ತೋತ್ತರ ಮೂರು ನಾಲ್ಕು ಶತಕಗಳವರೆಗೆ ಅನೇಕ ಪುರಾಣಗಳು ಇರಲೇ ಇಲ್ಲ" ಎಂಬ ಶ್ರೀ ಹಜರಾರವರ ವಾದದಲ್ಲಿ ಏನೂ ಹುರುಳಿಲ್ಲ ಎಂಬುದು ನಿಶ್ಚಿತ. ಕೇವಲ ಪುರಾಣಾನಿ ಎಂದು ಬಹುವಚನ ಪ್ರಯೋಗ ಮಾತ್ರವಲ್ಲ. ಸ್ಪಷ್ಟವಾಗಿಯೇ ಭವಿಷ್ಯತ್, ವಾಯು, ಕೂರ್ಮ ಮುಂತಾದ ಪುರಾಣಗಳ ನಾಮೋಲೇಖ್ಖವೂ ಕೂಡ ಕ್ರಿಸ್ತಪೂರ್ವ ಸೂತ್ರ, ಬ್ರಾಹ್ಮಣ, ಸ್ಮೃತಿ ಮುಂತಾದ ವಾಙ್ಮಯದಲ್ಲಿ ಕಂಡುಬರುತ್ತದೆ.

ಆಪಸ್ತಂಬ ಧರ್ಮಸೂತ್ರದಲ್ಲಿಯಂತೂ
"ಅಭೂತಸಂಪ್ಲವಾತ್ತೇ ಸ್ವರ್ಗಜಿತಃ ।೫॥
ಪುನಃ ಸರ್ಗೇ ಬೀಜಾರ್ಥಾ ಭವಂತೀತಿ ಭವಿಷ್ಯತ್ ಪುರಾಣೇ
ಅಥಾಸ್ತಿ ಪ್ರಜಾಪತೇರ್ವಚನಂ ॥

*(ಆ.ಧ.ಸೂ. ೨।೨೪।೫೬)*

ಇಲ್ಲಿ ಸ್ಪಷ್ಟವಾಗಿಯೇ ಭವಿಷ್ಯತ್ ಪುರಾಣದ ಉಲ್ಲೇಖವು ಕಂಡು ಬರುತ್ತದೆ. ಪುರಾಣಗಳಲ್ಲಿ ಭವಿಷ್ಯತ್ ಪುರಾಣವು ಮೊದಲಿನದಲ್ಲ. ಅದಕ್ಕಿಂತ ವಿಷ್ಣು, ವರಾಹ,

ಬ್ರಹ್ಮ, ಬ್ರಹ್ಮಾಂಡ, ಮತ್ಸ್ಯ, ಕೂರ್ಮಾದಿಗಳು ಪ್ರಾಚೀನವಾಗಿವೆ. ಆಪಸ್ತಂಬ ಸೂತ್ರದ ಕಾಲದಲ್ಲಿ ಭವಿಷ್ಯತ್ ಪುರಾಣವೇ ರೂಪಗೊಂಡಿತ್ತೆಂದ ಬಳಿಕ ಉಳಿದ ಹದಿನೆಂಟೂ ಪುರಾಣಗಳು ಆ ಕಾಲದಲ್ಲಿ ಪ್ರಚಾರದಲ್ಲಿದ್ದವೆಂಬುದು ಸ್ವಯಂ ಸಿದ್ಧವಾಗುತ್ತದೆ. ಆಪಸ್ತಂಬ ಧರ್ಮಸೂತ್ರದಲ್ಲಿ ಭವಿಷ್ಯತ್ ಪುರಾಣದ ನಾಮೋಲ್ಲೇಖ ಮಾತ್ರವಲ್ಲದೇ ಮತ್ತೆ ಬೇರೆ ಪುರಾಣ ಪದ್ಯಗಳನ್ನು ಉದಾಹರಿಸಿದ್ದೂ ಕಂಡು ಬರುತ್ತದೆ.

"ಅಥ ಪುರಾಣೇ ಶ್ಲೋಕಾ ಉದಾಹರಂತಿ-
"ಉದ್ಯತಾಮಾಹೃತಾಂ ಭಿಕ್ಷಾಂ ಪುರಸ್ತಾದಪ್ರವೇದಿತಾಂ ।
ಭೋಜ್ಯಾಂ ಮೇನೆ ಪ್ರಜಾಪತಿರಪಿ ದುಷ್ಕೃತಕಾರಿಣಃ ॥

ಬೇಡದೇ ಬಂದ ಊಟವನ್ನು ತಿರಸ್ಕರಿಸಬಾರದು. ಆ ಊಟ ಮಾಡಿಸುವವನು ಪಾಪಿಯಾಗಿದ್ದರೂ ಚಿಂತೆಯಿಲ್ಲ. ಅಯಾಚಿತವಾಗಿ ಬಂದ ಭೋಜನವನ್ನು ಅವಶ್ಯವಾಗಿ ಉಣ್ಣಬೇಕು ಎಂದೇ ಬ್ರಹ್ಮ ದೇವರ ಆಶಯ.

"ಯೇ ಹಿಂಸಾರ್ಥಮತಿಕ್ರಾಂತಂ ಹಂತಿ ಮನ್ಯುರೇವ
ಮನ್ಯುಂ ಸ್ಪೃಶತಿ ನ ತಸ್ಮಿನ್ ದೋಷಃ ಇತಿ ಪುರಾಣೇ

ತಮ್ಮನ್ನು ಕೊಲ್ಲಬಂದವನನ್ನು (ಆತ್ಮರಕ್ಷಣೆಗಾಗಿ) ಪ್ರತಿಯಾಗಿ ಹೊಡೆದು ಕೊಂದರೆ ತಪ್ಪಿಲ್ಲ. ಪಾಪವಿಲ್ಲ. ಕೋಪವನ್ನು ಕೋಪವೇ ಕೊಂದಂತಾಯಿತು ಅಷ್ಟೇ!

"ಅಥ ಪುರಾಣೇ ಶ್ಲೋಕಾವುದಾಹರಂತಿ-
ಅಷ್ಟಾಶೀತಿ ಸಹಸ್ರಾಣಿ ಯೇ ಪ್ರಜಾಮೀಷಿರೆ ಋಷಯಃ
ದಕ್ಷಿಣೇನಾರ್ಯಮ್ಣಃ ಪಂಥಾನಂ ತೇ ಸ್ಮಶಾನಾನಿ ಭೇಜಿರೇ ॥
ಅಷ್ಟಾಶೀತಿ ಸಹಸ್ರಾಣಿ ಯೇ ಪ್ರಜಾಂ ನೇಷಿರೇ ಋಷಯಃ
ಉತ್ತರೇಣಾರ್ಯಮ್ಣಃ ಪಂಥಾನಂ ತೇಽಮೃತತ್ವಂ ಹಿ ಕಲ್ಪಂತೇ ॥
*ಆಪಸ್ತಂಬಧರ್ಮಸೂತ್ರ (೨।೨೩।೩।೫)*

ಸಂತಾನಾಪೇಕ್ಷಿಗಳಾದ ಎಂಬತ್ತೆಂಟು ಸಾವಿರ ಋಷಿಗಳು (ತಮ್ಮ ಪುತ್ರೇಷಣೆಯ ಮೂಲಕ) ಸೂರ್ಯನಿಂದ ದಕ್ಷಿಣದಿಶೆಯ ಮಾರ್ಗ ಹಿಡಿದು ಸ್ಮಶಾನವನ್ನು ತಲುಪಿದರು. ಆದರೆ ಪ್ರಜಾಕಾಮನೆ ಇಲ್ಲದ ಅಷ್ಟೇ ಋಷಿಗಳು ಸೂರ್ಯನಿಂದ ಉತ್ತರಾಭಿಮುಖವಾಗಿ ಹೊರಟು ಮೋಕ್ಷವನ್ನು ಹೊಂದಿದರು.

ಆಪಸ್ತಂಬಧರ್ಮ ಸೂತ್ರದಲ್ಲಿ "ಪುರಾಣೇ" ಎಂದು ಪುರಾಣನಾಮನಿರ್ದೇಶನ ಮಾಡಿ ಉಲ್ಲೇಖಿಸಿದ ಈ ಎರಡು ಪದ್ಯಗಳು ಮತ್ಸ್ಯಪುರಾಣದಲ್ಲಿಯೂ ವಾಯು, ಬ್ರಹ್ಮಾಂಡ ಹಾಗೂ ವಿಷ್ಣು ಮುಂತಾದ ಪುರಾಣಗಳಲ್ಲಿಯೂ ಮನುಸ್ಮೃತಿಯಲ್ಲಿಯೂ ಕಾಣಸಿಗುತ್ತವೆ. ಇವುಗಳಲ್ಲಿ ಕೆಲವು ಪದ್ಯಗಳು ಇಲ್ಲಿ ಉದಾಹರಿಸಿದಂತೆ ಅವಿಕಲವಾಗಿ ಪುರಾಣಗಳಲ್ಲಿ ಕಾಣಸಿಕೊಂಡಿವೆ. ಉಳಿದವುಗಳು ತುಸು ಬದಲಾಗಿ ಕಿಂಚಿತ್ ಭಿನ್ನವಾದ ಶಬ್ದ ಶಯ್ಯೆಗಳ ಅಪ್ಪುಗೆಯಲ್ಲಿ ಗೋಚರವಾಗುತ್ತವೆ ಎಂದು ಡಾ॥ ಪರ್ಗಿಟರರೇ ಅಭಿಪ್ರಾಯ ಪಟ್ಟಿದ್ದಾರೆ. ಇದರ ಮೇಲಿಂದ ಆಪಸ್ತಂಬ ಧರ್ಮ ಸೂತ್ರಕಾರರ ಕಾಲದಲ್ಲಿ

ಮತ್ಸ್ಯ, ಕೂರ್ಮ, ವಿಷ್ಣು, ಭವಿಷ್ಯ ಮೊದಲಾದ ಹದಿನೆಂಟೂ ಪುರಾಣಗಳು ಊರ್ಜಿತದಲ್ಲಿದ್ದವು ಎಂಬುದು ಸುಸ್ಪಷ್ಟವಾಗುತ್ತದೆ.

ಆಪಸ್ತಂಬ ಧರ್ಮಸೂತ್ರದಲ್ಲಿ ಭವಿಷ್ಯತ್‌ಪುರಾಣದ ಉಲ್ಲೇಖವಿದ್ದುದನ್ನು ಗಮನಿಸಿಯೂ ಕ್ರಿಸ್ತಾಬ್ದ ಮೂರನೆಯ ಶತಕಕ್ಕಿಂತ ಪುರಾಣಗಳು ಪ್ರಾಚೀನವಲ್ಲ ಎಂದು ಹಜರಾರವರು ಹೇಳಿದ್ದು ಧಾರ್ಷ್ಟ್ಯದ ಮಾತೇ ಸರಿ. ಅವರು ತಮ್ಮ ಈ ವಿಧಾನಕ್ಕೆ ಬೇರಾವ ಪ್ರಬಲ ಕಾರಣವನ್ನೂ ಕೊಟ್ಟಿಲ್ಲ. ಆಪಸ್ತಂಬ ಧರ್ಮಸೂತ್ರದ ಸಮಯವು ಡಾ॥ ಬುಲ್ಹರರ ನಿರ್ಣಯದಂತೆ ಕ್ರಿಸ್ತಪೂರ್ವ ಮೂರನೆ ಶತಕವಾಗಿದೆ. ಶ್ರೀ ಪಾರ್ಗಿಟರರು ಬುಲ್ಹರರ ಕಾಲ ನಿರ್ಣಯವನ್ನು ಒಪ್ಪಿ ಕ್ರಿಸ್ತಪೂರ್ವ ಮೂರನೆ ಶತಕಕ್ಕಿಂತ ಭವಿಷ್ಯತ್‌ಪುರಾಣವು ಕನಿಷ್ಠ ಇನ್ನೂರು ವರ್ಷವಾದರೂ ಪ್ರಾಚೀನವಿರಬೇಕು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಪಾಶ್ಚಾತ್ಯ ವಿಮರ್ಶಕರ ಅಭಿಪ್ರಾಯಾನುಸಾರವಾಗಿ ಹೋದರೂ ಹದಿನೆಂಟು ಪುರಾಣಗಳು ಕ್ರಿಸ್ತಪೂರ್ವ ೫-೬ನೇ ಶತಮಾನದಲ್ಲಿ ಅಂದರೆ ಹಜರಾರು ಹೇಳುವದಕ್ಕಿಂತ ಮೊದಲು ಸಾವಿರಾರು ವರ್ಷ ಪೂರ್ವದಲ್ಲಿ ಆಸ್ತಿತ್ವದಲ್ಲಿದ್ದವು ಎಂದಾಗುತ್ತದೆ. ಅವುಗಳ ರಚನೆ ಇನ್ನೂ ಎಷ್ಟೋ ಶತಮಾನ ಕಾಲ ಹಿಂದೆ ಹೋಗುವದು. ಇತರ ಸೂತ್ರ ಬ್ರಾಹ್ಮಣಗಳಲ್ಲಿಯೂ ಹದಿನೆಂಟು ಪುರಾಣಾಂತರ್ಗತ ಕಥೆಗಳ ಸೂಚ್ಯನಿರ್ದೇಶನ ಸಂಕೇತಗಳು ಕಂಡು ಬರುತ್ತವೆ.

ಶತಪಥ ಬ್ರಾಹ್ಮಣದಲ್ಲಿ ಅಶ್ವಮೇಧ ಯಾಗದಲ್ಲಿ "**ಅಧ್ವರ್ಯವು ಇತಿಹಾಸ ಪುರಾಣಗಳೆಂಬ ವೇದವನ್ನು ಪಠಿಸಿರಿ**" ಎಂದು ಪುರೋಹಿತರಿಗೆ ಹೇಳುತ್ತಾನೆ ಎಂದಿದೆ. ಇದರ ಮೇಲಿಂದ ಪುರಾಣಕ್ಕೆ ಆ ಕಾಲದಲ್ಲಿ ವೇದ ಸಮಾನವಾದ ಸ್ಥಾನವಿದ್ದಿತೆಂದು ಗೊತ್ತಾಗುವದಲ್ಲದೇ ಇಲ್ಲಿಯ ಪುರಾಣ ಶಬ್ದಕ್ಕೆ ವಿಷ್ಣು ಕೂರ್ಮ ಮುಂತಾದ ಪುರಾಣಗಳೆಂದೇ ಅರ್ಥವೆಂದು ಅವುಗಳ ಭಾಷ್ಯ ಟೀಕೆಗಳಿಂದ ತಿಳಿದು ಬರುತ್ತದೆ.

ಇದರಂತೆ ಸಾಂಖ್ಯಾಯನ ಶ್ರೌತಸೂತ್ರದಲ್ಲಿ ಅಶ್ವಮೇಧ ಯಜ್ಞದ ಎಂಟನೆಯ ದಿನ ಅಧ್ವರ್ಯುವು ಸಮ್ಮದ ಮತ್ಸ್ಯದ ಕತೆ ಹೇಳಿ "**ಇತಿಹಾಸ ವೇದವು ಒಂದು ವೇದವೇ ಆಗಿರುತ್ತದೆ. ಇದು ವೇದವಿದೆ**" ಎಂದು ತಿಳಿಸಿ ಇತಿಹಾಸವನ್ನು ಪಠಿಸುತ್ತಾನೆ. ಒಂಭತ್ತನೆಯ ದಿನ ತಾರ್ಕ್ಷ್ಯ ವೈಪಶ್ಚಿತನ ಕಥೆ ಹೇಳಿ "**ಪುರಾಣ ವೇದವು ಒಂದು ವೇದವಾಗಿರುತ್ತದೆ ಇದು ವೇದ**" ಎಂದು ಹೇಳಿ ಪುರಾಣದಲ್ಲಿಯ ಕೆಲವು ಭಾಗಗಳನ್ನು ಪಠಣ ಮಾಡುತ್ತಾನೆ. ಆಶ್ವಲಾಯನ ಸೂತ್ರದಲ್ಲಿಯೂ ಇದೇ ಕತೆ ಬರುತ್ತದೆ.

ಸಾಂಖ್ಯಾಯನ ಶ್ರೌತಸೂತ್ರದ ಮೇಲಿನ ಭಾಷ್ಯಕಾರರು ಇಲ್ಲಿ ಪುರಾಣವೆಂದರೆ ವಾಯು ಪ್ರೋಕ್ತವಾದ ಬ್ರಹ್ಮಾಂಡ ಮತ್ತು ವಾಯು ಪುರಾಣಗಳನ್ನು ಪಠಿಸಬೇಕೆಂದು ಸೂತ್ರಕಾರರ ಅಭಿಪ್ರಾಯ ಎಂದು ಬರೆಯುತ್ತಾರೆ. ಮತ್ಸ್ಯಸಮ್ಮದನ ಕಥೆ ಎಂದರೆ ಸೌಭರಿ ಋಷಿಯ ಕತೆ. ಸೌಭರಿ ಮುನಿಯು ನದೀ ದಂಡೆಯಲ್ಲಿ ತಪಸ್ಸು ಮಾಡುತ್ತ ಕುಳಿತಾಗ ಸಮ್ಮದ ಎಂಬ ಮತ್ಸ್ಯವು ನೀರಿನಲ್ಲಿ ಮಡದಿ ಮಕ್ಕಳೊಡನೆ ಆನಂದದಿಂದ ಜಲವಿಹಾರ ಮಾಡುವದನ್ನು ಕಂಡು ಸೌಭರಿಯ ಮನಸ್ಸು ಚಂಚಲವಾಯಿತು. ಕೂಡಲೇ ಅವನು ತಪಸ್ಸನ್ನು ಬಿಟ್ಟ ಮಾಂಧಾತರಾಜನ ಬಳಿಗೆ ಹೋಗಿ ಅವನ ಐವತ್ತು ಜನ ಕನ್ಯೆಯರನ್ನು

ವಿವಾಹವಾದನು ಎಂಬ ಕತೆ ವಿಷ್ಣು ಪುರಾಣದಲ್ಲಿಯೂ ಪದ್ಮ ಪುರಾಣದಲ್ಲಿಯೂ ಬರುತ್ತದೆ. ಆ ಸೂತ್ರ ಕಾಲದಲ್ಲಿ ಯಜ್ಞ ಯಾಗಾದಿ ಪ್ರಸಂಗಗಳಲ್ಲಿ ವಿಷ್ಣು, ಪದ್ಮ ಪುರಾಣ ಪ್ರಸಂಗಗಳ ಪಠನಪಾರಾಯಣಗಳು ಅವಶ್ಯ ವಿಧಿಯಾಗಿದ್ದಿತೆಂದು ಕಂಡು ಬರುತ್ತದೆ.

ಈ ಕತೆ ಮತ್ತು ಇದರಂತಿರುವ ಬೇರೆ ಪುರಾಣ ಕಥೆಗಳ ಕಥನವನ್ನು ಯಜ್ಞ ಯಾಗಗಳಲ್ಲಿ ಕಡ್ಡಾಯವಾಗಿ ಮಾಡಿದ್ದು ಕೇವಲ ಸಾಂಖ್ಯಾಯನ ಶ್ರೌತಸೂತ್ರಗಳಲ್ಲಿ ಮಾತ್ರವಲ್ಲ. ಇದೇ ಕತೆ ತುಸು ಹೆಚ್ಚು ಕಡಿಮೆ ಇದೇ ಅನುಪೂರ್ವಿಯಲ್ಲಿ ಶತಪಥ ಬ್ರಾಹ್ಮಣ ಮತ್ತು ಆಶ್ವಲಾಯನ ಸೂತ್ರ ಎರಡರಲ್ಲಿಯೂ ಕಾಣಸಿಗುತ್ತದೆ. ಇಲ್ಲಿ ಅಭಿಪ್ರೇತವಾದ ಪುರಾಣವೆಂದರೆ ವಾಯುಪ್ರೋಕ್ತವಾದ ಪುರಾಣ. ಅರ್ಥಾತ್ ವಾಯು ಪುರಾಣ ಬ್ರಹ್ಮಾಂಡ ಪುರಾಣ. ಇದರ ಮೇಲಿಂದ ವೇದೋತ್ತರ ಸೂತ್ರ ಬ್ರಾಹ್ಮಣ ಕಾಲದಲ್ಲಿ ವಿಷ್ಣು, ವಾಯು, ಪದ್ಮ, ಬ್ರಹ್ಮ, ಬ್ರಹ್ಮಾಂಡಾದಿ ಪುರಾಣಗಳನ್ನು ಪಂಡಿತರು ಹಾಗೂ ಯಾಜ್ಞಿಕರು ಸಭಾ ಯಜ್ಞಮಂಡಪಾದಿಗಳಲ್ಲಿ ಪಠಿಸುವ ಸಂಪ್ರದಾಯವಿದ್ದಿತೆಂದು ತಿಳಿದು ಬರುತ್ತದೆ. ಪುರಾಣಗಳ ಈಚಿನ ಗಡುವನ್ನು ನಿರ್ಧರಿಸುವಾಗ ಹಜರಾರ ಪ್ರತಿಪಾದನೆ ಇಂತಿದೆ. ''ಸಾಂಖ್ಯಕಾರಿಕೆಯ ಗೌಡಪಾದ ಭಾಷ್ಯದಲ್ಲಿ **''ತತ್ರಭವ್ಯಂ ನಾಮ ವೇದ ಶಿಕ್ಷಾಕಲ್ಪ ವ್ಯಾಕರಣ ನಿರುಕ್ತ ಛಂದೋ ಜ್ಯೋತಿಷ್ಯಾಖ್ಯ ಷಡಂಗ ಸಹಿತ ಪುರಾಣಾನಿ ನ್ಯಾಯ ಮೀಮಾಂಸಾಗೀತಾ ಧರ್ಮಶಾಸ್ತ್ರಾಣೀತಿ''** ಎಂಬಲ್ಲಿ **'ಪುರಾಣಾನಿ'** ಎಂದು ಬಹುವಚನ ಪ್ರಯೋಗ ಮಾಡಿದ್ದಾರೆ. ಮತ್ತು ಅದೇ ಗೌಡಪಾದರು ತಮ್ಮ ಉತ್ತರಗೀತಾ ಭಾಷ್ಯದಲ್ಲಿ ಗೀತೆಯಲ್ಲಿಯ ಪುರಾಣ ಶಬ್ದಕ್ಕೆ **''ಪುರಾಣಾನಿ ಬ್ರಹ್ಮಾಂಡಾದೀನಿ''** ಎಂದು ವ್ಯಾಖ್ಯಾನಿಸಿದ್ದಾರೆ. ಆದುದರಿಂದ ಗೌಡಪಾದರ ಕಾಲದಲ್ಲಿ ಹದಿನೆಂಟು ಪುರಾಣಗಳು ಅಸ್ತಿತ್ವದಲ್ಲಿದ್ದವು ಎಂದಂತಾಯಿತು. ಅರ್ಥಾತ್ ಈ ಪುರಾಣ ವಿಭಾಗವು ಗೌಡಪಾದರ ಕಾಲಕ್ಕಿಂತ ಪ್ರಾಚೀನ ಎಂದು ಒಪ್ಪಬೇಕು.''

ಇಲ್ಲಿ ಗೌಡಪಾದರು **'ಪುರಾಣಾನಿ'** ಎಂದ ಮಾತ್ರಕ್ಕೆ ಹದಿನೆಂಟು ಪುರಾಣಗಳು ಅವರ ಕಾಲದಲ್ಲಿ ಅಸ್ತಿತ್ವದಲ್ಲಿ ಇದ್ದವು ಎಂದು ಒಪ್ಪುವದಾದರೆ ಮನುಸ್ಮೃತಿಯಲ್ಲಿ **''ಪುರಾಣಾನಿ ಖಿಲಾನಿ''** ಯಾಜ್ಞವಲ್ಕ್ಯ ಸ್ಮೃತಿಯಲ್ಲಿ **''ವೇದಾಃ ಪುರಾಣಾನಿ''** ಹಾಗೂ ತೈತ್ತಿರೀಯಾರಣ್ಯದಲ್ಲಿ **''ಇತಿಹಾಸ ಪುರಾಣಾನಿ''** ಎಂದೂ ಇತರ ಪ್ರಾಚೀನ ಗ್ರಂಥಗಳಲ್ಲಿಯೂ ಅದೇ ರೀತಿ ಬಹುವಚನದಲ್ಲಿಯೇ ಪುರಾಣ ಶಬ್ದ ಪ್ರಯೋಗವಿದ್ದುದರಿಂದ ಆ ಕಾಲದಲ್ಲಿಯೇ ಅಂದರೆ ಕ್ರಿಸ್ತಪೂರ್ವ ಸಹಸ್ರಾರು ವರ್ಷಗಳ ಹಿಂದೆ ಆ ಎಲ್ಲ ಪುರಾಣಗಳೂ ಅಸ್ತಿತ್ವದಲ್ಲಿದ್ದವು ಎಂದು ಒಪ್ಪಲಿಕ್ಕೆ ಏನು ಆತಂಕ! ಮೇಲೆ ಹೇಳಿದ ಈ ಮೂರು ಪ್ರಾಚೀನ ಗ್ರಂಥಗಳಲ್ಲಿ ಬಹುವಚನ ಪುರಾಣ ಶಬ್ದ ಪ್ರಯೋಗವಿದ್ದುದನ್ನು ಶ್ರೀ ಹಜರಾರೇ ತಮ್ಮ **''ಪುರಾಣಿಕ್ ರಿಕಾರ್ಡ್ಸ್ ಆನ್ ಹಿಂದು ರಾಯಿಟ್ಸ ಅಂಡ ಕಸ್ಟಮ್ಸ''** ಎಂಬ ಪುಸ್ತಕದಲ್ಲಿ ನಿರ್ದೇಶಿಸಿದ್ದಾರೆ. ಈ ಪ್ರಮಾಣ ವಿಮರ್ಶೆಯಿಂದ ಸುಮಾರು ಕ್ರಿಸ್ತಪೂರ್ವ ಸಾವಿರ ವರ್ಷ ಅಂದರೆ ಈಗ ಸುಮಾರು ಮೂರು ಸಾವಿರ ವರ್ಷಗಳ ಹಿಂದೆ ಹದಿನೆಂಟು ಪುರಾಣಗಳು ಸುಪ್ರಸಿದ್ಧವಾಗಿ

ಪ್ರಚಾರಗೊಂಡಿದ್ದವು ಎಂದು ಸಿದ್ಧವಾದಂತಾಯಿತು. ಅವುಗಳ ರಚನೆ ಅಥವಾ ಹುಟ್ಟು ಇನ್ನೂ ಹಿಂದೆ ಅಂದರೆ ಸಾವಿರಾರು ವರ್ಷಗಳ ಹಿಂದೆ ಆಗಿರಲಿಕ್ಕೆ ಸಾಕು. ಅರ್ಥಾತ್ ದ್ವಾಪರ ಯುಗದ ಅಂತಿಮ ಭಾಗದಲ್ಲಿ ಕಲಿಯುಗದ ಪ್ರಾರಂಭದಲ್ಲಿ ಶ್ರೀ ಕೃಷ್ಣ ದ್ವೈಪಾಯನರು ಹದಿನೆಂಟು ಪುರಾಣಗಳನ್ನು ರಚಿಸಿದರು. ಎಂದು ಪದ್ಮ, ಮತ್ಸ್ಯ, ಬ್ರಹ್ಮಾಂಡ, ವಿಷ್ಣು ಮುಂತಾದ ಪುರಾಣ ಹಾಗೂ ಸ್ಮೃತಿ ಸೂತ್ರ, ಬ್ರಾಹ್ಮಣಾರಣ್ಯಕಾದಿ ಗ್ರಂಥಗಳಲ್ಲಿ ಹೇಳಿದುದನ್ನು ಒಪ್ಪಿದರೆ ಯಾವ ಐತಿಹಾಸಿಕ ಪ್ರಮಾಣ ವಿರೋಧವೂ ಬರುವದಿಲ್ಲ.

ಶ್ರೀ ಕೃಷ್ಣ ದ್ವೈಪಾಯನರು ಅರ್ಥಾತ್ ಶ್ರೀ ವೇದವ್ಯಾಸರು ಹದಿನೆಂಟು ಪುರಾಣಗಳನ್ನು ರಚಿಸುವುದಕ್ಕಿಂತ ಮೊದಲು ಪ್ರಪಂಚದಲ್ಲಿ ಒಂದೇ ಪುರಾಣ ರಾಶಿಯಿದ್ದಿತು. ಅದೇ ಆದಿ ಪುರಾಣ. ಅದನ್ನು ನಿರ್ಮಿಸಿದವ ಸಾಕ್ಷಾದ್ ಬ್ರಹ್ಮ. ಅದು ವೇದದಷ್ಟೇ ಪುರಾತನ. ಎಲ್ಲ ಶಾಸ್ತ್ರಗಳಷ್ಟೇ ಸನಾತನ. ಅವಕ್ಕಿಂತ ಮೊದಲಿನದೆಂದೂ ಕೂಡ ಕೆಲವು ಪುರಾಣಗಳ ಹೇಳಿಕೆ.

**''ಪುರಾಣಂ ಸರ್ವ ಶಾಸ್ತ್ರಾಣಾಂ ಪ್ರಥಮಂ ಬ್ರಹ್ಮಣಾ ಸ್ಮೃತಂ**
**ಅನಂತರಂಚ ವಕ್ತ್ರೇಭ್ಯ: ವೇದಾಸ್ತಸ್ಯ ವಿನಿರ್ಗತಾ: ॥**

ಎಂದು ಮತ್ಸ್ಯ ಬ್ರಹ್ಮಾಂಡ ಪುರಾಣಗಳಲ್ಲಿ ಹೇಳಿದ್ದಾರೆ. ಪುರಾಣ ಎಂದರೆ ಪುರಾವೃತ್ತವು ಮೊದಲು ಭಗವಂತನ ಸ್ಮೃತಿ ಪಥದಲ್ಲಿ ಬಂದಿತು. ನಂತರ ಅವನ ಮುಖದಿಂದ ಹೊರಬಂದಿತು. ಹೀಗೆ ಮೊದಲು ದೇವರ ಸ್ಮೃತಿ ವಿಷಯವಾದ ಪುರಾಣ ರಾಶಿಯನ್ನೆಲ್ಲ ಹದಿನೆಂಟು ಪುರಾಣ ರೂಪವಾಗಿ ಕ್ರೋಢೀಕರಿಸಿ ವ್ಯವಸ್ಥಿತಗೊಳಿಸಿದವರು ಶ್ರೀಕೃಷ್ಣದ್ವೈಪಾಯನರು. ಅವರು ತಮ್ಮ ಶಿಷ್ಯನಾದ ರೋಮಹರ್ಷಣನಿಗೆ ತಮ್ಮ ಪುರಾಣಗಳನ್ನೆಲ್ಲ ಹೇಳಿದರು. ಆ ರೋಮಹರ್ಷಣನಿಗೆ ಆರುಜನ ಶಿಷ್ಯರು. ಸುಮತಿ, ಅಗ್ನಿ, ವಚನ, ಮಿತ್ರಾಯು, ಶಾಂಸಪಾಯನ, ಅಕೃತವ್ರಣ ಮತ್ತು ಸಾವರ್ಣಿ. ಇವರೆಲ್ಲರೂ ಕೂಡಿ ಭಗವಾನ್ ವೇದವ್ಯಾಸರ ಹದಿನೆಂಟು ಪುರಾಣಗಳನ್ನು ಭೂಮಂಡಲದಲ್ಲಿ ಪ್ರಚುರ ಪಡಿಸಿದರು. ಮುಂದೆ ಕಾಲಕ್ರಮದಿಂದ ಆ ಪುರಾಣಗಳಲ್ಲಿ ಪ್ರಕ್ಷೇಪ ಉತ್‌ಕ್ಷೇಪಗಳು ನಡೆದೇ ಇರುತ್ತವೆ. ಈ ಪುರಾಣಗಳಲ್ಲಿ ಧರ್ಮಶಾಸ್ತ್ರ ವಿಷಯವು ಕಂಡು ಬರುವದರಿಂದ ಇವೆಲ್ಲವೂ ಅರ್ವಾಚೀನ ಎಂದು ಕೆಲವು ಆಧುನಿಕ ವಿಮರ್ಶಕರು ನಿರ್ಧರಿಸಿ ಹೊರಟಿದ್ದಾರೆ. ಅವರ ದೃಷ್ಟಿಯಲ್ಲಿ ''ಧರ್ಮಶಾಸ್ತ್ರ ಎಂದರೆ ಆಚಾರ, ವಿಚಾರ, ವ್ರತ, ಪ್ರಾಯಶ್ಚಿತ್ತ, ಉಪವಾಸ, ಪೂಜಾ, ಆನ್ಹಿಕ, ವರ್ಣಾಶ್ರಮ ಧರ್ಮ ಮತ್ತು ಬೇರೆ ಬೇರೆ ಜನರ ಕರ್ತವ್ಯ ಹಾಗೂ ನಿತ್ಯನೈಮಿತ್ತಕ ಕರ್ಮಾನುಷ್ಠಾನಗಳ ವಿಧಿ ವಿಧಾನ, ಜಪ, ತಪ, ಧ್ಯಾನ ಹಾಗೂ ಭಕ್ತಿ ಮುಂತಾದವುಗಳೆಲ್ಲವೂ ಸ್ಮೃತಿ ಗ್ರಂಥಗಳ ವಿಷಯವಾಗಿವೆ. ಪುರಾಣಗಳು ಕೇವಲ

**''ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ**
**ವಂಶಾನುಚರಿತಂ ಯಸ್ಮಿನ್ ಪುರಾಣಂ ಪ್ರಕೀರ್ತಿತಮ್ ॥**

ಸರ್ಗ ಪ್ರತಿಸರ್ಗ, ವಂಶ, ಮನ್ವಂತರ ಹಾಗೂ ಆ ವಂಶಗಳಲ್ಲಿ ಹುಟ್ಟಿದ ರಾಜರ ಋಷಿಗಳ ಚರಿತ್ರಕಥನ ಇವು ಐದು ಮಾತ್ರ ಪುರಾಣದ ಲಕ್ಷಣ. ಅದರ ಹೊರತಾಗಿ

ಇತ್ತೀಚಿನ ಪುರಾಣಗಳಲ್ಲಿ ಧರ್ಮ ಶಾಸ್ತ್ರದ ವಿವಿಧ ವಿಷಯಗಳ ವಿಪುಲ ಪ್ರವೇಶವು ಕಂಡು ಬರುವದು. ಇದೆಲ್ಲವು ಸ್ಮೃತಿ ಗ್ರಂಥಗಳ ಪ್ರಭಾವ. ಇದ ಪ್ರಾಚೀನ ಧರ್ಮಶಾಸ್ತ್ರದ ಗಾತ್ರ ದೊಡ್ಡದಾಗಿ ಈ ಹದಿನೆಂಟು ಪುರಾಣಗಳು ರೂಪಗೊಂಡಿವೆ ಎಂದು ಕೆಲವು ಪಾಶ್ಚಾತ್ಯ ಹಲವು ಪೌರ್ವಾತ್ಯ ಪುರಾಣ ವಿದ್ಯಾವಿಚಕ್ಷಣರು ವಾದಿಸುತ್ತಾರೆ. ಇವರ ದೃಷ್ಟಿಯಲ್ಲಿ ಧರ್ಮ ಶಾಸ್ತ್ರ ಹಾಗೂ ಕರ್ಮಕಾಂಡವೆಲ್ಲವೂ ಪುರಾಣಬಾಹ್ಯ. ಅಂದರೆ ಪುರಾಣ ಲಕ್ಷಣ ಘಟಕವಲ್ಲ. ಆದರೆ "ಪುರಾಣೇ ಧರ್ಮ ನಿರ್ಣಯಃ" ಎಂಬ ಪದ್ಮ ಪುರಾಣದ ವಚನವು ಧರ್ಮ ಶಾಸ್ತ್ರನಿರ್ಣಯವೂ ಪುರಾಣ ಕಕ್ಷೆಯಲ್ಲಿಯೇ ಬರುತ್ತದೆಂದು ಸ್ಪಷ್ಟವಾಗಿಯೇ ತಿಳಿಸುತ್ತದೆ. ಮಹಾಭಾರತದ ಆದಿ ಪರ್ವದಲ್ಲಿ

"ಮಾಹಾತ್ಮ್ಯಮಪಿ ಚಾಸ್ತಿಕ್ಯಂ ಸತ್ಯಂ ಶೌಚಂ ದಯಾರ್ಜವಂ
ವಿದ್ವದ್ಭಿಃ ಕಥ್ಯತೇ ಲೋಕೇ ಪುರಾಣೇ ಕವಿ ಸತ್ತಮೈಃ ॥

ರಾಜಮಹಾರಾಜರ ದಿವ್ಯಕರ್ಮ, ವಿಕ್ರಮ, ತ್ಯಾಗಗಳಲ್ಲದೇ ಮಹಾಪುರುಷರ ಮಹಿಮೆ, ಆಸ್ತಿಕ್ಯ ಎಂದರೆ ದೇವ, ವೇದ, ಸಂಪ್ರದಾಯ ಶ್ರದ್ಧೆ, ಶೌಚ, ದಯೆ, ಋಜುತ್ವ ಸರಳ ಗುಣ ಮುಂತಾದವುಗಳೆಲ್ಲವೂ ಪುರಾಣದಲ್ಲಿ ಪಂಡಿತರಿಂದ ಹೇಳಲ್ಪಡುತ್ತವೆ" ಎಂದು ನಿರೂಪಿಸಿದ್ದಾರೆ. ಇದರಿಂದ ಮಾನವೀಯ ಜೀವನಕ್ಕೆ ಸಂಬಂಧಿಸಿದ ಇತಿಹಾಸ ಚಾರಿತ್ರ್ಯ, ಶೀಲ, ಸದಾಚಾರ, ದುರಾಚಾರ ದುಷ್ಪರಿಣಾಮ, ತತ್ಪರಿಹಾರಪ್ರಕಾರ ಮುಂತಾದ ವಿಷಯಗಳು ಪುರಾಣಗಳಲ್ಲಿ ಬಂದರೂ ಅವುಗಳಿಂದ ಪುರಾಣತ್ವಕ್ಕೆ ಯಾವ ಚ್ಯುತಿಯೂ ಬರಲಾರದು. ಪಂಚವಿಧ ಪುರಾಣ ಲಕ್ಷಣದಲ್ಲಿ ಈ ಎಲ್ಲ ವಿಷಯಗಳೂ "**ವಂಶಾನು ಚರಿತಂ**" ಎಂಬುವ ಪದದಿಂದ ಲಕ್ಷಿತವಾಗಿರುತ್ತವೆ. ಮೇಲೊಮ್ಮೆ "**ವಂಶೋ ಮನ್ವಂತ ರಾಣಿಚ**" ಎಂದು ಹೇಳಿ ಮತ್ತೆ ಕೆಳಗಿನ ಸಾಲಿನಲ್ಲಿ "ವಂಶಾನು ಚರಿತಂ" ಎಂಬ ಸಾಂಕೇತಿಕ ಶಬ್ದದಿಂದ ಆ ಆ ವಂಶಗಳಲ್ಲಿ ಜನಿಸಿದ ರಾಜ, ಋಷಿ, ದೇವ, ದಾನವ, ಮಾನವ ಮುಂತಾದವರ ಅನುಚರಿತ ಎಂದರೆ ಆಚರಣೆ, ಚಾರಿತ್ರ್ಯ, ಅರ್ಥಾತ್ ಲೋಕ ಚಾರಿತ್ರ್ಯ ವನ್ನೆಲ್ಲ ಹೇಳುವದು ಪುರಾಣಗಳ ಉದ್ದೇಶವಾಗಿರುತ್ತದೆ ಎಂದು ಸೂಚಿತವಾಗಿರುತ್ತದೆ. ಬ್ರಹ್ಮಪುರಾಣದಲ್ಲಿ "ಪುರಾಣಂ ಪಂಚಲಕ್ಷಣಂ" ಎಂಬುದು ಉಪಪುರಾಣದ ಲಕ್ಷಣ. ಮಹಾ ಪುರಾಣಗಳು ಪಂಚ ಲಕ್ಷಣವಲ್ಲ ದಶಲಕ್ಷಣಂ ಹತ್ತು ವಿಶಿಷ್ಟ ವಿಭಾಗವುಳ್ಳದ್ದೇ ಮಹಾ ಪುರಾಣ ಎನಿಸುತ್ತದೆಯೆಂದು ಹೇಳಲಾಗಿದೆ.

"ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ವಿಪ್ರ ಪುರಾಣಂ ಪಂಚಲಕ್ಷಣಮ್ ॥

ಏತದುಪ ಪುರಾಣಾನಾಂ ಲಕ್ಷಣಂ ಹಿ ವಿದುರ್ಬುಧಾಃ ।
ಮಹತಾಂಚ ಪುರಾಣಾನಾಂ ಲಕ್ಷಣಂ ಕಥಯಾಮಿತೇ ॥

ಸೃಷ್ಟಿಶ್ಚಾಪಿ ವಿಸೃಷ್ಟಿಶ್ಚ ಸ್ಥಿತಿಸ್ತೇಷಾಂ ಚ ಪಾಲನಮ್ ।
ಕರ್ಮಣಾಂ ವಾಸನಾ ವಾರ್ತಾ ಚಾಮೂನಾಂ ಚ ಕ್ರಮೇಣ ಚ ॥

ವರ್ಣನಂ ಪ್ರಲಯಾನಾಂ ಚ ಮೋಕ್ಷಸ್ಯ ಚ ನಿರೂಪಣಂ।
ಉತ್ಕೀರ್ತನಂ ಹರೇರೇವ ದೇವಾನಾಂ ಚ ಪೃಥಕ್
ದಶಾಧಿಕಂ ಲಕ್ಷಣಂ ಚ ಮಹತಾಂ ಪರಿಕೀರ್ತಿತಂ ॥

ಹೀಗೆ ಕೆಲ ಪುರಾಣಗಳಲ್ಲಿ ಪಂಚ ಲಕ್ಷಣ ಕೆಲ ಪುರಾಣಗಳಲ್ಲಿ ದಶಲಕ್ಷಣ, ಯಾವುದು ನಿಜ ! ವಾಸ್ತವವಾಗಿ ಪುರಾಣ ಪಂಚಲಕ್ಷಣವೋ ದಶಲಕ್ಷಣವೋ ! ಒಪ್ಪಾವುದು ತಪ್ಪಾವುದು ! ಎಂದು ಕೆಲವರಿಗೆ ಸಂದೇಹ ಬರಬಹುದು. ಆದರೆ..... ವ್ಯಾಸ ಕೃತ ಪುರಾಣದಲ್ಲಿ ತಪ್ಪೇ ಇಲ್ಲ. ಎಲ್ಲವೂ ಒಪ್ಪು. ನೋಡುವ ಕಣ್ಣು ಬೇಕು. ತಿಳಿಯುವ ತೂಕ ಬೇಕು. ಭಾಗವತದಲ್ಲಿ ಇವೆರಡೂ ಸರಿ ಎಂದು ಸಮನ್ವಯ ಮಾಡಿದ್ದಾರೆ. ಭಾಗವತ ಹನ್ನೆರಡನೆಯ ಸ್ಕಂದ ಏಳನೆಯ ಅಧ್ಯಾಯದಲ್ಲಿ ಸೂತರು ಹೇಳಿದ್ದಾರೆ.

ಪುರಾಣ ಲಕ್ಷಣಂ ಬ್ರಹ್ಮನ್ ಬ್ರಹ್ಮರ್ಷಿಭಿರ್ನಿರೂಪಿತಂ।
ಶೃಣುಷ್ವ ಬುದ್ಧಿಮಾಶ್ರಿತ್ಯ ವೇದಶಾಸ್ತ್ರಾನುಸಾರತಃ ॥
ಸರ್ಗೋಽಸ್ಯಾಥ ವಿಸರ್ಗಶ್ಚ ವೃತ್ತೀ ರಕ್ಷಾಂತರಾಣಿ ಚ
ವಂಶೋವಂಶಾನುಚರಿತಂ ಸಂಸ್ಥಾ ಹೇತುರಪಾಶ್ರಯಃ ॥
ದಶಭಿರ್ಲಕ್ಷಣೈರ್ಯುಕ್ತಂ ಪುರಾಣಂ ತದ್ವಿದೊ ವಿದುಃ
ಕೇಚಿತ್ ಪಂಚವಿಧಂ ಬ್ರಹ್ಮನ್ ಮಹದಲ್ಪ ವ್ಯವಸ್ಥಯಾ ॥

ಈ ದಶಲಕ್ಷಣಗಳನ್ನೆಲ್ಲ ಇದೇ ಸ್ಕಂದದಲ್ಲಿ ಸೂತರು ವಿವರಿಸಿದ್ದಾರೆ. ಇಲ್ಲಿ ವಿಸ್ತಾರ ಭಯದಿಂದ ಅದೆಲ್ಲದರ ಅನುವಾದವನ್ನು ಕೊಡುವದಿಲ್ಲ. ಆದರೆ ವಿವಕ್ಷಾಭೇದದಿಂದ ಎರಡೂ ಲಕ್ಷಣಗಳೂ ಸರಿ. ಸಂಕ್ಷಿಪ್ತವಾಗಿ ಹೇಳಬೇಕೆಂದರೆ "**ಪುರಾಣಂ ಪಂಚ ಲಕ್ಷಣಂ**". ವಾಸ್ತವಿಕವಾಗಿ ನಿರೂಪಿಸಬೇಕೆಂದು 'ಪುರಾಣಂ ದಶ ಲಕ್ಷಣಮ್' ಹೀಗೆ ದಶಲಕ್ಷಣಾತ್ಮಕವಾದ ಪುರಾಣಗಳಲ್ಲಿ ಧರ್ಮಶಾಸ್ತ್ರ, ಆಚಾರ, ವಿಚಾರ, ವಿಧಿ, ವಿಧಾನ ಮತ್ತು ನಾನಾ ವಿಧವಾದ ಲೋಕ ಚರಿತ ಹಾಗೂ ಮಾನವ ಚರಿತಾದಿಗಳು ಬಂದ ಮಾತ್ರಕ್ಕೆ ಅವು ಪುರಾಣಗಳೇ ಅಲ್ಲ ಎಂದು ಭಾವಿಸಲಿಕ್ಕೆ ಕಾರಣವಿಲ್ಲ. ಎಲ್ಲ ಪುರಾಣಗಳ ಗುರಿ ಧರ್ಮಾಧರ್ಮ ವಿಷಯಗಳನ್ನು ನಿರೂಪಿಸಿ ಮಾನವರಲ್ಲಿ ಹರಿಭಕ್ತಿ ಮತ್ತು ಸತ್ಯನಿಷ್ಠೆಯನ್ನು ಹುಟ್ಟಿಸುವದೇ ಆಗಿದೆ. ಇದಕ್ಕೆ ವಿಪರೀತವಾಗಿ ನಡೆದವರ ಬಾಳಿನ ಭವಣೆಯನ್ನೂ ಭಕ್ತವಿರಕ್ತರಾಗಿ ನಡೆದವರ ಜೀವನ ಸಾರ್ಥಕ್ಯವನ್ನೂ ಅನೇಕ ಸದಸಚ್ಚೇತನಗಳ ದೃಷ್ಟಾಂತದಿಂದ ತೋರಿಸಿ ಎಲ್ಲರನ್ನೂ ಸನ್ಮಾರ್ಗಕ್ಕೆ ಹಚ್ಚುವದಕ್ಕಾಗಿಯೇ ಈ ಪುರಾಣಗಳ ಉತ್ಪತ್ತಿಯಾಗಿರುತ್ತದೆ.

ಪುರಾಣ ಸಾಹಿತ್ಯದ ಈ ಸರ್ವ ಮಾನ್ಯವಾದ ಮಾನದಂಡದಿಂದ ಅಳೆದು ತಿಳಿದು ತೂಗಿ ತಿಕ್ಕಿ ನೋಡಿದಾಗ ಪ್ರಕೃತ ವರಾಹ ಮಹಾ ಪುರಾಣವೂ ಒಂದು ಸಾರ್ಥಕವಾದ ಶುದ್ಧ ಸಾತ್ವಿಕ ಪುರಾಣ ಎಂದು ಸ್ಪಷ್ಟವಾಗಿ ತಿಳಿದು ಬರುವದು. ಶ್ರೀ ವಿಷ್ಣುವಿನ ಮಹಾಮಹಿಮೆಯನ್ನೂ ಸರ್ವೋತ್ತಮತ್ವವನ್ನೂ ಪ್ರತಿಪಾದಿಸುವದೇ ಇದರ ಗುರಿಯಾಗಿದೆ. ಉಪಕ್ರಮ, ಉಪಸಂಹಾರ, ಅಭ್ಯಾಸ, ತಾತ್ಪರ್ಯ, ಮುಂತಾಗಿ ಯಾವ ದೃಷ್ಟಿಯಿಂದ ವಿಚಾರಿಸಿದರೂ ವಿಷ್ಣು ಪಾರಮ್ಯ ಪ್ರತಿಪಾದನೆಯ ಹೊರತು ಬೇರೆ

ಉದ್ದೇಶವು ಈ ಪುರಾಣಕ್ಕೆ ಇಲ್ಲವೆಂಬುವದು ಇದನ್ನು ಪೂರ್ತಿ ಓದಿದಾಗ ತಾನೇ ತಿಳಿದು ಬರುವದು. ಇದರಲ್ಲಿ ತುದಿ ಮೊದಲು ಮತ್ತು ಮಧ್ಯಭಾಗಗಳಲ್ಲಿ ಬರುವ ಬ್ರಹ್ಮ ರುದ್ರಾದಿ ಇತರ ದೇವತೆಗಳ ಚರಿತ್ರೆ ಹಾಗೂ ಪ್ರಭಾವಗಳೆಲ್ಲವೂ ಸಾಕ್ಷಾತ್ ಪರಂಪರಯಾ ವಾ ವಿಷ್ಣುವಿನ ಅಸಾಧಾರಣವಾದ ಮಾಹಾತ್ಮ್ಯ ಮತ್ತು ಸರ್ವೋತ್ತಮತ್ವವನ್ನು ಸಾಧಿಸುವಲ್ಲಿಯೇ ಸಾರ್ಥಕ್ಯವನ್ನು ಕಂಡುಕೊಳ್ಳುತ್ತವೆ.

ವಿಷ್ಣುವಿನ ಉತ್ತಮಿಕೆಯನ್ನು ಹೇಳುವಲ್ಲಿ ಈ ವರಾಹ ಪುರಾಣವು ಉಳಿದ ಪುರಾಣಗಳಿಗಿಂತ ಒಂದು ವಿಶಿಷ್ಟ ರೀತಿಯನ್ನು ಬಳಸಿಕೊಂಡಿದೆ. ಮೊದಲು ಮಹಾದೇವರ ಮಹತ್ವ, ಪ್ರಭಾವ ಹಾಗೂ ನಿರತಿಶಯ ಸಾಮರ್ಥ್ಯವನ್ನು ನಿದರ್ಶಿಸುವ ಕಥೆ ಅಥವಾ ಸನ್ನಿವೇಶವನ್ನು ಹೆಣೆದು ಕೊನೆಗೆ ಆ ಮಹಾದೇವರ ಮುಖದಿಂದಲೇ ವಿಷ್ಣುವಿನ ಆಧಿಕ್ಯವನ್ನು ಹೇಳಿಸುವದು. ಈ ವರಾಹ ಪುರಾಣದ ಅರವತ್ತೇಳನೆಯ ಅಧ್ಯಾಯದಲ್ಲಿ ಅಗಸ್ತ್ಯ ಮುನಿಯು ಕರೆದ ದೇವಸಭೆಯಲ್ಲಿ ಭಗವಾನ್ ಪರಮೇಶ್ವರನು ಸ್ವಯಂ ಉಪಸ್ಥಿತನಾಗಿ ಆ ಎಲ್ಲ ದೇವತೆಗಳ ಹಾಗೂ ಮುನಿಗಳ ಎದುರು ಸಾರುತ್ತಾರೆ.

''ನಾರಾಯಣಃ ಪರೋ ದೇವೋ ಸರ್ವರೂಪೋ ಜನಾರ್ದನಃ
ನ ತಸ್ಮಾತ್ ಪರಮೋ ದೇವೋ ನ ಭೂತೋ ನ ಭವಿಷ್ಯತಿ ॥

ಮಹಾದೇವರು ಹೇಳಿದ ಸ್ತೋತ್ರವು ರುದ್ರಗೀತಾ ಎಂದು ಈ ಪುರಾಣದಲ್ಲಿ ಪ್ರಸಿದ್ಧವಾಗಿದೆ. ಇದು ವಿಷ್ಣು ಪಾರಮ್ಯ ಪ್ರತಿಪಾದಕವಾದ ಪುರಾಣವಾಗಿದ್ದರೂ ಇಲ್ಲಿ ರುದ್ರ ದೇವರ ಗೌರವಕ್ಕೆ ಎಲ್ಲಿಯೂ ಚ್ಯುತಿ ತರುವಂತೆ ಬರೆದಿಲ್ಲ. ಶುದ್ಧ ಸದ್ವೈಷ್ಣವ ಸಂಪ್ರದಾಯದ ತಾರತಮ್ಯ ತತ್ವವನ್ನು ಮೀರಿ ಮರೆತಂತೆ ತೋರಿಸುತ್ತ ಬ್ರಹ್ಮದೇವರೂ ಕೂಡ ಶಿವನಿಗೆ ವಂದಿಸಿದ್ದಾರೆಂದು ಅನೇಕ ಕಡೆಗಳಲ್ಲಿ ಹೇಳಲಾಗಿದೆ. ಎಷ್ಟೋ ಸಂದರ್ಭಗಳಲ್ಲಿ ವಿಷ್ಣು ಕೂಡ ಶಿವನನ್ನು ಸ್ತುತಿಸಿ ಗೌರವಿಸಿದ್ದುಂಟು. ಆದರೂ ಬಹು ಸ್ಥಳದಲ್ಲಿ ನಿರವಕಾಶ ವಾಕ್ಯಗಳಿಂದಲೇ ಹರನ ಬಾಯಿಂದಲೇ ಹರಿಯ ಮಹಿಮೆಯನ್ನು ಹೊಗಳಿಸಿದ್ದರಿಂದ ಅಂಥ ವಾಕ್ಯ ಮರ್ತ್ಯ ಶಿಕ್ಷಣ, ಮೋಹನಾರ್ಥ, ಮುಂತಾದ ಸಮಾಧಾನವನ್ನು ಹೇಳುವದೇ ಯೋಗ್ಯವಾಗಿದೆ. ಆದರೆ ಇಲ್ಲಿಯ ಅನೇಕ ಸುಪ್ರಸಿದ್ಧ ಕ್ಷೇತ್ರಗಳಲ್ಲಿ ಶಿವವಿಷ್ಣು ಇಬ್ಬರೂ ಕೂಡಿಯೇ ಇದ್ದು ಭಕ್ತಾನುಗ್ರಹವನ್ನು ಮಾಡುತ್ತಲಿದ್ದುದನ್ನು ನಾವು ಕಾಣುತ್ತೇವೆ. ಎಷ್ಟೋ ಪ್ರತಿಮೆ, ಲಿಂಗ, ಪ್ರತೀಕಗಳಲ್ಲಿ ಕೂಡ ಹರಿಹರರು ಇಬ್ಬರೂ ಲೋಕ ಶಿಕ್ಷಣಾರ್ಥವಾಗಿ ಒಂದಾಗಿ ಇದ್ದುಕೊಂಡು ಭಕ್ತರನ್ನು ಅನುಗ್ರಹಿಸಲಿಕ್ಕೆ ಉತ್ಸುಕರಾಗಿ ನಿಂತು ಕೊಂಡಿದ್ದಾರೆ. ಇದನ್ನೆಲ್ಲ ನೋಡಲಾಗಿ ಶಿವ, ವಿಷ್ಣು, ಉಪಾಸಕರಲ್ಲಿ ಸೌಹಾರ್ದ ಸಾಮರಸ್ಯವನ್ನು ಸ್ಥಾಪನ ಮಾಡಿ ಸಮಾಜದಲ್ಲಿ ಧಾರ್ಮಿಕ ಶಾಂತಿ, ಆಧ್ಯಾತ್ಮಿಕ ಐಕ್ಯತೆಯನ್ನು ಮೂಡಿಸಿ ಬೆಳಗಿಸುವದೇ ಈ ಪುರಾಣದ ಪ್ರಧಾನ ಉದ್ದೇಶವೆಂದು ಕಂಡು ಬರುತ್ತದೆ. ಆನುಷಂಗಿಕವಾಗಿ ಭಗವತ್ಪ್ರೀತಿಕಾರಕವಾದ ಅನೇಕ ವ್ರತ, ಪೂಜಾ, ಧರ್ಮಕಾರ್ಯ, ಪಾಪಪ್ರಾಯಶ್ಚಿತ್ತ, ಮಾಸಧರ್ಮ, ತೀರ್ಥವಿಧಿ, ಕ್ಷೇತ್ರಯಾತ್ರೆ, ಆಚಾರ ವಿಚಾರ, ವಿಧಿವಿಧಾನಗಳೂ ಕೂಡ ಈ ಪುರಾಣದಲ್ಲಿ ಸುಸಂಬದ್ಧವಾಗಿ ಪ್ರಸಂಗೋಚಿತವಾಗಿ ಪ್ರತಿಪಾದಿಸಲ್ಪಟ್ಟಿವೆ.

ಧರ್ಮಶಾಸ್ತ್ರವಿಷಯಗಳಂತೂ ಈ ಪುರಾಣದ ಬಹುಭಾಗವನ್ನು ವ್ಯಾಪಿಸಿವೆ. ಅನೇಕ ಸ್ಮೃತಿಕಾರರೂ ಸೂತ್ರಕಾರರೂ ಮತಸ್ಥಾಪಕ ಆಚಾರ್ಯರೂ ವರಾಹ ಪುರಾಣದಲ್ಲಿಯ ಪದ್ಯಗಳನ್ನು ತಮ್ಮ ಗ್ರಂಥಗಳಲ್ಲಿ ಉದಾಹರಿಸಿದ್ದಾರೆ. ಮತ್ತು ಇಲ್ಲಿ ನಿರೂಪಿಸಿದ ಸಂಗತಿಗಳನ್ನು ಪ್ರಮಾಣಭೂತ ಪ್ರಮೇಯ ಅಥವಾ ನಿಶ್ಚಿತ ತತ್ವಗಳೆಂದು ಸಾರಿದ್ದಾರೆ. ಈ ವರಾಹ ಮಹಾ ಪುರಾಣವನ್ನು ಉಪಜೀವ್ಯ ಪ್ರಮಾಣವೆಂದು ತಮ್ಮ ಕೃತಿಗಳಲ್ಲಿ ಉದಾಹರಿಸಿದ ಗ್ರಂಥಕಾರರ ಹಾಗೂ ಗ್ರಂಥಗಳ ನಾಮಾವಳಿಯನ್ನು ಇಲ್ಲಿಯೇ ಮುಂದೆ ಕೊಡಲಾಗಿದೆ. ಈ ವರಾಹ ಪುರಾಣದ ವಿಷಯ ಸೂಚಿಯನ್ನು ನಾರದೀಯ ಪುರಾಣದಲ್ಲಿ ಹೀಗೆ ವಿವರಿಸಲಾಗಿದೆ.

''ಶೃಣು ವತ್ಸ ಪ್ರವಕ್ಷ್ಯಾಮಿ ವಾರಾಹಂ ವೈ ಪುರಾಣಕಂ
ಭಾಗದ್ವಯಯುತಂ ಶಶ್ವದ್ವಿಷ್ಣು ಮಾಹಾತ್ಮ್ಯ ಸೂಚಕಮ್

............................................................

ತತ್ರಾದೌ ಶಂಭು ಸಂವಾದಃ ಸ್ಮೃತೋ ಭೂಮಿ ವರಾಹಯೋಃ
ಅಥಾದಿಕೃತವೃತ್ತಾಂತೋ ರೈಭ್ಯಸ್ಯ ಚರಿತಂ ತತಃ ।

ದುರ್ಜಯಾಯ ಚ ತತ್ಪಶ್ಚಾತ್ ಶ್ರಾದ್ಧಕಲ್ಪ ಉದೀರಿತಃ ॥
ಮಹಾತಪಸ ಆಖ್ಯಾನಂ ಗೌರ್ಯುತ್ಪತ್ತಿಸ್ತತಃ ಪರಂ ॥

ವಿನಾಯಕಸ್ಯ ನಾಗಾನಾಂ ಸೇನಾನ್ಯಾದಿತ್ಯಯೋರಪಿ
ಗಣಾನಾಂ ಚ ತಥಾ ದೇವ್ಯಾ ಧನದಸ್ಯ ವೃಷಸ್ಯ ಚ ॥

ಆಖ್ಯಾನಂ ಸತ್ಯತಪಸೋ ವ್ರತಾಖ್ಯಾನ-ಸಮನ್ವಿತಮ್
ಅಗಸ್ತ್ಯಾಂಗಿರಸಃ ಪಶ್ಚಾದ್ ರುದ್ರಗೀತಾ ಪ್ರಕೀರ್ತಿತಾ ॥
ಮಹಿಷಾಸುರ ವಿಧ್ವಂಸೋ ಮಾಹಾತ್ಮ್ಯಂ ಚ ತ್ರಿಶಕ್ತಿಜಂ ॥

ಪರ್ವಾಧ್ಯಾಸಸ್ತತಃ ಶ್ವೇತೋಪಾಖ್ಯಾನಂ ಗೋಪ್ರದಾನಿಕಂ
ಇತ್ಯಾದಿ ಕೃತವೃತ್ತಾಂತಂ ಪ್ರಥಮೋದ್ದೇಶನಾಮಕಮ್

''ಭೂದೇವಿ ಮತ್ತು ವರಾಹದೇವರ ಸಂಭಾಷಣೆಯಿಂದ ಈ ಪುರಾಣವು ಪ್ರಾರಂಭ ವಾಗುತ್ತಿದೆ. ಪ್ರಾರಂಭದಲ್ಲಿ ಹರಿಹರ ಬ್ರಹ್ಮಾದಿ ತ್ರಿಮೂರ್ತಿಗಳ ಏಕಾಧಿಷ್ಠಾನ ರೂಪವಾದ ಸಾಮರಸ್ಯವನ್ನು ಹೇಳಲಾಗಿದೆ. ಅನಂತರ ಆದಿ ಸೃಷ್ಟಿಯ ವೃತ್ತಾಂತ, ರೈಭ್ಯನ ಚರಿತ್ರ, ದುರ್ಜಯನಿಗೆ ಶ್ರಾದ್ಧ ಕಲ್ಪನಿರೂಪಣೆ, ಮಹಾತಪಸನ ಕತೆ, ಗೌರಿಯ ಉತ್ಪತ್ತಿ, ಗಣಪತಿ, ನಾಗ, ಸ್ಕಂದ, ಆದಿತ್ಯ, ಗುಣಗಳು, ದುರ್ಗಾದೇವಿ, ಕುಬೇರ, ಧರ್ಮ ಮುಂತಾದವುಗಳ ಉತ್ಪತ್ತಿಯ ಕಥನ, ಸತ್ಯ ತಪನ ಆಖ್ಯಾನ, ಅಗಸ್ತ್ಯ ಮತ್ತು ಅಂಗಿರಸರ ಆಖ್ಯಾನ, ರುದ್ರಗೀತಾ, ಮಹಿಷಾಸುರ ಸಂಹಾರದಲ್ಲಿ ಮೂರು ಶಕ್ತಿಯ ಮಾಹಾತ್ಮ್ಯ, ಶ್ವೇತೋಪಾಖ್ಯಾನ, ಪರ್ವಾಧ್ಯಾಸ, ಬೇರೆ ಬೇರೆ ಗೋವುಗಳ ದಾನ, ಮುಂತಾದ ಅನೇಕ ವಿಷಯಗಳನ್ನು ಹೇಳಿರುವ ಈ ಮೊದಲನೇ ವಿಭಾಗಕ್ಕೆ ಪ್ರಥಮೋದ್ದೇಶ ಎಂದು ಹೆಸರು.

ಎರಡನೇ ವಿಭಾಗಕ್ಕೆ ಭಗವದ್ಧರ್ಮ ಎಂದು ಹೆಸರು. ಇದರಲ್ಲಿ ಮುಖ್ಯವಾಗಿ ಭಾಗವತ ಧರ್ಮಗಳು ನಿರೂಪಿಸಲ್ಪಟ್ಟಿವೆ. ಅನಂತರ ವ್ರತ, ತೀರ್ಥ ಇವುಗಳಿಗೆ ಸಂಬಂಧಿಸಿದ ಆಖ್ಯಾನಗಳು, ಮೂವತ್ತೆರಡು ಅಪರಾಧಗಳಿಗೆ ಪ್ರಾಯಶ್ಚಿತ್ತ, ಎಲ್ಲ ತೀರ್ಥಗಳ ಬೇರೆ ಬೇರೆಯಾದ ಮಹಾತ್ಮ್ಯ ಮೊದಲಾದವುಗಳು ಇರುತ್ತವೆ. ಮಧುರಾ ಮಂಡಲ ಮಹಿಮೆಯು, ಅಲ್ಲಿ ಶ್ರಾದ್ಧ ಮಾಡುವ ವಿಧಿ ಅದರ ಫಲ ಮುಂತಾದವುಗಳು ಮಧುರಾ ಮಂಡಲವೆಂಬ ಭಾಗದಲ್ಲಿ ವಿವರಿಸಲ್ಪಟ್ಟಿವೆ.

ಕರ್ಮ ವಿಪಾಕವೆಂಬ ಭಾಗದಲ್ಲಿ ನಚಿಕೇತನ ಕಥೆಯ ಪ್ರಸಂಗದಿಂದ ಯಮಲೋಕದ ವರ್ಣನೆ ಶುಭಾಶುಭ ಕರ್ಮಗಳ ಫಲ ಪರಿಣಾಮಗಳು ಮತ್ತು ವಿಷ್ಣುವ್ರತದ ನಿರೂಪಣೆ ಬಂದಿದೆ. ಕೊನೆಯ ಭಾಗದಲ್ಲಿ ಪಾಪನಾಶಕವಾದ ಗೋಕರ್ಣ ಕ್ಷೇತ್ರದ ಮಹಿಮೆಯು ಬಿತ್ತರಿಸಲ್ಪಟ್ಟಿದೆ ಇದೆಲ್ಲವೂ ಪೂರ್ವಭಾಗವೆಂದು ಕರೆಯಲ್ಪಡುತ್ತದೆ. ಇದರ ಉತ್ತರ ಭಾಗದಲ್ಲಿ ಪುಲಸ್ತ್ಯಋಷಿ ಹಾಗೂ ಕುರುರಾಜರ ಸಂಭಾಷಣೆಯ ಪ್ರಸಂಗದಲ್ಲಿ ಎಲ್ಲ ತೀರ್ಥಗಳ ಮಹಿಮೆಯೂ ಪ್ರತ್ಯೇಕವಾಗಿಯೇ ವಿಸ್ತಾರ ಪೂರ್ವಕವಾಗಿ ಬಂದಿರುತ್ತದೆ ಎಲ್ಲ ಧರ್ಮಗಳೂ, ಪುಷ್ಕರ ಕ್ಷೇತ್ರದ ಪುಣ್ಯ ಪರ್ವ ಪ್ರಸಂಗವೂ ಈ ವರಾಹ ಪುರಾಣದ ಉತ್ತರಾರ್ಧದಲ್ಲಿ ಹೇಳಲ್ಪಟ್ಟಿರುತ್ತದೆ. ಈ ವರಾಹ ಪುರಾಣದ ವಿಷಯ ವಿನ್ಯಾಸದ ಬಗೆಯನ್ನು ಅರಿತವರ ಎಲ್ಲ ಪಾಪಗಳೂ ಕಳೆದು ಹೋಗುತ್ತವೆ. ಎಂದು ಉಪಸಂಹರಿಸಲಾಗಿದೆ. ಈಗಿನ ವರಾಹ ಪುರಾಣದ ೨೧೮ನೇ ಅಧ್ಯಾಯದಲ್ಲಿ ಇದರ ಉತ್ತರ ಭಾಗದ ಉಲ್ಲೇಖವಿದ್ದುದು ಕಂಡು ಬರುತ್ತದೆ. ಸನತ್ಕುಮಾರನ ಪ್ರಶ್ನೆಗೆ ಉತ್ತರ ರೂಪವಾಗಿ ಬ್ರಹ್ಮದೇವರು ತನ್ನ ಮಾನಸ ಪುತ್ರನಾದ ಪುಲಸ್ತ್ಯ ಮುನಿಯು ಸರ್ವತೀರ್ಥ ಕ್ಷೇತ್ರಗಳ ಮಹಿಮೆಯನ್ನು ಕುರುರಾಜನಿಗೆ ನಿವೇದಿಸಲಿರುವನೆಂದು ಸೂಚಿಸುತ್ತಾರೆ. ಆದರೆ ಆ ಭಾಗವು ಇಂದು ಎಲ್ಲಿಯೂ ಉಪಲಬ್ಧವಾಗದಿದ್ದುದು ಆಸ್ತಿಕರ ದುರ್ದೈವವಾಗಿದೆ. ಭೂದೇವಿ ಮತ್ತು ವರಾಹ ದೇವರ ಸಂಭಾಷಣಾತ್ಮಕ ವಾಗಿರುವ ಈ ವೇದ ವ್ಯಾಸರಚಿತ ಪುರಾಣವನ್ನು ಸೂತರು ಶೌನಕರಿಗೆ ನಿರೂಪಿಸಿದ್ದಾರೆ. ಇದರಲ್ಲಿ ಪ್ರಥಮ ಭಾಗವು ಒಂದು ಸ್ವತಂತ್ರ ಭಾಗವಾಗಿ ಇಲ್ಲಿ ಮುಕ್ತಾಯಗೊಂಡಂತೆ ಕಾಣುತ್ತದೆ. ವರಾಹ ದೇವರು ಭೂದೇವಿಗೆ ''ಈ ವರೆಗೆ ನಿನಗೆ ನಾನು ವಾರಾಹ ಸಂಹಿತೆಯನ್ನು ವಿವರಿಸಿದೆ'' ಎಂದು ಹೇಳಿ ಇದರ ಅತಿಗತಿಕ್ರಮವನ್ನು ಹೀಗೆ ತಿಳಿಸುತ್ತಾರೆ.

| | | |
|---|---|---|
| ವರಾಹ | ಮೂಲರೂಪಿ ವಿಷ್ಣು | ಮೂಲವಿಷ್ಣು |
| ಬ್ರಹ್ಮ | ವರಾಹ | ವೇದವ್ಯಾಸ |
| ಪುಲಸ್ತ್ಯ | ಭೂದೇವಿ | ರೋಮಹರ್ಷಣ |
| ಪರಶುರಾಮ | | ಸೂತ |
| ಉಗ್ರ | | ಶೌನಕ |
| ಮನುಮಹಾರಾಜ | | |
| ಮಾನವರು | | |

ಎರಡನೆಯ ಭಾಗ ಭಗವದ್ಧರ್ಮ ಎಂಬುದು ಪ್ರಾರಂಭವಾಗುವದು. ಅದನ್ನು ವರಾಹದೇವರು ಭೂದೇವಿಗೂ ಭೂದೇವಿಯು ಸನತ್ಕುಮಾರರಿಗೂ ಅವರು ವ್ಯಾಸರಿಗೂ, ವ್ಯಾಸರೂ ಸೂತರಿಗೆ, ಸೂತರು ಶೌನಕಾದಿಗಳಿಗೆ ನಿರೂಪಿಸುತ್ತ ಹೋಗಿರುತ್ತಾರೆ. ಇವುಗಳಲ್ಲಿ ೧-೧೧೨ನೇ ಅಧ್ಯಾಯದ ವರೆಗಿನ ಪ್ರಥಮ ಭಾಗದಲ್ಲಿ ೪ ನೇ ಅಧ್ಯಾಯದ ೧೭ ರಿಂದ ೨೨ರ ವರೆಗಿನ ಪದ್ಯಗಳಲ್ಲಿಯೂ ೫೫ನೇ ಅಧ್ಯಾಯದ ೩೫-೩೬-೩೭ನೇ ಶ್ಲೋಕಗಳಲ್ಲಿಯೂ ವಿಷ್ಣುವಿನ ದಶಾವತಾರ ಬಣ್ಣನೆಯಿದೆ.

ಈ ಪುರಾಣದ ಕರ್ಮವಿಪಾಕ ಎಂಬ ಭಾಗವು ೧೯೩ನೇ ಅಧ್ಯಾಯದಿಂದ ಪ್ರಾರಂಭವಾಗಿ ೨೧೨ನೇ ಅಧ್ಯಾಯದವರೆಗೆ ವಿಸ್ತರಿಸಿದೆ. ಈ ವಿಭಾಗವು ಇದೇ ಪುರಾಣದ ಆದಿ ಭಾಗದಂತೆ ಭೂದೇವಿ ಮತ್ತು ವರಾಹ ದೇವರ ಸಂಭಾಷಣಾರೂಪವಾಗಿಲ್ಲ. ಜನಮೇಜಯ ವೈಶಂಪಾಯನರ ಸಂಭಾಷಣೆಯೊಂದಿಗೆ ಸುರುವಾಗುತ್ತದೆ. ಉದ್ದಾಲಕ ಮುನಿಯ ಮಗನಾದ ನಚಿಕೇತನು ಯಮಪಟ್ಟಣಕ್ಕೆ ಹೋಗಿ ಬಂದು ಆ ನರಕಲೋಕದ ತನ್ನ ಅನುಭವವನ್ನು ಇದರಲ್ಲಿ ಬಿತ್ತರಿಸುತ್ತಾನೆ. ಇದನ್ನು ವರಾಹ ಪುರಾಣದಲ್ಲಿ ೨೧೨ನೇ ಅಧ್ಯಾಯದಲ್ಲಿ **'ಧರ್ಮಸಂಹಿತಾ'** ಎಂದು ಕರೆದಿದ್ದಾರೆ. ನಚಿಕೇತನ ಅನುಭವ ನಿರೂಪಣೆಯು ನಿಜವಾಗಿಯೂ ರೋಮಾಂಚಕಾರಿಯಾಗಿದ್ದು ಪಾಪಕೃತ್ಯಗಳಿಂದ ಜನರನ್ನು ಪರಿವರ್ತನೆ ಮಾಡಲು ಸಮರ್ಥವಾಗಿದೆ.

ಕೊನೆಯ ವಿಭಾಗವು ಬ್ರಹ್ಮ ಮತ್ತು ಸನತ್‌ಕುಮಾರ ಸಂಭಾಷಣಾರೂಪವಾಗಿದ್ದು ಶಿವಕ್ಷೇತ್ರ ನಿರೂಪಕವಾಗಿರುತ್ತದೆ. ಇದೊಂದು ಸ್ಪಷ್ಟವಾಗಿಯೇ ಶಿವಪಾರಮ್ಯಪರವಾಗಿದ್ದು ಯಾರೋ ನೇಪಾಳ ನಿವಾಸಿಯೂ ಅನಂತರ ಇದನ್ನು ಈ ವೈಷ್ಣವ ಪುರಾಣದಲ್ಲಿ ಸೇರಿಸಬೇಕೆಂದು ಹಜರಾರವರು ನಿರ್ಧರಿಸಿದ್ದಾರೆ.

This Section was added must Probably by an inhabitant of Nepal who wanted to Glorilying Uttara Gokarna in Nepal over Daksina Gokarna ಆದುದರಿಂದಲೇ ಯಾವ ನಿಬಂಧಕಾರರೂ ಈ ಭಾಗದಲ್ಲಿಯ ಒಂದು ಪದ್ಯವನ್ನೂ ತಮ್ಮ ಗ್ರಂಥದಲ್ಲಿ ಉದಾಹರಿಸಿಲ್ಲ. ವರಾಹ ಪುರಾಣದಲ್ಲಿ ಈ ಭಾಗದ ಸೇರ್ಪಡೆಯು ಕ್ರಿಸ್ತಶಕದ ೧೧ನೇ ಶತಕದಲ್ಲಿ ನಡೆದಿರಬಹುದೆಂದು ತರ್ಕಿಸಲಾಗಿದೆ.

**ಈ ಪುರಾಣದ ಭಾಷಾ ಶೈಲಿ**

ಈ ಪುರಾಣದ ಶೈಲಿಯು ಭಾಗವತದಷ್ಟು ಗಾಂಭೀರ್ಯ ಸೌಂದರ್ಯಗಳಿಂದ ರಸರಮಣೀಯವಾಗಿ ತೋರುವದಿಲ್ಲ. ವಿಷ್ಣುಪುರಾಣದ ಪ್ರವಾಹಿ ಶೈಲಿ ಪ್ರಸಾದ ಗುಣಗಳೂ ಇಲ್ಲಿ ಕಂಡು ಬರುವದಿಲ್ಲ. ಆದರೆ ದೇವೀಭಾಗವತ, ಶಿವಪುರಾಣ, ಸ್ಕಂದ ಪುರಾಣಗಳಿಗಿಂತ ಇಲ್ಲಿಯ ಬಂಧದಲ್ಲಿ ಬಿಗುವಿದೆ. ಭಾಷೆಯಲ್ಲಿ ಸೊಬಗಿದೆ. ಕಥಾ ರಚನೆಯಲ್ಲಿ ಮಾತ್ರ ಅಲ್ಲಲ್ಲಿ ಶಿಥಿಲತೆ ಪ್ರದೀರ್ಘತೆಗಳು ಕಂಡು ಬಂದರೂ ಅಸಂಬದ್ಧತೆಗೆ ಎಲ್ಲಿಯೂ ಅವಕಾಶವಿಲ್ಲ ಇಲ್ಲಿ ಅಲ್ಲಲ್ಲಿ ಹಣಿಕಿ ಹಾಕುವ ಪುನರುಕ್ತತೆ ಬೇಸರ ತರಿಸುತ್ತಿದ್ದರೂ ಪರಿಣಾಮದ ದಾರ್ಢ್ಯದ ದೃಷ್ಟಿಯಿಂದಲೂ ಅಧಿಕಾರಿ ಭೇದದಿಂದಲೂ ಅವೆಲ್ಲವೂ ಸಹ್ಯವಾಗಿವೆ. ಈ ಪುರಾಣದಲ್ಲಿ ಅಲ್ಲಲ್ಲಿ ಮಿಂಚುವ

ಮಾರ್ಮಿಕ ಮಾತುಗಳೂ ನೀತಿ ಸುಭಾಷಿತಗಳೂ, ಗಂಭೀರ ವಿಷಯಗಳೂ, ಸೂಕ್ಷ್ಮ ಪ್ರಮೇಯಗಳೂ ಶ್ರೀ ವೇದವ್ಯಾಸ ಕೃತತ್ವವನ್ನು ಇದಕ್ಕೆ ಸ್ಪಷ್ಟವಾಗಿ ಸಾರುತ್ತವೆ.

ಈ ಪುರಾಣ ಪ್ರಾರಂಭದಲ್ಲಿಯೇ ಬರುವ ವರಾಹ ದೇವರ

**"ನಮಸ್ತಸ್ಮೈ ವರಾಹಾಯ ಲೀಲಯೋದ್ಧರತೇ ಮಹೀಮ್**
**ಖುರಮಧ್ಯಗತೋ ಯಸ್ಯ ಮೇರುಃ ಖಣಖಣಾಯತೇ ॥**

ವಂದನಾರೂಪವಾದ ಈ ಪದ್ಯವು ಈ ಪುರಾಣ ಕರ್ತನ ಕಲ್ಪನಾ ಶಕ್ತಿ ಹಾಗೂ ಕಾವ್ಯ ಪ್ರತಿಭೆಗಳಿಗೆ ಸಾಕ್ಷಿಯಾಗಿದೆ. ಈ ಪುರಾಣಕಾರರ ಓಜೋಗುಣಭೂಯಿಷ್ಠವಾದ ಪ್ರೌಢಪದಬಂಧ, ಭಾವ ಪರಿಪುಷ್ಟಿ, ಕಲ್ಪನಾನಾವೀನ್ಯ, ಅರ್ಥ ವೈಚಿತ್ರ್ಯಗಳಿಗಾಗಿ ಇನ್ನೊಂದು ಪದ್ಯವನ್ನು ಇಲ್ಲಿ ಉದಾಹರಿಸಬಹುದು.

**"ದಂಷ್ಟ್ರಾಗ್ರೇಣೋದ್ಧೃತಾ ಗೌರುದಧಿ ಪರಿವೃತಾ ಪರ್ವತೈರ್ನಿಮ್ನಗಾಭಿಃ ।**
**ಸಾಕಂ ಮೃತ್ಪಿಂಡವತ್ಸಾ ಬೃಹದುರು ವಪುಷಾऽನಂತರೂಪೇಣ ಯೇನ ॥**
**ಸೋಽಯಂ ಕಂಸಾಸುರಾರಿರ್ಮುರನರಕದಶಾಸ್ಯಾಂತಕೃತ್ ಸರ್ವಸಂಸ್ಥಃ**
**ಕೃಷ್ಣೋ ವಿಷ್ಣುಃ ಸುರೇಶೋ ನುದತು ಮಮರಿಪೂನಾದಿದೇವೋ ವರಾಹಃ ॥**

ಆದರೆ ಎಲ್ಲ ಕಡೆಗೂ ಇಂಥ ಕಾವ್ಯಮಯವಾದ ಕಮನೀಯ ರಸರಮಣೀಯ ಶೈಲಿಯನ್ನು ಈ ಪುರಾಣದಲ್ಲಿ ಬಳಸಲಾಗಿಲ್ಲ. ಲೋಕ ಶಿಕ್ಷಣ ಹಾಗೂ ಜನ ಜೀವನದ ಸಮ್ಯಕ್ ಸಂಸ್ಕರಣವೇ ಈ ಪುರಾಣದ ಪ್ರಧಾನ ಉದ್ದೇಶವಾದುದರಿಂದ ಇದರಲ್ಲಿ ಪ್ರಾಯಃ ಮೊದಲಿನಿಂದ ತುದಿಯವರೆಗೆ ಸರಳ ಭಾಷೆಯನ್ನೇ ಉಪಯೋಗಿಸಲಾಗಿದೆ. ಜನತಾ ಬೋಧೋದ್ದೇಶವುಳ್ಳ ಈ ವರಾಹ ಪುರಾಣದ ವಚನವಾಗ್ಗುಂಫನದಲ್ಲಿ ಪ್ರವಾಹವಿದ್ದರೂ ಪ್ರಸಾದವಿಲ್ಲ. ವೈಖರಿಯಿದ್ದರೂ ಮಾಧುರಿ ಇಲ್ಲ. ಸತ್ಯವಿದ್ದರೂ (ಕಾವ್ಯದ ಸೌಂದರ್ಯವಿಲ್ಲ, ಸಾಹಿತ್ಯವಿದ್ದರೂ ಲಾಲಿತ್ಯವಿಲ್ಲ. ಓಂಕಾರವಿದ್ದರೂ ಶಾಬ್ದಿಕಟಂಕಾರವಿಲ್ಲ. ಆದರೆ ಸರಳ ಶಬ್ದದಲ್ಲಿಯೇ ತಿರಳನ್ನು ಅರಳಿಸಿಡುವ ಚಾತುರ್ಯವು ಇಲ್ಲಿ ಪದೇ ಪದೇ ಗೋಚರವಾಗುತ್ತದೆ. ನಿರ್ದುಷ್ಟ ತತ್ವಾರ್ಥಗಳನ್ನು ತಿಳಿಸಿ ಹೇಳುವ ನಿರ್ದಿಷ್ಟ ಶೈಲಿಯ ಕಾವು ಕೆಚ್ಚುಗಳು ಇಲ್ಲಿಯ ಪದ್ಯಗಳಲ್ಲಿ ಎದ್ದು ತೋರುತ್ತವೆ. ಈ ಪುರಾಣದಲ್ಲಿಯ ಕತೆ ಉಪಕತೆ, ಆಖ್ಯಾನ ಉಪಾಖ್ಯಾನಗಳ ಕಟ್ಟು ಕಟ್ಟಣೆಯಲ್ಲಿ ಭಾಗವತ ವಿಷ್ಣು ಪುರಾಣಗಳಲ್ಲಿದ್ದಂತೆ ತಾಂತ್ರಿಕತೆ, ವಿಚ್ಛಿತ್ತಿ, ಪರಿಚ್ಛಿತ್ತಿ, ರಸಪೋಷಣೆ, ಪಾತ್ರಚಿತ್ರಣೆ, ಸನ್ನಿವೇಶ ನಿರೂಪಣೆಗಳು ಮಾರ್ಮಿಕವಾಗಿ ಮೂಡಿ ಬರುವದಿಲ್ಲ. ಆದರೂ ಪದ್ಮ, ಬ್ರಹ್ಮ, ಭಾರತಾದಿಗಳಂತೆ ಉಪಾಖ್ಯಾನಗಳ ಮೂಲಕ ವಿಶಿಷ್ಟ ಧರ್ಮ ಸಂಸ್ಕೃತಿಗಳ ತಿರುಳನ್ನು ತಿಳಿಸಿ, ನೀತಿಯ ಮೌಲ್ಯವನ್ನು ಜಗತ್ತಿಗೆಲ್ಲ ಜ್ಞಾಪಿಸಿಕೊಡುವ ಮಹತ್ತರ ಕಾರ್ಯವನ್ನು ಈ ಪುರಾಣವು ಯಶಸ್ವಿಯಾಗಿ ನೆರವೇರಿಸಿದೆ. ಇದರಲ್ಲಿಯ ನೇರ ನಿರೂಪಣೆ, ನಿರಾಡಂಬರ ನುಡಿಗಳಿಂದ ಕೇಳುಗರಲ್ಲಿ ಸ್ವಕರ್ಮದ ಇತಿಕರ್ತವ್ಯತೆಯ ಅರಿವು ಮೂಡಲು ಅನುಕೂಲವಾಗಿದೆ. ಮತ್ತು ಇಲ್ಲಿಯ ಖಚಿತಮಾತುಗಳಿಂದ ಶ್ರಾವಕರಲ್ಲಿ ಶ್ರದ್ಧೆ ಮೂಡಿ ಧಾರ್ಮಿಕ ಪ್ರಜ್ಞೆಯು ತಕ್ಷಣದಲ್ಲಿಯೇ ಜಾಗೃತವಾಗುತ್ತದೆ.

**ಸ್ತೋತ್ರ - ಸುಭಾಷಿತ**

ಇದರಲ್ಲಿ ಅಲ್ಲಲ್ಲಿ ಬರುವ ದೇವತಾ ಸ್ತುತಿಗಳಿಂದ ದೈವಭಕ್ತಿಯ ವಿಕಾಸವು ತನ್ನಿಂದ ತಾನೇ ಆಗುತ್ತದೆ. ಇಲ್ಲಿ ಬರುವ ದೇವತಾಸ್ತೋತ್ರಗಳೆಲ್ಲವೂ ಪ್ರಾಯಃ ದೇವಾಧಿ ದೇವತೆಗಳಿಂದಲೇ ಪ್ರೋಕ್ತವಾದುದರಿಂದ ಅವು ವೇದ ಮಂತ್ರಗಳಂತೆ ವೀರ್ಯವತ್ತಾಗಿ ಮಹಾಫಲಪ್ರದಗಳಾಗಿವೆ. ಅವುಗಳ ಪಠಣ ಪಾರಾಯಣಗಳಿಂದ ಅನೇಕರು ಅಭೀಷ್ಟ ಫಲಪ್ರಯೋಜನಗಳನ್ನು ಪಡೆದಿದ್ದಾರೆ. ಅದಕ್ಕಾಗಿ ಅನುಸಂಧಾನಕ್ಕೆ ಅನುಕೂಲವಾಗಲಿ ಎಂದು ಇಲ್ಲಿ ಆ ಮೂಲ ಪದ್ಯಗಳನ್ನು ಕೊಟ್ಟು ಅವುಗಳ ಅಡಿಯಲ್ಲಿಯೇ ಅವುಗಳ ಕನ್ನಡ ಅರ್ಥವನ್ನೂ ಕೊಡಲಾಗಿದೆ. ಬೇರೆ ಬೇರೆ ಪ್ರಸಂಗಗಳಲ್ಲಿ, ಬರಹ, ಭಾಷಣ, ಸಂಭಾಷಣೆ ಮುಂತಾದ ಅಗತ್ಯದ ಸನ್ನಿವೇಶಗಳಲ್ಲಿ ಉಪಯುಕ್ತವಾಗಬಹುದೆನಿಸಿದೆ ಸುಭಾಷಿತ ಮಾದರಿಯ ಸಂಸ್ಕೃತ ಮೂಲ ಶ್ಲೋಕಗಳನ್ನೂ ಅರ್ಥ ವಿವರಣೆಯೊಂದಿಗೆ ಇಲ್ಲಿ ಅಲ್ಲಲ್ಲಿ ಕೊಡಲಾಗಿದೆ. ಲೋಕಾನುಭವದ ಸಾರವೆಲ್ಲವೂ ಮೂರ್ತೀಭವಿಸಿ ದಂತಿರುವ ಅನೇಕಾನೇಕ ಪದ್ಯಗಳು ಈ ಪುರಾಣದಲ್ಲಿ ಹೇರವಾಗಿ ದೊರಕುತ್ತವೆ. ಈ ಪುರಾಣ ಪ್ರವಚನಕಾರರಿಗೆ ಏಕರಾಷ್ಟ್ರೀಯತ್ವದ ಕಲ್ಪನೆ ಮತ್ತು ವಸುಧೈಕ ಕುಟುಂಬತ್ವದ ಭಾವನೆಯನ್ನು ಓದುಗರಲ್ಲಿ ಉಂಟು ಮಾಡಬೇಕೆಂದು ಉತ್ಕಟೇಚ್ಛೆ ಇದ್ದಿತೆಂಬುದು ಅನೇಕ ಸಂದರ್ಭಗಳಲ್ಲಿ ವ್ಯಕ್ತವಾಗಿದೆ. ಇತರ ಪುರಾಣಗಳಲ್ಲಿ ಕಾಣಸಿಗದ ಒಕ್ಕಲು ಮಕ್ಕಳ ಮೇಲೆ ಈ ಪುರಾಣಕಾರರಿಗೆ ಪ್ರೇಮಳ ದೃಷ್ಟಿ, ಮತ್ತು ಪೂರ್ಣ ಸಹಾನುಭೂತಿ ಇದ್ದಿತೆಂಬುದು ಇಂದಿನ ಕೃಷಿ ಪ್ರಧಾನ ಪ್ರಪಂಚಕ್ಕೆ ಅಚ್ಚರಿಯ ಮಾತಾಗಿದೆ. ೧೮೨ನೇ ಅಧ್ಯಾಯದಲ್ಲಿ ಶಿಲಾಮಯವಾದ ದೇವತಾಮೂರ್ತಿಯ ಪ್ರತಿಷ್ಠೆಯ ಕಾಲದಲ್ಲಿ ಹೇಳಬೇಕಾದ ಪ್ರಾರ್ಥನಾ ಮಂತ್ರವನ್ನು ಆಲಿಸಿರಿ.

"ರಾಜ್ಞಃ ಸರಾಷ್ಟ್ರಸ್ಯ ಚ ಬ್ರಾಹ್ಮಣಾನಾಂ
ಬಾಲೇಷು ವೃದ್ಧೇಷು ಗವಾಂ ಗಣೇಷು ॥

ಕನ್ಯಾಸು ಶಾಂತಿಂ ಚ ಪತಿವ್ರತಾಸು
ರೋಗಾ ವಿನಶ್ಯಂತು ಚ ಸರ್ವತಶ್ಚ ॥

ಕೃಷೀವಲಾನಾಂ ಚ ಕೃಷಿಃ ಸದಾ ಸ್ಯಾತ್
ಸುಭಿಕ್ಷಯುಕ್ತಾಶ್ಚ ಸದಾ ಹಿ ಲೋಕಾಃ

ಇಲ್ಲಿ ಮೊದಲಿನ ಪದ್ಯದಲ್ಲಿ ರಾಜನಿಗೂ ರಾಷ್ಟ್ರಕ್ಕೂ ಬ್ರಾಹ್ಮಣರಿಗೂ ಆಬಾಲವೃದ್ಧರಿಗೂ ಕ್ಷೇಮಾಂಶಸನೆಯನ್ನು ಮಾಡಿ ಕನ್ನೆಯರೂ ಸತಿಯರೂ ನಿರೋಗಿಗಳಾಗಿರಲಿ ಎಂದು ಹಾರೈಸಲಾಗಿದೆ. ಕೊನೆಗೆ ರಾಷ್ಟ್ರದ ಕ್ಷೇಮಾರೋಗ್ಯಕ್ಕೆ ಮುಖ್ಯವಾದ ಬೇಸಾಯ ಹಾಗೂ ಕೃಷಿಕರಿಗೆ ಸಂತಸವುಂಟಾಗಲಿ, ಸುಭಿಕ್ಷೆಯಿಂದ ಲೋಕಕ್ಕೆ ಶಾಂತಿ ತುಷ್ಟಿಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸಲಾಗಿದೆ. ವರಾಹ ಪುರಾಣದ ಪ್ರವರ್ತಕವಾದ ದೇವತಾ ದೃಷ್ಟಿಗೆ ಬ್ರಾಹ್ಮಣನೆಂದು ಪಕ್ಷಪಾತವಿಲ್ಲ. ಚಂಡಾಲನೆಂದು ಅಸಡ್ಡೆ ಇಲ್ಲ. ಶೂದ್ರನೆಂದು ಉದಾಸೀನತೆ ಇಲ್ಲ. ಸರ್ವವರ್ಣದವರ

ಉದ್ಧಾರಕ್ಕೂ ಈ ಪುರಾಣ ದಾರಿ ದೀಪವಾಗಿ ಬೆಳಕನ್ನು ಬೀರುತ್ತದೆ. ಈ ಪುರಾಣಕಾರರಿಗೆ ಶೂದ್ರಾದಿಗಳ ವಿಷಯದಲ್ಲಿ ಹೆಚ್ಚಿನ ಪಕ್ಷಪಾತವಿದೆ ಎಂಬಂತೆ ಕಂಡು ಬರುವದು. ಈ ಪುರಾಣದ ಒಂದು ನೂರಾಹದಿನೈದನೆಯ ಅಧ್ಯಾಯದಲ್ಲಿ ಭಗವಂತನು ಸ್ಪಷ್ಟವಾಗಿಯೇ

"ತ್ಯಕ್ತ್ವಾ ಋಷಿ ಸಹಸ್ರಾಣಿ ಶೂದ್ರಮೇವ ಭಜಾಮ್ಯಹಮ್"

ಯೋಗ್ಯನಾದ ಓರ್ವ ಶೂದ್ರನಿದ್ದರೆ ನಾನು ಸಾವಿರ ಋಷಿ ಮುನಿಗಳನ್ನು ತೊರೆದು ಆ ಸಚ್ಛೂದ್ರನಿದ್ದಲ್ಲಿಗೆ ಹೋಗುತ್ತೇನೆ" ಎಂದು ಖಡಾಖಂಡಿತವಾಗಿ ಹೇಳಿದ್ದಾನೆ. ಶೂದ್ರ ಮತ್ತು ವರ್ಣಬಾಹ್ಯರಾದ ಅಂತ್ಯ ಜಾದಿಗಳಿಗೆ ಯಾವದೇ ವಿಧಿ ನಿಷೇಧ, ಕರ್ತವ್ಯಕರ್ಮ, ಅನುಷ್ಠೇಯ ಧರ್ಮ ಯಾವದೂ ಇಲ್ಲ ಎಂದು ಕೆಲವು ಧರ್ಮ ಶಾಸ್ತ್ರ ಸ್ಮೃತಿ ಗ್ರಂಥಗಳಲ್ಲಿ ಉದಾಸೀನತೆಯ ದನಿ ಕೇಳಿ ಬರುತ್ತದೆ. ಆದರೆ ಈ ವರಾಹ ಪುರಾಣದಲ್ಲಿ ಮಾತ್ರ ಶೂದ್ರರಿಗೆ ಮಾತ್ರವಲ್ಲದೆ ವರ್ಣಬಾಹಿರರಿಗೂ ಅಸ್ಪೃಶ್ಯಾದಿಗಳಿಗೂ ಉಚ್ಚವರ್ಣೀಯರಂತೆಯೇ ವಿಧಿನಿಯಮ, ರೀತಿನೀತಿ, ಅಹಿಂಸಾ, ಸತ್ಯ, ಅಸ್ತೇಯ, ಪರೋಪಕಾರ, ಮಾತಾಪಿತೃಸೇವೆ ಮುಂತಾದ ಅನೇಕ ಮಾನವೀಯ ಧರ್ಮಗಳನ್ನು ಅನುಷ್ಠಾನಕ್ಕಾಗಿ ವಿಧಿಸಲಾಗಿದೆ. ಅದಕ್ಕಾಗಿ ಇದೇ ಪುರಾಣದ ೫೨ನೇ ಪುಟದ ಕೊನೆಯಲ್ಲಿ ನೋಡಬಹುದು. ಹೀಗೆ ಆದಿಯಿಂದ ಅಂತ್ಯದವರೆಗೆ ಪರಿಶೀಲಿಸಿದರೆ ಈ ವರಾಹ ಮಹಾ ಪುರಾಣವು ಮಾನವ ಸಾಮಾನ್ಯರ ಉದ್ಧಾರಕ್ಕಾಗಿ ಬರೆದ ವಿಶ್ವಧರ್ಮವನ್ನು ತಿಳಿಸುವ ಸಾರ್ವಜನೀನ ಮಹಾ ಪುರಾಣ ಎಂದು ಸಿದ್ಧವಾಗುತ್ತದೆ. ವಿಷ್ಣು ಭಕ್ತನು ಚಾಂಡಾಲನಾಗಿದ್ದರೂ ಪರಮ ಪಾವನನೇ ಸರಿ ಎಂದು ಇದರಲ್ಲಿ ಘಂಟಾ ಘೋಷವಾಗಿ ಸಾರಿದ್ದಾರೆ.

"ವೈಷ್ಣವಾಹಿ ಮಹಾಭಾಗಾಃ ಪುನಂತಿ ಸಕಲಂ ಜಗತ್ ।
ಸಂಸ್ಕೃತಃ ಕೀರ್ತಿತೋ ವಾಪಿ ದೃಷ್ಟಃ ಪೃಷ್ಟೋಽಪಿ ವಾ ಪುನಃ
ಪುನಾತಿ ಭಗವದ್ಭಕ್ತಶ್ಚಂಡಾಲೋಽಪಿ ಯದೃಚ್ಛಯಾ ।

ವೈಷ್ಣವರೆಂದರೆ ಸಕಲ ಜಗತ್ತನ್ನೇ ಪಾವನಗೊಳಿಸುವ ಪುಣ್ಯಾತ್ಮರು. ಇಂಥ ವೈಷ್ಣವ ಅಥವಾ ವಿಷ್ಣು ಭಕ್ತನು ಹೊಲೆಯನಾಗಿದ್ದರೂ ಸರಿ. ಅವನು ಇಚ್ಛಿಸಿದರೆ ಎಲ್ಲರನ್ನೂ ಪಾವನಗೊಳಿಸಬಲ್ಲ. ಅಂಥ ವಿಷ್ಣು ಭಕ್ತ ಚಾಂಡಾಲನನ್ನು ನೆನೆದರೆ ಸಾಕು. ನೋಡಿದರೂ ಸಾಕು. ಪಾಪವೆಲ್ಲ ಪರಿಹಾರ. ಪುಣ್ಯ ಪ್ರಾಪ್ತಿ." ಅಂದ ಬಳಿಕ ಭಗವದ್ ಭಕ್ತರಾದ ಬ್ರಾಹ್ಮಣರ ದರ್ಶನ ಸ್ಮರಣಾದಿಗಳು ಪಾಪಪರಿಹಾರಕ, ಪುಣ್ಯಪ್ರಾಪಕ ಎಂದು ಹೇಳುವದೇನು ? ಇದರ ಮೇಲಿಂದ ಈ ಪೌರಾಣಿಕರಿಗೆ ವೈಷ್ಣವರಲ್ಲಿಯೇ ಜಾತಿ ಮೂಲಕವಾಗಿ ಪಕ್ಷಪಾತಮಾಡಬೇಕೆಂಬ ವಿಚಾರ ಬಹೂದೂರ ಎಂಬುದು ಸ್ಪಷ್ಟವಾಗುವದು. ಈ ರಚನಕ್ಕೆ ಅನುಗುಣವಾಗಿಯೇ ಇದರಲ್ಲಿ ಅನೇಕ ಸನ್ನಿವೇಶಗಳನ್ನು ಹೆಣೆಯಲಾಗಿದೆ. ೧೩೯ನೇ ಅಧ್ಯಾಯದಲ್ಲಿ ಸೂಕರ ಕ್ಷೇತ್ರದಲ್ಲಿ ಓರ್ವ ಹರಿ ಭಕ್ತನಾದ ಚಂಡಾಲನು ಏಕಾದಶೀ ಜಾಗರಣದಲ್ಲಿಯ ತನ್ನ ದೇವರ ಸಂಗೀತ ಸೇವೆಯ ಪುಣ್ಯದಿಂದ ಒಬ್ಬ ಬ್ರಹ್ಮ ರಾಕ್ಷಸನನ್ನು ಉದ್ಧರಿಸಿದ ಕತೆಯನ್ನು ಚಿತ್ರಿಸಲಾಗಿದೆ. ಆ ಚಂಡಾಲನ ಸತ್ಯ ನಿಷ್ಠೆ ಮನ ಮೆಚ್ಚುವಂಥದಿದೆ.

''ಸತ್ಯಮೂಲಂ ಜಗತ್ಸರ್ವಂ ಲೋಕಾಃ ಸತ್ಯೇ ಪ್ರತಿಷ್ಠಿತಾಃ
ಸತ್ಯೇನ ಸಿದ್ಧಿಂ ಪ್ರಾಪ್ತಾಹಿ ಋಷಯೋ ಬ್ರಹ್ಮವಾದಿನಃ ॥
ಸತ್ಯೇನ ಗಮ್ಯತೇ ಸ್ವರ್ಗೋ ಮೋಕ್ಷಃ ಸತ್ಯೇನ ಚಾಪ್ಯತೇ ॥

ಹೀಗೆ ಸತ್ಯದ ಮಹಿಮೆಯನು ಹಾಡಿಪಾಡಿ ತನ್ನ ವಚನದಂತೆ ತನ್ನ ಜಾಗರ ಸೇವೆ ಮುಗಿಸಿ ಬಂದು ಸತ್ಯವಾಗಿಯೂ ಆ ಬ್ರಹ್ಮರಾಕ್ಷಸದ ಬಾಯಿಗೆ ಆತ್ಮಾಹುತಿ ಯಾಗಬಂದ ಚಾಂಡಾಲನ ತ್ಯಾಗ, ವಿಷ್ಣು ದೀಕ್ಷೆ, ಪರೋಪಕಾರ ಪ್ರವೃತ್ತಿ ಆತ್ಮಾರ್ಪಣೆಯ ಸದ್ಬುದ್ಧಿ, ಧ್ಯಾನಯೋಗ ಮುಂತಾದ ಸದ್ಗುಣಗಳು ''ಶ್ವಪಚಂ ವರಿಷ್ಠಂ'' ಎಂಬ ಭಾಗವತೋಕ್ತಿಗೆ ನಿದರ್ಶನವಾಗಿವೆ.

ಇದರಂತೆ ಶೂದ್ರಮುನಿಯಾದ ಧರ್ಮವ್ಯಾಧನ ಹಾಗೂ ಮತಂಗ ಮುನಿಗಳ ಸಂವಾದದಿಂದ ಕೀಳು ಜಾತಿಯವರಲ್ಲಿದ್ದ ಧಾರ್ಮಿಕ ಪ್ರಜ್ಞೆ, ಆಚಾರ ನಿಷ್ಠೆ, ಸ್ವೋಚಿತಕರ್ಮ, ಅಹಿಂಸಾಪ್ರಚಾರಾದಿ ದೀಕ್ಷಾದಾಕ್ಷ್ಯಗಳನ್ನು ಎತ್ತಿ ತೋರಿಸಲಾಗಿದೆ. ದೂರ್ವಾಸಮುನಿ ಮತ್ತು ಬ್ರಹ್ಮಕುಮಾರ ಅರುಣಿಯರು ಪಶ್ಚಾತ್ತಾಪದಿಂದ ಪರಿಶುದ್ಧನಾದ ಬೇಡರವನಿಗೆ ಉಪದೇಶ ನೀಡಿ ಉದ್ಧಾರದ ಮಾರ್ಗವನ್ನು ತೋರಿಸಿ ''ವೈದಿಕ ಸಂಸ್ಕೃತಿಯಲ್ಲಿ ಎಂಥ ಹೀನ ವರ್ಣದವರಿಗೂ ಯೋಗ್ಯರಾಗಿದ್ದರೆ ಉದ್ಧಾರಕ್ಕೆ ಇಂಬಿದೆ. ಜಾತಿ ಮೂಲಕವಾಗಿ ಭಗವಂತನ ಭಕ್ತಿ ಭವನ ಅಥವಾ ಮೋಕ್ಷ ಮಂದಿರದಲ್ಲಿ ಯಾರಿಗೂ ಬಹಿಷ್ಕಾರವಿಲ್ಲ'' ಎಂಬ ಅಂಶವನ್ನು ಈ ಪುರಾಣದಲ್ಲಿ ಅನೇಕ ಉದಾಹರಣೆಗಳಿಂದ ಸ್ಪಷ್ಟಗೊಳಿಸಲಾಗಿದೆ. ಹೀಗೆ ಸರ್ವ ಲೋಕೋದ್ಧಾರವೇ ಈ ವರಾಹ ಪುರಾಣದ ಅರಸುಗುರಿಯಾಗಿದೆ. ಎಲ್ಲ ಜಾತಿಯ ಜನರ ನೈತಿಕ ಮಟ್ಟವನ್ನು ಮೇಲಕ್ಕೆತ್ತುವದೇ ಇಲ್ಲಿಯ ಅನೇಕ ನಿದರ್ಶನಗಳ ಉದಾತ್ತ ಉದ್ದೇಶವಾಗಿದೆ. ನಿತ್ಯ ನೈಮಿತ್ತಿಕ ಕ್ರಿಯಾ ಕಲಾಪಗಳ ತಾತ್ವಿಕ ಹಿನ್ನೆಲೆ ಹಾಗೂ ಅನುಷ್ಠಾನದ ಕ್ರಮ ಫಲ ಪ್ರಯೋಜನಗಳನ್ನು ತಿಳಿಸಿಕೊಟ್ಟು ಸರ್ವಜನರನ್ನೂ ''ಆಚಾರ ಪೂತ''ರನ್ನಾಗಿ ಮಾಡಲು ವರಾಹ ಪುರಾಣವು ತನ್ನ ಸಹಸ್ರ ಸಹಸ್ರ ಪದ್ಯಗಳನ್ನು ಮೀಸಲಾಗಿರಿಸಿದೆ.

### ಭಾಗವತ ದೀಕ್ಷೆ

ಈ ವರಾಹ ಪುರಾಣದಲ್ಲಿ ಭಕ್ತಿಮಾರ್ಗ ಪ್ರಸಾರಕ್ಕಾಗಿ ನಿರ್ದೇಶಿಸಿದ ಒಂದು ಅತ್ಯುತ್ತಮ ಪದ್ಧತಿಯನ್ನು ಇತ್ತೀಚಿನಕಾಲದಲ್ಲಿಉದಾಸೀನ ಮಾಡಿ ಕೈ ಬಿಡಲಾಗಿದೆ. ಸಾರ್ವಜನಿಕರಲ್ಲಿ ದೇವ ಭಕ್ತಿ, ಧರ್ಮಶ್ರದ್ಧೆ, ಆಸ್ತಿಕತೆಗಳ ಪ್ರಸಾರ ಮಾಡಿ ಭಾರತೀಯ ವೈದಿಕ ಸಂಸ್ಕೃತಿಯ ಪ್ರಭಾವವು ಪ್ರತಿಯೊಬ್ಬ ಮಾನವನ ಹೃದಯದಲ್ಲಿ ಅಚ್ಚೊತ್ತಿ ದೃಢವಾಗಿ ನಿಲ್ಲಲು ಇಲ್ಲಿ ವಿಷ್ಣು ದೀಕ್ಷೆಯ ಪ್ರದಾನದ ಪ್ರಕಾರವನ್ನು ಹೇಳಲಾಗಿದೆ. ಉಚ್ಚವರ್ಣೀಯರಿಗೆ ವಿಷ್ಣು ದೀಕ್ಷೆಯನ್ನು ಕೊಡುವ ಕ್ರಮವನ್ನು ನಿರೂಪಿಸಿ ವರ್ಣಹೀನರಿಗೂ ವಿಷ್ಣು ದೀಕ್ಷೆ ಕೊಡುವ ರೀತಿಯನ್ನು ಪ್ರತ್ಯೇಕವಾಗಿಯೇ ಒಂದು ಅಧ್ಯಾಯದಲ್ಲಿ ತಿಳಿಸಿ ಕೊಡಲಾಗಿದೆ. ಕ್ಷತ್ರಿಯ ಬ್ರಾಹ್ಮಣರಂತೆ ವೈಶ್ಯ ಶೂದ್ರಾದಿಗಳೂ ವಿಧಿ ಪೂರ್ವಕವಾಗಿ ಗುರುಗಳಿಂದ ವೈಷ್ಣವ ದೀಕ್ಷೆಯನ್ನು ಮಂತ್ರೋಚ್ಚಾರಣ ಪೂರ್ವಕವಾಗಿ ಪಡೆಯಬಹುದು. ಶೂದ್ರನಾದವನೂ ಕೂಡ ಭಾಗವತ ದೀಕ್ಷಾ

ಕ್ರಮವನ್ನು ಪಡೆಯಬೇಕಾದರೆ ಎಂಟು ಮೊಳದ ವೇದಿಕೆಯನ್ನು ರಚಿಸಿ ವಿಧಿ ಪೂರ್ವಕವಾಗಿ ದೀಕ್ಷೆ ಪಡೆದು ದೇವರನ್ನು ಪ್ರತಿಜ್ಞಾಪೂರ್ವಕವಾಗಿ ಪ್ರಾರ್ಥಿಸಬೇಕು.

"ಶೂದ್ರೋಽಹಂ ಶೂದ್ರ ಕರ್ಮಾಣಿ ಮುಕ್ತ್ವಾ ಭಕ್ಷ್ಯಂ ಚ ಸರ್ವಶಃ"

ಎಂದು ಸಂಕಲ್ಪಿಸಿ ಅಭಕ್ಷ್ಯ ಭಕ್ಷಣ ಅಪೇಯಪಾನ ಮುಂತಾದವುಗಳನ್ನೂ ಉಳಿದ ಹಿಂಸಾದಿ ಕಾರ್ಯಗಳನ್ನೂ ತ್ಯಜಿಸಿ ದೇವರ ಧ್ಯಾನಕ್ಕಾಗಿ ಸಿದ್ಧನಾಗಬೇಕು. ಗುರುವಿನಿಂದ ಜಪಮಾಲೆಯನ್ನು ಪಡೆದು ಪ್ರತಿನಿತ್ಯವೂ ಯಥಾಶಕ್ತಿ ಜಪವನ್ನು ಮಾಡಬೇಕು" ಎಂದು ಮುಂತಾಗಿ ವಿಧಿಸಿದ್ದಾರೆ. ಮಹಾರಾಷ್ಟ್ರದ ವಾರಕರೀ ಪಂಥದವರೂ ಉತ್ತರಭಾರತದ ಚೈತನ್ಯ ಮತೀಯರೂ ಕೆಲಮಟ್ಟಿಗೆ ಈ ಸಂಪ್ರದಾಯವನ್ನು ಅಂಗೀಕರಿಸಿ ವಿಷ್ಣು ಭಕ್ತಿಯನ್ನು ಬೆಳೆಸಿದ್ದಾರೆ. ನಮ್ಮ ದಕ್ಷಿಣದಲ್ಲಿಯೂ ಈ ಭಾಗವತ ದೀಕ್ಷಾ ಪದ್ಧತಿಯನ್ನು ಜಾಗರೂಕತೆಯಿಂದ ಸಾರ್ವತ್ರಿಕ ವಿಷ್ಣು ಭಕ್ತಿ ಪ್ರಸಾರಕ್ಕಾಗಿ ಬಳಸುವುದು ಆವಶ್ಯಕವೆನಿಸುತ್ತದೆ. ನಮ್ಮಲ್ಲಿಯ ಜನ ಈ ವೈಷ್ಣವ ದೀಕ್ಷಾ ಕ್ರಮವನ್ನು ಉದಾಸೀನತೆಯಿಂದ ಕೈ ಬಿಟ್ಟದ್ದರಿಂದಲೇ ಇಲ್ಲಿಯ ಎಷ್ಟೋ ಜಾತಿ ಜನಾಂಗದ ಜನರಿಗೆ ಗುರು ಅಥವಾ ದೀಕ್ಷೆ ಯಾವದೂ ಇಲ್ಲದಂತಾಗಿ ಅವರಿಂದು ಬೇರೆ ಬೇರೆ ಧರ್ಮ ಸಂಪ್ರದಾಯಗಳ ಕಡೆಗೆ ರಭಸದಿಂದ ಮತಾಂತರಗೊಳ್ಳುತ್ತಿರುವದನ್ನು ಕಾಣುತ್ತಿದ್ದೇವೆ. ಹಿಂದೂಗಳ ಧರ್ಮಾಂತರದ ಓಘವನ್ನು ತಡೆದು ಕಡಿಮೆ ಮಾಡಬೇಕಾದರೆ ಭಾರತದ ಎಲ್ಲ ಧರ್ಮಪೀಠಾಧಿಪತಿಗಳೂ, ಸಾಮಾಜಿಕರೂ, ಸಂಘ ಸಂಸ್ಥೆಗಳೂ ಈ ವರಾಹ ಪುರಾಣದಲ್ಲಿ ಹೇಳಿದ ಭಾಗವತ ಧರ್ಮ ದೀಕ್ಷಾ ಪ್ರದಾನ ಹಾಗೂ ಭಕ್ತಿ ಪಂಥದ ಪ್ರಚಾರದ ಮಾರ್ಗವನ್ನು ಹಿಡಿದು ಭರದಿಂದ ದೈವತವಾದ ಅಥವಾ ಆಧ್ಯಾತ್ಮಿಕ ತತ್ವ, ಪ್ರಸಾರಕ್ಕೆ ಮುಂದಾಗದೇ ಗತಿಯಿಲ್ಲ. ಈ ದೃಷ್ಟಿಯಿಂದ ವರಾಹ ಪುರಾಣವು ಅತ್ಯಗತ್ಯದ ಅತ್ಯಂತ ಉಪಯುಕ್ತವಾದ ಮಾರ್ಗದರ್ಶನ ನೀಡಿದೆ. ಅದರ ಉಪಯೋಗ ಮಾಡಿಕೊಳ್ಳದಿದ್ದರೆ ಅದು ನಮ್ಮ ತಪ್ಪು.

**ಸರಳ ಭಾಷೆಯ ಮಹೋನ್ನತ ಧ್ಯೇಯ**

ಸರ್ವ ಸಾಮಾನ್ಯವಾಗಿ ಎಲ್ಲ ಶ್ರೀ ಸಾಮಾನ್ಯರಿಗೂ ಅರ್ಥವಾಗಿ ಅನುಷ್ಠಾನಕ್ಕೆ ಅನುಕೂಲವಾಗಲಿ ಎಂದು ಈ ವರಾಹ ಪುರಾಣದ ತುಂಬ ಪ್ರಸನ್ನ ಮಧುರವೂ ಸರಳ ಸುಂದರವೂ ಆದ ದ್ರಾಕ್ಷಾಪಾಕದ ಶೈಲಿಯನ್ನೇ ಬೋಧನ ಮಾಧ್ಯಮವನ್ನಾಗಿ ಬಳಸಲಾಗಿದೆ. ಇಲ್ಲಿಯ ಪದ್ಯಗಳ ಸಾರಲ್ಯ ಹಾಗೂ ಸಹಜತೆಗಳ ಪರಿಜ್ಞಾನಕ್ಕಾಗಿ ಕೆಲವು ಪದ್ಯಗಳನ್ನು ಉದಾಹರಿಸಬಹುದು.

"ನಾರಾಯಣಾತ್ ಪರೋ ದೇವೋ ನ ಭೂತೋ ನ ಭವಿಷ್ಯತಿ
ಏತದ್ರಹಸ್ಯಂ ವೇದಾನಾಂ ಪುರಾಣಾನಾಂ ಚ ಸತ್ತಮ ॥
ಅಹೋದೇವ ಮಯಾದೃಷ್ಟೋ ದುರ್ದರ್ಶೋ ಯೋಗಿನಾಮಪಿ
ತ್ವಯಾ ಸರ್ವಮಿದಂ ಸೃಷ್ಟಂ ಜಗತ್ ಸ್ಥಾವರ ಜಂಗಮಮ್ ॥
ಶಾಂತಿರ್ಭವತು ದೇವಾನಾಂ ಬ್ರಹ್ಮಕ್ಷತ್ರವಿಶಾಂ ತಥಾ ।
ಶಾಂತಿರ್ಭವತು ವೃದ್ಧಾನಾಂ ಬಾಲಾನಾಂ ಶಾಂತಿರುತ್ತಮಾ ॥

ದೇವೋ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಪೂರಿತಾ ॥
ಸರ್ವ ದೇವಮಯಾ ಗಾವಃ ಸರ್ವ-ವೇದ-ಮಯಾಸ್ತಥಾ
ಅಮೃತಂ ಧಾರಯಂತ್ಯಶ್ಚ ಪ್ರಚರಂತಿ ಮಹೀ ತಲೇ ॥
ನಮೋ ಧಾತ್ರೇ ವಿಧಾತ್ರೇ ಚ ಶಂಭವೇ ವರದಾಯ ಚ
ಜಗದ್ಬೋಕ್ತ್ರೇ ತ್ರಿಣೇತ್ರಾಯ ಶಂಕರಾಯ ಶಿವಾಯ ಚ ॥

ಹೀಗೆ ಸಹಜ ಸರಳವಾದ ಇಲ್ಲಿಯ ಪದ್ಯಗಳು ಭಾಷಾಂತರವಿಲ್ಲದೇ ಸಂಸ್ಕೃತ ಬಾರದವರಿಗೂ ತಿಳಿಯುವಷ್ಟು ಸುಲಭ ಶೈಲಿಯಲ್ಲಿ ಹೆಣೆಯಲ್ಪಟ್ಟಿವೆ. ರಾಮಾಯಣ ಭಾರತಾದಿಗಳಂತೆ ವಿಶಿಷ್ಟ ಒಂದು ಬೃಹತ್ ಕಥಾನಕ ನಿರೂಪಣೆಯ ಉದ್ದೇಶವು ಈ ಪುರಾಣಕ್ಕೆ ಇಲ್ಲ. ಈ ಪುರಾಣದ ಅಧಿನಾಯಕ ದೇವತೆಯಾದ ವರಾಹ ಸ್ವಾಮಿಯ ಕತೆಯನ್ನೂ ಕೂಡ ಇಲ್ಲಿ ಸಂಕ್ಷೇಪವಾಗಿಯೇ ಮುಗಿಸಿ ಜನದ ಬಾಳು ಬದುಕಗಳನ್ನು ತಿದ್ದಲಿಕ್ಕಾಗಿಯೇ ಈ ಪುರಾಣವು ಮೀಸಲಾಗಿದೆ. ಜನತೆಯ ಉದ್ಬೋಧನೆಗಾಗಿ ಮತ್ತು ಅವರ ನೀತಿ ಸಂವರ್ಧನೆಗಾಗಿ ಬೇರೆ ಬೇರೆ ಸಂದರ್ಭ ಸನ್ನಿವೇಶಗಳನ್ನು ನಿರ್ಮಿಸಿಗೊಂಡು ಧರ್ಮದ ತಿರುಳನ್ನು ತಿಳಿಯಾದ ಭಾಷೆಯಲ್ಲಿ ಇದರಲ್ಲಿ ಬಿತ್ತರಿಸುತ್ತ ಹೋಗುತ್ತಾರೆ ಕಥನಕಲಾಕೋವಿದರಾದ ಭಗವಾನ್ ಬಾದರಾಯಣರು. ಇದರಲ್ಲಿ ಅಲ್ಲಲ್ಲಿ ಬರುವ ಮಾರ್ಮಿಕವಾದ ಧಾರ್ಮಿಕ ಸುಭಾಷಿತಗಳು ಮಿಂಚಿನ ಸೆಳಕುಗಳಂತೆ ಜನಮನದ ಮೇಲೆ ವಿಲಕ್ಷಣವಾದ ಪರಿಣಾಮವನ್ನು ಉಂಟು ಮಾಡುತ್ತವೆ. ಉದಾಹರಣೆಗಾಗಿ ಇಲ್ಲಿಯ ಕೆಲವು ಪದ್ಯಗಳನ್ನು ಪರಿಶೀಲಿಸಬಹುದು. ೧೪೭ನೇ ಅಧ್ಯಾಯದಲ್ಲಿ ಪ್ರಮ್ಲೋಚೆಯೆಂಬ ಅಪ್ಸರೆಯ ಸಂಗದಿಂದ ತಪೋಭಂಗವಾದ ದೇವದತ್ತ ಮುನಿಯ ಉದ್ಗಾರ.

''ಅಗ್ನಿಕುಂಡ ಸಮಾ ನಾರೀ ಘೃತಕುಂಭಸಮಃ ಪುಮಾನ್ ।
ಇತಿ ಪ್ರಮಾದೋ ಮೂರ್ಖಾಣಾಂ ವಿಚಾರಾನ್ಮಹದಂತರಮ್ ।
ಘೃತಕುಂಭೋಽಗ್ನಿಯೋಗೇನ ದ್ರವತೇ ನ ತು ದರ್ಶನಾತ್
ಪುಮಾನ್ ಸ್ತ್ರೀದರ್ಶನಾದೇವ ದ್ರವತೇ ಯದ್ವಿಮೋಹಿತಃ ।''

''ಹೆಣ್ಣು ಒಂದು ಬೆಂಕಿಯ ಮೊಟ್ಟೆ. ಗಂಡು ತುಪ್ಪದ ಬಿಂದಿಗೆ'' ಎಂಬುದು ಮೂರ್ಖರ ಮಾತು. ವಿಚಾರಿಸಿದರೆ ಅವೆರಡರಲ್ಲಿ ಮಹದಂತರ. ತುಪ್ಪದ ತಪ್ಪೇಲಿ ಕರಗುವದು ಬೆಂಕಿ ತಾಗಿದಾಗ ಮಾತ್ರ. ಆದರೆ ಪುರುಷನಿಗೆ ಹೆಣ್ಣು ತಾಕುವದು ಬೇಡ. ದೂರದಿಂದ ನೋಡಿದ ಮಾತ್ರಕ್ಕೇ ಪುರುಷನು ಕರಗಿ ಹೋಗುವನು. ಬೆಂಕಿಗಿಂತ ಬಲವಾಗಿದೆ ಕಾಮಿನಿಯರ ಕಾಮದ ಕಾವು.'' ಸಮಾಜದಲ್ಲಿ ಒಡೆದು ಕಾಣುವ ಬಡತನ ಒಡೆತನ, ದೈನ್ಯ ಸಮೃದ್ಧಿ, ಸುಖ ದುಃಖ, ಮುಂತಾದ ವೈಷಮ್ಯವನ್ನು ಕಂಡು ಈ ಪುರಾಣ ಪ್ರವಕ್ತ್ರಗಳು ಮಮ್ಮಲನೆ ಮರುಗಿ ತಮ್ಮ ಮರುಕವನ್ನು ಕೆಲ ಪದ್ಯಗಳಲ್ಲಿ ವ್ಯಕ್ತಪಡಿಸಿದ್ದಾರೆ.

''ಅಶ್ನಂತಿ ಪಿಶಿತಂ ಕೇಚಿತ್ ಕೇಚಿತ್ ಶಾಲಿಸಮನ್ವಿತಂ
ಶುಷ್ಕಾನ್ನಂ ಕೇಚಿದಶ್ನಂತಿ ತತೋ ದುಃಖತರಂ ನು ಕಿಂ ॥
ಹಸ್ತ್ಯಶ್ವ-ರಥ-ಯಾನಾನಿ ಗಮ್ಯಮಾನಾನಿ ಪಶ್ಯತಿ
ಧಾವತ್ಯಸ್ಯಾಗ್ರತಃ ಪೃಷ್ಠೀ ತತೋ ದುಃಖತರಂ ನು ಕಿಂ

**ವರವಸ್ತ್ರಾವೃತಾಂ ಶಯ್ಯಾಂ ಸಮಾಸೇವತಿ ಭೂಷಿತಾಂ**
**ಕೇಚಿತ್ತೃಣೇಷು ಶೇರತೇ ತತೋ ದುಃಖತರಂ ನು ಕಿಮ್**

ಈ ಜಗತ್ತಿನಲ್ಲಿ ಹಲವರಿಗೆ ಉಣ್ಣಲು ಒಣ ಅನ್ನಕ್ಕೂ ದಿಕ್ಕಿಲ್ಲ. ಆದರೆ ಕೆಲವರಿಗೆ ಮಾತ್ರ ಸಣ್ಣಕ್ಕಿ ಅನ್ನ. ಬೇಕೆಂದರೆ ಮದ್ಯ, ಮಾಂಸ. ಬೇಡಿದ್ದೆಲ್ಲ ಸಿದ್ಧ. ಇದೆಂಥ ದುಃಖ! ಆನೆ ಕುದುರೆ ರಥಗಳನ್ನೇರಿ ಮೆರೆಯುವವರು ಕೆಲವರಾದರೆ ಅವರ ಹಿಂದೆ ಓಡುವ ಆಳಾಗಿ ದಣಿಯುವುದು ಹಲವರು. ಅಬ್ಬಾ ! ಎಂಥ ವೈಷಮ್ಯ ! ಕೆಲವರಿಗೆ ಮಲಗಲು ಹಂಸದುಪ್ಪಳದ ಹಾಸು! ಮೇಲೆ ಬೆಳ್ಳಗಿನ ಸೊಳ್ಳೆ ಪರದೆ. ಉಡಲು ಬಿಳಿಬಟ್ಟೆ. ತೊಡಲು ಬೇಕಾದಷ್ಟು ಅಲಂಕಾರ. ಉಳಿದವರಿಗೆ ಉಡತೊಡಲು ಏನೂ ಇಲ್ಲ. ಕಡುಬಡತನ. ಹುಲ್ಲು ಮೇಲೆಯೇ ಒರಗಬೇಕು. ಎಂಥ ಅಂತರ!'' ಈ ಜಗತ್ತಿನ ದುರ್ದೈವದ ದೊಡ್ಡ ವಿರೋಧಾಭಾಸವೊಂದು ಇಲ್ಲಿಯ ಕವಿವಾಣಿಯಲ್ಲಿ ಸುಂದರವಾಗಿ ಅಭಿವ್ಯಕ್ತಿ ಪಡೆದಿದೆ.

**ವಿದ್ಯಮಾನೇ ಧನೇ ಕೇಚಿತ್ ಕೃಪಣಾ ಭೋಗ ವರ್ಜಿತಾಃ**
**ದರಿದ್ರೋ ಜಾಯತೇ ದಾತಾ ತತೋ ದುಃಖತರಂ ನು ಕಿಮ್ ॥**

ಹೇರಳವಾಗಿ ಹಣವಿದ್ದರೂ ಎಷ್ಟೋ ಸಿರಿವಂತರು ಭೋಗಿಸಲಾರದೇ ಜಿಪುಣತನದಿಂದ ಕಷ್ಟ ಪಡುತ್ತಾರೆ. ಕೈ ಬಿಟ್ಟು ದಾನ ಮಾಡಿದ ಪುಣ್ಯಾತ್ಮ ಕಡುಬಡತನವನ್ನಪ್ಪುವ ಪ್ರಸಂಗ ಬರುತ್ತದೆ. ಇವೆರಡೂ ದೈವ ದುರಂತಗಳಲ್ಲದೇ ಮತ್ತೇನು ! ಇದಕ್ಕೆಲ್ಲ ''ಮಾಮೇವ ಯೇ ಪ್ರಪದ್ಯಂತೆ'' ಭಗವಂತನನ್ನು ಶರಣು ಹೋಗುವದೊಂದೇ ತಾರಕ ಮಾರ್ಗ ಎಂದು ಪರ್ಯಾಯವಾಗಿ ತಿಳಿಸುತ್ತಾರೆ.

**''ಸಹತೇ ಚಾಪಮಾನಂ ತು ವ್ಯಸನೇ ನ ತು ದುರ್ಮನಾಃ**
**ಯಸ್ಯೇದಂ ವಿದಿತಂ ಸರ್ವಂ ತತಃ ಸೌಖ್ಯತರಂ ನು ಕಿಮ್ ॥**

ಅವಮಾನವನ್ನು ಸಹಿಸಿ ಸಂಕಟದಲ್ಲಿ ಮನಸ್ಸಿಗೆ ಕಿಂಕರ ಮಾಡಿಕೊಳ್ಳದಿರುವ ಬದುಕಿನ ಗೆಲವಿನ ಗುಟ್ಟನ್ನು ಅರಿತರೆ ಅದಕ್ಕಿಂತ ಸುಖವಾವುದು!

''ವಿದ್ಯತೇ ವಿಭವೇ ವಾಪಿ ಪುರುಷೋ ಯಸ್ತು ಪಂಡಿತಃ ।
ನಿಗ್ರಹೀತೇಂದ್ರಿಯಃ ಪಂಚ ತತಃ ಸೌಖ್ಯತರಂ ನು ಕಿಮ್''

ವೈಭವದ ಜೊತೆಗೆ ವಿದ್ಯೆ, ಶ್ರೀಮಂತಿಕೆಯೊಂದಿಗೆ ಧೀಮಂತಿಕೆ. ಮೇಲೆ ಐದು ಇಂದ್ರಿಯಗಳ ಮೇಲೆ ಹಿಡಿತ. ಇದಕ್ಕಿಂತ ಹೆಚ್ಚಿನ ಸುಖವಾವುದು ! ಹೀಗೆ ಮಿಂಚಿನ ಮೊನೆಯಂಥ ಮಾತಿನ ಗೊನೆಗಳಗುಂಟ ಭಾವದ ಬಳ್ಳಿ ಹಬ್ಬಿ ಜ್ಞಾನದ ಸೌಗಂಧವು ಇಡೀ ಪುರಾಣದ ತುಂಬ ಇಲ್ಲಿ ಸೂಸುವದನ್ನು ನಾವು ಕಾಣುತ್ತೇವೆ. ಈ ಇಡೀ ಪುರಾಣದ ತುಂಬ ಭಾವಾರ್ಥ ಸಂಭೃತವಾದ ಪದ್ಯಗಳೂ ಕತೆಗಳೂ ಸನ್ನಿವೇಶಗಳೂ ಸಂವಾದಗಳೂ ತುಂಬಿ ಇದೊಂದು ಧಾರ್ಮಿಕ, ನೈತಿಕ, ಸಾಹಿತ್ಯಕ, ತಾತ್ವಿಕ ಮಹಾ ಪ್ರಬಂಧವಾಗುವಂತೆ ಮಾಡಿವೆ. ಈ ರೀತಿಯಾಗಿ ಈ ಪುರಾಣದ ಅಂತರಂಗ ಪರೀಕ್ಷೆಯನ್ನು ಮಾಡುತ್ತ ಹೋದಂತೆ ಇದರ ಉಪಯುಕ್ತತೆ, ವ್ಯಾಪಕ ದೃಷ್ಟಿ, ಸರ್ವೋದ್ಧರಣದ ತೀವ್ರಾಕಾಂಕ್ಷೆ, ಹೃದಯಂಗಮತೆ, ರಸರಸ್ಯತೆ, ತತ್ವನಿಷ್ಠತೆ, ನೀತಿ ಪ್ರಧಾನತೆ ಮುಂತಾದ ಗುಣಗಳು

ಗೋಚರವಾಗುತ್ತಲೇ ಹೋಗುತ್ತವೆ. ಈ ಪುರಾಣ ಪರಿಶೀಲನದ ಗಾತ್ರವು ಈಗಾಗಲೇ ಸಾಕಷ್ಟು ಲಂಬಿಸಿದ್ದರಿಂದ ಈ ಅಂತರಂಗ ಪರಿಶೀಲನದಿಂದ ಇಲ್ಲಿಯೇ ವಿರಮಿಸುತ್ತೇನೆ. ಇನ್ನು ಇದರ ಬಹಿರಂಗ ಪರೀಕ್ಷೆಯನ್ನು ಈಗಾಗಲೆ ಹಿಂದೆ ನಾವು ಮಾಡಿದ್ದರೂ ಇತರ ತಾತ್ವಿಕ, ಸಾತ್ವಿಕ, ಸ್ಮೃತಿ, ವೇದಾಂತಾದಿ ಗ್ರಂಥಕಾರರ ದೃಷ್ಟಿಯಲ್ಲಿ ಈ ವರಾಹ ಪುರಾಣದ ಸ್ಥಾನಮಾನಗಳೇನು ಎಂತು ಎಂಬುದನ್ನು ತುಸು ಪರಿಶೀಲಿಸಿ ಈ ಪ್ರಬಂಧವನ್ನು ಮುಕ್ತಾಯ ಮಾಡುತ್ತೇವೆ. ಬಹು ಪ್ರಾಚೀನವಾದ ಈ ಪುರಾಣದಲ್ಲಿ ಅಲ್ಲಲ್ಲಿ ಪ್ರಕ್ಷೇಪ ವಿಕ್ಷೇಪಗಳು ಬಹಳವಾಗಿದ್ದು ಅದನ್ನು ಸರಿಯಾಗಿ ಗುರುತಿಸುವುದು ದುಷ್ಕರವಾಗಿದೆ. ಆಗಮಿಕರೂ ಶಾಕ್ತರೂ ಶೈವರೂ ಚೈತನ್ಯಮತೀಯರೂ ವೈಷ್ಣವರೂ ತಾಂತ್ರಿಕರೂ ಅಲ್ಲಲ್ಲಿ ಇದರ ಮೇಲೆ ಕೈಯಾಡಿಸಿದ್ದು ಕಂಡು ಬರುತ್ತದೆ. ಮಥುರಾ ಮಾಹಾತ್ಮ್ಯ ದಲ್ಲಿಯೂ ಕೊನೆಯ ಗೋಕರ್ಣ ಮಾಹಾತ್ಮ್ಯದಲ್ಲಿಯೂ ಮಥುರಾ ನೇಪಾಲ ಮುಂತಾದ ತತ್ತದ್ದೇಶದ ಜನರು ತಮ್ಮ ತಮ್ಮ ಪ್ರದೇಶ ಕ್ಷೇತ್ರಗಳ ಮಹಿಮಾತಿಶಯ ದ್ಯೋತಕವಾದ ಪದ್ಯಗಳನ್ನು ಈ ಪುರಾಣದಲ್ಲಿ ಒಳಸೇರಿಸಿದ್ದಾರೆ. ಆದರೂ

''ಗಂಗಾಸಂಗೇನ ನೈರ್ಮಲ್ಯಂ ರಥ್ಯಾದ್ಭಿಃ ಲಭ್ಯತೇ ಯಥಾ''

ಎಂಬಂತೆ ಮೂಲ ವರಾಹ ಪುರಾಣದಲ್ಲಿ ಸೇರ್ಪಡೆಯಾಗಿ ಅವೂ ಕೂಡ ಈಗ ಪೂಜ್ಯತೆಯನ್ನು ಪಡೆಯುತ್ತಲಿವೆ. ಅನೇಕ ಸ್ಮೃತಿಕಾರರೂ ನಿಬಂಧಕಾರರೂ ಧರ್ಮಶಾಸ್ತ್ರ ಟೀಕಾಕಾರರೂ ತಮ್ಮ ಗ್ರಂಥಗಳಲ್ಲಿ ಈ ವರಾಹ ಪುರಾಣವನ್ನು ಗೌರವದಿಂದ ಉಲ್ಲೇಖಿಸಿದ್ದಲ್ಲದೇ ಈ ಪುರಾಣದ ಪದ್ಯಗಳನ್ನು ಪ್ರಮಾಣತ್ವೇನ ಉದಾಹರಿಸುತ್ತಾರೆ. ವಿದ್ಯಾಕರ ವಾಜಪೇಯಿಯು ತನ್ನ ''ನಿತ್ಯಾಚಾರ ಪದ್ಧತಿ'' ಎಂಬ ಆಚಾರ ಗ್ರಂಥದಲ್ಲಿ ವರಾಹ ಪುರಾಣದ ೬೬-೨೦ ಎರಡು ಅಧ್ಯಾಯಗಳಿಂದ ಮೂರು ಪದ್ಯಗಳನ್ನು ಉದಾಹರಿಸಿದ್ದಾನೆ. ವಾಚಸ್ಪತಿ ಮಿಶ್ರರು ತಮ್ಮ ''ತೀರ್ಥ ಚಿಂತಾಮಣಿ'' ಗ್ರಂಥದಲ್ಲಿ ಇದರ ೨ನೇ ಅಧ್ಯಾಯದಿಂದ ಅನೇಕ ಪದ್ಯಗಳನ್ನು ಉದ್ಧರಿಸಿದ್ದಾರೆ. ಶೂಲಪಾಣಿಯು ತನ್ನ ''ವ್ರತಕಲಾವಿವೇಕ'' ಗ್ರಂಥದಲ್ಲಿ ವರಾಹ ಪುರಾಣದ ೧೬೭ನೇ ಅಧ್ಯಾಯದ ಒಂದು ಪದ್ಯವನ್ನೂ, 'ಪ್ರಾಯಶ್ಚಿತ್ತ ವಿವೇಕ' ಎಂಬ ತನ್ನ ಮತ್ತೊಂದು ನಿಬಂಧದಲ್ಲಿ ಈ ಪುರಾಣದ ೧೧೬ನೇ ಅಧ್ಯಾಯದ ಒಂದು ಪದ್ಯವನ್ನೂ ಉದಾಹರಿಸಿದ್ದಾನೆ. ''ಕೃತ್ಯರತ್ನಾಕರ'' ಎಂಬ ನಿಬಂಧ ಗ್ರಂಥದಲ್ಲಿ ಗ್ರಂಥಕಾರನಾದ ಚಂಡೇಶ್ವರನು ವರಾಹ ಪುರಾಣದ ೪೦, ೪೭ ಮತ್ತು ೫೮ ಈ ಮೂರೂ ಅಧ್ಯಾಯಗಳನ್ನು ಸಂಪೂರ್ಣವಾಗಿ ಎತ್ತಿ ಹಾಕಿದ್ದಾನೆ. ಮತ್ತು ೩೯ ಹಾಗೂ ೪೧ನೇ ಅಧ್ಯಾಯಗಳಿಂದಲೂ ಅನೇಕ ಶ್ಲೋಕಗಳನ್ನು ಎತ್ತಿ ಉದಾಹರಿಸಿದ್ದಾನೆ. ''ಚತುರ್ವರ್ಗ ಚಿಂತಾಮಣಿ'' ಎಂಬ ಮಹದ್ಗ್ರಂಥದಲ್ಲಿ ಅದರ ಪ್ರಣೇತಾರನಾದ ಹೇಮಾದ್ರಿಯು ಇದೇ ವರಾಹ ಪುರಾಣದ ೧೩, ೧೪, ೩೧, ೩೭, ೩೪, ೩೨, ೩೯, ೫೦, ೫೫, ೬೫, ೯೯, ೧೦೯, ೧೧೭, ೧೧೬, ೧೩೯, ೧೮೮, ೧೯೦, ೭೧೧ ಈ ಅಧ್ಯಾಯಗಳಿಂದ ವಿಪುಲವಾಗಿ ಅನೇಕಾನೇಕ ಶ್ಲೋಕಗಳನ್ನು ಎತ್ತಿ ಹೇಳಿದ್ದಾನೆ. ಯಾಜ್ಞ್ಯವಲ್ಕ್ಯಸ್ಮೃತಿಯ ಮೇಲಿನ ವ್ಯಾಖ್ಯಾನಕಾರನಾದ ಅಪರಾರ್ಕನು ವರಾಹದ ೧೩, ೬೬, ೨೦, ೨೧, ೧೧೭ ಅಧ್ಯಾಯ ಗಳಿಂದ ಎಷ್ಟೋ ಶ್ಲೋಕಗಳನ್ನು ಪ್ರಮಾಣತ್ವೇನ ಉದಾಹರಿಸುತ್ತಾನೆ.

''ಕಲಾ ವಿವೇಕ'' ಎಂಬ ಗ್ರಂಥ ಲೇಖಕನಾದ ಜೀಮೂತವಾಹನನು ಈ ಪುರಾಣದ ೨೮, ೨೯, ೩೦ ಈ ಮೂರು ಅಧ್ಯಾಯಗಳಿಂದ ಗಣನೀಯ ಪ್ರಮಾಣದಲ್ಲಿ ಪದ್ಯಗಳನ್ನು ಉದಾಹರಿಸುತ್ತಾನೆ. ''ಹರಿಭಕ್ತಿ ವಿಲಾಸ'' ಎಂಬ ಗ್ರಂಥದಲ್ಲಿ ಶ್ರೀ ಚೈತನ್ಯರ ಪ್ರಶಿಷ್ಯನಾದ ಗೋಪಾಲಭಟ್ಟನು ವರಾಹ ಪುರಾಣದ ೧೯, ೧೨೮, ೧೨೯, ೧೩೧, ೧೪೯ ಮತ್ತು ೧೫೭ನೇ ಅಧ್ಯಾಯಗಳಿಂದ ಅನೇಕ ಪದ್ಯಗಳನ್ನು ಗೌರವದಿಂದ ಎತ್ತಿ ಉದ್ಧರಿಸಿದ್ದಾನೆ. ''ದಾನಕ್ರಿಯಾಕೌಮುದೀ, ಶುದ್ಧಿಕ್ರಿಯಾಕೌಮುದೀ, ಶ್ರಾದ್ಧಕ್ರಿಯಾ ಕೌಮುದೀ'' ಎಂಬ ಮೂರು ಗ್ರಂಥಗಳಲ್ಲಿ ಗೋವಿಂದಾನಂದನು ಈ ಪುರಾಣದ ೧೮೭, ೧೮೮, ೧೯೦ ಈ ಮೂರು ಅಧ್ಯಾಯಗಳಿಂದ ಹಲಕೆಲವು ಪದ್ಯಗಳನ್ನು ಪ್ರಮಾಣಭೂತವಾಗಿ ಉದಾಹರಿಸುತ್ತಾನೆ. ವೇದವ್ಯಾಖ್ಯಾತೃಗಳಾದ ಮಾಧವಾಚಾರ್ಯರು ತಮ್ಮ ಪರಾಶರಸ್ಮೃತಿಯ ಮೇಲಿನ ಭಾಷ್ಯದಲ್ಲಿ ವರಾಹ ಪುರಾಣದ ೧೯೦ನೇ ಅಧ್ಯಾಯದಿಂದ ಶ್ಲೋಕೋದ್ಧಾರ ಮಾಡಿದ್ದಾರೆ. ''ಮದನ ಪಾರಿಜಾತ'' ಎಂಬ ಗ್ರಂಥದಲ್ಲಿ ಮದನ ಪಾಲನು ವರಾಹ ಪುರಾಣದ ೧೮೮ ಹಾಗೂ ೧೯೦ನೇ ಅಧ್ಯಾಯಗಳಿಂದ ಕೆಲವು ಪದ್ಯಗಳನ್ನು ಆಧಾರ ಭೂತವಾಗಿ ಉದಾಹರಿಸುತ್ತಾನೆ. ''ಕೃತ್ಯರತ್ನಾಕರ'' ಎಂಬ ಧರ್ಮಶಾಸ್ತ್ರ ಕೃತಿಯಲ್ಲಿ ಚಂಡೇಶ್ವರನು ವರಾಹ ಪುರಾಣದ ೧೧೭, ೧೪೯, ೨೧೧ನೇ ಅಧ್ಯಾಯಗಳಿಂದ ಪ್ರಮಾಣೋದಿಹರಣೆಗೆಂದು ಹಲವಾರು ಪದ್ಯಗಳನ್ನು ಎತ್ತಿ ತೋರಿಸಿದ್ದಾನೆ.

ಇದೇ ರೀತಿಯಾಗಿ ''ಸ್ಮೃತಿಚಂದ್ರಿಕಾ'' ಎಂಬ ಧಾರ್ಮಿಕ ನಿಬಂಧದಲ್ಲಿ ದೇವಣ ಭಟ್ಟನು ವರಾಹದ ೧೯೦ನೇ ಅಧ್ಯಾಯದಿಂದಲೂ, ಅನಿರುದ್ಧ ಭಟ್ಟನು ತನ್ನ 'ಹಾರಲತಾ' ಗ್ರಂಥದಲ್ಲಿ ಈ ಪುರಾಣದ ೧೮೭ನೇ ಅಧ್ಯಾಯದಿಂದಲೂ, ಶ್ರೀದತ್ತ ಉಪಾಧ್ಯಾಯನು ತನ್ನ 'ಕೃತ್ಯಾಚಾರ' ಎಂಬ ಧಾರ್ಮಿಕ ಪ್ರಬಂಧದಲ್ಲಿಯೂ ಈ ಪುರಾಣದ ೨೧೦ ಮತ್ತು ೨೧೧ನೇ ಅಧ್ಯಾಯಗಳಿಂದಲೂ, ಬಲ್ಲಾಳಸೇನನು ತನ್ನ 'ದಾನ ಸಾಗರ' ಎಂಬ ಪ್ರಬಂಧದಲ್ಲಿ ವರಾಹ ಪುರಾಣದ ೨೦೫, ೨೦೭ನೇ ಅಧ್ಯಾಯಗಳಿಂದಲೂ ಅನೇಕ ಪದ್ಯಗಳನ್ನು ಉದಾಹರಿಸಿದ್ದಾರೆ. ಇನ್ನೂ ಎಷ್ಟೋ ಧಾರ್ಮಿಕ ನಿಬಂಧಕಾರರು ತಮ್ಮ ಸ್ಮೃತಿ ವ್ಯಾಖ್ಯಾನ ಹಾಗೂ ಶ್ಲೋಕಾತ್ಮಕವಾದ ನಿಬಂಧ ಗ್ರಂಥಗಳಲ್ಲಿ ವರಾಹ ಪುರಾಣದ್ದೆಂದು ಹೇಳಿ ಉಲ್ಲೇಖಿಸಿ ಉದಾಹರಿಸಿದ ಅಸಂಖ್ಯ ಪದ್ಯಗಳು ಈಗಿದ್ದ ವರಾಹ ಪುರಾಣದ ಯಾವ ಪ್ರತಿಗಳಲ್ಲಿಯೂ ಕಂಡು ಬರುವದಿಲ್ಲ. ಇದರ ಮೇಲಿಂದ ಪ್ರಾಚೀನ ವರಾಹ ಪುರಾಣದ ಬಹುಭಾಗವು ನಷ್ಟವಾಗಿ ಹೋದಂತೆ ತೋರುವದು ಉತ್ತರಭಾಗವು ಸಂಪೂರ್ಣ ಕಳೆದು ಹೋಗಿದ್ದು ಪೂರ್ವಭಾಗದಲ್ಲಿಯೂ ಎಷ್ಟೋ ಅಂಶ ಪ್ರಣಷ್ಟವಾಗಿರಲಿಕ್ಕೆ ಸಾಕು. ಮೇಲೆ ಹೇಳಿದ ಅನೇಕಾನೇಕ ವಿದ್ವನ್ಮಾನ್ಯ ಪ್ರಬಂಧಗಳಲ್ಲಿ ವರಾಹ ಪುರಾಣದ ಪದ್ಯಗಳನ್ನು ಪರಮ ಪ್ರಮಾಣತ್ವೇನ ಉದಾಹರಿಸಬೇಕಾದರೆ ಆ ಆ ಕಾಲದಲ್ಲಿ ಅಂದರೆ ಕ್ರಿಸ್ತಾವ್ಯವಹಿತೋತ್ತರ ಕಾಲದಲ್ಲಿಯೇ ಈ ಮಹಾಪುರಾಣವು ಪ್ರಮಾಣ ಮೂರ್ಧನ್ಯತ್ವೇನ ಮಾನಿತವಾಗಿರಬೇಕು. ಅಂಥ ನಿರಪವಾದ ಸರ್ವ ಮಾನ್ಯತೆಯು ಒಂದು ಗ್ರಂಥ ಅಥವಾ ಪುರಾಣಕ್ಕೆ ಬರಬೇಕಾದರೆ ಅದು ಶ್ರೀ ವಿಷ್ಣುರೂಪಿಯಾದ ಶ್ರೀ ವೇದವ್ಯಾಸರಿಂದ ಸಹಸ್ರಾರು ವರ್ಷ ಪೂರ್ವದಲ್ಲಿ ರಚಿತವಾದದ್ದೆಂದು ಬಲವಾದ ನಂಬುಗೆಯೇ ಕಾರಣ. ಆನಂದ ತೀರ್ಥ

ಭಗವತ್ಪಾದಾಚಾರ್ಯರೆಂದು ಸುಪ್ರಸಿದ್ಧರಾದ ಶ್ರೀ ಮನ್ಮಧ್ವಾಚಾರ್ಯರೂ ಕೂಡ ತಮ್ಮ ಬ್ರಹ್ಮಸೂತ್ರದ ಮೇಲಿನ ಭಾಷ್ಯದಲ್ಲಿಯೂ ಹಾಗೂ ಇತರ ತತ್ವನಿರ್ಣಯಾದಿ ಗ್ರಂಥಗಳಲ್ಲಿಯೂ ವರಾಹ ಪುರಾಣದಿಂದ ಅನೇಕ ಪದ್ಯಗಳನ್ನು ಉದಾಹರಿಸಿದ್ದಾರೆ.

**''ಸರ್ವತ್ರ ಶಕ್ಯತೇ ಕರ್ತುಮಾಗಮೇನ ವಿನಾಮುನಾ ।**
**ತಸ್ಮಾನ್ನ ಸಾ ಶಕ್ತಿಮತೀ ವಿನಾಗಮಮುದೀಕ್ಷಿತು ॥ ಇತಿವಾರಾಹೇ**
**''ತ್ವಂ ಚ ರುದ್ರ ಮಹಾಬಾಹೋ ಮೋಹ ಶಾಸ್ತ್ರಾಣಿ ಕಾರಯ ।**
**ಅತಥ್ಯಾನಿ ವಿತಥ್ಯಾನಿ ದರ್ಶಯಸ್ವ ಮಹಾಭುಜ**
**ಪ್ರಕಾಶಂ ಕುರು ಚಾತ್ಮಾನಂ ಅಪ್ರಕಾಶಂ ಚ ಮಾಂ ಕುರು'' ಇತಿ ವಾರಾಹವಚನಾತ್**

ಆಚಾರ್ಯರು ಉದಾಹರಿಸಿದ ಈ ಪದ್ಯಗಳು ಈಗಿನ ವರಾಹ ಪುರಾಣದಲ್ಲಿ ಉಪಲಬ್ಧವಿದೆ. ಅನುಪಲಬ್ಧ ಪದ್ಯಗಳೂ ಸಾಕಷ್ಟಿವೆ. ಈ ಸಂಪೂರ್ಣ ವರಾಹ ಪುರಾಣವನ್ನು ಭಾಷಾಂತರಿಸುವದಕ್ಕಿಂತ ಮೊದಲು ತಂಜಾವೂರ, ಅಡ್ಯಾರ, (ಮದ್ರಾಸ) ಬರೋಡಾ, ನಾಗಪೂರ, ಕಲಕತ್ತಾ, ಜಯಪೂರ, ಪೂನಾ, ಕುಂಭಕೋಣ, ಜಮಖಂಡಿ ಮುಂತಾದ ಪಟ್ಟಣಗಳಿಂದ ಒಂಭತ್ತು ಅಮುದ್ರಿತ ಪ್ರತಿಗಳನ್ನು ಇದ್ದಲ್ಲಿಂದ ಪ್ರತಿ ಮಾಡಿಕೊಂಡು ತರಲಾಯಿತು. ಅಲ್ಪ ಸಂಭಾವನೆ ಯಿಂದಲೇ ಸಂತೃಪ್ತರಾಗಿ ಮೂರು ತಾಡವಾಲೆ ಪ್ರತಿ ಆರು ಜೀರ್ಣಕಾಗದ ಪ್ರತಿಗಳಿಂದ ಕಾಪಿ ಮಾಡಿಸಿಕೊಟ್ಟ ಆ ಆ ಗ್ರಂಥಾಲಯಗಳ ಕರ್ಮಚಾರಿ ಪಂಡಿತರಿಗೆ ನಾನು ಋಣಿಯಾಗಿದ್ದೇನೆ. ಈ ಹಸ್ತ ಪ್ರತಿಗಳಲ್ಲಿ ಬಹಳಷ್ಟು ಈಗ ಮುದ್ರಿತ ಪ್ರತಿಗಳ ಪ್ರತಿಲಿಪಿಯಂತೆಯೇ ಇದ್ದವು. ಎರಡು ತಾಡವಾಲೆಯ ವರಾಹ ಪುರಾಣ ಪ್ರತಿಗಳೇ ಮುಂಬೈ ಹಾಗೂ ಕಲಕತ್ತಾ ಮುದ್ರಿತ ಪ್ರತಿಗಳಿಗೆ ಮೂಲ ಮಾತೃಕೆಗಳಾಗಿವೆಯೆಂದು ಅಲ್ಲಿಯ ಗ್ರಂಥಪಾಲರು ತಿಳಿಸಿದರು. ಮತ್ತೊಂದು ತಾಡವಾಲೆಯ ವರಾಹ ಪುರಾಣದ ಹಳೆ ಪ್ರತಿಯಲ್ಲಿ ಈಗ ಮುದ್ರಿತ ಪುರಾಣದ ಅರ್ಧದಷ್ಟು ಪದ್ಯಗಳು ಮಾತ್ರ ಇರುವದರಿಂದ ಅದು ವರಾಹ ಪುರಾಣದ ಸಂಕ್ಷೇಪವಿರಬಹುದೆಂದು ಎನಿಸಿತು. ಆದರೂ ಇಡೀ ವರಾಹ ಪುರಾಣದ ಯಾವ ಕತೆ, ತತ್ವ, ವಿಧಾನಗಳಿಗೂ ಚ್ಯುತಿ ಬಾರದಂತೆ ಸಮಗ್ರ ಪುರಾಣವನ್ನು ಕೆಲವೇ ಸಹಸ್ರ ಪದ್ಯಗಳಲ್ಲಿ ಕ್ರೋಡೀಕರಿಸಿದ್ದು ಕೌಶಲ್ಯ ಪೂರ್ಣವಾಗಿದೆ. ಬೊಂಬಾಯಿ, ಕಲಕತ್ತಾ, ಮೈಸೂರು ಮುಂತಾದ ಕಡೆಗಳಲ್ಲಿ ಈಗಾಗಲೇ ಮುದ್ರಿತವಾದ ವರಾಹ ಪುರಾಣಗಳನ್ನೂ ಇದರಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಈ ಪುರಾಣದಲ್ಲಿ ಕಥಾನಕ ಚರಿತ್ರಾಂಶಗಳಿಗಿಂತ ಸೃಷ್ಟಿಕ್ರಮ, ತೀರ್ಥಕ್ಷೇತ್ರ ವರ್ಣನೆ, ಧರ್ಮಾಧರ್ಮ ವಿಚಾರಗಳೇ ಹೆಚ್ಚಾಗಿದ್ದುದರಿಂದ ಜನರಂಜನೆಯ ಅಂಶ ಕಡಿಮೆಯೆನಿಸಬಹುದು. ಆದುದರಿಂದ ಕನ್ನಡಿಸುವ ಶೈಲಿಯು ಏಕತಾನತೆಯ ತಂದ್ರಿಯಿಂದ ತೂಕಡಿಸಿದಂತೆ ಕಾಣಬಹುದು. ಆದರೆ ಇದ್ದುದು ಇದ್ದಂತೆ ಕನ್ನಡಿಗರ ಮುಂದೆ ಇಡುವ ಸಂಕಲ್ಪ ಮಾಡಿದ ನಾವು ಅನೇಕ ತಾಡವಾಲೆಯ ಹಾಗೂ ಮುದ್ರಿತ ಪುರಾಣ ಪ್ರತಿಗಳನ್ನು ನೋಡಿ ಸಿದ್ಧಪಡಿಸಿದ ಸಂಸ್ಕೃತ ಮೂಲಕ್ಕೆ ನಿಷ್ಠವಾಗಿ ಸರಳಗನ್ನಡದ ಪ್ರವಾಹಿ ಶೈಲಿಯಲ್ಲಿ ಇಡೀ ಪುರಾಣವನ್ನು ಅನುವಾದಿಸಿದ್ದೇವೆ.

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ।**

**ವಕ್ತಾ ದಶಸಹಸ್ರೇಶು ದಾತಾ ಭವತಿ ವಾ ನ ವಾ ॥**

ನೂರು ಜನರಲ್ಲಿ ಒಬ್ಬನು ಶೂರನಿರುತ್ತಾನೆ. ಸಾವಿರ ಜನರಲ್ಲಿ ಒಬ್ಬನು ಪಂಡಿತನಿರುತ್ತಾನೆ. ಹತ್ತುಸಾವಿರ ಜನರಲ್ಲಿ ಒಬ್ಬನು ವಾಕ್ ಚತುರನಿರುತ್ತಾನೆ. ಆದರೆ ಕೊಡುಗೈ ದಾನಿಯು ಎಲ್ಲಿಯಾದರೂ ಇರುವನೋ ಅಥವಾ ಇಲ್ಲವೋ!

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಹಾಗೂ ಸ್ವತಃ ಪಂಡಿತರಾದ ಶ್ರೀಹರಿಖೋಡೆಯವರು. ಹತ್ತುಸಾವಿರ ಸಿರಿವಂತರಲ್ಲಿ ಒಬ್ಬರಿಗೂ ಇರದಿರುವ ವಾಕ್‌ಚಾತುರ್ಯ, ಕವಿತ್ವಕೌಶಲ್ಯ ಇವರ ಸೊತ್ತಾಗಿದೆ. ಒಂದು ಗಾಯತ್ರೀ ಹೋಮ ಮಾಡಿಸಿದರೆ ಅದೊಂದು ಅಭೂತಪೂರ್ವವಾದ **'ನ ಭೂತೋ ನ ಭವಿಷ್ಯತಿ'** ಎನ್ನುವಂಥ ಮಹಾಕಾರ್ಯವಾಗಿತ್ತು. ಅದರ ವೈಭವ ಪೂರ್ಣವಾದ ಆಚರಣೆಯ ನೆನಪು ಬೆಂಗಳೂರು ನಾಗರಿಕರಲ್ಲಿ ಹಚ್ಚಹಸಿರಾಗಿಯೇ ಇದೆ.

ಮುಖ್ಯವಾಗಿ ಕೂರ್ಮಪುರಾಣವೇ ಮೊದಲಾದ ಶ್ರೀ ವೇದವ್ಯಾಸ ರಚಿತ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದರಪರ್ವತವನ್ನು ಹೊತ್ತಂತೆ, ಶ್ರೀಹರಿಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನ ಅನುವಾದನ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಸೌಕರ್ಯಗಳನ್ನು ಒದಗಿಸಿಕೊಡುತ್ತಿದ್ದಾರೆ.

ಶ್ರೀಹರಿಖೋಡೆಯವರ ಇನ್ನೊಂದು ಅಪೂರ್ವವಾದ ವೈಶಿಷ್ಟ್ಯ, ಅವರೊಬ್ಬ ಶ್ರೀಹರಿಯ ಪರಮಭಕ್ತರು, ಮಹಾಕವಿಗಳು. ದೇವರ ಮೇಲೆ ಅವರು ಭಾವಪೂರ್ಣವಾದ ಅನೇಕ ಹಾಡುಗಳನ್ನು, ಸುಶ್ರಾವ್ಯವಾದ ಕಾವ್ಯಗಳನ್ನೂ ಸ್ವಂತ ರಚಿಸಿದ್ದಾರೆ. ಶ್ರೀಹರಿಯ ಅಂಕಿತದಿಂದ ಅಲಂಕೃತವಾದ ಈ ಪದ್ಯಗಳು ಪುರಂದರದಾಸ, ಕನಕದಾಸ, ಜಗನ್ನಾಥದಾಸ ರಂಥ ದಾಸಕೂಟ ಧುರೀಣರ ಭಕ್ತಿಪರ ಹಾಡುಗಬ್ಬಗಳ ಹೆದ್ದಾರಿಯಲ್ಲಿ ಇರಿಸಿದ ಹೆಜ್ಜೇನಿನ ಹೆಜ್ಜೆಗಳಾಗಿವೆ. ಅನುಭವಿ ಸಂತ ಶರೀಫಸಾಹೇಬರ ಪ್ರಭಾವಲಯದ ಪ್ರಭಾವಿ ಪರಿಧಿಯಲ್ಲಿ ಚಂಕ್ರಮಣ-ಸಂಕ್ರಮಣ ಗೈಯುವ ಶ್ರೀಹರಿಖೋಡೆಯವರ ಆಡುನುಡಿಯ ತಾಳಲಯ ಬದ್ಧವಾದ ಹಾಡುಗಳು ಕೇಳುಗರ ಹೃದಯನಾಡಿಗಳನ್ನು ಮಿಡಿಯುತ್ತವೆ.

ಸ್ವತಃ ಸಿವಿಲ್ ಇಂಜನಿಯರಿಂಗ್ ಪದವಿ ಪಡೆದಿರುವ ಶ್ರೀಹರಿಖೋಡೆಯವರೇ ಬೆಂಗಳೂರಿನಲ್ಲಿ ಅತ್ಯಾಧುನಿಕ ಕಂಪ್ಯೂಟರ್ ಭವನವನ್ನು ನಿರ್ಮಿಸಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿನ ಕಂಪ್ಯೂಟರ್ ಭವನಗಳನ್ನು ಸ್ವತಃ ಭೇಟಿ ಮಾಡಿ, ಆ ಎಲ್ಲಾ ಭವನಗಳ ವಿನ್ಯಾಸದಲ್ಲಿನ ನ್ಯೂನತೆಗಳನ್ನು ಪರಿಶೀಲಿಸಿ, ಮನಗಂಡು ಹಾಗೂ ಅನುಕೂಲತೆಗಳನ್ನು ಮೆಚ್ಚಿ ಆಯಾ ಕಂಪ್ಯೂಟರ್ ಭವನಗಳ ಪಾಶ್ಚಾತ್ಯ ವಿನ್ಯಾಸಕರಲ್ಲಿ ಚರ್ಚಿಸಿ,

ಶ್ರೀಹರಿಖೋಡೆಯವರೇ ವಿನ್ಯಾಸಮಾಡಿರುವ ಹಾಗೂ ತಾವೇ ಖುದ್ದು ನಿಂತು ಕಟ್ಟಿಸಿರುವ **ಖೋಡೇ ಕಾಂಟ್ಯಾಕ್ಟ್ ಸೆಂಟರ್** ಎಂಬ ಕಂಪ್ಯೂಟರ್ ಭವನದಲ್ಲಿ ಒಂದು ಸಾವಿರ ಕಂಪ್ಯೂಟರ್ ಇಂಜನಿಯರುಗಳು, ವಿಜ್ಞಾನಿಗಳು ಅಹೋರಾತ್ರಿ ಕೆಲಸ ಮಾಡುತ್ತಿದ್ದಾರೆ. ಅದಕ್ಕಾಗಿ ನಮ್ಮ ಹಾಗೂ ಅವರ ಕುಲಸ್ವಾಮಿಯಾದ ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ ವೀರ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಈ ದ್ವಿತೀಯ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮುದ್ರಿಸಿರುವ **ಶ್ರೀ ವೆಂಕಟೇಶ್ವರ ಪ್ರಿಂಟರ್ಸ್**, ನಂ. 3, ಯಲ್ಲಪ್ಪ ರಸ್ತೆ, ಚಿಕ್ಕಮಾವಳ್ಳಿ (ಸುಶೀಲ ರಸ್ತೆ ಕ್ರಾಸ್) ಬೆಂಗಳೂರು-560 004 ಇದರ ಮಾಲೀಕರಾದ **ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ** ಮತ್ತು ಕುಟುಂಬದವರಿಗೆ ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮುವತ್ತು ವರ್ಷದ ಅನುಭವ ಹಾಗೂ ಈಗಿನ ಕಂಪ್ಯೂಟರ್ (ಡಿ.ಟಿ.ಪಿ.) ಅಕ್ಷರ ಜೋಡಣೆಯ ಅನುಕೂಲತೆಯ ಜೊತೆ, ಮಾಡುವ ಪ್ರತಿ ಕೆಲಸದಲ್ಲಿನ ವೈಯಕ್ತಿಕ ಶ್ರದ್ಧೆ ಮತ್ತು ಮುದ್ರಣ ಮಾಡುವ ಎಲ್ಲಾ ಕೆಲಸಗಳು ಅಚ್ಚುಕಟ್ಟಾಗಿರಬೇಕೆಂಬ ಸಂಕಲ್ಪದಿಂದ ಈ ಗ್ರಂಥ ಮುದ್ರಣ ಮಾಡಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜ ನಗರ, ಬೆಂಗಳೂರು ರವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಬರೆದಿದ್ದಾರೆ. ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ ವೀರ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.


ಮಹಾಮಹೋಪಾಧ್ಯಾಯ

24–5–2004 **ಪಂಢರೀನಾಥಾಚಾರ್ಯ ಗಲಗಲಿ**

ಹುಬ್ಬಳ್ಳಿ **ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ**-580 032

ಶ್ರೀ ಭಗವಾನ್ ವೇದವ್ಯಾಸರಿಂದ ರಚಿತವಾದ

# ವರಾಹ ಮಹಾಪುರಾಣ

## ಭಗವಂತನ ಮುಖದಲ್ಲಿ ಭೂದೇವಿ ಕಂಡ ಬ್ರಹ್ಮಾಂಡ — ಅಧ್ಯಾಯ - ೧

**ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥**

ಶ್ರೀಮನ್ನಾರಾಯಣನು ಸರ್ವಸದ್ಗುಣಗಳಿಂದ ಪರಿಪೂರ್ಣನು. ಅವನಲ್ಲಿ ಯಾವ ದೋಷ ಲೇಶವೂ ಇಲ್ಲ. ಜ್ಞಾನಗಮ್ಯನಾದ ಅವನು ಪರಮಪುರುಷಾರ್ಥ ರೂಪವಾದ ಮೋಕ್ಷವನ್ನು ಕೊಟ್ಟು ಕಾಪಾಡುವ ಮಹಾಪ್ರಭುವು. (ಇಷ್ಟು ಅರ್ಥ ನಾರಾಯಣ ಶಬ್ದಕ್ಕೆ) ಅಂಥ ಇಷ್ಟಾರ್ಥ ಪುರುಷಾರ್ಥ ಪ್ರದನಾದ ನಾರಾಯಣನನ್ನು ಮೊದಲು ವಂದಿಸಿ ಶೇಷದೇವರನ್ನೂ ಮತ್ತು ಜೀವ ಕೋಟಿಯಲ್ಲಿಯೇ ಉತ್ತಮರಾದ ವಾಯುದೇವರನ್ನೂ ಹಾಗೂ ಜಗದೊಡತಿಯಾದ ಶ್ರೀ ಲಕ್ಷ್ಮೀದೇವಿಯನ್ನೂ ಸರಸ್ವತಿಯನ್ನೂ ಮತ್ತು ಈ ಪುರಾಣ ಸಂಹಿತೆ ಯನ್ನು ರಚಿಸಿದ ವೇದವ್ಯಾಸ ದೇವರನ್ನೂ ನಮಸ್ಕರಿಸಿ 'ಜಯ' ಎಂದರೆ ಈ ವರಾಹ ಮಹಾ ಪುರಾಣವನ್ನು ಹೇಳಬೇಕು.

**ನಮಸ್ತಸ್ಮೈ ವರಾಹಾಯ ಲೀಲಯೋದ್ಧರತೇ ಮಹೀಮ್ ।**
**ಖುರಮಧ್ಯಗತೋ ಯಸ್ಯ ಮೇರುಃ ಖಣಖಣಾಯತೇ ॥**

ವರಾಹರೂಪಿಯಾದ ಆ ಭಗವಂತನಿಗೆ ನಮ್ಮ ನಮಸ್ಕಾರ. ಅಖಂಡ ಭೂ ಮಂಡಲವನ್ನೆಲ್ಲ ನೆಗಹಿ ಎತ್ತಿ ಹಿಡಿಯುವದೆಂದರೆ ಅವನಿಗೊಂದು ಆಟ. ವಿರಾಟ ರೂಪ ಧರಿಸಿದ ಈ ವರಾಹ ದೇವರ ಕಾಲಗೊರಸಿನ ಸಂದಿಯಲ್ಲಿ ಸೇರಿದ ಮೇರು ಪರ್ವತವು ಖಣಖಣ ಸದ್ದು ಮಾಡುತ್ತದೆ.

**'' ದಂಷ್ಟ್ರಾಗ್ರೇಣೋದ್ಧೃತಾ ಗೌರುದಧಿ ಪರಿವೃತಾ ಪರ್ವತೈರ್ನಿಮ್ನಗಾಭಿಃ ।**
**ಸಾಕಂ ಮೃತ್ಪಿಂಡವತ್ಪ್ರಾಗ್ ಬೃಹದುರುವಪುಷಾಽನಂತರೂಪೇಣಽ ಯೇನ '' ॥**

---

*★ ಜಯ ಶಬ್ದಕ್ಕೆ ಸಾಮಾನ್ಯವಾಗಿ ವಿಜಯ, ಗೆಲವು ಎಂದು ಅರ್ಥವಿದೆ. ಆದರೆ ಕೋಶದಲ್ಲಿ ''ಚತುರ್ಣಾಂ ಪುರುಷಾರ್ಥಾನಾಂ ಸಾಧನಂ ತು ಜಯೊ ಮತಃ'' ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಕು ಪುರುಷಾರ್ಥ ಸಿದ್ಧಿಗೆ ಸಾಧನವಾದುದೆಲ್ಲ ಜಯ ಎಂದು ಹೇಳಲಾಗಿದೆ. ಭವಿಷ್ಯ ಪುರಾಣದಲ್ಲಿ ರಾಮಾಯಣ, ಮಹಾಭಾರತ ಮತ್ತು ಹದಿನೆಂಟು ಪುರಾಣಗಳಿಗೆಲ್ಲ ಜಯ ಎಂದು ಕರೆಯಲಾಗುವದೆಂದು ತಿಳಿಸಿದ್ದಾರೆ.*

*ಅಷ್ಟಾದಶ ಪುರಾಣಾನಿ ರಾಮಸ್ಯ ಚರಿತಂ ಮಹತ್ । ಕಾರ್ಷ್ಣೋವೇದಃ ಪಂಚಮಶ್ಚ ಯಂ ಮಹಾಭಾರತಂ ವಿದುಃ । ಜಯೇತಿನಾಮ್ನಾ ಚೈತಾಂಸ್ತು ಪ್ರವದಂತಿ ಮನೀಷಿಣಃ॥*

*ಆದುದರಿಂದ ಇಲ್ಲಿ ಜಯ ಎಂದರೆ ಚತುರ್ವಿಧ ಪುರುಷಾರ್ಥವನ್ನೂ, ಗೆಲವು ನಲಿವುಗಳನ್ನೂ ಕೊಡುವ ಈ ವರಾಹ ಪುರಾಣ ಎಂದು ಅರ್ಥವನ್ನು ಜಯ ಶಬ್ದಕ್ಕೆ ಇಟ್ಟುಕೊಳ್ಳಬೇಕು.*

**"ಸೋಯಂ ಕಂಸಾಸುರಾರಿರ್ಮುರನರಕ ದಶಾಸ್ಯಾಂತಕೃತ್ಸರ್ವಸಂಸ್ಥ:**
**ಕೃಷ್ಣೋ ವಿಷ್ಣು: ಸುರೇಶೋ ನುದತು ಮಮ ರಿಪೂನಾದಿದೇವೋ ವರಾಹ:"**

ಆದಿದೇವನಾದ ಆ ವರಾಹಸ್ವಾಮಿಯು ನಮಗೆ ವೈರಿಗಳೇ ಇಲ್ಲದಂತೆ ಮಾಡಲಿ. ಅನಂತರೂಪಿಯಾದ ಅವನು ತನ್ನ ಹಂದಿ ದೇಹದ ಕೋರೆದಾಡೆಯ ತುದಿಯಿಂದ ಇಡೀ ಭೂಮಂಡಲವನ್ನೆಲ್ಲ ಒಂದು ಮಣ್ಣಿನ ಪಿಂಡದಂತೆ ಹಗುರಾಗಿ ಎತ್ತಿ ಹಿಡಿದಿದ್ದನು. ಅವನೆತ್ತಿದ ಆ ಪೊಡವಿಯ ಒಡಲಿನಲ್ಲಿ ಬೆಟ್ಟಗಳೆಷ್ಟೋ! ಭೋರ್ಗರೆಯುವ ಶರಧಿಗಳೆಷ್ಟೋ! ಕಂಸನನ್ನು ಕೊಂದವನೂ ಇವನೇ. ಮುರನನ್ನು ಮಣ್ಣು ಮುಕ್ಕಿಸಿದವನೂ ನರಕನನ್ನು ನಾಶಗೊಳಿಸಿದವನೂ ರಾವಣನನ್ನು ಸಂಹರಿಸಿದವನೂ ಇದೇ ಮಹಾಪ್ರಭು. ಇವನು ಎಲ್ಲರ ಎದೆಯಲ್ಲಿಯೂ ನೆಲೆಸಿದ್ದಾನೆ. ಇವನಿಗೇ ಕೃಷ್ಣ, ವಿಷ್ಣು, ಸುರೇಶ ಎಂದು ಬಗೆ ಬಗೆಯ ಹೆಸರುಗಳಿಂದ ಕರೆಯುತ್ತಾರೆ.

### *ಸೂತ ಉವಾಚ*

ಸೂತರು ಶೌನಕಾದಿಗಳನ್ನು ಕುರಿತು ಹೇಳುತ್ತಾರೆ. "ಹಿಂದೆ ವರಾಹರೂಪದಿಂದ ಪ್ರಳಯ ಸಾಗರದಲ್ಲಿ ಮುಳುಗಿದ ಭೂಮಂಡಲವನ್ನೆಲ್ಲ ಲೀಲೆಯಿಂದ ಎತ್ತಿ ಹಿಡಿದಾಗ ಆ ಭೂದೇವಿಯು ಆ ಪರಮೇಶ್ವರ"ನಿಗೆ ಇಂತು ಪ್ರಶ್ನೆ ಮಾಡಿದಳು.

**ಭೂದೇವಿ :-** ಪ್ರಭು, ಪರಮೇಶ್ವರ, ನೀನು ಪ್ರತಿಯೊಂದು ಕಲ್ಪದಲ್ಲಿಯೂ ಈ ರೀತಿಯಾಗಿ ನನ್ನನ್ನು ಉದ್ಧಾರಗೈಯುವೆ. ಆದರೂ ಮೊದಲು ಸೃಷ್ಟಿಯಲ್ಲಿಯೂ ಈಗಲೂ ನಿನ್ನ ರೂಪ ಸ್ವರೂಪಗಳನ್ನು ನಾನರಿಯೆ. ವೇದಗಳು ನಷ್ಟವಾದಾಗ ನೀನು ಮೀನನಾಗಿ ರಸಾತಳದಲ್ಲಿ ಹೊಕ್ಕು ಅಲ್ಲಿಂದ ವೇದರಾಶಿಯನ್ನು ತಂದು ಬ್ರಹ್ಮದೇವನಿಗೆ ಪ್ರದಾನ ಮಾಡಿದೆ. ಮದುಸೂದನ ! ದೇವದಾನವರು ಕೂಡಿ ಹಾಲ್ಗಡಲಿನಲ್ಲಿ ಮಂದರ ಬೆಟ್ಟವನ್ನಿಟ್ಟು ಕಡೆಯ ತೊಡಗಿದಾಗ ನೀನು ಆಮೆಯ ರೂಪವನ್ನು ಧರಿಸಿ ಅಪಾರ ಸಾಗರದಲ್ಲಿ ಮುಳುಗುತ್ತಿರುವ ಆ ಮಂದರಾಚಲವನ್ನು ಎತ್ತಿ ಹಿಡಿದೆ. ಜಗದೊಡೆಯಾ ! ಮತ್ತೆ ಈಗ ನೀರಿನಲ್ಲಿ ಮುಳುಗಿಹೋದ ನನ್ನನ್ನು ಪ್ರಳಯಜಲಧಿಯಲ್ಲಿ ನೀನು ವರಾಹ ರೂಪದಿಂದ ಒಳಹೊಕ್ಕು ರಸಾತಳದಿಂದ ನಿನ್ನ ಒಂಟೆದಾಡೆಯ ಮೇಲೆ ಹೊತ್ತು ಎತ್ತಿ ತಂದು ಮತ್ತೆ ಉದ್ಧಾರಮಾಡಿದೆ. ಬ್ರಹ್ಮದೇವನ ವರದಿಂದ ಉಬ್ಬಿ ಕೊಬ್ಬಿದ ಹಿರಣ್ಯಕಶಿಪುವು ಲೋಕ ಕಂಟಕನಾಗಿ ಜನರನ್ನು ಪೀಡಿಸತೊಡಗಿದಾಗ ನೀನು ನರಸಿಂಹನಾಗಿ ಅವನನ್ನು ಸಂಹರಿಸಿದೆ. ಭಗವನ್, ವಾಮನ ರೂಪಿಯಾದ ನೀನು ಬಲಿ ಚಕ್ರವರ್ತಿಯನ್ನು ಬಂಧಿಸಿದೆ. ಪರಶುರಾಮನಾಗಿ ಈ ಭೂಮಿಯಲ್ಲಿ ಕ್ಷತ್ರಿಯರೇ ಇಲ್ಲ ಎನಿಸಿದೆ. ೨೧ಬಾರಿ ದಾಳಿ ಮಾಡಿ ರಾಜಮಹಾರಾಜರನ್ನೆಲ್ಲ ಕೊಂದು ಹಾಕಿದೆ. ಅನಂತರ ನೀನು ಕ್ಷತ್ರಿಯರಾಜಕುಮಾರನಾಗಿ ರಾವಣಾಸುರನನ್ನು ವಧಿಸಿದೆ. ದೇವ-ದೇವಾ, ಈ ಎಲ್ಲ ನಿನ್ನ ಲೀಲೆಗಳನ್ನು, ಕಾರ್ಯಗಳನ್ನು ನಾನು ಅರಿಯಲಾರೆ. ಈಗ ನನ್ನನ್ನು ಪ್ರಳಯ ಸಮುದ್ರದ ಅಗಾಧ ನೀರ ರಾಶಿಯಿಂದ ನೀನು ಮೇಲಕ್ಕೆ ಎತ್ತಿ ತಂದಿರುವೆ. ಇನ್ನು ಮೇಲೆ ನನ್ನ ಮೈಮೇಲೆ ನೀನು ಸೃಷ್ಟಿಯನ್ನು ಹೇಗೆ ಪ್ರಾರಂಭಿಸುವೆ ? ಅದಕ್ಕೆ ಕಾರಣವಾವುದು ? ಈ ಸೃಷ್ಟಿಯ ಮೊದಲು

ಹೇಗೆ ? ಕೊನೆಯು ಎಂತು ? ನೀನು ಹುಟ್ಟಿಸಿದ ಪ್ರಪಂಚವನ್ನೆಲ್ಲ ರಕ್ಷಿಸುವವನಾರು ? ಇದನ್ನೆಲ್ಲ ನಿವಾರಣ ಮಾಡುವ ನಿನ್ನನ್ನು ತಿಳಿಯುವ ಉಪಾಯವೂ ಯಾವುದು ? ಯುಗಗಳನ್ನು ಎಣಿಸುವುದು ಎಂತು ? ಚತುರ್ಯುಗಗಳನ್ನು ಗಣಿಸುವುದು ಹೇಗೆ ? ಅಂಕಿ ಯಾವುದು ? ಸಂಖ್ಯೆ ಯಾವುದು ? ಆ ಯುಗಗಳಲ್ಲಿ ಏನು ವಿಶೇಷ ಉಂಟು ? ಆಗ ಯಾಗಿಗಳು ಯಾರು ? ಯೋಗಿಗಳು ಯಾರು ? ರಾಜರು ಯಾರು ? ಸಿದ್ಧರು ಯಾರು ? ಇದನ್ನೆಲ್ಲವನ್ನು ನನಗೆ ಸಂಕ್ಷೇಪವಾಗಿ ಅರುಹು. ನನ್ನ ಮೇಲೆ ಪ್ರಸನ್ನನಾಗು.

ಭೂದೇವಿಯ ಈ ಪ್ರಶ್ನಾವಳಿಯನ್ನು ಕೇಳಿ ವರಾಹ ರೂಪದಲ್ಲಿರುವ ಪರಮಾತ್ಮನು ಮಂದಹಾಸ ಮಾಡಿದನು. ನಗೆಯಿಂದಾಗಿ ಬಾಯಿ ತೆರೆದ ಆ ವರಾಹ ದೇವರ ಮುಖದಲ್ಲಿ ಭೂದೇವಿಯು ಬ್ರಹ್ಮಾಂಡವನ್ನೇ ಕಂಡಳು. ಅವನ ಬಾಯಲ್ಲಿ ಚಂದ್ರ, ಸೂರ್ಯ, ನವಗ್ರಹ, ಏಳು ಲೋಕಗಳನ್ನೂ ಅಷ್ಟವಸು ಮತ್ತು ರುದ್ರಗಣ ಸಿದ್ಧ, ದೇವ, ಋಷಿ, ಸಂಘಗಳನ್ನೂ ನೋಡಿದಳು. ಇದನ್ನೆಲ್ಲವನ್ನು ಕಂಡು ಭೂದೇವಿಯು ಭಯಕಂಪಿತಳಾಗಿ ಮತ್ತೊಮ್ಮೆ ಆ ವರಾಹ ಸ್ವಾಮಿಯ ತೆರೆದ ಮುಖದಲ್ಲಿ ಬಿಡುಗಣ್ಣಿನಿಂದ ದೃಷ್ಟಿಕ್ಷೇಪ ಮಾಡಿದ. ಆಗ ಈ ಪರಮೇಶ್ವರನು ನಾಲ್ಕು ತೋಳುಗಳುಳ್ಳ ತನ್ನ ನಿಜರೂಪದಿಂದ ಪ್ರಳಯಕಾಲದ ಹೆಗ್ಗಡಲಿನಲ್ಲಿ ಹಾವಿನ ಹಾಸಿಗೆಯ ಮೇಲೆ ಹಾಯಾಗಿ ಪವಡಿಸಿದ್ದು ಕಂಡಿತು. ಆ ಸರ್ಪಮಂಚದಲ್ಲಿ ಶಯನ ಮಾಡಿದ ನಂತರ ಅನಂತ ಪದ್ಮನಾಭನ· ಹೊಕ್ಕಳದಿಂದ ಒಂದು ತುಂಬು ತಾವರೆಯು ಎದ್ದು ಅರಳಿ ನಿಂತಿತು. ಆ ಕಮಲ ಕೋಶದಲ್ಲಿ ನಾಲ್ಕು ಮುಖದ ಬ್ರಹ್ಮನು ಉದ್ಭವಿಸಿದ್ದ. ತನ್ನ ನಾಲ್ಕೂ ಕೈಗಳನ್ನು ಜೋಡಿಸಿ ಭಗವಂತನನ್ನು ಕೊಂಡಾಡುತ್ತಿದ್ದ. ಇದನ್ನೆಲ್ಲ ನೋಡಿದ ಧರಣೀದೇವಿ ಕೈಜೋಡಿಸಿ ಆ ಪರಮೇಶ್ವರನನ್ನು ಹೊಗಳಿ ಹಾಡಿದಳು.

**ನಮಃ ಕಮಲ ಪತ್ರಾಕ್ಷ ನಮಸ್ತೇ ಪೀತವಾಸಸೇ ।**
**ನಮಃ ಸುರಾರಿ ವಿಧ್ವಂಸಕಾರಿಣೇ ಪರಮಾತ್ಮನೇ ॥**

ತಾವರೆಯ ಎಲೆಯಂತೆ ಕಣ್ಣುಗಳುಳ್ಳ, ಪೀತಾಂಬರವನ್ನು ತೊಟ್ಟ ಪರಮಾತ್ಮನೇ ನಿನಗೆ ನಮಸ್ಕಾರ. ದೈತ್ಯರನ್ನು ಧ್ವಂಸಗೈಯುವ ಭಗವನ್, ನಿನಗೆ ನನ್ನ ವಂದನೆ.

**ಕೇಶವಃ ಪಾತು ಮೇ ಪಾದೌ ಜಂಘೇ ನಾರಾಯಣೋ ಮಮ ।**
**ಮಾಧವೋ ಮೇ ಕಟಿಂ ಪಾತು ಗೋವಿಂದೋ ಗುಹ್ಯಮೇವ ಚ**
**ನಾಭಿಂ ವಿಷ್ಣುಸ್ತು ಮೇ ಪಾತು ಉದರಂ ಮಧುಸೂದನಃ ।**
**ಉರಸ್ತ್ರಿವಿಕ್ರಮಃ ಪಾತು ಹೃದಯಂ ಪಾತು ವಾಮನಃ**
**ಶ್ರೀಧರಃ ಪಾತು ಮೇ ಕಂಠಂ ಹೃಷೀಕೇಶೋ ಮುಖಂ ಮಮ ।**
**ಪದ್ಮನಾಭಸ್ತು ನಯನೇ ಶಿರೊ ದಾಮೋದರೋ ಮಮ**
**ಏವಂ ನ್ಯಸ್ಯ ಹರೇರ್ನ್ಯಾಸಂ ನಾಮಾನಿ ಜಗತೀ ತದಾ ।**
**ನಮಸ್ತೇ ಭಗವನ್ ವಿಷ್ಣೋ ಇತ್ಯುಕ್ತ್ವಾ ವಿರರಾಮ ಹ**

ಕೇಶವನು ನನ್ನ ಕಾಲುಗಳನ್ನು ರಕ್ಷಿಸಲಿ. ನಾರಾಯಣನು ಮೊಣಕಾಲನ್ನು ಕಾಯಲಿ, ಮಾಧವನು ನಡುವನ್ನು ಪಾಲಿಸಲಿ. ಗುಹ್ಯವನ್ನು ಗೋವಿಂದನು ಸಂರಕ್ಷಿಸಲಿ.

ಹೊಕ್ಕಳವನ್ನು ಶ್ರೀ ವಿಷ್ಣುವು ರಕ್ಷಿಸಲಿ. ನನ್ನ ಹೊಟ್ಟೆಯನ್ನು ಮಧುಸೂದನನು ಸರಿಯಾಗಿ ಇಡಲಿ. ತ್ರಿವಿಕ್ರಮನು ಹೃದಯವನ್ನು ರಕ್ಷಿಸಲಿ. ವಾಮನನು ಎದೆಯನ್ನು ರಕ್ಷಿಸಲಿ. ಅದರಂತೆ ಶ್ರೀಧರನು ನನ್ನ ಕೊರಳನ್ನೂ, ಹೃಷಿಕೇಶನು ಮುಖವನ್ನೂ, ಪದ್ಮನಾಭನು ಕಣ್ಣುಗಳನ್ನೂ, ದಾಮೋದರನು ತಲೆಯನ್ನೂ ಸಂರಕ್ಷಿಸಲಿ. ಹೀಗೆ ಶ್ರೀ ಹರಿಯ ಒಂದೊಂದು ನಾಮಗಳನ್ನು ತನ್ನ ಎಲ್ಲ ಅಂಗಾಂಗಗಳಿಗೆ ನ್ಯಾಸವಾಗಿಟ್ಟು ಭೂದೇವಿಯು "ನಮಸ್ತೇ ಭಗವನ್ ವಿಷ್ಣೋ" ಭಗವಂತನಾದ ಶ್ರೀ ವಿಷ್ಣುವೇ ನಿನಗೆ ನಮಸ್ಕಾರ, ಎಂದು ಹೇಳಿ ಭಕ್ತಿಯಿಂದ ವಂದಿಸಿದಳು. "ವಿಷ್ಣೋ ಭಗವಂತನಾದ ಶ್ರೀ ವಿಷ್ಣುವೇ, ನಿನಗೆ ನಮಸ್ಕಾರ, ಎಂದು ಹೇಳಿ ಭಕ್ತಿಯಿಂದ ವಂದಿಸಿದಳು.

ವರಾಹ ಮಹಾಪುರಾಣದಲ್ಲಿ ಮೊದಲನೇ ಅಧ್ಯಾಯ ಮುಗಿದುದು.



## ಶ್ವೇತದ್ವೀಪದಲ್ಲಿ ಕುಳಿತ ಕನ್ನೆಯ ಕೌತುಕದ ಕಥೆ | ಅಧ್ಯಾಯ - ೨

ಭೂದೇವಿಯ ಭಕ್ತಿಯುಕ್ತವಾದ ಈ ಸ್ತುತಿಯನ್ನು ಕೇಳಿ ಭಗವಾನ್ ವರಾಹ ಸ್ವಾಮಿಗೆ ಸಂತೋಷವಾಯಿತು. ಅವನು ಆ ಧರಣೀ ದೇವಿಗೆ ತನ್ನ ವಿಶ್ವರೂಪವನ್ನು ತೋರಿಸಿ ಮತ್ತೆ ತನ್ನ ಮೊದಲಿನ ವರಾಹ ರೂಪದಿಂದಲೇ ಅವಳೆದುರು ನಿಂತುಕೊಂಡು ನುಡಿದನು. "ಧರಣಿ" ನಿನ್ನ ಪ್ರಶ್ನೆಯು ಮಾರ್ಮಿಕವಾಗಿದೆ. ಈ ನಿನ್ನ ಪ್ರಶ್ನೆಗೆ ಉತ್ತರ ರೂಪವಾಗಿ ಸರ್ವಶಾಸ್ತ್ರಾರ್ಥ ಸಾರರೂಪವಾದ ಪುರಾಣ ವಿಷಯಗಳನ್ನೆಲ್ಲ ನಿನಗೆ ನಾನು ತಿಳಿಸುತ್ತೇನೆ. ಕೇಳು. ಸರ್ವಪುರಾಣಗಳಿಗೂ ಕೆಲವು ಸಾಮಾನ್ಯ ಲಕ್ಷಣಗಳುಂಟು. ಅವುಗಳನ್ನು ನಿನಗೆ ಹೇಳುತ್ತೇನೆ. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ ಹಾಗೂ ಬೇರೆ ಬೇರೆ ವಂಶಗಳಲ್ಲಿ ಉದಿಸಿದ ದೇವ, ಋಷಿ, ರಾಜ, ಮಾನವರ ಚರಿತ್ರ ಕಥನ ಇವು ಐದು ಪ್ರತಿಯೊಂದು ಪುರಾಣದಲ್ಲಿಯೂ ಇದ್ದೇ ಇರುತ್ತವೆ. ದೇವತೆಗಳ ಮತ್ತು ರಾಜರ ಚರಿತಗಳೂ ಪರಮಾತ್ಮನ ಅವತಾರವೂ ಪ್ರಾರಂಭವಾಗುವ ಆದಿಸರ್ಗದ ಇತಿಹಾಸವನ್ನು ನಿನಗಾಗಿ ಬಿತ್ತರಿಸುತ್ತೇನೆ. ಆಲಿಸು.

ವ್ಯಕ್ತ, ಅವ್ಯಕ್ತ, ಪ್ರಧಾನ, ಪುರುಷರೂಪಿಯಾದ ಶ್ರೀಮನ್ನಾರಾಯಣನಿಂದಲೇ ಈ ಸಮಸ್ತ ಪ್ರಪಂಚವು ರೂಪಗೊಂಡಿದೆ. ಅವ್ಯಾಕೃತದೇಹವುಳ್ಳ ಅಂಥ ಪರಮಪುರುಷನಾದ ನಾನು ಮೊದಲು ಗುಣಸಾಮ್ಯರೂಪವಾದ ಮೂಲ ಪ್ರಕೃತಿಯಿಂದ ಬ್ರಹ್ಮದೇವರ ಶರೀರಭೂತವಾದ ಮಹತ್ತತ್ವವನ್ನು ಸೃಷ್ಟಿ ಮಾಡಿದೆನು. ಅದು ಸಾತ್ವಿಕ, ರಾಜಸ, ತಾಮಸ ಎಂದು ಮೂರು ತೆರನಾಗಿದೆ. ಈ ಮಹತ್ವತ್ತ್ವದಿಂದ ವೈಕಾರಿಕ, ತೈಜಸ, ತಾಮಸ ಎಂಬ ಮೂರು ವಿಧ ಅಹಂಕಾರ ತತ್ತ್ವವು ಉಂಟಾಯಿತು. ವೈಕಾರಿಕ ಅಹಂಕಾರದಿಂದ ಇಂದ್ರಿಯಾಭಿಮಾನಿ ದೇವತೆಗಳೂ ತೈಜಸ ಅಹಂಕಾರದಿಂದ ಇಂದ್ರಿಯಗಳೂ ತಾಮಸಾಹಂಕಾರ ದಿಂದ ಪಂಚಮಹಾಭೂತಗಳು ತನ್ಮಾತ್ರೆಗಳೂ ಉತ್ಪನ್ನವಾದವು. ಸರ್ವಜ್ಞ ಶ್ರೇಷ್ಠನಾದ ನಾನು ಅವುಗಳಲ್ಲೆಲ್ಲ ಪ್ರವೇಶ ಮಾಡಿ ಬ್ರಹ್ಮಾಂಡದ ರಚನೆಯನ್ನು ಮಾಡಿದೆ.

ಶೂನ್ಯವಾದ ಶಬ್ದಗುಣಕ ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲ, ಜಲದಿಂದ ನೆಲದ ಜೀವಿಗಳಿಗೆಲ್ಲ ನಲ್ದಾಯಿಯಾದ ನೀನು ನನ್ನಿಂದ ಸೃಷ್ಟಿಸಲ್ಪಟ್ಟೆ. ನಿನಗೆ - ಪೃಥ್ವಿಗೆ - ನೀರಿನಂತೆ ತೇಜಸ್ಸೇ ಮೊದಲಾದ ಮಹಾಭೂತಗಳ ಸಂಬಂಧವುಂಟಾಗಲು ನೀರ ಮೇಲೆ ಮೊಟ್ಟೆಯಾಕಾರದ ಪಿಂಡದಂತಿರುವ ಒಂದು ದೊಡ್ಡ ಅಂಡವು ತೇಲತೊಡಗಿತು. ಅದು ಬೆಳೆದು ಬೃಹದಾಕಾರವಾದ ಬಳಿಕ ನಾನು ಅದರಲ್ಲಿ ಪ್ರವೇಶಿಸಿ ಸೃಷ್ಟಿಗೆ ಕಾರಣನಾದೆ. ನಾರ ಎಂದರೆ ನೀರು, ಸದ್ಗುಣಗಳು ಎಂದೂ ಅರ್ಥ, ನೀರಿನಲ್ಲಿ ಆಶ್ರಯ ಹೊಂದಿ ಇರುವವನಾದ್ದರಿಂದಲೂ ಮತ್ತು ಸಕಲ ಸದ್ಗುಣಗಳಿಗೆ ಆಧಾರ ಭೂತನಾಗಿದ್ದ ರಿಂದಲೂ ನನಗೆ ನಾರಾಯಣ ಎಂದು ಹೆಸರು ಬಂದಿದೆ. ಪ್ರತಿಕಲ್ಪದಲ್ಲಿಯೂ ನಾನು ಇದರಂತೆ ನೀರಿನ ರಾಶಿಯಲ್ಲಿ ಮಲಗಿ ''ಜಲಶಾಯಿ'' ಎನಿಸುತ್ತೇನೆ. ಪ್ರತಿಕಲ್ಪದಲಿಯೂ ಜಲರಾಶಿಯಲ್ಲಿ ಆಗ ಯೋಗನಿದ್ರೆಯಲ್ಲಿದ್ದ ನನ್ನ ನಾಭಿಯಿಂದ ಒಂದು ಕಮಲವು ಜನಿಸುತ್ತದೆ. ಆ ಕಮಲದಿಂದ ನಾಕು ಮೊಗದ ಬ್ರಹ್ಮನು ಹುಟ್ಟುತ್ತಾನೆ. ನನ್ನ ಹೊಕ್ಕಳದ ಹೊಕ್ಕರಣೆಯಿಂದ ಉದಿಸಿದ ತಾವರೆಯಂತೆ ಹುಟ್ಟಿಬಂದ ಆ ಬ್ರಹ್ಮನಿಗೆ ನಾನು ಪ್ರತಿಸಲದಂತೆ ಸೃಷ್ಟಿಮಾಡು ಎಂದು ಅಪ್ಪಣೆಯನ್ನು ನೀಡಿ ಆದಿಸರ್ಗಲ್ಲಿ ಅದೃಶ್ಯನಾದೆ.

ನನ್ನ ಆದೇಶವನ್ನು ಕೇಳಿ ಬ್ರಹ್ಮದೇವನು '' ಏನು ಸೃಷ್ಟಿ ಮಾಡುವುದು ? ಹೇಗೆ ಸೃಷ್ಟಿಮಾಡುವುದು '' ಎಂದು ಮುಂತಾಗಿ ಬಹು ವಿಧವಾಗಿ ಚಿಂತಿಸಿದನು. ಅವನಿಗೆ ಏನೂ ಹೊಳೆಯಲಿಲ್ಲ. ಯಾವದೂ ತಿಳಿಯಲಿಲ್ಲ. ಅದರಿಂದ ಬ್ರಹ್ಮದೇವನಿಗೆ ಕೋಪಬಂದಿತು. ಆ ಬ್ರಹ್ಮಕೋಪದಿಂದ ಓರ್ವಬಾಲಕನು ಜನಿಸಿದನು. ಪ್ರಪಂಚದ ಆ ಮೊಟ್ಟಮೊದಲಿನ ಕೂಸು ಅಳತೊಡಗಿತು. ರೋದನ ಮಾಡಿದ್ದರಿಂದ ಅದು 'ರುದ್ರ' ಎಂದು ಹೆಸರಾಯಿತು. ಬ್ರಹ್ಮದೇವರು ಅವನನ್ನು ಸಂತೈಯಿಸಿದರು. ಅವನು ಬ್ರಹ್ಮನಿಗೆ ''ನನಗೇನಾದರೂ ಹೆಸರು ಕೊಡು '' ಎಂದು ಕೇಳಿದನು. ರೋದನಮಾಡುವ ಅವನಿಗೆ 'ರುದ್ರ' ಎಂದೇ ಬ್ರಹ್ಮದೇವ ಹೆಸರನ್ನಿತ್ತನು. ಚತುರ್ಮುಖನು ತನ್ನ ಆ ಚೊಚ್ಚಿಲ ಗಂಡು ಮಗುವಿಗೆ ಸೃಷ್ಟಿಯನ್ನು ಮಾಡು ಎಂದು ಆಜ್ಞೆಯಿತ್ತನು. ಆಗ ಆ ರುದ್ರದೇವನು ಸೃಷ್ಟಿಮಾಡಲು ಶಕ್ತಿ ಸಾಲದೇ ತಪಸ್ಸನ್ನು ಆಚರಿಸಬೇಕೆಂದು ನೀರಿನಲ್ಲಿ ಮುಳುಗಿದನು. ಅದನ್ನು ನೋಡಿ ಬ್ರಹ್ಮದೇವನು ತನ್ನ ಬಲಗಾಲಿನ ಹೆಬ್ಬೆರಳಿನಿಂದ ಬೇರೊಬ್ಬ ಸೃಷ್ಟಿಗೈಯ್ಯುವ ಪ್ರಜಾಪತಿಯನ್ನೂ ಎಡಗಾಲಿನ ಹೆಬ್ಬೆರಳಿನಿಂದ ಅವನ ಮಡದಿಯನ್ನೂ ನಿರ್ಮಿಸಿದನು. ಆ ಪ್ರಜಾಪತಿಯು ಬ್ರಹ್ಮದೇವರ ಆ ಪ್ರಥಮ ಕನ್ನೆಯಲ್ಲಿ ಸ್ವಾಯಂಭುವ ಮನುವನ್ನು ಹೆತ್ತಳು. ಆ ಬ್ರಹ್ಮನಿಂದ ಪ್ರಜೆಗಳಿಗೆ ಸೃಷ್ಟಿಯ ಆಕಾಂಕ್ಷೆಯು ಉತ್ಪನ್ನವಾಯಿತು.

**ಭೂದೇವಿ :-** ದೇವತೆಗಳ ಅರಸನೇ ! ಆದ್ಯಸೃಷ್ಟಿಯ ಕತೆಯನ್ನು ಇನ್ನೂ ತುಸು ಬಿತ್ತರಿಸಿ ಹೇಳು. ಆ ಕಲ್ಪದಲ್ಲಿಯ ನಾರಾಯಣನು ಬ್ರಹ್ಮನಲ್ಲಿ ಬ್ರಹ್ಮರೂಪಿಯಾಗಿ ಇದ್ದು ಎಲ್ಲ ಪ್ರಾಣಿಗಳನ್ನು ಹೇಗೆ ಸೃಷ್ಟಿ ಮಾಡಿದ ಎಂಬುದನ್ನು ತಿಳಿಸು.

## ಶ್ರೀ ವರಾಹ ಉವಾಚ

**ವರಾಹ :-** ಕಳೆದ ಕಲ್ಪದ ಕೊನೆಗಾಲದಲ್ಲಿ ಸತ್ವಸಂಪನ್ನನಾದ ಬ್ರಹ್ಮನು ಸರ್ವಶೂನ್ಯವಾದ ಪ್ರಪಂಚವನ್ನು ನಿರೀಕ್ಷಿಸಿ ಸೃಷ್ಟಿಗೈಯಬೇಕೆಂದು ಯೋಚಿಸಿದನು. ಆಗ

ಪ್ರಪಂಚದ ತುಂಬ ಬರೀ ನೀರೇ ನೀರಾಗಿತ್ತು. ಆ ನೀರಿನಲ್ಲಿ ನಾರಾಯಣನು ಮಾತ್ರ ಪರಬ್ರಹ್ಮಸ್ವರೂಪಿಯಾಗಿ ಪವಡಿಸಿದ್ದನು. ಈ ಸಲಿಲಶಯನದಿಂದಲೇ ಅವನಿಗೆ 'ನಾರಾಯಣ' ಎಂಬ ಹೆಸರು ಬಂದಿತು.

ಬ್ರಹ್ಮಾಖ್ಯನಾದ ವಿಷ್ಣುವಿನ ಸನ್ನಿಧಾನೋಪೇತನಾದ ಚತುರ್ಮುಖ ಬ್ರಹ್ಮನು ಸೃಷ್ಟಿ ಮಾಡಲು ಮೊದಲಿಟ್ಟಾಗ ಐದು ಬಗೆಯ ಅವಿದ್ಯೆಯು ಮೊದಲು ಜನಿಸಿತು. 'ತಮಸ್ಸು', 'ಮೋಹ', 'ಮಹಾಮೋಹ', 'ತಾಮಿಸ್ರ', 'ಅಂಧತಾಮಿಸ್ರ' ಎಂದು ಅದು ಐದು ಬಗೆಯಾಗಿದೆ. ಅವಿದ್ಯಾಸೃಷ್ಟಿಯಿಂದ ಮುಂದೆ ಜನಿಸುವ ಪ್ರಾಣಿಗಳಿಗೆಲ್ಲ 'ತಮಸ್ಸು' ಎಂದರೆ ಅಜ್ಞಾನ, 'ನಾನು ನನ್ನದು' ಎಂಬ ಮೋಹ. ಜಗತ್ತಿನಲ್ಲಿಯ ಒಳ್ಳೇ ವಸ್ತುಗಳನ್ನು ತಾನೇ ಭೋಗಿಸಬೇಕು ಎಂಬ ಮಹಾಮೋಹ. ಅದಕ್ಕೆ ಯಾರಾದರೂ ಅಡ್ಡಿ ಒಡ್ಡಿದರೆ ಅವರ ಮೇಲೆ ಕಡುಕೋಪ ರೂಪವಾದ ತಾಮಿಸ್ರ, ಸ್ವಾರ್ಥಸಾಧನೆಯ ಧೂರ್ತತಾ ರೂಪವಾದ ಮಹಾತಾಮಿಸ್ರ ಮುಂತಾದ ದುರ್ಗುಣಗಳು ಯಥಾಯೋಗ್ಯವಾಗಿ ಬಂದು ಸೇರಿಕೊಂಡವು. ಮತ್ತೆ ಸೃಷ್ಟಿಗಾಗಿ ಚಿಂತಿಸತಕ್ಕ ಚತುರ್ಮುಖನಿಂದ ಮರ, ಪೊದೆ, ಬಳ್ಳಿ, ಬೀಳು, ಹುಲ್ಲು ಮುಂತಾಗಿ ಐದು ಬಗೆಯ ಸೃಷ್ಟಿಯು ಮೈದಾಳಿತು. ಚೇತನ ರಾಶಿಯಲ್ಲಿ ಇದು ಮೊಟ್ಟಮೊದಲು ಹುಟ್ಟಿದ್ದರಿಂದ ಮುಖ್ಯ ಸೃಷ್ಟಿಯೆಂದು ಇದು ಕರೆಯಲ್ಪಟ್ಟಿತು.

ಇದಕ್ಕಿಂತಲೂ ಒಳ್ಳೆ ಸೃಷ್ಟಿಯನ್ನು ಮಾಡಬೇಕೆಂದು ಹೊರಟ ಬ್ರಹ್ಮದೇವರು ವಿಚಾರಮಾಡಿದಾಗ 'ತಿರ್ಯಕ್‌ಸ್ರೋತ' ಎಂಬ ಪಶುಪಕ್ಷಿಗಳ ಸೃಷ್ಟಿಯಾಯಿತು. ಅವೆಲ್ಲವೂ ಜ್ಞಾನಶೂನ್ಯ. ತಮೋಮಯ, ಮನಬಂದಂತೆ ಅವುಗಳ ಜೀವನ. ಅವುಗಳಿಂದ ಏನನ್ನೂ ಸಾಧಿಸಲಿಕ್ಕಾಗದೆಂದು ಬಗೆದು ಬ್ರಹ್ಮದೇವನು 'ಊರ್ಧ್ವಸ್ರೋತಸ್' ಎಂಬ ನಾಲ್ಕನೇ ಸೃಷ್ಟಿಗೈದನು. ಇದರಿಂದ ದೇವತೆಗಳೂ ಜನಿಸಿದರು. ಅವರೆಲ್ಲರೂ ಪರಮ ಸಾತ್ವಿಕರೂ ಧರ್ಮನಿಷ್ಠರೂ ಗಗನ ವಿಹಾರಿಗಳೂ ಆಗಿದ್ದರು. ಈ ದೇವತೆಗಳೂ ಸಿದ್ಧರೇ ಹೊರತು ಸಾಧಕರಾಗಲಿಲ್ಲ. ಉಳಿದ ಸೃಷ್ಟಿಜೀವಿಗಳಿಗಂತೂ ಸಾಧನೆಯ ಬುದ್ಧಿಯಾಗಲಿ ಸಾಧನಾ ಸೌಕರ್ಯವಾಗಲಿ ಇಲ್ಲ. ಹೀಗಾಗಿ ಈವರೆಗಿನ ಸೃಷ್ಟಿಯೆಲ್ಲವೂ ಅಸಾಧಕವೇ ಆಯಿತೆಂದು ಬಗೆದು ಬ್ರಹ್ಮದೇವರು 'ಅರ್ವಾಕ್‌ಸ್ರೋತ' ಎಂಬ ಮತ್ತೊಂದು ಸೃಷ್ಟಿಯನ್ನು ಮಾಡಿದನು. ಆ ಸೃಷ್ಟಿಯಲ್ಲಿ ಜನಿಸಿದವರೇ 'ಮನುಷ್ಯರು.' ಇವರು ಸಾಧಕರಾಗಿದ್ದರು. ಈ ಮಾನವರಿಗೆ ಜ್ಞಾನವೇನೋ ಬೇಕಾದಷ್ಟಿದೆ. ಆದರೆ ತಮೋಗುಣದ ಪ್ರಾಚುರ್ಯವೂ ಅವರಲ್ಲಿ ಜಾಸ್ತಿ. ರಜೋಗುಣದ ಪ್ರಮಾಣವೂ ಹೆಚ್ಚಾಗಿ ಬಹುವಿಧವಾದ ಕರ್ಮಗಳನ್ನು ಮಾಡಿ ದುಃಖ ದುರವಸ್ಥೆಗಳಿಗೆ ಈಡಾಗುವರು. ಕರ್ಮಾಚರಣ ದುಃಖಾನುಸರಣ ಎರಡೂ ಅವರಿಗೆ ಬಿಟ್ಟಿದ್ದಲ್ಲ. ಹೀಗೆ ಈವರೆಗೆ ಆದ ಸೃಷ್ಟಿಗಳನ್ನು ನಿನಗೆ ಹೇಳಿದ್ದಾಯಿತು. ಇನ್ನೊಮ್ಮೆ ಅವುಗಳನ್ನು ಕೇವಲ ನಾಮ ನಿರ್ದೇಶ ಪೂರ್ವಕವಾಗಿ ಹೇಳುತ್ತೇನೆ ಕೇಳು. ಮಹತ್ತತ್ವದ ಸೃಷ್ಟಿಯು ಮೊದಲನೇ ಸೃಷ್ಟಿ. ಎರಡನೇಯದು ಪಂಚಭೂತ ಮತ್ತು ತನ್ಮಾತ್ರಗಳ ಸೃಷ್ಟಿ. ಮೂರನೆಯದು ಇಂದ್ರಿಯ ಮತ್ತು ಇಂದ್ರಿಯಾಭಿಮಾನಿ ದೇವತೆಗಳ ವೈಕಾರಿಕ ಸೃಷ್ಟಿ. ನಾಲ್ಕನೆಯದು ಮುಖ್ಯ ಸೃಷ್ಟಿ.

ಎಂದು ಕರೆಯಿಸಿಕೊಳ್ಳಲ್ಪಟ್ಟ ಗಿಡಬಳ್ಳಿ ಮೊದಲಾದ ಸ್ಥಾವರ ಸೃಷ್ಟಿ. ಪಶುಪಕ್ಷಿಗಳ 'ತಿರ್ಯಕ್‌ಸ್ರೋತ' ಎಂಬುದು ಐದನೇಯ ಸೃಷ್ಟಿ. ಆರನೇಯದೇ 'ಊರ್ಧ್ವ ಸ್ರೋತ' ಎಂಬ ಹೆಸರಿನ ದೇವತೆಗಳ ಸೃಷ್ಟಿ. ಏಳನೇಯದು 'ಅರ್ವಾಕ್ ಸ್ರೋತ' ಎಂಬ ಮನುಷ್ಯ ಸೃಷ್ಟಿ. ಎಂಟನೆಯದಾದ 'ಅನುಗ್ರಹ ಸೃಷ್ಟಿಯು' 'ಸಾತ್ವಿಕ ತಾಮಸ' ಎಂದು ಎರಡು ಬಗೆಯಾಗಿದೆ. ಮೊದಲಿನ ಮೂರು ಸೃಷ್ಟಿಗಳು ಅಂದರೆ 'ಮಹತ್‌ತತ್ವ', 'ಭೂತತನ್ಮಾತ್ರ' ಮತ್ತು 'ವೈಕಾರಿಕ' ಸೃಷ್ಟಿಗಳು. 'ಪ್ರಾಕೃತ ಸೃಷ್ಟಿ' ಅಂದರೆ ಪ್ರಕೃತಿಗೆ ಸಂಬಂಧಿಸಿದ ಸೃಷ್ಟಿ ಎಂದು ಕರೆಯಲ್ಪಡುತ್ತವೆ. ಹೀಗೆ ಮೂರು ಪ್ರಕೃತಿಯ ಸೃಷ್ಟಿಗಳಾದ ಬಳಿಕ ಮುಂದಿನ ಐದು ವಿಕೃತಿಯ ಸೃಷ್ಟಿಗಳು. ಈ ಮೂರು ಪ್ರಾಕೃತ ಮತ್ತು ಐದು ವೈಕೃತ. ಒಟ್ಟು ಎಂಟು ಸೃಷ್ಟಿಗಳಾದ ಬಳಿಕ ಒಂಭತ್ತನೆಯದಾದ 'ಕೌಮಾರ' ಸೃಷ್ಟಿಯು ಪ್ರಾಕೃತವೂ ಆಗಿದೆ. ವೈಕೃತವೂ ಆಗಿದೆ. ಕೌಮಾರ ಸೃಷ್ಟಿ ಎಂದರೆ ಸನಕಾದಿ ಬ್ರಹ್ಮದೇವರ ಮಾನಸಪುತ್ರರ ಸೃಷ್ಟಿ. ಈ ಮಹಾಮಹರ್ಷಿಗಳು ಬ್ರಹ್ಮದೇವರ ಮಾನಸ ಕುಮಾರರಾಗಿ ಜನಿಸಿದುದರಿಂದ ಈ ಒಂಭತ್ತನೆಯ ಸೃಷ್ಟಿಗೆ 'ಕೌಮಾರ ಸೃಷ್ಟಿ'ಯೆಂದೂ ಪ್ರಾಣಿಗಳಿಗೆ ಬಲವನ್ನೂ ಮನುಷ್ಯರಿಗೆ ಸಿದ್ಧಿಯನ್ನೂ ದೇವತೆಗಳಿಗೆ ತೃಪ್ತಿಯನ್ನೂ ಒದಗಿಸುವ ಎಂಟನೆಯ ಸೃಷ್ಟಿಯು 'ಅನುಗ್ರಹ ಸೃಷ್ಟಿ'ಯೆಂದೂ ಕರೆಯಲ್ಪಟ್ಟವು. ಭೂದೇವಿ, ಹೀಗೆ ಒಂಭತ್ತು ಬಗೆಯಾದ ಬ್ರಹ್ಮದೇವರ ಪ್ರಾಕೃತ ವೈಕೃತ ಸೃಷ್ಟಿಯ ಬಗೆಗೆ ನಾನು ನಿನಗೆ ತಿಳಿ ಹೇಳಿದೆ. ಮತ್ತೇನನ್ನು ಕೇಳ ಬಯಿಸುವೆ.

**ಭೂದೇವಿ :-** ಭಗವನ್ ! ಬ್ರಹ್ಮದೇವರ ಈ ನವವಿಧವಾದ ಸೃಷ್ಟಿಯು ಬೆಳೆದ ಬಗೆಯನ್ನು ನನಗೆ ಅರುಹಬೇಕು. ಬ್ರಹ್ಮದೇವನ ಮೊಟ್ಟಮೊದಲು ರುದ್ರದೇವರೇ ಮೊದಲಾದ ತಪೋಮೂರ್ತಿಗಳನ್ನೂ ಸನಕ ಸನಂದನಾದಿ ಬ್ರಹ್ಮರ್ಷಿಗಳನ್ನೂ ಮರೀಚಿ ಮೊದಲಾದ ಮಹಾಮುನಿಯಗಳನ್ನೂ ಸೃಷ್ಟಿಸಿದ. ಮರೀಚಿ, ಅತ್ರಿ, ಅಂಗಿರಸ, ಪುಲಹ, ಕ್ರತು, ಪುಲಸ್ತ್ಯ, ಪ್ರಚೇತಸ, ಭೃಗು, ನಾರದ ಮತ್ತು ವಶಿಷ್ಠ ಈ ಹತ್ತು ಜನರು ಮಹಾ ತಪಸ್ವಿಗಳೆಂದು ಪ್ರಸಿದ್ಧರಾದರು. ಸನಕಾದಿ ಮಹಾಮುನಿಗಳು ನಿವೃತ್ತಿ ಧರ್ಮದಲ್ಲಿಯೂ ಮರೀಚಿ ಮೊದಲಾದ ಪ್ರಜಾಪತಿಗಳು ಪ್ರವೃತ್ತಿ ಧರ್ಮದಲ್ಲಿಯೂ ಆ ಬ್ರಹ್ಮದೇವರ ಆಜ್ಞೆಯಂತೆ ಮುನ್ನಡೆದರು.

ಬ್ರಹ್ಮದೇವನ ಬಲಗಾಲಿನ ಹೆಬ್ಬೆರಳಿನಿಂದ ಉದಿಸಿದ ಮೊದಲಿನ ಪ್ರಜಾಪತಿಯ ವಂಶದಲ್ಲಿ ಈ ಚರಾಚರಾತ್ಮಕವಾದ ಜಗತ್ತೆಲ್ಲವೂ ಹುಟ್ಟಿಬಂದಿತು. ದೇವತೆಗಳೂ, ದೈತ್ಯರೂ, ಗಂಧರ್ವರೂ, ಹಾವುಗಳೂ ಹಕ್ಕಿಗಳೂ ಪರಮ ಧಾರ್ಮಿಕರಾದ ಅನೇಕ ಮುನಿ ಮನುಜರೂ ದಕ್ಷ ಪ್ರಜಾಪತಿಯ ಹೆಣ್ಣು ಮಕ್ಕಳಿಂದ ಹುಟ್ಟಿಬೆಳೆದರು. ಬ್ರಹ್ಮದೇವನು ಮೊದಲು ಸೃಷ್ಟಿಯನ್ನು ಮಾಡುವಾಗ ಏನೂ ಮಾಡಲಿಕ್ಕೆ ತೋಚದೆ ಕೋಪ ಕೆರಳಿದಾಗ ಹುಬ್ಬುಗಂಟು ಹಾಕಿದನು. ಅವನ ಹಣೆಯಿಂದ ಅರ್ಧನಾರೀಶ್ವರನೂ ಅತ್ಯಂತ ಪ್ರಚಂಡನೂ ಭೀಕರ ಸ್ವರೂಪಿಯೂ ಆದ ಮಗನು ಹುಟ್ಟಿ 'ರುದ್ರ' ಎಂದು ಪ್ರಸಿದ್ಧನಾದನು. ಅವನಿಗೆ ಬ್ರಹ್ಮದೇವನು 'ನಿನ್ನನ್ನು ನೀನು ವಿಭಾಗಿಸು' ಎಂದು ಅಪ್ಪಣೆಯಿತ್ತನು. ಬ್ರಹ್ಮನ ಅಣತಿಯಂತೆ ರುದ್ರದೇವನು ಹೆಣ್ಣು ಗಂಡು ತಾನೇ ಆಗಿ

ಇಬ್ಬಗೆಯಾಗಿ ನಿಂತುಕೊಂಡನು. ತನ್ನ ಪುರುಷ ರೂಪವನ್ನು ಮತ್ತೆ ಹನ್ನೊಂದು ಬಗೆಯಾಗಿ ವಿಭಾಗ ಮಾಡಿದನು. ಇವರೇ 'ಏಕಾದಶ ರುದ್ರರು' ಎಂದು ಪ್ರಸಿದ್ಧರಾಗಿದ್ದಾರೆ. ಇದಕ್ಕೆ 'ರುದ್ರ ಸರ್ಗ' ಅಥವಾ 'ರುದ್ರ ಸೃಷ್ಟಿ' ಎಂದು ಹೆಸರು.

## ಯುಗ ಮಹಾತ್ಮ್ಯೆ

ಈಗ ಸಂಕ್ಷೇಪವಾಗಿ ಯುಗ ಮಹಿಮೆಯನ್ನು ಹೇಳುತ್ತೇನೆ. ಕೃತ, ತ್ರೇತಾ, ದ್ವಾಪರ, ಕಲಿ ಎಂಬ ಹೆಸರಿನ ನಾಲ್ಕುಯುಗಗಳಲ್ಲಿ ಅನೇಕಾನೇಕ ಕೊಡುಗೈ ದೊರೆಗಳೂ ಮಹಾಯೋಗಿಗಳೂ ದೇವದಾನವರೂ ಹುಟ್ಟಿ ಬಹುತರವಾದ ದಾನಧರ್ಮ, ಪುಣ್ಯಕರ್ಮಗಳನ್ನು ಮಾಡಿದ್ದಾರೆ. ಅದನ್ನೆಲ್ಲ ಸಂಗ್ರಹವಾಗಿ ತಿಳಿಸುತ್ತೇನೆ. ಮೊದಲಿನ ಕಲ್ಪದಲ್ಲಿ 'ಸ್ವಾಯಂಭುವ' ಎಂಬ ಹೆಸರಿನ ಓರ್ವ ಮನು ಮಹಾ ಋಷಿಯು ಆಗಿಹೋದನು. ಅವನಿಗೆ ಪ್ರಿಯವ್ರತ, ಉತ್ತಾನಪಾದ ಎಂಬ ಈರ್ವರು ಧರ್ಮಾತ್ಮರಾದ ಮಕ್ಕಳು ಜನಿಸಿದರು. ಅವರ ಮಹಿಮೆ ಅಗಮ್ಯವಾಗಿತ್ತು. ಅವರ ಕೃತಿಗಳೂ ಅಮಾನುಷವಾಗಿದ್ದವು. ಹಿರಿಯನಾದ ಪ್ರಿಯವ್ರತ ಮಹಾರಾಜನು ಮಾಡಿದ ಯಜ್ಞಗಳಿಗೆ ಎಣಿಕೆ ಇಲ್ಲ. ಅವನ ಬಾಹುಬಲಕ್ಕಿಂತ ಮಿಗಿಲಾಗಿದ್ದಿತು ತಪೋಬಲ. ಅವನು ಹಿಡಿಹಿಡಿಯಾಗಿ ದಕ್ಷಿಣೆ ಕೊಟ್ಟು, ಹೊರೆ ಹೊರೆಯಾಗಿ ದಾನವಿತ್ತು, ವಿಧವಿಧವಾದ ಯಜ್ಞಗಳನ್ನೂ ಮಾಡಿದನು. ಭೂಮಂಡಲದ ಏಳೂ ದ್ವೀಪಗಳಲ್ಲಿ ಭರತನೇ ಮೊದಲಾದ ತನ್ನ ಮಕ್ಕಳನ್ನು ಪಟ್ಟದ ಮೇಲೆ ಕೂಡಿಸಿ ರಾಜ್ಯದ ಅಧಿಕಾರವನ್ನೂ ಒಪ್ಪಿಸಿ ತಾನು ವಿಶಾಲಾಕ್ಷೇತ್ರಕ್ಕೆ ಹೋಗಿ ಉಗ್ರವಾದ ತಪಸ್ಸನ್ನು ಆಚರಿಸಿದನು.

ಪ್ರಿಯವ್ರತ ಮಹಾರಾಜನು ವಿಶಾಲಾಕ್ಷೇತ್ರದಲ್ಲಿ ತಂಪಗೈಯುತ್ತ ಧರ್ಮಾನುಷ್ಠಾನ ತತ್ಪರನಾಗಿ ಇದ್ದಾಗ ನಾರದ ಮುನಿಗಳು ಅವನನ್ನು ಕಾಣಬೇಕೆಂದು ಅಲ್ಲಿಗೆ ದಯಮಾಡಿಸಿದರು. ಆಗಸದ ಅಂಗಳದಲ್ಲಿ ಪ್ರತಿ ಸೂರ್ಯನಂತೆ ಕಾಂತಿಕಿರಣಗಳಿಂದ ಬೆಳಗುವ ಆ ದೇವಮುನಿಗಳನ್ನು ಕಂಡು ಆನಂದಭರಿತನಾದ ಮಹಾರಾಜನು ಅತ್ಯಾದರದಿಂದ ಸ್ವಾಗತ ನೀಡಿ ಎದ್ದು ಅಭಿವಂದಿಸಿದನು. ಅವರಿಗೆ ಆಸನವಿತ್ತು. ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ಕುಶಲ ಪ್ರಶ್ನೆಗಳನ್ನು ಮಾಡಿ ಉಪಚರಿಸಿದನು. ಇಬ್ಬರೂ ಕೆಲ ಸಮಯ ಮಾತುಕತೆ ಆಡಿದ ಬಳಿಕ ಮಹಾರಾಜನು ನಾರದ ಮುನಿಗೆ ಒಂದು ಪ್ರಶ್ನೆಯನ್ನು ಮಾಡಿದನು.

**ಪ್ರಿಯವ್ರತ :-** ಪೂಜ್ಯರೇ, 'ಕೃತಯುಗ' ಎಂಬ ಹೆಸರುಳ್ಳ ಈ ಪುಣ್ಯಯುಗದಲ್ಲಿ ನೀವು ಏನಾದರೂ ಅತಿ ಅಶ್ಚರ್ಯಕರವಾದ ಸಂಗತಿಯನ್ನು ನೋಡಿದ್ದರೆ ಅಥವಾ ಕೇಳಿದ್ದರೆ ನನಗೆ ದಯವಿಟ್ಟು ತಿಳಿಸಿರಿ. ಅದನ್ನು ಕೇಳಿ ನಾರದರು ನಸುನಕ್ಕು ನುಡಿದರು

''ಅರಸರ ಇಂದ್ರ ! ನಿನ್ನೆ ನಾನು ಶ್ವೇತದ್ವೀಪಕ್ಕೆ ಹೋದಾಗ ಒಂದು ಆಶ್ಚರ್ಯವನ್ನು ನೋಡಿದೆನು. ಹಿಮಧವಲವಾದ ಈ ಶ್ವೇತದ್ವೀಪದಲ್ಲಿ ಬಾಯಿ ಬಿರಿದ ಹೊಂದವರೆಗಳಿಂದ ಅಂದವಾಗಿ ಕಾಣುವ ಒಂದು ಸರೋವರವಿದೆ. ಆ ಪದ್ಮಸರೋವರದ ದಂಡೆಯ ಮೇಲೆ ಬೊಗಸೆಗಣ್ಣಿನ ಓರ್ವ ಹೆಣ್ಣು ಹುಡುಗಿಯು ಕುಳಿತುಕೊಂಡಿದ್ದಳು. ಆ ನಿರ್ಜನ ದ್ವೀಪದ ಸರೋವರದ ತೀರದಲ್ಲಿ ನಿತಾಂತ ಏಕಾಂತ ಸ್ಥಳದಲ್ಲಿ ಏಕಾಕಿನಿಯಾಗಿ ಕುಳಿತ ಆ ಕನ್ಯೆಯನ್ನು ಕಂಡು ನನ್ನ ಕೌತುಕವು ಕೊನೆ ಏರೆ

ನಿಂತಿತು. ಅವಳ ಕಣ್ಣು ಸೂರ್ಯ ಬಿಂಬಕ್ಕೆ ಹಿಡಿದ ನೈದಿಲೆಯಂತೆ ವಿಶಾಲವಾಗಿದ್ದಿತು. ಮಾತಂತೂ ಮೃದು ಮಧುರ. ಮಧುಮಧುರ. ನಾನು ಅವಳನ್ನು ಕೇಳಿದೆ.

''ಭದ್ರೆ ನೀನಾರು ? ಶುಭಾಂಗಿನಿಯೇ, ನೀನು ಇಲ್ಲಿಗೆ ಹೇಗೆ ಬಂದೆ ? ನಿನಗೆ ಏನು ಕೆಲಸ ಇಲ್ಲಿ ? ಮೋಹನಾಂಗಿಯೇ, ಇವನ್ನೆಲ್ಲ ನನಗೆ ಅರುಹು.'' ಹೀಗೆ ನುಡಿದ ನನ್ನನ್ನು ಆ ಚಿಗರೆಗಣ್ಣಿನ ಚೆಲುವೆಯು ಎವೆ ಪಿಳುಕಿಸದೆ ಆತುರ ಕಣ್ಣಿನಿಂದ ಅಡಿಯಿಂದ ಮುಡಿಯವರೆಗೆ ನಿಟ್ಟಿಸಿ ನೋಡಿದಳು. ನನ್ನನ್ನು ಕಂಡ ಅವಳಲ್ಲಿ ಹಿಂದಿನ ಯಾವುದೋ ನೆನಪಿನ ನಿಧಿಯ ಹೊದರನ್ನು ಕೆದರಿದಂತೆ ಭಾವವು ಮುಖದ ಮೇಲೆ ಸುಳಿಯಿತು. ಅವಳು ತನ್ನ ಅಪಲಕ ಕಣ್ಣುಗಳನ್ನು ಎತ್ತಿ ನನ್ನನ್ನು ನೋಡುತ್ತಿದ್ದಂತೆಯೇ ನಾನು ಓದಿದ ವೇದಗಳೆಲ್ಲ ಮರೆತು ಹೋದವು. ಕಲಿತ ಶಾಸ್ತ್ರಗಳೆಲ್ಲ ಅಳಿಸಿ ಹೋದವು. ಅಧ್ಯಯನ ಮಾಡಿದ ಯೋಗ ಶಾಸ್ತ್ರಗಳು ಮಸಳಿಸಿದವು. ವೇದಂಗಳು ವಿಸ್ಮೃತವಾದವು. ಬಾಯಿಪಾಠಮಾಡಿದ ಸ್ಮೃತಿ ಗ್ರಂಥಗಳೆಲ್ಲ ಮನಃಪಟಲದಿಂದ ಜಾರಿ ಹೋದವು.

ಒಂದು ಕ್ಷಣ ಕಂಡಕೂಡಲೇ ಆ ಕುಮಾರಿಯು ನನ್ನ ಜ್ಞಾನಭಂಡಾರವನ್ನೆಲ್ಲ ಶೂನ್ಯ ಮಾಡಿ ಬಿಟ್ಟದ್ದನ್ನು ಕಂಡು ನನಗೆ ಕೌತುಕಕ್ಕಿಂತ ಕಡು ಚಿಂತೆಯಾಯಿತು. ಚಿಂತೆಗಿಂತ ಹೆಚ್ಚು ನಾಚಿಕೆಯಾಯಿತು. ನಾಚಿಕೆಗಿಂತ ಹೆಚ್ಚಿನ ದುಃಖವಾಯಿತು. ಹೀಗೆ ವಿವಿಧ ಭಾವಗಳ ಸಂಭ್ರಮದ ಸೆಳೆತಕ್ಕೆ ಸಿಕ್ಕ ನಾನು ಅವಳಿಗೆ ಶರಣುಹೋದೆನು. ಮತ್ತೊಮ್ಮೆ ಕಣ್ಣು ತೆರೆದು ನೋಡುವಷ್ಟರಲ್ಲಿ ಅವಳ ಶರೀರದಲ್ಲಿ ಓರ್ವ ದಿವ್ಯ ಪುರುಷನು ಕುಳಿತಿರುವುದು ಕಂಡಿತು. ಆ ಕುಮಾರಿಯ ಶರೀರಾಂತರ್ಗತನಾದ ಪುರುಷನ ಹೃದಯದಲ್ಲಿ ಮತ್ತೊಬ್ಬ ತೇಜಸ್ವಿ ಪುರುಷನು ಕುಳಿತುಕೊಂಡಿದ್ದನು. ಆ ಪುರುಷನ ವಕ್ಷಸ್ಥಳದಲ್ಲಿ ಮಗದೊಬ್ಬ ಕೆಂಪುಗಣ್ಣಿನ ಪುರುಷೋತ್ತಮನು ಮಂಡಿಸಿದ್ದನು. ಹನ್ನೆರಡು ಸೂರ್ಯರ ಕಾಂತಿಗಳ ಕಿರಣ ಸಮ್ಮೇಲನದಂತಿತ್ತು ಅವನ ದೇಹಪ್ರಭೆ. ಹೀಗೆ ಸರೋವರದ ದಂಡೆಯ ಮೇಲೆ ಕುಳಿತ ಆ ಸರಸಿಜಾಕ್ಷಿಯ ಶರೀರದಲ್ಲಿ ಮೂವರು ದಿವ್ಯ ಪುರುಷರು ನನ್ನ ಕಣ್ಣಿಗೆ ಬಿದ್ದರು. ಮರುಚಣದಲ್ಲಿ ಆ ಮೂವರು ಮಹಾನುಭಾವರಲ್ಲಿ ಒಬ್ಬರೂ ಅಲ್ಲಿ ಕಾಣಲಿಲ್ಲ. ಹೊನ್ನಿನಂತೆ ಹೊಳೆಯುವ ಚಪಲಗಣ್ಣಿನ ಆ ಕನ್ನೆ ಮಾತ್ರ ಆ ಕೊಳದ ತಡಿಯಲ್ಲಿ ಕುಳಿತದ್ದು ಕಂಡಿತು. ಅದನ್ನು ಕಂಡು ವಿಸ್ಮಯ ಸಂಭ್ರಾಂತನಾದ ನಾನು ಆ ಸರೋವರದ ದಂಡೆಯ ಮೇಲೆ ಕುಳಿತ ಆ ಸರೋಜಮುಖಿ ಕನ್ನೆಯನ್ನು ಕೇಳಿದೆ ''ಶುಭಾಂಗಿಯೇ, ನಿನ್ನ ದರುಶನ ಮಾತ್ರದಿಂದ ನನ್ನ ವಿದ್ಯೆ ಎಲ್ಲವೂ ಹೇಗೆ ನಷ್ಟವಾಯಿತು? ಏಕೆ ಮರೆತು ಹೋಯಿತು ? ಈ ನನ್ನ ವಿದ್ಯಾವಿನಾಶದ ಕಾರಣವೇನು ಹೇಳು.''

**ಕನ್ಯಾ :-** ನಾನು ಸಾವಿತ್ರಿ. ಎಲ್ಲ ವೇದಗಳಿಗೂ ನಾನೇ ತಾಯಿ. ನೀನು ನನ್ನನ್ನು ತಿಳಿಯದೇ ಹೋದ ಕಾರಣದಿಂದ ನಿನ್ನ ವೇದ ವಿದ್ಯೆ ಎಲ್ಲವೂ ಅಳಿಸಿಹೋಯಿತು.

ಅವಳ ಈ ನುಡಿಯನ್ನು ಕೇಳಿ ಬೆಕ್ಕಸಬೆರಗಾದ ನಾನು '' ಸುಮಂಗಲಿಯೇ ! ನಿನ್ನ ಶರೀರದಲ್ಲಿ ಇರುವ ಈ ಮೂವರು ಮಹಾಪುರುಷರು ಯಾರು ? '' ಎಂದು ಪ್ರಶ್ನೆ ಮಾಡಿದೆ.

**ಕನ್ಯಾ :-** ನನ್ನ ಶರೀರದಲ್ಲಿ ಸರ್ವಾಂಗ ಸುಂದರನಾಗಿ ಕಂಗೊಳಿಸಿದ ಮಹಾ ಪುರುಷನು ಋಗ್ವೇದಮಯನಾದ ವೇದ ಪುರುಷ. ಸಾಕ್ಷಾತ್ ಶ್ರೀಮನ್ ನಾರಾಯಣ.

ಅವನ ನಾಮೋಚ್ಚಾರ ಮಾತ್ರದಿಂದಲೇ ಪಾಪಗಳೆಲ್ಲವೂ ಸುಟ್ಟುಹೋಗುತ್ತವೆ. ಆ ನಾರಾಯಣನ ಹೃದಯದಲ್ಲಿ ನಿನ್ನ ಕಣ್ಣಿಗೆ ಕಂಡ ಪುರುಷನು ಯಜುರ್ವೇದ ಮಯನಾದ ಸಾಕ್ಷಾತ್ ಬ್ರಹ್ಮದೇವನು. ಅವನ ವಕ್ಷಸ್ಥಳದಲ್ಲಿ ಹೊಳೆದವನು ಸಾಮವೇದ ನಾಮಕನಾದ ಮತ್ತು ಸಾಮವೇದ ಪ್ರತಿಪಾದ್ಯನಾದ ರುದ್ರರೂಪಿಯಾದ ಶ್ರೀಮನ್‌ನಾರಾಯಣ. ಅವನ ಸ್ಮರಣೆಮಾಡಿದರೆ ಪಾಪಗಳೆಲ್ಲ ಪರಿಹಾರವಾಗುವುದು. ಹೀಗೆ ವೇದತ್ರಯರೂಪಿಯಾದ ಸರ್ವವೇದ ಪ್ರತಿ ಪಾದ್ಯನಾದ ಆ ನಾರಾಯಣನು ಬ್ರಹ್ಮ, ವಿಷ್ಣು, ಶಿವ ಈ ರೂಪತ್ರಯದಿಂದ ನನ್ನಲ್ಲಿ ವಾಸವಾಗಿದ್ದಾನೆ. ಇದೀಗ ನೀನು ಈ ಮೂವರು ವೇದ ಪುರುಷರನ್ನು ತ್ರಿಮೂರ್ತಿರೂಪದಿಂದ ದರ್ಶನ ಮಾಡಿಕೊಂಡೆ. ಈಗ ಆ ವೇದಶಾಸ್ತ್ರಗಳ ದಿವ್ಯ ಜ್ಞಾನವನ್ನು ನಿನಗೆ ಕರುಣಿಸುತ್ತೇನೆ. ನಾರದ, ಇಲ್ಲಿ ನನ್ನ ಮುಂದೆ ತೋರುವ ಈ ಸರೋವರವು ವೇದ ಸರೋವರವು. ಇದರಲ್ಲಿ ನೀನು ಸ್ನಾನಮಾಡು. ಈ ವೇದ ಸರೋವರದಲ್ಲಿ ಮಿಂದು ನಿಂದರೆ ಅವರಿಗೆ ಜನ್ಮಾಂತರದ ಕತೆ ಎಲ್ಲವೂ ಕಣ್ಣಿಗೆ ಕಟ್ಟುವುದು. ಕಳೆದು ಹೋದ ಜನ್ಮಗಳ ಸ್ಮರಣೆಯು ಹಿಂದೆ ನಡೆದ ಘಟನೆಗಳನ್ನೆಲ್ಲ ಕಣ್ಣಮುಂದೆ ತಂದು ನಿಲ್ಲಿಸುವುದು.'' ಆ ಕೌತುಕದ ಕನ್ಯೆಯಾದ ಸಾವಿತ್ರಿಯು ನನಗೆ ಹೀಗೆ ಹೇಳಿ ಅಲ್ಲಿಯೇ ಕಣ್ಮರೆಯಾದಳು. ಆನಂತರ ನಾನು ಆ ವೇದ ಸರೋವರದಲ್ಲಿ ಸ್ನಾನಮಾಡಿ ನಿನ್ನನ್ನು ಕಾಣಬೇಕೆಂದು ಇಲ್ಲಿಗೆ ಬಂದೆನು.

*ವರಾಹ ಮಹಾಪುರಾಣದಲ್ಲಿ ಎರಡನೇ ಅಧ್ಯಾಯ ಮುಗಿದುದು*



ನಾರದರ ಜನ್ಮಾಂತರದ ಕಥೆ

ಅಧ್ಯಾಯ - ೩

**ಪ್ರಿಯವ್ರತ :-** ನಾರದರೇ, ನಿಮಗೆ ಆ ವೇದ ಸರೋವರದಲ್ಲಿ ಸ್ನಾನ ಮಾಡುವದರಿಂದ ಜನ್ಮಾಂತರದ ನೆನಪು ಮರುಕಳಿಸಿರಬಹುದಲ್ಲವೇ! ನಿಮ್ಮ ಕಳೆದ ಜನ್ಮದ ಕತೆಯೇನು! ಎಂತು! ಎಲ್ಲ ಹೇಳಿರಿ. ಅದನ್ನು ತಿಳಿಯಬೇಕೆಂದು ನನಗೆ ಭಾರೀ ಕುತೂಹಲವಾಗಿದೆ. ತಿಳಿಸಿರಿ.

**ನಾರದ :-** ನೃಪೇಂದ್ರ, ಸಾವಿತ್ರಿಯ ಆಜ್ಞೆಯಂತೆ ನಾನು ಆ ವೇದ ಸರೋವರದಲ್ಲಿ ಇಳಿದು ಮುಳುಗು ಹಾಕಿದ ತಕ್ಷಣದಲ್ಲಿ ನನ್ನ ಹಿಂದಿನ ಸಾವಿರ ಜನ್ಮಗಳ ನೆನಪು ದಿಗ್ಗನೇ ಎದ್ದು ಬಂದಿತು. ಈಗ ಮೊದಲಿನ ಹಿಂದಿನ ಜನ್ಮದ ನನ್ನ ಕತೆಯನ್ನು ಹೇಳುವೆನು ಕೇಳು.

''ಪ್ರಿಯವ್ರತ, ನನ್ನ ಹಿಂದಿನ ಜನ್ಮದಲ್ಲಿ ನಾನು ಅವಂತೀಪುರದಲ್ಲಿ ಓರ್ವ ವೇದ ವೇದಾಂತ ಪಾರಂಗತನಾದ ವಿದ್ವಾನ್ ಬ್ರಾಹ್ಮಣನಾಗಿದ್ದೆ.'' ಆ ಬ್ರಾಹ್ಮಣ ಜನ್ಮದಲ್ಲಿ ನನ್ನ ಹೆಸರು ಸಾರಸ್ವತ ಎಂದಿತ್ತು. ನಾನು ಮಹಾ ಪಂಡಿತನಾಗಿದ್ದೆ. ಸಿರಿವಂತನೂ ಆಗಿದ್ದೆ. ಹೊಲ-ನೆಲ-ಸಂಪತ್ತು ಸಂಪಾದನೆ ಎಲ್ಲವೂ ನನ್ನದು ಸಂಪನ್ನವಾಗಿಯೇ ಇತ್ತು. ಮನೆ ತುಂಬ ಆಳು ಹೋಳು, ನೌಕರ ಚಾಕರರು. ಕಣಜಗಳ ತುಂಬ ಕಾಳುಕಡ್ಡಿಗಳ ಸಮೃದ್ಧಿ. ಆಗ ನಾನು ಬಹು ವಿವೇಕಿಯಾಗಿದ್ದೆ. ಇಷ್ಟೆಲ್ಲ ಐಶ್ವರ್ಯವಿದ್ದರೂ ಇದೆಲ್ಲ ಶಾಶ್ವತವಲ್ಲ, ಹೇಯ, ಎಂಬ ಬುದ್ಧಿಯು ನನಗೆ ಜನಿಸಿತು. ಇದಾವದೂ ನನ್ನ ಜೊತೆಗೆ ಬರುವುದಿಲ್ಲ ಎನಿಸಿ ವೈರಾಗ್ಯವೂ ಉತ್ಪನ್ನವಾಯಿತು. ಮಕ್ಕಳ ಮೇಲೆ ಕುಟುಂಬದ ಭಾರವನ್ನೆಲ್ಲ ಹೊರಿಸಿ ತಪಸ್ಸಿಗೆ ಹೋಗಬೇಕೆಂದು ನಾನು ಸಂಕಲ್ಪಿಸಿದೆ. ಹೀಗೆ ನಿರ್ಧರಿಸಿ ನಾನು ನನಗೆ ವಿಹಿತಕರ್ಮಗಳ ಅನುಷ್ಠಾನದಿಂದ ಶ್ರೀವಿಷ್ಣುವನ್ನೂ, ಶ್ರಾದ್ಧಗಳಿಂದ ಪಿತೃಗಳನ್ನೂ, ಯಜ್ಞಗಳಿಂದ ದೇವತೆಗಳನ್ನೂ, ಇತರ ಜನರನ್ನೂ ತೃಪ್ತಿಪಡಿಸಿದೆ. ನಂತರ ನಾನು ತಪಸ್ಸಿಗೆ ಹೋಗಬೇಕು. ಈಗ ಪುಷ್ಕರ ಎಂಬು ಪ್ರಸಿದ್ಧವಾದ ಸಾರಸ್ವತ ಕ್ಷೇತ್ರಕ್ಕೆ ಹೋಗಿ ಉಗ್ರ ತಪವನ್ನು ಆಚರಿಸಬೇಕೆಂದು ಸಂಕಲ್ಪಗೈದು ಅಲ್ಲಿಗೆ ಹೊರಟೆ. ಆ ಪುಷ್ಕರ ಕ್ಷೇತ್ರಕ್ಕೆ ಹೋಗಿ ನಾನು ಪುರಾಣಪುರುಷೋತ್ತಮನಾದ ಶ್ರೀಹರಿಯನ್ನು ಆರಾಧಿಸಿದೆ. ನಾರಾಯಣ ಮಂತ್ರ ಜಪವನ್ನು ಅತ್ಯಂತ ಶ್ರದ್ಧೆಯಿಂದ ಪಠಿಸಿದೆ ಮತ್ತು ಬ್ರಹ್ಮಪಾರ ಸ್ತೋತ್ರವನ್ನು ಪಠಿಸಿ ಆ ಭಗವಂತನನ್ನು ಭಕ್ತಿಭರಿತನಾಗಿ ಬಾಯಿ ತುಂಬ ಬಣ್ಣಿಸಿ ಸ್ತುತಿಸಿದೆ.

**ಪ್ರಿಯವ್ರತ :-** ಮಹನೀಯರೇ, ನೀವು ಜಪಿಸಿದ ಆ ಬ್ರಹ್ಮಪಾರ ಸೋತ್ರವು ಯಾವುದು ? ದಯವಿಟ್ಟು ತಿಳಿಸಿರಿ. ಆಗ ನಾರದರು ನುಡಿದರು.

*ನಾರದ ಉವಾಚ*

**ಪರಂ ಪರಾಣಾಮಮೃತಂ ಪುರಾಣಂ**
**ಪಾರಂ ಪರಂ ವಿಷ್ಣುಮನಂತವೀರ್ಯಂ ॥**
**ನಮಾಮಿ ನಿತ್ಯಂ ಪುರುಷಂ ಪುರಾಣಂ**
**ಪರಾಯಣಂ ಪಾರಗತಂ ಪರಾಣಾಂ ॥** ॥೧॥

ಪುರಾಣ ಪುರುಷನಾದ ಶ್ರೀವಿಷ್ಣುವನ್ನು ನಾನು ಅನುದಿನವೂ ವಂದಿಸುತ್ತೇನೆ. ಅವನು ಮರಣ ರಹಿತನು. ಬ್ರಹ್ಮಾದಿ ಶ್ರೇಷ್ಠ ಪುರುಷರಿಗಿಂತ ಅತ್ಯಂತ

ಶ್ರೇಷ್ಠತಮನಾದವನು. ಪುರಾತನನೂ, ಸಂಸಾರ ಸಮುದ್ರದ ಆಚೆಯ ದಂಡೆಯೇ ಅವನು. ಅವನ ಶಕ್ತಿಗೆ ಎಣೆಇಲ್ಲ. ಅವನು ಎಲ್ಲ ವಿಧವಾದ ಬಂಧ ಪಾರತಂತ್ರ್ಯಗಳಿಂದ ದೂರನಾಗಿದ್ದಾನೆ. ಅವನೇ ನನಗೆ ಗತಿ ಮತ್ತು ಶರಣು.

ಪುರಾತನಂ ತ್ವಪ್ರತಿಮಂ ಪುರಾಣಂ
ಪರಾತ್ಪರಂ ಪಾರಗಮುಗ್ರತೇಜಸಂ ॥

ಗಂಭೀರ ಗಂಭೀರಧಿಯಾಂ ಪ್ರಧಾನಂ
ನತೋಽಸ್ಮಿ ದೇವಂ ಹರಿಮೀಶಿತಾರಂ ॥ ॥ ೨ ॥

ಈ ಪ್ರಪಂಚದಲ್ಲಿ ಅವನಿಗೆ ಸರಿದೊರೆಯಾಗಿ ನಿಲ್ಲಬಲ್ಲ ಬೇರೆಯವರಿಲ್ಲ. ಅವನು ಅತ್ಯಂತ ಪ್ರಾಚೀನನೂ ಸಮೀಚೀನನೂ ಆಗಿದ್ದಾನೆ. ಪರಾತ್ಪರನಾದ ಅವನನ್ನು ಮೊದಲಿನಿಂದ ಕೊನೆಯವರೆಗೆ ಬಲ್ಲವರೂ ಯಾರೂ ಇಲ್ಲ ಅವನ ತೇಜಸ್ಸು ಅತ್ಯುಗ್ರವಾಗಿದೆ. ಅತಿ ಅಗಾಧವಾದ ಜ್ಞಾನದ ತವನಿಧಿಗಳಂತಿದ್ದ ಮಹಾಮಹಾ ಜ್ಞಾನಿಗಳಿಂದ 'ಸರ್ವಜ್ಞ' 'ಪ್ರಭು' ಎಂದು ಅವನು ಪೂಜಿತನಾಗಿದ್ದಾನೆ. ಇಂಥ ಸರ್ವಸ್ವಾಮಿಯಾದ ಶ್ರೀಹರಿಯನ್ನು ನಾನು ನಮಿಸುತ್ತೇನೆ.

ಪರಾತ್ಪರಂ ಚಾಪರಮಂ ಪ್ರಧಾನಂ
ಪರಾತ್ಪರಂ ಶುದ್ಧ ಪದಂ ವಿಶಾಲಂ ॥

ಪರಾತ್ಪರೇಶಂ ಪುರುಷಂ ಪುರಾಣಂ
ನಾರಾಯಣಂ ಸ್ತೌಮಿ ವಿಶುದ್ಧಭಾವಃ ॥ ॥ ೩ ॥

ಹಿರಿಯರಲ್ಲಿ ಹಿರಿಯನೂ ಅತ್ಯಂತ ಪ್ರಧಾನನೂ ಪರಿಶುದ್ಧವಾದ ಸ್ಥಾನಗಳಲ್ಲಿ ನೆಲಿಸುವವನೂ, ದೋಷದೂರನೂ ಗುಣಪೂರ್ಣನೂ, ಬ್ರಹ್ಮರುದ್ರಾದಿ ದೇವತೆಗಳಿಗೂ ನಿಯಾಮಕನೂ, ಪುರಾಣ ಪುರುಷೋತ್ತಮನೂ ಆದ ಆ ನಾರಾಯಣನನ್ನು ಶುದ್ಧಾಂತಃಕರಣದಿಂದ ನಾನು ಸ್ತೋತ್ರ ಮಾಡುತ್ತೇನೆ. ಸೃಷ್ಟಿಯ ಆದಿಕಾಲದಲ್ಲಿ ಶೂನ್ಯದ ಒಡಲಿನಲ್ಲಿಯೇ ಈ ಬ್ರಹ್ಮಾಂಡವನ್ನೆಲ್ಲ ನಿರ್ಮಿಸಿದ ಪುರುಷ ಶಬ್ದವಾಚ್ಯನಾಗಿ ಜಗತ್ತಿನಲ್ಲಿ ಪ್ರಸಿದ್ಧವಾದ ನಿರ್ಮಲವಾದ ಶ್ರೀಮನ್ನಾರಾಯಣನನ್ನು ನಾನು ಶರಣ ಹೊಂದುತ್ತೇನೆ. ಭವಸಾಗರದಿಂದ ಕಡೆ ಹಾಯಿಸಿ ಆಚೆಯ ದಡಕ್ಕೆ ಸೇರಿಸುವ ಆ ಮಹಾವಿಷ್ಣುವನ್ನು ನಾನು ಸರ್ವದಾ ಸ್ತುತಿಸುತ್ತೇನೆ. ಅವನ ರೂಪ, ವೀರ್ಯ ಕಾರ್ಯ ಮೊದಲಾದ ಗುಣಗಳಿಗೆ ಕೊನೆಯಿಲ್ಲ. ಅವನ ಅಸ್ತಿತ್ವಕ್ಕೆ ಆದಿ ಅಂತ್ಯವಿಲ್ಲ. ನೀತಿವಂತರಲ್ಲಿ ಅವನೇ ಪರಮ ಮುಖ್ಯನಾಗಿದ್ದಾನೆ. ಅವನೇ ಕ್ಷಮೆಯ ನೆಲೆ, ಶಾಂತಿಯ ಸೆಲೆ, ಭೂಮಿಯ ಒಡೆಯನು ಆಗಿದ್ದಾನೆ. ಅವನ ಪ್ರಭಾವ ಅನುಭಾವಗಳು ಹಿರಿದಾಗಿವೆ. ಅವನು ಮಂಗಳಮೂರ್ತಿ. ಅವನ ತಲೆಗಳು ಅನಂತ, ಕಾಲುಗಳು ಅಸಂಖ್ಯ. ತೋಳುಗಳು ಅಪರಮಿತ. ರವಿ ಚಂದ್ರರೇ ಅವನ ಕಂಣಾಗಿದ್ದಾರೆ. ಯಾವ ವಿಧವಾದ ನಾಶವೂ ಅವನಿಗೆ ಇಲ್ಲ. ಪಾಲ್ಗಡಲಿನಲ್ಲಿ ಪವಡಿಸಿ ಪ್ರಪಂಚವನ್ನೆಲ್ಲ ಪಾಲಿಸುವ ನಾರಾಯಣ ನಾಮಕನಾದ ಆ ಪರಮಾತ್ಮನನ್ನು ನಾನು ಸ್ತೋತ್ರ ಮಾಡುತ್ತೇನೆ.

ಪುರಾಪುರಂ ಶೂನ್ಯಮಿದಂ ಸಸರ್ಜ
ತದಾಸ್ಥಿತತ್ವಾತ್ಪುರುಷಃ ಪ್ರಧಾನಂ ।
ಜಗತ್ ಪ್ರಸಿದ್ಧಃ ಶರಣಂ ಮಮಾಸ್ತು
ನಾರಾಯಣೋ ವೀತಮಲಃ ಪುರಾಣಃ ॥ ೪ ॥

ಸೃಷ್ಟಿಯ ಆದಿಕಾಲದಲ್ಲಿ ಶೂನ್ಯದ ಒಡಲಿನಲ್ಲಿಯೇ ಈ ಬ್ರಹ್ಮಾಂಡವನ್ನೆಲ್ಲ ನಿರ್ಮಿಸಿದ. ಪುರುಷ ಶಬ್ದವಾಚ್ಯನಾಗಿ ಜಗತ್ತಿನಲ್ಲಿ ಪ್ರಸಿದ್ಧನಾದ ನಿರ್ಮಲವಾದ ಶ್ರೀಮನ್ನಾರಾಯಣನನ್ನು ನಾನು ಶರಣು ಹೊಂದುತ್ತೇನೆ.

ಪಾರಂ ಪರಂ ವಿಷ್ಣುಮಪಾರರೂಪ
ಪರಾತ್ಪರಂ ನೀತಿಮತಾಂ ಪ್ರಧಾನಂ ॥
ಧೃತಕ್ಷಮಂ ಶಾಂತಿಧರಂ ಕ್ಷಿತೀಶಂ
ಶುಭಂ ಸದಾ ಸ್ತೌಮಿ ಮಹಾನುಭಾವಂ ॥ ॥ ೫ ॥

ಭವಸಾಗರದಿಂದ ಕಡೆ ಹಾಯಿಸಿ ಆಚೆಯ ದಡಕ್ಕೆ ಸೇರಿಸುವ ಆ ಮಹಾವಿಷ್ಣುವನ್ನು ನಾನು ಸರ್ವದಾ ಸ್ತುತಿಸುತ್ತೇನೆ. ಅವನ ರೂಪ, ವೀರ್ಯ ಕಾರ್ಯ ಮೊದಲಾದ ಗುಣಗಳಿಗೆ ಕೊನೆಯಿಲ್ಲ. ಅವನ ಅಸ್ತಿತ್ವಕ್ಕೆ ಆದಿ ಅಂತ್ಯವಿಲ್ಲ. ನೀತಿವಂತರಲ್ಲಿ ಅವನೇ ಪರಮ ಮುಖ್ಯನಾಗಿದ್ದಾನೆ. ಅವನೇ ಕ್ಷಮೆಯ ನೆಲೆ, ಶಾಂತಿಯ ಸೆಲೆ, ಭೂಮಿಯ ಒಡೆಯನು ಆಗಿದ್ದಾನೆ. ಅವನ ಪ್ರಭಾವ ಅನುಭಾವಗಳು ಹಿರಿದಾಗಿವೆ. ಅವನು ಮಂಗಳಮೂರ್ತಿ.

ಸಹಸ್ರ ಮೂರ್ಧಾನನಮನಂತ ಪಾದಂ
ಅನಂತಬಾಹುಂ ಶಶಿಸೂರ್ಯ ನೇತ್ರಂ ॥
ತಮಕ್ಷರಂ ಕ್ಷೀರ ಸಮುದ್ರ ನಿದ್ರಂ
ನಾರಾಯಣಂ ಸ್ತೌಮ್ಯಮೃತಂ ಪರೇಶಂ ॥ ॥ ೬ ॥

ಅವನ ಪ್ರಭಾವ ಅನುಭಾವಗಳು ಹಿರಿದಾಗಿವೆ. ಅವನು ಮಂಗಳಮೂರ್ತಿ. ಅವನ ತಲೆಗಳು ಅನಂತ, ಕಾಲುಗಳು ಅಸಂಖ್ಯ. ತೋಳುಗಳು ಅಪರಮಿತ. ರವಿ ಚಂದ್ರರೇ ಅವನ ಕಣ್ಣಾಗಿದ್ದಾರೆ. ಯಾವ ವಿಧವಾದ ನಾಶವೂ ಅವನಿಗೆ ಇಲ್ಲ. ಪಾಲ್ಗಡಲಿನಲ್ಲಿ ಪವಡಿಸಿ ಪ್ರಪಂಚವನ್ನೆಲ್ಲ ಪಾಲಿಸುವ ನಾರಾಯಣ ನಾಮಕನಾದ ಆ ಪರಮಾತ್ಮನನ್ನು ನಾನು ಸ್ತೋತ್ರ ಮಾಡುತ್ತೇನೆ.

ತ್ರಿವೇದಗಮ್ಯಂ ತ್ರಿನವೈಕಮೂರ್ತಿಂ
ತ್ರಿಶುಕ್ಲಸಂಸ್ಥಂ ತ್ರಿಹುತಾಶಭೇದಂ ॥
ತ್ರಿತತ್ವಲಕ್ಷ್ಯಂ ತ್ರಿಯುಗಂ ತ್ರಿನೇತ್ರಂ
ನಮಾಮಿ ನಾರಾಯಣಮಪ್ರಮೇಯಂ ॥ ॥ ೭ ॥

ಋಗ್ವೇದ, ಯಜುರ್ವೇದ, ಸಾಮವೇದ ಎಂಬ ಮೂರು ವೇದಗಳಿಂದ ಆ ನಾರಾಯಣನನ್ನು ಅರಿಯಬಹುದು. ಅವನು ದ್ವಾದಶ ಮೂರ್ತಿ ಯುಳ್ಳವನಾಗಿದ್ದಾನೆ. ಶ್ವೇತದ್ವೀಪ, ಅನಂತಾಸನ, ವೈಕುಂಠ ಎಂಬ ಮೂರು ಸ್ಥಾನಗಳಲ್ಲಿ ವಾಸಮಾಡುತ್ತಾನೆ. ಸತ್, ಚಿತ್, ಆನಂದರೂಪಗಳಿಂದ ಉಪಾಸ್ಯನಾದ ಪರಮಾತ್ಮನು ಅವನೇ ಆಗಿದ್ದಾನೆ.

ಕೃತೇ ಽತಂ ರಕ್ತತನುಂ ತಥಾಚ
ತ್ರೇತಾಯುಗೇ ಪೀತತನುಂ ಪುರಾಣಂ ॥
ತಥಾ ಹರಿಂ ದ್ವಾಪರತಃ ಕಲೌಚ
ಕೃಷ್ಣೀಕೃತಾತ್ಮಾನ ಮಥೋ ನಮಾಮಿ ॥ ॥ ೮ ॥

ಕೃತಯುಗದಲ್ಲಿ ಶುಭ್ರವರ್ಣನೂ ತ್ರೇತಾಯುಗದಲ್ಲಿ ರಕ್ತವರ್ಣನೂ ದ್ವಾಪರದಲ್ಲಿ ಪೀತವರ್ಣನೂ ಆದ ಆ ಹರಿಯು ಕಲಿಯುಗದಲ್ಲಿ ಕೃಷ್ಣವರ್ಣನಾಗುತ್ತಾನೆ. ಆ ಭಗವಂತನು ಕೃತತ್ರಾತಾ ದ್ವಾಪರೆ ಎಂಬ ಯುಗತ್ರಯಗಳಲ್ಲಿ ಅವತಾರ ಮಾಡಿ ಜಗದೋದ್ಧಾರ ಮಾಡುತ್ತಾನೆ. ಮೂರು ಲೋಕಗಳಿಗೆಲ್ಲ ಅವನೇ ನಾಯಕನಾಗಿದ್ದಾನೆ. ಪೂರ್ತಿಯಾಗಿ ಯಾರಿಂದಲೂ ಅರಿಯಲು ಅಶಕ್ಯನಾದ ಇಂಥ ನಾರಾಯಣನನ್ನು ನಾನು ನಮಸ್ಕರಿಸುತ್ತೇನೆ.

ಸಸರ್ಜ ಯೋ ವಕ್ತ್ರತ ಏವ ವಿಪ್ರಾನ್
ಭುಜಾಂತರೇ ಕ್ಷತ್ರಮಥೋರು ಯುಗ್ಮೇ ॥
ವಿಶಃ ಪದಾಗ್ರೇಷು ತಥೈವ ಶೂದ್ರಾನ್
ನಮಾಮಿ ತಂ ವಿಶ್ವತನುಂ ಪುರಾಣಂ ॥ ॥ ೯ ॥

ಮುಖದಿಂದ ಬ್ರಾಹ್ಮಣರನ್ನೂ, ತೋಳುಗಳಿಂದ ಕ್ಷತ್ರಿಯರನ್ನೂ, ತೊಡೆಗಳಿಂದ ವೈಶ್ಯರನ್ನೂ, ಪಾದತುದಿಗಳಿಂದ ಶೂದ್ರರನ್ನೂ ಸೃಷ್ಟಿಮಾಡಿದ ಆ ಪುರಾಣ ಪುರುಷನಿಗೆ ನಮ್ಮ ನಮಸ್ಕಾರವಿರಲಿ.

ಪರಾತ್ಪರಂ ಪಾರಗತಂ ಪ್ರಮೇಯಂ
ಯುಧಾಂಪತಿ ಕಾರ್ಯತ ಏವ ಕೃಷ್ಣಂ ॥
ಗದಾಸಿಚರ್ಮಾರ್ಕಮೃತೋತ್ಥಪಾಣಿಂ
ನಮಾಮಿ ನಾರಾಯಣಮಪ್ರಮೇಯಂ ॥ ॥ ೧೦ ॥

ಸಕಲ ಲೋಕ ವಿಲಕ್ಷಣನೂ ಪರಾತ್ಪರನೂ ತಿಳಿದುಕೊಳ್ಳಲು ಅತ್ಯಂತ ಅರ್ಹತಮನೂ, ರಾಮಕೃಷ್ಣಾದಿ ಅವತಾರಗಳಿಂದ ಯುದ್ಧಮಾಡಿ ಶಿಕ್ಷಿಸುವವನೂ, ಭಕ್ತರ ಪಾಪಗಳನ್ನು ಕಳೆದು ಸೆಳೆದು ಕೃಷ್ಣ ಎಂದು ಹೆಸರಾದವನೂ, ಶಂಖ, ಚಕ್ರ, ಗದಾ, ಖಡ್ಗಗಳನ್ನು ಕೈಯಲ್ಲಿ ಧರಿಸಿದವನೂ ಆದ ಅಪ್ರಮೇಯ ಶ್ರೀಮನ್ನಾರಾಯಣನನ್ನು ನಾನು ನಮಸ್ಕಾರ ಮಾಡುತ್ತೇನೆ. ಈ ರೀತಿಯಾಗಿ ಬ್ರಹ್ಮಪಾರ ಸೋತ್ರದಿಂದ ನಾನು ಶ್ರೀಹರಿಯನ್ನು ಸ್ತುತಿಸಿದೆನು. ಅದರಿಂದ ಆ ಪರಮಾತ್ಮನು ಪ್ರಸನ್ನನಾದನು. ತುಂಬಿದ ಮೋಡದಂತೆ ಗಂಭೀರವಾದ ಧ್ವನಿಯಿಂದ ನನಗೆ ಹೇಳಿದನು. ''ನಿನಗೆ ಬೇಕಾದ ವರವನ್ನು ಕೇಳು''. ಹೀಗೆ ಅನೇಕ ಬಾರಿ 'ವರ ಕೇಳು', 'ವರ ಕೇಳು', ಎಂದು ಭಗವಂತನು ನನಗೆ ಒತ್ತಾಯಿಸಲು ನಾನು ಅವನ ಸುಂದರವಾದ ಶ್ರೀಚರಣದಲ್ಲಿಯೇ ಲೀನನಾಗಬೇಕೆಂದು ಕೇಳಿಕೊಂಡೆನು. ನನ್ನ ಈ ನುಡಿಗಳನ್ನು ಆಲಿಸಿ ಆ ದೇವ ದೇವನು ಅಪ್ಪಣೆ ಕೊಡಿಸಿದನು.

''ವಿಪ್ರೋತ್ತಮ, ನೀನು ನಿನ್ನ ಸ್ವರೂಪವನ್ನು ಹೊಂದು. ಅದರಿಂದ ನಿನಗೆ ಮಹಾಪ್ರಯೋಜನ ಉಂಟು. ನಾರ ಎಂದರೆ ನೀರು. ಪಿತೃಗಳನ್ನು ಉದ್ದೇಶಿಸಿ ನೀನು

ಭಕ್ತಿಯಿಂದ ನೀರನ್ನು ಅರ್ಥಾತ್ ನಾರನ್ನು ಕೊಟ್ಟದ್ದರಿಂದ ನಾರದ ಎಂದು ನಿನಗೆ ಇನ್ನು ಮುಂದೆ ಹೆಸರಾಗುವುದು.'' ಭಗವಂತನು ಹೀಗೆ ನುಡಿದು ಒಮ್ಮೆಲೇ ಅದೃಶ್ಯನಾದನು. ಅನಂತರ ನಾನು ಬಹುಕಾಲ ತಪಸ್ಸು ಮಾಡಿ ಆ ಶರೀರವನ್ನು ಬಿಟ್ಟು ಬ್ರಹ್ಮಲೋಕದಲ್ಲಿ ಪುನಃ ಉತ್ಪತ್ತಿಯನ್ನು ಹೊಂದಿದೆನು. ಬ್ರಹ್ಮದೇವರ ದಿವಸದ ಪ್ರಾರಂಭದಲ್ಲಿ ಹೊಸ ಸೃಷ್ಟಿಯು ಸುರುವಾದಾಗ ಚತುರ್ಮುಖದ ಹತ್ತು ಮಕ್ಕಳೊಂದಿಗೆ ನಾನೂ ಹುಟ್ಟಿ ಬಂದೆನು. ಇಲ್ಲಿಯೇ ಎಲ್ಲ ದೇವತೆಗಳ ಸೃಷ್ಟಿಯ ಪ್ರಾರಂಭ. ಇದೇ ನನ್ನ ಪ್ರಾಕೃತ ಜನ್ಮದ ಕತೆ. ಶ್ರೀ ನಾರಾಯಣನನ್ನು ಧ್ಯಾನ ಮಾಡಿಯೇ ನಾನು ಇಂಥ ಗೌರವದ ಸ್ಥಾನ ಪಡೆದಿದ್ದೇನೆ. ಇದರಂತೆ ನೀನಾದರೂ ವಿಷ್ಣು ಭಕ್ತನಾಗಿ ಭಗವದ್ಧ್ಯಾನ ತತ್ಪರನಾಗು'' ಎಂದು ನಾರದರೂ ಉಜ್ಜಯನೀ ಕ್ಷೇತ್ರದಲ್ಲಿ ತಪಃಶ್ಚರಣವನ್ನು ಮಾಡುತ್ತಲಿರುವ ಪ್ರಿಯವ್ರತ ಮಹಾರಾಜನಿಗೆ ತನ್ನ ಜನ್ಮಾಂತರದ ವೃತ್ತಾಂತವನ್ನೂ ಭಗವದ್ಧ್ಯಾನದ ಮಹಿಮೆಯನ್ನೂ ತಿಳಿಸಿ ಹೇಳಿದರು.

*ವರಾಹ ಮಹಾಪುರಾಣದಲ್ಲಿ ಮೂರನೇ ಅಧ್ಯಾಯ ಮುಗಿದುದು*



## ಅಶ್ವಿಶಿರಸ ಮಹಾರಾಜನ ಚರಿತ್ರೆ

**ಅಧ್ಯಾಯ - ೪**

**ಭೂದೇವಿ :-** ನಾರಾಯಣನೇ ಸರ್ವೋತ್ತಮನಾದ, ಸರ್ವಾಂತರ್ಯಾಮಿಯಾದ, ಸರ್ವತ್ರ ವ್ಯಾಪ್ತನಾದ ಪರಮಾತ್ಮ. ಅವನೇ ದೇವ ದೇವೋತ್ತಮ. ಅವನೇ ಭಗವಂತ ಎಂದು ನಾವು ತಿಳಿಯುವ ಬಗೆ ಹೇಗೆ ?

*ವರಾಹ ಉವಾಚ :*

**ಮತ್ಸ್ಯಃ ಕೂರ್ಮೋ ವರಾಹಶ್ಚ ನರಸಿಂಹೋಽಥ ವಾಮನಃ**
**ರಾಮೋ ರಾಮಶ್ಚ ಕೃಷ್ಣಶ್ಚ ಬುದ್ಧಃ ಕಲ್ಕೀತಿ ತೇ ದಶ ।**
**ಇತ್ಯೇತಾಃ ಕಥಿತಾಸ್ತಸ್ಯ ಮೂರ್ತಯೊ ಭೂತಧಾರಿಣೆ**
**ದರ್ಶನಂ ಪ್ರಾಪ್ತುಮಿಚ್ಛೂನಾಂ ಸೋಪಾನಾನಿ ಚ ಶೋಭನೇ ॥**

ಮಚ್ಛ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ ಎಂದು ನಾರಾಯಣನ ಹತ್ತು ಅವತಾರಗಳೂ ಅವನ ಸಾಕ್ಷಾತ್ ಸ್ವರೂಪ ಭೂತಗಳಾದ ಭಗವನ್ ಮೂರ್ತಿಗಳು. ಬಿಂಬರೂಪಿಯಾದ ಆ ಭಗವಂತನ ದಿವ್ಯಾ ಪರೋಕ್ಷವನ್ನು ಪಡೆಯಲು ಆ ಭಗವದ್ ರೂಪಗಳು ಉಪಾಸಕರಿಗೆ ಸೋಪನಗಳಂತೆ ಪರಮೋಪಾಯಗಳಾಗಿವೆ. ಆ ಭಗವಂತನ ಆ ಮೂಲ ರೂಪವನ್ನೂ ಅದರ ದಿವ್ಯ ಮಹಿಮೆಯನ್ನು ದೇವಾಧಿದೇವತೆಗಳು ಕೂಡ ಸಾಕಲ್ಯೇನ ತಿಳಿಯಲಾರರು. ಮತ್ತು ನೋಡಲಾರರು. ಅವರಿಗೆ ದಿವ್ಯ ಜ್ಞಾನವನ್ನು ಮಾಡಿಸಲಿಕ್ಕಾಗಿಯೇ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ರಾಮಾ, ಕೃಷ್ಣಾದಿ ರೂಪಗಳಿಂದ ಅವತಾರ ಮಾಡಿ ಅವರ ದುಃಖಗಳನ್ನು ಕಳೆದು ಭಕ್ತರ ಮನೋರಥಗಳನ್ನೂ ಪೂರ್ಣ ಮಾಡುತ್ತೇನೆ.

ಬ್ರಹ್ಮದೇವರು ಆ ಭಗವಂತನ ರಾಜಸಮೂರ್ತಿ. ಶಿವನು ಅವನ ತಾಮಸ ಮೂರ್ತಿ. ಮತ್ತು ಪ್ರಪಂಚವನ್ನು ನಿರ್ಮಿಸುವ ನೆಲಿಸುವ ಪಾಲಿಸುವ ಎಲ್ಲ ದೈವೀ ವ್ಯಕ್ತಿಗಳಲ್ಲಿ ಆ ಪರಮಾತ್ಮನು ಒಂದೊಂದು ವಿಭೂತಿ ರೂಪಗಳು ಇದ್ದುಕೊಂಡು ಆ ಕೆಲಸಗಳನ್ನು ಮಾಡಿಸುತ್ತವೆ. ಆದುದರಿಂದ ಅವೆಲ್ಲವುಗಳು ಭಗವಾನ್ ಮೂರ್ತಿಗಳೆಂದೇ ಕರೆಯಲ್ಪಡುತ್ತವೆ. ಅಸಾಧಾರಣ ಕಾರ್ಯನಿರ್ವಾಹಕವಾದ ಭಗವಂತನ ವಿಶಿಷ್ಟ ಸನ್ನಿಧಾನವೇ ಅದಕ್ಕೆ ಕಾರಣ. ಇಂಥ ಭಗವಾನ್ ಮೂರ್ತಿಗಳು ಎಂಟು ಇದ್ದು, ಅವುಗಳಲ್ಲಿ ಧರಾದೇವಿಯೇ, ನೀನು ಮೊದಲನೆಯವಳು. ಎರಡನೆಯದು ಜಲಮೂರ್ತಿ, ಮೂರನೇಯದು ತೇಜೋ ಮೂರ್ತಿ, ನಾಲ್ಕನೇಯದು ವಾಯುಮೂರ್ತಿ, ಐದನೇಯದು ಆಕಾಶ ಮೂರ್ತಿ, ಆರನೇಯದು ಕ್ಷೇತ್ರಜ್ಞಮೂರ್ತಿ, ಏಳನೇಯದು ಸೂರ್ಯಮೂರ್ತಿ, ಎಂಟನೆಯದು ಚಂದ್ರಮೂರ್ತಿ. ಈ ಎಂಟು ದೈವಿಕ ಮೂರ್ತಿಗಳಲ್ಲಿ ಆ ಹೆಸರಿನ ಭಗವದ್ ರೂಪಗಳು ಇದ್ದು ತತ್ತದ್ ಅಭಿಮಾನಿ ದೇವತೆಗಳಿಂದ ಎಲ್ಲ ಕಾರ್ಯಗಳನ್ನು ಮಾಡಿಸುತ್ತಲಿರುತ್ತವೆ. ಹೀಗೆ ಈ ಪ್ರಪಂಚವೆಲ್ಲವೂ ಶ್ರೀನಾರಾಯಣನಿಂದ ವ್ಯಾಪ್ತವಾಗಿರುತ್ತದೆ.''

ನಾರದರ ಈ ದಿವ್ಯವಾದ ಉಪದೇಶವನ್ನು ಕೇಳಿ ಪ್ರಿಯವ್ರತ ಮಹಾರಾಜನು ಭೂಮಂಡಲವನ್ನು ಏಳು ಬಗೆಯಾಗಿ ವಿಭಾಗ ಮಾಡಿ ಮಕ್ಕಳಿಗೆ ಒಪ್ಪಿಸಿ ತಪಸ್ಸನ್ನು ಆಚರಿಸಿ ನಾರಾಯಣಾತ್ಮಕನಾದ ಪರಬ್ರಹ್ಮನನ್ನು ಧ್ಯಾನಿಸಿ. ಪೂಜಿಸಿ, ಅವನಲ್ಲಿಯೇ ದೃಢವಾದ ಮನಸ್ಸನ್ನು ಇಟ್ಟವನಾಗಿ ಕೊನೆಗೆ ಮೋಕ್ಷವನ್ನು ಆ ನಾರಾಯಣನ ಪ್ರಸಾದದಿಂದ ಹೊಂದಿದನು. ಭೂದೇವಿ, ಹಿಂದೆ ಆ ನಾರಾಯಣನನ್ನು ಆರಾಧಿಸಿ ಸಂತೋಷಪಡಿಸಲು ಪ್ರಯತ್ನಿಸಿದ ಓರ್ವ ಮಹಾರಾಜನ ಚರಿತ್ರೆಯನ್ನು ಹೇಳುತ್ತೇನೆ ಆಲಿಸು.

ಪೂರ್ವಕಾಲದಲ್ಲಿ ಅಶ್ವಶಿರಸ್ ಎಂಬ ಪರಮಧಾರ್ಮಿಕವಾದ ರಾಜನಿದ್ದನು. ಅವನು ದೊಡ್ಡದಾದ ಒಂದು ಅಶ್ವಮೇದ ಯಜ್ಞವನ್ನು ಮಾಡಿದನು. ಬ್ರಾಹ್ಮಣರಿಗೆ ಕೈತುಂಬ ದಕ್ಷಿಣೆ ನೀಡಿದನು. ಯಜ್ಞವು ಮುಗಿದ ಬಳಿಕ ಅವನು ಅವಭೃತ ಸ್ನಾನವನ್ನು ಮಾಡಿ ಬ್ರಾಹ್ಮಣರಿಂದ ಕೂಡಿಕೊಂಡು ಕುಳಿತುಕೊಂಡಾಗ ಯೋಗಿ ಶ್ರೇಷ್ಠರಾದ ಕಪಿಲ ಮಹರ್ಷಿಯೂ ಮತ್ತು ಯೋಗಿವರೇಣ್ಯರಾದ ಜೈಗೀಷವ್ಯ ಮುನಿಗಳೂ ಅಲ್ಲಿಗೆ ಬಂದರು. ಆಗ ಮಹಾರಾಜನು ಎದ್ದು ನಿಂತು ಆ ಮಹಾಮುನಿಗಳಿಬ್ಬರಿಗೂ ಸ್ವಾಗತ ನೀಡಿದನು. ಆತ್ಮಾನಂದದಿಂದೆದ್ದು ಅವರಿಬ್ಬರನ್ನು ಉಚ್ಚಾಸನದ ಮೇಲೆ ಕೂಡಿಸಿ ಅರ್ಘ್ಯಪಾದ್ಯಾದಿಗಳನ್ನು ಇತ್ತು ಪೂಜಿಸಿದನು. ಯೋಗ ಶಾಸ್ತ್ರದಲ್ಲಿ ಅತಿ ಕುಶಲವಾದ ಆ ಮಹಾತ್ಮರು ತಾವಾಗಿಯೇ ತನ್ನ ಮನೆಗೆ ಬಂದಿದ್ದನ್ನು ನೋಡಿ ಆ ಮಹಾರಾಜನಿಗೆ ಮಹದಾನಂದವಾಗಿದ್ದಿತು. ಅಶ್ವಶಿರ ಮಹಾರಾಜನು ಕೈಮುಗಿದು ಆ ಆತ್ಮಜ್ಞಾನಿಗಳನ್ನು ಕೇಳಿದನು.

**ಅಶ್ವಶಿರ :-** ಪುರುಷ ಶ್ರೇಷ್ಠರಾದ ಬ್ರಾಹಣೋತ್ತಮರೇ, ತಮ್ಮಂಥ ಮಹನೀಯರು ದಯಮಾಡಿಸಿದಾಗ ನಮ್ಮಂಥ ಪಾಮರರ ಸಂಶಯಗಳೆಲ್ಲವೂ ಪರಿಹಾರವಾಗುತ್ತವೆ. ಪರಂಜ್ಯೋತಿ ಪರಮಾತ್ಮ ಸ್ವರೂಪಿಯಾದ ಆ ನಾರಾಯಣನನ್ನು ನಾವು ಆರಾಧಿಸುವ ಬಗೆ ಹೇಗೆ ತಿಳಿಸಿ ಕೊಡಿರಿ. ರಾಜನ ಈ ಪ್ರಶ್ನೆಯನ್ನು ಕೇಳಿ ಅವರಿಬ್ಬರು ಬ್ರಾಹ್ಮಣರು ಆಢ್ಯತೆಯಿಂದ ನುಡಿದರು -

''ರಾಜನೇ, ನೀನಾವ ಬೇರೆ ನಾರಾಯಣನನ್ನು ನಿನ್ನ ಗುರು ಎಂದು ಹೇಳುವೆ ? ನಿನ್ನ ಕಣ್ಣೆದುರು ಪ್ರತ್ಯಕ್ಷವಾಗಿ ತೋರುವ ನಾವೇ ನರನಾರಾಯಣರು.'' ಅವರ ಮಾತನ್ನು ಕೇಳಿ ಅಶ್ವಶಿರ ಅರಸನಿಗೆ ಅತ್ಯಾಶ್ಚರ್ಯವಾಯಿತು. ಅವನು ಕೌತುಕದಿಂದ ಬೆಪ್ಪಾಗಿ ಒಂದು ಕ್ಷಣ ಅವರಿಬ್ಬರನ್ನೂ ನಿಟ್ಟಿಸಿ ನೋಡಿ ಮತ್ತೆ ನುಡಿದ -

''ಮಹನೀಯರೇ, ತಾವಿಬ್ಬರೂ ದೊಡ್ಡ ಬ್ರಾಹ್ಮಣರು. ತಪಸ್ಸಿನಿಂದ ನಿಮ್ಮ ಮನೋಮಾಲಿನ್ಯದ ಕಿಟ್ಟೆಲ್ಲ ಸುಟ್ಟುಹೋಗಿದೆ. ತಾವಿಬ್ಬರೂ ಸಿದ್ಧಿಪಡೆದ ಮಹಾ ತಪಸ್ವಿಗಳಾಗಿದ್ದೀರಿ. ಇಂಥ ಜ್ಞಾನಿಗಳಾದ ನೀವು ನಾವೇ ನಾರಾಯಣ ಎಂದು ಹೇಗೆ ನುಡಿದಿರಿ ? ನಾರಾಯಣ ಎಂದರೆ ಏನು ಸಾಮಾನ್ಯನೇ ! ಅವನಿಗೆ ನಾಲ್ಕು ತೋಳು, ಪ್ರತಿಯೊಂದು ಕೈಯಲ್ಲಿಯೂ ಶಂಖ, ಚಕ್ರ, ಗದಾ, ಪದ್ಮಗಳು ಹೊಳೆಯುತ್ತಿರುತ್ತವೆ. ಅವನು ಪೀತಾಂಬರವನ್ನೂ ಧರಿಸಿರುತ್ತಾನೆ. ಗರುಡನ ಮೇಲೆ ಕುಳಿತಿರುತ್ತಾನೆ. ಮೂವತ್ತು ಮೂರು ಕೋಟಿ ದೇವತೆಗಳಲ್ಲಿ ಅವನೇ ಎಲ್ಲರಿಗಿಂತ ದೊಡ್ಡವನು. ಈ ನೆಲದಲ್ಲಿ ಅವನಿಗೆ ಯಾರು ಸಮಾನರಾಗ ಬಲ್ಲರು''. ಅರಸನ ಈ ವಚನವನ್ನು ಕೇಳಿ ಆ ತಪಸ್ವಿಗಳಿಬ್ಬರೂ ಭಾವಪೂರ್ಣವಾಗಿ ನಕ್ಕರು. ಮತ್ತು 'ರಾಜನ್ ನೋಡು ಆ ನಿನ್ನ ನಾರಾಯಣನನ್ನು' ಎಂದು ಒಡ ನುಡಿದರು. ಅವರಿಬ್ಬರೂ ತಪಸ್ವಿಗಳು ಹೀಗೆ ನುಡಿದ ಮರುಕ್ಷಣದಲ್ಲಿಯೇ ಕಪಿಲ ಮುನಿಯು ಸಾಕ್ಷಾತ್ ವಿಷ್ಣುವಾಗಿ ಚತುರ್ಭುಜಗಳಲ್ಲಿ ಶಂಖಚಕ್ರಾದಿಗಳನ್ನು ಧರಿಸಿ ಪೀತಾಂಬರವನ್ನು ಉಟ್ಟುಕೊಂಡು ಹರಿಯಾಗಿ ಹೊಳೆದನು. ಜೈಗೀಷವ್ಯನು ತಕ್ಷಣದಲ್ಲಿಯೇ ಗರುಡನಾಗಿ ಹರಿಯಾದ ಕಪಿಲನನ್ನು ಹೊತ್ತು ನಿಂತನು. ಹೀಗೆ ಗರುಡಾರೂಢನಾದ ನಾರಾಯಣನನ್ನು ನೋಡಿ ಅಶ್ವಶಿರ ರಾಜನ ಆಸ್ಥಾನದಲ್ಲಿದ್ದ ರಾಜಪ್ರಜೆಗಳೆಲ್ಲರೂ ಆಶ್ಚರ್ಯಾಘಾತದಿಂದ ತತ್ತರಿಸಿ ಹಾಹಾಕಾರ ಮಾಡತೊಡಗಿದರು. ಆದರೆ ಅಶ್ವಶಿರ ಮಹಾರಾಜನು ಮಾತ್ರ ಬೆದರದೆ ಬೆಚ್ಚದೆ. ಧೈರ್ಯದಿಂದ ಕೊರಳೆತ್ತಿ ಕೈಜೋಡಿಸಿ ಕೇಳಿದನು.

''ಬ್ರಾಹ್ಮಣೋತ್ತಮರೇ, ಶಾಂತರಾಗಿರಿ. ನಿಮ್ಮ ವಿಷ್ಣುವು ಇಷ್ಟೇ ಅಲ್ಲ. ಆ ವಿಷ್ಣು ಭಗವಾನನ ಹೊಕ್ಕಳದಲ್ಲಿ ಒಂದು ಕಮಲದ ಬಳ್ಳಿ ಇದೆ. ಅದರಲ್ಲಿ ಒಂದು ತಾವರೆ ಹೂ ಅರಳಿದೆ. ಆ ತಾವರೆಯ ಪುಷ್ಪದಲ್ಲಿ ಬ್ರಹ್ಮದೇವರು ಜನಿಸಿದ್ದಾನೆ. ಅವನೇ ನಮ್ಮ ಮಹಾವಿಷ್ಣು. ಅವನೇ ನನ್ನ ಪರಮೇಶ್ವರನಾದ ನಾರಾಯಣ. ನೀವು ಅಂತಲ್ಲ. ಅಂತೆಯೇ ನೀವು ಆ ನಾರಾಯಣನಲ್ಲ''. ರಾಜನ ಆ ನಿರ್ಧಾರದ ನುಡಿಯನ್ನು ಕೇಳಿ ಆ ಇಬ್ಬರೂ ಮುನಿ ಪುಂಗವರು ತಮ್ಮ ಯೋಗ ಮಾಯೆಯನ್ನು ಪರಿಷ್ಕರಿಸಿದರು. ಕೂಡಲೇ ಕಪಿಲ ಮುನಿಯು ಅನಂತ ಪದ್ಮನಾಭನು ಆದನು. ಅವನ ನಾಭಿ ಕಮಲದಲ್ಲಿ ಕುಳಿತ ಚತುರ್ಮುಖ ಬ್ರಹ್ಮನಾಗಿ ಜೈಗೀಷವ್ಯ ಮುನಿಯು ಮಿಂಚಿದನು. ಅವನಿಂದ ಉತ್ಪನ್ನನಾದ ರುದ್ರನೂ ಹೆಚ್ಚಿನ ಕಳೆ ಕಾಂತಿಯಿಂದ ಅಲ್ಲಿಯೇ ಶೋಭಿಸಿದನು. ಕೆಂಗಣ್ಣುಗಳಿಂದ ಕಂಗೊಳಿಸುವ ಆ ಪದ್ಮನಾಭನನ್ನೂ ಅವನ ಹೊಕ್ಕಳದಲ್ಲಿ ಹುಟ್ಟಿದ ಕಮಲಾಸನದಲ್ಲಿ ಕುಳಿತ ಕಾಲಾಗ್ನಿಯಂತೆ ತೇಜಸ್ವಿಯಾದ ಬ್ರಹ್ಮದೇವನನ್ನೂ ನೋಡಿ ಅಶ್ವಶಿರ ಮಹಾರಾಜನು ಇಂತು ನುಡಿದನು.

''ಜಗದೊಡೆಯನಾದ ಆ ನಾರಾಯಣನು ಹೀಗೆ ಎಲ್ಲರ ಚರ್ಮಚಕ್ಷುಸ್ಸಿಗೆ ಗೋಚರನಾಗುವವನಲ್ಲ. ಇದೆಲ್ಲವೂ ನನ್ನಲ್ಲಿಗೆ ಬಂದ ಆ ಇಬ್ಬರು ಯೋಗಿಗಳ

ಮಾಯೆಯ ಮಹಿಮೆಯಾಗಿದೆ. ಭಗವಾನ್ ಶ್ರೀಹರಿಯು ಸರ್ವತ್ರ ವ್ಯಾಪ್ತನಾಗಿದ್ದಾನೆ. '' ಅರಸನ ಈ ಮಾತು ಮುಗಿಯುವಷ್ಟರಲ್ಲಿ ಅವನ ಅರಮನೆ ಆಸ್ಥಾನಗಳ ತುಂಬ ತಗಣೆಗಳು ಹರಿದಾಡಿದವು. ಸೊಳ್ಳೆಗಳು ಹಾರಾಡಿದವು, ಹೇನುಗಳು ಸೂರಾಡಿದವು, ತುಂಬಿಗಳು ಎಲ್ಲಕಡೆಗೆ ತುಂಬಿದವು, ಹಕ್ಕಿಗಳು ಕಿಕ್ಕಿರಿದು ನೆರೆದವು, ಹಾವುಗಳು ಪೂತ್ಕರಿಸಿದವು, ಕುದುರೆ, ಆನೆ, ಆಕಳಗಳೂ, ಹುಲಿ, ಸಿಂಹ, ನರಿ, ನಾಯಿಗಳೂ, ಅರಮನೆಯ ತುಂಬ ತುಂಬಿ ಬಿಟ್ಟವು. ಒಮ್ಮೆಲೇ ರಾಶಿ ರಾಶಿಯಾಗಿ ಕೋಟ್ಯಾವಧಿ ಸಂಖ್ಯೆಯಲ್ಲಿ ಉದಿಸಿಬಂದ ಪಶು, ಪಕ್ಷಿ, ಕ್ರಿಮಿ, ಕೀಟ ಕೋಟಿಗಳನ್ನು ಕಂಡು, ಅಶ್ವಶಿರರಾಜನು ದಿಗ್ಭ್ರಮೆಗೊಂಡು ಕೈ ಜೋಡಿಸಿ ಆ ಕಪಿಲ ಜೈಗೀಷವ್ಯರನ್ನು '' ಪೂಜ್ಯರೆ, ಇದು ಏನು ? '' ಎಂದು ಭಕ್ತಿಯಿಂದ ಕೇಳಿದನು. ಅದಕ್ಕೆ ಅವರಿಬ್ಬರೂ ಮುನಿಗಳು ಉತ್ತರಿಸಿದರು.

''ರಾಜನ್ ! ವಿಷ್ಣುವಿನನ್ನು ಪೂಜಿಸುವುದು ಹೇಗೆ! ಅವನನ್ನು ಹೊಂದುವದು ಹೇಗೆ ? ಒಬ್ಬಂಟನಾದ ಅವನು ಎಲ್ಲ ಕಡೆಗೂ ವಾಸಿಸುವುದು ಹೇಗೆ ? ಎಂದು ಮುಂತಾದ ನಿನ್ನ ಸಂದೇಹ ಗರ್ಭಿತವಾದ ಪ್ರಶ್ನೆಗೆ ನಾವು ಈಗ ಉತ್ತರ ಕೊಟ್ಟಿದ್ದೇವೆ. ಎಲ್ಲ ಬಲ್ಲ ಆ ನಾರಾಯಣನು ನಿನ್ನ ಸಂಶಯವನ್ನು ತಿಳಿದು ಅದಕ್ಕೆ ಸರಿಯಾದ ಸಮಾಧಾನವನ್ನು ಪ್ರತ್ಯಕ್ಷ ನಿರ್ದಶನದಿಂದ ಕೊಡಬೇಕೆಂದು ನನ್ನ ಈ ಕಪಿಲ ರೂಪದಿಂದ ಇಲ್ಲಿಗೆ ಬಂದಿದ್ದಾನೆ. ಸಾಂಖ್ಯಶಾಸ್ತ್ರವನ್ನು ಜಗತ್ತಿಗೆ ಉಪದೇಶಮಾಡಲು ಜ್ಞಾನಕಾರ್ಯಾರ್ಥವಾಗಿ ಅವತಾರ ಮಾಡಿದ ನಾನು (ಕಪಿಲದೇವ) ಆ ನಾರಾಯಣನ ಸಾಕ್ಷಾತ್ ಅಂಶ ಭೂತನೇ ಸರಿ. ನಿನ್ನ ಭಕ್ತಿ, ಮತ್ತೂ ತಪಸ್ಯೆಗಳಿಗೆ ಮೆಚ್ಚಿ ನಿನಗೆ ನನ್ನ ಯಥಾರ್ಥ ದರ್ಶನವನ್ನು ಮಾಡಿಸಬೇಕೆಂದು ಇಲ್ಲಿಗೆ ಬಂದಿದ್ದೇನೆ, ನನ್ನ ಪ್ರಭಾವದಿಂದ ನಿನಗೆ ಭಗವಂತನ ದಿವ್ಯ ಸ್ವರೂಪವನ್ನು ಕಾಣಿಸಿದ್ದೇನೆ. ನಿನ್ನ ಅರಮನೆಯ ತುಂಬ ಹರಿದು ಹಾರಾಡುವ ಈ ಪ್ರಾಣಿಗಳ ದೃಷ್ಟಾಂತದಿಂದ ಎಲ್ಲ ಪ್ರಾಣಿಗಳಲ್ಲಿಯೂ ಪರಮಾತ್ಮನು ವಾಸವಾಗಿದ್ದು ಅವೆಲ್ಲವೂ ವಿಷ್ಣುವಿನಿಂದಲೇ ಪ್ರೇರಿತವಾಗಿ ಚಲಿಸುತ್ತವೆ. ನೆಲಿಸುತ್ತವೆ. ಬಾಳುತ್ತವೆ. ಬದುಕುತ್ತವೆ. ಇವುಗಳ ಸೇವೆಯೇ ಸರ್ವಪ್ರಾಣಿ ಮಯನಾದ ಶ್ರೀವಿಷ್ಣುವಿನ ಪೂಜೆ, ಸೇವೆ ಎನಿಸುತ್ತದೆ. ಯಾವುದಾದರೂ ಗುಡಿ ಗುಂಡಾರ ಮಠ ಮಂದಿರಗಳಲ್ಲಿ ಕಲ್ಲು ಕಟ್ಟಿಗೆಯ ಮೂರ್ತಿಯನ್ನು ಪೂಜಿಸಿದ ಮಾತ್ರಕ್ಕೆ ಅದು ನಿಜವಾದ ಪರಮಾತ್ಮನ ಪೂಜೆಯಾಗುವುದಿಲ್ಲ. ಸರ್ವ ಶರೀರಸ್ಥನಾದ ಭಗವಂತನ ಪೂಜೆ ಎಂದರೆ ಪ್ರಾಣಿ ಸೇವೆ, ಪರೋಪಕಾರಗಳೇ ಆಗಿರುತ್ತವೆ. ಪ್ರತಿಯೊಬ್ಬರ ಶರೀರದಲ್ಲಿಯೂ ಅವನು ಇರುತ್ತಾನೆ ಎನ್ನುವುದನ್ನು ತೋರಿಸಲಿಕ್ಕಾಗಿ ನಾನು ನನ್ನಲ್ಲಿರುವ ಆ ಭಗವಂತನ ವಿವಿಧ ರೂಪಗಳನ್ನು ನಿನಗೆ ಕಾಣಿಸಿದೆ. ನನ್ನ ಹಾಗೂ ಈ ಜೈಗೀಷವ್ಯನ ಶರೀರದಲ್ಲಿ ಇದ್ದಂತೆ ನಿನ್ನ ದೇಹದಲ್ಲಿಯೂ ಮತ್ತು ಈ ಮಂತ್ರಿಗಳ ಸೇವಕರ ಮತ್ತು ನಿನಗೆ ನನ್ನ ಮಾಯೆಯಿಂದ ಕಾಣಿಸಿದ ಗರುಡ, ಬ್ರಹ್ಮ, ರುದ್ರ, ಮೊದಲಾದ ದೇವತೆಗಳ ಶರೀರದಲ್ಲಿಯೂ ಆ ಪರಮಾತ್ಮನು ವಾಸವಾಗಿರುತ್ತಾನೆ. ಆದುದರಿಂದ ಅವೆಲ್ಲವೂ ವಿಷ್ಣುಮಯವಾಗಿರುತ್ತವೆ. ಆ ದೇವನಿಗೆ ಸಮಾನರಾದ ಜೀವವೇ ಈ ವಿಶ್ವದಲ್ಲಿ ಇಲ್ಲ ಎಂಬ ಭಾವದಿಂದ ಅನನ್ಯ ಸಾಮಾನ್ಯವಾದ ಶ್ರೀ ಹರಿಯನ್ನು ನೀನು ಸೇವಿಸು. ಇಂತಹ ಪರಿಪೂರ್ಣವಾದ ಭಾವನೆಯಿಂದ ನಾರಾಯಣನನ್ನು ಸ್ಮರಿಸಬೇಕು. ಧೂಪ, ದೀಪ,

ನೈವೇದ್ಯಾದಿಗಳಿಂದ ಪೂಜಿಸಬೇಕು. ಶಾಸ್ತ್ರೋಕ್ತವಾದ ವಿಧಿ ವಿಧಾನ ಮಂತ್ರ ತಂತ್ರಗಳಿಂದ ಅವನನ್ನು ಅರ್ಚಿಸಬೇಕು. ಅವನು ಪ್ರೀತ್ಯರ್ಥವಾಗಿ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಬೇಕು. ನಿರಂತರ ಧ್ಯಾನೋಪಾಸನೆಯಿಂದ ಅವನನ್ನು ಆರಾಧಿಸಬೇಕು. ಇದರಿಂದ ಖಂಡಿತವಾಗಿ ಭಗವತ್ ಪ್ರಾಪ್ತಿಯು ಆಗುತ್ತದೆ.

ವರಾಹ ಮಹಾಪುರಾಣದ ನಾಲ್ಕನೇ ಅಧ್ಯಾಯ ಮುಗಿದುದು.



## ಮೋಕ್ಷ ಮಾರ್ಗ

**ಅಧ್ಯಾಯ - ೫**

**ಅಶ್ವಶಿರ ಮಹಾರಾಜ :-** ಪೂಜ್ಯರೇ, ನನ್ನ ಮನಸ್ಸಿನಲ್ಲಿಯ ಒಂದು ಸಂದೇಹವನ್ನು ತಾವು ಸಮಂಜಸವಾದ ಸಮಾಧಾನವನ್ನು ಹೇಳಿ ಪರಿಹಾರ ಮಾಡಿದಿರಿ. ಇನ್ನೂ ಒಂದು ಸಂಶಯವು ನನ್ನನ್ನು ಕಾಡುತ್ತದೆ. ಅದನ್ನು ತಾವು ಹೋಗಲಾಡಿಸಬೇಕು. ಮೋಕ್ಷವು ಕರ್ಮಯೋಗಿಗೇ ದೊರಕುವುದೋ ಅಥವಾ ಜ್ಞಾನ ಯೋಗಿಗೇ ದೊರಕುವುದೋ ? ಅರಸನ ಈ ಮಾತನ್ನು ಕೇಳಿ ಕಪಿಲ ಮುನಿಯು ಅವನಿಗೆ ಉತ್ತರವನ್ನು ಹೇಳತೊಡಗಿದನು.

''ಮಹಾರಾಜ, ಪೂರ್ವಕಾಲದಲ್ಲಿ ಅಂದರೆ ಚಾಕ್ಷುಷಮನ್ವಂತರದಲ್ಲಿ ಬ್ರಹ್ಮ ವಂಶವನ್ನು ಬಿತ್ತರಿಸುವ ವಸು ಎಂಬ ಹೆಸರಿನ ಒಬ್ಬ ಮಹಾರಾಜನು ಇದ್ದನು. ಪಾಂಡಿತ್ಯದ ಪ್ರತೀಕದಂತಿದ್ದ ಅವನು ಧಾರಾಳವಾಗಿ ದಾನವನ್ನು ಮಾಡುತ್ತಿದ್ದನು. ಅವನು ಒಂದು ದಿನ ಬ್ರಹ್ಮದೇವರನ್ನು ಕಾಣಬೇಕೆಂದು ಸತ್ಯಲೋಕಕ್ಕೆ ಹೊರಟಿದ್ದನು. ದಾರಿಯಲ್ಲಿ ಚೈತ್ರರಥ ಎಂಬ ವಿದ್ಯಾಧರನ ಭೆಟ್ಟಿಯು ಅವನಿಗೆ ಆಯಿತು. ಚೈತ್ರರಥವನು ವಸುರಾಜನನ್ನು ಕುರಿತು ಸತ್ಯಲೋಕದ ಬ್ರಹ್ಮದೇವರ ಮನೆಯಲ್ಲಿ ಈಗ ದೇವತೆಗಳ ಒಂದು ಸಭೆ ನಡೆದಿದೆ ಎಂದು ತಿಳಿಸಿದನು. ಅದನ್ನು ಕೇಳಿ ವಸುರಾಜನು ನೇರವಾಗಿ ಬ್ರಹ್ಮಲೋಕಕ್ಕೆ ತೆರಳಿ ಬ್ರಹ್ಮದೇವರ ಮನೆಗೆ ಹೋಗಿ ಒಳಗೆ ಪ್ರವೇಶಿಸದೆ ಬಾಗಿಲದ ಬಳಿಯಲ್ಲಿಯೇ ಕಾಯುತ್ತ ಕುಳಿತನು. ಬ್ರಹ್ಮಮಂದಿರದ ಹೊರಬಾಗಿಲದ ಕಟ್ಟೆಯ ಮೇಲೆ ವಸು ದೊರೆಯು ಕುಳಿತು ಕೊಂಡಾಗ ಅಲ್ಲಿಗೆ ಮಹಾತಪಸ್ವಿಯಾದ ರೈಭ್ಯಋಷಿಯು ಆಗಮಿಸಿದನು. ಅವನನ್ನು ಕಂಡು ಪ್ರೀತಿಯುಕ್ತನಾದ ವಸುಭೂಪನು ಸಂತಸದಿಂದ ಮಣಿದು ಆದರೋಪಚಾರಮಾಡಿ ಮೇಲೆ ಕೂಡಿಸಿ ಪೂಜ್ಯರೇ ಎಲ್ಲಿಗೆ ಹೋಗಿದ್ದಿರಿ ? ಎಲ್ಲಿಂದ ಬಂದಿರಿ ! ಎಂದು ಕೇಳಿದನು. ಅದಕ್ಕೆ ರೈಭ್ಯಮುನಿಯು ಹೀಗೆ ಉತ್ತರಕೊಟ್ಟನು

''ರಾಜನ್, ನಾನು ಬೇರೊಂದು ಕೆಲಸಕ್ಕಾಗಿ ವಿಚಾರ ಮಾಡಲು ದೇವಗುರು ಬೃಹಸ್ಪತ್ಯಾಚಾರ್ಯರ ಮನೆಗೆ ಹೋಗಿದ್ದೆನು. ಈಗ ಅಲ್ಲಿಂದಲೇ ಬರುತ್ತಲಿದ್ದೇನೆ ''. ರೈಭ್ಯಮುನಿಯು ಹೀಗೆ ನುಡಿಯುವಷ್ಟರಲ್ಲಿ ಬ್ರಹ್ಮಭವನದಲ್ಲಿ ನಡೆದ ದೇವಸಭೆಯು ಮುಗಿಯಿತು. ಸಭಿಕರಾದ ದೇವತೆಗಳೆಲ್ಲರೂ ಅಲ್ಲಿಂದ ಎದ್ದು ತಮ್ಮ ತಮ್ಮ ಸ್ಥಾನಗಳಿಗೆ ಹೊರಟರು. ಆಗ ಆ ಬ್ರಹ್ಮಲೋಕದ ದೇವ ಸಭೆಗೆ ಸ್ವರ್ಗಲೋಕದ ಆಚಾರ್ಯರಾದ ಬೃಹಸ್ಪತಿ ಗುರುಗಳೂ ದಯಮಾಡಿಸಿದ್ದರು. ಅವರ ಮನೆಯಲ್ಲಿ ಅವರನ್ನು

ಕಾಣಲಿಕ್ಕಾಗದ ರೈಭ್ಯ ಋಷಿಯು ಬ್ರಹ್ಮಲೋಕದ ಸಭೆಗೆ ಅವರು ಹೋಗಿದ್ದಾರೆಂದು ತಿಳಿದು ಅಲ್ಲಿಗೆ ಕಾಣಲು ಬಂದಿದ್ದರು. ದೇವ ಸಭೆಯು ಮುಗಿದ ಬಳಿಕ ರೈಭ್ಯಮುನಿಯು ಬ್ರಹ್ಮಮಂದಿರದ ಬಾಗಿಲ ಬಳಿಯಲ್ಲಿಯೇ ಬೃಹಸ್ಪತಿ ಆಚಾರ್ಯರನ್ನು ಸಂಧಿಸಿ ಅವರ ಜೊತೆಗೆ ಲೋಕಾಭಿರಾಮವಾಗಿ ಮಾತುಕತೆಯನ್ನು ನಡೆಸಿದರು. ಅದೇ ವೇಳೆಯಲ್ಲಿ ವಸುರಾಜನಿಗೂ ಬೃಹಸ್ಪತ್ಯಾಚಾರ್ಯರಿಗೂ ಭೇಟಿಯಾಯಿತು.

ಮೂವರೂ ಕೂಡಿ ಸ್ವರ್ಗದಲ್ಲಿಯ ಬೃಹಸ್ಪತಿಯ ಮನೆಗೆ ಬಂದರು. ಅನಂತರ ರೈಭ್ಯ ಋಷಿ, ವಸುರಾಜ, ಬೃಹಸ್ಪತ್ಯಾಚಾರ್ಯ ಮೂವರೂ ಕುಳಿತು ಮಾತುಕತೆಯಾಡಿದರು. ಆಗ ಆ ಸುರಗುರುವು ರೈಭ್ಯಮುನಿಗೆ ''ಮುನಿಪುಂಗವಾ, ವೇದವೇದಾಂತದಲ್ಲಿ ಪಾರಂಗತನಾದ ನಿನಗೆ ನನ್ನಿಂದ ಏನಾಗಬೇಕು ? '' ಹೇಳು ಎಂದು ಕೇಳಿದನು.

ಆಗ ರೈಭ್ಯಋಷಿಯು ಆ ದೇವ ಗುರುವಿಗೆ ಒಂದು ಪ್ರಶ್ನೆಯನ್ನು ಹಾಕಿದನು. ''ಗುರುದೇವ ಮೋಕ್ಷವು ಕರ್ಮಾಚರಣೆಯಿಂದ ಹೊಂದಲ್ಪಡುವುದೋ ಅಥವಾ ಜ್ಞಾನದಿಂದ ಹೊಂದಲ್ಪಡುವುದೋ ? ಇದನ್ನು ನನಗೆ ತಿಳಿಸಿರಿ ಅದನ್ನು ಕೇಳಿ ಸುರಾಚಾರ್ಯರು ಇಂತು ನುಡಿದರು''. ಮನುಷ್ಯನು ಒಳ್ಳೆಯದಾಗಲಿ ಕೆಟ್ಟದಾಗಲಿ ಕರ್ಮವನ್ನು ಮಾಡಿ ಅದನ್ನೆಲ್ಲ ನಾರಾಯಣನಿಗೆ ಸಮರ್ಪಣೆ ಮಾಡಿದರೆ ಆ ಕರ್ಮಲೇಪವು ಅವನಿಗೆ ಆಗುವುದಿಲ್ಲ. ಈ ವಿಷಯದಲ್ಲಿ ಓರ್ವ ಬ್ರಾಹ್ಮಣ ಮತ್ತು ಬೇಡನ ನಡುವೆ ನಡೆದ ಸಂಭಾಷಣೆಯನ್ನು ಹೇಳುತ್ತೇನೆ ಕೇಳು. ಪೂರ್ವ ಕಾಲದಲ್ಲಿ ಅತ್ರಿವಂಶದಲ್ಲಿ ಒಬ್ಬ ಬ್ರಾಹ್ಮಣನು ಜನಿಸಿದನು. ಅವನು ಯಾವಾಗಲೂ ದೇವತಾ ಸೇವೆಯನ್ನೂ, ವೇದಾಭ್ಯಾಸವನ್ನೂ ಮಾಡುತ್ತಿದ್ದನು. ಅವನು ನಿರಂತರ ತಪೋನುಷ್ಠಾನದಲ್ಲಿ ನಿರತನಾಗಿದ್ದನು. ಒಂದು ದಿನವೂ ಅವನು ಪ್ರಾತಃಕಾಲದ ಸ್ನಾನ ಸಂಧ್ಯಾವಂದನೆಗಳನ್ನು ತಪ್ಪಿಸುತ್ತಿದ್ದಿಲ್ಲ. ಮೂರು ಹೊತ್ತು ಅವನು ಸ್ನಾನ ಮಾಡಿ ಹೋಮ ಹವನ ಮಾಡುತ್ತಿದ್ದನು. ಅವನ ಹೆಸರು ಸಂಯಮನ. ಒಂದು ದಿನ ಆ ಬ್ರಾಹ್ಮಣನು ಭಾಗೀರಥಿಯ ಪುಣ್ಯ ಪ್ರವಾಹದಲ್ಲಿ ಸ್ನಾನ ಮಾಡಬೇಕೆಂದು ಧರ್ಮಾರಣ್ಯಕ್ಕೆ ಹೋದನು. ಅಲ್ಲಿ ಗಂಗಾತಟಾಕದ ವನಪ್ರದೇಶದಲ್ಲಿ ಚಿಗರೆಗಳ ಒಂದು ದೊಡ್ಡ ಹಿಂಡು ವಿಶ್ರಮಿಸಿತ್ತು. ಅದನ್ನು ಕಂಡು ಓರ್ವ ಧೂರ್ತನಾದ ಬೇಡನು ಬಿಲ್ಲು ಬಾಣಗಳನ್ನು ಹಿಡಿದು ಅಲ್ಲಿಗೆ ಬಂದನು. ಮತ್ತೂ ವಿಶ್ವಾಸದಿಂದ ಗಂಗೆಯ ತಡಿಯಲ್ಲಿ ಒರಗಿದ ಆ ಎರಳೆಗಳನ್ನು ಕೊಲ್ಲಬೇಕೆಂದು ಆ ನಿಷ್ಠುರಕ ಎಂಬ ಬೇಡನು ಬಿಲ್ಲಿಗೆ ಬಾಣವನ್ನು ಹೂಡಿದನು. ಹೀಗೆ ಮಲಗಿದ ಮೃಗಗಳನ್ನು ಬೇಟೆಯಾಡ ಬಂದ ಬೇಡನನ್ನು ಸಂಯಮನ ಬ್ರಾಹ್ಮಣನು ತಡೆದು ನಿಲ್ಲಿಸಿ ''ಅಯ್ಯಾ, ವ್ಯರ್ಥವಾದ ಪ್ರಾಣಿ ಹಿಂಸೆಯನ್ನು ಮಾಡಬೇಡ'' ಎಂದು ಹೇಳಿದನು. ಅದನ್ನು ಕೇಳಿ ಆ ನಿಷ್ಠುಕ ಬೇಡನು ಹೀಗೆ ನಗುತ್ತ ನುಡಿದನು.

''ವಿಪ್ರೋತ್ತಮ'' ನಾನು ನಾನಾಗಿ ಯಾವ ಪ್ರಾಣಿಗಳನ್ನೂ ಕೊಲ್ಲುವುದಿಲ್ಲ. ಪರಮಾತ್ಮನೇ ನನ್ನಲ್ಲಿಯೂ ಈ ಚಿಗರೆಗಳಲ್ಲಿಯೂ ನಿಂತು ಆಟವಾಡುತ್ತಾನೆ. ಇದೆಲ್ಲವೂ ಅವನ ಮಾಯೆಮಂತ್ರಗಳಂತೆಯೇ ನಡೆಯುತ್ತದೆ. ಇದರಲ್ಲಿ ನಮ್ಮದೇನೂ ಇಲ್ಲ. ಮೋಕ್ಷವನ್ನು ಅಪೇಕ್ಷಿಸುವವರು ಎಂದೂ ನಾನು ಮಾಡುತ್ತೇನೆ ಎನ್ನಕೂಡದು.

ಈ ಜಗತ್ತೆಲ್ಲವೂ ತನ್ನ ಪ್ರಾಣಯಾತ್ರೆಯಾಗಿ ಅಥವಾ ಜೀವನ ನಿರ್ವಾಹಕ್ಕಾಗಿ ಯತ್ನಿಸುತ್ತದೆ. ಅದರಲ್ಲಿ ಅಹಂ ಬುದ್ಧಿಯು ಸರಿಯಲ್ಲ'' ಬೇಡನ ಈ ಮಾತನ್ನು ಕೇಳಿ ಬ್ರಾಹ್ಮಣ ಶ್ರೇಷ್ಠನಾದ ಸಂಯಮನಿಗೆ ಅತ್ಯಾಶ್ಚರ್ಯವಾಯಿತು.

''ಅಯ್ಯಾ, ನೀನು ಹೇಳಿದ ಮಾತು ಯುಕ್ತಯುಕ್ತವಾಗಿದೆ, ಅದಕ್ಕೇನಾದರೂ ಪ್ರತ್ಯಕ್ಷ ನಿದರ್ಶನವುಂಟೇ'' ಎಂದು ಕೇಳಿದನು. ಅದಕ್ಕೆ ಧರ್ಮಸೂಕ್ಷ್ಮವನ್ನು ಅರಿತ ಆ ವ್ಯಾಧನು ಒಂದು ಕಬ್ಬಿಣದ ಒಲೆಯನ್ನು ಮಾಡಿ ಅದರ ಕೆಳಗೆ ಬೆಂಕಿಯನ್ನು ಹೊತ್ತಿಸಿದನು. ಮತ್ತೂ ಆ ಸಂಯಮನ ಬ್ರಾಹ್ಮಣನ ಕೈಯಲ್ಲಿಯೂ ಒಂದು ಕೊಳ್ಳಿಯನ್ನು ಕೊಟ್ಟು ಆ ಒಳೆಯ ಬುಡದಲ್ಲಿಯ ಕಟ್ಟಿಗೆಯ ಸೂಡನ್ನು ಬೆಂಕಿಕೊಟ್ಟು, ' ನೀನು ಉರಿಮಾಡು ' ಎಂದು ಹೇಳಿದನು. ಅದರಂತೆ ಸಂಯಮನು ಒಲೆಯ ಕೆಳಗಿನ ಸೌದೆಯ ಸೂಡಿಗೆ ಬೆಂಕಿ ಕೊಟ್ಟು ಬಾಯಿಂದಲೂ ಊದಿ ಅಗ್ನಿಯನ್ನು ಹೊತ್ತಿಸಿ ಉರಿಯುವಂತೆ ಮಾಡಿದನು. ಒಲೆಯ ಎಲ್ಲ ತೂತುಗಳಿಂದಲೂ ಬೆಂಕಿಯ ಜ್ವಾಲೆಗಳು ಹೊರಬರತೊಡಗಿದವು. ಸಾವಿರಾರು ಜ್ವಾಲೆಗಳು ತಮ್ಮ ಉರಿ ನಾಲಿಗೆಗಳನ್ನು ಒಲೆಯ ಹೊರಗೆ ಚಾಚಿ ಪ್ರಜ್ವಲಿಸತೊಡಗಿದವು. ಒಂದೇ ತಾಣದಲ್ಲಿರುವ ಅಗ್ನಿಯ ಸಹಸ್ರಾರು ಜ್ವಾಲೆಗಳು ಒಲೆಯ ರಂಧ್ರಗಳಿಂದ ಚಾಚಿ ಹಾರಿ, ಮೇಲೆ ಬರುತ್ತಿದ್ದವು. ಆಗ ಬೇಡನು ಆ ಕಬ್ಬಿಣದ ಒಲೆಯ ಕೆಳಗೆ ಉರಿಯುವ ಕಟ್ಟಿಗೆಗಳ ಕಟ್ಟಿನೊಳಗಿಂದ ಒಂದು ಉರಿಯುವ ಕಟ್ಟಿಗೆಯನ್ನು ಹಿರಿದು ಆ ಬ್ರಾಹ್ಮಣನ ಕೈಯಲ್ಲಿ ಕೊಟ್ಟು ನುಡಿದನು.

''ಮುನಿಪುಂಗವ, ಈ ಒಂದು ಉರಿಯುವ ಕಟ್ಟಿಗೆಯನ್ನು ನೀನು ಹಿಡಿದುಕೊ. ಉಳಿದ ಎಲ್ಲ ಕಟ್ಟಿಗೆಗಳನ್ನು ನಾನು ಆರಿಸುತ್ತೇನೆ '' ಎಂದು ಹೇಳಿದನು. ಅನಂತರ ಆ ಬೇಡನು ಒಂದು ಕೊಡದ ತುಂಬ ನೀರನ್ನು ತುಂಬಿಕೊಂಡು ಆ ಉರಿಯುವ ಬೆಂಕಿಯ ಮೇಲೆ ಸುರುವಿದನು. ಆದರಿಂದ ಆ ಬೆಂಕಿಯೆಲ್ಲವೂ ಆರಿ ತಣ್ಣಗಾಯಿತು. ಆಗ ಆ ಬೇಡನು ಆ ತಪಸ್ವಿ ಬ್ರಾಹ್ಮಣನಿಗೆ ನುಡಿದನು.

''ಪೂಜ್ಯರೇ, ಉರಿಯುವ ಬೆಂಕಿಯಿಂದ ನೀವು ತೆಗೆದುಕೊಂಡು ಜ್ವಲಿಸುವ ಕೊಳ್ಳಿ ಕಟ್ಟಿಗೆಯನ್ನು ಇಲ್ಲಿ ನನ್ನ ಕೈಯಲ್ಲಿ ಕೊಡಿರಿ, ಮಾಂಸವನ್ನು ತಂದು ಆ ಕೊಳ್ಳಿಯಿಂದ ಅದನ್ನು ಬೇಯಿಸಿ ತಿನ್ನುತ್ತೇನೆ '' ಎಂದು ಹೇಳಿದನು. ಆಗ ಸಂಯಮನ ಬ್ರಾಹ್ಮಣನು ಈ ಬೇಡನ ಕಬ್ಬಿಣದ ಒಲೆಯ ಕಡೆಗೆ ನೋಡಿದನು. ಅಲ್ಲಿಯ ಬೆಂಕಿಯೆಲ್ಲವೂ ತಣ್ಣಗಾಗಿತ್ತು. ಆ ಒಲೆಯ ತೂತುಗಳಿಂದ ತೂರಿ ಬರುವ ಅಗ್ನಿ ಜ್ವಾಲೆಗಳೆಲ್ಲವೂ ಆರಿ ಹೋಗಿದ್ದವು. ಹೀಗೆ ಸುಮ್ಮನೆ ಕುಳಿತ ಆ ಬ್ರಾಹ್ಮಣನಿಗೆ ನಿಷ್ಠುರಕನು ಮತ್ತೆ ನುಡಿದನು.

''ಈ ಒಲೆಯಲ್ಲಿ ಅಗ್ನಿಯು ಹೊತ್ತಿ ಅನೇಕ ಜ್ವಾಲೆಗಳ ರೂಪದಿಂದ ಹಬ್ಬಿಕೊಂಡಿತು. ಮೂಲಭೂತವಾದ ಅಗ್ನಿಯು ಹೊತ್ತಿದ ಕೂಡಲೇ ಎಲ್ಲ ಕಡೆಗೆ ಅದರಿಂದ ಉದ್ಭವಿಸಿದ ಅನೇಕಾನೇಕ ಅಗ್ನಿಜಿಹ್ವೆಗಳು ಹೊರಹೊಮ್ಮಿದವು. ಮೂಲಭೂತವಾದ ಅಗ್ನಿಯು ಶಾಂತವಾದ ಕೂಡಲೇ ಅದರಿಂದ ಉದ್ಭವಿಸಿದ ಜ್ವಾಲೆಗಳೆಲ್ಲವೂ ನಷ್ಟವಾಗಿ ಹೋದವು. ಇದರಂತೆ ಎಲ್ಲ ಪ್ರಾಣಿಗಳಿಗೂ ಅವುಗಳು ವಿಕಾಸ, ವಿಲಾಸ, ವೃದ್ಧಿ, ಹ್ರಾಸಗಳಿಗೆಲ್ಲ ಭಗವಂತನ ಇಚ್ಛೆಯೇ ಮೂಲ ಕಾರಣ. ಅವನು ಇಚ್ಛೆ ಪಟ್ಟಾಗ ಈ ಪ್ರಪಂಚವು

ಅನಂತಮುಖವಾಗಿ ಹೊಮ್ಮಿ ಹಮ್ಮಿ ಹಿಗ್ಗಿ ಹಬ್ಬುತ್ತದೆ. ಅವನು ಸೃಷ್ಟಿಯ ಇಚ್ಛೆಯಿಂದ ಉಪರತನಾದಾಗ ಈ ಪ್ರಪಂಚವೆಲ್ಲವೂ ನಾಶವಾಗಿ ಬಿಡುತ್ತದೆ. ಮಾನವರು ತಮ್ಮ ಜೀವನ ಯಾತ್ರೆಯನ್ನೂ ಒಂದು ಧರ್ಮ ಎಂದು ಭಾವಿಸಿ ತಾನು ಮಾಡುವ ವಿಹಿತ ಧರ್ಮ ಕರ್ಮಗಳನ್ನೆಲ್ಲ ಪರಮಾತ್ಮನಲ್ಲಿಯೇ ಸಮರ್ಪಿಸಬೇಕು. ಇದರಿಂದ ಮನುಷ್ಯನಿಗೆ ಎಂದೂ ದುಃಖವಾಗುವುದಿಲ್ಲ ಮತ್ತು ವಿನಾಶವಾಗುವುದಿಲ್ಲ ''.

ಬೇಡನು ಹೀಗೆ ನುಡಿಯಲು ಆಕಾಶದಿಂದ ಅವನ ಮೇಲೆ ಪುಷ್ಪವೃಷ್ಟಿಯಾಯಿತು. ದೇವಲೋಕದಿಂದ ಒಮ್ಮೆಲೇ ದೊಡ್ಡ ದೊಡ್ಡ ಅನೇಕ ವಿಮಾನಗಳು ಅಲ್ಲಿಗೆ ಬಂದವು. ವಿವಿಧ ರತ್ನಖಚಿತವಾದ ಆ ವಿಮಾನಗಳಲ್ಲಿ ಕುಳಿತು ಮನ ಬಂದಲ್ಲಿ ಹೋಗಬಹುದು. ಆ ಎಲ್ಲ ವಿಮಾನಗಳಲ್ಲಿ ನಿಷ್ಠುರಕ ಬೇಡನು ಕಾಮರೂಪಿಯಾಗಿ ಕುಳಿತಿದ್ದು ಸಂಯಮನ ಬ್ರಾಹ್ಮಣನಿಗೆ ಕಂಡಿತು. ಯೋಗಶಕ್ತಿಯಿಂದ ಆ ನಿಷ್ಠುರಕ ಬೇಡನು ಅದ್ವೈತ ಸಿದ್ಧಿಯನ್ನು ಪಡೆದು ಎಲ್ಲ ದೇವವಿಮಾನಗಳಲ್ಲಿಯೂ ಒಂದೊಂದು ರೂಪದಿಂದ ಕುಳಿತಿದ್ದನ್ನು ನೋಡಿ ಆಶ್ಚರ್ಯಚಕಿತನಾಗಿ ತನ್ನ ಮನೆಗೆ ಬಂದನು. ಈ ರೀತಿಯಾಗಿ ವಿಹಿತ ಕರ್ಮವನ್ನು ಮಾಡುತ್ತಲಿದ್ದರೂ ನಿಜವಾದ ಭಗವದ್‌ಜ್ಞಾನವಿದ್ದರೆ ಮಾತ್ರ ಮೋಕ್ಷವಾಗುತ್ತದೆ. ಅಸಂಖ್ಯ ಜೀವರಾಶಿಯನ್ನು ನಿಯಮಿಸುವ ಪರಮಾತ್ಮನು ಒಬ್ಬನೇ ಆಗಿದ್ದಾನೆ. ಅವನಿಗೆ ಅನಂತಾನಂತ ರೂಪಗಳಿದ್ದರೂ ಅವುಗಳಲ್ಲಿ ಭೇದವಿಲ್ಲವೆಂದು ತಿಳಿದು ಅದ್ವೈತ ಭಾವನೆಯನ್ನು ಇರಿಸಿ ಅವನ ಉಪಾಸನೆಯನ್ನು ಮಾಡಿದರೆ ಮೋಕ್ಷ ಪ್ರಾಪ್ತಿಯು ನಿಶ್ಚಿತವಾಗಿಯೂ ಆಗುತ್ತದೆ. ಈ ರೀತಿಯಾಗಿ ರೈಭ್ಯಋಷಿ ಮತ್ತು ವಸುರಾಜರು ಬೃಹಸ್ಪತ್ಯಾಚಾರ್ಯರು ಹೇಳಿದ ಕತೆಯಿಂದ ತಮ್ಮ ಸಂಶಯವನ್ನು ದೂರ ಮಾಡಿಕೊಂಡು ಆ ಗುರುವಿನ ಮನೆಯಿಂದ ಹೊರಬಿದ್ದು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

ಆದುದರಿಂದ ರಾಜನ್, ಭಿನ್ನಭಿನ್ನವಾದ ದೇಹಗಳಲ್ಲಿ ನಡೆಯುವ ಭಿನ್ನ ಭಿನ್ನವಾದ ಕ್ರಿಯಾಕಲಾಪಗಳಿಗೆಲ್ಲ ಒಬ್ಬನೇ ಪರಮಾತ್ಮನು ಮೂಲಕಾರಣನಾಗಿ ಇರುತ್ತಾನೆ. ಅನೇಕ ಅಧಿಷ್ಠಾನಗಳಲ್ಲಿ ಇರುವ ಆ ಭಗವಂತನು ಒಬ್ಬನೇ ಆಗಿದ್ದಾನೆ. ಅವನ ಇಚ್ಛೆಯಿಂದಲೇ ಈ ಪ್ರಪಂಚವು ಹಬ್ಬಿದೆ. ಅವನು ಬಯಸಿದಾಗ ಇದೆಲ್ಲವೂ ಉಪಸಂಹೃತವಾಗುತ್ತದೆ. ಆದುದರಿಂದ ಅವನನ್ನೇ ವಿಶ್ವಮಯನೆಂದೂ ವಿಶ್ವವ್ಯಾಪಕನೆಂದೂ, ವಿಶ್ವವ್ಯಾಪಾರಗಳಿಗೆಲ್ಲ ಏಕಮಾತ್ರವಾದ ಮೂಲಕಾರಣನೆಂದೂ ತಿಳಿದು ಪೂಜಿಸಿ ನಾವು ಮಾಡುವ ಎಲ್ಲ ವಿಹಿತ ಕರ್ಮಗಳನ್ನೂ ಅವನ ಉದ್ದೇಶವಾಗಿಯೇ ಮಾಡಿ ಅವನಿಗೆ ಸಮರ್ಪಿಸಬೇಕು. ಕಪಿಲ ದೇವನ ಈ ಮಾತನ್ನು ಕೇಳಿ ಅಶ್ವಶಿರ ಮಹಾರಾಜನಿಗೆ ವೈರಾಗ್ಯವು ಹುಟ್ಟಿತು. ಅವನು ಸ್ಥೂಲಶಿರ ಎಂಬ ಹೆಸರಿನ ತನ್ನ ಹಿರಿಯಮಗನನ್ನು ಕರೆದು ಅವನಿಗೆ ತನ್ನ ರಾಜ್ಯದಲ್ಲಿ ಪಟ್ಟಾಭಿಷೇಕಗೈದು ಸಾಮ್ರಾಜ್ಯ ರಕ್ಷಣೆಯ ಭಾರವನ್ನು ಒಪ್ಪಿಸಿ ಅರಣ್ಯಕ್ಕೆ ತೆರಳಿದನು. ಅವನುತನ್ನರಾಜಧಾನಿಯಿಂದಹೊರಟುಅರಣ್ಯಕ್ಕೆಹೋಗಿನಿಂತುಯಜ್ಞಮೂರ್ತಿಯಾದ ಶ್ರೀಹರಿಯನ್ನುತಪಸ್ಸಿನಿಂದಆರಾಧಿಸಿದನು. ಮಂತ್ರಸ್ತೋತ್ರಗಳಿಂದಕೊಂಡಾಡಿದನು.

**ನಮಾಮಿ ನಿತ್ಯಂ ತ್ರಿದಶಾಧಿಪಸ್ಯ**
**ಭವಸ್ಯ ಸೂರ್ಯಸ್ಯ ಹುತಾಶನಸ್ಯ ॥**

**ಸೋಮಸ್ಯ ರಾಜ್ಞಃ ಮರುತಾಮನೇಕ**
**ರೂಪಂ ಹರಿಂ ಯಜ್ಞತನುಂ ನಮಸ್ಯೆ ॥**

ಇಂದ್ರ, ಚಂದ್ರ, ಸೂರ್ಯ, ಅಗ್ನಿ, ಸೋಮ, ಶಿವ, ವಾಯು, ಮುಂತಾದ ಅನೇಕ ದೇವತೆಗಳಲ್ಲಿ ತತ್ತದ್ ರೂಪಗಳಿಂದ ನಿಂತು ಜಗದ್ರಕ್ಷಣ ರೂಪವಾದ ಕಾರ್ಯವನ್ನು ಮಾಡುವ ಶ್ರೀ ಹರಿಗೆ ನಮಸ್ಕಾರವನ್ನು ಮಾಡುತ್ತೇನೆ. ಯಾವನು ಚತುರ್ಮುಖವಾಗಿ ಪ್ರಪಂಚವನ್ನು ಸೃಷ್ಟಿ ಮಾಡುವನೋ, ವಿಷ್ಣು ರೂಪದಿಂದ ಸಂರಕ್ಷಣೆಗೈಯುವನೋ, ಶಿವರೂಪದಿಂದ ಸಂಹರಿಸುವನೋ ಇಂಥ ಯಜ್ಞಮೂರ್ತಿಗೆ ನನ್ನ ನಮಸ್ಕಾರವಿರಲಿ. ಈ ರೀತಿಯಾಗಿ ಸ್ತೋತ್ರವನ್ನು ಮಾಡತಕ್ಕ ಅಶ್ವಶಿರರಾಜನ ಎದುರು ಅಗ್ನಿ ಜ್ವಾಲೆಯಂತಹ ಒಂದು ತೇಜಸ್ಸು ಉಂಟಾಯಿತು. ಮಹಾರಾಜನು ಮನಸ್ಸು ಮಾಡಿ ಆ ತೇಜಸ್ಸಿನಲ್ಲಿ ಪ್ರವೇಶಿಸಿ ಯಜ್ಞ ಮೂರ್ತಿಯನ್ನು ಪಡೆದನು.

*ವರಾಹ ಮಹಾಪುರಾಣ ಐದನೇ ಅಧ್ಯಾಯ ಮುಗಿದುದು*



## ಪುಂಡರೀಕಾಕ್ಷಗೋತ್ರ ಮಹಿಮೆ

**ಅಧ್ಯಾಯ - ೬**

**ಭೂದೇವಿ :-** ''ಭಗವನ್, ವಸು ಮತ್ತು ರೈಭ್ಯರಿಗೆ ಬಂದ ಸಂಶಯವು ತಾನಾಗಿ ದೂರವಾಯಿತು. ಸರ್ವವೂ ಭಗವದಧೀನ ಎಂಬ ಜ್ಞಾನಪೂರ್ವಕವಾಗಿ ಸ್ವೋಚಿತವಾದ ಕರ್ಮಾನುಷ್ಠಾನ ಮಾಡುವದರಿಂದಲೇ ಮೋಕ್ಷವಾಗುವುದು ಎಂದು ಅವರು ತಿಳಿದುಕೊಂಡರು ಎಂದು ನೀನು ನಿರೂಪಿಸಿದೆ. ಆದರೆ ಮುಂದೆ ಆ ರೈಭ್ಯ ಮತ್ತು ವಸುರಾಜರು ಏನು ಮಾಡಿದರು ಎಂಬುದನ್ನು ನನಗೆ ತಿಳಿಸಬೇಕು ''. ಭೂದೇವಿಯ ಈ ಪ್ರಶ್ನೆಯನ್ನು ಕೇಳಿ ಪರಮಾತ್ಮನಾದ ವರಾಹ ಭಗವಂತನು ಇಂತು ನುಡಿದನು-

''ವಸುರಾಜನು ಎಲ್ಲ ಧರ್ಮಗಳ ಮರ್ಮವನ್ನು ತಿಳಿದು ನ್ಯಾಯದಿಂದ ತನ್ನ ರಾಜ್ಯವನ್ನು ಆಳಿದನು. ಅನೇಕ ಯಜ್ಞಗಳನ್ನು ವಿಷ್ಣುವಿನ ಪ್ರೀತಿಗಾಗಿ ಮಾಡಿದನು. ವಿಪುಲವಾಗಿ ದಾನ ದಕ್ಷಿಣೆಗಳನ್ನು ನೀಡಿದನು. 'ಎಲ್ಲ ಪ್ರಾಣಿಗಳ ಹೃದಯಾಂತರಾಳದಲ್ಲಿ ಆ ವಾಸುದೇವ ಮೂರ್ತಿಯಾದ ಭಗವಂತನು ವಾಸವಾಗಿದ್ದಾನೆ' ಎಂಬ ಜ್ಞಾನ ಪೂರ್ವವಾಗಿ ಮಾಡಿದ ಕರ್ಮಕಾಂಡದಿಂದ ಆ ಹರಿಯನ್ನು ಸಂತೋಷಪಡಿಸಿದನು. ಹೀಗೆ ಅನೇಕ ವರ್ಷಗಳ ಕಾಲ ಸಾಮ್ರಾಜ್ಯ ಶಾಸನಗೈಯುತ್ತಲಿರುವ ಅವನಿಗೆ ವೈರಾಗ್ಯವು ಉದಿಸಿತು. ತನ್ನ ಮಗನಾದ ವಿವಸ್ವಂತನನ್ನು ಸಿಂಹಾಸನ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡಿ ತನ್ನ ಉಳಿದ ತೊಂಬತ್ತೊಂಬತ್ತು ಜನ ಮಕ್ಕಳಿಗೆಲ್ಲ ಆ ಹಿರಿಯ ಅಣ್ಣನನ್ನು ಅನುಸರಿಸಿಕೊಂಡು ಇರಬೇಕು ಎಂದು ಹೇಳಿ ತಪೋವನಕ್ಕೆ ತೆರಳಿದನು. ಕಾಶ್ಮೀರ ದೇಶದ ಅಧಿಪತಿಯಾದ ಆ ವಸುರಾಜನು ತೀರ್ಥಗಳಿಗೆಲ್ಲ ಪ್ರಧಾನವಾದ ಪುಷ್ಕರ ಕ್ಷೇತ್ರಕ್ಕೆ ಬಂದು ಅತ್ಯುಗ್ರವಾದ ತಪಸ್ಸನ್ನು ಆಚರಿಸಿದನು. ತನ್ನ ದೇಹವನ್ನು ದಂಡಿಸಿದನು. ಭಗವಂತನನ್ನು ಸಂತೋಷಪಡಿಸಿದನು. ಪುಂಡರೀಕಾಕ್ಷನಾದ ನಾರಾಯಣನನ್ನು ಸ್ತೋತ್ರ ಜಪದಿಂದ ಕೊಂಡಾಡಿದನು.

## ಪುಂಡರೀಕಾಕ್ಷ ಸ್ತೋತ್ರ

ನಮಸ್ತೇ ಪುಂಡರೀಕಾಕ್ಷ ನಮಸ್ತೇ ಮಧುಸೂದನ
ನಮಸ್ತೇ ಸರ್ವಲೋಕೇಶ ನಮಸ್ತೇ ತಿಗ್ಮಚಕ್ರಿಣೇ ॥

ಶರಣ್ಯಂ ಶರಣಂ ದೇವಂ ವಿಷ್ಣುಂ ಜಿಷ್ಣುಂ ಸನಾತನಂ
ನೀಲಮೇಘ ಪ್ರತೀಕಾಶಂ ನಮಸ್ಯೇ ಚಕ್ರಪಾಣಿನಂ ॥

ಆದಿದೇವಂ ಮಹಾದೇವಂ ವೇದವೇದಾಂಗ ಪಾರಗಂ
ಗಂಭೀರಂ ಸರ್ವದೇವಾನಾಂ ನಮಸ್ಯೇ ವಾರಿಜೇಕ್ಷಣಂ ।
ಸಹಸ್ರ ಶೀರ್ಷಿಣಂ ದೇವಂ ಸಹಸ್ರಾಕ್ಷಂ ಮಹಾಭುಜಂ ॥

ಜಗತ್ ಸಂವ್ಯಾಪ್ಯ ತಿಷ್ಠಂತಂ ನಮಸ್ಯೇ ಪರಮೇಶ್ವರಂ
ವಿಶ್ವಮೂರ್ತಿಂ ಮಹಾ ಬಾಹುಂ ವರದಂ ಸರ್ವತೇಜಸಾಂ
ನಮಾಮಿ ಪುಂಡರೀಕಾಕ್ಷಂ ವಿದ್ಯಾऽವಿದ್ಯಾತ್ಮಕಂ ವಿಭುಮ್ ॥

ತಾವರೆಗಣ್ಣಿನ ದೇವನಿಗೆ ನಮಸ್ಕಾರ. ಮಧುನಾಮಕ ದೈತ್ಯನನ್ನು ಸಂಹರಿಸಿದವನಿಗೆ ವಂದನೆ. ಎಲ್ಲ ಲೋಕಗಳಿಗೆ ಒಡೆಯನಾದ ಪ್ರಭುವೇ, ನಿನಗೆ ಪ್ರಣಾಮ. ಹರಿತವಾದ ಚಕ್ರಧರಿಸಿದ ದೇವ, ನಿನ್ನನ್ನು ನಮಿಸುವೆ. ಶರಣು ಬಂದವರನ್ನು ರಕ್ಷಿಸುವ, ಸರ್ವತ್ರವ್ಯಾಪ್ತನಾದ, ಜಯಶೀಲನಾದ, ನೀಲಮೇಘದಂತೆ ಕೃಷ್ಣವರ್ಣದ ಚಕ್ರಪಾಣಿಗೆ ನಮನಗೈಯುವೆ. ಎಲ್ಲ ದೇವತೆಗಳಿಗೂ ಆದಿಭೂತನೂ ವೇದವೇದಾಂಗ ವೇದಾಂತ ವೇದ್ಯನೂ ಆದ ಆ ಕಮಲಾಕ್ಷ ಕೃಷ್ಣನನ್ನು ವಂದಿಸುವೆ. ಯಾವ ದೇವತೆಯೂ ಅವನನ್ನು ಪೂರ್ಣ ಅರಿಯರು. ಅವನು ಭಗವಂತ. ಅನಂತ ಕೈಕಾಲು ತಲೆತೋಳುಗಳುಳ್ಳ ಮತ್ತು ಎಲ್ಲ ವ್ಯಾಪಿಸಿ ನಿಂತ ಆ ಪ್ರಭು ಪರಮೇಶ್ವರನನ್ನು ನಮಿಸುತ್ತೇನೆ. ಎಲ್ಲ ಪ್ರಾಣಿಗಳಲ್ಲಿಯೂ ಅಂತರ್ಗತನೂ, ಮಹಾ ತೇಜಸ್ವಿಯೂ, ವರಗಳನ್ನು ನೀಡುವವನೂ, ಜ್ಞಾನಾಜ್ಞಾನ ಪ್ರದಾಯಕನೂ, ಸರ್ವ ನಿಯಾಮಕನೂ, ಚತುರ್ಭುಜನೂ ಆದ ಪುಂಡರೀಕಾಕ್ಷನನ್ನು ವಂದಿಸುತ್ತೇನೆ.'' ಈ ರೀತಿಯಾಗಿ ಪುಂಡರೀಕಾಕ್ಷ ಸ್ತೋತ್ರವನ್ನು ಕೇಳಿ ಆ ವಸುರಾಜನು ಪರಮಾತ್ಮನನ್ನು ಕೊಂಡಾಡುತ್ತಲಿರುವಾಗ ಅವನ ಮೈಯಿಂದ ಒಬ್ಬ ಕಪ್ಪು ಬಣ್ಣದ, ಕೆಂಪುಗಣ್ಣಿನ, ಕುಳ್ಳದೇಹದ, ಸುಟ್ಟ ಕರಕಾದಂತೆ ಕಾಣುವ ಭಯಂಕರ ಆಕಾರದ ಒಬ್ಬ ಮನುಷ್ಯನು ಹೊರಬಿದ್ದನು. ಅವನು ಮಹಾರಾಜನ ಎದುರು ಬಾಗಿ ಕೈಮುಗಿದು ''ರಾಜನ್ ಏನು ಅಪ್ಪಣೆ '' ಎಂದು ವಿನಯದಿಂದ ಕೇಳಿದನು.

ಅವನನ್ನು ನೋಡಿ ವಸುರಾಜನು ''ಎಲೋ ಬೇಡನೇ, ನೀನು ಯಾರು ? ಇಲ್ಲಿಗೆ ಏಕೆ ಬಂದೆ ? ಹೇಗೆ ಬಂದೆ ? ಏನು ಕೆಲಸ ?'' ಎಂದು ಪ್ರಶ್ನಿಸಿದನು. ಅದಕ್ಕೆ ಆ ಕುಳ್ಳಕಾಯದ ಕಪ್ಪು ಬಣ್ಣದ ಕಿರಾತನು ಉತ್ತರಿಸಿದನು

''ರಾಜನ್, ಹಿಂದೆ ಕಲಿಯುಗದಲ್ಲಿ ನೀನು ದಕ್ಷಿಣಾಪಥದಲ್ಲಿ ಇರುವ ಜನಸ್ಥಾನದ ದೊರೆಯಾಗಿದ್ದೆ. ಧರ್ಮನಿಷ್ಠನಾದ ನೀನು ಅನೇಕ ಅಶ್ವಾರೂಢರಾದ ಸೈನಿಕರಿಂದೊಡಗೂಡಿ ಒಮ್ಮೆ ಬೇಟೆಯಾಡಲು ಕಾಡಿಗೆ ಹೋಗಿದ್ದೆ. ಅಲ್ಲಿ ಅನೇಕ ಕ್ರೂರ

ಮೃಗಗಳನ್ನು ಸಂಹರಿಸಿದೆ. ಅನಂತರ ಅದೇ ಅರಣ್ಯದಲ್ಲಿ ಚಿಗರೆಯ ವೇಷವನ್ನು ಧರಿಸಿದ ಒಬ್ಬ ಋಷಿಯನ್ನು ನೀನು ತಿಳಿಯದೆ ಎರಡು ದೊಣ್ಣೆಗಳನ್ನು ಬೀಸಿ ಹೊಡೆದು ನೆಲಕ್ಕೆ ಉರಳಿಸಿದೆ. ಕೂಡಲೇ ಮೃಗವೇಷಧಾರಿಯಾದ ಆ ಋಷಿಯು ಸತ್ತು ಬಿದ್ದನು. ಆಗ ನೀನು ಅತ್ಯಂತ ಸಂತೋಷದಿಂದ ನಾನು ಗುರಿ ಇಟ್ಟು ಹೊಡೆದ ಆ ಚಿಗರೆಯು ಹತಪತಿತವಾಗಿದೆ ಎಂದು ಉಲ್ಲಾಸದಿಂದ ನೀನು ಅದರ ಬಳಿಗೆ ಬಂದು ನೋಡಿದೆ. ಅಲ್ಲಿ ಸತ್ತು ಬಿದ್ದದ್ದು ಮೃಗವಾಗದೆ ಮುನಿಯಾಗಿದ್ದಿತು. ಆ ಪ್ರಸ್ರವಣ ಬೆಟ್ಟದಲ್ಲಿ ಕೋಡಿ ಇಟ್ಟು ಹರಿದ ಋಷಿರಕ್ತವನ್ನು ಕಂಡು ನೀನು ಕಂಗೆಟ್ಟು. ಚಿಂತಾಕ್ರಾಂತನಾಗಿ ಮನೆಗೆ ಮರಳಿದೆ. ಕಂಡವರ ಎದುರಿಗೆಲ್ಲ ನಿನ್ನ ಅಪರಾಧವನ್ನು ಹೇಳಿದೆ. ಪ್ರಾಯಶ್ಚಿತ್ತವನ್ನು ಕೇಳಿದೆ. ಬ್ರಹ್ಮಹತ್ಯೆಯ ಭೀತಿಯಿಂದ ಹೆದರಿ ಹೌಹಾರಿದ ನೀನು ಏನಾದರೂ ಪುಣ್ಯ ಕರ್ಮವನ್ನು ಮಾಡಿ ಆ ಮುನಿ ಮಾರಣದ ಮಹಾಪಾತಕದಿಂದ ಮುಕ್ತನಾಗಬೇಕೆಂದು ಬಯಸಿದೆ. ಅದಕ್ಕಾಗಿ ಆ ಪಾಪಶಾಂತಿಗಾಗಿ ಚಿಂತಿಸಿ, ಧರ್ಮಾಧರ್ಮಗಳನ್ನು ವಿಚಾರಿಸಿ, ಬಲ್ಲವರನ್ನು ಕೇಳಿ, ಅತ್ಯಂತ ಭಕ್ತಿಯಿಂದ ಭಗವಾನ್ ಶ್ರೀನಾರಾಯಣರನ್ನು ಸ್ಮರಣೆಗೈದು ಶುದ್ಧ ಏಕಾದಶಿಯ ದಿನ ಉಪೋಷಣೆಯನ್ನು ಮಾಡಿದೆ. ಮತ್ತೂ ಅದೇ ಶುಭದಿನದಂದು ಶ್ರೀ ನಾರಾಯಣ ದೇವರು ಸುಪ್ರೀತನಾಗಲಿ ಎಂದು ಸಂಕಲ್ಪ ಪೂರ್ವಕವಾಗಿ ಒಂದು ಹಸುವನ್ನು ವಿಧಿಪೂರ್ವಕವಾಗಿ ದಾನವಿತ್ತೆ. ಅದೇ ದಿನ ನಿನಗೆ ಭಯಂಕರವಾಗಿ ಹೊಟ್ಟೆನೋವು ಸುರುವಾಗಿ ಆ ಬೇನೆಯಿಂದಲೇ ನೀನು ಮರಣ ಹೊಂದಿದೆ.

ಇಷ್ಟಾದರೂ ನಿನ್ನ ದ್ವಾದಶೀ ವ್ರತಕ್ಕೆ ಚ್ಯುತಿ ಬರಲಿಲ್ಲ. ಏಕೆಂದರೆ ಆ ಜನ್ಮದಲ್ಲಿಯ ನಿನ್ನ ಮಡದಿಯ ಹೆಸರು ನಾರಾಯಣಿ ಎಂದಿದ್ದಿತು. ಭಯಂಕರವಾದ ಹೊಟ್ಟೆ ಕಡಿತದಿಂದ ನಿನ್ನ ಪಂಚಪ್ರಾಣಗಳು ಕಂಠಕ್ಕೆ ಬಂದಾಗ ನೀನು ಪತ್ನಿಯ ಮೋಹದಿಂದ ಅವಳನ್ನು 'ನಾರಾಯಣಿ' ಎಂದು ಕೂಗಿ ಕರೆದೆ. ಅದರಿಂದ ನಿನಗೆ ಮರಣಾನಂತರ ಕಿಂಚಿತ್ ಸ್ವಲ್ಪ ಕಾಲದವರೆಗೆ ವೈಕುಂಠದಲ್ಲಿ ವಾಸಿಸುವ ಭಾಗ್ಯವು ದೊರಕಿತು. ಇಷ್ಟಾದರೂ ನೀನು ಮಾಡಿದ ಬ್ರಹ್ಮಹತ್ಯೆಯ ಪಾಪವು ಮಾತ್ರ ನಿನ್ನ ದೇಹದಿಂದ ತೊಲಗಿ ಹೋಗಿರಲಿಲ್ಲ.

ನೀನು ಜನಸ್ಥಾನದ ದೊರೆಯಾಗಿದ್ದಾಗ ಬಡಿಗೆ ಬೀಸಿ ಬ್ರಾಹ್ಮಣನನ್ನು ಕೊಂದದ್ದರಿಂದ ಬಂದ ಆ ಬ್ರಹ್ಮಹತ್ಯಾ ಪಾತಕವೇ ನಾನು. ನೀನು ಎಲ್ಲಿ ಹೋದರೂ ನಿನ್ನನ್ನು ಬಿಡದೆ ನಿನ್ನ ದೇಹಕ್ಕೆ ಅಂಟಿಕೊಂಡೆ ನಾನು ನಿನ್ನನ್ನು ಕಾಡುತ್ತಲೆ ಇದ್ದೆ. ಅಂತ್ಯ ಕಾಲದಲ್ಲಿ ನೀನು ನಾರಾಯಣನ ನಾಮಸ್ಮರಣೆ ಮಾಡಿದ್ದರಿಂದ ಸುದೈವದಿಂದ ನೀನು ವೈಕುಂಠ ಲೋಕಕ್ಕೆ ಹೋದೆ. ಅಲ್ಲಿಯೂ ನಾನು ನಿನ್ನ ಮೈಗೆ ತಗಲಿಕೊಂಡೇ ಇದ್ದೆ. ವೈಕುಂಠದಲ್ಲಿ ವಿಷ್ಣುದೂತರು ನನ್ನನ್ನು ವನಕೆಯಿಂದ ಹೊಡೆದು ಕೊಂದರು. ಆದರೂ ನಾನು ಸೂಕ್ಷ್ಮರೂಪದಿಂದ ಜೀವ ಹಿಡಿದುಕೊಂಡು ನೀನು ವೈಕುಂಠ ಲೋಕದಿಂದ ಹೊರಬರುವುದನ್ನು ಕಾಯುತ್ತ ಕುಳಿತಿದ್ದೆ. ನೀನು ಸ್ವರ್ಗಲೋಕಕ್ಕೆ ಬಂದಾಗ ಸೂಕ್ಷ್ಮ ರೂಪದಿಂದ ನಿನ್ನ ರೋಮಕೂಪದಲ್ಲಿ ಸೇರಿಕೊಂಡೆ. ಅನಂತರ ಬ್ರಹ್ಮದೇವರ ಒಂದು ಹಗಲು ಒಂದು ರಾತ್ರಿ ಕಳೆದ ಬಳಿಕ ಈಗ ಹೊಸ ಸೃಷ್ಟಿಯು ಪ್ರಾರಂಭವಾಗಿ ನೀನು ಕಾಶ್ಮೀರ ದೇಶದ ಅಧಿಪತಿಯಾದ ಸುಮನಸ ಮಹಾರಾಜನ ಮನೆಯಲ್ಲಿ ಜನಿಸಿದೆ. ನಾನು ನಿನ್ನ ಕೂದಲಗಳಲ್ಲಿಯೇ ಅವಿತುಕೊಂಡು ನಿನ್ನ ಜೊತೆಗೆ ಬೆಳೆಯುತ್ತಲಿದ್ದೆ. ನೀನು ಈವರೆಗೆ

ಅನೇಕಾನೇಕ ಯಜ್ಞಗಳನ್ನೂ, ಪುಣ್ಯ ಕರ್ಮಗಳನ್ನೂ ಮಾಡಿದ್ದರೂ ನಾನು ನಿನ್ನ ದೇಹದಿಂದ ತೊಲಗಿ ಹೋಗಲಿಲ್ಲ. ಏಕೆಂದರೆ ನೀನು ಮಾಡಿದ ಯಜ್ಞ ಯಾಗಗಳಲ್ಲಿ ಎಷ್ಟೇ ದಾನದಕ್ಷಿಣೆಗಳನ್ನು ಇತ್ತರೂ ಅವುಗಳ ಪ್ರಧಾನ ಉದ್ದೇಶವು ವಿಷ್ಣು ಪ್ರೀತಿಯಾಗಿರಲಿಲ್ಲ. ಮತ್ತೂ ಆ ಯಜ್ಞದ ಆದಿ, ಅಂತ್ಯ, ಮಧ್ಯ ಭಾಗಗಳಲ್ಲಿ ನೀನು ನಿರಂತರ ನಾರಾಯಣನ ನಾಮಸ್ಮರಣವನ್ನು ಮಾಡಲಿಲ್ಲ. ಇದರಿಂದ ನಿನ್ನ ದೇಹದಲ್ಲಿ ನಿನ್ನ ರೋಮಕೂಪದಲ್ಲಿ ಸೂಕ್ಷ್ಮರೂಪದಿಂದ ಇರುವ ಬ್ರಹ್ಮಹತ್ಯಾಪಾತಕವಾದ ನನಗೆ ಉಳಿದುಕೊಳ್ಳಲು ಅನುಕೂಲವೇ ಆಯಿತು. ಹೀಗೆ ವಿಷ್ಣು ಸ್ಮರಣ ವರ್ಜಿತವಾದ ನಿನ್ನ ಯಾವ ಪುಣ್ಯಕರ್ಮದಿಂದಲೂ ನನಗೆ ಚ್ಯುತಿ ಬರಲಿಲ್ಲ. ಕ್ಷತಿ ಒದಗಿರಲಿಲ್ಲ. ಆದರೆ ಈಗ ನೀನು ನಿಷ್ಕಾಮ ವ್ರತದಿಂದ ಕೇವಲ ವಿಷ್ಣು ಪ್ರೀತಿ ಉದ್ದೇಶದಿಂದ ಈ ಪುಂಡರೀಕಾಕ್ಷ ಸ್ತೋತ್ರವನ್ನು ಅತ್ಯಂತ ಭಕ್ತಿಯಿಂದ ಪಠಿಸಿದೆ. ಈ ಸ್ತೋತ್ರದ ಪ್ರಭಾವದಿಂದ ಇನ್ನು ನನಗೆ ನಿನ್ನ ಶರೀರದಲ್ಲಿ ಉಳಿಗಾಲವಿಲ್ಲದೆ ಹೊರಹೊರಡಲೇ ಬೇಕಾಯಿತು. ನಿನ್ನ ರೋಮ ರೋಮಗಳಲ್ಲಿ ವ್ಯಾಪಿಸಿಕೊಂಡು ಕುಳಿತ ಆ ಬ್ರಹ್ಮಹತ್ಯಾ ಪಾತಕವು ಈಗ ಒಟ್ಟಾಗಿ ಹೊರಬಿದ್ದು ನನ್ನ ಈ ವ್ಯಾಧ ರೂಪದಿಂದ ನಿನ್ನ ಎದುರು ನಿಂತಿದೆ. ಈ ವ್ಯಾಧನೇ ನಾನು. ನೀನು ಮಾಡಿದ ಪರಮಾತ್ಮನ ಈ ಪುಂಡರೀಕಾಕ್ಷನ ಸ್ತೋತ್ರವನ್ನು ಕೇಳಿ ನಾನಾದರೂ ಹಿಂದಿನ ನನ್ನ ಪಾಪ ಸ್ವಭಾವದಿಂದ ಬಿಡುಗಡೆಯನ್ನು ಹೊಂದಿದ್ದೇನೆ. ಆ ಸ್ತೋತ್ರ ಶ್ರವಣದ ಮಹಿಮೆಯಿಂದ ನಾನು ಪರಿಶುದ್ಧನಾಗಿದ್ದೇನೆ. ಈಗ ನನಗೆ ಧರ್ಮ ಬುದ್ಧಿಯು ಉತ್ಪನ್ನವಾಗಿದೆ '' ಎಂದು ಹೇಳಿದನು.

ಅದನ್ನು ಕೇಳಿ ಮಹಾರಾಜನು ಅತ್ಯಂತ ಆಶ್ಚರ್ಯಚಕಿತನಾಗಿ ನುಡಿದನು. '' ಬೇಡನೆ, ನೀನು ನನ್ನ ಜನ್ಮಾಂತರದ ಕಥೆಯನ್ನೆಲ್ಲ ನೆನಪಿಗೆ ತಂದು ಕೊಟ್ಟು ಉಪಕಾರ ಮಾಡಿದೆ. ಅದರಿಂದ ನೀನು ಇನ್ನು ಮುಂದೆ ಜಗತ್ತಿನಲ್ಲಿ 'ಧರ್ಮವ್ಯಾಧ' ಎಂದು ಪ್ರಸಿದ್ಧನಾಗುವೆ ಮತ್ತು ಯಾರು ನಾನು ಹೇಳಿದ ಈ ಪುಂಡರೀಕಾಕ್ಷ ಸ್ತೋತ್ರವನ್ನು ಪಠಿಸುವರೋ ಮತ್ತು ಶ್ರವಣ ಮಾಡುವರೋ ಅವರಿಗೆ ಪುಷ್ಕರ ಕ್ಷೇತ್ರದ ಯಾತ್ರೆ ಮಾಡಿ ವಿಧಿಪೂರ್ವಕವಾಗಿ ತೀರ್ಥಸ್ನಾನ ಮಾಡಿದ ಪುಣ್ಯವು ಪ್ರಾಪ್ತವಾಗುವುದು, ಫಲವು ದೊರಕುವುದು. ಹೀಗೆ ಹೇಳಿ ಆ ಮಹಾರಾಜನು ದೇವ ವಿಮಾನವನ್ನು ಆರೋಹಣ ಮಾಡಿ ಆ ಪುಂಡರೀಕಾಕ್ಷ ಸ್ತೋತ್ರದ ಪ್ರಭಾವದಿಂದ ದಿವ್ಯ ಸದ್ಗತಿಯನ್ನು ಹೊಂದಿದನು.

*ವರಾಹ ಮಹಾ ಪುರಾಣದಲ್ಲಿ ಆರನೇ ಅಧ್ಯಾಯ ಮುಗಿದುದು.*

—o—

## ಗಯಾದಲ್ಲಿ ಪಿಂಡದಾನದಿಂದ ಪಾಪಿಗಳ ಉದ್ಧಾರ | ಅಧ್ಯಾಯ - ೭

**ಧರಣೀದೇವಿ :-** ''ವಸುಮಹಾರಾಜನು ಭಗವತ್ ಸ್ತೋತ್ರದಿಂದ ಸಿದ್ಧಿ ಪಡೆದ ಸುದ್ದಿ ಕೇಳಿ, ರೈಭ್ಯ ಋಷಿಯು ಏನು ಮಾಡಿದ'' ಎಂಬುದನ್ನು ನನಗೆ ತಿಳಿದುಕೊಳ್ಳಬೇಕೆಂದು ಅಪೇಕ್ಷೆಯಾಗಿದೆ. ದಯಮಾಡಿ ತಿಳಿಸಬೇಕು.

**ವರಾಹ :-** ವಸು ನೃಪಾಲನ ಸಿದ್ಧಿಯ ಸಮಾಚಾರವನ್ನು ಕೇಳಿದ ರೈಭ್ಯ ಮುನಿಯು ಗಯಾ ಕ್ಷೇತ್ರಕ್ಕೆ ಬಂದನು. ತಪೋಧನನಾದ ಅವನು ಗಯಾ ಕ್ಷೇತ್ರದಲ್ಲಿ ಇದ್ದ ಪಿತೃ ತೀರ್ಥಕ್ಕೆ ಹೋಗಿ ಪಿತೃಗಳನ್ನು ಉದ್ದೇಶಿಸಿ ಪಿಂಡದಾನಾದಿಗಳನ್ನು ಮಾಡಿದನು ಮತ್ತು ಅದೇ ಗಯಾಕ್ಷೇತ್ರದಲ್ಲಿ ನಿಂತು ದುಶ್ಚರವಾದ ತಪಸ್ಸನ್ನು ಆಚರಿಸಿದನು. ಹೀಗೆ ರೈಭ್ಯನು ಘೋರವಾದ ತಪೋನುಷ್ಠಾನವನ್ನು ಗೈಯುತ್ತಿರುವಾಗ ವಿಮಾನದಿಂದ ಒಬ್ಬ ಮಹಾ ಯೋಗಿಯು ಅಲ್ಲಿಗೆ ಪ್ರಾಪ್ತನಾದನು. ಅವರ ಮೈ ಕಾಂತಿಯು ಸೂರ್ಯದೀಪ್ತಿಯಂತೆ ಬೆಳಗುತ್ತಿತ್ತು. ಅವನ ಆಕಾರವು ಅಣುಪ್ರಮಾಣವಿದ್ದಿತು. ಮಿಂಚುವ ವಿಮಾನದಲ್ಲಿ ಮಿನುಗುವ ಸೂರ್ಯನಂತೆ ತೇಜೋಭಾಸುರನಾಗಿ ಕುಳಿತುಕೊಂಡು ಆ ಪರಮಾಣು ಪರಿಮಾಣದ ಯೋಗಿಯು ರೈಭ್ಯನ ಹತ್ತಿರ ಬಂದು ''ವ್ರತನಿಷ್ಠನಾದ ರೈಭ್ಯನೇ ! ನೀನೀಗ ಯಾವ ತಪಸ್ಸನ್ನು ಆಚರಿಸುತ್ತಲಿರುವೆ ?'' ಎಂದು ಕೇಳಿದನು. ಆ ಅಣುಯೋಗಿಯ ದಿವ್ಯದೇಹದೀಪ್ತಿಯು ಭೂಮ್ಯಾಕಾಶಗಳನ್ನೆಲ್ಲ ತುಂಬಿತ್ತು. ಪ್ರತಿ ಸೂರ್ಯ ಮಂಡಲದಂತಿರುವ ಅವನ ವಿಮಾನದ ಕಾಂತಿಯು ವಿಷ್ಣು ಲೋಕದವರೆಗೂ ಹಬ್ಬಿತ್ತು. ಆಗ ಆ ಮಹಾಯೋಗಿಯು ನುಡಿದನು -

''ನಾನು ಬ್ರಹ್ಮದೇವರ ಮಗ. ರುದ್ರದೇವನ ತಮ್ಮ. ನನ್ನ ಹೆಸರು ಸನತ್ಕುಮಾರ. ನಾನಿರುವುದು ಜನೋ ಲೋಕದಲ್ಲಿ. ನೀನು ಮಾಡುವ ಈ ಅತ್ಯುಗ್ರವಾದ ತಪಸ್ಸನ್ನು ನೋಡಿ ಪ್ರೀತಿಯುಕ್ತನಾಗಿ ನಿನ್ನ ಬಳಿಗೆ ಬಂದಿದ್ದೇನೆ. ವತ್ಸ, ಬ್ರಹ್ಮ ದೇವರ ವಂಶವರ್ಧಕ ನಾದ ನೀನು ಈ ಘೋರ ತಪೋ ಅನುಷ್ಠಾನದಿಂದ ಧನ್ಯನಾಗಿರುವೆ. ನೀನು ನಿಜವಾಗಿಯೂ ಧನ್ಯ-ಧನ್ಯ''. ಅದನ್ನು ಕೇಳಿ ವಿಸ್ಮಿತನಾದ ರೈಭ್ಯ ಮುನಿಯು ಬಾಗಿ ನುಡಿದನು. ''ಯೋಗಿವರ್ಯ, ನಿನಗೆ ನನ್ನ ನಮಸ್ಕಾರವಿರಲಿ. ನೀನು ನನ್ನ ಮೇಲೆ ಪ್ರಸನ್ನನಾಗು. ನಿನ್ನ ಸ್ವರೂಪವನ್ನು ಕಂಡು ನನಗೆ ಅತ್ಯಂತ ಸಂತೋಷವಾಗಿದೆ. ಆದರೆ ಯೋಗಿಸಿಂಹ, ನೀನು ನನ್ನನ್ನೇ ಧನ್ಯ ಎಂದು ಕರೆಯುತ್ತಲಿರುವಿ. ಅದೇನು ಕಾರಣ ? ಹೇಳು''. ಆ ರೈಭ್ಯ ಮುನಿಯ ಪ್ರಶ್ನೆಯನ್ನು ಕೇಳಿ ಪ್ರಸನ್ನ ಚಿತ್ತನಾದ ಸನತ್‌ಕುಮಾರರು ಉತ್ತರಿಸಿದರು.

''ಬ್ರಾಹ್ಮಣೋತ್ತಮ, ವೇದಾಧ್ಯಯನ ಸಂಪನ್ನನಾದ ನೀನು ಗಯಾ ಕ್ಷೇತ್ರಕ್ಕೆ ಬಂದು ಮಂತ್ರಪಾರಾಯಣವನ್ನು ಮಾಡಿ, ವ್ರತಗಳನ್ನು ಆಚರಿಸಿ, ಜಪವನ್ನು ಜಪಿಸಿ, ಹೋಮ ಹವನ ಮಾಡಿ, ಮತ್ತು ಸರ್ವಪಿತೃ ಪಿಂಡಗಳನ್ನು ವಿಷ್ಣು ಪಾದದಲ್ಲಿ ಕೊಟ್ಟು, ಪಿತೃಗಳನ್ನು ಅತ್ಯಂತ ತೃಪ್ತಿಗೊಳಿಸಿರುವೆ. ಆದುದರಿಂದ 'ನೀನು ಧನ್ಯ' ಎಂದು ನಾನು ನುಡಿದದ್ದು ಯಥಾರ್ಥವೇ ಆಗಿರುತ್ತೆ. ಈ ವಿಷಯದಲ್ಲಿ ಹಿಂದಿನ ಒಂದು ಘಟನೆಯನ್ನು ಹೇಳುತ್ತೇನೆ'' ಕೇಳು. ಪೂರ್ವಕಾಲದಲ್ಲಿ ವಿಶಾಲ ಎಂಬ ಅರಸನು ವಿಶಾಲಾ ಎಂಬ

ನಗರದಲ್ಲಿ ವಾಸಮಾಡಿದ್ದನು. ಅವನು ಧೀರನೂ, ಧನ್ಯನೂ ಆಗಿದ್ದನು. ಆದರೆ ಅವನಿಗೆ ಯೋಗ್ಯ ಸಂತಾನವು ಇರಲಿಲ್ಲ. ಅದಕ್ಕಾಗಿ ಅವನು ಜ್ಞಾನಿಗಳಾದ ಬ್ರಾಹ್ಮಣರನ್ನು ಒಳ್ಳೆ ಸಂತಾನ ಲಾಭಕ್ಕಾಗಿ ಏನು ಮಾಡಬೇಕೆಂದು ಕೇಳಿದನು. ಅದಕ್ಕೆ ಆ ವಿಪ್ರವರ್ಯರು ಮಹಾ ಸತ್ವಶಾಲಿಗಳಾದುದರಿಂದ ತುಸು ಹೊತ್ತು ಆಲೋಚಿಸಿ ಇಂತು ಆದೇಶವಿತ್ತರು -

''ರಾಜನೇ! ನಿನಗೆ ಒಳ್ಳೇ ಸಂತಾನವಾಗಬೇಕಿದ್ದರೆ ಗಯಾ ಕ್ಷೇತ್ರಕ್ಕೆ ಹೋಗಿ ಅಲ್ಲಿಯ ಬ್ರಾಹ್ಮಣರಿಗೆ ಬಗೆ ಬಗೆಯ ಅನ್ನದಾನಗಳಿಂದ ಸಂತೋಷಪಡಿಸು. ಅದರಿಂದ ಪಿತೃಗಳು ತೃಪ್ತರಾಗುತ್ತಾರೆ. ಅದರಿಂದ ಖಂಡಿತವಾಗಿಯೂ ನಿನಗೆ ಓರ್ವ ಗಂಡು ಮಗನು ಜನಿಸುತ್ತಾನೆ. ಅವನು ನಿಶ್ಚಿತವಾಗಿಯೂ ಸಕಲ ಭೂಮಂಡಲಕ್ಕೆಲ್ಲ ಅಧಿರಾಜನಾಗುತ್ತಾನೆ. ನಿಸ್ಸಂಶಯವಾಗಿ ಅವನು ಕೊಡುಗೈದೊರೆ ಎಂದು ಸುಪ್ರಸಿದ್ಧನೂ ಆಗುತ್ತಾನೆ. ಭಾರಿ ದಾನ ಮಾಡುತ್ತಾನೆ''. ವಾಕ್‌ಸಿದ್ಧಿಯುಳ್ಳ ಆ ಬ್ರಾಹ್ಮಣರ ನುಡಿಗಳನ್ನು ಕೇಳಿ ವಿಶಾಲಾನಗರಿಯ ಅಧಿಪತಿಯಾದ ವಿಶಾಲರಾಜನು ಸಂತೋಷಭರಿತನಾದನು. ಅವನು ಮಹಾಪ್ರಯತ್ನ ದಿಂದ ಆ ಬ್ರಾಹ್ಮಣರು ಹೇಳಿದಂತೆ ಎಲ್ಲವನ್ನೂ ಮಾಡಿದನು. ಗಯಾ ಕ್ಷೇತ್ರಕ್ಕೆ ಬಂದನು. ಅಲ್ಲಿ ಪಿತೃತೀರ್ಥದಲ್ಲಿ ಮಘಾ ನಕ್ಷತ್ರದಲ್ಲಿ ಭಕ್ತಿಯಿಂದ ಪಿತೃಗಳನ್ನು ಉದ್ದೇಶಿಸಿ ವಿಧಿಪೂರ್ವಕವಾಗಿ ಪಿಂಡಪ್ರದಾನವನ್ನು ಮಾಡಿದನು. ಆಗ ಆ ವಿಶಾಲರಾಜನ ಕಣ್ಣಿಗೆ ಆಕಾಶದಲ್ಲಿ ಮೂವರು ವ್ಯಕ್ತಿಗಳು ಕಾಣಿಸಿದರು. ಅವರಲ್ಲಿ ಒಬ್ಬನು ಬೆಳ್ಳಗಿದ್ದು ಮತ್ತೊಬ್ಬನು ಹಳದೀ ಬಣ್ಣದವನು. ಮಗದೊಬ್ಬನು ಕಪ್ಪು ಬಣ್ಣದವನು. ಹೀಗೆ ಬೇರೆ ಬೇರೆ ಬಣ್ಣದ ಮೂರು ಜನರನ್ನು ಕಂಡು ಕುತೂಹಲಭರಿತನಾದ ವಿಶಾಲರಾಜನು ಅವರನ್ನು ಕುರಿತು ''ಮಹನೀಯರೇ, ನೀವು ಯಾರು? ಇಲ್ಲಿ ನೀವು ಏನನ್ನು ನೋಡುತ್ತಲಿದ್ದೀರಿ? ಹೇಳಿರಿ. ನಿಮ್ಮನ್ನು ಕಂಡು ನನಗೆ ಬಹಳ ಕುತೂಹಲವಾಗಿದೆ'' ಎಂದು ಕೇಳಿದನು. ಆಗ ಆ ಮೂವರಲ್ಲಿ ಶುಭ್ರನಾದ ಒಬ್ಬನು ಅವನಿಗೆ ಉತ್ತರ ಕೊಟ್ಟನು-

''ಮಗನೇ, ನಾವು ಮೂವರಲ್ಲಿ ಬಿಳಿ ಬಣ್ಣದ ನಾನು ನಿನ್ನ ತಂದೆಯಾಗಿದ್ದೇನೆ. ನೀನು ಕುಲ, ಶೀಲ, ಸ್ವಭಾವ, ಕೃತಿ, ನಾಮ, ಧಾಮ ಮುಂತಾಗಿ ಎಲ್ಲ ರೀತಿಯಿಂದಲೂ ನೀನು ನನ್ನಂತೆಯೇ ಇರುವೆ. ನನ್ನ ಪಕ್ಕದಲ್ಲಿರುವ ಈ ಹೊಂಬಣ್ಣದ ಹಿರಿ ಮನುಷ್ಯನು ನನ್ನ ತಂದೆಯಾಗಿರುತ್ತಾನೆ. ಅವನ ಹೆಸರು ಅಧೀಶ್ವರ. ಇವನು ಬದುಕಿದ್ದಾಗ ಅನೇಕ ಕ್ರೂರ ಕಾರ್ಯಗಳನ್ನು ಬ್ರಹ್ಮಹತ್ಯೆಯನ್ನೂ ಇನ್ನೂ ಅನೇಕ ಪಾಪಗಳನ್ನೂ ಮಾಡಿದ್ದಾನೆ. ಮೂರನೇಯವನಾದ ಕಪ್ಪು ಮೈ ವ್ಯಕ್ತಿಯು ಅವನ ತಂದೆ, ಅಂದರೆ ನನ್ನ ಅಜ್ಜನಾಗಿದ್ದಾನೆ. ಅವನ ಹೆಸರು ಕೃಷ್ಣ, ಅವನ ಕಾರ್ಯಗಳೂ ಅವನ ಸ್ವಭಾವ, ಅವನ ಶೀಲವೂ, ಅವನ ಚರಿತ್ರೆಯೂ ಅಷ್ಟೇ ಕಪ್ಪಾಗಿದೆ. ಅವನು ಪೂರ್ವ ಜನ್ಮದಲ್ಲಿ ಅನೇಕ ಋಷಿಗಳನ್ನು ಕೊಂದಿದ್ದಾನೆ. ಮಾಡಬಾರದ ಅಕೃತ್ಯಗಳನ್ನೆಲ್ಲಾ ಮಾಡಿದ್ದಾನೆ. ಈ ನನ್ನ ತಂದೆ ಮತ್ತು ಅಜ್ಜಂದಿರು ಇಬ್ಬರೂ ಮರಣದ ನಂತರ ಅವೀಚಿ ಎಂಬ ಘೋರ ನರಕದಲ್ಲಿ ಬಹುಕಾಲದವರೆಗೆ ಯಮಯಾತನೆಯನ್ನು ಭೋಗಿಸಿ ಬೆಂದು ಬಂದಿದ್ದಾರೆ.

ನಾನು ಮಾತ್ರ ಪರಿಶುದ್ಧವಾದ ಸದಾಚಾರ ಮತ್ತು ಶಾಸ್ತ್ರೋಕ್ತವಾದ ಸತ್ಕರ್ಮಾನುಷ್ಠಾನದಿಂದ ಸ್ವರ್ಗವನ್ನು ಹೊಂದಿದೆನು. ಅಲ್ಲಿಯೂ ಕೂಡ ಭಗವದ್ಧ್ಯಾನದಿಂದ ದೇವೇಂದ್ರನ ಸಿಂಹಾಸನದ ಬಳಿಯಲ್ಲಿಯೇ ಕುಳಿತುಕೊಳ್ಳುವ

ದುರ್ಲಭವಾದ ಗೌರವವನ್ನು ಹೊಂದಿದೆನು. ಸತ್ಪುತ್ರನೇ! ಮಂತ್ರವಿದ್ಯಾ ವಿಶಾರದನಾದ ನೀನು ಮಾತ್ರ ಗಯಾ ಕ್ಷೇತ್ರಕ್ಕೆ ಬಂದು ಪಿಂಡ ಪ್ರದಾನವನ್ನು ಮಾಡಿ ನರಕದ ನೊರಜಾಗಿ ನೆರಳಿ ನವೆಯುತ್ತಲಿರುವ ಈ ನನ್ನ ತಂದೆ ತಾತರನ್ನು ಉದ್ಧಾರ ಮಾಡಿದೆ. ನಿನ್ನ ಈ ಗಯಾ ಪಿಂಡ ಪ್ರದಾನದಿಂದ ನಾವು ಮೂವರೂ ಒಂದುಗೂಡಿದಂತಾಯಿತು. ತಂದೆ, ತಾತ, ಮುತ್ತಾರನ್ನು ತೃಪ್ತಿಪಡಿಸುತ್ತೇನೆ ಎಂದು ವಾಕ್ಯವನ್ನು ಉಚ್ಚರಿಸಿ ನೀನು ಕೊಟ್ಟ ಜಲಾಂಜಲಿಯ ತೀರ್ಥೋದಕದ ಮಹಿಮೆಯಿಂದ ನಿನ್ನ ಪಿತ, ಪಿತಾಮಹ ಮತ್ತು ಪ್ರಪಿತಾಮಹರಾದ ನಾವು ಮೂವರು ಹಿಗ್ಗಿ ಒಗ್ಗೂಡಿದ್ದೇವೆ. ಈ ಗಯಾ ಕ್ಷೇತ್ರದ ಪಿತೃ ತೀರ್ಥದಲ್ಲಿ ನೀನು ಕೊಟ್ಟ ತರ್ಪಣದಿಂದ ನಾನಂತೂ ಪಿತೃಲೋಕಕ್ಕೆ ಹೋಗುತ್ತೇನೆ. ಅದರಲ್ಲಿ ಸಂಶಯವಿಲ್ಲ. ಆದರೆ ನೀನು ಗಯಾ ಕ್ಷೇತ್ರದಲ್ಲಿ ಮಾಡಿದ ಪಿಂಡ ಪ್ರದಾನದ ಮಹಿಮೆಯಿಂದ ಮಹಾಪಾತಕಿಗಳೂ ನರಕಯೋಗ್ಯರೂ ಆದ ಈ ನಿನ್ನ ತಾತ ಮುತ್ತಾತರೂ ಕೂಡ ಉದ್ಧೃತರಾಗಿದ್ದಾರೆ. ಅವರ ರೂಪವೇ ಬದಲಾಗಿದೆ. ಅವರ ಸ್ವಭಾವವೂ ಪರಿವರ್ತನಗೊಂಡಿದೆ. ಇದೆಲ್ಲವೂ ಈ ತೀರ್ಥೋದಕದ ಮಹಿಮೆ.

ಬ್ರಹ್ಮಹತ್ಯೆಗೈದವನ ಮಗನು ಈ ಗಯಾ ಕ್ಷೇತ್ರಕ್ಕೆ ಬಂದು ತಂದೆಯ ಹೆಸರಿನಿಂದ ಒಂದು ಪಿಂಡವನ್ನು ಹಾಕಿದರೆ ಸಾಕು, ಅವನ ತಂದೆಯ ಉದ್ಧಾರವಾಗಿ ಹೋಗುತ್ತದೆ. ಇದೇ ಕಾರಣಕ್ಕಾಗಿ ನಾನು ನಿನ್ನನ್ನು ನೋಡಲಿಕ್ಕಾಗಿ ಇವರಿಬ್ಬರೂ ನನ್ನ ತಂದೆ ತಾತಂದಿರನ್ನು ಕರೆದುಕೊಂಡು ಇಲ್ಲಿಗೆ ಬಂದಿದ್ದೇನೆ. ಇಲ್ಲಿ ಬಂದು ನಿನ್ನನ್ನು ನೋಡಿಯಾಯಿತು. ನಿನ್ನ ಜೊತೆಗೆ ಮಾತನಾಡಿಯಾಯಿತು. ಇನ್ನು ನಾವು ಹೊರಡುತ್ತೇವೆ'' ಎಂದು ಹೇಳಿ ಮೂವರೂ ಇಲ್ಲಿಂದ ಹೊರಟು ಹೋದರು.

ಇದೇ ಕಾರಣಕ್ಕಾಗಿ ''ರೈಭ್ಯಮುನಿಯೇ! ನೀನು ಧನ್ಯ'' ಎಂದು ನಾನು ಹೇಳಿದೆ. ಗಯಾ ಕ್ಷೇತ್ರಕ್ಕೆ ಒಮ್ಮೆ ಹೋಗುವುದು, ಒಂದು ಸಲ ಪಿಂಡಪ್ರದಾನ ಮಾಡುವದು ಅತ್ಯಂತ ದುರ್ಲಭವಾಗಿದೆ. ಅಂದ ಬಳಿಕ ನೀನಂತೂ ನಿರಂತರವೂ ಈ ಗಯಾ ಕ್ಷೇತ್ರದಲ್ಲಿಯೇ ನೆಲಿಸಿ ಪಿತೃಗಳಿಗೆ ಪಿಂಡ ಪ್ರದಾನವನ್ನು ಮಾಡುತ್ತಲೇ ಇರುವೆ. ಅಂದ ಬಳಿಕ ನಿನ್ನ ಪುಣ್ಯವನ್ನು ಏನೆಂದು ಬಣ್ಣಿಸಲಿ, ಎಷ್ಟೆಂದು ಹೇಳಲಿ! ಗದಾಪಾಣಿಯಾದ ನಾರಾಯಣನು ಈ ಗಯಾ ಕ್ಷೇತ್ರದಲ್ಲಿ ಸಾಕ್ಷಾತ್ತಾಗಿ, ಬಂದು ನೆಲಿಸಿದ್ದಾನೆ. ಆದುದರಿಂದಲೇ ಈ ತೀರ್ಥವು ಮಹಾ ಪುಣ್ಯಕ್ಷೇತ್ರವೆಂದು ಪ್ರಸಿದ್ಧವಾಗಿದೆ.'' ಹೀಗೆ ಹೇಳಿ ಯೋಗೀಶ್ವರರಾದ ಸನತ್ಕುಮಾರರು ಅಲ್ಲಿಯೇ ಅದೃಶ್ಯರಾದರು. ಅನಂತರ ರೈಭ್ಯ ಋಷಿಯು ಗಯಾಗದಾಧರನ ಸ್ತೋತ್ರ ಮಾಡಿದನು.

ಗದಾಧರಂ ವಿಬುಧ ಜನೈರಭಿಷ್ಟುತಂ
ದೃತಕ್ಷಮಂ ಕ್ಷುಧಿತ ಜನಾರ್ತಿನಾಶನಂ ॥
ಶಿವಂ ವಿಶಾಲಾಽಸುರಸೈನ್ಯ ಮರ್ದನಂ
ನಮಾಮ್ಯಹಂ ಹೃತಸಕಲಾಶುಭಂ ಸ್ಮೃತೌ ॥

ಸ್ಮರಣ ಮಾತ್ರದಿಂದಲೇ ಸರ್ವಾರಿಷ್ಟಗಳನ್ನು ಕಳೆಯುವ, ವಿಶಾಲವಾದ ದೈತ್ಯ ಸೇನೆಯನ್ನು ಮರ್ದಿಸುವ, ಹಸಿದ ಜನರ ಕಸಿವಿಸಿಯನ್ನು ಕಳೆಯುವ, ಬಲ್ಲವರು

ಬಣ್ಣಿಸುವ ಕ್ಷಮಾ ಗುಣಕ್ಕೆ ಆಸರೆಯಾದ, ಮಂಗಳಮೂರ್ತಿಯಾದ, ಗಯಾ ಕ್ಷೇತ್ರದಲ್ಲಿ ನೆಲಸಿದ ಗದಾಧರ ಸ್ವಾಮಿಯನ್ನು ವಂದಿಸುತ್ತೇನೆ. ಹೀಗೆ ರೈಭ್ಯ ಮುನಿಯು ಮಾಡಿದ ಬಗೆಬಗೆಯ ಬಣ್ಣನೆಯ ಮಂತ್ರ ಸ್ತೋತ್ರಗಳಲ್ಲಿ ಶ್ರೀಮಹಾವಿಷ್ಣುವು ಪರಮ ಪ್ರೀತನಾಗಿ ಅಲ್ಲಿ ಪ್ರತ್ಯಕ್ಷನಾದನು. ಅವನು ಪೀತಾಂಬರವನ್ನು ಉಟ್ಟಿದ್ದನು. ಕೈಗಳಲ್ಲಿ ಶಂಖ, ಚಕ್ರ, ಗದೆಗಳನ್ನು ಧರಿಸಿದ್ದನು. ಗರುಡನನ್ನು ಏರಿಕೊಂಡು ಆಕಾಶದ ಅಂತರದಲ್ಲಿಯೇ ನಿಂತುಕೊಂಡು ಮೇಘದಂತೆ ಧೀರ ಗಂಭೀರವಾದ ದನಿಯಿಂದ ನುಡಿದನು.

''ಭಕ್ತ ಶ್ರೇಷ್ಠನಾದ ರೈಭ್ಯ ಮುನಿಯೇ ! ನಿನ್ನ ಭಕ್ತಿಯಿಂದಲೂ, ನಿನ್ನ ಬಣ್ಣನೆಯಿಂದಲೂ ನಾನು ಸಂತೃಪ್ತನಾಗಿದ್ದೇನೆ. ನಿನಗೆ ಏನು ಬೇಕು ಬೇಡು, ಬಯಸಿದ್ದನ್ನು ಕೊಡುವೆನು''. ಆಗ ರೈಭ್ಯನು ಕೃತಾಂಜಲಿ ಪುಟನಾಗಿ ''ಭಗವನ್, ಸನಕಾದಿ ಮಹರ್ಷಿಗಳು ವಾಸಿಸುವಲ್ಲಿ ನಾನು ಇದ್ದು ಹೆಚ್ಚಿನ ಸಾಧನಾನುಷ್ಠಾನವನ್ನು ಮಾಡುವಂತೆ ಅನುಗ್ರಹಿಸು'' ಎಂದು ಬೇಡಿಕೊಂಡನು. ಅವನೆದುರು ಪ್ರಾದುರ್ಭೂತನಾದ ಜನಾರ್ದನನು ''ಹಾಗೇ ಆಗಲಿ'' ಎಂದು ಹೇಳಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಇತ್ತ ರೈಭ್ಯ ಮುನಿಯಾದರೂ ದಿವ್ಯ ಜ್ಞಾನವನ್ನು ಪಡೆದು ಪರಮಾತ್ಮನ ಅನುಗ್ರಹದಿಂದ ಒಂದು ಕ್ಷಣ ಮಾತ್ರದಲ್ಲಿ ಸನಕ ಸನಂದನಾದಿ ಸಿದ್ಧ ಪುರುಷರು ವಾಸಿಸಿದ್ದ ದಿವ್ಯಲೋಕವನ್ನು ಕುರಿತು ಹೊರಟು ಹೋದನು.

*ವರಾಹ ಪುರಾಣದಲ್ಲಿ ಏಳನೇ ಅಧ್ಯಾಯ ಮುಗಿದದು*



## ಧರ್ಮವ್ಯಾಧನ ಕಥೆ, ಅತ್ತೆಯ ಕಾಟ, ಮುನಿಗಳಲ್ಲಿ ಬಡೆದಾಟ | ಅಧ್ಯಾಯ - ೮

ವಸುರಾಜನ ದೇಹದಿಂದ ಹೊರಟ ಧರ್ಮವ್ಯಾಧ ಎಂಬ ಆ ಬೇಡನು ನಾಲ್ಕು ಸಾವಿರ ವರುಷಗಳವರೆಗೆ ವಿಹಿತ ಕರ್ಮಗಳನ್ನು ಮಾಡುತ್ತಾ ಬಾಳಿದನು. ಅವನು ತಮ್ಮ ಕುಟುಂಬ ಪಾಲನೆಗಾಗಿ ಮತ್ತು ತಮ್ಮೆಲ್ಲರ ಉದರ ನಿರ್ವಾಹಕ್ಕಾಗಿ ಕಾಡಿನಲ್ಲಿ ಅಲೆದಾಡುವ ಒಂದು ಮೃಗವನ್ನು ಹೊಡೆದು ಕೊಂದು ತಂದು ಅತಿಥಿಗಳನ್ನೂ ಸೇವಕರನ್ನೂ, ಕುಟುಂಬದವರನ್ನೂ ತೃಪ್ತಿ ಪಡಿಸುತ್ತಿದ್ದನು. ಧರ್ಮಾತ್ಮನಾದ ಅವನು ಅಮಾವಾಸ್ಯೆ, ಸಂಕ್ರಮಣ ಮುಂತಾದ ಎಲ್ಲ ಪರ್ವಕಾಲದಲ್ಲಿಯೂ, ಪುಣ್ಯಕಾಲದಲ್ಲಿಯೂ ಪ್ರತಿದಿನದಲ್ಲಿಯೂ ತಮ್ಮ ಸಂಪ್ರದಾಯಕ್ಕೆ ಅನುಸಾರವಾಗಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧವನ್ನು ಮಾಡುತ್ತಿದ್ದನು. ನಿತ್ಯವೂ ಅಗ್ನಿ ಪೂಜೆಯನ್ನು ಮಾಡಿ ಸತ್ಯವನ್ನೇ ಆಡುತ್ತಿದ್ದನು. ಅತಿಥಿ ಅಭ್ಯಾಗತರ ಭೋಜನಕ್ಕಾಗಿಯೂ ತನ್ನ ಜೀವಧಾರಣಕ್ಕಾಗಿಯೂ ಮಾತ್ರ ಅವನು ಕ್ರೂರ ಪ್ರಾಣಿಗಳನ್ನು ಕೊಲ್ಲುತ್ತಿದ್ದನು. ಅವನು ಬೇರೆ ತನ್ನ ಸ್ವಾರ್ಥಕ್ಕಾಗಿ ಅಥವಾ ಸುಖವಿಲಾಸಕ್ಕಾಗಿ ಎಂದು ಪ್ರಾಣಿಹಿಂಸೆ ಮಾಡುತ್ತಿದ್ದಿಲ್ಲ. ಹೀಗೆ ಒಳ್ಳೆ ನಡತೆಯಿಂದ ಜೀವನ ಯಾಪನ ಮಾಡುತ್ತಲಿದ್ದ ಆ ಧರ್ಮವ್ಯಾಧನಿಗೆ ಅರ್ಜುನಕ ಎಂಬ ತಪಸ್ವಿಯಾದ ಮಗನು ಜನಿಸಿದನು. ಅವನೂ ಕೂಡ ತಂದೆಯಂತೆ ಮಹಾ ಧಾರ್ಮಿಕನಾಗಿದ್ದನು. ಮುನಿಯಂತೆ ಜಿತೇಂದ್ರಿಯನಾಗಿದ್ದನು. ಕೆಲವು ಕಾಲ ಕಳೆದ ಬಳಿಕ ಆ ಧರ್ಮವ್ಯಾಧನಿಗೆ ಅರ್ಜುನಿಕಾ ಎಂಬ ಕನ್ಯಾ ರತ್ನವು ಹುಟ್ಟಿತು.

ಅವಳಿಗೆ ಪ್ರಾಯವು ಬಂದ ಬಳಿಕ ಧರ್ಮವ್ಯಾಧನು ''ಈ ಮಗಳನ್ನು ಎಲ್ಲಿ ಕೊಡುವುದು ? ಇವಳಿಗೆ ಯೋಗ್ಯನಾದ ವರನು ಯಾರು ?'' ಎಂದು ಮುಂತಾಗಿ ಚಿಂತಿಸತೊಡಗಿದನು. ಹೀಗೆ ಅವನು ಆಲೋಚನೆಗೈಯುತ್ತಿರುವಾಗಲೇ ಮತಂಗಋಷಿಯ ಮಗನಾದ ಸುಪ್ರಸನ್ನನೆಂಬ ಹುಡುಗನು ತನ್ನ ಮಗಳಿಗೆ ಯೋಗ್ಯನಾದ ವರನಾಗಬಹುದೆಂದು ಅವನಿಗೆ ತೋಚಿತು. ಕೂಡಲೇ ಅವನು ಮತಂಗ ಋಷಿಯ ಆಶ್ರಮಕ್ಕೆ ಹೋಗಿ ''ಪೂಜ್ಯರೇ, ನನ್ನ ಮಗಳಾದ ಅರ್ಜುನಿಯನ್ನು ತಮ್ಮ ಮಗನಾದ ಪ್ರಸನ್ನನಿಗೆ ಮಡದಿ ಎಂದು ಸ್ವೀಕರಿಸಿ ಅನುಗ್ರಹಿಸಬೇಕು'' ಎಂದು ಬಿನ್ನವಹಿಸಿಕೊಂಡನು.

ಅದಕ್ಕೆ ಮತಂಗಋಷಿಗಳು ಆನಂದದಿಂದ ''ಧರ್ಮವ್ಯಾಧ, ಎಲ್ಲ ಶಾಸ್ತ್ರಗಳಲ್ಲಿಯೂ ಪಾರಂಗತನಾದ ಈ ನನ್ನ ಮಗ ಪ್ರಸನ್ನನು ನಿನ್ನ ಕನ್ಯೆಯಾದ ಅರ್ಜುನಿಯನ್ನು ನನ್ನ ಆಜ್ಞೆಯಂತೆ ಪತ್ನಿಯನ್ನಾಗಿ ಸ್ವೀಕರಿಸುವನು'' ಎಂದು ಹೇಳಿದರು. ತಪಸ್ವಿಯಾದ ಧರ್ಮವ್ಯಾಧನು ತಾಪಸೋತ್ತಮರಾದ ಮತಂಗ ಮುನಿಗಳ ಜಾಣ ಮಗನಾದ ಪ್ರಸನ್ನನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದನು. ಇದರಿಂದ ಎರಡು ಪಕ್ಷದವರೂ ಪ್ರೀತ ಪ್ರಸನ್ನರಾದರು. ಧರ್ಮವ್ಯಾಧನು ಕನ್ಯಾದಾನ ಮಾಡಿಕೊಟ್ಟು ತನ್ನ ಮನೆಗೆ ಮರಳಿದನು. ವ್ಯಾಧ ಕುಮಾರಿಯಾದ ಅರ್ಜುನಿಯು ಗಂಡನ ಮನೆಯಲ್ಲಿ ಅತ್ತೆಮಾವಂದಿರ ಹಾಗೂ ಪತಿಯ ಸೇವೆಯನ್ನು ಪರಿಪರಿಯಿಂದ ಮಾಡತೊಡಗಿದಳು. ಹೀಗೆ ಕೆಲವು ಕಾಲ ಕಳೆಯುತ್ತಿರಲಾಗಿ ಅತ್ತೆ ಮನೆಯಲ್ಲಿ ಯಾವುದೋ ಒಂದು ಅಲ್ಪ ತಪ್ಪಿಗಾಗಿ ಸೊಸೆ ಅರ್ಜುನಿಗೆ ಕೋಪದಿಂದ ಅತ್ತೆಯು ಬಿರುನುಡಿಗಳನ್ನು ಆಡಿದಳು -

''ಅರ್ಜುನಿ, ನೀನು ಎಷ್ಟೆಂದರೂ ಪ್ರಾಣಹಿಂಸೆ ಮಾಡುವ ಬೇಡರ ಮಗಳು. ಕೊಲೆಗಡುಕರ ಮಕ್ಕಳಿಗೆ ಕುಲಾಚಾರಗಳು ಹೇಗೆ ತಿಳಿಯುತ್ತವೆ! ನಿನಗೆ ತಪಸ್ಸು ಮಾಡಲು ತಿಳಿಯುವುದಿಲ್ಲ, ಪತಿಸೇವೆ ಮಾಡುವುದು ಗೊತ್ತಿಲ್ಲ'' ಎಂದು ಮುಂತಾಗಿ ಸೊಸೆಯನ್ನು ಹಳಿದು ಹೀಗಳೆದಳು. ಅರ್ಜುನಿಯ ಅಪರಾಧವು ಅತ್ಯಲ್ಪವಾಗಿದ್ದಿತು. ಅಷ್ಟು ಅಲ್ಪ ಅಪರಾಧಕ್ಕೆ ಅತ್ತೆಯು ಸೊಸೆಯ ಕುಲಗೋತ್ರಗಳನ್ನು ತೆಗೆದು, ಹೀನಾಮಾನವಾಗಿ ಬೈಯ್ದು, ನಿರ್ಭರ್ತ್ಸನೆ ಗೈದು ಸಿಟ್ಟಿನಿಂದ ಎಗರಾಡಿದಳು. ಅದನ್ನು ಕೇಳಿ ದುಃಖಿತಳಾದ ಅರ್ಜುನಿಯು ಬಿಕ್ಕಿ ಬಿಕ್ಕಿ ಅಳುತ್ತ ತಂದೆಯ ಮನೆಗೆ ಬಂದಳು. ಆಗ ಗಾಬರಿಯಾದ ಧರ್ಮವ್ಯಾಧನು ಮಗಳ ರೋದನದ ಕಾರಣವನ್ನು ಕೇಳಿದನು. ಅದಕ್ಕೆ ಅವಳು ಅಳುತ್ತಾ ''ಅಪ್ಪಾ, ಇಂದು ನನ್ನ ಅತ್ತೆಯು ಬಹಳ ಕೋಪದಿಂದ ನನ್ನನ್ನು ಬಾಯಿಗೆ ಬಂದಂತೆ ಬೈದು ನೀನು ಕೊಲೆಗಡುಕನ ಮಗಳು, ಬೇಡರ ಜಾತಿಯವಳು ಎಂದು ಮುಂತಾಗಿ ನಿಂದಿಸಿದಳು'' ಎಂದು ಅರ್ಜುನಿಯು ತನ್ನ ರೋದನ ಕಾರಣವನ್ನು ತಿಳಿಸಿದಳು. ಇದನ್ನು ಕೇಳಿ ಧರ್ಮಾತ್ಮನಾದ ಧರ್ಮವ್ಯಾಧನಿಗೂ ಕೋಪ ಬಂದಿತು. ಕೂಡಲೇ ಅವನು ಮತಂಗಋಷಿಯ ಮನೆಗೆ ಹೋದನು. ಅಲ್ಲಿ ಆ ಮುನಿಯ ಬಳಿಯಲ್ಲಿ ಅನೇಕ ಹಳ್ಳಿಗಾಡ ಜನರು ಮಾತನಾಡುತ್ತ ಕುಳಿತಿದ್ದರು. ಮತಂಗ ಮುನಿಗಳು ತಮ್ಮ ಬೀಗ ಮನುಷ್ಯನು ಆಕಸ್ಮಿಕವಾಗಿ ತಮ್ಮ ಬಳಿಗ ಬಂದುದನ್ನು ನೋಡಿ ಆಸನವಿತ್ತು, ಅರ್ಘ್ಯವನ್ನು ನೀಡಿ, ಉಪಚಾರವನ್ನು ಮಾಡಿ ಸತ್ಕರಿಸಿದರು. ಮತ್ತು ''ನೀವು ಇಲ್ಲಿಗೆ ಬಂದ ಕಾರಣವೇನು ? ನಿಮಗಾಗಿ ನಾನು ಏನು ಮಾಡಲಿ'' ಎಂದು ಕೇಳಿದರು.

**ಧರ್ಮವ್ಯಾಧ :-** ಮುನಿಗಳೇ, ನನಗೆ ಹಿಂಸಾತ್ಮಕವಾದ ಊಟವನ್ನು ಮಾಡಬೇಕಾಗಿದೆ. ಅದಕ್ಕಾಗಿಯೇ ಕುತೂಹಲದಿಂದ ನಿಮ್ಮ ಮನೆಗೆ ಬಂದಿದ್ದೇನೆ.

**ಮತಂಗ :-** ನನ್ನ ಮನೆಯಲ್ಲಿ ಆರಿಸಿ ಇಟ್ಟ ಅಕ್ಕಿ, ಗೋದಿ ಮುಂತಾದ ಧಾನ್ಯಗಳಲ್ಲಿ ಹುಳಹುಪ್ಪಡಿ ಕಲ್ಲು-ಮಣ್ಣು ಸೇರದಂತೆ ಅವುಗಳನ್ನು ಶೋಧಿಸಿ ಇಟ್ಟಿದೆ. ಧರ್ಮಾತ್ಮರಾದ ನೀವು ಅದನ್ನು ಯಥೇಚ್ಛವಾಗಿ ಉಣ್ಣಬಹುದು.

**ಧರ್ಮವ್ಯಾದ :-** ಎಲ್ಲಿ ನಿಮ್ಮ ಅಕ್ಕಿ! ಮತ್ತು ಗೋಧಿ! ನೋಡೋಣ ಹೇಗಿದೆ! ಅದರ ಆಕಾರವನ್ನಾದರೂ ನಾನು ನೋಡಿ ತಿಳಿದುಕೊಳ್ಳುತ್ತೇನೆ. ಧರ್ಮವ್ಯಾಧನ ಈ ಮಾತನ್ನು ಕೇಳಿ ಮತಂಗಮುನಿಯು ತನ್ನ ಮನೆಯೊಳಗಿಂದ ಒಂದು ಮೊರ ಗೋದಿಯನ್ನು ಒಂದು ಮೊರ ಅಕ್ಕಿಯನ್ನು ಧರ್ಮವ್ಯಾಧನ ಬಳಿಗೆ ತಂದು ಇಟ್ಟನು. ಅವುಗಳನ್ನು ಕಂಡ ಕೂಡಲೇ ಧರ್ಮವ್ಯಾಧನು ತನ್ನ ಆಸನದಿಂದ ಎದ್ದು ಹೊರ ಹೊರಟನು. ಮತಂಗ ಮುನಿಯು ಅವನನ್ನು ತಡೆದು ''ಮಹನೀಯರೇ, ಹೀಗೇಕೆ ಒಮ್ಮೆಲೆ ಹೊರಟು ನಿಂತಿರಿ ? ನಿಮಗಾಗಿ ನನ್ನ ಮನೆಯಲ್ಲಿ ಅಡಿಗೆ ಸಿದ್ಧವಾಗಿದೆ. ಆ ಪಕ್ವಾನ್ನವನ್ನು ಉಣ್ಣದೇ ಹಾಗೇ ಏಕೆ ಎದ್ದು ನಡೆದಿರಿ ?

**ಧರ್ಮವ್ಯಾಧ :-** ನೀವು ದಿನ ದಿನವೂ ನಿಮ್ಮ ಹೊಟ್ಟೆಗಾಗಿ ಸಾವಿರಾರು ಜೀವಗಳನ್ನು ಕೊಲ್ಲುವಿರಿ! ಇಂಥ ಪಾಪಿಗಳ ಮನೆಯಲ್ಲಿ ಸತ್ಪುರುಷರು ಊಟ ಮಾಡುವದೆಂತು ? ಯಾವ ಪ್ರಾಣ ಹಿಂಸೆಯೂ ಆಗದಂತಹ ಪರಿಶುದ್ಧವಾದ ಆಹಾರವು

ನಿಮ್ಮ ಮನೆಯಲ್ಲಿ ಇದ್ದರೆ ಮಾತ್ರ ನೀವು ನಮ್ಮ ವರೆಂದು ತಿಳಿದು ನಿಮ್ಮ ಮನೆಯಲ್ಲಿ ಊಟ ಮಾಡುವೆನು. ನಾನು ನನ್ನ ಕುಟುಂಬ ಪೋಷಣಕ್ಕಾಗಿ ಅರಣ್ಯದಲ್ಲಿಯ ಒಂದು ಪಶುವನ್ನು ಮಾತ್ರ, ಕೊಂದು, ಬೇಯಿಸಿ, ಅದನ್ನು ಕೂಡ ಪಿತೃಕಾರ್ಯಕ್ಕಾಗಿ ಉಪಯೋಗಿಸಿ ಅತಿಥಿಗಳಿಗೆ ಊಟಕ್ಕೆ, ಹಾಕಿ ಅನಂತರ ನಾನು ತಿನ್ನುತ್ತೇನೆ ಆಪ್ತೇಷ್ಟರೊಡನೆ. ಆದರೆ ನೀವು ಮಾತ್ರ ನಿತ್ಯವೂ ಅನೇಕ ಜೀವಿಗಳನ್ನು ಕೊಂದು ನಿಮ್ಮ ಸ್ವಂತ ಕುಟುಂಬ ಹಾಗೂ ಪರಿವಾರದೊಡನೆ ಊಟ ಮಾಡುವಿರಿ. ಹಾಗೆ ಉಣ್ಣುವುದು, ಅಂಥ ಅನ್ನವನ್ನು ತಿನ್ನುವುದು ಸರ್ವಾಪದ್ಧ. ಧರ್ಮ ವಿರುದ್ಧ ಎಂದೇ ನನ್ನ ಅಭಿಪ್ರಾಯವಿರುತ್ತದೆ.

ಬ್ರಹ್ಮದೇವರು ಸೃಷ್ಟಿಯ ಪ್ರಾರಂಭ ಕಾಲದಲ್ಲಿ ಯಜ್ಞಕ್ಕಾಗಿಯೇ ಎಲ್ಲ ಗಿಡ ಬಳ್ಳಿ, ಔಷಧಿ, ಧಾನ್ಯ, ವನಸ್ಪತಿ ಮುಂತಾದವುಗಳನ್ನು ಸೃಷ್ಟಿ ಮಾಡಿದರು. ಯಜ್ಞಕ್ಕೆ ಉಪಯೋಗಿಸಿದ ಆ ಧಾನ್ಯವನ್ನು ಮಾತ್ರ ಯಜ್ಞಶೇಷವೆಂದು ಮಾನವರು ಭಕ್ಷಿಸಬೇಕು ಎಂದು ವೇದದಲ್ಲಿ ಹೇಳಿದೆ. ದೇವಯಜ್ಞ, ಪಿತೃಯಜ್ಞ, ಬ್ರಹ್ಮಯಜ್ಞ, ಭೂತಯಜ್ಞ ಮತ್ತು ಮನುಷ್ಯ ಯಜ್ಞಗಳನ್ನು ಬ್ರಹ್ಮದೇವರು ಪೂರ್ವಕಾಲದಲ್ಲಿಯೇ ಬ್ರಾಹ್ಮಣರ ಮತ್ತು ಉಳಿದ ಎಲ್ಲ ಜಾತಿಯವರ ಹಿತಕ್ಕಾಗಿ ನಿರ್ಮಾಣ ಮಾಡಿದ್ದಾರೆ. ಉಳಿದ ಜಾತಿಯವರಿಗೆ ಬ್ರಾಹ್ಮಣರೇ ಶುಭಕಾರ್ಯಗಳನ್ನು ಮಾಡಿಸುವರು.

ಹೀಗೆ ಪಂಚಾಮಹಾಯಜ್ಞಗಳನ್ನು ಮಾಡಿ ದೇವ ಬ್ರಾಹ್ಮಣರಿಗೆ ಸಮರ್ಪಿಸಿ ಹುತಶೇಷವಾದ ಅನ್ನವೇ ಪವಿತ್ರವಾಗಿರುತ್ತದೆ. ಅಂಥ ಅನ್ನವನ್ನು ಉಂಡರೆ ಮಾತ್ರ ಮನುಷ್ಯನ ದೇಹವು ಪರಿಶುದ್ಧವಾಗುತ್ತದೆ. ಇಲ್ಲದಿದ್ದರೆ ಈ ಭತ್ತ, ಗೋಧಿ ಹಾಗೂ ಇತರ ಧಾನ್ಯದ ಪಯರುಗಳಲ್ಲಿ ಸಸಿಗಳಲ್ಲಿ ಹಾಗೂ ತರಕಾರಿಗಳಲ್ಲಿ ಜೀವವಿದ್ದುದರಿಂದ ಅವುಗಳನ್ನು ಹೆಚ್ಚಿ, ಕಚ್ಚಿ, ಕೊಚ್ಚಿ, ಚುಚ್ಚಿ, ಕೊಯ್ದು, ಕುದಿಸಿ, ಬೇಯಿಸಿ, ತಿನ್ನುವುದೆಂದರೆ ಅಸಂಖ್ಯ ಪ್ರಾಣಿಗಳನ್ನು ಕೊಂದು ತಿಂದಂತೆಯೇ ಸರಿ. ಯಜ್ಞಕ್ಕಾಗಿ ಉಪಯೋಗಿಸಿದ ಒಂದೊಂದು ಅಕ್ಕಿ, ಗೋದಿ ಮುಂತಾದ ಧಾನ್ಯಗಳ ಕಣಕಣಗಳೆಂದರೆ ಒಂದೊಂದು ಮೃಗ ಪಕ್ಷಿಗಳಿದ್ದಂತೆ. ಉಣ್ಣುವವರಿಗೂ ಉಣ್ಣಿಸುವವರಿಗೂ ಅವು ಮಾಂಸ ಸಮಾನವಾಗಿವೆ. ಇಷ್ಟು ಪ್ರಾಣಿಗಳ ಮಾಂಸವನ್ನು ಕೇವಲ ಸ್ವಾರ್ಥಕ್ಕಾಗಿ ತಿನ್ನುವ ಮತ್ತು ತಿನಿಸುವ ನಿಮ್ಮಂಥವರ ಮನೆಯಲ್ಲಿ ನಾನು ಹೇಗೆ ಊಟ ಮಾಡಲಿ ?

ನಾನು ನಿನ್ನ ಮಗನಿಗೆ ನನ್ನ ಮಗಳನ್ನು ಕೊಟ್ಟಿದ್ದೇನೆ. ನಿನ್ನ ಮಡದಿಯು ನನ್ನ ಮಗಳಿಗೆ ಹಿಂಸಕನ ಮಗಳು ಎಂದು ಮೂದಲಿಸಿ ಮಾತನಾಡಿದಳಂತೆ. ಆದಕ್ಕಾಗಿ ನಾನು ನಿನ್ನ ಮನೆಯಲ್ಲಿ ಎಂಥ ಶುದ್ಧಾಚಾರವಿರುತ್ತದೆ ಎಂಬುದನ್ನು ನೋಡಲು ಬಂದಿದ್ದೇನೆ. ನಿಮ್ಮ ಮನೆಯಲ್ಲಿ ದೇವರ ಪೂಜೆ ಇಲ್ಲ. ಅಥಿತಿ ಸತ್ಕಾರವಿಲ್ಲ ಮತ್ತೂ ಬೇರಾವ ಆಚಾರ-ವಿಚಾರವೂ ಇಲ್ಲ. ಒಂದಾದರೂ ಪುಣ್ಯಕಾರ್ಯ ನಿನ್ನ ಮನೆಯಲ್ಲಿ ನಡೆದದ್ದು ಕಾಣಲಿಲ್ಲ. ಆದುದರಿಂದ ನಾನು ನನ್ನ ಮನೆಗೆ ಹೊರಟು ನಿಂತಿದ್ದೇನೆ. ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧ ಮಾಡದೇ ನಾನು ಊಟ ಮಾಡುವುದಿಲ್ಲ. ನಿಮ್ಮ ಮನೆಯಲ್ಲಿ ಅಂಥ ಯಾವ ಪಿತೃಕಾರ್ಯವೂ ದೇವತಾ ಕಾರ್ಯವೂ ನಡೆಯದೇ ಇದ್ದುದರಿಂದ ನಾನು ನಿಮ್ಮ ಮನೆಯಲ್ಲಿ ಉಣ್ಣಲಾರೆ. ಪಿತೃಕಾರ್ಯಕ್ಕಾಗಿ ಏಕಮಾತ್ರ ಪ್ರಾಣಿ ಹಿಂಸಕನಾದ ನಾನು

ಬೇಡನು. ಆದರೆ ಸ್ವಾರ್ಥಕ್ಕಾಗಿ ಅನೇಕ ಜೀವ ಜಂತುಗಳ ಹಿಂಸಕರಾದ ನೀವು ಮಾತ್ರ ತಪೋಧನರು. ಹಿಂಸಕನಾದ ನನ್ನ ಮಗಳನ್ನು ನಿಮ್ಮ ಮಗನು ಮದುವೆಯಾದದ್ದರಿಂದ ನನ್ನ ಪಾಪಕ್ಕೆ ಪ್ರಾಯಶ್ಚಿತ್ತವೂ ಆಯಿತು. ನಮಗೆ ಮಹತ್ವವೂ ಬಂದಂತಾಯಿತು. ಇನ್ನು ಮೇಲಾದರೂ ನನ್ನ ಮಗಳನ್ನು ಹಂತಕರ ಕುಲದವಳು ಎಂದು ಹೀಯಾಳಿಸದೆ ಅವಳನ್ನು ಪ್ರೀತಿಯಿಂದ ನಡೆಸಿಕೊಳ್ಳಿ'' ಎಂದು ಹೇಳಿ ಧರ್ಮವ್ಯಾಧನು ಅಲ್ಲಿಂದ ಎದ್ದು ಹೊರಟನು. ಕೋಪದಿಂದ ಧರ್ಮವ್ಯಾಧನು ಅಲ್ಲಿಂದ ತೆರಳುವಾಗ ''ಇನ್ನು ಮೇಲೆ ಅತ್ತೆಯ ಕಾಲವು ಮುಗಿದು ಸೊಸೆ ಮಕ್ಕಳ ಕಾಲವು ಪ್ರಾರಂಭವಾಗಲಿ. ಯಾವ ಸೊಸೆಯು ಅತ್ತೆಯನ್ನೂ, ಅತ್ತೆಯೂ ಸೊಸೆಯನ್ನು ನಂಬದಂತಾಗಲಿ. ಅತ್ತೆಯ ಬದುಕೇ ಸೊಸೆಯರಿಗೆ ಭಾರವಾಗಿ ಬೇಡವೆನಿಸಲಿ'' ಎಂದು ಶಾಪವಿತ್ತು ಕೋಪ ಕಷಾಯಿತನಾಗಿ ತನ್ನ ಮನೆಗೆ ಬಂದನು.

ಅನಂತರ ಆ ಧರ್ಮವ್ಯಾಧನು ದೇವತೆಗಳನ್ನೂ ಪಿತೃಗಳನ್ನೂ ಭಕ್ತಿಯಿಂದ ಪೂಜಿಸಿ ಆರಾಧಿಸಿ ತನ್ನ ಮಗನಾದ ಅರ್ಜುನಕನಿಗೆ ಕುಟುಂಬ ಭಾರವನ್ನು ಒಪ್ಪಿಸಿ ಮೂರು ಲೋಕದಲ್ಲಿ ಪ್ರಸಿದ್ಧವಾದ ಪುರುಷೋತ್ತಮ ತೀರ್ಥಕ್ಕೆ ಹೊರಟು ಹೋದನು. ಅಲ್ಲಿ ನಿಂತು ಉಗ್ರ ತಪಸ್ಸನ್ನು ಆಚರಿಸಿದನು. ಮತ್ತೂ ಬಗೆ ಬಗೆಯ ಸ್ತೋತ್ರಗಳನ್ನು ಹೇಳಿ ಆ ಭಗವಂತನನ್ನು ಕೊಂಡಾಡಿದನು. ಅವನ ಸ್ತುತಿ ಹಾಗೂ ತಪಸ್ಸುಗಳಿಗೆ ಮೆಚ್ಚಿ ಪರಮಾತ್ಮನು ಪ್ರಸನ್ನನಾಗಿ ಅವನಿಗೆ ಪ್ರತ್ಯಕ್ಷನಾದನು ಮತ್ತು ಅವನಿಗೆ ''ಬೇಕಾದ ವರವನ್ನು ಕೇಳು'' ಎಂದು ಹೇಳಿದನು. ಆಗ ಆ ಧರ್ಮವ್ಯಾಧನು ಕೈ ಜೋಡಿಸಿ ''ಭಗವನ್, ನನ್ನ ಮಕ್ಕಳೂ ಮತ್ತು ನನ್ನ ವಂಶದಲ್ಲಿ ಹುಟ್ಟಿದ ಉಳಿದೆಲ್ಲರೂ ಜ್ಞಾನಯೋಗದಿಂದಲೂ ಕರ್ಮಯೋಗದಿಂದಲೂ ನಿನ್ನ ಸೇವೆ ಮಾಡುವವರಾಗಲಿ. ಮತ್ತು ಎಲ್ಲರಿಗೂ ದಿವ್ಯ ಜ್ಞಾನೋದಯವಾಗಲಿ. ಮತ್ತು ಕೊನೆಗೆ ಎಲ್ಲರೂ ನಿನ್ನಲ್ಲಿಯೇ ಲೀನವಾಗಲಿ'' ಎಂದು ವರಗಳನ್ನು ಕೇಳಿಕೊಂಡನು. ಅವನ ಮೇಲೆ ಪ್ರಸನ್ನನಾದ ಪರಮಾತ್ಮನು ಧರ್ಮವ್ಯಾಧನು ಬಯಸಿದ ವರಗಳನ್ನು ಕೊಟ್ಟು ಅನುಗ್ರಹಿಸಿದನು. ಭಗವಂತನು ವರವಿತ್ತ ಮರುಚರಣದಲ್ಲಿಯೇ ಆ ಧರ್ಮವ್ಯಾಧನ ದೇಹದಿಂದ ಒಂದು ತೇಜಸ್ಸು ಹೊರಟು ಆ ಭಗವಂತ ಪಾದಾರವಿಂದದಲ್ಲಿ ಲೀನವಾಯಿತು.

*ವರಾಹ ಪುರಾಣದಲ್ಲಿ ಎಂಟನೇ ಅಧ್ಯಾಯ ಮುಗಿದದು*

—o—

## ಕೃತಯುಗದಲ್ಲಿ ಶ್ರೀ ಹರಿಯ ಕೃತಿ

## ಅಧ್ಯಾಯ - ೯

**ಧರಣೀ ದೇವಿಯು :-** ನಾಥ, ಮೊದಲು ಕೃತಯುಗದಲ್ಲಿ ವಿಶ್ವಮೂರ್ತಿಯಾದ ನಾರಾಯಣನು ಏನು ಮಾಡಿದನು ? ಅದೆಲ್ಲವನ್ನು ಸರಿಯಾಗಿ ತಿಳಿದು ಕೊಳ್ಳಬೇಕೆಂದು ನಾನು ಬಯಸಿದ್ದೇನೆ.

**ವರಾಹ :-** ಪೂರ್ವದಲ್ಲಿ ನಾರಾಯಣನು ಒಬ್ಬನೇ ಇದ್ದನು. ಅವನ ಹೊರತು ಬೇರೆ ಯಾರೂ ಇರಲಿಲ್ಲ. ತನ್ನ ಇಷ್ಟದಂತೆ ಸೃಷ್ಟಿ ಮಾಡುವ ಅವನಿಗೆ ಒಬ್ಬಂಟಿಗನಾಗಿ ಇರುವುದು ಸೇರಲಿಲ್ಲ. ತನ್ನಿಂದ ಭಿನ್ನವಾದ ಪ್ರಪಂಚವನ್ನು ಸೃಷ್ಟಿಸಬೇಕೆಂದು ಬಯಸಿದ ಈ ಭಗವಂತನಿಗೆ ಚಿಂತೆಯಾಯಿತು. ಅವನ ಚಿಂತೆಯೂ ಜ್ಞಾನಾತ್ಮಕವಾದುದೇ. ಅದರಲ್ಲಿ ಅಜ್ಞಾನ, ದುಃಖ, ಮನೋಮಾಲಿನ್ಯ, ಕೊರಗು ಮುಂತಾದವುಗಳ ಅಭಾವವು ಇದ್ದುದರಿಂದ ಅದಕ್ಕೆ ಅಭಾವ ಎಂದರೆ ಹೆಸರಾಯಿತು. ಈ ಜ್ಞಾನಾತ್ಮಕವಾದ ಅವನ ಚಿಂತೆಯು ಸೂರ್ಯನಂತೆ ಅವನ ತಲೆಯಲ್ಲಿ ಹೊಳೆಯಿತು. ಕೂಡಲೇ ಆ ಚಿಂತೆಯು ಉ.ಮಾ ಎಂದು ಎರಡು ಬಗೆಯಾಗಿ ಈ ನರಲೋಕದಲ್ಲಿ ಉಮಾ ಎಂದು ಹೆಸರಿನಿಂದ ನಿಂತಿತು. ಅದೇ ಮುಂದೇ ಓಂ ಎಂಬ ಒಂದೇ ಅಕ್ಷರ ಉಳ್ಳದ್ದಾಗಿ ಈ ಭೂಮಿಯನ್ನು (ನಿನ್ನನ್ನು) ಸೃಷ್ಟಿಸಿತು. ಭೂಮಿಯು ಭುವರ್ಲೋಕವನ್ನೂ ಭುವರ್ಲೋಕವು ಸ್ವರ್ಲೋಕವನ್ನೂ, ಸ್ವರ್ಲೋಕವು ಮಹೋಲೋಕವನ್ನೂ ಉತ್ಪಾದಿಸಲು ಕಾರಣವಾಯಿತು. ಈ ಮಹರ್ಲೋಕದಿಂದ ಜನೋಲೋಕವು ಉದಯಿಸಿತು. ಈ ಎಲ್ಲ ಲೋಕಗಳಲ್ಲಿಯೂ ಧಾರದಲ್ಲಿ ಮಣಿಗಳನ್ನು ಪೋಣಿಸಿದಂತೆ ಪರಮಾತ್ಮ ತತ್ವವು ಓತಪ್ರೋತವಾಗಿ ತುಂಬಿಕೊಂಡಿದೆ. ಹೀಗೆ ಓಂಕಾರದಿಂದ ಉತ್ಪನ್ನವಾದ ಈ ಜಗತ್ತು ಶೂನ್ಯವಾಗಿದ್ದಿತು. ಆ ಪ್ರಪಂಚದ ತುಂಬ ತುಂಬಿದ ವಸ್ತು ಎಂದರೆ ಭಗವನ್ ಮೂರ್ತಿಯಾದ ಶಂಕರ. ಈ ಶಂಕರ ನಾಮಕ ಹರಿಯು ಪ್ರಸಿದ್ಧ ಶಂಕರನ ಹೃದಯದಲ್ಲಿದ್ದು ಜಗತ್ತಿನಲ್ಲಿ ಸುಖವನ್ನು ಉಂಟು ಮಾಡುವುದರಿಂದ ಶಂ=ಸುಖಂ, ಕರೋತಿ ಇತಿ. ಶಂಕರಃ ಎಂದು ಪ್ರಸಿದ್ಧನಾಗಿದ್ದಾನೆ.

ಹೀಗೆ ಶೂನ್ಯವಾದ ಲೋಕಗಳನ್ನು ನಿರ್ಮಿಸಿ ಅನಂತರ ಉತ್ತಮವಾದ ಶರೀರವನ್ನು ನಿರ್ಮಿಸಬೇಕೆಂದು ಪರಮಾತ್ಮನು ಅಪೇಕ್ಷೆ ಪಟ್ಟನು. ಅವನ ಮನೋಮಂದಿರದಲ್ಲಿ ಇಂಥ ಇಚ್ಛಾಂಕುರವು ಉದ್ಬುದ್ಧವಾದ ಕೂಡಲೇ ಬ್ರಹ್ಮಾಂಡವು ಉದಸಿತು. ಆ ಬ್ರಹ್ಮಾಂಡವು ಭಿನ್ನವಾಗಲಾಗಿ ಭೂಲೋಕವು ಮಧ್ಯದಲ್ಲಿ ಸೂರ್ಯನಂತಿರುವ ಬೇರೆ ಲೋಕಗಳು ರೂಪಗೊಂಡವು. ಸತ್ಯ ಸನಾತನನಾದ ಆ ನಾರಾಯಣನ ಹೊಕ್ಕಳದ ಹೊಕ್ಕರಣಿಯಲ್ಲಿ ಉದ್ಭವಿಸಿತು ಚತುರ್ದಶ ಭುವನಮಯವಾದ ಪದ್ಮಕೋಶವು. ಅಂತಹ ಭಗವಾನ್ ನಾರಾಯಣನು ತನ್ನ ಬ್ರಹ್ಮತೇಜಸ್ಸಿನಿಂದ ಜಗತ್ತಿಗೆಲ್ಲ ಅಕಾರಾದಿ ಸ್ವರಗಳನ್ನೂ ಕಕಾರಾದಿ ವ್ಯಂಜನಗಳನ್ನೂ ಸೃಷ್ಟಿಸಿ ಕೊಟ್ಟನು. ಮತ್ತು ಅಮೂರ್ತ ಸೃಷ್ಟಿಯಲ್ಲಿ ವೇದಶಾಸ್ತ್ರಗಳನ್ನು ಗಾನರೂಪದಿಂದ ಹೊರಹೊಮ್ಮಿಸಿದನು.

ಹೀಗೆ ಪ್ರಪಂಚವನ್ನು ನಿರ್ಮಿಸಿ ಅದಕ್ಕೆ ಸ್ಥಿತಿ, ಗತಿ, ಪ್ರಗತಿ, ಉನ್ನತಿಗಳು ಹೇಗಾಗಬೇಕೆಂದು ಆ ಭಗವಂತನು ವಿಚಾರಿಸುತ್ತಲಿರುವಾಗ ಅವನ ಬಲಗಣ್ಣಿನಿಂದ

ದೆಂಕಿಯಂತೆ ಉಗ್ರವಾದ ತೇಜಸ್ಸೂ, ಎಡಗಣ್ಣಿನಿಂದ ಹಿಮದಂತೆ ತಣ್ಣಗಾದ ಶಾಂತಕಾಂತಿಯೂ ಹೊರಹೊಮ್ಮಿತು. ಅದನ್ನು ನೋಡಿ ಬ್ರಹ್ಮದೇವರು ಪರಮಾತ್ಮನ ಎರಡು ಕಣ್ಣಿನಿಂದ ಉದಿಸಿದ ಎರಡು ಬಗೆಯ ತೇಜಸ್ಸನ್ನು ಅನುಸರಿಸಿ ಸೂರ್ಯ ಚಂದ್ರರನ್ನು ನಿರ್ಮಿಸಿದನು. ಅನಂತರ ಆ ಪರಬ್ರಹ್ಮನಿಂದ ಪ್ರಾಣವು ವಾಯುವಾಗಿ ಎದ್ದು ನಿಂತಿತು. ಆ ವಾಯುವೇ ಸರ್ವತ್ರ ವ್ಯಾಪ್ತವಾಗಿ ನಮ್ಮೆಲ್ಲರ ಹೃದಯದಲ್ಲಿಯೂ ನಮ್ಮ ಜೀವನ ಕಾರಣವಾಗಿ ಇರುತ್ತದೆ. ಆ ವಾಯುವಿನಿಂದ ಅಗ್ನಿಯು ಉದಿಸಿತು. ಆ ಅಗ್ನಿಯಿಂದ ಜಲವು ಉಂಟಾಯಿತು. ಆ ಅಗ್ನಿಯೇ ಬ್ರಹ್ಮ ತೇಜಸ್ಸಿಗೆ ಮೂಲ ಕಾರಣವಾಗಿದೆ. ಅನಂತರ ಪರಬ್ರಹ್ಮನು ತನ್ನ ತೋಳುಗಳಿಂದ ಕ್ಷತ್ರಿಯರನ್ನೂ ತೊಡೆಗಳಿಂದ ವೈಶ್ಯರನ್ನೂ ಪಾದಗಳಿಂದ ಶೂದ್ರರನ್ನೂ ಸೃಷ್ಟಿ ಮಾಡಿದನು. ಅನಂತರ ಯಕ್ಷ ರಾಕ್ಷಸರನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವಿವಿಧ ಜಾತಿ ಜನಾಂಗದ ಜನರನ್ನೂ ನಿರ್ಮಿಸಿ ಭೂಲೋಕವನ್ನೆಲ್ಲ ತುಂಬಿ ಬಿಟ್ಟನು. ಇದರಂತೆ ಗಗನ ಚಾರಿಗಳಿಂದ ಭುವರ್ಲೋಕವನ್ನೂ, ಸ್ವರ್ಗ ಮಾರ್ಗದಲ್ಲಿ ಸಂಚರಿಸುವವರಿಂದ ಸ್ವರ್ಗಲೋಕವನ್ನೂ ಭರ್ತಿ ಮಾಡಿದನು. ಇದರಂತೆ ಮಹರ್ಲೋಕವನ್ನು ಸನಕಾದಿ ಪುಣ್ಯ ಚೇತನರಿಂದಲೂ, ಜನೋಲೋಕವನ್ನು ವೈರಾಜರೆಂಬ ತೇಜೋವಂತರಿಂದಲೂ ತುಂಬಿ ಬಿಟ್ಟನು. ತಪೋ ಲೋಕದಲ್ಲಿ ತಪೋನಿಷ್ಠರಾದ ದೇವತೆಗಳನ್ನೂ, ಸತ್ಯಲೋಕದಲ್ಲಿ ಮುಪ್ಪು ಮರಣಗಳಿಂದ ದೂರರಾದ ದೇವತೆಗಳನ್ನೂ ಪ್ರಚುರ ಪಡಿಸಿ ಆ ಎಲ್ಲ ಲೋಕಗಳೂ ಚೈತನ್ಯದಿಂದ ತುಂಬಿ ತುಳುಕಾಡುವಂತೆ ಮಾಡಿದನು.

ಸತ್ಯಸಂಕಲ್ಪನಾದ ಶ್ರೀಹರಿಯು ಕಲ್ಪ ಎಂಬ ಹೆಸರುಳ್ಳ ಈ ಅಮೋಘವಾದ ಸೃಷ್ಟಿಯನ್ನು ಮಾಡಿದನು. ಈ ಭೂಲೋಕ, ಭುವರ್ಲೋಕ, ಸ್ವರ್ಲೋಕ ಈ ಮೂರು ಲೋಕಗಳು ಆ ಪರಮಾತ್ಮನು ಯೋಗನಿದ್ರೆಯಿಂದ ಎಚ್ಚರಾದ ಬಳಿಕ ಸೃಷ್ಟಿಗೊಳ್ಳುವವು. ಕಲ್ಪಾಂತ ಕಾಲದಲ್ಲಿ ಬ್ರಾಹ್ಮೀ ರಾತ್ರಿಯಾದಾಗ ಭಗವಂತನು ಯೋಗನಿದ್ರೆಯನ್ನು ಪಡೆಯಲು ಈ ಮೂರು ಲೋಕಗಳೂ ಉತ್ಪಾತಕ್ಕೆ ಒಳಗಾಗಿ ಮಲಗಿ ಬಿಡುವವು. ರಾತ್ರಿಯ ಬಳಿಕ ಆ ಪರಮಾತ್ಮನು ಎದ್ದು ನಾಲ್ಕು ವೇದಗಳನ್ನೂ ವೇದಮಾತೆಯನ್ನೂ ನೆನಸಿಕೊಂಡನು. ಯೋಗನಿದ್ರೆಯಿಂದ ಮುದ್ರಿತನಾಗಿ ಎದ್ದ ಆ ಭಗವಂತನು ಎಲ್ಲ ಕಡೆಗೂ ನೋಡಲು ವೇದಗಳೇ ಅವನಿಗೆ ಕಾಣಲಿಲ್ಲ.

ಆ ವೇದರಾಶಿಗಳೆಲ್ಲ ತನ್ನ ಜಲಮಯ ಮೂರ್ತಿಯಲ್ಲಿ ಮುಳಗಿವೆ ಎಂದು ತಿಳಿದು ಆ ಭಗವಂತನು ಆ ಚತುರ್ವೇದಗಳನ್ನು ಹೊರತರಬೇಕೆಂದು ಬಯಸಿದನು. ಅದಕ್ಕಾಗಿ ಮತ್ಸ್ಯರೂಪವನ್ನು ಧರಿಸಿ ಪ್ರಳಯ ಸಮುದ್ರದ ಆಗಾಧ ನೀರಿನ ಆಳದಲ್ಲಿ ಒಳಹೊಕ್ಕನು. ಮಹಾಮತ್ಸ್ಯರೂಪವನ್ನು ಪರಿಗ್ರಹಿಸಿ ತನ್ನ ಬೆಟ್ಟದಾಕಾರದ ವಿರಾಡ್ ರೂಪದಿಂದ ಆ ದೇವೋತ್ತಮನು ಸಾಗರ ಗರ್ಭವನ್ನು ಪ್ರವೇಶಿಸಿದಾಗ ಆ ಕಲ್ಪಾಂತ ಸಾಗರದ ನೀರು ಅಲ್ಲೋಲ ಕಲ್ಲೋಲವಾಯಿತು. ಪರ್ವತಾಕಾರದ ಮೀನು ರೂಪದಿಂದ ಸಾಗರದ ತಳಕ್ಕೆ ಇಳಿದ ಶ್ರೀನಾರಾಯಣನು ಭೂಮಿಯನ್ನು ಉದ್ಧರಿಸಿದನು. ವೇದಗಳನ್ನು ಮರಳಿ ತಂದನು. ಭಗವಂತನ ಈ ಅಧ್ಬುತವಾದ ಗೈಮೆಯನ್ನು ದೇವತೆಗಳು ಕೊಂಡಾಡಿದರು.

ನಮೋಽಸ್ತು ವೇದಾಂತರಗಾಽಪ್ರತರ್ಕ್ಯ ।
ನಮೋಽಸ್ತು ನಾರಾಯಣ ಮತ್ಸ್ಯರೂಪ ॥

ನಮೋಽಸ್ತು ತೇ ಸುಸ್ವರ ವಿಶ್ವರೂಪ ।
ನಮೋಽಸ್ತು ವಿದ್ಯಾದ್ವಯ ರೂಪಧಾರಿನ್ ॥

ವೇದಗಳ ಅಂತರಾರ್ಥದಿಂದ ಮುಖ್ಯವಾಗಿ ಪ್ರತಿಪಾದಿತನಾದ ನಾರಾಯಣ, ನಿನಗೆ ವಂದನೆ, ಮಚ್ಛ್ಯರೂಪಿಗೆ ನಮಸ್ಕಾರ. ವಿಶ್ವಮೂರ್ತಿಗೆ ನಮೋ ನಮಃ ಜ್ಞಾನರೂಪವಾದ ದೇಹವುಳ್ಳ ಶ್ರೀಹರಿಗೆ ವಂದನೆ. ಹೀಗೆ ದೇವತೆಗಳಿಂದ ಹೊಗಳಲ್ಪಟ್ಟ ಮತ್ಸ್ಯಾವತಾರಿಯಾದ ಆ ಶ್ರೀ ಹರಿಯು ಸಮುದ್ರಗರ್ಭದಲ್ಲಿ ಅಡಗಿದ ವೇದಗಳನ್ನು ಉಪನಿಷತ್ತುಗಳನ್ನೂ ಶಾಸ್ತ್ರಗಳನ್ನೂ ಉದ್ಧರಿಸಿ ನಂತರ ತನ್ನ ನಿಜರೂಪವನ್ನು ಹೊಂದಿದನು.

*ವರಾಹ ಪುರಾಣದಲ್ಲಿ ಒಂಭತ್ತನೇ ಅಧ್ಯಾಯ ಮುಗಿದದು*



## ಸೃಷ್ಟಿ ವರ್ಣನೆ ಮತ್ತು ದುರ್ಜಯನ ಚರಿತ್ರೆ — ಅಧ್ಯಾಯ - ೧೦

**ವರಾಹ :-** ಸರ್ವಪ್ರಾಣಿಗಳ ರಕ್ಷಕನಾದ ಪರಮೇಶ್ವರನು ಈ ರೀತಿಯಾಗಿ ಸರ್ವಜಗತ್ತನ್ನು ಸೃಷ್ಟಿ ಮಾಡಿ ಮುಗಿಸಿ ವಿರಾಮಗೈದನು. ಅನಂತರ ಈ ಪ್ರಪಂಚವೆಲ್ಲವೂ ಅಭಿವೃದ್ಧಿಯನ್ನು ಪಡೆಯಿತು. ಎಲ್ಲೆಡೆ ಬದುಕು ಬೆಳೆದ ಬಳಿಕ ದೇವತೆಗಳು ಬಗೆ ಬಗೆಯ ಯಜ್ಞಗಳಿಂದ ನಾರಾಯಣನಾದ ಭಗವಂತನನ್ನು ಆರಾಧಿಸಿದರು. ತಾವು ಪೂಜ್ಯರಾಗಬೇಕು ಎಂಬ ಉದ್ದೇಶದಿಂದ ಅವರು ಎಲ್ಲ ದೇಶದ್ವೀಪಗಳಲ್ಲಿಯೂ ಶ್ರೀ ಹರಿಯನ್ನು ಯಜ್ಞಯಾಗಗಳಿಂದ ಪೂಜಿಸಿ ಸಂತೋಷಪಡಿಸಿದರು. ಹೀಗೆ ಬಹುವರ್ಷಗಳವರೆಗೆ ಆ ಯಜ್ಞಪುರುಷನನ್ನು ಆರಾಧಿಸತೊಡಗಿದ ಆ ಸುರಸತ್ತಮರಿಗೆ ಜಗದೀಶ್ವರನು ಪ್ರಸನ್ನನಾಗಿ ಪ್ರತ್ಯಕ್ಷ ದರ್ಶನವನ್ನು ನೀಡಿದನು. ಅನೇಕ ಬಾಯಿ, ಭುಜ, ಅಡಿ, ಉದರಗಳುಳ್ಳ ಆ ಭಗವಂತನ ದಿವ್ಯರೂಪವು ಶೈಲಶೃಂಗದಂತೆ ಉತ್ತುಂಗವಾಗಿದ್ದಿತು. ''ನನ್ನಿಂದ ಏನಾಗಬೇಕು ? ನಿಮಗೆ ಬೇಕಾದ ವರವನ್ನು ಕೇಳಿರಿ'' ದೇವವಾಣಿಯು ಮೊಳಗಿತು. ಭಕ್ತಿಯ ಭಾರದಿಂದ ಶಿರಬಾಗಿ ಕರಜೋಡಿಸಿ ದೇವತೆಗಳು ನುಡಿದರು -

ಜಯಸ್ವ ಗೋವಿಂದ ಮಹಾನುಭಾವ ।
ತ್ವಯಾ ವರಂ ನಾಥ ವೃಣೀಮ ದೇವಾಃ ॥
ಮನುಷ್ಯ ಲೋಕೇಪಿ ಭವಂತಮಾದ್ಯಂ ।
ವಿಹಾಯ ನಾಸ್ಮಾನ್ ಪರಿಪಾತಿ ಕಶ್ಚಿದ್ ॥
ಚಂದ್ರಾದಿತ್ಯೌ ವಸವೋ ಯೇ ಚ ಸಾಧ್ಯಾಃ ।
ವಿಶ್ವೇಶ್ವಿನೌ ಮರುತಶ್ಚೋಷ್ಮಪಾಶ್ಚ ॥
ಸರ್ವೇ ಭವಂತಂ ಶರಣಾಗತಾ ಸ್ಮಃ ।
ಕುರುಷ್ವ ಪೂಜ್ಯಾನಿಹ ವಿಶ್ವಮೂರ್ತೇ ॥

"ಪ್ರಭಾವಶಾಲಿಯಾದ ಗೋವಿಂದ, ಗೆಲವು ನಿನ್ನದು. ನಲಿವು ನಿನ್ನದು. ಸ್ವಾಮಿ, ಮಾನವ ಲೋಕದಲ್ಲಿ ನಮ್ಮನ್ನು ಗೌರವಿಸುವವರೇ ಇಲ್ಲದಂತಾಗಿದೆ. ನಮ್ಮ ದೇವಲೋಕದಲ್ಲಿಯಂತೂ ನಮಗೆ ಬೆಲೆಯೇ ಇಲ್ಲವಾಗಿದೆ. ಅದಕ್ಕಾಗಿಯೇ ರವಿ, ಚಂದ್ರ, ವಸು, ಸಾಧ್ಯ ವಿಶ್ವೇ ದೇವತೆಗಳು ಹಾಗೂ ಮರದ್ಗಣ ಮುಂತಾದ ಎಲ್ಲ ಸುರ ವೃಂದದವರು ನಿನಗೆ ಶರಣು ಬಂದಿದ್ದೇವೆ. ವಿಶ್ವಮೂರ್ತಿಯೇ ! ನೀನು ನಮ್ಮನ್ನು ಲೋಕ ಪೂಜ್ಯರಾಗುವಂತೆ ಮಾಡು. ಸರ್ವ ಪೂಜ್ಯತ್ವ ರೂಪವಾದ ವರವನ್ನು ನಮಗೆ ದಯಪಾಲಿಸಿ ಅನುಗ್ರಹಿಸು". ದೇವತೆಗಳ ಈ ಪ್ರಾರ್ಥನೆಯನ್ನು ಕೇಳಿ ಯೋಗೀಶ್ವರನಾದ ಶ್ರೀ ಹರಿಯು "ಸರಿ. ನಾನು ನಿಮ್ಮೆಲ್ಲರನ್ನು ಪೂಜ್ಯರಾಗುವಂತೆ ಮಾಡುತ್ತೇನೆ" ಎಂದು ವರದಾನವಿತ್ತು ಅದೃಶ್ಯನಾದನು. ದೇವತೆಗಳೆಲ್ಲರೂ ಆ ದೇವದೇವನನ್ನು ಕೊಂಡಾಡುತ್ತಾ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಅನಂತರ ವಿಶ್ವವಿಧಾತನಾದ ಆ ಜಗನ್ನಿಯಾಮಕನು ಸಾತ್ವಿಕ ರಾಜಸ ತಾಮಸ ಎಂದು ಮೂರು ಬಗೆಯ ಭಾವಗಳನ್ನು ಪಡೆದು ತಾನೇ ಮೊದಲು (ಲೋಕ ಶಿಕ್ಷಣಕ್ಕಾಗಿ) ಆ ದೇವತೆಗಳನ್ನು ಪೂಜಿಸಿದನು. ಸಾತ್ವಿಕ ರೂಪದಿಂದ ಬ್ರಾಹ್ಮಣರಲ್ಲಿ ಇದ್ದು ವೇದಗಳನ್ನು ಪಠಿಸಿದನು. ರಾಜಸ ರೂಪದಿಂದ ರಾಜಮಹಾರಾಜರಲ್ಲಿದ್ದು ಯಜ್ಞಯಾಗಗಳನ್ನು ಮಾಡಿಸಿದನು. ತಾಮಸ ರೂಪದಿಂದ ದೈತ್ಯರಲ್ಲಿ ಇದ್ದು ಕಾಲರೂಪಿಯಾದ ತನ್ನ ಶೂಲಪಾಣಿ ರುದ್ರಮೂರ್ತಿಯನ್ನು ಆರಾಧಿಸಿದನು.

ಹೀಗೆ ತ್ರಿರೂಪನಾಗಿ ಹರಿಯು ದೇವತೆಗಳನ್ನು ಒಲಿದು ಪೂಜಿಸಿ ಮೆಚ್ಚಿಸಿದ ಬಳಿಕ ಈ ಲೋಕವೂ ಅದಕ್ಕನುಗುಣವಾಗಿ ರೂಪುಗೊಂಡಿತು. ಹೀಗೆ ಬೇರೆಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ದೇವೋತ್ತಮರ ನಾಮಧಾಮಗಳನ್ನು ಪರಿಗ್ರಹಿಸುವ ಪರಮ ವಿಷ್ಣುವು ಕೃತಯುಗದಲ್ಲಿ ನಾರಾಯಣನಾಗಿಯೂ, ತ್ರೇತಾಯುಗದಲ್ಲಿ ರುದ್ರರೂಪದಿಂದಲೂ, ದ್ವಾಪರಯುಗದಲ್ಲಿ ಯಜ್ಞರೂಪಿಯಾಗಿಯೂ, ಕಲಿಯುಗದಲ್ಲಿ ಬಹುರೂಪಿಯಾಗಿಯೂ ಅವತಾರ ಮಾಡಿದನು. ಭೂದೇವಿ, ಸಕಲ ಪ್ರಪಂಚಕ್ಕೂ ಆದಿ ಕಾರಣನೂ ತೇಜೋಮೂರ್ತಿಯೂ ಆದ ಶ್ರೀ ವಿಷ್ಣುವಿನ ಮಹಾಮಹಿಮೋಪೇತವಾದ ಚರಿತ್ರೆಯನ್ನು ಹೇಳುತ್ತೇನೆ. ಚಿತ್ತವಿಟ್ಟು ಆಲಿಸು.

ಕೃತಯುಗದಲ್ಲಿ ಸುಪ್ರತೀಕ ಎಂಬ ದೊರೆಯು ಆಳುತ್ತಿಲಿದ್ದನು. ಅವನು ಮಹಾಬಲವಂತನು. ಅವನಿಗೆ ಇಬ್ಬರು ಮಡದಿಯರು. ಚಲುವಿಕೆಯಲ್ಲಿ ಅವರಿಬ್ಬರೂ ಒಬ್ಬರಿಗಿಂತ ಒಬ್ಬರು ಮಿಗಿಲು. ದೊರೆಯ ಅಂತಃಪುರದಲ್ಲಿಯೂ ಅವನ ಅಂತರಂಗದಲ್ಲಿಯೂ ಸೌಂದರ್ಯ ಶಿಖರದ ಜೋಡು ಕಳಸಗಳಂತೆ ಆ ಕಾಂತೆಯರಿಬ್ಬರೂ ಕಾಂತಿಕಿರಣಗಳಿಂದ ಕಂಗೊಳಿಸುತ್ತಿದ್ದರು. ಅವರಿಬ್ಬರ ಹೆಸರು ಕೂಡ ಅವರ ಲಲಿತಾಂಗಯಷ್ಟಿಯ ಲಾವಣ್ಯ ಪ್ರಭೆಗೆ ಅನುರೂಪವಾಗಿದ್ದಿತು. ಒಬ್ಬಳ ಹೆಸರು ವಿದ್ಯುತ್‌ಪ್ರಭೆ. ಮತ್ತೊಬ್ಬಳು ಕಾಂತಿಮತಿ.

ಇಂಥ ಚೆಲುವಿನ ಚಿತ್ತಾರಗಳಿಂತಿರುವ ಚಿಕ್ಕಪ್ರಾಯದ ಆ ಚಿಗರಿಗಂಗಳ ಚೆಲುವೆಯರಿಬ್ಬರಿಗೂ ಸಂತತಿಯಾಗಲಿಲ್ಲ. ಅದೇ ರಾಜನಿಗೆ ಒಂದು ದೊಡ್ಡ

ಚಿಂತೆಯಾಯಿತು. ಕಾಲವು ಗತಿಸಿತು. ಹೃದಯವು ಮಥಿಸಿತು. ಸಂತಾನದ ಅಭಾವದ ಚಿಂತೆಯು ಅಂತಃಪುರದ ಅರಮನೆಗಳನ್ನು ವ್ಯಾಪಿಸಿ ಸಾಮ್ರಾಜ್ಯದ ಪ್ರತಿಯೊಬ್ಬ ಪ್ರಜೆಯ ಅಂತರಂಗವನ್ನು ಮಂಥನ ಮಾಡತೊಡಗಿತು. ಇಂಥ ಘೋರ ಚಿಂತೆಯಿಂದ ಪರಿಭ್ರಾಂತನಾದ ಸುಪ್ರತೀಕ ಮಹಾರಾಜನು ಚಿತ್ರಕೂಟ ಎಂಬ ಶ್ರೇಷ್ಠ ಬೆಟ್ಟಕ್ಕೆ ನಡೆದನು. ಅಲ್ಲಿ ಒಬ್ಬ ಋಷಿಯು ಇದ್ದ. ಅವನ ಹೆಸರು ಆತ್ರೇಯ, ಅವನಲ್ಲಿಯ ದೋಷಗಳೆಲ್ಲವೂ ತೊಳೆದು ಹೋಗಿದ್ದವು. ದುರ್ಭಾವನೆಗಳೆಲ್ಲವೂ ಕಳೆದು ಹೋಗಿದ್ದವು. ಸುಪ್ರತೀಕನು ಇಂಥ ವೀತರಾಗ ಪುಣ್ಯಾತ್ಮರನ್ನು ಸೇವೆ ಶುಶ್ರೂಷೆಗಳಿಂದ ಆರಾಧಿಸಿದನು.

ಮಹಾರಾಜನ ಈ ಬಹುದಿನದ ಸೇವೆಗೆ ಋಷಿಯು ಮೆಚ್ಚಿದ. ವರವನ್ನು ಕೊಡಬೇಕೆಂದು ಬಯಸಿದ. ತನ್ನ ಸೇವೆ ಶುಶ್ರೂಷೆಗಳಲ್ಲಿಯೇ ಸವೆದು ನವೆದುನಿಂದ ಮಹಾರಾಜನಿಗೆ ಒಲವಿನಿಂದ ವರವನ್ನು ನೀಡಬೇಕೆಂದು ಸಿದ್ಧನಾಗಿ ನಿಂತ. ಅಷ್ಟರಲ್ಲಿ ಐರಾವತವನ್ನು ಏರಿಕೊಂಡು ದೇವರಾಜ ಇಂದ್ರನು ಅಲ್ಲಿಗೆ ಬಂದನು. ಸುಪ್ರತೀಕ ಮಹಾರಾಜನ ಪಕ್ಕದಲ್ಲಿ ಸುಮ್ಮನೆ ನಿಂತುಕೊಂಡನು. ಅವನ ಜೊತೆಗೆ ದೇವಸೇನೆಯೂ ಇದ್ದಿತು. ಈ ಸುರನಾಥನನ್ನು ಕಂಡು ಆತ್ರೇಯ ಮುನಿಯು ಪ್ರೀತಿಯಿಂದ ಉಪಚರಿಸಿದನು. ಅದಕ್ಕೆ ಮಾರ್ನುಡಿಯದೆ, ಮನ್ನಣೆಗೈಯದೆ, ಮಹಾರಾಜನ ಬಳಿಯಲ್ಲಿ ಬಿಗುವಿನಿಂದಲೇ ಬಂದ ನಿಂತ ಆ ಅಮರಾವತಿ ಅರಸನನ್ನು ನೋಡಿ ಆತ್ರೇಯ ಋಷಿಗೆ ಅವಮಾನ ಎನಿಸಿತು. ಕೋಪವೂ ಕೆರಳಿತು. ಅವನು ಕೋಪದಿಂದ ಶಾಪವನ್ನು ಎಸೆದನು.

''ಮೂಢನಾದ ಸ್ವರ್ಗದೊಡೆಯನೇ ! ನಾನು ಪ್ರೀತಿಯಿಂದ ಉಪಚರಿಸಿದರೂ ನೀನು ನನ್ನನ್ನು ಮನ್ನಿಸಲಿಲ್ಲ. ಈ ಋಷಿಯನ್ನು ನೀನೀಗ ಧಿಕ್ಕರಿಸಿ ನಡೆದಿರುವೆ. ಈ ಅಪರಾಧಕ್ಕಾಗಿ ಸ್ವರ್ಗಸಾಮ್ರಾಜಕ್ಕೆ ನೀನು ಎರವಾಗಿ ದೇಶಾಂತರದಲ್ಲಿ ವಾಸ ಮಾಡುವ ಪರಿಸ್ಥಿತಿಯು ನಿನಗೆ ಒದಗುವುದು''. ಹೀಗೆ ಆತ್ರೇಯ ಮುನಿಯು ಸ್ವರ್ಗಾಧಿಪತಿಗೆ ಕೋಪದಿಂದ ಶಾಪವನ್ನಿತ್ತು ಸುಪ್ರತೀಕ ರಾಜನೆಡೆಗೆ ಹೊರಳಿ ನುಡಿದನು -

''ರಾಜನ್, ನಿನಗೊಬ್ಬ ಗಂಡು ಮಗನು ಜನಿಸುವನು. ಅವನ ಬೀರ ಬಲುಹುಗಳು ಗಟ್ಟಿ-ಮುಟ್ಟಿಯಾಗಿ ದೈವಿಕ ಮಟ್ಟದಲ್ಲಿ ಮೆರೆಯುವವು. ಅವನ ರೂಪವು ಇಂದ್ರನಿಗೆ ಸರಿಸಾಟಿಯಾಗಿ ಕಂಗೊಳಿಸುವುದು. ಐಶ್ವರ್ಯದಲ್ಲಿಯೂ ಅವನು ದೇವೇಂದ್ರನಿಗೆ ಕಡಿಮೆಯಾಗುವುದಿಲ್ಲ. ಅವನ ಆಯುಧಗಳು ಮಿಂಚಿನ ಮೊನೆಗೆ ತೀಡಿದಂತೆ ಹೊಳೆಯುವವು. ಎಲ್ಲ ವಿದ್ಯೆಗಳ ಪ್ರಭಾವವನ್ನು ಅವನು ಅರಿಯುವನು. ಕ್ರೂರ ಕರ್ಮಿಯಾದ ಆ ನಿನ್ನ ವೀರ ಕುಮಾರನನ್ನು ಯಾವನೂ ಗೆಲ್ಲಲಾರ. ಯಾವನೂ ಅವನ ಮುಂದೆ ನಿಲ್ಲಲಾರ, ಆದುದರಿಂದ ಅವನಿಗೆ ದುರ್ಜಯನೆಂದೇ ಹೆಸರಾಗುವುದು''.

ಇಂತು ವರವನ್ನಿತ್ತು ಆತ್ರೇಯ ಮುನಿಯು ಅಲ್ಲಿಂದ ಹೊರಟು ಹೋದನು. ದೇವೇಂದ್ರನೂ ಅದೃಶ್ಯನಾದನು. ಇತ್ತ ಸುಪ್ರತೀಕ ಮಹಾರಾಜನು ತನ್ನ ರಾಜಧಾನಿಗೆ ಹಿಂದಿರುಗಿ ಬಂದನು. ಮುನಿವಚನದಂತೆ ಅವನ ಮಡದಿಯಾದ ವಿದ್ಯುತ್ ಪ್ರಭೆಯು ಗರ್ಭಿಣಿಯಾದಳು. ನವಮಾಸ ತುಂಬಿದ ಬಳಿಕ ದುರ್ಜಯ ಎಂಬ ಹೆಸರಿನ ಮಗುವನ್ನು ಹೆತ್ತಳು. ಧರ್ಮ ಸೂಕ್ಷ್ಮವನ್ನು ಅರಿತ ಸುಪ್ರತೀಕ ಮಹಾರಾಜನು ಮಗನು ಜನಿಸಿದ

ಕೂಡಲೇ ಆತ್ರೇಯ ಮುನಿಯನ್ನು ತನ್ನ ಮನೆಗೆ ಬರಮಾಡಿಕೊಂಡನು. ಆತ್ರೇಯ ಋಷಿಯು ಆ ರಾಜಕುಮಾರನಿಗೆ ಕ್ಷತ್ರಿಯೋಚಿತವಾದ ಜಾತಕರ್ಮ ಮೊದಲಾದ ಸಂಸ್ಕಾರಗಳನ್ನು ವಿಧಿ ಪೂರ್ವಕವಾಗಿ ನೆರವೇರಿಸಿದನು. ಹುಟ್ಟಿದಾಗಲೇ ಆ ಎಳೆ ಕಂದನ ಮುಖದ ಮೇಲೆ ಕ್ರೂರ ಕಾಂತಿಯು ತನ್ನ ಘೋರ ವರ್ಚಸ್ಸನ್ನು ಬೀರಿತ್ತು. ಶೌರ್ಯ ಕ್ರೌರ್ಯಗಳು ಆ ಮಗುವಿನ ಮೊಗಶಾಲೆಯಲ್ಲಿ ಉಕ್ಕಿ ಮಿಕ್ಕಿ ಹೊರಸೂಸುತ್ತಿದ್ದವು. ಅದನ್ನು ಅರಿತ ಆತ್ರೇಯ ಮುನಿಯು ಒಂದು ಯಜ್ಞವನ್ನು ಮಾಡಿಸಿ ಅದರ ಪ್ರಭಾವದಿಂದ ಆ ರಾಜಪಿಂಡವನ್ನು ಸೌಮ್ಯವನ್ನಾಗಿ ಮಾಡಿದನು. ಸ್ವಯಂ ಆತ್ರೇಯರು ಆ ನೃಪನಂದನನಿಗೆ ವೇದಗಳನ್ನು ಹೇಳಿದರು. ಶಾಸ್ತ್ರಗಳನ್ನು ಕಲಿಸಿದರು. ಶಸ್ತ್ರಾಸ್ತ್ರಗಳನ್ನು ತಿಳಿಸಿದರು. ರಾಜನೀತಿಯನ್ನು ಬೋಧಿಸಿದರು. ಸರ್ವವಿದ್ಯಾ ಪ್ರವೀಣನಾದ ಅವನಲ್ಲಿ ಧರ್ಮಬುದ್ಧಿಯನ್ನು ಹುಟ್ಟಿಸಿದರು. ಅವನು ಎಲ್ಲ ರೀತಿಯಲ್ಲಿಯೂ ಶುಚಿರ್ಭೂತನಾಗಿ ಉಳಿಯುವಂತೆ ನೋಡಿಕೊಂಡರು.

ಮಹಾತ್ಮನಾದ ಸುಪ್ರತೀಕ ಮಹಾರಾಜನ ಎರಡನೆಯ ಹೆಂಡತಿಯಾದ ಕಾಂತಿಮತಿಗೂ ಆತ್ರೇಯರ ಅನುಗ್ರಹದಿಂದ ಒಂದು ಪುತ್ರ ಸಂತಾನವಾಯಿತು. ಆ ಸುಪುತ್ರನ ಹೆಸರು ಸುದ್ಯುಮ್ನ. ಸುದ್ಯುಮ್ನನೂ ವೇದಗಳಲ್ಲಿ ಕೋವಿದನಾದನು. ಹೀಗೆ ಬಹುಕಾಲವು ಕಳೆದ ಬಳಿಕ ಸುಪ್ರತೀಕ ಮಹಾರಾಜನು ವೃದ್ಧನಾದನು. ಅವನ ಹಿರಿಯ ಮಗ ದುರ್ಜಯನು ಪ್ರಬುದ್ಧನಾದನು. ಅವನು ಇನ್ನು ಮೇಲೆ ಸಾಮ್ರಾಜ್ಯದ ಹೊಣೆಯನ್ನು ಹೊರಲು ತಕ್ಕವನಾಗಿದ್ದಾನೆ ಎಂದು ತಂದೆ ಯೋಚಿಸಿದನು.

ಮುಪ್ಪಿನ ಮುದುಕನಾದ ಸುಪ್ರತೀಕ ಮಹಾರಾಜನು ಒಂದು ದಿನ ತನ್ನ ಮುದಿತನವನ್ನು ಮನದಂದು, ಮುಂದೆ ದುರ್ಜಯನು ಯೋಗ್ಯ ಉತ್ತರಾಧಿಕಾರಿಯೆಂದು ಬಗೆದು, ಅವನನ್ನು ತನ್ನ ಕಾಶೀರಾಜ್ಯದ ಸಿಂಹಾಸನದ ಮೇಲೆ ಕುಳ್ಳಿರಿಸಿ ಪಟ್ಟಾಭೀಷೇಕಗೈದನು. ಸರ್ವಾಧಿಕಾರವನ್ನೂ ಅವನಿಗೆ ಒಪ್ಪಿಸಿ ತಾನು ಚಿತ್ರಕೂಟ ಪರ್ವತಕ್ಕೆ ತಪಸ್ಸಿಗಾಗಿ ಹೊರಟುಹೋದನು. ಇತ್ತ ತರುಣನೂ ತೇಜಸ್ವಿಯೂ ಆದ ದುರ್ಜಯ ಮಹಾರಾಜನು ಉತ್ಸಾಹದಿಂದ ಆನೆ, ಕುದುರೆ, ರಥ, ಕಾಲಾಳು ಈ ಚತುರಂಗ ಸೇನೆಯನ್ನು ಸಜ್ಜುಗೊಳಿಸಿದನು. ಬಳಿಕ ಸಾಮ್ರಾಜ್ಯವನ್ನು ವಿಸ್ತರಿಸಲೆಣಿಸಿದನು. ತನ್ನ ರಾಜ್ಯದ ಎಲ್ಲೆಯನ್ನು ಬಿತ್ತರಿಸುವ ಹೊಂಚು ಹಂಚಿಕೆಗಳನ್ನು ಹಾಕಿ ಸೇನಾ ಸನ್ನಾಹವನ್ನು ಮಾಡಿಕೊಂಡು ಉತ್ತರ ದೇಶದತ್ತ ದಿಗ್ವಿಜಯ ಮಾಡಿದನು. ಅವನ ಆ ಪ್ರಚಂಡ ದಂಡಯಾತ್ರೆಯಲ್ಲಿ ಉತ್ತರ ದಿಕ್ಕಿನಲ್ಲಿರುವ ರಾಜಮಹಾರಾಜರೆಲ್ಲರೂ ತತ್ತರಿಸಿ ಪಾದಾಕ್ರಾಂತರಾದರು. ಅನಂತರ ಅವನು ಸಮಗ್ರ ಭರತ ಖಂಡವನ್ನು ತನ್ನ ವಶದಲ್ಲಿ ತೆಗೆದುಕೊಂಡನು. ಆ ಬಳಿಕ ಕಿಂಪುರುಷಖಂಡವನ್ನು ಆಕ್ರಮಿಸಿದನು. ಅದಾದ ಬಳಿಕ ಹರಿವರ್ಷವನ್ನು ಗೆದ್ದು, ತನ್ನ ಜಯಪತಾಕೆಯನ್ನು ನೆಟ್ಟನು. ರಮ್ಯವಾದ ರೋಮಾವತ, ಕುರುವರ್ಷ, ಭದ್ರಾಶ್ವ, ಇಲಾಮೃತ, ಜಂಬೂದ್ವೀಪ ಜಯಸ್ತಂಭಗಳನ್ನು ನಿಲ್ಲಿಸಿದನು. ಹೀಗೆ ಮೇರು ಹಿಮಾಲಯ ಮುಂತಾದ ಕುಲಗಿರಿಗಳಿಗೆ ಹತ್ತಿದ ಸುತ್ತಮುತ್ತಲಿನ ಎತ್ತರದ ಬಿತ್ತರದ ಭೂಭಾಗವನ್ನೆಲ್ಲ ಹಾಗೂ ತನಗೆ ಗೊತ್ತಿದ್ದ ಧರಾಮಂಡಲವನ್ನೆಲ್ಲ ಸ್ವಾಧೀನಪಡಿಸಿಕೊಂಡನು.

ಇಂತು ಭೂಲೋಕವನ್ನೆಲ್ಲ ಆಕ್ರಮಿಸಿದ ಬಳಿಕ ಲೋಕಾಂತರದ ಆಕ್ರಮಣಕ್ಕಾಗಿ ಅವನ ಹೃದಯವು ಹಾತೊರೆಯತೊಡಗಿತು. ಸರ್ವ ದೇವತೆಗಳಿಂದ ಒಡಗೂಡಿದ ಮಹೇಂದ್ರನನ್ನೇ ಗೆಲ್ಲಬೇಕೆಂದು ಅವನು ಹಂಚಿಕೆ ಮಾಡಿ ಮೇರುಪರ್ವತದ ಶಿಖರಗಳನ್ನು ಏರತೊಡಗಿದನು. ಆ ಮೇರು ಶೈಲನ ಸಾನುಕಾನುಗಳಲ್ಲಿ ಇರುವ ಗುಹ್ಯಕರನ್ನೂ ಕಿನ್ನರರನ್ನೂ ಅವನು ಸೋಲಿಸಿದನು. ಅವುಗಳ ಮೇಲಿನ ಅಧಿತ್ಯಕ್ಕೆ ಉಪತ್ಯಕೆಗಳಲ್ಲಿರುವ ದೇವಗಂಧರ್ವರನ್ನೂ ದೈತ್ಯರನ್ನೂ ಸೋಲಿಸಿದನು. ಅದರ ಮುಂದಿನ ಶೈಲಶ್ರೇಣಿಗಳಲ್ಲಿರುವ ದೇವದಾನವರೊಡನೆ ಹೋರುತ್ತ ಮೇಲೆ ಮೇಲೆ ಏರುತ್ತ ನಡೆದನು. ಆಗ ನಾರದರು ಧಾವಿಸಿ ಬಂದು ದೇವೇಂದ್ರನಿಗೆ ಭೂಲೋಕದ ಭೂಪತಿಯಿಂದ ಸ್ವರ್ಗಲೋಕಕ್ಕೆ ಬರುವ ಗಂಡಾಂತರವನ್ನು ಸೂಚಿಸಿದರು.

ಆಗ ಶಚೀಪತಿಯು ಗೆಲುವು ಗೋಪುರಗಟ್ಟುತ್ತ ಮೇಲೆ ಮೇಲೆ ಬರುತ್ತಲಿರುವ ದುರ್ಜಯನ ವಿಜಯವಾರ್ತೆಯಿಂದ ಸಂತಪ್ತನಾದನು. ಆ ಸುರನಾಥನು ತಕ್ಷಣವೇ ರಣಕಹಳೆಯನ್ನು ಊದಿಸಿದನು. ಕೂಡಲೇ ಸ್ವರ್ಗದ ಪ್ರಚಂಡ ಸೇನೆಯು ದಂಡಯಾತ್ರೆಗೆ ಸಿದ್ಧವಾಯಿತು. ಸ್ವಯಂ ದೇವೇಂದ್ರನು ಸೇನಾಪತಿಯಾಗಿ ಮುಂಚೂಣಿಯಲ್ಲಿ ನಿಂತು ದುರ್ಜಯನ ಮೇಲೆ ಏರಿ ಬಂದನು. ಮೇರು ಪರ್ವತದ ಶೃಂಗಾಂಗಣದಲ್ಲಿ ಸೇನಾಪರಿವಾರಸಮೇತನಾದ ದೇವೇಂದ್ರನಿಗೂ ಧರಾಮಂಡಲದ ದೊರೆ ದುರ್ಜಯನಿಗೂ ಭೀಷಣವಾದ ಸಂಗ್ರಾಹವು ಮಸಗಿತು. ಆದರೆ ಬ್ರಹ್ಮರ್ಷಿಗಳಾದ ಆತ್ರೇಯರ ಅನುಗ್ರಹ ಆಶೀರ್ವಾದಗಳ ಕೃಪಾಕವಚದಿಂದ ಉದ್ದೀಪಿತನಾದ ದುರ್ಜಯನ ಯುದ್ಧೋದ್ಯಮದ ಔದ್ಧತ್ಯದ ಎದುರು ಇಂದ್ರನ ಆಟವು ಸಾಗದಾಯಿತು. ಅವನ ಘೋರವಾದ ವಜ್ರಾಯುಧವು ಕೆಲಸಕ್ಕೆ ಬಾರದಾಯಿತು. ಆ ಸ್ವರ್ಗಾಧಿಪತಿಯು ಮಾನವ ಲೋಕದ ನರನಾಥನಿಗೆ ಸೋತು ಮೇರು ಪರ್ವತದಿಂದ ಸರಿದು ತಲೆಮರೆಸಿಕೊಳ್ಳಬೇಕಾಯಿತು. ದುರ್ಜಯನ ದಾರುಣವಾದ ಶಸ್ತ್ರಾಘಾತವನ್ನು ತಾಳಲಾರದೆ ದೇವೇಂದ್ರನು ಭೂಲೋಕಕ್ಕೆ ಬಂದು ಪೂರ್ವದೇಶದಲ್ಲಿ ನಿಂತುಕೊಂಡನು. ಆ ನಾಕದೊಡೆಯನು ಈ ಲೋಕಕ್ಕೆ ಬಂದ ನಿಂತ ಬಳಿಕ ಅನೇಕ ಚರಿತ್ರಾರ್ಹವಾದ ಘಟನೆಗಳು ನಡೆದವು. ಇತ್ತ ದುರ್ಜಯ ಮಹಾರಾಜನು ದೇವತೆಗಳನ್ನೆಲ್ಲ ಗೆದ್ದು ಸ್ವರ್ಗವನ್ನು ಕೈವಶ ಮಾಡಿಕೊಂಡು ಮೇರುಶಿಖರದಿಂದ ಹಿಂತಿರುಗಿದನು. ಮರಳಿ ಬರುವಾಗ ಗಂಧಮಾಧನ ಪರ್ವತದ ಹಂಸದುಪ್ಪಳದಂತಿರುವ ಹಸಿರು ತೊಪ್ಪಲಿನಲ್ಲಿ ತನ್ನ ಸೇನಾ ಪರಿವಾರದೊಂದಿಗೆ ಬೀಡುಬಿಟ್ಟು ತಂಗಾಳಿಯನ್ನು ಸೇವಿಸುತ್ತ ತಂಗಿದ್ದನು.

ಗಂಧಮಾದನಗಿರಿಯ ಹಸಿರು ಹಾಸಿನಲ್ಲಿ ಆ ದುರ್ಜಯ ಮಹಾರಾಜನು ವಿಶ್ರಮಿಸಿದಾಗ ಇಬ್ಬರು ತಾಪಸಪುಂಗವರು ಅಲ್ಲಿಗೆ ಐತಂದರು. ಗೆಲುವಿನ ಗೋಪುರದಲ್ಲಿ ತನ್ನ ಜೀವನದ ನಲಿವು-ನಿಲವುಗಳನ್ನು ಕಂಡು ಕನವರಿಸುತ್ತಲಿರುವ ಆ ಮಹಾರಾಜನನ್ನು ಮುಕ್ತಕಂಠವಾಗಿ ಪ್ರಶಂಸಿಸಿ ಆ ಇಬ್ಬರೂ ತಪಸ್ವಿಗಳು ನುಡಿದರು -

''ಮಹಾರಾಜ, ಯಾರಿಂದಲೂ ಗೆಲ್ಲಲು ಅಶಕ್ಯರಾದ ದೇವತೆಗಳನ್ನು ನೀನು ಗೆದ್ದುರುವೆ. ಎಂಟೂ ಲೋಕಪಾಲಕರನ್ನು ನಿನ್ನ ಬೀರಬಲುಮೆಗಳಿಂದ ಸೋಲಿಸಿರುವೆ. ಆದರೆ ಲೋಕಪಾಲಕರಿಲ್ಲದೇ ಈ ಪ್ರಪಂಚವು ನಿಲ್ಲಲಾರದು ಮತ್ತು ನಡೆಯಲಾರದು.

ಆ ಲೋಕಪಾಲಕ ಸ್ಥಾನದಲ್ಲಿ ಯಾರನ್ನಾದರೂ ನಿಯಮಿಸುವ ಅಧಿಕಾರವು ಇಂದು ನಿನ್ನದಾಗಿದೆ. ಅದಕ್ಕಾಗಿ ನೀನು ಆ ಲೋಕಪಾಲಪದವಿಯಲ್ಲಿ ನಮ್ಮನ್ನು ನಿಯಮಿಸಬೇಕು.'' ಅದನ್ನು ಕೇಳಿ ದುರ್ಜಯ ಮಹಾರಾಜನು ಕೌತುಕದಿಂದ ನೀವು ಯಾರು ? ಎಂದು ಕೇಳಿದನು. ಅದಕ್ಕೆ ಅವರಿಬ್ಬರೂ ತಪಸ್ವಿಗಳು ಇಂತು ನುಡಿದರು -

''ಮಹಾರಾಜ, ನಾವಿಬ್ಬರೂ ಅಸುರರು, ನಮ್ಮ ಹೆಸರು ವಿದ್ಯುತ್-ಸುವಿದ್ಯುತ್. ನಿನ್ನಂಥ ಧರ್ಮವೀರನಿಂದ ಒಳ್ಳೇ ಧರ್ಮವನ್ನು ನಾವು ನಿರ್ವಾಹ ಮಾಡುತ್ತೇವೆ. ವೈರಿಗಳನ್ನೆಲ್ಲ ಶೌರ್ಯದಿಂದ ದಮನ ಮಾಡುವ ನಮಗೆ ಲೋಕಪಾಲ ಸ್ಥಾನವನ್ನು ನಿರ್ವಹಿಸುವ ಶಕ್ತಿಯಿದೆ.'' ಅವರ ಮಾತನ್ನು ಕೇಳಿ ದುರ್ಜಯ ಮಹಾರಾಜನು ಅದಕ್ಕೆ ತನ್ನ ಸುಮ್ಮತಿಯನ್ನು ಕೊಟ್ಟನು. ಆ ಇಬ್ಬರೂ ತಾಪಸ ವೇಷಧಾರಿಗಳಾದ ಅಸುರರನ್ನು ಲೋಕಪಾಲಕರನ್ನಾಗಿ ನಿಯಮಿಸಿ ಸ್ವರ್ಗದಲ್ಲಿ ಇರಿಸಿದನು. ಅನಂತರ ಅವರಿಬ್ಬರೂ ಅಲ್ಲಿಂದ ಅದೃಶ್ಯರಾಗಿ ಹೊರಟು ಹೋದರು. ಇವರಿಬ್ಬರ ಮುಂದಿನ ಚರಿತವು ಕೂಡ ಭೂದೇವಿ, ಬಹು ಕೌತುಕಭರಿತವಾಗಿದೆ.

''ಇತ್ತ ದುರ್ಜಯ ದೊರೆಯು ಮುಂದೆ ಮಂದರ ಪರ್ವತಕ್ಕೆ ಬಂದಿಳಿದನು. ಅಲ್ಲಿಯ ಒಂದು ಕಂದರದಲ್ಲಿ ಕುಬೇರನ ಸುಂದರವಾದ ಉಪವನವು ಕಂಡಿತು. ಸಾಕ್ಷಾತ್ ನಂದನವನದಂತೆಯೇ ಅಂದಚಂದವಾಗಿ ಕಣ್ಣಿಗೆ ಎಸೆಯುವ ಆ ರಮಣೀಯವಾದ ಉಪವನದಲ್ಲಿ ದುರ್ಜಯರಾಜನು ಆನಂದದಿಂದ ಅತ್ತಿತ್ತ ಅಲೆದಾಡಿದನು. ಅಲ್ಲಿಯ ಮಂಜುಲತಾ ಕುಂಜಗಳಲ್ಲಿ ಸಂಭ್ರಮದಿಂದ ಸುಳಿದಾಡಿದನು. ಅಷ್ಟರಲ್ಲಿ ಅವನ ಕಣ್ಣಿಗೆ ಒಂದು ಬಂಗಾರದ ಎಲೆಗಳುಳ್ಳ ಗಿಡವು ಬಿದ್ದಿತು. ಆ ಬಂಗಾರದ ವೃಕ್ಷದ ಕೆಳಗೆ ಶೃಂಗಾರ ಮೂರ್ತಿಗಳಂತಿರುವ ಇಬ್ಬರು ಕನ್ನೆಯರು ಕುಳಿತಿದ್ದರು. ಅವರ ತಾರುಣ್ಯ ತುಂಬಿದ ದೇಹದಲ್ಲಿ ಲಾವಣ್ಯವು ತುಂಬಿ ತುಳುಕಾಡುತ್ತಿತ್ತು. ಅವರನ್ನು ಕಂಡು ದುರ್ಜಯನ ಕಣ್ಣಿಗೆ ಹತ್ತು ಹುಣ್ಣಿಮೆಗಳ ಬೆಳದಿಂಗಳನ್ನೆಲ್ಲ ತಂದು ನಿಲ್ಲಿಸಿದಂತಾಯಿತು. ಅವರ ಚೆಲ್ವಿಕೆ ಚಾಪಲ್ಯಗಳನ್ನು ನೋಡಿ ಆಶ್ಚರ್ಯ ಚಕಿತನಾದ ದುರ್ಜಯನು 'ಇವರಾರಾಗಿರಬಹುದು' ಎಂದು ಆಲೋಚನೆಗೈಯುತ್ತ ನಿಂತನು. ಅಷ್ಟರಲ್ಲಿ ಅದೇ ಉಪವನದಲ್ಲಿ ಅವನ ಕಣ್ಣಿಗೆ ಮತ್ತೆ ಇಬ್ಬರು ತಪಸ್ವಿಗಳು ಗೋಚರಿಸಿದರು. ತೇಜಪುಂಜರಾದ ಆ ತಪೋಧನರನ್ನು ಕಂಡು ಸಂತಸಗೊಂಡು ದುರ್ಜಯರಾಜನು ತಟ್ಟನೆ ತಾನು ಏರಿದ ಆನೆಯಿಂದ ಕೆಳಗೆ ಇಳಿದನು. ಅವರಿಬ್ಬರಿಗೂ ವಂದಿಸಿದನು. ಆಗ ಆ ತಪಸ್ವಿಗಳು ಈ ಭೂಪಾಲಕನಿಗೆ ಕುಳಿತುಕೊಳ್ಳಲು ದರ್ಭೆಯ ಆಸನವನ್ನು ಬಿಡಿಸಿದರು. ಆ ಆಸನದ ಮೇಲೆ ದುರ್ಜಯ ದೊರೆಯು ಆಸೀನನಾದ ಬಳಿಕ ಆ ತಾಪಸರು ನಸುನಗುತ್ತ ಸಹಜವಾಗಿ ಕೇಳಿದರು -

''ನೀನಾರು ? ಎಲ್ಲಿಂದ ಬಂದೆ ? ಏತಕ್ಕಾಗಿ ಬಂದಿದ್ದೆ ? ಇಲ್ಲೇಕೆ ನಿಂದಿದ್ದೆ ? ನಿನ್ನ ತಂದೆಯ ಹೆಸರೇನು ? ನೀನು ಬಂದ ಉದ್ದೇಶವೇನು ?'' ಆ ಮುನಿಮಾನ್ಯರ ಈ ಪ್ರಶ್ನಾವಳಿಯನ್ನು ಕೇಳಿ ಮಹಾರಾಜನು ಮಂದಹಾಸವನ್ನು ಬೀರಿ ಮೆಲ್ಲಗೆ ಮಾರ್ನುಡಿದನು-

''ಪೂಜ್ಯರೇ, ಸುಪ್ರತೀಕ ಎಂಬ ಹೆಸರಿನ ಒಬ್ಬ ಪೊಡವಿಯ ಒಡೆಯನು ಭೂಲೋಕದಲ್ಲಿ ಶಾಸನವನ್ನು ಮಾಡುತ್ತಲಿದ್ದನು. ನಾನು ಅವನ ಪುತ್ರನು. ನನ್ನ ಹೆಸರು

ದುರ್ಜಯ. ಪ್ರಪಂಚದಲ್ಲಿಯ ಎಲ್ಲ ರಾಜರನ್ನು ಗೆಲ್ಲಬೇಕೆಂದು ನಾನು ಇಲ್ಲಿಗೆ ಬಂದಿದ್ದೇನೆ. ತಮ್ಮ ದರ್ಶನವಾದದ್ದು ನಮ್ಮ ಪುಣ್ಯ. ತಾವು ನನ್ನನ್ನು ನೆನಪಿಟ್ಟುಕೊಂಡು ಆಗಾಗ ನೆನೆಸಿದರೆ ನಾನು ಧನ್ಯ. ತಪೋಧನರೇ ತಾವು ಯಾರು ದಯವಿಟ್ಟು ತಿಳಿಸಿರಿ. ನನ್ನ ಮೇಲೆ ಪರಮಾನುಗ್ರಹವನ್ನು ಮಾಡಿರಿ.

**ತಪಸ್ವಿಗಳು :-** ಮಹಾರಾಜ, ನಾವು ಸ್ವಾಯಂಭುವ ಮನುವಿನ ಮಕ್ಕಳು. ಹೇತೃ ಪ್ರಹೇತೃ ಎಂದು ನಮ್ಮಿಬ್ಬರ ಹೆಸರು. ನಾವಿಬ್ಬರೂ ದೇವತೆಗಳನ್ನು ನಾಶಮಾಡಿ ಬರಬೇಕೆಂದು ಸ್ವರ್ಗಕ್ಕೆ ಹೋಗಿದ್ದೆವು. ನಮ್ಮ ಚತುರಂಗ ಸೈನ್ಯಕ್ಕಿಂತ ದೇವತೆಗಳ ಪ್ರಚಂಡ ಸೈನ್ಯವು ನೂರು ಪಟ್ಟು ಹೆಚ್ಚಾಗಿದ್ದಿತು. ಸಾವಿರಪಟ್ಟು ಮಿಗಿಲಾಗಿದ್ದಿತು. ಇಷ್ಟಾದರೂ ಕೂಡ ನಮ್ಮ ಸೇನೆಯು ಕಲಿತನದಿಂದ ಕಾದಾಡಿ ಆ ಸುರಸೇನೆಯನ್ನೆಲ್ಲ ಹಿಮ್ಮೆಟ್ಟಿಸಿತು. ನಮ್ಮ ಅನುಯಾಯಿಗಳಾದ ದೈತ್ಯರ ದಳವು ಸುರಸೈನಿಕರನ್ನೆಲ್ಲ ಹಣಾಹಣಿ ಹೋರಾಡಿ ಹೆಣ ಬೀಳುವಂತೆ ಮಾಡಿತು. ಅದನ್ನು ಕಂಡು ಕಂಗೆಟ್ಟು ದೇವತೆಗಳು ಹೆದರಿ ಶ್ರೀಹರಿಗೆ ಶರಣು ಹೋದರು. ಶ್ರೀಹರಿಯು ಹಾಯಾಗಿ ಪವಡಿಸಿದ ಹಾಲ್ಗಡಲಿಗೆ ಹೋಗಿ ಸಾಷ್ಟಾಂಗ ನಮಸ್ಕಾರ ಮಾಡಿ ಹೀಗೆ ಬಿನ್ನಹ ಮಾಡಿಕೊಂಡರು.

''ದೇವರಿಗೂ ಕೂಡ ದೇವರಾದ ಹರಿಯೇ, ನಮ್ಮ ಎಲ್ಲ ದೇವ ಸೇನೆಯು ಬಳಿಷ್ಠರಾದ ದಾನವರಿಂದ ಸೋತು ಭೀತವಾಗಿ ಭಕ್ತಿಯುಕ್ತವಾಗಿ ನಿನ್ನ ಬಳಿಗೆ ಬಂದಿದೆ. ನಮ್ಮನ್ನು ರಕ್ಷಿಸು. ಆ ದೈತ್ಯರನ್ನು ಶಿಕ್ಷಿಸು. ಹಿಂದೆ ದೇವದಾನವರ ಯುದ್ಧದಲ್ಲಿ ಕ್ರೂರನಾದ ಕಾಲನೇಮಿಯು ಸಾವಿರ ತೋಳುಗಳಿಂದ ನಮ್ಮನ್ನೆಲ್ಲ ಸದೆ ಬಡಿಯುತ್ತಿರುವಾಗ ನೀನೇ ಬಂದು ನಮ್ಮನ್ನು ಕರುಣೆಯಿಂದ ಕಾಪಾಡಿದೆ. ಈಗಲೂ ಕೂಡ ಈ ಹೇತೃ ಪ್ರಹೇತೃ ಎಂಬ ಇಬ್ಬರು ದೈತ್ಯರು ನಮ್ಮ ಕ್ಷೇಮಾರಾಮದಿಗಳ ದಾರಿಯಲ್ಲಿಯ ದೊಡ್ಡ ಮುಳ್ಳು ಮರಗಳಾಗಿದ್ದಾರೆ. ಅವರಿಬ್ಬರನ್ನೂ ಅವರ ಉಳಿದ ಸೈನ್ಯವನ್ನೂ ಕೊಂದು ನಮ್ಮೆಲ್ಲ ದೇವತೆಗಳನ್ನು ರಕ್ಷಿಸಬೇಕು''. ದೇವತೆಗಳ ಈ ಬಗೆಯಾದ ಪ್ರಾರ್ಥನೆಯನ್ನು ಕೇಳಿ ಶ್ರೀನಾರಾಯಣನು ಆ ದೈತ್ಯರನ್ನು ಕೊಲ್ಲಲು ಇದೋ ನಾನೀಗಲೇ ಹೊರಟೆ ಎಂದು ಹೇಳಿದನು.

ಭಗವಂತನಿಂದ ಹೀಗೆ ಆಶ್ವಾಸನೆಯನ್ನು ಪಡೆದು ಮನಸ್ಸಿನಲ್ಲಿ ಶ್ರೀಹರಿಯನ್ನು ಧ್ಯಾನಿಸುತ್ತ ದೇವತೆಗಳೆಲ್ಲರೂ ಮೇರು ಪರ್ವತಕ್ಕೆ ಹೊರಟರು. ಮುಂದೆ ದೇವತೆಗಳು ನೆನೆದ ಮಾತ್ರಕ್ಕೆ ನಾರಾಯಣನು ಪ್ರಾದುರ್ಭೂತನಾದನು. ಗದೆಯನ್ನು ಪಿಡಿದನು. ದೈತ್ಯ ಸೈನ್ಯದ ಮೇಲೆ ಏರಿ ನಡೆದನು. ಎದುರು ಬಂದವರನ್ನೆಲ್ಲ ಹೊಡೆದನು. ಹರಿಯು ಒಬ್ಬನೇ ಅದರೂ ಹತ್ತು ಬಗೆಯಾಗಿ ನಿಂತನು. ನೂರು ರೂಪಗಳನ್ನು ಧರಿಸಿದನು. ಸಾವಿರ ರೂಪಗಳಲ್ಲಿ ವಿಜೃಂಭಿಸಿದನು. ಲಕ್ಷ ಲಕ್ಷ ವೀರ ವೇಷಗಳಿಂದ ನಮ್ಮ ದೈತ್ಯ ಸೈನ್ಯವನ್ನೆಲ್ಲ ಹೊಡೆದು ಹಾಕಿದನು. ಕೋಟಿ ವಿಷ್ಣು ರೂಪಗಳು ಕೈಯಲ್ಲಿ ಖಡ್ಗ ಹಿರಿದು ನಿಂತಾಗ ನಮ್ಮ ದೈತ್ಯ ಸೈನ್ಯವು ಸೋತು ಸಣ್ಣಾಗಿ ಸತ್ತು ಮಣ್ಣಾಗಿ ಬಿದ್ದಿತು. ಹೀಗೆ ಲೀಲೆಯಿಂದಲೇ ಆ ಚಕ್ರಪಾಣಿಯ ಚಕ್ರವು ಚತುರತೆಯಿಂದ ನಮ್ಮ ಚತುರಂಗ ಸೇನೆಯನ್ನೆಲ್ಲ ನಿಃಪಾತ ಮಾಡಿತು. ಕೊನೆಗೆ ನಾವಿಬ್ಬರು ಮಾತ್ರ ಉಳಿದದ್ದನ್ನು ಕಂಡು ಆ ಪರಮಾತ್ಮನು ಒಮ್ಮೆಲೆ ಅಂತರ್ಧಾನವನ್ನು ಹೊಂದಿದನು. ಶ್ರೀಹರಿಯ ಇಂಥ ಲೋಕ ವಿಲಕ್ಷಣವಾದ ಗೈಮೆ

ಮಹಿಮೆಗಳನ್ನು ಕಂಡು ನಾವು ಕೂಡ ಅವನಿಗೆ ಶರಣುಹೋಗಿದ್ದೇವೆ. ಅವನನ್ನು ಕುರಿತೇ ತಪಸ್ಸು ಮಾಡುತ್ತಿದ್ದೇವೆ. ನೀನು ನಮ್ಮ ಮಿತ್ರನ ಮಗನಾಗಿದ್ದೀಯ. ಸುಪ್ರತೀಕನು ನಮ್ಮ ಜೀವಮಿತ್ರ. ಇಂದು ನನಗೆ ಆಕಸ್ಮಿಕವಾಗಿ ಈ ಕುಬೇರನ ಉಪವನದಲ್ಲಿ ಬಹುಕಾಲದ ಮೇಲೆ ಮಿತ್ರಪುತ್ರನಾದ ನಿನ್ನ ದರ್ಶನವಾಯಿತು. ಸಂತೋಷ.

ನರನಾಥ, ಇವರಿಬ್ಬರು ನಮ್ಮಿಬ್ಬರ ಕನ್ನೆಯರು. ಇವಳು ಹೇತೃವಿನ ಮಗಳಾದ ಸುಕೇಶಿ. ಅವಳು ಪ್ರಹೇತೃವಿನ ಮಗಳಾದ ಮಿಶ್ರಕೇಶಿ. ಇವರಿಬ್ಬರನ್ನೂ ನಮ್ಮ ಪ್ರಿಯಸಖನ ವೀರ ಪುತ್ರರಾದ ನಿನಗೆ ಧಾರೆಯೆರೆದು ಕೊಡಬೇಕೆಂದು ನಾವು ಸಂಕಲ್ಪಿಸಿದ್ದೇವೆ. ಇವರಿಬ್ಬರನ್ನು ನಿನ್ನ ಪತ್ನಿಯರೆಂದು ಸ್ವೀಕರಿಸು.'' ತಂದೆಯ ಜೀವದ ಗೆಳೆಯಂದಿರಾದ ಈ ಇಬ್ಬರೂ ತಾಪಸರ ಮಾತುಗಳನ್ನು ಕೇಳಿ ದುರ್ಜಯನಿಗೆ ಆನಂದದ ಅಲೆಗಳ ಮೇಲೆ ಓಲಾಡಿಸಿದಂತಾಯಿತು. ಗಂಧರ್ವ ಲೋಕದಿಂದ ಇಳಿದು ಬಂದಂತಿರುವ ಆ ಇಬ್ಬರೂ ಅನಿಂದ್ಯ ಸುಂದರಿಯರನ್ನು ಅವನು ವಿಧಿಪೂರ್ವಕವಾಗಿ ಮದುವೆ ಮಾಡಿಕೊಂಡನು. ಚೆಲುವಿನ ಪುತ್ಥಳಿಗಳಂತಿರುವ ಆ ಇಬ್ಬರೂ ಭಾರ್ಯೆಯರೊಂದಿಗೆ ಪರಮಾನಂದ ಭರಿತನಾಗಿ ತನ್ನ ಸೈನ್ಯದೊಡಗೂಡಿ ಅವನು ತನ್ನ ರಾಷ್ಟ್ರಕ್ಕೆ ಮರಳಿ ಬಂದನು. ದೀರ್ಘಕಾಲವು ಕಳೆದ ಬಳಿಕ ದುರ್ಜಯ ರಾಜನಿಂದ ಸುಕೇಶಿಯಲ್ಲಿ ಪ್ರಭವ ಎಂಬ ಕುಮಾರನು ಹುಟ್ಟಿದನು. ಮಿಶ್ರಕೇಶಿಯಿಂದ ಸುದರ್ಶನ ಎಂಬ ಪುತ್ರನು ಜನಿಸಿದನು. ಹೀಗೆ ದುರ್ಜಯ ಮಹಾರಾಜನು ಗುಣವಂತರಾದ ಮಕ್ಕಳೀರ್ವರನ್ನು ಪಡೆದು ಬಹುಕಾಲದವರೆಗೆ ರಾಜ್ಯಶಾಸನ ಮಾಡಿದನು. ಕಾಲಾಂತರಲ್ಲಿ ಒಂದು ದಿನ ಅವನು ಸಮೀಪದ ಕಾಡಿಗೆ ಹೋಗಿದ್ದನು.

ಆ ಅರಣ್ಯದಲ್ಲಿರುವ ಅನೇಕ ಕ್ರೂರ ಪಶುಗಳನ್ನು ಅವನು ಹಿಡಿದು ಬಂಧನದಲ್ಲಿ ಇರಿಸಿದನು. ಆ ಅರಣ್ಯದಲ್ಲಿ ಗೌರಮುಖ ಎಂಬ ಮಹರ್ಷಿಯು ತಪಸ್ಸು ಮಾಡುತ್ತಿದ್ದನು. ಅವನ ದರ್ಶನವಾದರೆ ಸಾಕು, ಪಾಪಿಗಳ ಉದ್ಧಾರವಾಗಿ ಹೋಗುತ್ತಿತ್ತು. ಋಷಿಗಳ ಗುಂಪಿಗೆಲ್ಲ ಅವನೇ ಸಂರಕ್ಷಕನಾಗಿದ್ದನು. ಆ ಮುನಿಯ ಹೃದಯವು ಕನ್ನಡಿಯಂತೆ ನಿರ್ಮಲವಾಗಿದ್ದಿತು. ಅವನ ಆಶ್ರಮದಲ್ಲಿ ಹೊಕ್ಕರಣೆಯ ನೀರು ಸ್ಪಟಿಕದಂತೆ ಶುಭ್ರ ಸ್ವಚ್ಛವಾಗಿ ಶುಚಿ ರುಚಿಯಾಗಿದ್ದಿತು. ಅವರ ಪರ್ಣಕುಟಿಯ ಬಳಿಯಲ್ಲಿ ತಂಪಾಗಿ ತೀಡುವ ಮಂದಾನಿಲವು ಸರ್ವದಾ ಸುಗಂಧವನ್ನೇ ಸೂಸುತ್ತಿತ್ತು. ಹೂತ ಹೂಗಳ ಭಾರದಿಂದ ಬಾಗಿ ಹೋಗಿದ್ದ ಅಲ್ಲಿಯ ವೃಕ್ಷ ವೃಂದವನ್ನು ನೋಡಿದರೆ ನಂದನ ವನವೇ ಸ್ವರ್ಗದಿಂದ ನೆಲಕ್ಕೆ ಇಳಿದು ಬಂದಂತೆ ತೋರುತ್ತಿತ್ತು. ಆ ಮುನಿಯ ಈ ಪುಣ್ಯಾಶ್ರಮವನ್ನು ಕಂಡರೆ ಮುಗಿಲ ಮೇಲಿನ ಯಾವುದೋ ಒಂದು ಸ್ವಪ್ನ ಸುಂದರವಾದ, ಸಕಲ ವಿಧವಾದ ಸುಖ ಸೌಕರ್ಯಗಳಿಂದ ಒಡಗೂಡಿದ ಒಂದು ದೈವಿಕ ಮೇಘಮಂಡಲವೇ ಈ ನೆಲದಂಚಿಗೆ ತೇಲಿ ಬಂದಿದೆ ಎಂದು ಎನಿಸುತ್ತಿತ್ತು. ಆ ಆಶ್ರಮದಲ್ಲಿ ನಿತ್ಯ ನಿರಂತರವೂ ನಡೆಯುವ ಹೋಮ ಹವನಗಳ ಅಗ್ನಿ ಶಿಖೆಗಳಿಂದ ಮುಗಿಲೆಲ್ಲವೂ ಹೊಳಪಿಟ್ಟಿರುತ್ತಿತ್ತು. ಆಶ್ರಮದ ಅಂಗಳದ ತುಂಬ ಎರಚಿದ ಹೂಗಳಿಂದ ಕಂಪಿಂಪುಗಳು ಸೂಸುತ್ತಿದ್ದವು. ಅಲ್ಲಿಯ ಮುನಿಯ ಶಿಷ್ಯ ವಟುಗಳ ಸಾಮಗಾನದ ಮಂಜುಘೋಷವು ಎಲ್ಲರನ್ನು ರಂಜಿಸುತ್ತಿತ್ತು. ಸ್ಫುರದ್ರೂಪಿಣಿಯರಾದ ಮುನಿಮಾನಿನಿಯರೂ ಮತ್ತು ಕಮನೀಯ ಕನ್ಯೆಯರೂ

ಮಿಂಚಿನ ಮೂರುತಿಗಳಂತೆ ಅಲ್ಲಲ್ಲಿ ಸಂಚರಿಸುತ್ತಿದ್ದರು. ಹೊಂದಳಿರುಗಳ ಹಂದರದಂತಿರುವ ಆ ಆಶ್ರಮದ ಗಿಡಗಳೆಲ್ಲವೂ ಸುಗಂಧ ಪುಷ್ಪಗಳಿಂದ ತುಂಬಿರುತ್ತಿದ್ದವು. ಆ ಸುಮಸಂದೋಹದಿಂದ ಮಕರಂದವು ಜಿನಗುತ್ತಿತ್ತು. ಇಂಥ ಮನೋಹರವಾದ ಆ ದಿವ್ಯಾಶ್ರಮದಲ್ಲಿ ನಿಂತು ವಿರಕ್ತನಾಗಿ ನಿಶ್ಚಲ ಮನಸ್ಸಿನಿಂದ ತಪಂಗೈಯುವ ಗೌರಮುಖ ಮುನಿಯನ್ನು ದುರ್ಜಯ ಮಹಾರಾಜನು ನೋಡಿದನು.

ವರಾಹ ಪುರಾಣದಲ್ಲಿ ಹತ್ತನೇ ಅಧ್ಯಾಯ ಮುಗಿದುದು



## ಬಡಮುನಿಯ ಗುಡಿಸಲಿನಲ್ಲಿ ಭೂಮಿಯೊಡೆಯನಿಗೆ ರಾಜೋಪಚಾರ, ರಸೋಪಹಾರ

ಅಧ್ಯಾಯ - ೧೧

**ವರಾಹ :-** ಅತ್ಯಂತ ರಮಣೀಯವಾದ ಗೌರಮುಖ ಮುನಿಗಳ ಆಶ್ರಮವನ್ನು ಕಂಡು ದುರ್ಜಯ ಮಹಾರಾಜನು ''ಈ ಆಶ್ರಮದೊಳಗೆ ಇರುವ ಧರ್ಮಾತ್ಮರಾದ ಋಷಿಗಳನ್ನು ಕಾಣುವೆನು'' ಎಂದು ಯೋಚಿಸಿ ಆಶ್ರಮದಲ್ಲಿ ಪ್ರವೇಶಿಸಿದನು. ರಾಜಾಧಿರಾಜನಾದ ದುರ್ಜಯನ ಆಗಮನದಿಂದ ಗೌರಮುಖ ಋಷಿಗಳಿಗೆ ಅತ್ಯಂತ ಸಂತೋಷವೆನಿಸಿತು. ಅವರು ಅತಿ ಆನಂದದಿಂದ ರಾಜನಿಗೆ ಸ್ವಾಗತ ನೀಡಿದರು. ಆದರದ ಉಪಚಾರ ಮಾಡಿದರು. ಲೋಕಾಭಿರಾಮವಾಗಿ ಕುಶಲ ಪ್ರಶ್ನೆ ಪೂರ್ವಕ ಮಾತನಾಡಿದರು.

ಔಪಚಾರಿಕ ಮಾತುಕತೆಗಳು ಮುಗಿದ ನಂತರ ಋಷಿಗಳು ಆ ನೃಪಶ್ರೇಷ್ಠನಿಗೆ ''ರಾಜನ್, ನಾನು ನನ್ನ ಶಕ್ತಿಗನುಸಾರವಾಗಿ ನಿನಗೂ ನಿನ್ನ ಈ ಎಲ್ಲ ಸೇನಾ ಪರಿವಾರಕ್ಕೂ ಆತಿಥ್ಯವನ್ನೂ ಮಾಡುವೆನು. ನಿಮ್ಮ ಸಾಮಾನು ಸರಂಜಾಮುಗಳನ್ನೆಲ್ಲ ವಾಹನಗಳಿಂದ ಕೆಳಗಿಳಿಸಿರಿ'' ಎಂದು ಹೇಳಿದರು. ರಾಜನ ಸೈನ್ಯವು ಐದು ಅಕ್ಷೋಹಿಣಿಗೆ ಮಿಕ್ಕಿತ್ತು. ''ಇಂಥ ಪ್ರಚಂಡ ಸೈನ್ಯಕ್ಕೆ ಈ ಗುಡಿಸಲಿನ ಬಡಬ್ರಾಹ್ಮಣ ಯಾವ ಧೈರ್ಯದಿಂದ ಆತಿಥ್ಯಕ್ಕೆ ಆಮಂತ್ರಣ ವೀಯುತ್ತಾನೆ!'' ರಾಜನಿಗೆ ತಿಳಿಯದಂತಾಯಿತು. ಕೌತುಕ ವಿಭ್ರಾಂತನಾಗಿ ಅವನು ಬೆರಗುವಡೆದು ಕ್ಷಣ ನಿಂತುಕೊಂಡು ಬಿಟ್ಟನು. ನಂತರ ಮುನಿಯ ಆಜ್ಞೆಯಂತೆ ಮಹಾರಾಜನು ತನ್ನ ಸೈನಿಕರಿಗೆಲ್ಲ ಅಂದು ಅಲ್ಲಿಯೇ ಬೀಡುಬಿಟ್ಟು ಬಿಡಾರ ಮಾಡಲಿಕ್ಕೆ ಹೇಳಿ ಬರಬೇಕೆಂದು ತನ್ನ ಸೈನಿಕರಿದ್ದಲ್ಲಿಗೆ ತೆರಳಿದನು. ಅತ್ತ ಇಷ್ಟೆಲ್ಲ ಜನರಿಗೆ ಭೋಜನೋಪಹಾರದ ಆಮಂತ್ರಣವಿತ್ತ ಗೌರಮುಖಮುನಿಯಾದರೂ ''ಇವರಿಗೆಲ್ಲ ನಾನು ಏನು ಊಟಕ್ಕೆ ಹಾಕುವುದು !'' ಎಂದು ಯೋಚಿಸಿತೊಡಗಿದನು.

ಶ್ರೀಹರಿಯ ಏಕನಿಷ್ಠ ಭಕ್ತನಾದ ಆ ಮುನಿಯ ಮನಸ್ಸು ಭೋಜನದ ಚಿಂತೆ ಮಾಡುತ್ತಿರುವಾಗಲೇ ಭಗವಂತನ ಚಿಂತೆಗೆ ಬಂದಿಳಿಯಿತು. ಧ್ಯಾನಾ ರೂಢವಾದ ಆ ಮುನಿಯ ಮನದಲ್ಲಿ ಮಾಧವನೇ ಮೂಡಿ ಮಿನುಗತೊಡಗಿದನು. ನೆನಪಿನ ನಿಲ್ದಾಣದಲ್ಲಿ ನೆಲೆನಿಂತ ನಾರಾಯಣನನ್ನು ಭಕ್ತಿಯಿಂದ ಗೌರಮುಖಮುನಿಯು ವಂದನೆಗೈದು ಮಂದಾಕಿನೀ ನದಿಗೆ ನಡೆದು ಆ ದೇವಗಂಗೆಯಲ್ಲಿ ಸ್ನಾನಮಾಡಿ ಅತ್ಯಂತ ಶ್ರದ್ಧೆಯಿಂದ ಆ ಭಗವಂತನನ್ನು ಸ್ತೋತ್ರ ಮಾಡಿದನು.

"ನಮಸ್ತೇ ವಿಷ್ಣವೇ ನಿತ್ಯಂ ನಮಸ್ತೇ ಪೀತವಾಸಸೇ ।
ನಮಸ್ತೇ ಚಾದ್ಯರೂಪಾಯ ನಮಸ್ತೇ ಜಲರೂಪಿಣೇ ॥

ಶ್ರೀವಿಷ್ಣುವಿಗೆ ನಮಸ್ಕಾರ. ಪೀತಾಂಬರಧಾರಿಗೆ ವಂದನೆ. ಆದಿಮೂರ್ತಿಗೆ ನಮೋ ನಮಃ. ಸಕಲ ಸ್ವರೂಪಿಯೇ, ನಿನಗೆ ನನ್ನ ಪ್ರಣಾಮ. ಪೃಥ್ವೀರೂಪನೂ ತೇಜೋ ರೂಪನೂ ವಾಯುರೂಪನೂ ಆಕಾಶರೂಪನೂ ಆಗಿ ಸರ್ವಾಂತರ್ಯಾಮಿಯಾದ ಸರ್ವರೂಪಿಯಾದ ಶ್ರೀಹರಿಗೆ ನಮಸ್ಕಾರ. ಭಗವನ್, ಗುಣಪರಿಪೂರ್ಣನಾದ ನೀನೇ ಓಂಕಾರ ಶಬ್ದವಾಚ್ಯನಾಗಿರುವೆ. ನೀನೆ ವಷಟ್‌ಕಾರ, ಗಿಡ ಬಳ್ಳಿ, ಪಶು ಪಕ್ಷಿ, ವೇದ ಶಾಸ್ತ್ರ, ಕಿಂಬಹುನಾ ಈ ವಿಶ್ವ ವಿಶ್ವಂಭರೆಯೆಲ್ಲವೂ ನಿನ್ನಿಂದಲ್ಲೇ ಅಸ್ತಿತ್ವದಲ್ಲಿ ಬಂದಿದೆ.

ಶ್ರೀಹರಿಯೇ, ಈಗ ನನ್ನ ಆಶ್ರಮಕ್ಕೆ ದುರ್ಜಯ ಎಂಬ ಹೆಸರಿನ ರಾಜನು ಅತಿಥಿಯಾಗಿ ಬಂದಿದ್ದಾನೆ. ಅವನಿಗೆ ನಾನು ಸರಿಯಾಗಿ ಆತಿಥ್ಯವನ್ನು ನೀಡಬೇಕೆಂದು ಮಾಡಿದ್ದೇನೆ. ಆದರೆ ಸ್ವಾಮಿನ್, ನಾನು ಕಡುಬಡವ, ಕೈಯಲ್ಲಿ ಕಾಸಿಲ್ಲ. ಅದಕ್ಕಾಗಿ ಭಕ್ತಿಯಿಂದ ನಿನ್ನೆದುರು ಬಾಗಿ ಬೇಡುತ್ತಿದ್ದೇನೆ. ಸಕಲ ವಿಧವಾದ ಅನ್ನಾದಿ ಆಹಾರ ಉಪಹಾರಗಳು ನನ್ನ ಮನೆಯಲ್ಲಿ ಸಂಪನ್ನವಾಗುವಂತೆ ಮಾಡು. ನಾನು ಕೈಯಿಂದ ಮುಟ್ಟಿದ್ದೆಲ್ಲ ಅನ್ನವಾಗಬೇಕು. ಕೈ ಇಟ್ಟದ್ದೆಲ್ಲ ಚಿನ್ನವಾಗಬೇಕು ಕಣ್ಣಿಂದ ನೋಡಿದ್ದೆಲ್ಲ ಭಕ್ಷ್ಯವಾಗಬೇಕು. ಹಿಡಿದ ಹುಲ್ಲು ಕೂಡ ಪಕ್ವಾನ್ನವಾಗಬೇಕು. ಸ್ಪರ್ಶಿಸಿದರೆ ಕೂಡಲೇ ಕಲ್ಲು, ಕಸ, ಕಟ್ಟಿಗೆ ಕೂಡ ರಸಪಾಕ ಸಿದ್ಧವಾಗಿ ಕೂಡಬೇಕು. ಒಟ್ಟಾರೆ ನಾನು ಮನಸ್ಸು ಮಾಡಿದ್ದೆಲ್ಲ ನನ್ನ ಇಚ್ಛೆಯಂತೆಯೇ ಕೂಡಲೇ ಪಲ್ಲಟಿಸಿ ಇಷ್ಟ ವಸ್ತುವಾಗಿ ನಿಲ್ಲಬೇಕು. ನಿನ್ನ ಪೂರ್ಣಾನುಗ್ರಹವಾಗಬೇಕು. ಸ್ವಾಮಿ, ನಿನಗೆ ನನ್ನ ನಮಸ್ಕಾರ".

ಗೌರಮುಖಮುನಿಯ ಈ ಸ್ತುತಿವಚನವನ್ನು ಕೇಳಿ ಜಗದೀಶ್ವರನು ಪ್ರಸನ್ನನಾಗಿ ಆ ಮುನಿಗೆ ತನ್ನ ಪ್ರತ್ಯಕ್ಷ ದರ್ಶನವಿತ್ತ. "ಬ್ರಾಹ್ಮಣೋತ್ತಮ, ನಿನಗೆ ಮತ್ತೇನು ವರಬೇಕು ! ಕೇಳಿಕೋ" ಎಂದು ಹೇಳಿದ. ದೇವದೇವನ ಮುಖದಿಂದ ಬಂದ ಆ ಭಗವದ್ವಾಣಿಯನ್ನು ಕೇಳಿ ಆನಂದಭರಿತರಾದ ಗೌರವಮುಖಮುನಿ ಎರಡು ಕಣ್ಣು ತೆರೆದು ನೋಡಿದನು. ಎದುರಿಗೆ ಶಂಖ ಚಕ್ರಧಾರಿ ಮುರಾರಿ, ಪೀತಾಂಬರವನ್ನು ಉಟ್ಟಿದ್ದಾನೆ. ವನಮಾಲೆಯನ್ನು ತೊಟ್ಟಿದ್ದಾನೆ. ಗರುಡನ ಮೇಲೆ ಕುಳಿತಿದ್ದಾನೆ. ಹನ್ನೆರಡು ಸೂರ್ಯರು ಒಟ್ಟೈಸಿದಷ್ಟು ಕಾಂತಿ ಕಾಯದಿಂದ ಹೊಮ್ಮುತ್ತಿದೆ. ನಿರ್ಮಲ ಆಗಸದಲ್ಲಿ ಒಮ್ಮೆಲೆ ಸಾವಿರ ಸೂರ್ಯರು ಉದಿಸಿ ಬಂದರೆ ಅವನ ಆ ದಿವ್ಯ ದೀಪ್ತಿಗೆ ಸಮನಾಗುತ್ತಿತ್ತೋ ಏನೋ ! ಅಂಥ ಕಾಂತಿ ಅವನ ದಿವ್ಯ ದೃಷ್ಟಿಯ ಕೈ ಸೆರೆಯಾಗಿತ್ತು. ಆ ಬೆಳಕಿನ ಬೆಟ್ಟವನ್ನು ಕಂಡು ಗೌರಮುಖ ಮುನಿಗಳು ಭಕ್ತಿಯಿಂದ ಬಾಗಿದರು. ಕೈ ಜೋಡಿಸಿ ನುಡಿದರು.

"ಭಗವನ್, ಈ ಮೊದಲೇ ನಾನು ಕೇಳಿಕೊಂಡಂತೆ ಈಗ ನನ್ನ ಮನೆಗೆ ಬಂದ ಆ ಮಹಾರಾಜನು ತನ್ನ ಭೃತ್ಯ ಪರಿವಾರ ಸಮೇತನಾಗಿ ಸಮೀಚೀನ ಭೋಜನಮಾಡಿ ತೃಪ್ತನಾಗಿ ನಾಳೆ ತನ್ನ ಮನೆಗೆ ತೆರಳುವಂತಾಗಲಿ." ಅವನ ಈ ಮಾತುಗಳನ್ನು ಕೇಳಿ ಪರಮಾತ್ಮನು ಪ್ರಸನ್ನನಾಗಿ ಅವನಿಗೆ ಮನಸ್ಸಿನಲ್ಲಿ ಬಯಸಿದ್ದೆಲ್ಲ ಕೂಡಲೇ ಸಿದ್ಧಿಸುವಂತೆ 'ಚಿತ್ತಸಿದ್ಧಿ' ಎಂಬ ವರವನ್ನೂ ಮತ್ತು ದಿವ್ಯ ಕಾಂತಿಯನ್ನು ಹೊರಸೂಸುವ ಒಂದು

ರತ್ನವನ್ನೂ ಕೊಟ್ಟು ಅಂತರ್ಧಾನವನ್ನು ಹೊಂದಿದನು. ಇತ್ತ ಗೌರಮುಖ ಮುನಿಯು ಅನೇಕ ಋಷಿಗಳಿಂದ ಮಂಡಿತವಾದ ತನ್ನ ಆಶ್ರಮಕ್ಕೆ ನಡೆದನು. ಅವನು ತನ್ನ ಪುಣ್ಯಾಶ್ರಮದ ಪರಿಸರದ ಬಳಿಗೆ ಹೋಗಿ ಅಲ್ಲಿಯೇ ಬಿತ್ತರದ ಬಯಲಿನಲ್ಲಿ ನಿಂತು ಇಲ್ಲಿ ಒಂದು ಭವ್ಯವಾದ ಅರಮನೆಯಾಗಬೇಕು ಎಂದು ಬಯಸಿದನು.

ಕೂಡಲೇ ಹಿಮಗಿರಿ ಶಿಖರದಂತಿರುವ ಭವ್ಯ ಕಟ್ಟಡವೊಂದು ತಲೆಎತ್ತಿತು. ಮುಗಿಲು ಮೋರೆಗೆ ಮುತ್ತಿಡುವ ಆ ದಿವ್ಯ ಪ್ರಾಸಾದದ ತುಂಬ ಒಳಹೊರಗೆಲ್ಲ ಚಂದ್ರಜ್ಯೋತ್ಸ್ನೆಯಿಂದ ಗಿಲಾಯಿ ಮಾಡಿದಂತಿತ್ತು. ನೂರು ಅಂತಸ್ತುಗಳುಳ್ಳ ಆ ಮೇಘ ಮಂದಿರವನ್ನು ನೋಡಿ ಗೌರಾಂಗ ಮುನಿಯು ಇಂಥವೇ ನೂರಾರು ಸಾವಿರಾರು ಲಕ್ಷಾವಧಿ ಮನೆಗಳಾಗಬೇಕೆಂದು ಚಿಂತಿಸಿದನು. ತಕ್ಷಣದಲ್ಲಿಯೇ ಲಕ್ಷಾವಧಿ ಸುರಮಂದಿರಗಳಂತಿದ್ದ ಭವ್ಯಭವನಗಳು ಮೇಲೆದ್ದು ಸಿದ್ಧವಾಗಿ ನಿಂತವು. ಭಗವಂತನ ವರವಿದ್ದ ಬಳಿಕ ಏನಾದೀತು ! ಏನಾಗಲಿಕ್ಕಿಲ್ಲ ! ಪ್ರತಿಯೊಂದು ಮನೆಗೂ ಮುತ್ತಿನ ನೀರಿನಿಂದ ಸಾರಣೆ ಕಾರಣೆ ಮಾಡಿದ ಸುತ್ತುಗೋಡೆ, ಅಂಗಳದಲ್ಲಿ ಉದ್ಯಾನ, ಹಿತ್ತಲಕ್ಕೆ ಹತ್ತಿ ಉಪವನ, ಇಕ್ಕೆಲದಲ್ಲಿಯೂ ತುಂಬುತಾವರೆಗಳು ತೇಲಾಡುವ ಹೊಕ್ಕರಣೆಗಳು, ಈ ಕೊಳಗಳ ತಿಳಿ ನೀರಿನಲ್ಲಿ ಅರಸಂಚೆಗಳು ಓಲಾಡುತ್ತಿದ್ದವು. ಉಪವನದ ಗಿಡಬಳ್ಳಿಗಳ ತುಂಬ ತುಂಬಿ ಮತ್ತು ಕೋಗಿಲೆಗಳ ಮಂಜುಳವಾದ ಗೀತ ಗುಂಜಾರವವು ರಂಜಿಸುತ್ತಿತ್ತು.

ಹೊನ್ನಿ, ಪುನ್ನಾಗ, ಸಂಪಿಗೆ, ಕೇದಿಗೆ ಮುಂತಾದ ಮರಬಳ್ಳಿಗಳು ಶ್ರೀಗಂಧದ ಕರಂಡಕನ್ನು ಹೊತ್ತು ತಳಿರು ಚಾಮರ ಬೀಸುತ್ತಿದ್ದವು. ಮನೆಗಳ ಎದುರು ಬದಿಯಲ್ಲಿ ಆನೆಗಳು ತೂಗಾಡುತ್ತಿದ್ದವು. ಹಿಂಭಾಗದ ಲಾಯದಲ್ಲಿ ಕಾಂಬೋಜ ದೇಶದ ಕುದುರೆಗಳ ಕೆನೆತ ಕೇಳಿ ಬರುತ್ತಿತ್ತು. ಇಂಥ ದಿವ್ಯವಾದ ಅರಮನೆಗಳ ಒಳಗೆ ಹೋಗಿ ಗೌರಮುಖಮುನಿಗಳು ಬಗೆ ಬಗೆಯ ಭಕ್ಷ್ಯ ಭೋಜ್ಯ ವಸ್ತುಗಳು ಸಿದ್ಧವಾಗಬೇಕೆಂದರು. ತತ್‌ಕ್ಷಣವೇ ರಸಪಾಕಗಳ ರಾಶಿಯೇ ಸಿದ್ಧವಾಯಿತು. ಉಣ್ಣುವ, ತಿನ್ನುವ, ಕುಡಿಯುವ, ಚೀಪುವ, ನಂಜಿಕೊಳ್ಳುವ, ನುಂಗುವ, ನುರಿಸುವ ನಾನಾ ಬಗೆಯ ಮೃಷ್ಟಾನ್ನಗಳೂ ರುಚಿ ರುಚಿಯಾದ ಪಕ್ವಾನ್ನಗಳೂ, ಅತ್ಯಂತ ಸವಿಕಟ್ಟಾದ ಭಕ್ಷ ಭೋಜ್ಯಗಳೂ ಅಣಿಗೊಂಡವು. ಎಲ್ಲರಿಗೂ ಹಾಕಲಿಕ್ಕೆ ಬಂಗಾರದ ತಾಟು, ಬಟ್ಟಲು, ತಂಬಿಗೆ, ಲೋಟ ಮುಂತಾದ ವಿವಿಧ ಪಾತ್ರಗಳೂ ಕೂಡ ಇಚ್ಛಿಸಿದ ಮಾತ್ರಕ್ಕೆ ಸಿದ್ಧವಾಗಿ ಬಿಟ್ಟವು. ಆಗ ಗೌರಮುಖಮುನಿಯು ಹೋಗಿ ಮಹಾರಾಜ ದುರ್ಜಯನಿಗೆ ''ರಾಜನೇ, ನಿನ್ನ ಎಲ್ಲ ಸೈನಿಕರಿಗೂ ನಿಮಗಾಗಿಯೇ ನವನಿರ್ಮಿತವಾದ ಈ ಮಹಾಪ್ರಾಸಾದಗಳಲ್ಲಿ ಪ್ರಸಾದಕ್ಕಾಗಿ ಬರಹೇಳು'' ಎಂದು ತಿಳಿಸಿದರು.

ಮುನಿಯ ಆದೇಶದಂತೆ ಮಹಾರಾಜನು ಒಂದು ದೊಡ್ಡ ಗಿರಿಶೃಂಗದಂತಿರುವ ವಿಶಾಲ ಮಂದಿರವೊಂದನ್ನು ಪ್ರವೇಶಿಸಿದನು. ಅವನ ಭೃತ್ಯ ಮಂತ್ರಿ ಮಹಾಜನರೆಲ್ಲರೂ ಸೈನಿಕರೂ ಅವರಿಗಾಗಿ ನಿರ್ಮಿತವಾದ ಬೇರೆ ಬೇರೆ ಮಹಾ ಮಂದಿರಗಳಲ್ಲಿ ಪ್ರವೇಶಗೈದರು. ಅವರೆಲ್ಲರೂ ತಮಗಾಗಿ ಏರ್ಪಟ್ಟ ಸುಂದರ ಮಂದಿರಗಳಲ್ಲಿ ಅನುಪ್ರವಿಷ್ಟರಾದ ಬಳಿಕ ಗೌರಮುಖಮುನಿಯು ಕೈಯಲ್ಲಿ ಶ್ರೀಹರಿಯು ಕೊಟ್ಟ ಆ ದಿವ್ಯ ರತ್ನವನ್ನು ಹಿಡಿದುಕೊಂಡು ದುರ್ಜಯ ರಾಜನಿಗೆ ಹೇಳಿದರು.

"ರಾಜನ್, ನಿನಗೂ ನಿನ್ನ ಪರಿವಾರ ಜನರಿಗೂ ಅಭ್ಯಂಗ ಸ್ನಾನವನ್ನು ಮಾಡಿಸಲಿಕ್ಕಾಗಿ ದಾಸಿಯರನ್ನು, ಊಟ ಉಪಹಾರ, ಉಪಹಾರ ಉಪಚಾರಕ್ಕಾಗಿ ಬೇರೆ ಪರಿಚಾರಕ ವಿಲಾಸಿನಿಯರನ್ನೂ ಹಾಗೂ ಉಳಿದೆಲ್ಲ ನಿಮ್ಮ ಸೇವೆಗಾಗಿ ನೌಕರ ಚಾಕರರನ್ನೂ ಕಳಿಸಿಕೊಡುತ್ತೇನೆ." ಹೀಗೆ ಹೇಳಿ ಆ ರತ್ನವನ್ನು ದುರ್ಜಯ ರಾಜನು ನೋಡುತ್ತಿದ್ದಂತೆ ಒಂದು ಏಕಾಂತ ಸ್ಥಳದಲ್ಲಿ ಇಟ್ಟನು.

ನಿರ್ಮಲವಾದ ಕಾಂತಿಯನ್ನು ಬೀರುವ ಆ ರತ್ನವನ್ನು ಒಂದೆಡೆಗೆ ಇರಿಸಿದ ಕೂಡಲೇ ಅದರಿಂದ ಸಾವಿರಾರು ಚೆಲುವೆಯರು ಹೊರಹೊರಟರು. ಬೊಗಸೆಗಣ್ಣಿನ ಆ ಬೆಡುಗುಗಾತಿಯರ ಮಿದುಮೈಗೆಲ್ಲ ಹೂಬಣ್ಣದ ಲೇಪನಗಳನ್ನು ಬಳಿಯಲಾಗಿತ್ತು. ಅವರ ಅಂಗಾಂಗಗಳು ಮೋಹಕವಾದ ಕಾಂತಿಯನ್ನು ಸೂಸುತ್ತಿದ್ದವು. ಕೇಶಕಲಾಪಗಳಲ್ಲಿ ಅರಳುಮಲ್ಲಿಗೆಯ ಸರಗಳು ಹೆರಳುಗುಂಟ ತೂಗಾಡುತ್ತಿದ್ದವು. ಅವರ ಗುಲಾಬಿಯ ಗಲ್ಲಗಳಲ್ಲಿ ನಗೆ ಮಲ್ಲಿಗೆಯನ್ನು ಅರಳಿಸಿ ಇಟ್ಟಂತಾಗಿತ್ತು. ಆ ಬಿಂಕದ ಸಿಂಗಾರಿಯರಲ್ಲಿ ಕಾಜಿನ ಗೊಂಬೆಗಳಂತಿದ್ದ ಕೆಲವು ಕನ್ಯಾಮಣಿಗಳು ತಮ್ಮ ಚಿಗುರು ಬೆರಳುಗಳಲ್ಲಿ ಬಂಗಾರದ ಬಟ್ಟಲುಗಳನ್ನು ಹಿಡಿದುಕೊಂಡು ರಾಜಪರಿವಾರದ ಸೇವೆಗಾಗಿ ಹೊರಟರು. ಇವರಲ್ಲದೆ ಕರ್ಮಕಾರರಾದ ಅನೇಕ ಸೇವಕರೂ ಅಲ್ಲಿಂದ ಹೊರಟರು. ಆ ಸೇವಕರು ಮುಂದೆ ಹೋಗಿ ಎಲ್ಲರ ಸ್ನಾನಭೋಜನ ಏರ್ಪಾಡನ್ನು ಮಾಡಿದರು. ಬಳಿಕ ಮಂಗಳಾಂಗಿಯರಾದ ಹೆಂಗಳೆಯರು ರಾಜಮಾರ್ಗಕ್ಕೆ ಬಂದು ದುರ್ಜಯ ದೊರೆಯ ಪರಿವಾರದ ಜನರನ್ನೆಲ್ಲ ಕೈ ಹಿಡಿದು ಕರೆದುಕೊಂಡು ಹೋಗಿ ಎಣ್ಣೆ ಹಚ್ಚಿ ಎರೆದು ಮೀಯಿಸಿದರು. ಎಲ್ಲರಿಗೂ ಉಡಲು ದುಗ್ಧ ಧವಲವಾದ ಪಟ್ಟೆ ಪೀತಾಂಬರಗಳನ್ನು ಕೊಟ್ಟರು. ಸ್ನಾನಗೃಹದಿಂದ ಅವರು ಹೊರಟು ಮುಂದೆ ನಡೆದಾಗ ಅವರೆದುರು ಆನೆಗಳು ತಮ್ಮ ಸೊಂಡೆಯನ್ನು ದುಂಡುಸುತ್ತಿ ಪ್ರಣಾಮ ಮಾಡಿ ಸಾಲುಸಾಲಾಗಿ ಮುಂದೆ ನಡೆದವು.

ದುರ್ಜಯ ಮಹಾರಾಜನು ಸ್ನಾನಾಗಾರದಲ್ಲಿ ಇಳಿದಾಗ ಅನೇಕ ಚೆಲುವಿನ ಚೆನ್ನೆಯರು ಎಣ್ಣೆಪೂಸಿ ಭಂಗಾರದ ಗಿಂಡೆಗಳಿಂದ ಬಿಸಿ ನೀರನ್ನು ಹಾಕಿ ಅಭ್ಯಂಗ ಸ್ನಾನವನ್ನು ಮಾಡಿಸಿದರು. ನೀರು ಮನೆಯಲ್ಲಿ ನಾರಿಯರು ಆ ನರನಾಥನನ್ನು ಸುಗಂಧ ಪರಿಮಳ ಮಿಶ್ರವಾದ ನೀರಧಾರೆಯಿಂದ ಅಭಿಷೇಕಗೈಯುತ್ತಿರುವಾಗ ಎಲ್ಲ ಕಡೆಗೂ ಮಂಗಳವಾದ್ಯಗಳು ಮೊಳಗುತ್ತಿದ್ದವು. ಅವನ ಕಣ್ಣೆದುರು ಅನೇಕ ಗಂಧರ್ವ ಸುಂದರಿಯರು ಗಾನ ಗೈಯುತ್ತಿದ್ದರು. ಕೆಲವು ಕಾಮಿನಿಯರು ನರ್ತನ ಮಾಡುತ್ತಿದ್ದರು. ಸಾಕ್ಷಾತ್ ದೇವೇಂದ್ರನು ಸ್ನಾನ ಮಾಡುವಾಗ ನಡೆಯುವ ಸಂಭ್ರಮ ಸಡಗರಗಳೆಲ್ಲ ದುರ್ಜಯನ ಸ್ನಾನ ಸಂದರ್ಭಗಳಲ್ಲಿ ಒದಗಿ ಬರುವಂತೆ ಮಾಡಲಾಗಿತ್ತು. ಇಂಥ ದಿವ್ಯವಾದ ಉಪಚಾರ ಮತ್ತು ಸೇವಾ ಸತ್ಕಾರಗಳಿಂದ ಸ್ನಾನಮಾಡಿ ನಿಂತ ಮಹಾರಾಜನ ಮನಸ್ಸಿನ ತುಂಬ ಆಶ್ಚರ್ಯವೇ ಆಶ್ಚರ್ಯ ! ಇದೇನು ಈ ಋಷಿಯ ಪ್ರಭಾವವೋ ? ಅವರ ತಪಸ್ಸಿನ ಮಹಿಮೆಯೋ ? ಅಥವಾ ಆ ಮುನಿಯ ಕೈಯಲ್ಲಿರುವ ರತ್ನವು ಮಾಡಿದ ಪವಾಡವೋ ? ಎಂದು ಮುಂತಾಗಿ ಅವನು ಯೋಚಿಸಿದನು.

ಹೀಗೆ ವೈಭವದಿಂದ ಸ್ನಾನ ಮಾಡಿದ ಬಳಿಕ ಮಿಂಚಿನಿಂದ ನೇದು, ಹಾಲಿನಲ್ಲಿಯೇ ಒಗೆದು ಇಟ್ಟಂತಿರುವ ತೆಳ್ಳಂಬೆಳ್ಳಗಾದ ಜೋಡು ಬಟ್ಟೆಗಳನ್ನು ಧರಿಸಿದನು. ಹೀಗೆ

ಪೀತಾಂಬರವನ್ನು ಉಟ್ಟು ನಿಲ್ಲುವಷ್ಟರಲ್ಲಿ ದಿವ್ಯಭೋಜನವು ಅವನನ್ನು ಕಾಯುತ್ತಲೇ ಇದ್ದಿತು. ಬಿಡಿಸಿದ ದೊಡ್ಡ ಕುಡಿ ಬಾಳೆಯ ಜೋಡು ಎಲೆಗಳು ತುಂಬಿ ಹಿಡಿಸಲಾರದಷ್ಟು ಬಗೆ ಬಗೆಯ ಭಕ್ಷ್ಯಗಳು. ಬಿಸಿ ಬಿಸಿಯ ಪಕ್ವಾನ್ನಗಳು. ಶುಚಿ, ರುಚಿ, ಪಾನೀಯಗಳು, ಇವೆಲ್ಲ ಪಕ್ವಾನ್ನಗಳು ಬಲು ಸವಿಕಟ್ಟು. ಪ್ರತಿಯೊಂದು ಖಾದ್ಯವೂ ರುಚಿಕಟ್ಟು, ನಳಪಾಕ, ಮಧುಪಾಕ, ರಸಪಾಕಗಳೆಲ್ಲ, ಅಲ್ಲಿಯ ಅಮೃತ ಭೋಜನಗಳಲ್ಲಿ ಮೇಳವಿಸಿ ದಂತಾಗಿದ್ದವು. ದುರ್ಜಯ ಮಹಾರಾಜನು ಎಂದೂ ಕಾಣದ ರಸರುಚಿಗಳುಳ್ಳ ಸ್ವಾದಿಷ್ಟವಾದ ಮೃಷ್ಟಾನ್ನಗಳನ್ನು ಭೋಜನಮಾಡಿ ಆನಂದಪಟ್ಟನು.

ಈ ಮಹಾರಾಜನಿಗೆ ಮಾಡಿದಂತೆಯೇ ಉಳಿದ ರಾಜಪರಿವಾರದವರಿಗೆಲ್ಲರಿಗೂ ಇದೇ ತರಹದ ಸ್ನಾನ, ಭೋಜನ, ಆದರ ಉಪಚಾರಗಳ ವ್ಯವಸ್ಥೆಯನ್ನು ಮಾಡಲಾಗಿದ್ದಿತು. ಹೀಗೆ ಮಹಾರಾಜ, ಮಂತ್ರಿ, ಸೇನಾಪತಿ, ಭೃತ್ಯ, ಬಂಧು, ಬಳಗ ಪರಿವಾರದವರೆಲ್ಲರೂ ರಾಜೋಚಿತವಾದ ದಿವ್ಯಭೋಗ, ಅಮೃತ ಭೋಜನ, ಸಂಗೀತ, ನರ್ತನ, ವಾದ್ಯವೃಂದ, ಮೇಳವಾದನಗಳಿಂದ ಸಂತಸದುಂಬಿದರು, ತಿಂದುಂಡು ತೃಪ್ತಿಯಿಂದ ತೇಗಿ, ತಣಿದರು. ಹೀಗೆ, ತಲೆದೂಗಿ, ನಕ್ಕು, ನಲಿದಾಡುತ್ತಿರುವಾಗ ಸೂರ್ಯನು ಅಸ್ತಾಚಲಕ್ಕೆ ತೆರಳಿದನು. ಕುಂಕುಮಾರುಣವಾದ ಸಂಧ್ಯಾರಾಗವು ಹೊಂಬಣ್ಣದಿಂದ ರಂಜಿಸಿತು. ಅನಂತರ ರಾತ್ರಿಯಾಯಿತು. ಶಾರದ ಚಂದ್ರನು ನೀಲಿಯ ಆಗಸದಲ್ಲಿ ತೊಳಗಿದನು. ಮಹಾರಾಜನಿಗೂ ಅವನ ಎಲ್ಲ ಅನುಯಾಯಿಗಳಿಗೂ ಮಲಗಲಿಕ್ಕೆ ಬೇರೆ ಬೇರೆ ಶಯನ ಮಂದಿರಗಳನ್ನು ಸುಂದರವಾಗಿ ಅಲಂಕರಿಸಲಾಗಿತ್ತು. ಪ್ರತಿಯೊಂದು ಶಯ್ಯಾಗಾರಗಳಲ್ಲಿಯೂ ನೆಲದ ಮೇಲೆ ರತ್ನಗಂಬಳಿಗಳನ್ನು ಹಾಸಲಾಗಿದ್ದಿತು. ಉತ್ತಮವಾದ ಮಂಚಗಳನ್ನು ಹಾಕಿ ಅವುಗಳ ಮೇಲೆ ತೆಳ್ಳಗಿನ ಬೆಳ್ಳಗಿನ ಸೊಳ್ಳೆ ಪರದೆಗಳನ್ನು ಇಳಿ ಬಿಡಲಾಗಿದ್ದಿತು. ರೂಪವತಿಯರಾದ ಅಂಗನೆಯರು ಅವರೆಲ್ಲರ ಸೇವೆಗಾಗಿ ಸನ್ನದ್ಧರಾಗಿದ್ದರು.

ಇಂಥ ಶೃಂಗಾರ ರಂಗಮಂಚಗಳಿಂದ ಕಂಗೊಳಿಸುವ, ಕೇಲೀ ಕುಂಜಗಳಂತಿರುವ ವಿಲಾಸ ಮಂದಿರಗಳಿಗೆ ದುರ್ಜಯ ಮಹಾರಾಜನು ತನ್ನ ಸಾಮಂತರಾಜರನ್ನೂ ತನ್ನ ಮಿತ್ರ, ಮಂತ್ರಿ, ಭೃತ್ಯ, ಬಂಧುಗಳನ್ನೂ ಮಲಗಲು ಕಳಿಸಿ ಕೊಟ್ಟನು. ಅವರೆಲ್ಲರೂ ಹೋದ ಬಳಿಕ ಸ್ವಯಂ ಮಹಾರಾಜನು ಅಪ್ಸರೆಯಂತಿರುವ ಅಂಗನಾಮಣಿಗಳೊಡನೆ ದೇವೇಂದ್ರನಂತೆ ಶೃಂಗಾರ ಭೂಷಿತನಾಗಿ ರಸನಿಮಿಷಗಳನ್ನು ರಾಗರಂಜಿತವಾಗಿ ಕಳೆದು ಸುಖನಿದ್ದೆಯನ್ನು ಮಾಡಿದನು. ಹೀಗೆ ಮಹಾತ್ಮರಾದ ಗೌರಮುಖ ಮುನಿಗಳ ಅನುಗ್ರಹ ವಿಶೇಷದಿಂದ ರಾಜಪ್ರಜೆಗಳೆಲ್ಲರೂ ಪರಮಾನಂದ ಭರಿತರಾಗಿ ಗಾಢ ನಿದ್ದೆ ಮಾಡಿ ಎದ್ದರು. ರಾತ್ರಿ ಕಳೆದು, ನಸುಕು ಹರಿದು, ಬೆಳಗು ಮೂಡಿ, ದುರ್ಜಯರಾಜನು ನಿದ್ದೆ ತಿಳಿದು, ಎದ್ದು ಕೂತು, ಕಣ್ದೆರೆದು ನೋಡುವಷ್ಟರಲ್ಲಿ ಎಲ್ಲವೂ ಮಟಾಮಾಯ ವಾಗಿದ್ದಿತು. ಮಿಂಚಿನ ಮೂರ್ತಿಗಳಂತೆ ಹಿಂದಿನ ರಾತ್ರಿ ತಮ್ಮ ಸೇವೆಗೈಯುತ್ತಲಿದ್ದ ಚಂಚಲಾಕ್ಷಿಯರೆಲ್ಲರೂ ಕಂಚುಮಿಂಚಾಗಿ ಕಾಣದಾಗಿದ್ದರು. ಮುನ್ನ ದಿನ ಮುಗಿಲು ಮುಟ್ಟುವ ವಿಲಾಸ ಮಂದಿರಗಳೆಲ್ಲವೂ ಮರೆಯಾಗಿದ್ದವು. ಅಲ್ಲಿಯ ಮಂಚ, ಮೆತ್ತಗಿನ

ಆಸನ, ಹಂಸದುಪ್ಪಳದ ಹಾಸಿಗೆ, ತೆಳ್ಳಗಿನ ಸೊಳ್ಳೆ ಪರದೆ, ಆ ದಾಸದಾಸಿಯರು ಎಲ್ಲವೂ ಅದೃಶ್ಯವಾಗಿದ್ದವು. ದುರ್ಜಯ ರಾಜನಿಗೆ ದುಃಖವಾಯಿತು.

''ಇದೆಲ್ಲವೂ ಆ ಮುನಿಯ ಮುಷ್ಟಿಯಲ್ಲಿದ್ದ ಮಣಿಯ ಪ್ರಭಾವ. ಇಂಥ ದಿವ್ಯ ಮಣಿಯು ನನಗೆ ಹೇಗೆ ದೊರಕೀತು'' ಎಂದು ಚಿಂತೆಯು ಅವನ ತಲೆತಿನ್ನಹತ್ತಿತು. ''ಹೇಗಾದರೂ ಮಾಡಿ ಆ ರತ್ನವನ್ನು ಹಾರಿಸಬೇಕು. ಅದಕ್ಕೆ ಒಂದು ಹಂಚಿಕೆ ಮಾಡುವೆನು'' ಎಂದು ನಿರ್ಧರಿಸಿದಾಗ, ಬಗೆ ಬಗೆಯ ಹೊಂಚು ಸಂಚುಗಳು ಅವನ ಮಿದುಳಿನಲ್ಲಿ ಮಿಂಚಿ ಹೋದವು. ಕೂಡಲೇ ದುರ್ಜಯ ರಾಜನು ತನ್ನ ಬೆಂಬಲಿಗರೆಲ್ಲರೂ ಆಶ್ರಮವನ್ನು ಬಿಟ್ಟು ಹೊರಡಬೇಕೆಂದು ಅಪ್ಪಣೆ ಮಾಡಿದನು. ಗೌರಮುಖ ಮುನಿಯ ಆಶ್ರಮದಿಂದ ಅವನ ವಾಹನಗಳೆಲ್ಲವೂ ತುಸು ದೂರಬಂದ ಬಳಿಕ ಆ ಮಹಾರಾಜನು ವಿರೋಚನ ಎಂಬ ತನ್ನ ಮಂತ್ರಿಯನ್ನು ಕರೆದು ಹೇಳಿದನು.

''ಅಮಾತ್ಯ - ನೀನು ಈಗಲೇ ಗೌರಮುಖಮುನಿಯ ಆಶ್ರಮಕ್ಕೆ ಹೋಗಿ ಆ ರತ್ನವನ್ನು ಇಸಿದುಕೊಂಡು ಬಾ.'' ರಾಜಾಜ್ಞೆಯಂತೆ ವಿರೋಚನ ಎಂಬ ಅವನ ಸಚಿವನು ಮರಳಿ ಆಶ್ರಮಕ್ಕೆ ಬಂದು ಮುನಿಗಳನ್ನು ಕೇಳಿದನು -

''ಪೂಜ್ಯರೇ, ನಿಜವಾಗಿ ವಿಚಾರಿಸಿದರೆ ಒಳ್ಳೊಳ್ಳೆ ರತ್ನಗಳು ಇರಬೇಕಾದದ್ದು ರಾಜರಲ್ಲಿಯೇ. ನಿಮ್ಮ ಬಳಿಯಲ್ಲಿರುವ ಇಷ್ಟಾರ್ಥಗಳನ್ನು ಪೂರೈಸುವ ಆ ದಿವ್ಯ ಮಣಿಯಂತೂ ರತ್ನ ರಾಜವಾಗಿದೆ. ಅದು ನಮ್ಮ ಮಹಾರಾಜರ ಬಳಿಯಲ್ಲಿ ಇರಲಿಕ್ಕೆ ಯೋಗ್ಯವಾಗಿರುತ್ತದೆ. ಅದನ್ನು ತಾವು ಅವರಿಗೇ ಕೊಟ್ಟು ಬಿಡಬೇಕು.'' ಮಂತ್ರಿ ವಿರೋಚನ ಮಾತನ್ನು ಕೇಳಿ ಋಷಿಗೆ ಕೋಪ ಬಂದಿತು. ಗೌರಮುಖ ಮುನಿಯ ಮುಖ ಕೋಪದಿಂದ ರಕ್ತ, ಮುಖವಾಗಿ ನುಡಿ ಕಿಡಿಯಾಗಿ ಸಿಡಿಯಿತು.

''ರಾಜನು ದಾನ ಮಾಡಬೇಕು. ಬ್ರಾಹ್ಮಣರು ದಾನವನ್ನು ಸ್ವೀಕರಿಸಬೇಕು. ನೀನು ರಾಜನಾಗಿ ಕೊಡುವುದನ್ನು ಬಿಟ್ಟು ನನ್ನನ್ನೇ ದೀನನಾಗಿ ಹೇಗೆ ಯಾಚನೆ ಮಾಡುವೆ ? ಎಂದು ನಿಮ್ಮ ರಾಜನನ್ನು ಕೇಳು. ದುರಾಚಾರಿಯಾದ ರಾಜರನ್ನು ಯಾವ ಜನರೂ ಮನ್ನಿಸುವುದಿಲ್ಲ. ವಿರೋಚನ, ನೀನು ಬೇಗ ಹೋಗು, ನಿಮ್ಮ ದೊರೆಯಾದ ದುರ್ಜಯನಿಗೆ ಇಂಥ ದುರಾಶೆಯನ್ನು ಮಾಡಬೇಡ. ಅದರಿಂದ ನಿನ್ನ ಅಧಃಪಾತವಾದೀತು ಎಂದು ತಿಳಿಸು.'' ಗೌರಮುಖ ಮುನಿಯ ಈ ಮಾತನ್ನು ಕೇಳಿ ಬರಿಗೈಯಿಂದ ಮರಳಿ ಬಂದ ಸಚಿವ ವಿರೋಚನನು ಮುನಿಯ ಮಾತನ್ನೆಲ್ಲ ಮಹಾರಾಜನಿಗೆ ತಿಳಿಸಿದನು. ಇದರಿಂದ ದುರ್ಜಯ ಭೂಪನ ಪಿತ್ತವು ನೆತ್ತಿಗೇರಿತು. ಅವನು ನೀಲರಾಜ ಎಂಬ ತನ್ನ ಸಾಮಂತನಾದ ಭೂಪತಿಯನನ್ನು ಕರೆದು ''ಮಿತ್ರ, ನೀನು ಈಗಲೇ ಆ ಗೌರಮುಖ ಬ್ರಾಹ್ಮಣನ ಮನೆಗೆ ಹೋಗಿ ಆ ರತ್ನವನ್ನು ಇಸಿದುಕೊಂಡು ಬಾ. ಅವನು ಒಳ್ಳೇ ಮಾತಿನಿಂದ ಕೊಡದಿದ್ದರೆ ಅದನ್ನು ಕಸಿದುಕೊಂಡು ಬಾ'' ಎಂದು ಹೇಳಿದನು. ಸಾರ್ವಭೌಮನಾದ ದುರ್ಜಯದೊರೆಯ ಈ ಕಟ್ಟಪ್ಪಣೆಯನ್ನು ಕೇಳಿ ನೀಲರಾಜ ಪ್ರಚಂಡ ಸೇನಾ ಸನ್ನಾಹದೊಂದಿಗೆ ಗೌರಮುಖಮುನಿಯ ಆರಣ್ಯಕ ಆಶ್ರಮಕ್ಕೆ ಬಂದನು. ಆಗ ಆಶ್ರಮದಲ್ಲಿ ಮುನಿ ಇರಲಿಲ್ಲ.

ಆಶ್ರಮದಲ್ಲಿ ಅಗ್ನಿಹೋತ್ರದ ಶಾಲೆಯಲ್ಲಿ ಆ ರತ್ನವನ್ನು ಇಟ್ಟಿದ್ದು ಕಂಡಿತು. ಅದನ್ನು ಕಂಡು ನೀಲನೃಪಾಲನು ರಥದಿಂದ ಇಳಿದನು. ರತ್ನವನ್ನು ತೆಗೆದು ಕೊಳ್ಳಬೇಕೆಂದು ಅಗ್ನಿಶಾಲೆಯನ್ನು ಏರಿದನು. ಅಲ್ಲಿಯ ನೆಲದ ಮೇಲೆ ನೀಲನು ಹೆಜ್ಜೆ ಇಡುವದೊಂದೇ ತಡ, ಆ ರತ್ನದಿಂದ ಅನೇಕ ಸೈನಿಕರು ಶಸ್ತ್ರ ಹಿಡಿದು ಎದ್ದು ಬಂದರು. ಅನೇಕಾನೇಕ ಅಶ್ವಾರೋಹಿಗಳೂ, ರಥಾರೂಡರೂ ಆದ ಸಮರ ಬಂಟರು ಬಿಲ್ಲುಬಾಣಗಳನ್ನು ಹಿಡಿದು ಗೆಲುವಿನ ಬಾವುಟವನ್ನು ಹಾರಿಸುತ್ತ ಖಡ್ಗ ಹಿರಿದು ಹೊರಟರು. ಹದಿನೈದು ಜನ ಸೇನಾಪತಿಗಳು ಅಸಂಖ್ಯ ಸೇನೆಯೊಂದಿಗೆ ನುಗ್ಗಿ ಬಂದರು. ಆ ಮಣಿಯಿಂದ ಹೊರಹೊಮ್ಮಿದ ಆ ಹದಿನೈದು ಸೇನಾನಾಯಕರ ಹೆಸರುಗಳು ಇಂತಿದ್ದವು. ಸುಪ್ರಭ, ದೀಪ್ತತೇಜ, ಸುರಶ್ಮಿ, ಶುಭದ, ರಶನ, ಸುಕಾಂತಿ, ಸುಂದರ, ಪ್ರದ್ಯುಮ್ನ, ಸುಮನ, ಸುಂದ, ಸುಶೀಲ, ಶುಭ, ಸುದಾಂತ, ಶಂಭು, ಸೋಮ. ಹೀಗೆ ಹೊಸದಾಗಿ ಹುಟ್ಟಿ ಬಂದ ಈ ಹದಿನೈದು ಸೇನಾಪತಿಗಳನ್ನು ಕಂಡು ವೀರವಿರೋಚನನು ಮತ್ತೆ ಬಹಳ ಸೈನ್ಯವನ್ನು ಕಟ್ಟಿಕೊಂಡು ಯುದ್ಧಕ್ಕೆ ಬಂದನು. ಆ ಎರಡೂ ಸೈನ್ಯಗಳಲ್ಲಿ ಭಯಂಕರವಾಗಿ ಯುದ್ಧವು ಆಯಿತು. ರಕ್ತದ ಪ್ರವಾಹವು ಹರಿಯಿತು. ಎರಡು ಬದಿಗಳಲ್ಲಿಯೂ ಶೂರ ಸೈನಿಕರು ಒಬ್ಬರನೊಬ್ಬರು ತುರುಸಿನಿಂದ ತಾಗಿ, ಬಿರುಸಿನಿಂದ ಆಯುಧಗಳನ್ನು ಎಸೆದಾಡಿ, ಕಲಿತನದಿಂದ ಕಾದಿದರು. ಕೊನೆಗೆ ಆ ಭೀಕರ ಕದನದಲ್ಲಿ ದುರ್ಜಯರಾಜನ ಮಂತ್ರಿಯು ತನ್ನ ಸೇನಾ ಪರಿವಾರ ಸಮೇತವಾಗಿ ನೆಲಕ್ಕೆ ಉರುಳಿದನು. ಮತ್ತೂ ಯಮನ ಮಂದಿರಕ್ಕೆ ಮಡಿದು ತೆರಳಿದನು. ತನ್ನ ಸಚಿವನ ಸಂಹಾರದ ಸಮಾಚಾರವನ್ನು ಕೇಳಿ ದುಃಖಿತನಾದ ದುರ್ಜಯರಾಜನು ತಾನೇ ರಥವನ್ನು ಏರಿ ಸಮರ ಭೂಮಿಗೆ ಬಂದು ಆ ಮಣಿಯಿಂದ ಉತ್ಪನ್ನರಾದ ಶೂರ ಸೈನಿಕರೊಂದಿಗೆ ಯುದ್ಧ ಮಾಡತೊಡಗಿದನು. ಮಹಾರಾಜನಿಗೂ ಮುನಿಯ ಮಣಿಕುಮಾರರಿಗೂ ಭೀಕರವಾದ ಸಂಗ್ರಾಮವು ಮಸಗಿತು.

ಹೀಗೆ ತಮ್ಮ ಅಳಿಯನಾದ ದುರ್ಜಯ ಮಹಾರಾಜನು ಯುದ್ಧ ಸಂಕಟದಲ್ಲಿ ಇದ್ದುದನ್ನು ಕೇಳಿ ಹೇತೃ ಪ್ರಹೇತೃ ದೈತ್ಯರು ತಮ್ಮ ಪ್ರಚಂಡ ದಾನವ ಸೇನೆಯನ್ನು ಅಲ್ಲಿ ತಂದು ನಿಲ್ಲಿಸಿದರು. ಆ ದೈತ್ಯರ ಸೈನ್ಯದಲ್ಲಿ ಪ್ರಘಸ, ವಿಘಸ, ಸಂಘಸ, ಅಶನಿಪ್ರಭ, ವಿದ್ಯುತ್ಪ್ರಭ, ಸುಘೋಷ, ಉನ್ಮದಾಕ್ಷ, ಅಗ್ನಿದತ್ತ, ಅಗ್ನಿತೇಜ, ಬಾಹು, ಶಂಖ, ಪ್ರತರ್ದನ, ವಿರೋಧ, ಭೀಮ ಕರ್ಮ, ವಿಪ್ರಚಿತ್ತಿ ಮುಂತಾದ ಹದಿನೈದು ರಾಕ್ಷಸ ವೀರರು ತಮ್ಮ ವಶದಲ್ಲಿದ್ದ ಒಂದೊಂದು ಅಕ್ಷೋಹಿಣೀ ಸೈನ್ಯದೊಂದಿಗೆ ಘೋರಾಯುಧಗಳನ್ನು ಹಿಡಿದು ಆ ರತ್ನೋದ್ಭವರಾದ ವೀರರೊಡನೆ ಹೋರಾಡ ತೊಡಗಿದರು. ಆ ದಿವ್ಯರತ್ನವನ್ನು ಭೇದಿಸಿಕೊಂಡು ಉದಿಸಿ ಬಂದ ವೀರರು ಆ ದೈತ್ಯ ಸೇನಾಪತಿಗಳಿಗಿಂತ ಎಷ್ಟೋ ಪಾಲು ಶೂರರಾಗಿದ್ದರು. ಆದುದರಿಂದ ಅವರು ಹೇತೃ ಪ್ರಹೇತೃ ದೈತ್ಯರ ದಾನವ ಸೇನೆಯನ್ನೂ ಮತ್ತು ಆ ಸೇನಾಪತಿಗಳನ್ನೂ ಹೊಡೆದು ಹಣ್ಣು ಮಾಡಿದರು. ಬಡಿದು ಹೆಣ ಹಾಕಿದರು.

ಈ ರೀತಿಯಾಗಿ ಆಶ್ರಮದ ಅಂಗಳದಲ್ಲಿ ಈ ಘನ ಘೋರವಾದ ಮಣಿ ಮೂಲಕ ಸಂಗ್ರಾಮವು ನಡೆದಾಗ ಗೌರಮುಖ ಮುನಿಯು ಆಶ್ರಮದಲ್ಲಿ ಇರಲಿಲ್ಲ. ದೇವರ ಪೂಜೆಗಾಗಿ ಮತ್ತು ಹೋಮ ಹವನಗಳಿಗಾಗಿ ಹೂ, ತುಳಸಿ, ಸಮಿಧೆ, ದರ್ಭೆ

ಮುಂತಾದವುಗಳನ್ನು ತರಲಿಕ್ಕಾಗಿ ವನಾಂತರಕ್ಕೆ ಹೋಗಿದ್ದನು. ಮರಳಿ ಬರುವಷ್ಟರಲ್ಲಿ ಆಶ್ರಮದ ಅಂಗಳದಲ್ಲಿ ದಾರುಣವಾದ ಸಮರವು ಮಸಗಿ, ರಣ ಚಂಡಿಯ ಪ್ರಚಂಡ ತಾಂಡವವೇ ನಡೆದಿದ್ದಿತು. ಆ ಭೀಕರವಾದ ಸಮರ ದೃಶ್ಯವನ್ನು ಕಂಡು ಸಾತ್ವಿಕ ಪ್ರಕೃತಿಯ ಆ ಗೌರಮುಖ ಮುನಿಗೆ ದೊಡ್ಡ ಚಿಂತೆಯಾಯಿತು. ಅದರಲ್ಲಿಯ ಕಾಳ ಭೈರವನಂತೆ ಕ್ರೂರ ಕರ್ಮಿಯಾದ ದುರ್ಜಯನ ಯುದ್ಧಾಟೋಪವನ್ನು ಕಂಡು ಅವನು ಸಂಭ್ರಾಂತನಾದನು. ಶ್ರೀಹರಿಯು ಕೊಟ್ಟ ರತ್ನದ ಆಸೆಯಿಂದಲೇ ಈ ರಾಜನು ಇಂತಹ ಘೋರ ಸಾಹಸಕ್ಕೆ ಇಳಿದಿದ್ದಾನೆ ಎಂದು ತಿಳಿದು ಆ ಮುನಿಯು ಆ ಶ್ರೀಹರಿಗೆ ಶರಣು ಹೋದನು. ಕಣ್ಣುಮುಚ್ಚಿ ಆ ಭಗವಂತನನ್ನು ಧ್ಯಾನ ಮಾಡಿದನು. ಆ ಸಿದ್ಧ ತಾಪಸನ ಭಕ್ತಿಯುಕ್ತವಾದ ಸ್ಮರಣೆಯಿಂದ ಪರಮಾತ್ಮನು ಪ್ರಸನ್ನನಾಗಿ ತಕ್ಷಣದಲ್ಲಿ ಪ್ರತ್ಯಕ್ಷನಾದನು. ಪೀತಾಂಬರವನ್ನು ಉಟ್ಟು ಗರುಡನ ಹೆಗಲ ಮೇಲೆ ಏರಿ ಅಲ್ಲಿಗೆ ಬಂದ ಶ್ರೀಹರಿಯು "ಮುನಿಯೇ ನಿನಗೆ ಈಗ ನನ್ನಿಂದ ಏನು ಆಗಬೇಕು" ಎಂದು ಕೇಳಿದನು.

ಅದಕ್ಕೆ ಗೌರಮುಖಮುನಿಯು ಕಣ್ಣು ತೆಗೆದು ಕೈಮುಗಿದು ಭಗವನ್, ದುಷ್ಟನಾದ ಈ ದುರ್ಜಯ ರಾಜನನ್ನು ಸೈನ್ಯಸಹಿತವಾಗಿ ನಿಗ್ರಹಿಸು ಎಂದು ಬೇಡಿಕೊಂಡನು. ಆಗ ಶ್ರೀಮನ್ನಾರಾಯಣನು ತನ್ನ ಕೈಯಲ್ಲಿ ಹೊಳೆಯುವ ಸುದರ್ಶನ ಚಕ್ರವನ್ನು ಆ ದೈತ್ಯ ಸೇನೆಯ ಮೇಲೆ ಬಿಟ್ಟುಬಿಟ್ಟನು. ಬೆಂಕಿಯ ವಂಕಿಯಂತೆ ಗರಗರ ತಿರುಗುತ್ತ ಆ ವಿಷ್ಣು ಚಕ್ರವು ದಾನವ ಸೇನೆಯ ಮೇಲೆ ಎರಗಿ ಅರೆನಿಮಿಷದಲ್ಲಿ ದುರ್ಜಯನನ್ನೂ ಅವನ ಎಲ್ಲ ದೈತ್ಯ ಪರಿವಾರವನ್ನೂ ಕೊಂದು ಹಾಕಿತು, ಮುರಿದು ಒಟ್ಟಿತು. ಹುರಿದು ಸುಟ್ಟಿತು. ಹೀಗೆ ಒಂದು ನಿಮಿಷದಲ್ಲಿ ದೈತ್ಯರನ್ನೆಲ್ಲ ವಿಧ್ವಂಸಗೈದು ದಾನವಾಂತಕನಾದ ಶ್ರೀಮನ್ನಾರಾಯಣನು ಗೌರಮುಖ ಮುನಿಯನ್ನು ಸಂತೈಸಿ ಇಂತು ನುಡಿದನು.

"ಬ್ರಹ್ಮನ್, ಈ ದುಷ್ಟ ದೈತ್ಯರನ್ನೆಲ್ಲ ಈ ಸ್ಥಳದಲ್ಲಿ ಈ ನನ್ನ ಸುದರ್ಶನ ಚಕ್ರವು ಒಂದು ನಿಮಿಷದಲ್ಲಿ ಸಂಹರಿಸಿದ್ದರಿಂದ ಇದಕ್ಕೆ ನೈಮಿಷಾರಣ್ಯ ಎಂಬ ಹೆಸರು ಬರುತ್ತದೆ. ಇದು ಇನ್ನು ಮುಂದೆ ಅನೇಕ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರಿಗೆ ವಾಸಸ್ಥಳವಾಗುವುದು. ಯಜ್ಞಪುರುಷನಾದ ನಾನು ಈ ಸ್ಥಳದಲ್ಲಿ ಭಕ್ತರಿಂದ ಪೂಜಿತನಾಗಿ ನಿರಂತರವೂ ವಾಸ ಮಾಡುತ್ತೇನೆ. ನಾನು ಕೊಟ್ಟ ಈ ದಿವ್ಯ ರತ್ನದಿಂದ ಹುಟ್ಟಿದ ಈ ಹದಿನೈದು ಮಂದಿ ಸೇನಾಪತಿಗಳು ಮುಂದೆ ಕೃತಯುಗದಲ್ಲಿ ಮಹಾರಾಜರಾಗಿ ಈ ಭೂಮಂಡಲವನ್ನು ಆಳುವರು." ಶ್ರೀಹರಿಯು ಈ ರೀತಿ ನುಡಿದು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಆನಂತರ ಆ ಗೌರಮುಖ ಮಹರ್ಷಿಯು ನಿರ್ಭಯವಾಗಿ ನಿರಾಂತಕವಾಗಿ ತನ್ನ ಆಶ್ರಮದಲ್ಲಿ ಆನಂದದಿಂದ ವಾಸ ಮಾಡಿದನು.

*ವರಾಹಪುರಾಣದಲ್ಲಿ ಹನ್ನೊಂದನೇ ಅಧ್ಯಾಯ ಮುಗಿದದು*

—o—

## ರಾಮನಾಮದ ಮಹಿಮೆ

ಅಧ್ಯಾಯ - ೧೨

ಶ್ರೀವಿಷ್ಣುವಿನ ಸುದರ್ಶನ ಚಕ್ರದ ಜ್ವಾಲಾಮಾಲೆಗಳಿಂದ ಮಗನಾದ ದುರ್ಜಯನೂ, ಅವನ ಸೈನಿಕರೂ, ಬೆಂಬಲಿಗರಾದ ರಾಜರೂ ಸುಟ್ಟು ಹೋದ ಸಮಾಚಾರವು ಚಿತ್ರಕೂಟ ಪರ್ವತದಲ್ಲಿ ಆಶ್ರಮವನ್ನು ಕಟ್ಟಿಕೊಂಡು ತಪಸ್ಸನ್ನು ಮಾಡುತ್ತಲಿದ್ದ ಮುದುಕ ಸುಪ್ರತೀಕ ರಾಜನಿಗೆ ತಿಳಿದು ಬಂದಿತು. ಭಯಂಕರವಾದ ದುಃಖದಿಂದ ಅವನ ಹೃದಯವು ಬೆಂದಿತು. ಮಗನ ಮರಣವು ಆ ಮುಪ್ಪಿನ ಹೃದಯದಲ್ಲಿ ಹೊಸ ಕಿಚ್ಚನ್ನು ಹೊತ್ತಿಸಿ ಕರುಳುಗಳನ್ನು ದಹಿಸತೊಡಗಿತು. ಆ ದುಃಖ ಶಮನಕ್ಕೆ ಅವನಿಗೆ ಬೇರೆ ಏನೂ ಉಪಾಯವು ಹೊಳೆಯಲಿಲ್ಲ.

ಕೊನೆಗೆ ಅವನು ಅದೇ ಚಿತ್ರಕೂಟ ವನದಲ್ಲಿ ಹಿಂದೆ ರಾಮಾವತಾರ ಕಾಲದಲ್ಲಿ ಬಂದಿದ್ದ ಶ್ರೀರಾಮನನ್ನು ಧ್ಯಾನ ಮಾಡತೊಡಗಿದನು. ರಾಮನಾಮಧ್ಯಾನವೇ ತನ್ನ ಸರ್ವ ದುಃಖಗಳನ್ನು ಪರಿಹರಿಸಬಲ್ಲ ಏಕಮಾತ್ರವಾದ ರಾಮಬಾಣ ಉಪಾಯ ಎಂದು ಅವನು ವಿವೇಕದಿಂದ ವಿಚಾರಮಾಡಿದನು ಮತ್ತು ಶ್ರೀರಾಮನ ಚರಣ ಚಿಹ್ನಗಳಿಂದ ಲಾಂಛಿತವಾದ ಚಿತ್ರಕೂಟ ಗಿರಿಯ ಪವಿತ್ರ ಸ್ಥಾನಗಳಿಗೆ ಹೋಗಿ ಶ್ರೀರಾಮ ಭಗವಂತನನ್ನು ಭಕ್ತಿಯಿಂದ ಸ್ತೋತ್ರ ಮಾಡತೊಡಗಿದನು.

**ನಮಾಮಿ ರಾಮಂ ನರನಾಥಮಚ್ಯುತಂ**
**ಕವಿಂ ಪುರಾಣಂ ತ್ರಿದಶಾರಿ - ನಾಶನಂ ।**

**ಶಿವಸ್ವರೂಪಂ ಪ್ರಭವಂ ಮಹೇಶ್ವರಂ**
**ಸದಾ ಪ್ರಪನ್ನಾರ್ತಿ ಹರಂ ಧೃತಶ್ರಿಯಮ್ ॥**

ಗರುಡ ಶೇಷರಾದಿಯಾಗಿ ಬ್ರಹ್ಮಾಂತಜೀವ ರಾಶಿಗೆಲ್ಲ ನಿಯಾಮಕನಾಥನೂ, ದೈತ್ಯ ವಿನಾಶಕನೂ, ಮಂಗಳ ಸ್ವರೂಪಿಯೂ, ಸರ್ವಜಗತ್ ಕಾರಣನೂ, ಪುರಾಣ ಪುರುಷನೂ, ಜ್ಞಾನಿಶ್ರೇಷ್ಠನೂ, ಶರಣುಬಂದವರ ಸಂಕಟಗಳನ್ನು ಪರಿಹರಿಸುವವನೂ, ಮಹಾ ಸಮರ್ಥನೂ ಆದ ಸಿರಿಯೊಡೆಯ ಶ್ರೀಮನ್ನಾರಾಯಣನನ್ನು ನಾನು ವಂದಿಸುತ್ತೇನೆ.

''ಸ್ವಾಮಿನ್, ನಿನ್ನನ್ನು ಆಧರಿಸಿಕೊಂಡು ಈ ಜಗತ್ತೆಲ್ಲ ನಿಂತಿದೆ. ನಿನ್ನನ್ನು ಆಶ್ರಯಿಸಿ ಜ್ಞಾನಿಗಳು ಮೋಕ್ಷಮಂದಿರದಲ್ಲಿ ಆನಂದದಿಂದ ರಮಮಾಣರಾಗುತ್ತಾರೆ. ಆದುದರಿಂದಲೇ ನಿನಗೆ ರಾಮ ಎಂದು ಹೆಸರು ಬಂದಿದೆ. ಅನೇಕ ದುಃಖಗಳೆಂಬ ಘೋರ ತೆರೆಗಳಿಂದ ಭೋರಿಡುವ, ಇಂದ್ರಿಯಗಳೆಂಬ ಮೀನ ಮೊಸಳೆಗಳುಳ್ಳ ಈ ಸಂಸಾರ ಸಮುದ್ರದಲ್ಲಿ ರಾಮನಾಮ ಸ್ಮರಣರೂಪವಾದ ನೌಕೆಯನ್ನು ನಂಬಿ ಆಶ್ರಯಿಸಿದವರು ಎಂದೂ ಮುಳುಗುವುದಿಲ್ಲ. ಆದುದರಿಂದ ಎಲ್ಲ ತಪೋವನಗಳಲ್ಲಿ ತಪಸ್ವಿಗಳು ರಾಮರಾಮ ಎಂದು ನಿನ್ನ ಸ್ಮರಣೆ ಮಾಡುತ್ತಿರುತ್ತಾರೆ.''

ಈ ರೀತಿಯಾಗಿ ಸ್ತೋತ್ರವನ್ನು ಕೇಳಿ ಶ್ರೀರಾಮನು ಸುಪ್ರಸನ್ನನಾಗಿ ಆ ಸುಪ್ರತೀಕ ರಾಜನಿಗೆ ತನ್ನ ದಿವ್ಯ ಸ್ವರೂಪವನ್ನು ತೋರಿಸಿದನು. ಮತ್ತು 'ವರವನ್ನು

ಕೇಳಿಕೋ,' ಎಂದು ಹೇಳಿದನು. ದೇವದೇವನ ಆ ದಯಾಪೂರ್ಣವಾದ ಮಾತುಗಳನ್ನು ಕೇಳಿ ಸುಪ್ರತೀಕ ರಾಜನು ಸಂತಸದಿಂದ ನಮಸ್ಕರಿಸಿ, ''ಸ್ವಾಮಿ, ದೇವದೇವ, ನನಗೆ ನಿನ್ನ ದಿವ್ಯವಾದ ದೇಹದಲ್ಲಿ ಲಯವಾಗುವಂತೆ ಅನುಗ್ರಹಿಸು'' ಎಂದು ಕೇಳಿಕೊಂಡನು. ಹೀಗೆ ಶ್ರೀರಾಮನನ್ನು ಏಕಚಿತ್ತದಿಂದ ಕೊಂಡಾಡುತ್ತ ಹೃದಯದಲ್ಲಿ ನಿರಂತರ ಧ್ಯಾನ ಮಾಡುತ್ತ ಆ ಸುಪ್ರತೀಕ ರಾಜನು ಆ ಪರಮಾತ್ಮನ ಅನುಗ್ರಹದಿಂದ ಅವನ ಪಾದಾರವಿಂದದಲ್ಲಿ ಲೀನನಾದನು.

**ವರಾಹ** :- ಭೂಮಿದೇವಿ, ಆದಿಕೃತಯುಗದ ಇತಿಹಾಸವನ್ನು ನಿರೂಪಿಸುವ ಈ ಎಲ್ಲ ಪುರಾಣವನ್ನು ನಾನು ನಿನಗೆ ಹೇಳಿದ್ದೇನೆ. ಇದನ್ನು ಸಾವಿರ ನಾಲಿಗೆಯ ಆದಿಶೇಷ ನಿಂದಲೂ ಕೂಡ ಅನಾಯಾಸವಾಗಿ ಹೇಳಲು ಶಕ್ಯವಿಲ್ಲ. ಇದನ್ನು ನಾನು ನಿನಗೋಸ್ಕರ ಎಲ್ಲರಿಗೂ ತಿಳಿಯಲು ತಕ್ಕದ್ದಾದಷ್ಟೆ ಭಾಗವನ್ನು (ಒಂದೆರಡು ಗಿಂಡಿಯನ್ನು ತುಂಬಿ ತಂದು ಇದು ಸಮುದ್ರದ ನೀರು ಎಂದು ತೋರಿಸುವಂತೆ) ತಿಳಿಸಿ ಹೇಳಿದ್ದೇನೆ. ಇದು ಕೃತಯುಗದ ಪೂರ್ಣ ಚರಿತ್ರವಲ್ಲ. ಆ ಕೃತಯುಗದ ಚರಿತ್ರವನ್ನು ಬ್ರಹ್ಮದೇವರೂ ಸ್ವಯಂ ನಾರಾಯಣನೂ ತಮ್ಮಿಂದ ಪೂರ್ಣವಾಗಿ ಹೇಳಲು ಸಾಧ್ಯವಿಲ್ಲ ಎಂದು ತಿಳಿಸಿದ್ದಾರೆ. ಸಮುದ್ರದ ದಂಡೆಯಲ್ಲಿಯ ಧೂಳಿಯ ಕಣಗಳನ್ನು ಎಣಿಸಲು, ಯಾವದಾದರೂ ಒಂದು ಅಂಕಿ-ಸಂಖ್ಯೆ ಇರಬಹುದು. ಆದರೆ ಪರಮಾತ್ಮನ ಲೀಲೆಗಳನ್ನು ಎಣಿಸಲಿಕ್ಕೂ ಅವನ ಗುಣಗಳನ್ನೂ ಗಣಿಸಲಿಕ್ಕೂ ಯಾವ ಅಂಕಿಯೂ ಇಲ್ಲ. ಯಾವ ಸಂಖ್ಯೆಯೂ ಇಲ್ಲ.

ಧರಣೀದೇವಿ, ಕೃತಯುಗದಲ್ಲಿ ನಡೆದ ನಾರಾಯಣನ ಕೆಲವು ಲೀಲಾ ಚರಿತಗಳನ್ನು ನಾನು ನಿನಗೆ ಈವರೆಗೆ ಹೇಳಿದೆ. ಇನ್ನು ಮತ್ತೇನು ಕೇಳಬೇಕೆಂದು ನಿನಗೆ ಅಪೇಕ್ಷೆ ಇದೆ ?

ವರಾಹ ಪುರಾಣದಲ್ಲಿ ಹನ್ನೆರಡನೇ ಅಧ್ಯಾಯ ಮುಗಿದುದು

—o—

## ಶ್ರಾದ್ಧದ ಬಗೆಬಗೆಯ ವಿಧಿವಿಧಾನಗಳು

## ಅಧ್ಯಾಯ - ೧೩

**ಭೂದೇವಿ :-** ಶ್ರೀಕೃಷ್ಣನು ತನಗೆ ಕೊಟ್ಟ ಆ ದಿವ್ಯ ರತ್ನದಿಂದ ಹುಟ್ಟಿದ ಸೇನಾಪತಿಗಳೂ ಮತ್ತು ಅವನ ಕೈಯಿಂದ ಬಿಟ್ಟ ಸುದರ್ಶನ ಚಕ್ರವೂ ಕೂಡಿ ದುರ್ಜಯ ರಾಜನನ್ನೂ ಅವನ ಸಂಗಡಿಗರನ್ನೂ, ಬೆಂಬಲಿಗರನ್ನೂ ಕಡಿದು ಕೊಂದು ಸಿಗಿದು ಸುಟ್ಟು ಹಾಕಿದ ಕೌತುಕವನ್ನು ಕಂಡು ಗೌರಮುಖ ಮುನಿಯು ಏನು ಮಾಡಿದನು ? ಮತ್ತು ಆ ಮಣಿಕುಮಾರರಾದ ಹದಿನೈದು ಸೇನಾನಾಯಕರು ಯಾವ ಫಲವನ್ನು ಹೊಂದಿದರು ? ಈ ಗೌರಮುಖ ಮುನಿ ಎಂದರೆ ಯಾರು ? ಅವನು ಮುಂದೆ ಯಾವ ಧರ್ಮಕರ್ಮಗಳನ್ನು ಮಾಡಿದನು ?

**ವರಾಹ :-** ಶ್ರೀಹರಿಯುನಿಮಿಷಾರ್ಧದಲ್ಲಿ ದುಷ್ಟಶಿಕ್ಷಣ, ಶಿಷ್ಟರಕ್ಷಣರೂಪವಾದ ಮಹಾಕಾರ್ಯವನ್ನು ಮಾಡಿದ್ದನ್ನು ನೋಡಿ ಆ ಗೌರಮುಖಮುನಿಗೆ ಆ ನಾರಾಯಣನಲ್ಲಿ ಇನ್ನೂ ಹೆಚ್ಚಿನ ಭಕ್ತಿಯು ಉತ್ಪನ್ನವಾಯಿತು. ಆ ಪರಮೇಶ್ವರನನ್ನೇ ಅಧಿಕಾಧಿಕವಾಗಿ ಆರಾಧಿಸಬೇಕೆಂದು ಬಯಸಿ ಅವನು ಅದೇ ಅರಣ್ಯದಲ್ಲಿ ಇರುವ ಪರಮ ದುರ್ಲಭವಾದ ಪ್ರಭಾಸ ಎಂಬ ಹೆಸರುಳ್ಳ ಸೋಮತೀರ್ಥಕ್ಕೆ ಹೋದನು. ಆ ಸೋಮ ತೀರ್ಥದಲ್ಲಿ ದೈತ್ಯ ದಾನವರನ್ನು ದಮನ ಮಾಡುವ ಶ್ರೀಹರಿಯು ದೈತ್ಯಸೂದನ ಎಂಬ ಹೆಸರಿನಿಂದ ನಿತ್ಯ ಸನ್ನಿಹಿತನಾಗಿದ್ದಾನೆ. ಆ ಮಧುಸೂಧನನನ್ನು ಭಕ್ತಿ ಉದ್ರೇಕದಿಂದ ಗೌರಮುಖ ಋಷಿಯು ಆರಾಧಿಸುತ್ತಿರುವಾಗ ಮುನಿಶ್ರೇಷ್ಠರಾದ ಮಾರ್ಕಂಡೇಯ ಋಷಿಗಳು ಅಲ್ಲಿಗೆ ಬಂದರು. ಅವರನ್ನು ನೋಡಿ ಗೌರಮುಖ ತಾಪಸನು ಎದ್ದು ನಿಂತು, ಸ್ವಾಗತಗೈದು, ಅರ್ಘ್ಯ ನೀಡಿ, ಪಾದ್ಯವಿತ್ತು, ಭಕ್ತಿಯಿಂದ ಕೂಡಿ ಆನಂದದಿಂದ ಸತ್ಕರಿಸಿದನು. ದರ್ಭಾಸನದ ಮೇಲೆ ಕುಳಿತುಕೊಂಡ ಆ ಮಾರ್ಕಂಡೇಯ ಮಹಾಮುನಿಗೆ ಕೈಜೋಡಿಸಿ ಗೌರಮುಖ ಭೂಸುರನು ''ಮುನಿಸಿಂಹ, ನಾನು ಏನು ಮಾಡಬೇಕು ? ಆದೇಶ ಕೊಡಿರಿ'' ಎಂದು ಕೇಳಿದನು. ಹೀಗೆ ಪ್ರಶ್ನಿಸಲ್ಪಟ್ಟ ಮಹಾತಾಪಸರಾದ ಮಾರ್ಕಂಡೇಯರು ಮೃದು ಮಧುರವಾದ ದನಿಯಿಂದ ಗೌರಮುಖ ತಪಸ್ವಿಯನ್ನು ಕುರಿತು ಇಂತೆಂದರು-

''ಮಾರ್ಕಂಡೇಯ, ಎಲ್ಲ ದೇವತೆಗಳಿಗೂ ಶ್ರೀಮನ್‌ನಾರಾಯಣನೇ ಮೂಲ ಪುರುಷನಾಗಿದ್ದಾನೆ. ಅವನಿಂದ ಬ್ರಹ್ಮದೇವನು ಜನಿಸಿದನು. ಆ ಬ್ರಹ್ಮದೇವರು ಸಪ್ತರ್ಷಿಗಳೆಂದು ಪ್ರಸಿದ್ಧರಾದ ಏಳು ಮಹಾಮುನಿಗಳನ್ನು ಉತ್ಪನ್ನರನ್ನಾಗಿ ಮಾಡಿದನು. ತಾನು ಸೃಷ್ಟಿಮಾಡಿದ ಈ ಸಪ್ತರ್ಷಿಗಳಿಗೆ ''ನೀವು ಏಳೂ ಜನರು ತಂದೆಯಾದ ನನ್ನ ಸೇವೆ ಮಾಡಿರಿ'' ಎಂದು ಅಪ್ಪಣೆಯನ್ನು ವಿಧಿಸಿದನು. ಆದರೆ ಆ ಬ್ರಹ್ಮ ಮಾನಸ ಪುತ್ರರು ಬ್ರಹ್ಮದೇವರ ಪೂಜೆ ಮಾಡುವುದನ್ನು ಬಿಟ್ಟು ತಮ್ಮ ಆತ್ಮೋದ್ಧಾರಕ್ಕಾಗಿಯೇ ಯಜ್ಞಯಾಗಗಳನ್ನು ಮಾಡಿದರು. ಅದನ್ನು ನೋಡಿ ಬ್ರಹ್ಮದೇವರಿಗೆ ಬಹಳ ಕೋಪ ಬಂದಿತು. ಅವರು ತಮ್ಮ ಆ ಮಾನಸ ಪುತ್ರರಿಗೆ ''ನೀವು ನನ್ನ ಆಜ್ಞೆಯನ್ನು ಮೀರಿ ಸ್ವೇಚ್ಛೆಯಿಂದ ನಡೆದಿದ್ದೀರಿ. ಈ ಪಿತ್ರಾಜ್ಞೋಲ್ಲಂಘನ ರೂಪವಾದ ಅಪಚಾರವನ್ನು ಮಾಡಿದ್ದರಿಂದ ನೀವೆಲ್ಲರೂ ಜ್ಞಾನಶೂನ್ಯರಾಗುವಿರಿ'' ಎಂದು ಶಾಪ ಕೊಟ್ಟರು.

ಈ ರೀತಿಯಾಗಿ ತಮ್ಮ ಪಿತನಾದ ಬ್ರಹ್ಮದೇವರಿಂದ ಶಪಿತರಾದ ಆ ಮುನಿಗಳೆಲ್ಲರೂ ಒಡನೆಯೇ ವಂಶೋದ್ಧಾರಕರಾದ ಪುತ್ರರನ್ನು ಪಡೆದು ಸ್ವರ್ಗವಾಸಿಗಳಾದರು. ಅವರು ಮರಣ ಹೊಂದಿದ ಕೂಡಲೇ ಅವರ ಮಕ್ಕಳು ಬ್ರಹ್ಮಜ್ಞಾನಿಗಳಾದ ತಮ್ಮ ತಂದೆಗಳನ್ನುದ್ದೇಶಿಸಿ ಶ್ರಾದ್ಧ ಮಾಡಿ ಅವರನ್ನು ತೃಪ್ತಿಪಡಿಸಿದರು. ಶ್ರಾದ್ಧದಲ್ಲಿ ನೀಡಿದ ಪಿಂಡೋದಕದಿಂದ ಸಂತುಷ್ಟರಾದ ಆ ಬ್ರಹ್ಮದೇವರ ಏಳೂ ಮಾನಸ ಪುತ್ರರು ತಮ್ಮ ಮಕ್ಕಳು ಮಾಡುವ ಮಂತ್ರೋಚ್ಚಾರಣ ಪೂರ್ವಕವಾಗಿ ಶ್ರಾದ್ಧದ ಪಿಂಡದಾನವನ್ನು ವಿಮಾನದಲ್ಲಿ ಕುಳಿತು ನೋಡುತ್ತ ನಿಂತುಕೊಂಡರು.

**ಗೌರಮುಖ :-** ಆ ಪಿತೃಗಳು ಎಂದರೆ ಯಾರು ? ಅವರು ಎಷ್ಟು ಜನರು ? ಅವರು ಎಲ್ಲಿ ಇರುತ್ತಾರೆ ? ಈ ಭೂಲೋಕದಲ್ಲಿ ಎಷ್ಟು ಹೊತ್ತು ನಿಲ್ಲುತ್ತಾರೆ ?

**ಮಾರ್ಕಂಡೇಯ :-** ಕೆಲವು ಮಹರ್ಷಿಗಳು ದೇವತೆಗಳಿಗೆ ಸೋಮವರ್ಧಕರಾಗಿ ಪ್ರವರ್ತಿಸುತ್ತಾರೆ. ಮರೀಚಿ ಮೊದಲಾದ ಆ ಏಳು ಜನರು ಸ್ವರ್ಗದಲ್ಲಿ ಪಿತೃಗಳು ಎನಿಸುವರು. ಅವರಲ್ಲಿ ನಾಲ್ವರು ಮೂರ್ತರೂ ಉಳಿದ ಮೂವರು ಅಮೂರ್ತರೂ ಆಗಿರುತ್ತಾರೆ. ಅವರು ವಾಸಿಸುವ ಲೋಕ ಮತ್ತು ಅವರ ಸ್ವಭಾವ ಸ್ವರೂಪಗಳನ್ನು ಹೇಳುತ್ತೇನೆ ಕೇಳು -

ಈ ದೇವತೆಗಳ ಪಿತೃಗಳು ಸಂತಾನಕ ಎಂಬ ಲೋಕಗಳಲ್ಲಿ ವಾಸಮಾಡುತ್ತಾರೆ. ಈ ತೇಜೋಮೂರ್ತಿಗಳನ್ನು ದೇವತೆಗಳು ಪೂಜಿಸುತ್ತಾರೆ. ಈ ದೇವ ಪಿತೃಗಳು ನೂರು ಯುಗಗಳ ವರೆಗೆ ಆ ಸಂತಾನಕ ಲೋಕಗಳಲ್ಲಿ ಸುಖವಾಗಿ ಇದ್ದು ಅನಂತರ ಮತ್ತೆ ಬ್ರಹ್ಮಜ್ಞಾನಿಗಳಾಗಿ ಹುಟ್ಟುವರು. ಆಗಲೂ ಅವರಿಗೆ ಜನ್ಮಾಂತರದ ಸ್ಮರಣವು ಇರುತ್ತದೆ. ಆದುದರಿಂದ ಅವರು ಮುಂದೆ ತಮಗೆ ಮತ್ತೆ ಪುನರ್ಜನ್ಮವು ಬರಲಾರದಂಥ ಸರ್ವಶ್ರೇಷ್ಠವಾದ ಯೋಗಮಾರ್ಗವನ್ನು ಅನುಸರಿಸುವರು. ಈ ಪಿತೃಗಳೇ ಶ್ರಾದ್ಧದಲ್ಲಿ ವಿಧಿ ವಿಧಾನಗಳಿಂದ ಸಂತೃಪ್ತರಾಗಿ ತಮ್ಮ ಯೋಗಬಲದಿಂದ ಎಲ್ಲ ಯೋಗಶಕ್ತಿಯನ್ನು ಬೆಳೆಸುತ್ತಾರೆ. ಈ ಯೋಗಿಗಳ ಪ್ರೀತಿಗಾಗಿ ಶ್ರಾದ್ಧವನ್ನು ಮಾಡಬೇಕು. ಇದು ಸೋಮಪಾನ ಮಾಡುವವರ ಮೊದಲನೇ ಸೃಷ್ಟಿ.

ಬ್ರಾಹ್ಮಣೋತ್ತಮರಾದ ಇವರು ಏಕಾಂಗಿಗಳಾಗಿರುತ್ತಾರೆ. ಭೂಲೋಕದಲ್ಲಿ ಇರುವವರಿಗೆ ಸ್ವರ್ಗಲೋಕ ವಾಸಿಗಳಾದ ಬ್ರಹ್ಮಪುತ್ರ ಮರೀಚಿ ಮೊದಲಾದ ಋಷಿಗಳು ಪೂಜ್ಯರಾಗಿರುತ್ತಾರೆ. ಅವರಿಗೆ ಮರುದ್ಗಣದವರು ಪೂಜ್ಯರು. ಕಲ್ಪವಾಸಿಗಳೆಂದು ಹೆಸರು. ಆ ಮರುದ್ಗಣಗಳಿಗೆ ಜನಲೋಕವಾಸಿಗಳಾದ ಸನಕಾದಿಗಳು ಪೂಜ್ಯರಾಗಿರುತ್ತಾರೆ. ಆ ಸನಕಾದಿಗಳಿಗೆ ಮಹಾತಪಸ್ವಿಗಳಾದ ವೈರಾಜರೆಂಬ ಹೆಸರುಳ್ಳ ಸಪ್ತಋಷಿಗಳೆಂಬ ಏಳು ಗಣದ ಮುನಿಗಳು ಪೂಜ್ಯರಾಗಿರುತ್ತಾರೆ. ಇದಕ್ಕೆ ಪಿತೃ ಸಂತತಿ ಎನ್ನುತ್ತಾರೆ. ಇವರನ್ನು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಮೂರು ಜಾತಿಯವರೂ ಪೂಜಿಸಬೇಕು. ಮೇಲ್ವರ್ಗದವರ ಅನುಮತಿಯಿಂದ ಶೂದ್ರರು ಕೂಡ ಈ ಎಲ್ಲ ಪಿತೃದೇವತೆಗಳನ್ನು ಆರಾಧಿಸಬೇಕು. ಈ ಪಿತೃ ಗಣದಲ್ಲಿ ಕೆಲವರು ಶೂದ್ರ ಜಾತಿಯ ಪಿತೃಗಳೂ ಇರುತ್ತಾರೆ. ಈ ಪಿತೃಗಣದಲ್ಲಿ ಮುಕ್ತಚೇತನರು ಮಾತ್ರ ಕಂಡು

ಬರುವುದಿಲ್ಲ. ಅರ್ಥಾತ್ ಇರುವುದಿಲ್ಲ. ಶಾಸ್ತ್ರ ದೃಷ್ಟಿಯಿಂದ ವಿಚಾರಿಸಿ ಪುರಾಣಗಳನ್ನು ಪರಿಶೀಲಿಸಿ ತಮ್ಮ ತಮ್ಮ ವಂಶದ ಪೂಜ್ಯ ಪಿತೃಗಳನ್ನು ಅರಿತು ವರ್ತಿಸಬೇಕು. ಬ್ರಹ್ಮದೇವರ ಶಾಪಕ್ಕೆ ಬಲಿಯಾದ ಮರೀಚಿ ಮೊದಲಾದ ಮುನಿಗಳು ತಮ್ಮ ಪುತ್ರರು ಮಾಡಿದ ಶ್ರಾದ್ಧದ ಫಲವಾಗಿ ಶಾಪದಿಂದ ಕಳೆದುಹೋದ ತಮ್ಮ ದಿವ್ಯಜ್ಞಾನವನ್ನು ಮರಳಿ ಪಡೆದರು ಮತ್ತು ಆ ದಿವ್ಯಜ್ಞಾನದಿಂದ ಮೋಕ್ಷವನ್ನು ಹೊಂದಿದರು.

## ಅಥ ಶ್ರಾದ್ಧ ಕಾಲ ವಿಚಾರಃ

ವಿಪ್ರೋತ್ತಮ, ಶ್ರಾದ್ಧ ಮಾಡಲಿಕ್ಕೆ ವಿಹಿತವಾದ ಕಾಲವನ್ನೂ ಅರ್ಹರಾದ ಬ್ರಾಹ್ಮಣರನ್ನೂ, ಯೋಗ್ಯವಾದ ದ್ರವ್ಯವನ್ನೂ ಹೇಳುತ್ತೇನೆ -

''ವ್ಯತೀಪಾತ, ಉತ್ತರಾಯಣ, ದಕ್ಷಿಣಾಯನ, ವಿಷುವ ಕಾಲ - ಮೇಷ ತುಲಾ ಸಂಕ್ರಮಣ, ಸೂರ್ಯಗ್ರಹಣ ಮುಂತಾದ ಕಾಲಗಳಲ್ಲಿ ಶ್ರಾದ್ಧವನ್ನು ಮಾಡಬೇಕು. ಈ ಮೇಷ, ತುಲಾ ಸಂಕ್ರಮಣಗಳಲ್ಲದೇ ಸೂರ್ಯನ ಎಲ್ಲ ರಾಶಿ ಸಂಕ್ರಮಣ ಕಾಲದಲ್ಲಿಯೂ ಶ್ರಾದ್ಧ ಮಾಡಬೇಕು. ತನ್ನ ನಕ್ಷತ್ರಕ್ಕೆ ಕಾಡಾಟವಿದ್ದಾಗಲೂ ಕೆಟ್ಟ ಕನಸನ್ನು ಕಂಡಾಗಲೂ ಹೊಸ ಧಾನ್ಯ ಬಂದಾಗಲೂ ಐಚ್ಛಿಕವಾಗಿ ಶ್ರಾದ್ಧವನ್ನು ಮಾಡಬೇಕು. ಆರ್ದ್ರಾ, ವಿಶಾಖಾ, ಸ್ವಾತಿ ನಕ್ಷತ್ರಗಳಿಗೆ ಅಮಾವಾಸ್ಯೆ ಯೋಗವಿದ್ದಾಗ ಶ್ರಾದ್ಧ ಮಾಡಿದರೆ ಪಿತೃಗಳಿಗೆ ಎಂಟು ವರ್ಷಗಳ ಕಾಲ ತೃಪ್ತಿಯಾಗುವುದು.

ಪುನರ್ವಸು, ಪುಷ್ಯ, ಆರ್ದ್ರಾ ನಕ್ಷತ್ರಗಳಲ್ಲಿ ಯಾವದಾದರೊಂದು ನಕ್ಷತ್ರದಿಂದ ಕೂಡಿದ ಅಮಾವಾಸ್ಯೆಯ ದಿನ ಶ್ರಾದ್ಧ ಮಾಡುವದರಿಂದ ಪಿತೃಗಳಿಗೆ ಹನ್ನೆರಡು ವರ್ಷ ಕಾಲ ತೃಪ್ತಿ ಉಂಟಾಗುವುದು. ಪಿತೃಗಳಿಗೆ ತೃಪ್ತಿಯನ್ನು ಉಂಟು ಮಾಡಲು ಬಯಸುವ ದೇವತೆಗಳೂ ಧನಿಷ್ಠಾ, ಶತಭಿಷಾ, ಪೂರ್ವಾಭಾದ್ರಾ ನಕ್ಷತ್ರಗಳಿಂದ ಕೂಡಿದ ಅಮಾವಾಸ್ಯೆಯೂ ದುರ್ಲಭವಾಗಿವೆ. ಶಾಶ್ವತ ಫಲವನ್ನು ಬಯಸುವವರು ಮೇಲೆ ಹೇಳಿದ ಒಂಬತ್ತು ನಕ್ಷತ್ರಗಳಲ್ಲಿ ಅಮಾವಾಸ್ಯೆಯ ಯೋಗವಿದ್ದಾಗ ಶ್ರಾದ್ಧ ಮಾಡಿದರೆ ಬರುವ ಪುಣ್ಯವು ಕೋಟ್ಯಾವಧಿ ವರ್ಷಗಳಾದರೂ ಸವೆಯುವುದಿಲ್ಲ. ಇದಕ್ಕಿಂತ ಶ್ರಾದ್ಧಕ್ಕೆ ಹೆಚ್ಚಿನ ಪುಣ್ಯ ಕಾಲವೆಂದರೆ ವೈಶಾಖ ಶುದ್ಧ ತೃತೀಯಾ (ಅಕ್ಷಯತೃತಿಯಾ) ಕಾರ್ತಿಕ ಶುದ್ಧ ನವಮಿ, ಶ್ರಾವಣ ಬಹುಳ ತ್ರಯೋದಶಿ, ಮಾಘ ಅಮಾವಾಸ್ಯಾ, ಮಾರ್ಗಶೀರ್ಷ, ಪುಷ್ಯ, ಮಾಘ, ಪಾಲ್ಗುಣ ತಿಂಗಳುಗಳ ಕೃಷ್ಣ ಪಕ್ಷದ ಸಪ್ತಮಿ, ನವಮೀ ತಿಥಿಗಳು ಮತ್ತು ಗ್ರಹಣ ಸಂಕ್ರಮಣ ಕಾಲಗಳಲ್ಲಿ ಪಿತೃಗಳನ್ನು ಉದ್ದೇಶಿಸಿ ನೀರನ್ನಾದರೂ ಕೊಟ್ಟರೆ ಸಾವಿರ ವರ್ಷ ಶ್ರಾದ್ಧ ಮಾಡಿದ ಫಲವು ಬರುತ್ತದೆ. ಗಂಗಾ, ಶತದ್ರು, ವಿಪಾಶಾ, ಸರಸ್ವತೀ, ಗೋಮತೀ ಮುಂತಾದ ಯಾವದಾದರೊಂದು ನದಿಗೆ ಹೋಗಿ ಶ್ರಾದ್ಧ ಮಾಡಿ ಗೋಪೂಜೆ, ಗೋದಾನ ಮುಂತಾದುದನ್ನು ಮಾಡಿದರೆ ಪಿತೃಗಳಿಗೆ ಪರಮಾನಂದವಾಗುತ್ತದೆ.

''ವಿತ್ತಂ ಚ ಚಿತ್ತಂ ಚ ನೃಣಾಂ ವಿಶುದ್ಧಂ।
ಶಸ್ತಶ್ಚ ಕಾಲಃ ಕಥಿತೋ ವಿಧಿಶ್ಚ ॥
ಪಾತ್ರಂ ಯಥೋಕ್ತಂ ಪರಮಾ ಚ ಭಕ್ತಿಃ।
ನೃಣಾಂ ಪ್ರಯಚ್ಛಂತ್ಯಭಿವಾಂಛಿತಾನಿ ॥

ಶ್ರಾದ್ಧ ಮಾಡುವವರಿಗೆ ಮೊದಲು ಶುದ್ಧವಾದ ಮನಸ್ಸಿರಬೇಕು. ಶುದ್ಧವಾದ ಅಂದರೆ ನ್ಯಾಯ ಮಾರ್ಗದಿಂದ ಸಂಪಾದಿಸಿದ ದ್ರವ್ಯವಿರಬೇಕು. ಪ್ರಶಸ್ತಕಾಲ, ಶಾಸ್ತ್ರೋಕ್ತವಿಧಿ, ಪಿತೃಗಳಲ್ಲಿ ಶ್ರದ್ಧೆ, ಯೋಗ್ಯ ಬ್ರಾಹ್ಮಣ. ಇಷ್ಟಿದ್ದರೆ ಪಿತೃಗಳಿಗೆ ತೃಪ್ತಿಯಾಗುವದಲ್ಲದೆ ಅಂಥ ಶ್ರಾದ್ಧ ಮಾಡಿದವರಿಗೆ ಇಷ್ಟಾರ್ಥಗಳೆಲ್ಲವೂ ಸಿದ್ಧಿಸುವುವು. ಸಾಮಾನ್ಯವಾಗಿ ಎಲ್ಲ ಪಿತೃಗಳು ಹಾಡುವ ಹಾಡು ಒಂದೇ ಆಗಿದೆ. ಮನೋರಥ ಒಂದೇ ಆಗಿದೆ. ಪಿತೃಗಳೆಲ್ಲರೂ ತಮ್ಮ ಬಯಕೆಗಳನ್ನು ತೋಡಿಕೊಳ್ಳುವ ಆ ಹಾಡನ್ನು ಹೇಳುತ್ತೇನೇ ಕೇಳು -

''ನಮ್ಮ ವಂಶದಲ್ಲಿ ವಿತ್ತ ಶಾಠ್ಯವನ್ನು ಮಾಡದೇ ಪಿಂಡಪ್ರದಾನ ಮಾಡುವ ಬುದ್ಧಿವಂತನು ಹುಟ್ಟಬಹುದೇ! ಐಶ್ವರ್ಯವಿದ್ದಾಗ ನಮ್ಮನ್ನು ಉದ್ದೇಶಿಸಿ ರತ್ನ, ವಸ್ತ್ರ, ವಾಹನ, ಜಲ, ದ್ರವ್ಯ ಕೊಡತಕ್ಕ ಉದಾರ ಮನುಷ್ಯನು ಯಾವನಾದರೂ ಜನಿಸಬಹುದೇ! ಅಷ್ಟು ಐಶ್ವರ್ಯವಿಲ್ಲದಾಗ ವಿಹಿತವಾದ ಕಾಲದಲ್ಲಿ ಯಥಾಶಕ್ತಿ ಬ್ರಾಹ್ಮಣ ಭೋಜನವನ್ನು ಭಕ್ತಿಯಿಂದ ಮಾಡಿಸುವವನಾದರೂ ಜನಿಸಬಹುದೇ! ಅನ್ನದಾನ ಮಾಡುವ ಶಕ್ತಿ ಇಲ್ಲದಿದ್ದರೆ ಅಡವಿಯಲ್ಲಿ ಬೆಳೆದ ಕಾಯಿಪಲ್ಲೆಯನ್ನು ತಂದು ಕಿಂಚಿದ್ ದಕ್ಷಿಣೆಯೊಂದಿಗೆ ಬ್ರಾಹ್ಮಣರಿಗೆ ದಾನಕೊಡುವ ಸದ್ಬುದ್ಧಿಯುಳ್ಳವನು ಉದಿಸಬಹುದೇ ! ಅಷ್ಟೂ ಶಕ್ತಿ ಇಲ್ಲದಿದ್ದರೆ ಕರಿ ಎಳ್ಳನ್ನು ಒಂದು ಹಿಡಿ ಕೊಟ್ಟು ಕೈಮುಗಿಯುವ, ಇಲ್ಲದಿದ್ದರೆ ಏಳೆಂಟು ಕಾಳು ಎಳ್ಳಿನಿಂದ ಕೂಡಿದ ಒಂದು ಅಂಜಲಿ ತುಂಬ ನೀರನ್ನಾದರೂ ಶಕ್ತಿಯಿಂದ ಪಿತೃಗಳಿಗೆ ಕೊಡುವವನು ಉತ್ಪನ್ನವಾಗಬಹುದೇ!

ಏಳೆಂಟು ಕಾಳು ಎಳ್ಳೂ ಇಲ್ಲದ ಪರಿಸ್ಥಿತಿ ಇದ್ದರೆ ಒಂದು ಆಕಳಿಗೆ ಒಂದು ದಿನ ಹೊಟ್ಟೆಗೆ ಸಾಕಾಗುವಷ್ಟು ಹುಲ್ಲು ಕೊಟ್ಟು ಏನನ್ನಾದರೂ ತಂದಿಟ್ಟು ಒಂದು ಹಸುವಿಗೆ ಪಿತೃಗಳ ಉದ್ದೇಶದಿಂದ ತಿನ್ನಿಸುವವನು ಎಂದಾದರೂ ಜನಿಸಬಹುದೇ! ಇದು ಯಾವದೂ ಇಲ್ಲದಿದ್ದರೆ ಅರಣ್ಯಕ್ಕೆ ಹೋಗಿ ಎರಡೂ ತೋಳುಗಳನ್ನು ಮೇಲಕ್ಕೆತ್ತಿ ಸೂರ್ಯನೇ ಮೊದಲಾದ ಲೋಕಪಾಲಕರನ್ನು ಕುರಿತು ''ಪಿತೃಗಳ ಶ್ರಾದ್ಧಕ್ಕೆ ಬೇಕಾಗುವ ದ್ರವ್ಯ ಮತ್ತು ಉಳಿದಾವ ಸಾಧನ ಸಾಮಗ್ರಿ ಒಂದೂ ನನ್ನ ಬಳಿಗೆ ಇಲ್ಲ. ಅದಕ್ಕಾಗಿ ನಾನು ಈಗ ಬಗಲೆತ್ತಿ ನಿಂತಿದ್ದೇನೆ. ಎರಡೂ ತೋಳುಗಳನ್ನು ಮುಗಿಲಿನಲ್ಲಿ ಮೇಲೆ ಮಾಡಿ ನಮಸ್ಕಾರ ಮಾಡುತ್ತೇನೆ. ನನ್ನ ಭಕ್ತಿಯಿಂದಲೇ ಪಿತೃಗಳೆಲ್ಲರೂ ತೃಪ್ತರಾಗಲಿ'' ಎಂದು ಗಟ್ಟಿಯಾಗಿ ಹೇಳುವ ವಿವೇಕಿಯು ನಮ್ಮ ಕುಲದಲ್ಲಿ ಹುಟ್ಟಬಹುದೇ! ಅಂತೂ ಯಾವ ಕಾಲಕ್ಕೂ ಪಿತೃಶ್ರಾದ್ಧ ಮಾಡುವದನ್ನು ಬಿಡಬಾರದು. ಎಂಥ ಬಡತನ ಮತ್ತು ವಿಷಮ ಪರಿಸ್ಥಿತಿಯಲ್ಲಿ ಇದ್ದವರಿಗೂ ಮಾಡಲು ಅನುಕೂಲವಾಗು ಎಂದು ಶ್ರಾದ್ಧ ಮಾಡುವ ಅನೇಕ ಕಲ್ಪ ವಿಧಾನಗಳನ್ನು ಪಿತೃಗಳು ಈ ಪಿತೃಗೀತೆಯಲ್ಲಿ ಹೇಳಿದ್ದಾರೆ. ತನ್ನ ಪರಿಸ್ಥಿತಿಗೆ ಅನುಸಾರವಾಗಿ ನಿರ್ವಂಚನ ಬುದ್ಧಿಯಿಂದ ಮೇಲೆ ಹೇಳಿದ ಯಾವ ವಿಧಾನವನ್ನಾದರೂ ಭಕ್ತಿಯಿಂದ ಅನುಸರಿಸಿದರೆ ಶ್ರಾದ್ಧ ಮಾಡಿದಂತೆಯೇ ಅಗುತ್ತದೆ.

*ವರಾಹ ಮಹಾಪುರಾಣದಲ್ಲಿ ಹದಿಮೂರನೇ ಅಧ್ಯಾಯ ಮುಗಿದುದು*

—o—

## ಶ್ರಾದ್ಧ ವಿಧಿ

## ಅಧ್ಯಾಯ - ೧೪

**ಮಾರ್ಕಂಡೇಯ :-** ಮಹರ್ಷಿ, ಪೂರ್ವದಲ್ಲಿ ಬ್ರಹ್ಮಪುತ್ರನೂ ಒಳ್ಳೇ ಬುದ್ಧಿವಂತನೂ ಆದ ಸನಕಮುನಿಯ ಸಹೋದರನು ನನಗೆ ಈ ವಿಚಾರವನ್ನು ತಿಳಿಸಿದನು. ಶ್ರಾದ್ಧದಲ್ಲಿ ಋಗ್ವೇದ ಯಜುರ್ವೇದ ಸಾಮವೇದಗಳ ತ್ರಿಸುಪರ್ಣ ತ್ರಿಣಾಚಿಕೇತ, ತ್ರಿಮಧು ಮುಂತಾದ ಮಂತ್ರ ಭಾಗಗಳನ್ನು ಅಧ್ಯಯನ ಮಾಡಿದವನೂ ಆರು ವೇದಾಂಗಗಳನ್ನು ತಿಳಿದವನೂ ಆದ ಬ್ರಾಹ್ಮಣನು ಭೋಜನಕ್ಕೆ ಅರ್ಹನಾಗಿದ್ದಾನೆ. ಮತ್ತು ಪುರೋಹಿತ, ಸೋದರಳಿಯ, ಮಗಳಮಗ, ಅಳಿಯ, ಸೋದರಮಾವ, ತಪಸ್ವಿ ಬ್ರಾಹ್ಮಣ, ಅಗ್ನಿಹೋತ್ರವನ್ನಿಟ್ಟವ, ಶಿಷ್ಯ, ಸಂಬಂಧಿಕ, ತಾಯಿತಂದೆಗಳ ಸೇವೆ ಮಾಡುವವ ಮುಂತಾದವರನ್ನು ಶ್ರಾದ್ಧಕ್ಕೆ ಕೂಡಿಸಬೇಕು.

ಮಿತ್ರ ಘಾತಕನನ್ನೂ, ಕನ್ಯೆಯರನ್ನು ಮಾರುವವರನ್ನು, ಮನೆಮಾರುಗಳಿಗೆ ಬೆಂಕಿ ಹಚ್ಚುವವನ್ನೂ, ಕಳ್ಳನನ್ನೂ, ಚಾಡಿಖೋರರನ್ನೂ, ಹಣ ತೆಗೆದುಕೊಂಡು ಪೌರೋಹಿತ್ಯ ಮಾಡಿಸುವವನನ್ನೂ ಶ್ರಾದ್ಧಕ್ಕೆ ಕೂಡಿಸಬಾರದು. ಅದರಂತೆ ಹಣ ತೆಗೆದುಕೊಂಡು ವೇದಪಾಠ ಹೇಳುವವನನ್ನೂ, ಸೂತಕದಲ್ಲಿ ಅಧ್ಯಯನ ಮಾಡಿಸುವವನನ್ನೂ, ತಾಯ್ತಂದೆಗಳನ್ನು ರಕ್ಷಿಸದಿರುವವನನ್ನೂ, ಶೂದ್ರಸ್ತ್ರೀಯಲ್ಲಿ ಬ್ರಾಹ್ಮಣನಿಂದ ಹುಟ್ಟಿದವನನ್ನೂ, ವಿಧವಾ ವಿವಾಹ ಮಾಡಿಕೊಂಡವನನ್ನೂ, ಮೈ ನೆರೆತ ಕನ್ನೆಯನ್ನು ಮದುವೆ ಮಾಡಿಕೊಂಡವನನ್ನೂ, ದುಡ್ಡು ತೆಗೆದುಕೊಂಡು ಕೂಲಿಯಾಗಿ ದೇವರ ಪೂಜೆ ಮಾಡುವವನನ್ನೂ ಶ್ರಾದ್ಧಕ್ಕೆ ನಿಮಂತ್ರಿಸಬಾರದು. ಶ್ರಾದ್ಧಕ್ಕಿಂತ ಒಂದು ದಿನ ಮುಂಚಿತವಾಗಿಯೇ ಅವರ ಮನೆಗೆ ಹೋಗಿ ಊಟಕ್ಕೆ ಬರಲು ಹೇಳಿ ಬರಬೇಕು. ಹೇಳಿದ ಬ್ರಾಹ್ಮಣರಲ್ಲದೇ ಶ್ರಾದ್ಧಕಾಲದಲ್ಲಿಯೇ ಬಂದ ಬ್ರಾಹ್ಮಣರಿಗೂ ಯತಿಗಳಿಗೂ ಭೋಜನ ಮಾಡಿಸಬೇಕು. ಮನೆಗೆ ಬಂದ ಬ್ರಾಹ್ಮಣರ ಪಾದ ಪ್ರಕ್ಷಾಲನ ಮಾಡಿ ಅವರು ಆಚಮನಮಾಡಿದ ಬಳಿಕ ಪವಿತ್ರವನ್ನು ಇಟ್ಟುಕೊಂಡು ಆಸನದ ಮೇಲೆ ಕೂಡಿಸಿ ಭೋಜನ ಮಾಡಿಸಬೇಕು. ಪಿತೃಸ್ಥಾನಕ್ಕೆ ಒಬ್ಬ ಬ್ರಾಹ್ಮಣನನ್ನೂ, ದೇವಸ್ಥಾನಕ್ಕೆ ಇಬ್ಬರನ್ನೂ ಕೊನೆಗೆ ಎರಡು ಕಡೆಗೂ ಒಬ್ಬೊಬ್ಬ ಬ್ರಾಹ್ಮಣನನ್ನೂ ಕುಳ್ಳರಿಸಬೇಕು. ಭಕ್ತಿಯುಳ್ಳವರು ಮಾತಾಮಹ (ತಾಯಿಯ ತಂದೆ) ಶ್ರಾದ್ಧವನ್ನೂ ವೈಶ್ವದೇವ ಸಹಿತವಾಗಿಯೇ ಮಾಡಬಹುದು.

ವಿಶ್ವೇದೇವತೆಗಳ ಸ್ಥಾನದಲ್ಲಿಯೂ ವಿಷ್ಣುವಿನ ಸ್ಥಾನದಲ್ಲಿಯೂ ಇರುವ ಬ್ರಾಹ್ಮಣರನ್ನು ಪೂರ್ವಾಭಿಮುಖವಾಗಿಯೂ ಪಿತೃಸ್ಥಾನದಲ್ಲಿದ್ದ ಬ್ರಾಹ್ಮಣರನ್ನು ಉತ್ತರಾಭಿಮುಖವಾಗಿಯೂ ಭೋಜನಕ್ಕೆ ಕೂಡಿಸಬೇಕು. ಬ್ರಾಹ್ಮಣರ ಅಪ್ಪಣೆ ಪಡೆದು ಎರಡು ಮಾಡಿದ ದರ್ಭೆಗಳನ್ನು ಬ್ರಾಹ್ಮಣರ ಕೈಯಲ್ಲಿ ಕೊಟ್ಟು ಮಂತ್ರಪೂರ್ವಕವಾಗಿ ಪಿತೃಗಳ ಅವಾಹನೆಯನ್ನು ಮಾಡಬೇಕು. ತಿಲೋದಕದಿಂದ ಅಪಸವ್ಯವಾಗಿ ಅವರಿಗೆ ಅರ್ಘ್ಯಾದಿಗಳನ್ನು ಕೊಡಬೇಕು. ಆ ಕಾಲದಲ್ಲಿ ದಾರಿಹೋಕನಾದ ಬ್ರಾಹ್ಮಣನು ಅನಾಥನಾಗಿ ಹಸಿದು ಬಂದಿದ್ದರೆ ಬ್ರಾಹ್ಮಣರ ಸಮ್ಮತಿಯಿಂದ ಅವನನ್ನೂ ಕರೆದು ಕೂಡಿಸಿ ಊಟ ಮಾಡಿಸಬೇಕು. ಯೋಗಿಗಳು ಗುಪ್ತ ವೇಷದಲ್ಲಿ ಬಗೆ ಬಗೆಯ

ಶ್ರಾದ್ಧ ಮಾಡುವವರಿಗೆ ಮೊದಲು ಶುದ್ಧವಾದ ಮನಸ್ಸಿರಬೇಕು. ಶುದ್ಧವಾದ ಅಂದರೆ ನ್ಯಾಯ ಮಾರ್ಗದಿಂದ ಸಂಪಾದಿಸಿದ ದ್ರವ್ಯವಿರಬೇಕು. ಪ್ರಶಸ್ತಕಾಲ, ಶಾಸ್ತ್ರೋಕ್ತವಿಧಿ, ಪಿತೃಗಳಲ್ಲಿ ಶ್ರದ್ಧೆ, ಯೋಗ್ಯ ಬ್ರಾಹ್ಮಣ. ಇಷ್ಟಿದ್ದರೆ ಪಿತೃಗಳಿಗೆ ತೃಪ್ತಿಯಾಗುವದಲ್ಲದೆ ಅಂಥ ಶ್ರಾದ್ಧ ಮಾಡಿದವರಿಗೆ ಇಷ್ಟಾರ್ಥಗಳೆಲ್ಲವೂ ಸಿದ್ಧಿಸುವುವು. ಸಾಮಾನ್ಯವಾಗಿ ಎಲ್ಲ ಪಿತೃಗಳು ಹಾಡುವ ಹಾಡು ಒಂದೇ ಆಗಿದೆ. ಮನೋರಥ ಒಂದೇ ಆಗಿದೆ. ಪಿತೃಗಳೆಲ್ಲರೂ ತಮ್ಮ ಬಯಕೆಗಳನ್ನು ತೋಡಿಕೊಳ್ಳುವ ಆ ಹಾಡನ್ನು ಹೇಳುತ್ತೇನೇ ಕೇಳು -

''ನಮ್ಮ ವಂಶದಲ್ಲಿ ವಿತ್ತ ಶಾಠ್ಯವನ್ನು ಮಾಡದೇ ಪಿಂಡಪ್ರದಾನ ಮಾಡುವ ಬುದ್ಧಿವಂತನು ಹುಟ್ಟಬಹುದೇ! ಐಶ್ವರ್ಯವಿದ್ದಾಗ ನಮ್ಮನ್ನು ಉದ್ದೇಶಿಸಿ ರತ್ನ, ವಸ್ತ್ರ, ವಾಹನ, ಜಲ, ದ್ರವ್ಯ ಕೊಡತಕ್ಕ ಉದಾರ ಮನುಷ್ಯನು ಯಾವನಾದರೂ ಜನಿಸಬಹುದೇ! ಅಷ್ಟು ಐಶ್ವರ್ಯವಿಲ್ಲದಾಗ ವಿಹಿತವಾದ ಕಾಲದಲ್ಲಿ ಯಥಾಶಕ್ತಿ ಬ್ರಾಹ್ಮಣ ಭೋಜನವನ್ನು ಭಕ್ತಿಯಿಂದ ಮಾಡಿಸುವವನಾದರೂ ಜನಿಸಬಹುದೇ! ಅನ್ನದಾನ ಮಾಡುವ ಶಕ್ತಿ ಇಲ್ಲದಿದ್ದರೆ ಅಡವಿಯಲ್ಲಿ ಬೆಳೆದ ಕಾಯಿಪಲ್ಲೆಯನ್ನು ತಂದು ಕಿಂಚಿದ್ ದಕ್ಷಿಣೆಯೊಂದಿಗೆ ಬ್ರಾಹ್ಮಣರಿಗೆ ದಾನಕೊಡುವ ಸದ್ಬುದ್ಧಿಯುಳ್ಳವನು ಉದಿಸಬಹುದೇ ! ಅಷ್ಟೂ ಶಕ್ತಿ ಇಲ್ಲದಿದ್ದರೆ ಕರಿ ಎಳ್ಳನ್ನು ಒಂದು ಹಿಡಿ ಕೊಟ್ಟು ಕೈಮುಗಿಯುವ, ಇಲ್ಲದಿದ್ದರೆ ಏಳೆಂಟು ಕಾಳು ಎಳ್ಳಿನಿಂದ ಕೂಡಿದ ಒಂದು ಅಂಜಲಿ ತುಂಬ ನೀರನ್ನಾದರೂ ಶಕ್ತಿಯಿಂದ ಪಿತೃಗಳಿಗೆ ಕೊಡುವವನು ಉತ್ಪನ್ನವಾಗಬಹುದೇ!

ಏಳೆಂಟು ಕಾಳು ಎಳ್ಳೂ ಇಲ್ಲದ ಪರಿಸ್ಥಿತಿ ಇದ್ದರೆ ಒಂದು ಆಕಳಿಗೆ ಒಂದು ದಿನ ಹೊಟ್ಟೆಗೆ ಸಾಕಾಗುವಷ್ಟು ಹುಲ್ಲು ಕೊಟ್ಟು ಏನನ್ನಾದರೂ ತಂದಿಟ್ಟು ಒಂದು ಹಸುವಿಗೆ ಪಿತೃಗಳ ಉದ್ದೇಶದಿಂದ ತಿನ್ನಿಸುವವನು ಎಂದಾದರೂ ಜನಿಸಬಹುದೇ! ಇದು ಯಾವದೂ ಇಲ್ಲದಿದ್ದರೆ ಅರಣ್ಯಕ್ಕೆ ಹೋಗಿ ಎರಡೂ ತೋಳುಗಳನ್ನು ಮೇಲಕ್ಕೆತ್ತಿ ಸೂರ್ಯನೇ ಮೊದಲಾದ ಲೋಕಪಾಲಕರನ್ನು ಕುರಿತು ''ಪಿತೃಗಳ ಶ್ರಾದ್ಧಕ್ಕೆ ಬೇಕಾಗುವ ದ್ರವ್ಯ ಮತ್ತು ಉಳಿದಾವ ಸಾಧನ ಸಾಮಗ್ರಿ ಒಂದೂ ನನ್ನ ಬಳಿಗೆ ಇಲ್ಲ. ಅದಕ್ಕಾಗಿ ನಾನು ಈಗ ಬಗಲೆತ್ತಿ ನಿಂತಿದ್ದೇನೆ. ಎರಡೂ ತೋಳುಗಳನ್ನು ಮುಗಿಲಿನಲ್ಲಿ ಮೇಲೆ ಮಾಡಿ ನಮಸ್ಕಾರ ಮಾಡುತ್ತೇನೆ. ನನ್ನ ಭಕ್ತಿಯಿಂದಲೇ ಪಿತೃಗಳೆಲ್ಲರೂ ತೃಪ್ತರಾಗಲಿ '' ಎಂದು ಗಟ್ಟಿಯಾಗಿ ಹೇಳುವ ವಿವೇಕಿಯು ನಮ್ಮ ಕುಲದಲ್ಲಿ ಹುಟ್ಟಬಹುದೇ ! ಅಂತೂ ಯಾವ ಕಾಲಕ್ಕೂ ಪಿತೃಶ್ರಾದ್ಧ ಮಾಡುವದನ್ನು ಬಿಡಬಾರದು. ಎಂಥ ಬಡತನ ಮತ್ತು ವಿಷಮ ಪರಿಸ್ಥಿತಿಯಲ್ಲಿ ಇದ್ದವರಿಗೂ ಮಾಡಲು ಅನುಕೂಲವಾಗು ಎಂದು ಶ್ರಾದ್ಧ ಮಾಡುವ ಅನೇಕ ಕಲ್ಪ ವಿಧಾನಗಳನ್ನು ಪಿತೃಗಳು ಈ ಪಿತೃಗೀತೆಯಲ್ಲಿ ಹೇಳಿದ್ದಾರೆ. ತನ್ನ ಪರಿಸ್ಥಿತಿಗೆ ಅನುಸಾರವಾಗಿ ನಿರ್ವಂಚನ ಬುದ್ಧಿಯಿಂದ ಮೇಲೆ ಹೇಳಿದ ಯಾವ ವಿಧಾನವನ್ನಾದರೂ ಭಕ್ತಿಯಿಂದ ಅನುಸರಿಸಿದರೆ ಶ್ರಾದ್ಧ ಮಾಡಿದಂತೆಯೇ ಆಗುತ್ತದೆ.

*ವರಾಹ ಮಹಾಪುರಾಣದಲ್ಲಿ ಹದಿಮೂರನೇ ಅಧ್ಯಾಯ ಮುಗಿದುದು*

—o—

## ಶ್ರಾದ್ಧ ವಿಧಿ

## ಅಧ್ಯಾಯ - ೧೪

**ಮಾರ್ಕಂಡೇಯ :-** ಮಹರ್ಷಿ, ಪೂರ್ವದಲ್ಲಿ ಬ್ರಹ್ಮಪುತ್ರನೂ ಒಳ್ಳೇ ಬುದ್ಧಿವಂತನೂ ಆದ ಸನಕಮುನಿಯ ಸಹೋದರನು ನನಗೆ ಈ ವಿಚಾರವನ್ನು ತಿಳಿಸಿದನು. ಶ್ರಾದ್ಧದಲ್ಲಿ ಋಗ್ವೇದ ಯಜುರ್ವೇದ ಸಾಮವೇದಗಳ ತ್ರಿಸುಪರ್ಣ ತ್ರಿಣಾಚಿಕೇತ, ತ್ರಿಮಧು ಮುಂತಾದ ಮಂತ್ರ ಭಾಗಗಳನ್ನು ಅಧ್ಯಯನ ಮಾಡಿದವನೂ ಆರು ವೇದಾಂಗಗಳನ್ನು ತಿಳಿದವನೂ ಆದ ಬ್ರಾಹ್ಮಣನು ಭೋಜನಕ್ಕೆ ಅರ್ಹನಾಗಿದ್ದಾನೆ. ಮತ್ತು ಪುರೋಹಿತ, ಸೋದರಳಿಯ, ಮಗಳಮಗ, ಅಳಿಯ, ಸೋದರಮಾವ, ತಪಸ್ವಿ ಬ್ರಾಹ್ಮಣ, ಅಗ್ನಿಹೋತ್ರವನ್ನಿಟ್ಟವ, ಶಿಷ್ಯ, ಸಂಬಂಧಿಕ, ತಾಯಿತಂದೆಗಳ ಸೇವೆ ಮಾಡುವವ ಮುಂತಾದವರನ್ನು ಶ್ರಾದ್ಧಕ್ಕೆ ಕೂಡಿಸಬೇಕು.

ಮಿತ್ರ ಘಾತಕನನ್ನೂ, ಕನ್ಯೆಯರನ್ನು ಮಾರುವವರನ್ನು, ಮನೆಮಾರುಗಳಿಗೆ ಬೆಂಕಿ ಹಚ್ಚುವವನ್ನೂ, ಕಳ್ಳನನ್ನೂ, ಚಾಡಿಖೋರರನ್ನೂ, ಹಣ ತೆಗೆದುಕೊಂಡು ಪೌರೋಹಿತ್ಯ ಮಾಡಿಸುವವನನ್ನೂ ಶ್ರಾದ್ಧಕ್ಕೆ ಕೂಡಿಸಬಾರದು. ಅದರಂತೆ ಹಣ ತೆಗೆದುಕೊಂಡು ವೇದಪಾಠ ಹೇಳುವವನನ್ನೂ, ಸೂತಕದಲ್ಲಿ ಅಧ್ಯಯನ ಮಾಡಿಸುವವನನ್ನೂ, ತಾಯ್ತಂದೆಗಳನ್ನು ರಕ್ಷಿಸದಿರುವವನನ್ನೂ, ಶೂದ್ರಸ್ತ್ರೀಯಲ್ಲಿ ಬ್ರಾಹ್ಮಣನಿಂದ ಹುಟ್ಟಿದವನನ್ನೂ, ವಿಧವಾ ವಿವಾಹ ಮಾಡಿಕೊಂಡವನನ್ನೂ, ಮೈ ನೆರೆತ ಕನ್ನೆಯನ್ನು ಮದುವೆ ಮಾಡಿಕೊಂಡವನನ್ನೂ, ದುಡ್ಡು ತೆಗೆದುಕೊಂಡು ಕೂಲಿಯಾಗಿ ದೇವರ ಪೂಜೆ ಮಾಡುವವನನ್ನೂ ಶ್ರಾದ್ಧಕ್ಕೆ ನಿಮಂತ್ರಿಸಬಾರದು. ಶ್ರಾದ್ಧಕ್ಕಿಂತ ಒಂದು ದಿನ ಮುಂಚಿತವಾಗಿಯೇ ಅವರ ಮನೆಗೆ ಹೋಗಿ ಊಟಕ್ಕೆ ಬರಲು ಹೇಳಿ ಬರಬೇಕು. ಹೇಳಿದ ಬ್ರಾಹ್ಮಣರಲ್ಲದೇ ಶ್ರಾದ್ಧಕಾಲದಲ್ಲಿಯೇ ಬಂದ ಬ್ರಾಹ್ಮಣರಿಗೂ ಯತಿಗಳಿಗೂ ಭೋಜನ ಮಾಡಿಸಬೇಕು. ಮನೆಗೆ ಬಂದ ಬ್ರಾಹ್ಮಣರ ಪಾದ ಪ್ರಕ್ಷಾಲನ ಮಾಡಿ ಅವರು ಆಚಮನಮಾಡಿದ ಬಳಿಕ ಪವಿತ್ರವನ್ನು ಇಟ್ಟುಕೊಂಡು ಆಸನದ ಮೇಲೆ ಕೂಡಿಸಿ ಭೋಜನ ಮಾಡಿಸಬೇಕು. ಪಿತೃಸ್ಥಾನಕ್ಕೆ ಒಬ್ಬ ಬ್ರಾಹ್ಮಣನನ್ನೂ, ದೇವಸ್ಥಾನಕ್ಕೆ ಇಬ್ಬರನ್ನೂ ಕೊನೆಗೆ ಎರಡು ಕಡೆಗೂ ಒಬ್ಬೊಬ್ಬ ಬ್ರಾಹ್ಮಣನನ್ನೂ ಕುಳ್ಳರಿಸಬೇಕು. ಭಕ್ತಿಯುಳ್ಳವರು ಮಾತಾಮಹ (ತಾಯಿಯ ತಂದೆ) ಶ್ರಾದ್ಧವನ್ನೂ ವೈಶ್ವದೇವ ಸಹಿತವಾಗಿಯೇ ಮಾಡಬಹುದು.

ವಿಶ್ವೇದೇವತೆಗಳ ಸ್ಥಾನದಲ್ಲಿಯೂ ವಿಷ್ಣುವಿನ ಸ್ಥಾನದಲ್ಲಿಯೂ ಇರುವ ಬ್ರಾಹ್ಮಣರನ್ನು ಪೂರ್ವಾಭಿಮುಖವಾಗಿಯೂ ಪಿತೃಸ್ಥಾನದಲ್ಲಿದ್ದ ಬ್ರಾಹ್ಮಣರನ್ನು ಉತ್ತರಾಭಿಮುಖವಾಗಿಯೂ ಭೋಜನಕ್ಕೆ ಕೂಡಿಸಬೇಕು. ಬ್ರಾಹ್ಮಣರ ಅಪ್ಪಣೆ ಪಡೆದು ಎರಡು ಮಾಡಿದ ದರ್ಭೆಗಳನ್ನು ಬ್ರಾಹ್ಮಣರ ಕೈಯಲ್ಲಿ ಕೊಟ್ಟು ಮಂತ್ರಪೂರ್ವಕವಾಗಿ ಪಿತೃಗಳ ಆವಾಹನೆಯನ್ನು ಮಾಡಬೇಕು. ತಿಲೋದಕದಿಂದ ಅಪಸವ್ಯವಾಗಿ ಅವರಿಗೆ ಅರ್ಘ್ಯಾದಿಗಳನ್ನು ಕೊಡಬೇಕು. ಆ ಕಾಲದಲ್ಲಿ ದಾರಿಹೋಕನಾದ ಬ್ರಾಹ್ಮಣನು ಅನಾಥನಾಗಿ ಹಸಿದು ಬಂದಿದ್ದರೆ ಬ್ರಾಹ್ಮಣರ ಸಮ್ಮತಿಯಿಂದ ಅವನನ್ನೂ ಕರೆದು ಕೂಡಿಸಿ ಊಟ ಮಾಡಿಸಬೇಕು. ಯೋಗಿಗಳು ಗುಪ್ತ ವೇಷದಲ್ಲಿ ಬಗೆ ಬಗೆಯ

ರೂಪಗಳಿಂದ ಈ ಲೋಕದಲ್ಲಿ ಸಂಚರಿಸುತ್ತಿರುವರು. ಯಾರ ಯೋಗ್ಯತೆ ಏನೆಂದು ಗೊತ್ತಾಗುವುದಿಲ್ಲ. ಆದುದರಿಂದ ಶ್ರಾದ್ಧ ಕಾಲದಲ್ಲಿ ಬಂದ ಅತಿಥಿಗಳನ್ನು ಆದರಿಂದ ಪೂಜಿಸಬೇಕು. ಅತಿಥಿಗೆ ಸತ್ಕಾರ ಮಾಡದೇ ಇದ್ದರೆ ಶ್ರಾದ್ಧವೇ ನಿಷ್ಫಲವಾಗಿ ಬಿಡುವದು.

## ಅಥ ಹೋಮ ವಿಧಿಃ

ಶ್ರಾದ್ಧಕ್ಕೆ ಆಮಂತ್ರಿತರಾದ ಬ್ರಾಹ್ಮಣರ ಅನುಜ್ಞೆಯನ್ನು ಪಡೆದು ಉಪ್ಪು, ಕಾರ, ವ್ಯಂಜನ ವಸ್ತುಗಳಿಂದ ಮಿಶ್ರಿತವಾಗದ ಅನ್ನವನ್ನು ಮೂರಾವರ್ತಿ ಅಗ್ನಿಯಲ್ಲಿ ಹೋಮ ಮಾಡಬೇಕು. ''ಅಗ್ನಯೇ ಕವ್ಯವಾಹನಾಯ ಸ್ವಾಹಾ '' ಎಂದು ಮಂತ್ರ ಹೇಳಿ ಮೊದಲನೆಯ ಆಹುತಿಯನ್ನೂ ''ಸೋಮಾಯ ಪಿತೃಮತೇ ಸ್ವಾಹಾ '' ಎಂದು ಎರಡನೇ ಆಹುತಿಯನ್ನೂ ''ವೈವಸ್ವತೇ ಯಮಾಯ ಸ್ವಾಹಾ '' ಎಂದು ಮೂರನೇ ಆಹುತಿಯನ್ನೂ ಕೊಡಬೇಕು.

## ಅನಂತರ ಬೋಜನ

ಅನಂತರ ರುಚಿಕರವಾದ ಸಿದ್ಧ ಪಡಿಸಿದ ಮೃಷ್ಟಾನ್ನವನ್ನು ಸಮೃದ್ಧವಾಗಿ ಎಲೆಯಲ್ಲಿ ಬಡಿಸಿ ''ತಮ್ಮ ಇಚ್ಛೆಯಂತೆ ಊಟ ಮಾಡಬೇಕು'' ಎಂದು ವಿನಯದಿಂದ ಮೃದುಮಧುರವಾಗಿ ಬಿನ್ನಹ ಮಾಡಿಕೊಳ್ಳಬೇಕು. ಬ್ರಾಹ್ಮಣರಾದರೂ ಮೌನವಾಗಿ ಸಾವಕಾಶವಾಗಿ ಭೋಜನ ಮಾಡಬೇಕು. ಶ್ರಾದ್ಧ ಮಾಡುವವನೂ ಕೂಡ ಬ್ರಾಹ್ಮಣರಿಗೆ ಬೇಕಾಗುವ ಭಕ್ಷಭೋಜ್ಯಗಳನ್ನು ಯಥೇಚ್ಛವಾಗಿ ಮಾಡಿಸಿ ಸಿಟ್ಟು ಸೆಡವು ಮಾಡದೇ ಭಕ್ತಿಯಿಂದ ಬಡಿಸಬೇಕು. ಅಭಿಶ್ರವಣ, ರಕ್ಷೋಘ್ನ ಮಂತ್ರವನ್ನು ಹೇಳಿ ನೆಲದ ಮೇಲೆ ಎಳ್ಳನ್ನು ಹರಡಿ ಬ್ರಾಹ್ಮಣರಿಗೆ ತುಪ್ಪವನ್ನು ಕುಡಿಯಲಿಕ್ಕೆ ಹಾಕಬೇಕು.

''ಹೋಮ ಮೂರ್ತಿಯ ಅಧಿಷ್ಠಾನ ಭೂತರಾದ ನನ್ನ ತಂದೆ, ತಾತ, ಮುತ್ತಾತರು ತೃಪ್ತರಾಗಲಿ, ಈ ಬ್ರಾಹ್ಮಣ ದೇಹದಲ್ಲಿ ಸನ್ನಿಹಿತರಾದ ನನ್ನ ಪಿತ ಪಿತಾಮಹ ಪ್ರಪಿತಾಮಹರು ತೃಪ್ತರಾಗಲಿ. ನನ್ನ ಈ ಪಿಂಡದಾನದಿಂದ ನನ್ನ ಪಿತೃಗಳೂ ಮತ್ತು ನನ್ನ ತಾಯಿಯ ತಂದೆ, ತಾತ, ಮುತ್ತಾತರೂ ತೃಪ್ತಿಯನ್ನು ಪಡೆಯಲಿ, ವಿಶ್ವದೇವತೆಗಳೂ ತೃಪ್ತರಾಗಲಿ, ಅಸುರರು ನಾಶ ಹೊಂದಲಿ.

ಯಜ್ಞದ ಆಹುತಿಯನ್ನೆಲ್ಲ ವೈಯ್ಯುವ ಯಜ್ಞ ಭೋಕ್ತೃವಾದ ಅಗ್ನ್ಯಂತರ್ಗತ ನಾರಾಯಣನು ಇಲ್ಲಿ ಈಗ ಇರುತ್ತಾನೆ. ಅವನ ಸನ್ನಿಧಾನದಿಂದ ಸರ್ವ ರಾಕ್ಷಸರೂ ಅಸುರರೂ ಕೂಡಲೇ ಹೊರಟು ಹೋಗಲಿ '' ಎಂದು ಪ್ರಾರ್ಥಿಸಬೇಕು. ಬ್ರಾಹ್ಮಣರು ಭೋಜನದಿಂದ ತೃಪ್ತಿ ಪಟ್ಟ ಬಳಿಕ ಎಲೆಯ ಮುಂದುಗಡೆ ನೆಲದ ಮೇಲೆ ತುಸು ಅನ್ನವನ್ನು ಉದುರಿಸಬೇಕು. ಆ ವಿಕಿರಾನ್ನವನ್ನು ಪಡೆದವರಿಗೆ ಅಚಮನಕ್ಕಾಗಿ ಒಂದೊಂದು ಸಲ ತುಸು ನೀರನ್ನು ಕೊಡಬೇಕು. ಬ್ರಾಹ್ಮಣರು ತೃಪ್ತರಾದ ಬಳಿಕ ಅವರ ಅಪ್ಪಣೆ ಪಡೆದು ಶ್ರಾದ್ಧ ಮಾಡುವವನು ಎಲ್ಲ ಅನ್ನವನ್ನೂ ಕೂಡಿಸಿ ನೀರು ಹಾಕಿ ಪಿಂಡಗಳನ್ನು ಮಾಡಿ ಸರಿಯಾಗಿ ಕೈಯಲ್ಲಿ ಹಿಡಿದುಕೊಂಡು ನೆಲದ ಮೇಲೆ ದರ್ಭೆಯ ಮೇಲೆ ಪಿತೃತೀರ್ಥದಿಂದಲೇ ಎಳ್ಳು ಸಹಿತ ಜಲಾಂಜಲಿಯನ್ನು ಕೊಡಬೇಕು. ಮಾತಾಮಹರಿಗೂ ಅದೇ ಪಿತೃತೀರ್ಥದಿಂದಲೇ ಪಿಂಡಗಳನ್ನು ಕೊಡಬೇಕು. ಅನಂತರ ಆ ಪಿಂಡಗಳನ್ನು ತೀರ್ಥಗಳಲ್ಲಿ ಹಾಕಬೇಕು.

ಆನಂತರ ಆ ಉಚ್ಛಿಷ್ಟದ ಸಮೀಪದಲ್ಲಿಯೇ ದಕ್ಷಿಣಾಭಿಮುಖವಾದ ದರ್ಭೆಗಳ ಮೇಲೆ ಪುಷ್ಪ, ಧೂಪಗಳಿಂದ ಅರ್ಚನೆಮಾಡಿ ತಂದೆಗೆ ಮೊದಲು ಪಿಂಡವನ್ನು ಕೊಡಬೇಕು. ಅನಂತರ ಅಜ್ಜನಿಗೂ, ಆಮೇಲೆ ಮುತ್ತಜ್ಜನಿಗೂ ಪಿಂಡಗಳನ್ನು ಇಡಬೇಕು. ಆ ದರ್ಭೆಗಳ ಬುಡದಲ್ಲಿ ಲೇಪ ಭೋಜಿಗಳಿಗಾಗಿ ಲೇಪ ಕಾರ್ಯವನ್ನು ಮಾಡಬೇಕು.

ಗಂಧ ಮಾಲಾದಿಗಳಿಂದ ಸಹಿತವಾದ ಪಿಂಡಗಳಿಂದ ಮಾತಾಮಹರಿಗೂ ಅರ್ಪಣ ತರ್ಪಣಾಧಿಗಳನ್ನು ಮಾಡಿ ಪೂಜಿಸಿ ಬ್ರಾಹ್ಮಣರಿಗೆ ಉತ್ತರಾಚಮನವನ್ನು ಕೊಡಬೇಕು. ಶ್ರಾದ್ಧಕರ್ತನು ಪಿತೃಗಳಲ್ಲಿ ವಿಶೇಷವಾಗಿ ಭಕ್ತಿಯನ್ನು ಇಟ್ಟು ತನ್ನ ಶಕ್ತಿ ಇರುವಷ್ಟು ದಕ್ಷಿಣೆಗಳನ್ನು ಕೊಡಬೇಕು. ಅವರಿಂದ ಸ್ವಸ್ತಿ ಮಂತ್ರವನ್ನು ಹೇಳಿಸಿ ಆಶೀರ್ವಾದ ಪಡೆಯಬೇಕು. ವಿಶ್ವೇದೇವತೆಗಳಿಗೂ ದಕ್ಷಿಣೆಯನ್ನು ಕೊಟ್ಟು ''ವಿಶ್ವೇ ದೇವತೆಗಳು ಪ್ರೀತರಾಗಲಿ'' ಎಂದು ಪ್ರಾರ್ಥಿಸಬೇಕು. ಆ ಬ್ರಾಹ್ಮಣರು 'ತಥಾಸ್ತು' ಎಂದು ಹೇಳಿದ ಬಳಿಕ ಅವರಿಂದ ಆಶೀರ್ವಾದವನ್ನು ಪಡೆದುಕೊಳ್ಳಬೇಕು. ಆನಂತರ ಮೊದಲು ಪಿತೃಗಳನ್ನೂ ಅನಂತರ ದೇವತೆಗಳನ್ನೂ ವಿಸರ್ಜಿಸಬೇಕು. ಮಾತಾಮಹರಿಗೂ ಇದೇ ಕ್ರಮವಾಗಿ ದೇವತೆಗಳೊಡನೆ ಭೋಜನ, ತನ್ನ ಶಕ್ತ್ಯಾನುಸಾರ ದಕ್ಷಿಣೆ, ವಿಸರ್ಜನೆ ಮುಂತಾದವುಗಳನ್ನು ಮಾಡಬೇಕು. ಅನಂತರ ಅಭ್ಯರ್ಥಿ ಬ್ರಾಹ್ಮಣರನ್ನು ಸನ್ಮಾನಿಸಿ ಬಾಗಿಲವರೆಗೂ ಕಳಿಸಿ ತಾನು ಮನೆಯೊಳಗೆ ಹಿಂದಿರುಗಬೇಕು.

ಶ್ರಾದ್ಧವಾದ ಬಳಿಕ ನಿತ್ಯ ಕರ್ಮವಾದ ವೈಶ್ವದೇವನನ್ನು ಮಾಡಬೇಕು. ಅನಂತರ ತನ್ನ ಹಿರಿಯ ಮತ್ತು ಕಿರಿಯ ಬಂಧು-ಬಳಗದವರೊಡನೆ ಕೂಡಿಕೊಂಡು ತಾನೂ ಭೋಜನವನ್ನು ಮಾಡಬೇಕು. ವಿವೇಕಿಯಾದ ಮನುಷ್ಯನು ಪಿತೃಗಳ ಮತ್ತು ಮಾತಾಮಹರ ಶ್ರಾದ್ಧವನ್ನೂ ಮಾಡಬೇಕು. ಅದರಿಂದ ಸಂತುಷ್ಟರಾದ ಅವರು ತಮ್ಮ ಸಂತತಿಯವರ ಎಲ್ಲ ಇಷ್ಟಾರ್ಥಗಳನ್ನೂ ಪೂರೈಸುವರು.

ಶ್ರಾದ್ಧದಲ್ಲಿ ಮಗಳ ಮಗ, ಕುತುಪ ಕಾಲ ಮತ್ತು ಎಳ್ಳು ಈ ಮೂರು ಅತ್ಯಂತ ಪವಿತ್ರವಾಗಿರುತ್ತವೆ. ಮತ್ತು ಬೆಳ್ಳಿಯ ದಾನ ಮತ್ತು ಶಾಸ್ತ್ರಾನುವಾದಗಳು ಮುಖ್ಯವಾಗಿರುತ್ತವೆ. ಶ್ರಾದ್ಧ ಮಾಡುವವನು ಶ್ರಾದ್ಧ ಕಾಲದಲ್ಲಿ ಈ ಮೂರನ್ನೂ ಬಿಟ್ಟುಬಿಡಬೇಕು. ಸಿಟ್ಟು, ಅವಸರ ಮತ್ತು ಊಟಕ್ಕೆ ಕುಳಿತ ಬ್ರಾಹ್ಮಣರನ್ನು ದಾಟಿ ಹೋಗುವದು. ಈ ಮೂರನ್ನೂ ಖಂಡಿತವಾಗಿಯೂ ಮಾಡಬಾರದು.

ಪಿತೃಗಣವು ಚಂದ್ರನನ್ನು ಆಶ್ರಯಿಸುವುದು. ಚಂದ್ರನು ಯೋಗಾ ಧಾರನಾಗಿರುವನು. ಆದುದರಿಂದ ಯೋಗದಿಂದ ಕೂಡಿದ ಶ್ರಾದ್ಧವು ಪ್ರಶಸ್ತ ವಾಗಿರುತ್ತದೆ. ಸಾವಿರ ಬ್ರಾಹ್ಮಣರಲ್ಲಿ ಒಬ್ಬ ಜ್ಞಾನಯೋಗಿ, ಕರ್ಮಯೋಗಿ, ಭಕ್ತಿಯೋಗಿ ಮನುಷ್ಯನು ಇದ್ದರೆ ಭೋಜನಕ್ಕೆ ಬಂದ ಬ್ರಾಹ್ಮಣರನ್ನೂ ಶ್ರಾದ್ಧ ಮಾಡಿದ ಯಜಮಾನನನ್ನೂ ಎಲ್ಲರನ್ನೂ ಕೂಡಿಯೇ ಉದ್ಧಾರ ಮಾಡುತ್ತಾನೆ. ಈ ಪಿತೃಕಾರ್ಯವು ಸಾಮಾನ್ಯವಾಗಿ ಎಲ್ಲ ಪುರಾಣಗಳಲ್ಲಿಯೂ ಇದೇ ರೀತಿಯಾಗಿ ಹೇಳಲ್ಪಟ್ಟಿದೆ. ಈ ರೀತಿಯಲ್ಲಿ ಈ ಕರ್ಮಕಾಂಡವನ್ನು ತಿಳಿದು ಮಾಡಿದರೆ ಮನುಷ್ಯನು ಸಂಸಾರ ಬಂಧನದಿಂದಲೇ ಬಿಡುಗಡೆಯನ್ನು ಹೊಂದುತ್ತಾನೆ.

ಒಳ್ಳೇ ವ್ರತಗಳನ್ನು ಮಾಡುವ ಋಷಿಗಳು ಗುರುಮುಖದಿಂದ ಈ ಪಿತೃಕಾರ್ಯವನ್ನು ತಿಳಿದು ಅದರಂತೆ ಅನುಷ್ಠಾನವನ್ನು ಮಾಡಿ ಮೋಕ್ಷವನ್ನು ಹೊಂದಿದ್ದಾರೆ. ನೀನು ಕೂಡ ಅದರಂತೆ ಮಾಡು. ಭಕ್ತಿಯಿಂದ ಕೇಳಿದ ನಿನಗೆ ನಾನು ಇದನ್ನು ಹೇಳಿದ್ದೇನೆ. ಪಿತೃಗಳನ್ನು ಪೂಜಿಸಿ ಯಾರು ಹರಿಯ ಧ್ಯಾನವನ್ನು ಮಾಡುವರೋ ಅವರಿಗೆ ಹೆಚ್ಚಿನ ಕರ್ತವ್ಯ ಏನಿದೆ ಜಗತ್ತಿನಲ್ಲಿ ! ಪಿತೃಕಾರ್ಯ ಮತ್ತು ಹರಿಭಕ್ತಿ ಇವೆರಡಕ್ಕಿಂತ ಕರ್ತವ್ಯ ಕರ್ಮವು ಶ್ರೇಷ್ಠವಾದದ್ದು ಬೇರೆ ಇಲ್ಲ ಎಂಬುದು ನಿಶ್ಚಯ.

*ವರಾಹ ಪುರಾಣದಲ್ಲಿ ಹದಿನಾಲ್ಕನೇ ಅಧ್ಯಾಯ ಮುಗಿದುದು.*



## ಹರಿಯ ಹತ್ತು ಅವತಾರಗಳ ಬಣ್ಣನೆಯಿಂದ ಗೌರಮುಖಮುನಿಗೆ ಮುಕ್ತಿ

**ಅಧ್ಯಾಯ - ೧೫**

**ಧರಣೀ :-** ಮಾರ್ಕಂಡೇಯ ಮಹರ್ಷಿಗಳ ಮುಖದಿಂದ ಈ ರೀತಿಯಾಗಿ ಶ್ರಾದ್ಧವಿಧಿಯನ್ನು ಕೇಳಿ ಗೌರಮುಖ ಮುನಿಯು ಏನು ಮಾಡಿದನು ?

**ವರಾಹ :-** ಮಾರ್ಕಂಡೇಯ ಮಹಾಮುನಿಗಳಿಂದ ಪಿತೃತಂತ್ರ ಎಂದು ಕರೆಯಿಸಿಕೊಳ್ಳಲ್ಪಡುವ ಶ್ರಾದ್ಧವಿಧಿಯನ್ನು ಭಕ್ತಿಯಿಂದ ಕೇಳಿದ್ದರ ಫಲವಾಗಿ ಗೌರಮುಖ ಮುನಿಗೆ ತನ್ನ ಹಿಂದಿನ ನೂರು ಜನ್ಮಗಳ ನೆನಪು ಮರುಕಳಿಸಿತು. ಅವನ ಹಿಂದಿನ ಭೂತ ಕಾಲದ ಚಿತ್ರವೆಲ್ಲ ಕಣ್ಣೆದುರು ಕಟ್ಟಿದಂತಾಯಿತು.

**ಧರಣೀ :-** ಪೂಜ್ಯರೇ, ಪೂರ್ವಜನ್ಮದಲ್ಲಿ ಆ ಗೌರಮುಖನು ಏನಿದ್ದ? ಏನಾಗಿದ್ದ. ಅದೆಲ್ಲವನ್ನೂ ಹೇಗೆ ಸ್ಮರಿಸಿದ ? ಸ್ಮರಿಸಿ ಏನು ಮಾಡಿದ ? ಅರುಹಬೇಕು.

**ಶ್ರೀ ವರಾಹ :-** ಹಿಂದಿನ ಜನ್ಮದಲ್ಲಿ ಆ ಗೌರಮುಖ ಬ್ರಾಹ್ಮಣನು ಸಾಕ್ಷಾದ್ ಭೃಗುಋಷಿಯೇ ಆಗಿದ್ದನು. ಈ ಮಾರ್ಕಂಡೇಯ ಮಹರ್ಷಿಯು ಅದೇ ಭೃಗು ವಂಶದಲ್ಲಿ ಹುಟ್ಟಿದ ಮಹಾಮುನಿ. ಹಿಂದೆ ಬ್ರಹ್ಮದೇವರು ಈ ಭೃಗುವೇ ಮೊದಲಾದ ಏಳು ಜನ ಮಾನಸಪುತ್ರರಿಗೆ ನೀವು ಮಕ್ಕಳಿಂದ ಬುದ್ಧಿ ಕಲಿತು ಸದ್ಗತಿಯನ್ನು ಪಡೆಯುವಿರಿ ಎಂದು ಹೇಳಿದ ಮಾತನ್ನು ಮಾರ್ಕಂಡೇಯನು ಅವರಿಗೆ ನೆನಪಿಗೆ ತಂದು ಕೊಟ್ಟನು. ಅದರಿಂದ ಆ ಗೌರಮುಖ ತಾಪಸನಿಗೆ ಪೂರ್ವಜನ್ಮಗಳೆಲ್ಲವುಗಳ ಸ್ಮರಣೆ ಬಂದಿತು. ಅದರಿಂದ ವಿವೇಕೋದಯವಾಗಿ ಆ ಗೌರಮುಖ ಋಷಿಯು ಹನ್ನೆರಡು ವರ್ಷಗಳ ಕಾಲ ವಿಧಿಪೂರ್ವಕವಾಗಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧವನ್ನು ಮಾಡಿ ಶ್ರೀಹರಿಯ ಸ್ತೋತ್ರವನ್ನು ಮಾಡಲು ಮೊದಲು ಮಾಡಿದನು. ಮೂರು ಲೋಕಗಳಲ್ಲಿಯೇ ಪ್ರಸಿದ್ಧವಾದ ಪ್ರಭಾಸ ಎಂಬ ತೀರ್ಥಕ್ಕೆ ಹೋಗಿ ಅಲ್ಲಿ ದೈತ್ಯರನ್ನು ಧ್ವಂಸ ಮಾಡತಕ್ಕ ದುಷ್ಟರನ್ನು ದಮನ ಗೈಯ್ಯುವ ಶ್ರೀಹರಿಯನ್ನು ಭಕ್ತಿಯಿಂದ ಸ್ತೋತ್ರ ಮಾಡತೊಡಗಿದನು. ಗೌರಮುಖನು ಹೇಳಿದ ದಶವತಾರ ಸ್ತೋತ್ರ

# ದಶಾವತಾರ ಸ್ತೋತ್ರಂ

ಗೌರಮುಖ ಉವಾಚ :

ಸ್ತೋಷ್ಯೇ ಮಹೇಂದ್ರಂ ರಿಪುದರ್ಪಹಂ ಶಿವಂ
ನಾರಾಯಣಂ ಬ್ರಹ್ಮವಿದಾಂ ವರಿಷ್ಠಂ ॥
ಆದಿತ್ಯ ಚಂದ್ರಾಶ್ವಯುಗಸ್ಥಮಾದ್ಯಂ
ಪುರಾತನಂ ದೈತ್ಯಹರಂ ಸದಾಹರಿಂ ॥೯॥

ನಿರತಿಶಯವಾದ ಐಶ್ವರ್ಯವುಳ್ಳನಾದುದರಿಂದ ಮಹೇಂದ್ರ ಶಬ್ದವಾಚ್ಯನೂ, ಶತ್ರುದರ್ಪವನ್ನು ಮುರಿಯುವವನೂ, ಸರ್ವಮಂಗಳಕನಾದುದರಿಂದ ಶಿವನೂ, ಬ್ರಹ್ಮಜ್ಞಾನಿಗಳೊಡೆಯನೂ, ಸೂರ್ಯ ಚಂದ್ರ ಅಶ್ವಿನೀ ದೇವತೆಗಳಲ್ಲಿರುವವನೂ, ಆದಿಭೂತನೂ, ಪುರಾತನನೂ, ರಾಕ್ಷಸನಾಶಕನೂ ಆದ ಹರಿನಾರಾಯಣನನ್ನು ಯಾವಾಗಲೂ ಸ್ತುತಿಸುತ್ತೇನೆ. ॥೯॥

ಚಕಾರ ಮಾತ್ಸ್ಯಂ ವಪುರಾತ್ಮನೋ ಯಃ
ಪುರಾತನಂ ವೇದ - ವಿನಾಶಕಾಲೇ
ಮಹಾ - ಮಹೀಭೃದ್ವಪುರಗ್ರಪುಚ್ಛ-
ಚ್ಛಟಾಹವಾರ್ಚಿಃ ಸುರಶತ್ರುಹಾದ್ಯಃ ॥೧೦॥

ತಥಾಬ್ಧಿ - ಮಂಥಾನಕೃತೇ ಗಿರೀಂದ್ರಂ
ದಧಾರ ಯಃ ಕೂರ್ಮವಪುಃ ಪುರಾಣಂ
ಹಿತೇಚ್ಛಯಾಪ್ತಃ ಪುರುಷಃ ಪುರಾಣಃ
ಪ್ರಪಾತು ಮಾಂ ದೈತ್ಯಹರಃ ಸುರೇಶಃ ॥೧೧॥

ಪ್ರಪಂಚಕ್ಕೆ ಮೂಲನೂ, ಅಸುರ ಸಂಹಾರಕನೂ ಆದ ಯಾವ ಶ್ರೀಹರಿಯು ವೇದಗಳು ಕಳೆದು ಹೋದಾಗ ಮಹಾಪರ್ವತಾಕಾರವೂ, ಬಾಲದ ತುದಿಯ ಹೊಡೆತದಿಂದ ಯುದ್ಧಾಗ್ನಿಯ ಜ್ವಾಲೆಯನ್ನುಂಟುಮಾಡುವಂತಹದೂ ಆದ ಆದಿ ಮತ್ಸ್ಯರೂಪವನ್ನು ಧರಿಸಿದನೋ ಮತ್ತು ಕ್ಷೀರ ಸಮುದ್ರವನ್ನು ಕಡೆಯುವಾಗ ಸುರರಿಗೆ ಹಿತಮಾಡುವುದಕ್ಕಾಗಿ ಯಾರು ಆದಿ ಕೂರ್ಮ ರೂಪವುಳ್ಳವನಾಗಿ ಮಂದರಗಿರಿಯನ್ನು ಧರಿಸಿದನೋ, ಅಂಥ ಪುರಾಣ ಪುರುಷನೂ, ಲೋಕಹಿತನೂ, ಅಸುರಹರನೂ ಆದ ಆ ಸುರೇಶನು ನನ್ನನು ಸಂರಕ್ಷಿಸಲಿ. ॥೧೦-೧೧॥

ಮಹಾವರಾಹಃ ಸತತಂ ಪೃಥಿವ್ಯಾಃ
ತಲಾತ್ತಲಂ ಪ್ರಾವಿಶದ್ಯೋ ಮಹಾತ್ಮಾ।
ಯಜ್ಞಾಂಗ - ಸಂಜ್ಞಃ ಸುರಸಿದ್ಧ ಸಂಘೈಃ
ಸ ಪಾತು ಮಾಂ ದೈತ್ಯ ಹರಃ ಪುರಾಣಃ ॥೧೨॥

ಯಾವ ಮಹಾತ್ಮನು ಮಹಾ ವರಾಹರೂಪನಾಗಿ ಭೂದೇವಿಗಾಗಿ ಪಾತಾಳವನ್ನು ಹೊಕ್ಕನೋ, ಯಾರನ್ನು ಸುರಸಿದ್ಧ ಸಂಘಗಳು ಯಜ್ಞಾಂಗನೆಂದು ಕರೆಯುವುವೋ ಆ ಹಿರಣ್ಯಾಕ್ಷ ಎಂಬ ರಾಕ್ಷಸಾಂತಕನಾದ ಪುರಾಣ ಪುರುಷನು ನನ್ನನ್ನು ಪಾಲಿಸಲಿ.

ನೃಸಿಂಹರೂಪೀ ಚ ಬಭೂವ ಯೋಽಸೌ
ಯುಗೇ ಯುಗೇ ಯೋಗಿವರೋಽತಿ ಭೀಮಃ।

ಕರಾಲವಕ್ತ್ರಃ ಕನಕಾಗ್ರವರ್ಚಾ
ವರಾಶಯೋಽಸ್ಮಾನಸುರಾಂತಕೋಽವ್ಯಾತ್ ॥೧೩॥

ಯೋಗಿಗಳೊಡನೆಯನಾದ ಯಾರು ಒಂದೊಂದು (ಕೃತ) ಯುಗದಲ್ಲೂ ಅತಿ ಭಯಂಕರವೂ ಕರಾಳವಾದ ಮುಖವುಳ್ಳದ್ದೂ ಸುವರ್ಣಚ್ಛಾಯೆಯುಳ್ಳದ್ದೂ ಆದ ನರಸಿಂಹ ರೂಪವನ್ನು ಧರಿಸಿ, ಹಿರಣ್ಯಕಶಿಪು ರಾಕ್ಷಸ ಸಂಹಾರಕನಾಗಿರುವನೋ ಆ ಸ್ವಾಮಿಯು ಸುಪ್ರಸನ್ನನಾಗಿ ನಮ್ಮನ್ನು ಕಾಪಾಡಲಿ ॥೧೩॥

ಬಲೇರ್ಮಖ - ಧ್ವಂಸ - ಕೃದಪ್ರಮೇಯೋ
ಯೋಗಾತ್ಮಕೋ ಯೋಗವಪುಃ ಸ್ವರೂಪಃ।

ಸ ದಂಡಕಾಷ್ಠಾಜಿನಲಕ್ಷಣಃ ಕ್ಷಿತಿಂ
ಯೋಽಸೌ ಮಹಾನ್ಯ್ಕಾಂತವಾನ್ನಃ ಪುನಾತು ॥೧೪॥

ಯೋಗಾತ್ಮಕನಾದ ಯಾವ ಮಹಾತ್ಮನು ಅಜಿನದಂಡ ಧಾರಿಯಾದ ಬ್ರಹ್ಮಚಾರಿಯಾದ ವಾಮನರೂಪವನ್ನು ಧರಿಸಿ, ಬಲಿಯಜ್ಞವನ್ನು ನಾಶಮಾಡಿ, ಅಪ್ರಮೇಯನಾಗಿ ತ್ರಿವಿಕ್ರಮಾವತಾರದಿಂದ ಭೂಮಿಯನ್ನಾಕ್ರಮಿಸಿದನೋ ಅವನು ನಮ್ಮನ್ನು ಪವಿತ್ರರನ್ನಾಗಿ ಮಾಡಲಿ ॥೧೪॥

ತ್ರಿಃ ಸಪ್ತಕೃದ್ಯೋ ಜಗತೀಂ ಜಿಗಾಯ
ಕೃತ್ವಾ ದದೌ ಕಶ್ಯಪಾಯ ಪ್ರಚಂಡಃ

ಸ ಜಾಮದಗ್ನ್ಯೋಽಭಿಜನಸ್ಯ ಗೋಪ್ತಾ
ಹಿರಣ್ಯಗರ್ಭೋಽಸುರಹಾ ಪ್ರಪಾತು ॥೧೫॥

ಹಿರಣ್ಯ ಗರ್ಭನಾದ ಯಾರು ಜಮದಗ್ನಿ ಪುತ್ರನಾಗಿ ಪರಶುರಾಮನೆಂಬ ಹೆಸರಿನಿಂದುದಿಸಿ ಪ್ರಚಂಡನಾಗಿ ಇಪ್ಪತ್ತೊಂದಾವೃತ್ತಿ ಭೂಮಿಯನ್ನೆಲ್ಲಾ ಸುತ್ತಿ ಜಯಸಿ, ಕಶ್ಯಪಋಷಿಗೆ ಕೊಟ್ಟನೋ, ಆ ಕಾರ್ತವೀರ್ಯಾರ್ಜುನಾದಿ ಹಿತರ ನಾಶಕನೂ ಸಜ್ಜನ ರಕ್ಷಕನೂ ಆದ ನಾರಾಯಣನೂ ನಮ್ಮನ್ನು ರಕ್ಷಿಸಲಿ. ॥೧೫॥

ಚತುಷ್ಪ್ರಕಾರಂ ಚ ವಪುರ್ಯ ಆದ್ಯ
ಹೈರಣ್ಯ ಗರ್ಭಪ್ರತಿಮಾನ ಲಕ್ಷ್ಯಂ।
ರಾಮಾದಿ ರೂಪೈರ್ಬಹುರೂಪ ಭೇದಂ
ಚಕಾರ ಸೋಽಸ್ಮಾನಸುರಾಂತಕೋಽವ್ಯಾತ್ ॥೧೬॥

ಹಿರಣ್ಯಗರ್ಭನೆಂಬ ಹೆಸರಿನ ತನ್ನ ಆದಿ ರೂಪವನ್ನು ರಾಮ-ಲಕ್ಷ್ಮಣ, ಭರತ, ಶತ್ರುಘ್ನರೆಂಬ ನಾಲ್ಕು ರೂಪಗಳನ್ನಾಗಿ ಮಾಡಿಕೊಂಡು ರಾವಣ, ಕುಂಭಕರ್ಣಾದಿ ರಾಕ್ಷಸರನ್ನು ಸಂಹರಿಸಿದ ಶ್ರೀರಾಮನು ನಮ್ಮನ್ನು ಕಾಪಾಡಲಿ. ॥೧೬॥

**ಚಾಣೂರ - ಕಂಸಾಸುರ - ದರ್ಪಭೀತೇ**
**ರ್ಬೀತಾಮರಾಣಾಮಭಯಾಯ ದೇವಃ**
**ಯುಗೇ ಯುಗೇ ವಾಸುದೇವೋ ಬಭೂವ**
**ಕಲ್ಪೇ ಭವತ್ಯದ್ಭುತರೂಪಧಾರೀ ॥ ೧೭ ॥**

ಚಾಣೂರ ಕಂಸಾಸುರರ ದರ್ಪದಿಂದ ಹೆದರಿದ ದೇವತೆಗಳಿಗೆ ಅಭಯವನ್ನುಂಟು ಮಾಡಲು ಯಾವ ದೇವನು ಪ್ರತಿ (ದ್ವಾಪಾರ) ಯುಗದಲ್ಲೂ ವಸುದೇವ ಪುತ್ರನಾಗಿ ಬಲರಾಮಕೃಷ್ಣರೆಂಬ ಹೆಸರಿನಿಂದ ಉದಿಸುವನೋ, ಕಲ್ಪಾಂತದಲ್ಲಿ ಅದ್ಭುತವಾದ ರೂಪವನ್ನು ಧಾರಣಮಾಡುವ ಆ ಸ್ವಾಮಿಯು ನಮ್ಮನ್ನು ಪಾಲಿಸಲಿ ॥ ೧೭॥

**ಯುಗೇ ಯುಗೇ ಕಲ್ಕಿನಾಮ್ನಾ ಮಹಾತ್ಮಾ**
**ವರ್ಣಸ್ಥಿತಿಂ ಕರ್ತುಮನೇಕ ರೂಪಃ ।**
**ಸನಾತನೋ ಬ್ರಹ್ಮಮಯಃ ಪುರಾತನೋ**
**ನ ಯಸ್ಯ ರೂಪಂ ಸುರಸಿದ್ಧ - ದೈತ್ಯಾಃ ॥ ೧೮ ॥**
**ಪಶ್ಯಂತಿ ವಿಜ್ಞಾನಗತಿಂ ವಿಹಾಯ**
**ಅತೋಽಯಮೇನಾಪಿ ಸಮರ್ಚಯಂತಿ ।**
**ಮತ್ಸ್ಯಾದಿರೂಪಾಣಿ ಚರಾಣಿ ಸೋಽವ್ಯಾತ್ ॥ ೧೯ ॥**

ಸನಾತನ ಬ್ರಹ್ಮನೂ, ಪುರಾಣ ಪುರುಷನೂ, ಅನೇಕ ರೂಪನೂ ಆದ ಯಾರು ಒಂದೊಂದು ಕಲಿಯುಗದಲ್ಲಿಯೂ ವರ್ಣಗಳನ್ನು ನೆಲೆಗೊಳಿಸಲು ಕಲ್ಕಿಯೆಂಬ ಹೆಸರಿನಿಂದ ಅವತರಿಸುವನೋ, ಯಾವನ ಮೂಲ ರೂಪವನ್ನು ಸುರರಾಗಲಿ, ಸಿದ್ಧರಾಗಲಿ ದೈತ್ಯರಾಗಲಿ ವಿಜ್ಞಾನಗತಿಯನ್ನು ಬಿಟ್ಟು ನೋಡಲಾರದೆ ಚರವಾದ ಅವನ ಮತ್ಸ್ಯಾದಿ ರೂಪಗಳನ್ನು ಯೋಗದಿಂದ ಅರ್ಚಿಸುವರೋ ಆ ಸ್ವಾಮಿಯು ನನ್ನನ್ನು ಕಾಪಾಡಲಿ. ॥ ೧೮-೧೯ ॥

**ನಮೋ ನಮಸ್ತೇ ಪುರುಷೋತ್ತಮಾಯ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ ।**
**ನಮೋ ನಮಃ ಕಾರಣ ಕಾರಣಾಯ**
**ನಯಸ್ವ ಮಾಂ ಮುಕ್ತಿ ಪದಂ ನಮಸ್ತೇ ॥ ೨೦ ॥**

ಪುರುಷೋತ್ತಮನಾದ ನಿನಗೆ ನಮಸ್ಕಾರ, ಕಾರಣಕ್ಕೂ (ಮೂಲ) ಕಾರಣನಿಗೆ ನಮಸ್ಕಾರ. ನನ್ನನ್ನು ಮುಕ್ತಿಪದಕ್ಕೇರಿಸು. ನಿನಗೆ ನಮಸ್ಕಾರ. ॥ ೨೦॥

**ಏವಂ ನಮಸ್ಯತಸ್ತಸ್ಯ ಮಹರ್ಷೇರ್ಭಾವಿತಾತ್ಮನಃ।**
**ಪ್ರತ್ಯಕ್ಷತಾಂ ಗತೋ ದೇವಃ ಸ್ವಯಂ ಚಕ್ರಗದಾಧರಃ ॥ ೨೧ ॥**

ಹೀಗೆ ನಮಿಸುತ್ತಿದ್ದ ಪವಿತ್ರಾತ್ಮಕನಾದ ಆ ಗೌರಮುಖ ಮಹರ್ಷಿಗೆ ಶಂಖ ಚಕ್ರ ಗದಾಧಾರಿಯಾದ ದೇವನು (ತಾನು) ಪ್ರತ್ಯಕ್ಷನಾದನು. ॥ ೨೧॥

**ತಂ ದೃಷ್ಟ್ವಾ ತಸ್ಯ ವಿಜ್ಞಾನಂ ನಿಸ್ತರಂಗ ಸ್ವದೇಹತಃ ।**
**ಉತ್ತಸ್ಥೌ ಸೋಽಪಿ ತಂ ಲಬ್ಧ್ವಾ ತಸ್ಮಿನ್ ಬ್ರಹ್ಮಣಿ ಶಾಶ್ವತೇ ॥**
**ಲಯಂ ಜಗಾಮ ದೇವಾತ್ಮನ್ಯಪುನರ್ಭವ ಸಂಜ್ಞಿತೇ ॥ ೨೨ ॥**

ಆ ಪರಮಾತ್ಮನ ಸಂದರ್ಶನದಿಂದ ಆ ಗೌರಮುಖನಿಗೆ ಸ್ವದೇಹದಲ್ಲಿಯೇ, ತರಂಗವಿಲ್ಲದ ದಿವ್ಯಜ್ಞಾನವುಂಟಾಯಿತು. ಅದನ್ನು ಪಡೆದು ಅವನು ದೇವನಾದ. ಆ ಶಾಶ್ವತ ಪರಬ್ರಹ್ಮನಲ್ಲಿ ಲೀನವಾದನು.

ವರಾಹ ಪುರಾಣದಲ್ಲಿ ಹದಿನೈದನೇ ಅಧ್ಯಾಯ ಮುಗಿದುದು



## ನಂಬಿದವರಿಗೆ ದ್ರೋಹ ಮಾಡಿದ ಸ್ವರ್ಗದ ನಾಯಿದ ಕಥೆ | ಅಧ್ಯಾಯ - ೧೬

**ಭೂದೇವಿ :-** ವರಾಹ ದೇವ, ಹಿಂದೆ ದುರ್ವಾಸ ಋಷಿಯ ಶಾಪ ಮೂಲಕವಾಗಿ ದುರ್ಜಯ ರಾಜನಿಂದ ಸೋತ ಪದಭ್ರಷ್ಟನಾದ ದೇವೇಂದ್ರನು ದೇವತೆಗಳೊಂದಿಗೆ ಭೂಮಿಗೆ ಬಂದು ಏನು ಮಾಡಿದನು ? ದುರ್ಜಯ ರಾಜನು ವಿದ್ಯುತ್ ಸುವಿದ್ಯುತ್ ಎಂಬ ದೈತ್ಯರನ್ನು ಲೋಕ ಪಾಲಕರನ್ನಾಗಿ ಮಾಡಿ ಸ್ವರ್ಗದಲ್ಲಿ ಇಟ್ಟ ಬಳಿಕ ಅವರು ಏನು ಮಾಡಿದರು ? ಇಂದ್ರನ ಸ್ಥಿತಿ ಏನು ಆಗಿರಬಹುದು ? ಎಂದು ನನಗೆ ಸಂದೇಹ ಬಂದಿದೆ. ನೀನು ಪರಿಹರಿಸಬೇಕು.

**ವರಾಹ :-** ಧಾತ್ರೀದೇವಿ, ದುರ್ಜಯನು ದೇವರಾಜನನ್ನು ಸೋಲಿಸಿ ಸ್ವರ್ಗರಾಜ್ಯದಿಂದ ಹೊಡೆದೋಡಿಸಿದ ಬಳಿಕ ಆ ಶಚೀಪತಿಯು ಭರತ ಖಂಡಕ್ಕೆ ಬಂದನು. ಮಹಾದೇವರಿಂದ ಪಾಲಿಸಲ್ಪಡುವ ಕಾಶೀ ಪಟ್ಟಣದಲ್ಲಿ ತನ್ನ ಪರಿವಾರವಾದ ದೇವತೆಗಳೊಂದಿಗೆ ಕಾಶಿಯ ನಾಗರಿಕರಾದ ಯಕ್ಷ ಮತ್ತು ನಾಗರೊಡನೆ ಕೂಡಿಕೊಂಡು ವಾಸ ಮಾಡಿದನು. ದುರ್ಜನ ರಾಜನಿಂದ ಲೋಕ ಪಾಲಕನಾಗಿ ನೇಮಿಸಲ್ಪಟ್ಟ ವಿದ್ಯುತ್ ಮತ್ತು ಸುವಿದ್ಯುತ್ ಎಂಬ ಅಸುರರು ಯೋಗ ಶಾಸ್ತ್ರದಲ್ಲಿ ಅತ್ಯಂತ ನಿಪುಣರಾಗಿದ್ದರು. ಅವರು ತಮ್ಮ ಯೋಗಶಕ್ತಿಯ ಪ್ರಭಾವದಿಂದ ಲೋಕಪಾಲಕರು ಮಾಡುತ್ತಿದ್ದ ಎಲ್ಲ ಕಾರ್ಯಗಳನ್ನೂ ಸಮರ್ಥ ರೀತಿಯಿಂದ ನಿರ್ವಹಿಸುತ್ತಿದ್ದರು.

ದುರ್ಜಯನು ವಿಷ್ಣು ಚಕ್ರದಿಂದ ಹತನಾದ ಸಮಾಚಾರವನ್ನು ಕೇಳಿ ಅವರಿಬ್ಬರೂ ದೈತ್ಯರು ಸಮುದ್ರದವರೆಗೆ ಹರಡಿದ ತಮ್ಮ ಪ್ರಚಂಡವಾದ ಚತುರಂಗ ಸೈನ್ಯವನ್ನು ತೆಗೆದುಕೊಂಡು ದೇವತೆಗಳ ಜೊತೆಗೆ ಯುದ್ಧ ಮಾಡಬೇಕೆಂದು ಹಿಮವಂತ ಪರ್ವತದಲ್ಲಿ ನಿಂತುಕೊಂಡರು. ಇತ್ತ ದೇವತೆಗಳೂ ದುರ್ಜಯ ದೊರೆಯು ಸತ್ತು ಹೋದದ್ದರಿಂದ ತಮ್ಮ ಕೈ ತಪ್ಪಿ ಹೋದ ಸ್ವರ್ಗ ಸಾಮ್ರಾಜ್ಯವನ್ನು ತಮ್ಮ ಕೈವಶ ಮಾಡಿಕೊಳ್ಳಬೇಕೆಂದು ಹೆಬ್ಬಯಕೆಯನ್ನು ಹೊತ್ತು ಪ್ರಚಂಡ ಸೈನ್ಯವನ್ನು ಕೂಡಿಸಿದರು.

ಆಗ ದೇವಗುರುವಾದ ಬೃಹಸ್ಪತಿಯು ಆ ದೇವತೆಗಳನ್ನು ಕುರಿತು ''ಸುರ ಶಿಷ್ಯರೇ, ಮೊದಲು ನೀವು ಗೋಮೇಧ ಯಜ್ಞವನ್ನು ಮಾಡಿರಿ. ದೇವತೆಗಳಿಗೆ ಯಜ್ಞಗಳೇ

ಸಂರಕ್ಷಣ ಸಾಧನಗಳಾಗಿವೆ. ಇದೇ ನಾನು ನಿಮಗ್ಗೆ ಮಾಡುವ ಗುರೂಪದೇಶ. ಇದನ್ನು ಕೂಡಲೇ ಕೃತಿಯಲ್ಲಿ ಇಳಿಸಿ'' ಎಂದು ಅಪ್ಪಣೆ ಇತ್ತರು.

ದೇವಗುರುವಿನ ಈ ಆದೇಶವನ್ನು ಕೇಳಿ ದೇವತೆಗಳು ಕೆಲವು ಹಸುಗಳನ್ನು ಸಂಚಾರಕ್ಕಾಗಿ ಹೊರಗೆಬಿಟ್ಟರು. ಆ ಗೋವುಗಳ ರಕ್ಷಣೆಗಾಗಿ ಸ್ವರ್ಗಲೋಕದ ನಾಯಿಯಾದ ಸರಮೆಯನ್ನು ಕೊಟ್ಟು ಕಳಿಸಿದರು. ಆ ನಾಕ ಲೋಕದ ನಾಯಿಯ ನೇತೃತ್ವದಲ್ಲಿ ಮತ್ತೂ ಸರ್ಪಗಾವಲಿನ ಸಂರಕ್ಷಣೆಯಲ್ಲಿ ಸುರಕ್ಷಿತವಾಗಿ ಅತ್ತಿತ್ತ ಸಂಚರಿಸುತ್ತ ಆ ಸುರಧೇನುಗಳು ವಿದ್ಯುತ್, ಸುವಿದ್ಯುತ್ ದೈತ್ಯರಿದ್ದಲ್ಲಿಗೆ ಬಂದವು. ಆ ಹಸುಗಳನ್ನು ನೋಡಿ ಆ ಇಬ್ಬರೂ ದೈತ್ಯರೂ ತಮ್ಮ ಪುರೋಹಿತರಾದ ಶುಕ್ರಾಚಾರ್ಯರನ್ನು ಕೇಳಿದರು. ''ಬ್ರಹ್ಮನ್, ಈ ದೇವಧೇನುಗಳು ಈ ಸ್ವರ್ಗಲೋಕದ ಶ್ವಾನವಾದ ಸರಮೆಯ ಸರ್ಪಗಾವುಲಿನಲ್ಲಿ ಸಂಚರಿಸುತ್ತ ಇಲ್ಲಿಗೆ ನಡೆದು ಬಂದಿವೆ. ಈಗ ನಾವು ಏನು ಮಾಡಬೇಕು ಹೇಳಿರಿ.'' ದೈತ್ಯಶಿಷ್ಯರ ಮಾತುಗಳನ್ನು ಕೇಳಿ ಶುಕ್ರಾಚಾರ್ಯರು ''ದೈತ್ಯರೇ, ಕೂಡಲೇ ಹಸುಗಳನ್ನು ಹಿಡಿದು ಕಟ್ಟಿರಿ, ತಡಮಾಡಬೇಡಿರಿ. ಈ ಕ್ಷಣದಲ್ಲಿ ಈ ಗೋವುಗಳನ್ನು ಹಿಡಿದು ಹಾಕಿರಿ.'' ಎಂದು ಆದೇಶವಿತ್ತರು. ಅವರ ಅಪ್ಪಣೆಯಂತೆ ವಿದ್ಯುತ್ ಸುವಿದ್ಯುತ್ ರಾಕ್ಷಸರು ಅಮರರ ಆ ಆಕಳುಗಳನ್ನು ಅಪಹರಿಸಿದರು. ಹೀಗೆ ಆಕಸ್ಮಿಕವಾಗಿ ಹಸುಗಳೆಲ್ಲ ಅಪಹೃತವಾದ ಕೂಡಲೇ ಸರಮೆಯು ಆಚೀಚೆ ಹುಡುಕಾಡಿ ರಾಕ್ಷಸರು ಆ ಆಕಳುಗಳನ್ನು ಕದ್ದು ಇರಿಸಿದ ಸ್ಥಾನವನ್ನು ಕಂಡಿತು. ಸರಮೆಗೆ ತಾವು ಹಸುಗಳನ್ನು ಕದ್ದು ಇರಿಸಿದ ಸ್ಥಳದ ಮಾರ್ಗವು ಚೆನ್ನಾಗಿ ಗೊತ್ತಾಗಿದೆ ಎಂದು ತಿಳಿದ ದೈತ್ಯರು ಆ ಸರಮೆಯನ್ನು ತಮ್ಮ ಬಳಿಗೆ ಕರೆದರು. ಮತ್ತು ಆ ನಾಯಿಯ ಎದುರಿಗೇ ಆ ದೇವಧೇನುಗಳನ್ನು ಕರೆದು ಹಾಲು ತೆಗೆದು ಆ ಸರಮೆಗೆ ಕುಡಿಯಲು ಕೊಟ್ಟರು ಮತ್ತು ಹೇಳಿದರು.

''ಇದರಂತೆ ಈ ಆವುಗಳನ್ನು ಬೇಕಾದಾಗ ಕರೆದು ಬೇಕಾದಷ್ಟು ಹಾಲನ್ನು ನೀನು ಕುಡಿಯಬಹುದು. ಆದರೆ ಜಾಣ ನಾಯಿಯೇ, ನೀನು ದೇವರಾಜನಾದ ಇಂದ್ರನಿಗೆ ಈ ಹಸುಗಳು ಇಲ್ಲಿ ಇರುವುದನ್ನು ಮಾತ್ರ ತಿಳಿಸಬೇಡ'' ಎಂದು ಹೇಳಿ ಹಾಲು ಕುಡಿಸಿ ಆ ನಾಯಿಯನ್ನು ಕಾಡಿನಲ್ಲಿ ತಂದು ಬಿಟ್ಟುಬಿಟ್ಟರು. ದೈತ್ಯರಿಂದ ಬಿಡಲ್ಪಟ್ಟ ಆ ದೇವತೆಗಳ ನಾಯಿಯು ಸ್ವರ್ಗಕ್ಕೆ ಬಂದಿತು. ದೇವೇಂದ್ರನ ಬಳಿಗೆ ಹೋಗಿ ನಡುಗುತ್ತಲೇ ನಮಸ್ಕಾರ ಮಾಡಿತು. ಈ ಮೊದಲು ದೇವೇಂದ್ರನು ಈ ನಾಯಿಯ ರಕ್ಷಣೆಗಾಗಿ ಮರುದೇವತೆಗಳನ್ನು ಕಳಿಸಿದ್ದನು. ನೀವು ಯಾರಿಗೂ ತಿಳಿಯದಂತೆ ಸೂಕ್ಷ್ಮರೂಪದಿಂದ ಈ ನಾಯಿಯ ಬೆನ್ನುಹಿಂದೆ ಹೋಗಿ ಬನ್ನಿರಿ ಎಂದು ಅಪ್ಪಣೆಯಿತ್ತಿದ್ದನು. ಅವನ ಆಜ್ಞೆಯಂತೆ ಅದೃಶ್ಯರೂಪದಿಂದ ಆ ಸರಮೆಯ ಹಿಂದಿನಿಂದ ಹೋಗಿದ್ದ ಮಹಾಬಲಿಷ್ಠರಾದ ಮರುದೇವತೆಗಳು ಮರಳಿ ಬಂದು ದೇವೇಂದ್ರನಿಗೆ ವಂದಿಸಿದರು. ಆ ಸುರನಾಥನು ಮೊದಲು ನಮಿಸಿದ ಆ ನಾಯಿಯನ್ನು ಮೊದಲು ಮುಂದೆ ಕರೆದು ''ಸುರಮೆ, ಹಸುಗಳು ಏನಾದವು'' ಎಂದು ಕೇಳಿದನು. ಅದಕ್ಕೆ ಆ ನಾಯಿಯು ''ನನಗೆ ಗೊತ್ತಿಲ್ಲ'' ಎಂದು ಉತ್ತರಿಸಿತು. ಅದನ್ನು ಕೇಳಿ ದೇವೇಂದ್ರನಿಗೆ ಸಿಟ್ಟುಬಂದಿತು. ಅವನು ಮರುದ್ದೇವತೆಗಳ ಕಡೆಗೆ ಹೊರಳಿ ಸಿಟ್ಟಿನಿಂದ ಕೇಳಿದನು. ''ಯಜ್ಞಕ್ಕಾಗಿ ನಿಶ್ಚಿತಗೊಳಿಸಲ್ಪಟ್ಟ ಆ ಹಸುಗಳು ಎಲ್ಲಿ ? ಈ ನಾಯಿಯು ಒಂದೇ ಇಲ್ಲಿಗೆ ಹೇಗೆ ಬಂದಿತು ?'' ಎಂದು ಅಬ್ಬರಿಸಿ ಕೇಳಿದನು.

ಆಗ ಮರುದ್ದೇವತೆಗಳು ಆ ನಾಕಲೋಕದ ನಾಯಿಯಾದ ಸರಮೆಯು ಹಾಲು ಕುಡಿದು ಹಸುಗಳನ್ನೆಲ್ಲ ದೈತ್ಯರಲ್ಲಿ ಬಿಟ್ಟುಬಂದ ಸಮಾಚಾರವನ್ನು ತಿಳಿಸಿದರು. ಇದರಿಂದ ದೇವೇಂದ್ರನಿಗೆ ಸಹನಮಾಡಲಾರದಷ್ಟು ಸಿಟ್ಟು ಬಂದಿತು. ಅದರಿಂದ ಅವನು ಎದ್ದು ಆ ನಾಯಿಯನ್ನು ಕಾಲಿನಿಂದ ಒದ್ದು ಹಾಕಿದನು.

"ಎಲೈ ಆಶೆಬುರುಕ ನಾಯಿಯೇ ! ಹಾಲು ಕುಡಿದು ಹಸುಗಳನ್ನು ಅಸುರರ ಕೈಗೆ ಕೊಟ್ಟು ಬಂದೆಯಾ ?" ಎಂದು ನುಡಿದು ಮತ್ತೆ ಮತ್ತೆ ಆ ಸರಮೆಯನ್ನು ಕಾಲಿನಿಂದ ಒದೆದನು. ಇಂದ್ರನ ಪಾದಾಘಾತದಿಂದ ಆ ನಾಯಿಯು ಕುಡಿದ ಹಾಲನ್ನೆಲ್ಲ ಕಾರಿಕೊಂಡಿತು. ಮತ್ತು ಬಾಯಿಯಿಂದ ಹಾಲನ್ನು ಕಕ್ಕುತ್ತಲೆ ಯಜ್ಞದ ಹಸುಗಳನ್ನು ರಾಕ್ಷಸರು ಕದ್ದಿಟ್ಟ ಕಡೆಗೆ ಓಡಿತು. ಆಗ ದೇವೇಂದ್ರನು ತನ್ನ ಸೈನ್ಯದೊಂದಿಗೆ ಅಲ್ಲಿಗೆ ಹೋಗಿ ರಾಕ್ಷಸರು ಅಪಹರಿಸಿಟ್ಟ ತಮ್ಮ ಆಕಳುಗಳನ್ನು ನೋಡಿದನು.

ಆ ಹಸುಗಳನ್ನು ಕಾಯುತ್ತಲಿದ್ದ ದೈತ್ಯರು ಬಲಶಾಲಿಗಳಾಗಿದ್ದರೂ ಇಂದ್ರನ ಸೈನ್ಯದ ಎದುರು ನಿಲ್ಲಲಾರದೆ ಹೋರಾಡಿ ಹತರಾದರು. ಉಳಿದ ದೈತ್ಯರು ದೇವತಾವೀರರ ಶಸ್ತ್ರಾಸ್ತ್ರಗಳಪ್ರಹಾರದಿಂದಜರ್ಜರಿತರಾಗಿಕದ್ದಿಟ್ಟಹಸುಗಳನ್ನೆಲ್ಲ ಬಂಧನದಿಂದಹೊರಗೆ ಬಿಟ್ಟು ದೇವತೆಗಳಿಗೆ ಒಪ್ಪಿಸಿದರು. ಇದರಿಂದ ಸುರಸಾಮಂತರಿಗೆಲ್ಲ ಅತ್ಯಂತ ಸಂತಸವಾಯಿತು. ಮಹೇಂದ್ರನು ಕೂಡ ಮಹದಾನಂದದಿಂದ ಅಸುರರಿಂದ ಅಪಹರಿಸ್ಪಟ್ಟ ಆ ಆಕಳುಗಳನ್ನೆಲ್ಲ ಉತ್ಸಾಹದಿಂದ ಮತ್ತೆ ಅಮರಾವತಿಗೆ ಕರೆತಂದನು. ಮತ್ತು ಆ ಸುರರ ದೊರೆಯು ಇದರಿಂದ ಉತ್ಸಾಹಿತನಾಗಿ ಸಹಸ್ರಾರು ಯಜ್ಞಗಳನ್ನು ಮಾಡಿದನು. ಆ ಯಜ್ಞಗಳಿಂದ ಇಂದ್ರನ ಶಕ್ತಿಯು ಬಲಿಯಿತು. ದೇವ ಸೈನ್ಯವು ಅಭಿವೃದ್ಧಿಗೊಂಡಿತು. ಅವರೆಲ್ಲರ ಸಾಮರ್ಥ್ಯವು ಇಮ್ಮಡಿಸಿತು. ಆದುದರಿಂದ ಉತ್ಸಾಹಿತನಾದ ಸ್ವರ್ಗದೊಡೆಯನು ಎಲ್ಲ ದೇವತೆಗಳೂ ರಾಕ್ಷಸರನ್ನು ಸಂಹರಿಸಲು ಕೂಡಲೇ ಯುದ್ಧಕ್ಕೆ ಸಿದ್ಧರಾಗಬೇಕು ಎಂದು ಆಜ್ಞೆಯನ್ನು ಹೊರಡಿಸಿದನು. ಸುರರಾಜನ ಆದೇಶದಂತೆ ಅಮರಗಣಂಗಳು ಅಸುರರಜೊತೆಗೆಹೋರಾಡಲು ಅಣಿಯಾದರು. ದೇವೇಂದ್ರನು ಈ ಎಲ್ಲ ತನ್ನ ಸುರಸೇನೆಯಿಂದ ಒಡಗೂಡಿ ದೈತ್ಯರನ್ನು ಎದುರಿಸಿದನು. ಆ ದೇವ ದಾನವ ಯುದ್ಧದಲ್ಲಿ ಬಲಿಷ್ಠರಾದ ದೇವತೆಗಳ ಭೀಷಣ ಶಸ್ತ್ರಾಘಾತಗಳಿಂದ ದೈತ್ಯರೆಲ್ಲರೂ ಧಾರಾತೀರ್ಥದಲ್ಲಿ ಹತಪತಿತರಾಗಿ ಬಿದ್ದರು ಓಡಿಹೋಗಿ. ಭಯಭ್ರಾಂತರಾಗಿ ಕೆಲವರು ನಡುಗುತ್ತ ಏನು ಮಾಡಬೇಕು ತಿಳಿಯದೇ ದಿಙ್ಮೂಡರಾಗಿ ಸಮುದ್ರದ ನೀರಿನಲ್ಲಿ ಹಾರಿಕೊಂಡರು. ದೇವತಾಸಾರ್ವಭೌಮನಾದಮಹೇಂದ್ರನುಗೆಲುವಿನಿಂದತಮ್ಮ ಗಲಿತವಾದಗೌರವವನ್ನು ಮತ್ತೆ ಮರಳಿ ಸಂಪಾದಿಸಿ ಆನಂದದಿಂದ ಸ್ವರ್ಗವನ್ನು ಆರೋಹಣ ಮಾಡಿದನು. ದೇವ ಸಿಂಹಾಸನದಲ್ಲಿ ಪುನಃ ಪ್ರತಿಷ್ಠಿತನಾಗಿ ಪಟ್ಟಾಭಿಷಿಕ್ತನಾದನು. ಚೇತೋಹಾರಿಯಾದ ಈ ಸರಮೆಯ ಉಪಾಖ್ಯಾನವನ್ನು ಕೇಳಿದವರು ಗೋಮೇಧಯಜ್ಞವನ್ನು ಮಾಡಿದಫಲವನ್ನು ಪಡೆಯುತ್ತಾರೆ. ರಾಜ್ಯ ಕಳೆದು ಕೊಂಡವರು ಈ ಕಥೆಯನ್ನು ಕೇಳಿದವರು ದೇವೇಂದ್ರನಂತೆ ಮತ್ತೆ ಆಸ್ಥಾನವನ್ನು ಪಡೆಯುತ್ತಾರೆ.

*ವರಾಹ ಪುರಾಣದಲ್ಲಿ ಹದಿನಾರನೇ ಅಧ್ಯಾಯವು ಮುಗಿದುದು*

—o—

## ಮಹಾತಪನ ಉಪಾಖ್ಯಾನ

ಅಧ್ಯಾಯ - ೧೭

**ಭೂದೇವಿ :-** ವರಾಹ ಪ್ರಭುವೇ, ಶ್ರೀ ಹರಿಯು ಕೊಟ್ಟ ದಿವ್ಯ ರತ್ನದಿಂದ ಹೊರಹೊರಟ ೧೫ ರಾಜಕುಮಾರರಿಗೆ ಭಗವಂತನು ನೀವು ತ್ರೇತಾಯುಗದಲ್ಲಿ ರಾಜರಾಗುವಿರಿ ಎಂದು ವರವನ್ನು ಕೊಟ್ಟಿದ್ದನಷ್ಟೆ ! ಮುಂದೆ ಅವರು ಎಲ್ಲಿ ಹುಟ್ಟಿದರು ? ಹೇಗೆ ಜನಿಸಿದರು ? ಏನು ಮಾಡಿದರು ? ಈ ಜನ್ಮಾಂತರದಲ್ಲಿ ಅವರ ಹೆಸರುಗಳು ಏನು ? ಇದನ್ನೆಲ್ಲ ನನಗೆ ತಿಳಿಸಿಕೊಡಿರಿ.

**ವರಾಹ :-** ನೆಲ್ದಾಯಿಯೇ ! ಶ್ರೀಹರಿಯು ಗೌರಮುಖ ಮುನಿಗೆ ಕೊಟ್ಟ ಆ ದಿವ್ಯರತ್ನದಿಂದ ಉದಿಸಿದ ಸುಪ್ರಭ ಎಂದು ರಾಜನು ಮರಳಿ ಹುಟ್ಟಿದ ಕಥೆಯನ್ನು ಬಿತ್ತರಿಸುತ್ತೇನೆ ಕೇಳು - ಪೂರ್ವ ಕಾಲದಲ್ಲಿ ಕೃತಯುಗದ ಆರಂಭದ ಅವಸ್ಥೆಯಲ್ಲಿ ಶ್ರುತಕೀರ್ತಿ ಎಂಬ ಅರಸನಿದ್ದನು. ವೀರವರೇಣ್ಯನಾದ ಅವನಿಗೆ ಧೈರ್ಯಶೌರ್ಯಗಳಲ್ಲಿ ಹೆಗಲೆಣೆಯಾಗಿ ನಿಲ್ಲ ಬಲ್ಲ ಬಲಿಷ್ಠರು ಮೂರು ಲೋಕಗಳಲ್ಲಿಯೇ ಇರಲಿಲ್ಲ. ಈ ಮಣಿ ಕುಮಾರನಾದ ಸುಪ್ರಭನು ಆ ಶ್ರುತಕೀರ್ತಿ ರಾಜನಿಗೆ ಪುತ್ರನಾಗಿ ಜನಿಸಿದನು. ಪ್ರಜಾಪಾಲ ಎಂಬ ಹೆಸರುಳ್ಳ ಅವನು ಮಹಾ ಬಲಿಷ್ಠನಾಗಿದ್ದನು.

ಒಂದು ದಿನ ರಾಜಕುಮಾರ ಪ್ರಜಾಪಾಲನು ಬೇಟೆಯಾಡಲಿಕ್ಕಾಗಿ ಕ್ರೂರ ಪಶುಗಳಿಂದ ತುಂಬಿದ ಒಂದು ಕಾಡಿಗೆ ಹೋದನು. ಆ ಗೊಂಡಾರಣ್ಯದ ಮಧ್ಯ ಭಾಗದಲ್ಲಿ ಅವನಿಗೆ ಓರ್ವ ಋಷಿಯ ದೊಡ್ಡದಾದ ಪುಣ್ಯಾಶ್ರಮವೊಂದು ಗೋಚರಿಸಿತು. ಆ ಆಶ್ರಮದಲ್ಲಿ ಪರಮ ಧಾರ್ಮಿಕನಾದ ಮಹಾತಪ ಎಂಬ ಋಷಿಯು ತಪಸ್ಸನ್ನು ಮಾಡುತ್ತಿದ್ದನು. ನಿತ್ಯ ನಿರಂತರವೂ ಪರಬ್ರಹ್ಮದ ಧ್ಯಾನೋಪಾಸನೆಗಳನ್ನು ಮಾಡುತ್ತಲಿರುವ ಅವನು ಏನನ್ನೂ ಉಣ್ಣದೇ, ಯಾವುದನ್ನು ಕುಡಿಯದೇ, ಎಂದೂ ಮಲಗದೇ, ನಿರಾಹಾರನಾಗಿ, ನಿರ್ಮೋಹನಾಗಿ, ನಿರ್ವಿಕಾರನಾಗಿ ಘೋರವಾದ ತಪಸ್ಸನ್ನು ಮಾಡುತ್ತಿದ್ದನು. ಪುಣ್ಯಾರಣ್ಯದಲ್ಲಿರುವ ಈ ಪಾವನಾದ ಆಶ್ರಮದಲ್ಲಿ ಪ್ರಜಾಪಾಲ ಮಹಾರಾಜನು ಪ್ರವೇಶ ಮಾಡಿದನು.

ಆ ಆಶ್ರಮದ ಅಂಗಳದಲ್ಲಿ ಹಾಗೂ ಪರಿಸರದ ಪ್ರದೇಶದಲ್ಲಿ ಬೆಳೆದ ಮರಗಳೆಲ್ಲವೂ ಆಗಸದ ಅಗಲವನ್ನು ಅಳೆಯುತ್ತ ಬಹು ಎತ್ತರಕ್ಕೆ ಬೆಳೆದಿದ್ದವು. ಅಲ್ಲಿಯ ಲತಾಕುಂಜಗಳು ಚಂದ್ರಕಾಂತ ಮಣಿಯ ಬಳ್ಳಿಗಳಂತೆ ರಮಣೀಯವಾಗಿ ತೋರುತ್ತಿದ್ದವು. ಇಲ್ಲಿಯ ಮನೋಹರವಾದ ಬಳ್ಳಿ ಮಾಡಗಳನ್ನು ಕಂಡು ಅಪ್ಸರೆಯರು ಅಮರಾವತಿಯನ್ನು ತೊರೆದು ಇಲ್ಲಿಗೆ ಬರುತ್ತಿದ್ದರು. ಕಮಲಕೋಶದಂತೆ ಹೊಂಬಣ್ಣದಿಂದ ಹೊಳೆಯುವ ಆ ಸುರಲಲನೆಯರ ಕೋಮಲವಾದ ಹೆಜ್ಜೆಗಳು ಅಲ್ಲಿಯ ಅಂಗಳದಲ್ಲಿ ಮೂಡುತ್ತಿದ್ದವು. ಈ ತಪೋವನದ ಸಮೀಪದ ವನಗಳೆಲ್ಲವೂ ಉಪವನಗಳಂತೆಯೇ ಇದ್ದವು. ಅಲ್ಲಿ ಮಾವು, ಕಡಹ, ಮತ್ತಿ, ಓಲೆ, ಎಲಚಿ ಮರಗಳ ಗೂಡುಗಳಲ್ಲಿರುವ ಹಕ್ಕಿಗಳ ಹಾಡು ಕಿವಿಗೆ ಇಂಪಾಗಿ ಕೇಳಿ ಬರುತ್ತಿತ್ತು. ಪ್ರಜಾಪಾಲರಾಜನು ಇಂಥ ರಮ್ಯವೂ, ಅಭಿಗಮ್ಯವೂ ಆದ ಈ ವರಾಶ್ರಮದಲ್ಲಿ ಪ್ರವೇಶಮಾಡಿ ಬ್ರಹ್ಮವರ್ಚಸ್ವಿಯಾದ ಮಹಾತಪ ಮುನಿಯನ್ನು ನೋಡಿದನು.

ದರ್ಭಾಸನದಲ್ಲಿ ಸಾಕ್ಷಾತ್ ಸೂರ್ಯನೇ ಮಂಡಿಸಿದಂತಾಗಿತ್ತು. ಬ್ರಹ್ಮಜ್ಞಾನಿಗಳಲ್ಲಿ ಅಗ್ರಗಣ್ಯನಾದ ಆ ತೇಜೋಭಾಸುರ ಮುನಿಯನ್ನು ಕಂಡು ಪ್ರಜಾಪಾಲನಿಗೆ ತನ್ನ ವನ ಗಮನದ ಮುಖ್ಯ ಉದ್ದೇಶವಾದ ಬೇಟೆಯಾಟವೇ ಮರೆತಂತಾಯಿತು. ತಾಪಸೋತ್ತಮರಾದ ಆ ಮಹಾಮುನಿಗಳ ದರ್ಶನದಿಂದಲೇ ಈ ರಾಜನಲ್ಲಿ ತೀವ್ರತರವಾದ ಧರ್ಮಬುದ್ಧಿಯು ಜಾಗೃತವಾಯಿತು. ಯಾವುದೇ ಕಾಲುಷ್ಯಕಾಪಟ್ಯಗಳೂ ಇಲ್ಲದ ಆ ಪ್ರಜಾಪಾಲ ಮಹಾರಾಜನನ್ನು ಕಂಡು ಪ್ರಸನ್ನನಾದ ಮುನಿಯು ಅವನಿಗೆ ಸ್ವಾಗತವನ್ನು ಮಾಡಿದನು. ಆಸನವನ್ನು ನೀಡಿದನು. ಕುಶಲಪ್ರಶ್ನೆಗಳನ್ನು ಕೇಳಿದನು. ಆದರೋಪಚಾರಗಳನ್ನು ಮಾಡಿದನು. ಅನಂತರ ಆ ಪ್ರಜಾಪಾಲರಾಜನು ಆ ಋಷಿಪುಂಗವರಿಗೆ ನಮಸ್ಕಾರ ಮಾಡಿ ಅವರು ಕೊಟ್ಟ ಆಸನದ ಮೇಲೆ ಕುಳಿತು ವಿನಯದಿಂದ ಇಂತು ಪ್ರಶ್ನೆ ಮಾಡಿದನು. "ಪೂಜ್ಯರೇ, ದುಃಖಮಯವಾದ ಈ ಸಂಸಾರದಲ್ಲಿ ಮುಳುಗಿಹೋದ ಜನರು ಏನು ಮಾಡಬೇಕು ? ಅವರಿಗೆ ಗೆಲುವಿನ ದಾರಿ ಯಾವುದು? ಅವರ ಉದ್ಧಾರದ ಮಾರ್ಗವಾವುದು! ತಿಳಿಸಿರಿ. ನಿಮಗೆಕೈ ಮುಗಿಯುತ್ತೇನೆ."

ಮಹಾತಪಾ ಉವಾಚ

**ಸಂಸಾರಾರ್ಣವ - ಮಜ್ಜಮಾನ - ಮನುಜೈಃ ಪೋತಃ ಸ್ಥಿರೋಽತಿಧ್ರುವಃ ।**
**ಕಾರ್ಯಃ ಪೂಜನ-ಹೋಮ-ದಾನ-ವಿಧಿಭಿರ್ಯಜ್ಞೈಃ ಸಮಂ ಧ್ಯಾನಕೈಃ ॥**

**ಕೀಲೈಃ ಕೀಲಿತ ಮೋಕ್ಷಕೈಃ ಸುರಭಟೈರೂರ್ಧ್ವಂ ಮಹಾರಾಜ್ಜುಭಿಃ**
**ಪ್ರಾಣಾದ್ಯೈರಧುನಾ ಕುರುಷ್ವ ನೃಪತೇ ಪೋತಂ ತ್ರಿಲೋಕೇಶ್ವರಂ॥ ೧೯ ॥**

**ನಾರಾಯಣಂ ನರಕಹರಂ ಸುರೇಶಂ**
**ಭಕ್ತ್ಯಾ ನಮಸ್ಕುರ್ವತಿ ಯೋ ನೃಪೇಶ**

**ಸ ವೀತ ಶೋಕಃ ಪರಮಂ ವಿಶೋಕಂ**
**ಪ್ರಾಪ್ನೋತಿ ವಿಷ್ಣೋಃ ಪದಮವ್ಯಯಂ ಯತ್ ॥ ೨೦ ॥**

**ಮಹಾತಪ :-** ಸಂಸಾರ ಸಾಗರದಲ್ಲಿ ಮುಳುಗುತ್ತಿರುವ ಮನುಷ್ಯರು ದೃಢವೂ, ಶಾಶ್ವತವೂ ಆದ ಹಡಗನ್ನು ಪಡೆಯಬೇಕು. ದೊರೆಯೇ ಧ್ಯಾನಗಳಿಂದ ಒಡಗೂಡಿದ ಪೂಜೆ, ಹೋಮ, ಧ್ಯಾನ, ಯಜ್ಞ ಮೊದಲಾದವುಗಳಿಂದ ಮೋಕ್ಷವನ್ನು ಸ್ವಾಧೀನಪಡಿಸಿಕೊಂಡಿರುವ ಸುರಭಟರೆಂಬ ಕೀಲುಗಳಿಂದ ಕೂಡಿ, ಮೇಲೆ ಪ್ರಾಣಾಪಾನಾದಿ ಮಹಾಯಜ್ಞಗಳಿಂದ (ಹಗ್ಗಗಳಿಂದ) ಬಂಧಿತನಾದ ತ್ರಿಲೋಕೇಶ್ವರನೆಂಬ ಹಡಗನ್ನು ನೀನು ಈಗ ಪಡೆ. ॥ ೧೯ ॥

ರಾಜೇಂದ್ರ, ನರಕಾಂತಕನೂ, ಸುರೇಶನೂ ಆದ ನಾರಾಯಣನನ್ನು ಭಕ್ತಿಯಿಂದ ನಮಸ್ಕರಿಸುವವರು ದುಃಖವನ್ನು ಕಳೆದುಕೊಂಡು, ಶೋಕ ಇಲ್ಲದುದೂ, ನಾಶರಹಿತವೂ ಆದ ವಿಷ್ಣುಪದ (ಮೋಕ್ಷ)ವನ್ನು ಪಡೆಯುವರು. ॥ ೨೦ ॥

**ರಾಜ :-** ಪೂಜ್ಯರೇ, ಮೋಕ್ಷವನ್ನು ಬಯಸುವವರು ಆ ಪರಮಾತ್ಮನನ್ನು ಹೇಗೆ ಅರ್ಚಿಸಬೇಕು ? ಪೂಜೆಯ ಕ್ರಮವು ಯಾವುದು ? ತಿಳಿಸಬೇಕು.

**ಮಹಾತಪ :-** ಬುದ್ಧಿವಂತನಾದಮಹಾರಾಜನೇ, ಯೋಗೀಶ್ವರನಾದಆಶ್ರೀಹರಿಯು ಸ್ತ್ರೀಯರಿಗೂಪುರುಷರಿಗೂಹೇಗೆಒಲಿಯುತ್ತಾನೆಅನ್ನುವುದನ್ನು ಹೇಳುತ್ತೇನೆಕೇಳು-

'ಈ ಬ್ರಹ್ಮಾಂಡಮಂಡಲದ ಮಧ್ಯದಲ್ಲಿರುವ ಈ ನಾಲ್ಕು ಮೊಗದ ಬ್ರಹ್ಮನೂ, ಎಲ್ಲ ದೇವತೆಗಳೂ, ಪಿತೃಗಳೂ, ಮಹಾವಿಷ್ಣುವಿನಿಂದಲೇ ಹುಟ್ಟಿದ್ದಾರೆ.' ಎಂದು ವೇದವು ಸ್ಪಷ್ಟವಾಗಿ ಸಾರುತ್ತದೆ. ಅಗ್ನಿ, ಅಶ್ವಿನೀ ದೇವತೆಗಳು, ಗೌರಿ, ಗಣಪತಿ, ನಾಗ, ಷಣ್ಮುಖ, ಆದಿತ್ಯ, ದುರ್ಗಾ ಸಹಿತರಾದ ಸಪ್ತ ಮಾತೆಯರು, ದಿಕ್ಪಾಲಕರು, ಯಮ, ರುದ್ರ, ಚಂದ್ರ ಹಾಗೂ ಪಿತೃಗಳೂ ಇವರೆಲ್ಲರೂ ಜಗತ್ಪತಿಯಾದ ಆ ಹಿರಣ್ಯ ಗರ್ಭನ ದೇಹದಿಂದಲೇ ಜನಿಸಿದರು. ಹೀಗೆ ಹುಟ್ಟಿದ ಈ ದೇವತೆಗಳಿಗೆಲ್ಲ ನಾವು ಮಹಾ ಸಮರ್ಥರು ಎಂಬ ಗರ್ವವು ಬಂದಿತು. ಎಲ್ಲರಿಗಿಂತ ನಾನೇ ಯೋಗ್ಯ, ನಾನೇ ಪೂಜ್ಯ ಎಂದು ಅವರೆಲ್ಲರೂ ಕೂಗಾಡ ಹತ್ತಿದರು. ಅಲ್ಲೋಲ ಕಲ್ಲೋಲವಾದ ಸಮುದ್ರದಂತೆ ಅವರ ವಾದ ಕಲ ಕಲದ ನಾದದಿಂದ ದಿಕ್ಕುಗಳಿಗೆಲ್ಲ ದುಮ್‌ದುಮಿಸಿದವು. ಹೀಗೆ ವಾದಿಸುವ ಆ ದೇವತೆಗಳ ಮಧ್ಯದಿಂದ ಅಗ್ನಿಯು ಎದ್ದು ನಿಂತು ''ನಿಜವಾಗಿ ವಿಚಾರಿಸಿದರೆ ನೀವೆಲ್ಲರೂ ನನ್ನನ್ನೇ ಪೂಜಿಸಬೇಕು. ಯಾಕೆಂದರೆ ನಾನು ಮಹಾತ್ಮ. ನಾನು ಇದ್ದುದರಿಂದಲೇ ಬ್ರಹ್ಮನ ಈ ಶರೀರವು ನಿಂತುಕೊಂಡಿದೆ. ನಾನು ಇದನ್ನು ಬಿಟ್ಟು ಎದ್ದು ಹೋದರೆ ಮರುಕ್ಷಣದಲ್ಲಿ ಈ ದೇಹವೂ ಬಿದ್ದು ಹೋಗುವುದು. ಬೇಕಾದರೆ ಪರೀಕ್ಷಿಸಿರಿ'' ಎಂದು ಹೇಳಿ ಅಗ್ನಿಯು ಆ ಬ್ರಹ್ಮನ ದೇಹವನ್ನು ಬಿಟ್ಟು ಹೊರ ಹೊರಟನು. ಅವನು ಹೊರಟು ಹೋದರೂ ಆ ದೇಹಕ್ಕೆ ಏನೂ ಆಗಲಿಲ್ಲ. ಅನಂತರ 'ಆಕಾಶ' ಎಂಬ ಹೆಸರಿನ ಗಣಪತಿಯು ''ನಾನಿಲ್ಲದ ಮೇಲೆ ಹಿಂದೆ ಯಾವ ದೇಹವೂ ಬದುಕಿಲ್ಲ. ಮುಂದೆ ಯಾವ ಶರೀರವೂ ಬದುಕಲಾರದು'' ಎಂದು ಹೇಳಿ ತಾನೂ ದೇಹದಿಂದ ಹೊರಟು ಹೋದನು. ಆದರೂ ಆ ಬ್ರಹ್ಮ ಶರೀರವು ಅಕ್ಷತವಾಗಿ ಏನೂ ಆಗದೇ ಸುರಕ್ಷಿತವಾಗಿಯೇ ಉಳಿಯಿತು. ಹೀಗೆ ಗೌರಿ, ಅಶ್ವಿನೀ ದೇವತೆಗಳು ಪ್ರಥಮ್ಯಾದಿ ಪಂಚಮಹಾಭೂತಗಳು, ಆದಿತ್ಯ, ದುರ್ಗಾದಿ ಮಾತೃಗಣಗಳು, ವಾಯು, ಧರ್ಮ, ಶಿವ ಮೊದಲಾದ ಎಲ್ಲ ದೇವತೆಗಳೂ ನಾನಿಲ್ಲದೇ ಈ ಜಗತ್ತೇ ಇಲ್ಲಎಂದು ಜಂಭ ಕೊಚ್ಚಿಕೊಂಡು ಈ ದೇಹದಿಂದ ಎದ್ದು ಹೋದರು. ಇಷ್ಟಾದರೂ ಷೋಡಶಕಲಾತ್ಮಕನೂ, ನಾಶರಹಿತನೂ, ಸೋಮಾಖ್ಯನೂ ಆದ ಆ ಸರ್ವಜ್ಞ ಪರಮೇಶ್ವರನಿಂದ ಸುರಕ್ಷಿತವಾಗಿ ಆ ಬ್ರಹ್ಮ ಶರೀರವು ಯಾವುದೇ ಕ್ಷತಿ ಇಲ್ಲದೇ, ಚ್ಯುತಿ ಇಲ್ಲದೇ, ಮೃತಿ ಇಲ್ಲದೇ, ಯಥಾಸ್ಥಿತವಾಗಿ ಸುರಕ್ಷಿತವಾಗಿಯೇ ಇದ್ದಿತು. ಅದನ್ನು ನೋಡಿ ಅಗ್ನಿ ಮೊದಲಾದ ಕ್ಷೇತ್ರಸ್ಥ ದೇವತೆಗಳೆಲ್ಲರೂ ವಿಸ್ಮಿತರಾಗಿ ಅವನಿಗೆ ಶರಣು ಬಂದರು. ಮತ್ತು ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತುಕೊಂಡು ಎಲ್ಲ ದೇವತೆಗಳೂ ಕೂಡಿ ಆ ವಿಷ್ಣು ಭಗವಂತನನ್ನು ಕೊಂಡಾಡಿದನು.

''ಭಗವನ್ ನಿಜವಾದ ಅಗ್ನಿಯು ನೀನೇ ಆಗಿರುವೆ. ನಿಜವಾದ ಮುಖ್ಯಪ್ರಾಣನು ನೀನು. ನಿನ್ನಿಂದ ಚಾಲಿತನಾಗಿ, ಚೋದಿತನಾಗಿ, ಪ್ರೇರಿತನಾಗಿ ಕಾರ್ಯಮಾಡಿ ನಿನ್ನ ಆಜ್ಞೆಯನ್ನು ಪಾಲಿಸಿ ಈ ಪ್ರಾಣನು ನಿನ್ನದೇ ಆದ ಈ ಪ್ರಾಣ ಶಬ್ದದಿಂದ ಪ್ರಸಿದ್ಧನಾಗಿದ್ದಾನೆ. ಇದರಂತೆ ತನ್ನ ಅಂತರ್ಗತನಾದ ನಿನ್ನ ಕಾಂತಿಯಿಂದಲೇ ಬೆಳಗುವ

ಈ ಆದಿತ್ಯನು ಅಮುಖ್ಯ ಆದಿತ್ಯನು. ನಿಜವಾಗಿ ಆದಿತ್ಯ ಶಬ್ದದ ಮುಖ್ಯ ವಾಚ್ಯನು ನೀನೇ ಆಗಿರುವೆ. ಮುಖ್ಯ ಪರಮೇಶ್ವರನೂ ನೀನೇ. ದುರ್ಗಾ, ಸರಸ್ವತೀ, ಆಕಾಶ, ಕುಬೇರ, ವಿಷ್ಣು, ಯಮಧರ್ಮ, ಇಂದ್ರ ಮುಂತಾದ ಸರ್ವ ಶಬ್ದಗಳಿಂದ ನೀನೇ ಬೋಧ್ಯನಾಗಿರುವೆ. ಈ ಎಲ್ಲ ಹೆಸರುಗಳು ನಮ್ಮಲ್ಲಿ ಗೌಣ, ನಿನ್ನಲ್ಲಿ ಪ್ರಧಾನ, ನಾವೆಲ್ಲರೂ ಹೊರಟು ಹೋದರೂ ಈ ಶರೀರಕ್ಕೆ ಏನೂ ಆಗಲಿಲ್ಲ. ನೀನು ಮುಖ್ಯಧಾರಕನಾಗಿ ಇರುವಾಗ ನಾವೆಲ್ಲರೂ ಇದ್ದರೂ ಅಷ್ಟೆ, ಹೋದರೂ ಅಷ್ಟೇ. ನೀನೆ ಆ ದೇಹವನ್ನೂ ನಮ್ಮನ್ನೂ ಕೂಡಿಯೇ ರಕ್ಷಿಸಬೇಕು. ಗರ್ವದಿಂದ ನಾವು ಮಾತನಾಡಿದ್ದಕ್ಕಾಗಿ ನಮ್ಮನ್ನು ಸ್ಥಾನ ಚ್ಯುತರನ್ನಾಗಿ ಮಾಡಬೇಡ. ನಮ್ಮನ್ನೆಲ್ಲ ಹುಟ್ಟಿಸಿದವನು ನೀನೇ ಅಲ್ಲವೇ ! ಆದುದರಿಂದ ಪಾಲಿಸುವ ಹೊಣೆಗಾರಿಕೆಯೂ ನಿನ್ನದೇ ಆಗಿದೆ.'' ''ಈ ರೀತಿಯಾಗಿ ದೇವತೆಗಳು ಮಾಡಿದ ಪ್ರಾರ್ಥನೆಯಿಂದ ಪರಮಾತ್ಮನಿಗೆ ಸಂತೋಷವಾಯಿತು. ಆನಂದದಿಂದ ಅವನು ಆ ದೇವತೆಗಳನ್ನು ಕುರಿತು ನುಡಿದನು.''

### *ಶ್ರೀ ಭಗವಾನುವಾಚ*

''ದೇವತೆಗಳೇ, ಆಟಕ್ಕಾಗಿ ನಿಮ್ಮನ್ನು ನಾನು ಸೃಷ್ಟಿಸಿದೆನು. ಕೃತ ಕೃತ್ಯನಾದ ನನಗೆ ನಿಮ್ಮಿಂದ ಯಾವ ಪ್ರಯೋಜನವೂ ಇಲ್ಲ. ಹಾಗೆ ನಿಮಗೆ ಈ ರೂಪದಲ್ಲಿ ಪ್ರೀತಿಯಿಲ್ಲದಿದ್ದರೆ ಈಗ ಭೂತ ಕಾರ್ಯಗಳಲ್ಲಿ ಅಮೂರ್ತಿಗಳೂ (ನಿರಾಕಾರನೂ) ದೇವಲೋಕದಲ್ಲಿ ಸಮೂರ್ತಿಗಳೂ (ಸಾಕಾರರೂ) ಆಗಿರಿ. ಹೀಗೆ ಪ್ರತ್ಯೇಕವಾದ ಎರಡೆರಡು ರೂಪಗಳಿಂದ ಇರಿ. ಕಾಲಾಂತರದಲ್ಲಿ ನಿಮಗೆ ಬೇಗನೆ ಲಯವುಂಟಾಗುವುದು. ಶರೀರಗಳೇ ನಾನು ಎಂದು ಯಾರೂ ಎಂದೂ ಅಭಿಪ್ರಾಯವನ್ನು ಮಾಡಬಾರದು. ಸಾಕಾರರು ಆದ ನಿಮಗೆ ಈಗ ಎರಡೆರಡು ಹೆಸರುಗಳುಂಟಾಗುವುವು. ಅಗ್ನಿಯು ವೈಶ್ವಾನರನೆಂದೂ, ಪ್ರಾಣಾಪಾನಗಳು ಅಶ್ವಿನೀ ದೇವತೆಗಳೆಂದೂ ಎನಿಸುವರು. ಗೌರಿಯು ಹಿಮವತ್ಪುತ್ರಿಯೆನಿಸುವಳು. ಈ ಪೃಥಿವ್ಯಾದಿ ಗುಣವು ಗಣಪತಿಯಾಗುವುದು. ಈ ಶರೀರ ಧಾತುಗಳು ನಾನಾ ಭೂತ (ಪ್ರಾಣಿ)ಗಳಾಗುವುವು. ಅಹಂಕಾರವು ಸ್ಕಂದ ಮತ್ತು ಕಾರ್ತಿಕೇಯನೆನಿಸುವನು. ಈ ಶರೀರ ಮಾಯೆಯು ಕಾರಣಾಂತರದಲ್ಲಿ ದುರ್ಗೆಯಾಗುವಳು. ಈ ದಿಕ್ಕುಗಳು ವರುಣನ ಹತ್ತು ಜನ ಕನ್ನೆಯರಾಗುವರು. ಈ ವಾಯುವು ಕಾರಣಾಂತರದಲ್ಲಿ ಕುಬೇರನಾಗುವನು. ಮನಸ್ಸು ವಿಷ್ಣುವೆಂಬ ಹೆಸರುಳ್ಳದ್ದಾಗುವುದು. ಮಹತ್ತತ್ವವು ಭಗವಂತನಾದ ಈಶ್ವರನಾಗುವದು. ಇಂದ್ರಿಯ ವಿಷಯಗಳು ನಿಜವಾದ ಪಿತೃಗಳಾಗುವವು. ಈ ಚಂದ್ರನು ಮುಂದುಗಡೆ ಯಾವಾಗಲೂ ಜಾಮಿತ್ರ ನಾಗಿರುವನು.'' ಹೀಗೆ ನಾರಾಯಣ ಸ್ವರೂಪನಾದ ವೇದ ಪುರುಷನು ಹೇಳಿ ನಿಲ್ಲಿಸಿದನು. ದೇವತೆಗಳೆಲ್ಲರೂ ತಮ್ಮೆಡೆಯಲ್ಲಿ ನಿಂತರು. ವೇದವೇದ್ಯನೂ, ಜನಾರ್ದನನೂ ಆದ ಆ ದೇವನು ಇಂತಹ ಪ್ರಭಾವವುಳ್ಳವನು. ಇದನ್ನು ನಿನಗೆ ಹೇಳಿದ್ದೇನೆ. ಬೇರಾವುದನ್ನು ಕೇಳಲಿಚ್ಛಿಸುವೆ ?

*ವರಾಹ ಪುರಾಣದಲ್ಲಿ ಹದಿನೇಳನೇ ಅಧ್ಯಾಯವು ಮುಗಿದುದು*

—o—

## ಅಗ್ನಿಯ ಉತ್ಪತ್ತಿ

## ಅಧ್ಯಾಯ - ೧೮

**ಮಹಾತಪ :-** ಒಂದಾನೊಂದು ಕಾಲದಲ್ಲಿ ಸರ್ವಜ್ಞನೂ, ಪರಮಾತ್ಮನೂ ಆದ ನಾರಾಯಣನು ಯೋಗ ಸಾಧ್ಯಸ್ವರೂಪದಿಂದ ಕ್ರೀಡಿಸುತ್ತಿರುವಾಗ ತನ್ನಷ್ಟಕ್ಕೆ ತಾನೇ ಅವನಿಗೆ ಭೋಗೇಚ್ಛೆಯಾಯಿತು. ಯೋಗಸಾಧ್ಯವಾದ ರೂಪವು ಕಾರ್ಯೋನ್ಮುಖವಾಗಿ ಚಲಿಸಲು ಮೂಲ ಪ್ರಕೃತಿ ರೂಪವಾದ ಅತ್ಯಾಶ್ಚರ್ಯಕರ ವಾದ ಈ ಮುಂದೆ ಹೇಳುವ ವಸ್ತುವುಂಟಾಯಿತು. ಪ್ರೀತಿಯುಳ್ಳ ನಾರಾಯಣನು ಆ ಸದ್ರೂಪವಾದ ಮೂಲ ಪ್ರಕೃತಿಯನ್ನು ವಿಕಾರವುಳ್ಳದ್ದನ್ನಾಗಿ ಸಂಕಲ್ಪಿಸಿದನು. ವಿಕಾರವನ್ನು ಪಡೆದು ಅವನಿಂದ ಮಹಾಗ್ನಿಯುದಿಸಿತು. ಕೋಟಿ ಜ್ವಾಲೆಗಳಿಂದ ಕೂಡಿ ಶಬ್ದಮಾಡುವುದೂ, ಸುಡುವ ಸ್ವಭಾವುಳ್ಳದ್ದೂ, ಅತಿ ತೇಜಸ್ಸುಳ್ಳದ್ದೂ ಆದ ಆ ಅಗ್ನಿಗೂ ವಿಕಾರೇಚ್ಛೆಯುಂಟಾಯಿತು. ವಿಕಾರವನ್ನು ಪಡೆದ ಅಗ್ನಿಯಿಂದ ಅತಿ ದಾರುಣವಾದ ವಾಯು ಪ್ರಕಾಶಕ್ಕೆ ಬಂದಿತು. ವಿಕೃತನಾದ ಆ ವಾಯುವಿನಿಂದ ಆಕಾಶವುಂಟಾಯಿತು. ಆಕಾಶವು ಶಬ್ದ ಲಕ್ಷಣ (ಗುಣ) ವುಳ್ಳದ್ದು. ವಾಯುವು ಅತಿ ಶಕ್ತಿ ಪ್ರತಾಪವುಳ್ಳದ್ದು. ಆ ತೇಜಸ್ಸು ನೀರಿನಿಂದಲೂ ಕೂಡಿದುದ್ದಾಯಿತು. ಅವೆರಡೂ ಪರಸ್ಪರ ಮಿಳಿತವಾಗಲು ಉಗ್ರವಾಗಿ ಚಲಿಸುವ ವಾಯುವಿನಿಂದ ಪ್ರೇರಿತವಾದ ತೇಜಸ್ಸಿನಿಂದ ಇಂಗಿದ ನೀರೆಲ್ಲ ಆಕಾಶದಲ್ಲಿ ಒಡನೆಯೇ ಉಂಡೆಯಾಗಿ ಹಾಗೆಯೇ ಕಾಠಿನ್ಯವನ್ನು ಪಡೆಯಿತು. ಮಹಾಭಾಗ್ಯಶಾಲಿಯೇ, ಅದೇ ಈ ಪೃಥ್ವಿಯಾಗಿದೆ. ಚತುರ್ಭೂತಗಳ ಸಂಬಂಧದ ಕಠಿಣತೆಯಿಂದಲೂ ಒಂದೊಂದು ಗುಣದ ಹೆಚ್ಚಿಕೆಯಿಂದಲೂ ಪೃಥ್ವಿಯು ಪಂಚಗುಣವುಳ್ಳದೆಂದೂ ತಿಳಿಯಬೇಕು. ಈ ಚತುರ್ಭೂತಗಳೂ ಪೃಥ್ವಿಯಲ್ಲಿವೆ. ಅದು ಕಠಿನವಾಗುತ್ತಾ ಬ್ರಹ್ಮಾಂಡವಾಯಿತು. ಆ ಬ್ರಹ್ಮಾಂಡದಲ್ಲಿ ನಾರಾಯಣ ದೇವನು ಬಗೆ ಬಗೆಯಾದ ಪ್ರಜೆಗಳನ್ನು ಸೃಷ್ಟಿಸುವ ಇಚ್ಛೆಯಿಂದ ನಾಲ್ಕು ಮುಖಗಳೂ, ನಾಲ್ಕು ತೋಳುಗಳೂ ಉಳ್ಳ ಬ್ರಹ್ಮರೂಪದಿಂದ ನಿಂತನು. ಲೋಕ ಪಿತಾಮಹನಾದ (ಅಜ್ಜನಾದ) ಆತನು ಸೃಷ್ಟಿಯನ್ನು ಯೋಚಿಸುತ್ತಿದ್ದರೂ ಅದು ಒಡನೆಯೇ ಆಗದಿರಲು ಆತನಿಗೆ ಅತಿ ಭಯಂಕರವಾದ ಮಹಾಕೋಪವುಂಟಾಯಿತು. ಆ ಕೋಪದಿಂದ ಸುಡುವ ಸ್ವಭಾವವುಳ್ಳ ಅಗ್ನಿಯು ಎದ್ದು ನಿಂತನು. ಎಂದರೆ ಈ ಕೋಪವೇ ಅಗ್ನಿಯಾಯಿತು. ದೊರೆಯೇ, ಆ ಅಗ್ನಿಯು ಆ ಬ್ರಹ್ಮನನ್ನೇ ಸುಡಬಯಸಲು ಆಗ ಬ್ರಹ್ಮನು ''ಹವ್ಯ+ಕವ್ಯಗಳನ್ನು ವಹಿಸು'' ಎಂದು ಹೇಳಿದನು. ಬಳಿಕ ಆ ಹವ್ಯವಾಹನನು (ಅಗ್ನಿ) ಹಸಿದವನಾಗಿ ಬ್ರಹ್ಮನ ಹತ್ತಿರ ಹೋಗಿ, ''ನಾನೇನು ಮಾಡಲಿ ? ಅಜ್ಞಾಪಿಸು'' ಎಂದನು. ಬ್ರಹ್ಮನು ಅವನಿಗೆ ಹೇಳಿದನು. ''ಕಾಂತಿಧನನೇ ನೀನು ಮೂರುಬಗೆಯಲ್ಲಿ ತೃಪ್ತಿಯನ್ನು ಪಡೆಯುತ್ತೀಯೇ, ಯಜ್ಞಾದಿಗಳಲ್ಲಿ ಮೊದಲು ನಿನಗೆ ಕೊಡುವ ದಕ್ಷಿಣೆ(ದಾನ)ಗಳಿಂದ ತೃಪ್ತನಾಗಿ ಬಳಿಕ ದೇವತೆಗಳ ದಕ್ಷಿಣೆಯ (ದಾನದ) ಭಾಗವನ್ನು ಅವರಿಗೆ ಒಯ್ಯುವುದರಿಂದ ನೀನು ''ದಕ್ಷಿಣಾಗ್ನಿಯೆನಿಸುವೆ.'' ''ಮೂರು ಲೋಕಗಳಲ್ಲಿ ಎಲ್ಲ ಕಡೆಯಿಂದಲೂ ಹೋಮ ಮಾಡುವ ಯಾವುದೊಂದನ್ನೂ ದೇವತೆಗಳಿಗಾಗಿ ವಹಿಸು. ಅದರಿಂದ ನೀನು ಹವ್ಯವಾಹನನೆನಿಸಿಕೊಳ್ಳುವೆ. ಶರೀರವು ಗೃಹವೆಂದೆನಿಸುವುದು. ಈಗ ನೀನು ಆ ಗೃಹಕ್ಕೆ

ಪತಿ ಆಗುವೆ. ಆದುದರಿಂದ ಸರ್ವಗತನಾದ ನೀನು ಗಾರ್ಹಪತ್ಯನೆಂಬ ಹೆಸರುಳ್ಳವನಾಗು. ಹೋಮವನ್ನು ಪಡೆದು ನೀನು 'ವಿಶ್ವ' (ಸಮಸ್ತ) ನರರನ್ನೂ ಸದ್ಗತಿಗೊಯ್ಯುವೆ ಯಾದುದರಿಂದ 'ವೈಶ್ವಾನರ ' ನೆಂಬ ಹೆಸರು ನಿನಗೆ 'ನಿಜ' (ಸತ್ಯ)ವಾದುದಾಗುವುದು. 'ಬಲಕ್ಕೂ' (ಶಕ್ತಿಗೂ), 'ಧನಕ್ಕೂ', ದ್ರವಿಣವೆಂದು ಹೆಸರು. ಆ ದ್ರವಿಣವನ್ನು ನೀನು ಕೊಡುತ್ತೀಯೆ. ಆದುದರಿಂದ ನೀನು ದ್ರವಿಣೋದನಾದೆ. ನಿನ್ನಿಂದ ಪಾಪವು ಶಬ್ದ ಮಾಡದೇ ಯಾವಾಗಲೂ ಮಾಯವಾಗುವುದು. ನೀನು ಸತ್ಯಾತ್ಮನು. ಆದುದರಿಂದ ನಿನ್ನ 'ತೇಜಸ್ಸು' (ಉರಿ) ಎಲ್ಲಾ ಕಡೆಗೂ ಹರಡುವುದರಿಂದಲೂ ನೀನು ಸರ್ವವ್ಯಾಪಿ ಯಾಗಿರುವುದರಿಂದಲೂ ನಿನಗೆ ಅಗ್ನಿಯೆಂದು ಹೆಸರು. ಪ್ರಪೂರಣಾರ್ಥಕವಾದ ಧ್ಮಾ ಶಬ್ದವು 'ಇಧ್ಮ' (ಸಮ್ಮಿತ್ತು)ಗಳನ್ನು ಹೇಳುತ್ತದೆ. 'ಇಧ್ಮ' ಪೂರ್ಣನಾಗಿ 'ದೀಪ್ತನಾಗು' (ಜ್ವಲಿಸು)ವುದರಿಂದ ನೀನು ಇಧ್ಮನೆನಿಸಿಕೊಳ್ಳುವೆ. ಪುತ್ರನೇ, ಮಹಾಯಜ್ಞಗಳಲ್ಲಿ ನಿನ್ನ ಹೆಸರುಗಳು ಪೂಜ್ಯವಾದವುಗಳು. ಮನುಷ್ಯರು ನಿಜವಾಗಿಯೂ ನಿನ್ನನ್ನು ಇಷ್ಟಗಳಿಂದ ಪೂಜಿಸುತ್ತ ತೃಪ್ತಿ ಪಡಿಸುವರು.

*ವರಾಹ ಪುರಾಣದಲ್ಲಿ ಹದಿನೆಂಟನೇ ಅಧ್ಯಾಯ ಮುಗಿದುದು*



## ಅಗ್ನಿ ಪ್ರಾಶಸ್ತ್ಯ

## ಅಧ್ಯಾಯ - ೧೯

**ಮಹಾತಪ ಋಷಿ :-** ಪ್ರಜಾಪಾಲಕನೇ, ಮಾತಿನ ಸಂದರ್ಭದಿಂದ ನಿನಗೆ ವಿಷ್ಣುವಿನ ಅಣಿಮಾದ್ಯೈಶ್ವರ್ಯ ಮಹಿಮೆಯನ್ನು ಹೇಳಿದುದಾಯಿತು. ತಿಥಿಗಳ (ಮಹಾತ್ಮ್ಯ) ಮಹಿಮೆಯನ್ನು ಹೇಳುವೆನು ಕೇಳು. ಬ್ರಹ್ಮನ ಕೋಪದಿಂದುದಿಸಿ, ಅವನಿಂದ ಹಿಂದೆ ಹೇಳಿದಂತೆ ಆಜ್ಞಪ್ತನಾದ ಅಗ್ನಿಯು ದೇವನಾದ ಬ್ರಹ್ಮನನ್ನು ''ವಿಭುವೇ, ಯಾವುದರಲ್ಲಿ ಪೂಜಿತನಾಗಿ ನಾನು ಸಮಸ್ತ ಜಗತ್ತಿನಲ್ಲಿಯೂ ಪ್ರಸಿದ್ಧಿಯನ್ನು ಪಡೆಯಬಹುದೋ ಅಂತಹ ತಿಥಿಯೊಂದನ್ನು ನನಗೆ ನಿಷ್ಕರ್ಷಿಸಿಕೊಡು'' ಎಂದು ಬೇಡಿದನು.

**ಬ್ರಹ್ಮನು :-** ಸದುತ್ತಮನೇ, ಪಾವಕ, ನೀನು ಗಂದರ್ವಯಕ್ಷರಿಗೆ ಮೊದಲು ಪ್ರತಿಪತ್(ಪಾಡ್ಯ) ತಿಥಿಯಲ್ಲಿ ಉದಿಸಿದ್ದೀಯೆ. ನಿನ್ನ ಪದದಿಂದ ದೇವತೆಗಳು ಪ್ರಾತಿಪದಿಕರಾಗುವರು. ಆದುದರಿಂದ ಪ್ರತಿಪತ್ (ಪಾಡ್ಯ) ಎಂಬ ಹೆಸರುಳ್ಳದ್ದು ನಿನ್ನ ಜನ್ಮ ತಿಥಿ. ಆ ತಿಥಿಯಲ್ಲಿ ಅಗ್ನಿ ಮುಖದಲ್ಲಿ ಹವಿಸ್ಸಿನಿಂದ ಹೋಮ ಮಾಡುವವರಿಗೆ ಪಿತೃಗಳೂ, ಸರ್ವದೇವತೆಗಳೂ ಪ್ರೀತರಾಗುವರು. ನಿನ್ನ (ಮುಖದ)ಲ್ಲಿ ತೃಪ್ತಿಪಡಿಸಲ್ಪಟ್ಟ + ಚತುರ್ವಿಧ ಭೂತಗಳೂ, ಮನುಷ್ಯರೂ, ಪಶುಗಳೂ, ಅಸುರರೂ, ಗಂಧರ್ವ ಸಹಿತರಾದ ಸರ್ವದೇವತೆಗಳೂ, ಪ್ರೀತರಾಗುವರು. ಪಾಡ್ಯದ ದಿನ ನಿನ್ನ ಭಕ್ತರಾರು ಉಪವಾಸ ಮಾಡುವರೋ ಅಥವಾ ಹಾಲನ್ನು ಮಾತ್ರ ಕುಡಿದಿರುವರೋ ಅವರಿಗಾಗುವ ಮಹಾಫಲವನ್ನು ಕೇಳು. ಅಂತಹರು ಇಪ್ಪತ್ತಾರು ಚತುರ್ಯುಗ ಕಾಲ ಸ್ವರ್ಗಲೋಕದಲ್ಲಿ ಸಂತೋಷದಿಂದಿರುವರು. ಈ ಲೋಕದಲ್ಲಿ ತೇಜಸ್ವಿಗಳೂ, ರೂಪಸಂಪನ್ನರೂ, ಧನಿಕರೂ ಆಗಿ ಶುಭವನ್ನು ಪಡೆಯುವರು. ಮನುಷ್ಯ ಜನ್ಮದಲ್ಲಿ ರಾಜನಾದವನು ಈ ದೇಹವನ್ನು ತ್ಯಜಿಸಿದ ಬಳಿಕ ಸ್ವರ್ಗಲೋಕದಲ್ಲಿ ಸೇರಿ ಪೂಜ್ಯನಾಗುವನು''. ಬ್ರಹ್ಮನ ಈ ನುಡಿಯನ್ನು ಕೇಳಿ ಅಗ್ನಿಯು ಸಂತುಷ್ಟನಾಗಿ ಬ್ರಹ್ಮದತ್ತವಾದ ಆಶ್ರಮಕ್ಕೆ ಹೋದನು. ಯಾರು ನಿತ್ಯವೂ ಬೆಳಿಗ್ಗೆ ಎದ್ದು ಈ ಅಗ್ನಿ ವಿಚಾರವನ್ನು ಕೇಳುವರೋ ಅವರು ಪಾಪಗಳಿಂದ ಬಿಡುಗಡೆಯನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

*ವರಾಹ ಪುರಾಣದಲ್ಲಿ ಹತ್ತೊಂಬತ್ತನೇ ಅಧ್ಯಾಯ ಮುಗಿದುದು*

—o—

## ಸೂರ್ಯನ ಇಜಡು ಸಂಸಾರ ಅಶ್ವಿನೀ ದೇವತೆಗಳ ಉತ್ಪತ್ತಿ

ಅಧ್ಯಾಯ - ೨೦

**ಪ್ರಜಾಪಾಲ :-** ಬ್ರಹ್ಮನೇ, ಮಹಾತ್ಮನಾದ ಅಗ್ನಿಯ ಉತ್ಪತ್ತಿಯು ಹೇಗಾಯಿತು ? ಪ್ರಾಣಾಪಾನಗಳು ಅಶ್ವಿನೀ ದೇವರಾಗಿ ಹೇಗೆ ಜನಿಸಿದವು ?

**ಮಹಾತಪಮುನಿ :-** ಮರೀಚಿಯು ಬ್ರಹ್ಮನ (ಮಾನಸ) ಪುತ್ರ. ಬ್ರಹ್ಮನು ತಾನೇ ಒಂಬತ್ತು ರೂಪಗಳುಳ್ಳವನಾದನು. ಎಂದರೆ ಒಂಬತ್ತು ಮಂದಿ ಮಾನಸ ಪುತ್ರರನ್ನು ಸೃಷ್ಟಿಸಿದನು. ಅವರಲ್ಲಿ ಮರೀಚಿಯು ಶ್ರೇಷ್ಠತೆಯನ್ನು ಪಡೆದನು. ಆ ಮರೀಚಿಯ ಮಗ ಮಹಾತೇಜನಾದ ಕಶ್ಯಪನೆಂಬ ಮುನಿಯು ಶ್ರೀಮಂತನೂ, ತಾನೇ ಪ್ರಜಾಪತಿಯೂ ಆಗಿ ದೇವತೆಗಳಿಗೆ ತಂದೆಯಾದನು. ದೊರೆಯೇ ಆ ಕಶ್ಯಪರ ಪುತ್ರರು ದ್ವಾದಶಾದಿತ್ಯರು. ನಾರಾಯಣಾತ್ಮಕವಾದ ತೇಜಸ್ಸೇ ದ್ವಾದಶಾದಿತ್ಯರೆಂದೆನಿಸಿಕೊಂಡಿದೆ. ಆ ಹನ್ನೆರಡು ಮಾಸಗಳೂ ದ್ವಾದಶಾದಿತ್ಯರು, ಸಂವತ್ಸರವು ಸಾಕ್ಷಾತ್ ಶ್ರೀ ಹರಿಯೇ ಸರಿ. ಹೀಗೆ ಆದಿತ್ಯರು ಹನ್ನೆರಡು ಮಂದಿ. ಅವರಲ್ಲಿ ಮಾರ್ತಂಡನು ಮಹಾಪ್ರತಾಪವುಳ್ಳವನು.

ದೇವತೆಗಳ ಒಡೆಯನಾದ ವಿಶ್ವಕರ್ಮನಿಗೆ ಸಂಜ್ಞಾ ಎಂಬ ಕನ್ಯೆ ಜನಿಸಿದಳು. ಅವಳು ರೂಪದಿಂದ ರತಿಗೆ ಮಿಗಿಲು. ಕಾಂತಿಯಿಂದ ದಶದಿಕ್ಕುಗಳನ್ನೇ ಬೆಳಗುತ್ತಿದ್ದಳು. ಅವಳು ಪ್ರಾಯಪ್ರಬುದ್ಧಳಾದ ಬಳಿಕ ದೇವಬಡಿಗನು ಅವಳನ್ನು ಸೂರ್ಯನಿಗೆ ಮದುವೆ ಮಾಡಿಕೊಟ್ಟನು. ರವಿಯ ತೇಜಸ್ಸು ದಿನಕ್ಕೊಂದು ರೀತಿಯಿಂದ ಬೆಳೆಯುತ್ತಲಿದ್ದಿತು. ಕ್ಷಣಕ್ಕೊಂದು ಬಗೆಯಾಗಿ ಹಬ್ಬುತ್ತಿತ್ತು. ಬರಬರುತ್ತಾ ಸೂರ್ಯಮಂಡಲವು ಉರಿಯುವ ತೇಜಃಪ್ರಕರ್ಷದಿಂದ ಅಗ್ನಿ ಪಿಂಡದಂತೆ ದುಸ್ಸಹವಾಗತೊಡಗಿತು. ಮಡದಿ ಸಂಜ್ಞೆಗೆ ಪತಿಯ ಬಳಿಗೆ ಹೋಗುವದೆಂದರೆ ಸಿಡಿಲಿನೊಡನೆ ಸರಸವಾಡಿದಂತೆ, ಬೆಂಕಿಯನ್ನೇ ಬಿಗಿದಪ್ಪಿದಂತೆ ಅನಿಸುತ್ತಿತ್ತು. ಆಗಲೇ ಅವಳಿಗೆ ಸೂರ್ಯನಿಂದ ಯಮ ಎಂಬ ಒಂದು ಗಂಡುಮಗವೂ ಯಮಿಯೆಂಬ ಹೆಣ್ಣುಮಗಳೂ ಜನಿಸಿದ್ದಳು. ಮುಂದೆ ಅನುದಿನವೂ ಬೆಳೆಯುವ ಆ ಆದಿತ್ಯನ ಜ್ವಲಂತ ಜ್ವಾಲಾಮಾಲೆಗಳನ್ನೂ ದುಸ್ಸಹವಾದ ದಿವ್ಯದೇಹ ದೀಧಿತಿಯನ್ನೂ ತಾಳಿಕೊಳ್ಳಲು ಆಗದೆ ಸಂಜ್ಞಾದೇವಿಯು ಒಂದು ಯುಕ್ತಿಯನ್ನು ಮಾಡಿದಳು. ತನ್ನ ಮೈ ನೆರಳಿನಲ್ಲಿ ಜೀವ ಕಳೆಯನ್ನು ತುಂಬಿ ಅವಳನ್ನು ತನ್ನ ಸ್ಥಾನದಲ್ಲಿ ಇರಿಸಿದಳು. ತನ್ನ ಎರಡೂ ಮಕ್ಕಳನ್ನು ಅವಳಿಗೆ ಒಪ್ಪಿಸಿ, ''ಸಂಜ್ಞಾ ಎಂಬ ಹೆಸರಿನಿಂದ ನೀನು ನಾನೇ ಆಗಿ ನನ್ನ ಪತಿ ರವಿಯೊಂದಿಗೆ ಸಂಸಾರ ಮಾಡಿಕೊಂಡು ಇರು. ನಾನು ಇಲ್ಲಿಂದ ಹೋದ ಗುಟ್ಟನ್ನು ಯಾರೆದುರೂ ಬಿಟ್ಟುಕೊಡಬೇಡ'' ಎಂದು ಹೇಳಿದಳು. ಮತ್ತು ತನ್ನ ಅನುಪಮವಾದ ಲಾವಣ್ಯ ಮತ್ತು ಲೋಭನೀಯವಾದ ತಾರುಣ್ಯಗಳನ್ನು ಕಂಡು ದುಷ್ಟರು ಬಲಾತ್ಕಾರಕ್ಕೆ ಎಳಿಸಬಹುದೆಂದು ಯೋಚಿಸಿ ಆ ಸೂರ್ಯ ಸುಂದರಿಯು ಒಂದು ಹೆಣ್ಣು ಕುದುರೆಯ ವೇಷವನ್ನು ತೊಟ್ಟಳು. ತನ್ನ ಮಕ್ಕಳನ್ನು ಮತ್ತೊಮ್ಮೆ ಮುದ್ದಿಟ್ಟು ತನ್ನ ಸೋದರಿ ಛಾಯಾದೇವಿಗೆ ತನ್ನ ಪತಿಯನ್ನು ಪ್ರೀತಿಯಿಂದ ಕಾಪಾಡ ಬೇಕೆಂದು ಮತ್ತೆ ಮತ್ತೆ ಒತ್ತಿ ಹೇಳಿ ಗಂಡನ ಮನೆಯನ್ನು ಬಿಟ್ಟಳು. ಮನೋವೇಗವುಳ್ಳ ಕುದುರೆ ನಡಿಗೆಯಿಂದ ಅವಳು ಉತ್ತರಕುರುದೇಶಕ್ಕೆ ಪ್ರಯಾಸ ಬೆಳೆಸಿದಳು.

ಇತ್ತ ಸೂರ್ಯ ದೇವನಿಗೆ ತನ್ನ ಮಡದಿಯಾದ ಸಂಜ್ಞಾದೇವಿಯು ಹೊರಟು ಹೋದ ಸಮಾಚಾರವು ಗೊತ್ತೇ ಆಗಲಿಲ್ಲ. ಅವಳ ಸ್ಥಾನದಲ್ಲಿ ತನ್ನ ಮನೆಯಲ್ಲಿದ್ದ ಛಾಯದೇವಿಯು ಮೂಲ ಸಂಜ್ಞಾದೇವಿಯು ಅಲ್ಲ ಎಂದು ಗುರುತು ಆಗಲಿಲ್ಲ. ಅವಳ ನೆರಳೇ ಅವಳು. ಆದುದರಿಂದ ಛಾಯೆಯ ರೂಪವು ಸಂಜ್ಞೆಯ ಪ್ರತಿರೂಪದಂತೆಯೇ ಇದ್ದಿತು. ಚೆಲುವು, ನಿಲುವು, ಒಲವು, ನಡೆ, ನುಡಿ, ಬೆಡಗು, ಬಿನ್ನಾಣ, ಎಲ್ಲವೂ ಒಂದೇ ಬಗೆಯಾಗಿ ಇದ್ದುದರಿಂದ ಸ್ಥೂಲ ದೃಷ್ಟಿಯ ಸೂರ್ಯ ದೇವನಿಗೆ ಇವಳು ತನ್ನ ಮೂಲ ಮಡದಿಯ ಪ್ರತಿನಿಧಿಯೆಂತಾಗಲಿ, ಪ್ರತಿಬಿಂಬವೆಂತಾಗಲಿ ತಿಳುವಳಿಕೆಯು ಬರಲೇಲ್ಲ. ಸಂದೇಹವೂ ಬರಲಿಲ್ಲ. ಅವಳೇ ತಾನು ಮೆಚ್ಚಿ ಮದುವೆಯಾದ ಮಡದಿ ಸಂಜ್ಞಾದೇವಿ ಎಂದು ತಿಳಿದು ಸೂರ್ಯನು ಪ್ರೀತಿಯಿಂದ ಅವಳೊಡನೆ ಸರಸವಾಗಿಯೇ ಸಂಸಾರ ಮಾಡಿಕೊಂಡು ಇದ್ದನು. ಅವನಿಗೆ ಈ ಛಾಯೆಯಲ್ಲಿಯೂ ಇಬ್ಬರು ಮಕ್ಕಳಾದರು ಗಂಡು ಮಗು ಶನೀಶ್ವರ. ಹೆಣ್ಣು ಮಗು ತಪತೀ.

ಛಾಯಾದೇವಿಯು ತನಗೂ ಇಬ್ಬರು ಮಕ್ಕಳಾದ ಬಳಿಕ ತನ್ನ ಸವತಿಯ ಮಕ್ಕಳನ್ನು ಅಸೂಯೆಯಿಂದ ಕಾಣತೊಡಗಿದಳು. ತನ್ನ ಮಕ್ಕಳಲ್ಲಿಯೂ ಸಂಜ್ಞೆಯ ಮಕ್ಕಳಲ್ಲಿಯೂ ಪ್ರಕಟವಾಗಿಯೇ ಭೇದವನ್ನು ಮಾಡತೊಡಗಿದಳು. ತನ್ನ ಹೊಟ್ಟೆಯ ಮಕ್ಕಳಾದ ಶನಿ ಮತ್ತು ತಪತಿಯನ್ನು ಅತ್ಯಂತ ಪ್ರೇಮಾದರಗಳಿಂದ ಸಲುಹುತ್ತಿದ್ದಳು. ಆದರೆ ಮಲ ಮಕ್ಕಳಾದ ಯಮ ಮತ್ತು ಯಮುನೆಯರನ್ನು ಕಂಡ ಕೂಡಲೇ ಅವಳಲ್ಲಿ ಸವತಿ ಮತ್ಸರವು ಕಿಚ್ಚಾಗಿ ಉರಿಯುತ್ತಿತ್ತು. ಇದನ್ನು ಕಂಡ ಭಗವಾನ್ ಸೂರ್ಯದೇವನಿಗೆ ಬಹಳ ಕೋಪ ಬಂದಿತು. ಅವನ ಕಣ್ಣುಗಳು ಕೋಪದಿಂದ ಕೆಂಪಾದವು. ಅವನು ತುಸು ಗಡುಸಾದ ದನಿಯಲ್ಲಿಯೇ ಮಡದಿ ಛಾಯಾದೇವಿಗೆ ಗದರಿಸಿದನು. ''ಭಾಮಿನಿ, ನಮ್ಮ ಮಕ್ಕಳಲ್ಲಿ ಒಬ್ಬರ ಮೇಲೆ ಪಕ್ಷಪಾತ, ಒಬ್ಬರ ಮೇಲೆ ದ್ವೇಷ ಮಾಡುವುದು ಸರಿಯಲ್ಲ. ನೀನು ಹಿರಿಯಮಕ್ಕಳಾದ ಯಮ, ಯಮುನೆಯರ ಮೇಲೆ ಏಕೆ ಮತ್ಸರವನ್ನು ತೋರುವೆ ? ಕಿರಿಯ ಮಕ್ಕಳಾದ ಶನಿ, ತಪತಿಯರ ಮೇಲೆಯೇ ನಿನಗೆ ಅಷ್ಟೇಕೆ ಪಕ್ಷಪಾತ ? ತಾಯಿಯಾದ ನೀನು ಹೀಗೆ ಮಕ್ಕಳಲ್ಲಿ ಭೇದ ಮಾಡುವುದು ಸರಿಯಲ್ಲ.

ಈ ರೀತಿಯಾಗಿ ಪತಿಯು ಎಚ್ಚರಿಕೆಯನ್ನು ಇತ್ತರೂ ಎಲ್ಲ ಮಕ್ಕಳಲ್ಲಿ ಅವಳಿಗೆ ಸಮದೃಷ್ಟಿಯನ್ನು ಇರಿಸಲಿಕ್ಕೆ ಆಗಲಿಲ್ಲ. ತನ್ನ ಹೊಟ್ಟೆಯ ಮಕ್ಕಳ ಮೇಲೆಯೇ ಅವಳು ಪ್ರೇಮ ಪಕ್ಷಪಾತಗಳನ್ನು ತೋರತೊಡಗಿದಳು. ಅದರಿಂದ ಸೂರ್ಯನಿಗೆ ಬೇಸರವಾಗಿ ಅವನು ತನ್ನ ಭಾರ್ಯೆಯನ್ನು ಬೈಯ್ಯತೊಡಗಿದನು. ಅದನ್ನು ನೋಡಿ ಸೂರ್ಯನ ಹಿರಿಯ ಮಗನಾದ ಯಮನಿಗೆ ಕಡುಕೆಡಕು ಎನಿಸಿತು. ಯಮನು ತಂದೆಯನ್ನು ಕುರಿತು ನೊಂದ ಮನದಿಂದ ನುಡಿದನು -

''ತಂದೆಯೇ, ತನ್ನ ಕಿರಿಯ ಮಕ್ಕಳಲ್ಲಿ ವಿಲಕ್ಷಣ ಪ್ರೇಮ ಪಕ್ಷಪಾತಗಳುಳ್ಳ ಇವಳು ನಮ್ಮನ್ನು ಮಾತ್ರ ವೈರಿಗಳಂತೆ ಕಾಣುತ್ತಾಳೆ. ತನ್ನ ಮಕ್ಕಳ ಮೇಲೆ ಮಾತ್ರ ಪ್ರೇಮ ಮಾಡುವ ಸವತಿಯಂತೆ ಇವಳು ನಮ್ಮನ್ನು ಕಂಡು ವ್ಯರ್ಥವಾಗಿ ದ್ವೇಷ ಮಾಡುತ್ತಿದ್ದಾಳೆ. ಇವಳೇನು ನಮಗೆ ತಾಯಿಯೋ ? ಅಥವಾ ಮಲತಾಯಿಯೋ ?''

ಯಮನ ಈ ಮಾತನ್ನು ಕೇಳಿ ಛಾಯಾದೇವಿಗೆ ತಡಕೊಳ್ಳಲಾರದಷ್ಟು ಕೋಪ ಬಂದಿತು. ಕೋಪಾಟೋಪದಿಂದ ಅವಳ ತಲೆ ಸಿಡಿಯಿತು. ಕಣ್ಣು ಕಿಡಿ ಉಗುಳಿತು. ಕ್ರೋಧದಿಂದ ಮೂರ್ಛಿತಳಾದ ಅವಳು ''ನೀನು ಕೂಡಲೇ ಪ್ರೇತಗಳ ಒಡೆಯನಾಗು'' ಎಂದು ಶಾಪವನ್ನು ಕೊಟ್ಟಳು. ಅವಳ ಶಾಪ, ಪುತ್ರಕೋಪ, ಅವರ ಮೇಲಿನ ಮನಸ್ತಾಪ, ಇವುಗಳನ್ನು ನೋಡಿ ಸೂರ್ಯದೇವನಿಗೆ ನಿಶ್ಚಿತವಾಗಿ ''ಇವಳು ತನ್ನ ಮೊದಲಿನ ಮಡದಿಯಾದ ಸಂಜ್ಞಾದೇವಿಯು ಅಲ್ಲ'' ಎಂದು ತಿಳಿದುಹೋಯಿತು.

ಮಲತಾಯಿಯಿಂದ ಶಾಪವನ್ನು ಪಡೆದ ತನ್ನ ಹಿರಿಯ ಮಗ ಯಮನ ಮೇಲೆ ಅವನ ಅಂತಃಕರುಣವು ಉಕ್ಕಿ ಬಂದಿತು. ಆ ಶಾಪ ಸಂಭ್ರಮದ ಮಧ್ಯದಲ್ಲಿಯೇ ಅವನು ತನ್ನ ಮಗನಿಗೆ ಒಳ್ಳೆಯದಾಗಲಿ ಎಂಬ ಆಶೆಯಿಂದ ಅಂತಃಕರಣದಿಂದ ಆಶೀರ್ವದಿಸುತ್ತ ನುಡಿದನು. ''ಜೇಷ್ಠಪುತ್ರ, ಜಗತ್ತಿನಲ್ಲಿ ಎಲ್ಲರ ಪಾಪಪುಣ್ಯಗಳನ್ನು ಸಮನಾಗಿ ತೂಗಿ ನೋಡಿ ಅದಕ್ಕೆ ತಕ್ಕ ಶಾಸನವನ್ನು ವಿಧಿಸುವ ನೀನು ಇನ್ನು ಮುಂದೆ ಧರ್ಮರಾಜನಾಗುವೆ. ಎಲ್ಲರ ಧರ್ಮಕರ್ಮಗಳನ್ನು ಸಮದೃಷ್ಟಿಯಿಂದ ನೋಡುವ ನೀನು ಸಮವರ್ತಿ ಎಂದು ಹೆಸರಾಗುವೆ. ಪಾಪಪುಣ್ಯಗಳ ಧರ್ಮಾಧರ್ಮಗಳ ನಿರ್ಣಾಯಕನಾದ ನೀನು ಲೋಕಪಾಲಕನೆಂದು ಪ್ರತಿಷ್ಠೆ ಪಡೆದು ಸ್ವರ್ಗದಲ್ಲಿ ಶೋಭಿಸುವೆ.'' ಈ ರೀತಿಯಾಗಿ ಛಾಯೆಯ ಸವತಿಪುತ್ರರಾದ ಯಮನನ್ನು ಅನುಗ್ರಹಿಸಿದ ಸೂರ್ಯನಿಗೆ ಛಾಯೆಯ ಪ್ರೀತಿಯ ಪುತ್ರನಾದ ಶನಿಯ ಮೇಲೂ ಅವನಿಗೆ ಸಿಟ್ಟು ಬಂದಿತು. ಛಾಯೆಯ ಮೇಲಿನ ಸಿಟ್ಟು ಅವಳ ಮಕ್ಕಳ ಮೇಲೆಯೂ ಹರಿಯಿತು. ಆ ಕೋಪವು ಶಾಪವಾಗಿ ಉರಿಯಿತು. ''ಶನೆ, ತಾಯಿಯ ದೋಷದಿಂದ ನೀನು ಕ್ರೂರ ದೃಷ್ಟಿಯುಳ್ಳನಾಗುವೆ. ಶನಿ ದೃಷ್ಟಿ ಬಿದ್ದಲ್ಲೆಲ್ಲ ಅಮಂಗಳ, ಅನರ್ಥಗಳು ಆಗುವವು.''

ಹೀಗೆ ಶನಿಯನ್ನು ಶಪಿಸಿ ಸೂರ್ಯನು ಅಲ್ಲಿಂದ ಹೊರಟನು. ತನ್ನ ಮನೆಯಲ್ಲಿಯೇ ಈಗ ಇದ್ದವಳು ತನ್ನ ಮೆಚ್ಚಿದ ಮಡದಿಯಾಗದೆ ಅವಳು ನೆರಳು ಎಂದು ಅವನಿಗೆ ಖಾತ್ರಿಯಾಯಿತು. ''ಈ ನೆರಳಿನ ತಿರುಳು ಎಲ್ಲಿ ಇದೆ ?'' ತಿರುಳು ಯಾವುದು ನೆರಳು ಯಾವುದು ಎನ್ನುವುದು ಕೂಡ ತಿಳಿಯದ ನಾನು ಎಂದ ಮರುಳ ! ಇನ್ನಾದರೂ ನನ್ನ ಮಡದಿಯ ತಿರುಳನ್ನು, ನನ್ನ ಎದೆಯ ಅರಳನ್ನು ಹುಡುಕಿ ಕರೆದುಕೊಂಡು ಬರಬೇಕು ಎಂದು ನಿರ್ಧರಿಸಿ ಅವಳು ಉತ್ತರ ಕುರುದೇಶದಲ್ಲಿ ಇರುವಳು ಎಂದು ಅವನು ಅಲ್ಲಿಗೆ ನಡೆದನು. ಉತ್ತರ ಕುರುಜಾಂಗಣದಲ್ಲಿ ಸೂರ್ಯ ಸತಿಯಾದ ಆ ಸಂಜ್ಞಾದೇವಿಯು ಹೆಣ್ಣು ಕುದುರೆಯ ವೇಷದಲ್ಲಿ ಸಂಚರಿಸುತ್ತಿದ್ದಳು. ಪರಮ ಪತಿವ್ರತೆಯಾದ ಅವಳು ಆ ಅಶ್ವಿನೀ (ಹೆಣ್ಣು ಕುದುರೆ) ರೂಪದಲ್ಲಿ ಇದ್ದಳು. ಪತಿಯಾದ ಆದಿತ್ಯ ದೇವನನ್ನೇ ಮನಸಾ ಧ್ಯಾನ ಮಾಡುತ್ತಲಿದ್ದಳು. ಅದನ್ನು ಕಂಡು ಮಡದಿಯ ಮೇಲೆ ಪ್ರೇಮವು ಉಕ್ಕಿ ಬಂದ ಸವಿತೃದೇವನು ತಾನು ಒಂದು ಗಂಡು ಕುದುರೆಯ ರೂಪವನ್ನು ತಳೆದು ಆ ಸಂಜ್ಞೆಯೊಡನೆ ಕೂಡಿದನು.

ಮಾರ್ತಂಡ ದೇವನು ಆ ಅಶ್ವಿನೀ ರೂಪವಾಂತ ಸಂಜ್ಞಾದೇವಿಯಲ್ಲಿ ತನ್ನ ಪ್ರಚಂಡ ತೇಜಸ್ಸನ್ನು ಬೀಜ ರೂಪದಿಂದ ಇಟ್ಟನು. ಕಾಂತಿಯಿಂದ ಬೆಳಗುವ ಆ ಮಾರ್ತಂಡನ

ತೇಜೋ ಬೀಜವು ಪ್ರಾಣ, ಅಪಾನ ಎಂದು ಎರಡು ರೂಪದಿಂದ ಹೊರಬಿದ್ದಿತು. ಹಿಂದೆ ಪರಮಾತ್ಮನಿಂದ ಜಿತವಾಗಿದ್ದ ಪ್ರಾಣಾಪಾನಗಳು ಅವನ ವರದಾನದಿಂದ ಆ ಅಶ್ವದ ಗರ್ಭದಲ್ಲಿ ದೇಹವನ್ನು ಧರಿಸಿ ಹುಟ್ಟಿದವು. ಸೂರ್ಯಪುತ್ರರಾದ ಅವರು ಹೆಣ್ಣು ಕುದುರೆಯ (ಅಶ್ವಿನೀ) ರೂಪದಲ್ಲಿ ಇದ್ದ ಸಂಜ್ಞಾದೇವಿಯಿಂದ ಹುಟ್ಟಿ ಬಂದಿದ್ದರಿಂದ ಅಶ್ವಿನೀ ಕುಮಾರರು ಎಂದು ಪ್ರಸಿದ್ಧರಾದರು.

ಅದಕ್ಕೆ ಸೂರ್ಯನು ಅವರಿಗೆ ''ಪುತ್ರರೇ, ನೀವು ಸರ್ವೋತ್ತಮನಾದ ಆ ಪರಬ್ರಹ್ಮ ನಾರಾಯಣನನ್ನು ಭಕ್ತಿಯಿಂದ ಆರಾಧಿಸಿರಿ. ಅವನೇ ಸರ್ವಾರ್ಥಪ್ರದ. ನಿಮಗೂ ಅವನು ಬಯಸಿದ ವರವನ್ನಿತ್ತು ಅನುಗ್ರಹಿಸುವನು'' ಎಂದು ಹೇಳಿದನು.

ಮಹಾತ್ಮನಾದ ತಮ್ಮ ತಂದೆ ಸವಿತೃದೇವನ ಆದೇಶದಂತೆ ಅಶ್ವಿನೀ ಕುಮಾರರು ಅತ್ಯುಗ್ರವಾದ ತಪಸ್ಸನ್ನು ಕೈಕೊಂಡರು. ಭಕ್ತಿಯಿಂದ ಬ್ರಹ್ಮಪಾರಸ್ತೋತ್ರವನ್ನು ಜಪಿಸಿ ಭಗವಂತನನ್ನು ಕೊಂಡಾಡಿದರು. ಅವನ ಜಪತಪ ಆರಾಧನೆಯಿಂದ ಪ್ರಸನ್ನನಾದ ಪರಮೇಶ್ವರನು ಅವರಿಗೆ ಒಲಿದು ಪ್ರೀತಿಯಿಂದ ವರವನ್ನು ಕೊಟ್ಟನು.

*ವರಾಹ ಪುರಾಣದಲ್ಲಿ ಇಪ್ಪತ್ತನೇ ಅಧ್ಯಾಯವು ಮುಗಿದುದು*



## ಗೌರಿಯ ಉತ್ಪತ್ತಿ

ಅಧ್ಯಾಯ - ೨೧

**ಪ್ರಜಾಪಾಲ :-** ಎಲ್ಲರಿಂದಲೂ ಮಾನ ಮನ್ನಣೆ ಪಡೆದ ಗೌರಿಯು ಪರಮಾತ್ಮನ ವರಪ್ರಸಾದದಿಂದ ಹೇಗೆ ಮೈದಾಳಿ ಹುಟ್ಟಿ ಬಂದಳು ?

**ಮಹಾತಪ :-** ಸೃಷ್ಟಿಯ ಮೊದಲು ಬ್ರಹ್ಮದೇವರು ಬಗೆ ಬಗೆಯ ಪ್ರಜೆಗಳನ್ನು ಉತ್ಪಾದಿಸಬೇಕೆಂದು ಬಯಸಿದ್ದನು. ಅವನ ಅಪೇಕ್ಷೆಯಂತೆ ಸೃಷ್ಟಿಯು ರೂಪಗೊಳ್ಳುದಿದ್ದಾಗ ಅವನಿಗೆ ಕೋಪ ಬಂದಿತು. ಈ ಬ್ರಹ್ಮಕೋಪದಿಂದ ಪ್ರತಾಪಶಾಲಿಯಾದ ರುದ್ರನು ಉದಿಸಿದನು. ರೋದನವನ್ನು ಮಾಡಿದ್ದರಿಂದ ಬ್ರಹ್ಮನು ಅವನಿಗೆ ರುದ್ರ ಎಂದು ಹೆಸರಿತ್ತನು. ಆ ರುದ್ರನಿಗೆ ಬ್ರಹ್ಮದೇವನು ತನ್ನ ದೇಹದಿಂದ ಉದಿಸಿದ **ಗೌರಿ** ಎಂಬ ಹೆಸರಿನ ಕನ್ನೆಯನ್ನು ತಾನೇ ಕೊಟ್ಟು ಮದುವೆಯನ್ನು ಮಾಡಿದನು. ಪರಮ ಸುಂದರಿಯಾದ ಗುಣಮಣಿಗಳ ಗಣಿಯೂ ಆದ ಆ ಗೌರಿಯನ್ನು ಪಡೆದು ರುದ್ರನಿಗೆ ಅತ್ಯಂತ ಆನಂದವಾಯಿತು. ಬ್ರಹ್ಮನು ಅವನಿಗೆ ''ರುದ್ರ ನೀನು ಸೃಷ್ಟಿಕಾಲದಲ್ಲಿ ತಪೋಧರ್ಮದಿಂದ ಪ್ರಜೆಗಳನ್ನು ನಿರ್ಮಿಸು'' ಎಂದು ಮತ್ತೆ ಮತ್ತೆ ಒತ್ತಿ ಹೇಳಿದನು. ಅದನ್ನು ಕೇಳಿ ರುದ್ರದೇವನು 'ತಪಸ್ಸನ್ನು ಮಾಡದವನು ಸೃಷ್ಟಿಯ ಮಾಡಲಾರ. ತಪೋಹೀನನಾದ ವ್ಯಕ್ತಿಯಿಂದ ಯಾವ ಮಹಾಕಾರ್ಯವೂ ಆಗಲಾರದು' ಎಂದು ಆಲೋಚಿಸಿ ನೀರಿನಲ್ಲಿ ಮುಳುಗಿ ತಪಸ್ಸನ್ನು ಮಾಡತೊಡಗಿದನು.

ದೇವತೆಗಳ ಒಡೆಯನಾದ ಮಹಾದೇವನು ಜಲಸಮಾಧಿಯಲ್ಲಿ ತಪಸ್ಸಿಗೆ ಕುಳಿತದ್ದನ್ನು ಕಂಡು ಬ್ರಹ್ಮನು ತಾನು ಪುಟ್ಟಿಸಿದ ಗೌರಿಯನ್ನು ತನ್ನಲ್ಲಿಯೇ ಇಟ್ಟುಕೊಂಡನು. ಮುಂದೆ ಪ್ರಜಾಬಳ್ಳಿಯನ್ನು ಹಬ್ಬಿಸಬೇಕೆಂದು ಹೆಬ್ಬಯಕೆಯಿಂದ

ಭಗವಾನ್ ಬ್ರಹ್ಮದೇವನು ತನ್ನ ಮನಸ್ಸಿನಿಂದ ಸಪ್ತರ್ಷಿಗಳು ಎಂದು ಸುಪ್ರಸಿದ್ಧರಾದ ಏಳುಜನ ಮುನಿಗಳನ್ನೂ ಮತ್ತು ದಕ್ಷ ಪ್ರಜಾಪತಿಯನ್ನೂ ಸೃಷ್ಟಿಸಿದನು. ಅಂದಿನಿಂದ ಪ್ರಜಾವೃದ್ಧಿಯು ಸಮೃದ್ಧವಾಗಿ ಆಯಿತು. ಆ ಎಲ್ಲ ದೇವತೆಗಳೂ, ಅಷ್ಟವಸುಗಳೂ, ರುದ್ರರೂ, ಆದಿತ್ಯರೂ, ಮರುತ್ತುಗಳೂ, ದೇವೇಂದ್ರನೂ ಮತ್ತು ಇತರ ಸರ್ವ ಪ್ರಪಂಚವೂ ದಕ್ಷ ಪ್ರಜಾಪತಿಯ ಹೆಣ್ಣು ಮಕ್ಕಳಿಂದ ಜನಿಸಿದರು. ಇದೆಲ್ಲವೂ ದಕ್ಷನ ದೌಹಿತ್ರ ಸಂತತಿಯಾಗಿದೆ. ಬ್ರಹ್ಮದೇವನು ಮೊದಲು ತನ್ನ ಮೈಯಿಂದ ಉದಿಸಿದ ಗೌರಿಯನ್ನು ದಕ್ಷ ಪ್ರಜಾಪತಿಗೆ ದತ್ತು ಪುತ್ರಿಯನ್ನಾಗಿ ಕೊಟ್ಟನು. ಅವಳನ್ನು ದಕ್ಷನು ಸಾಕಿ ಸಲುಹಿ ದೊಡ್ಡವಳನ್ನಾಗಿ ಮಾಡಿದ್ದರಿಂದ ಬ್ರಹ್ಮಕುಮಾರಿಯಾದ ಗೌರಿಗೆ **ದಾಕ್ಷಾಯಣಿ** ಎಂದು ಹೆಸರಾಯಿತು. ತನ್ನ ಸಾಕು ಮಗಳಾದ ಆ ದಾಕ್ಷಾಯಣಿಯನ್ನು ದಕ್ಷ ಪ್ರಜಾಪತಿಯು ಮಹಾದೇವನಿಗೆ ಕೊಟ್ಟನು.

ಅನಂತರ ತನ್ನ ದೌಹಿತ್ರ ಸಂತತಿಯು ಎಲ್ಲ ರೀತಿಯಿಂದಲೂ ಬೆಳೆದ್ದನ್ನು ನೋಡಿ ದಕ್ಷನಿಗೆ ಬಹಳ ಆನಂದವಾಯಿತು. ಅವನು ಭಗವಂತನನ್ನು ಮೆಚ್ಚಿಸಲಿಕ್ಕಾಗಿ ಯಜ್ಞವನ್ನು ಪ್ರಾರಂಭಿಸಿದನು. ಆ ಯಜ್ಞದಲ್ಲಿ ಮರೀಚಿ ಮೊದಲಾದ ಬ್ರಹ್ಮದೇವರ ಮಾನಸ ಪುತ್ರರು ಪುರೋಹಿತರಾಗಿ ಎಲ್ಲ ಕಾರ್ಯಗಳನ್ನೂ ಮಾಡಿಸಿದರು. ಆ ದಕ್ಷ ಯಜ್ಞದಲ್ಲಿ ಅತ್ರಿ ಋಷಿಯು ಅಧ್ವರ್ಯು ಆಗಿದ್ದನು. ಅಂಗಿರಸ ಮುನಿಯು ಅಗ್ನೀಧ್ರನಾಗಿದ್ದನು. ಸ್ವಯಂ ಮರೀಚಿ ಮಹರ್ಷಿಯು ಬ್ರಹ್ಮಾ ಆದನು. ಪುಲಸ್ತ್ಯ ಋಷಿಯು ಹೋತಾ ಆದನು. ಪುಲಹಮುನಿಯು ಉದ್ಗಾತಾ ಆದನು. ಆ ಯಜ್ಞದಲ್ಲಿ ಕ್ರತುಮುನಿಯು ಪ್ರಸ್ತೋತಾ ಆದನು. ಪ್ರಚೇತಸ್ ಮುನಿಯು ಪ್ರತಿಹರ್ತೃವಿನ ಸ್ಥಾನದಲ್ಲಿ ಕಂಗೊಳಿಸಿದನು. ವಶಿಷ್ಠ ಋಷಿಗಳು ಸುಬ್ರಹ್ಮಣ್ಯ ಸ್ಥಾನಾಪನ್ನರಾದರು. ಸನಕ ಸನಂದನಾದಿ ಋಷಿಗಳು ಸಭಾಸದರಾಗಿದ್ದರು. ಈ ಯಜ್ಞದಲ್ಲಿ ಜಗತ್ ಕರ್ತನಾದ ಬ್ರಹ್ಮನು ಮುಖ್ಯ ದೇವತೆಯಾಗಿ ಯಜ್ಞ ಪುರುಷನಾಗಿದ್ದನು. ದಕ್ಷ ಪ್ರಜಾಪತಿಯು ಸ್ವಯಂ ಯಜ್ಞಕರ್ತನಾಗಿ ತನ್ನ ದೌಹಿತ್ರರೇ ಆದ ದೇವತೆಗಳನ್ನೂ ಪಿತೃಗಳನ್ನೂ ಋಷಿಗಳನ್ನೂ ತೃಪ್ತಿಪಡಿಸಿದನು. ಆದಿತ್ಯ, ವಸು, ವಿಶ್ವೇದೇವ, ಮರದ್ಗಣ ಮೊದಲಾದ ಎಲ್ಲಾ ದೇವತೆಗಳೂ ಪಿತೃಗಳೂ, ಗಂಧರ್ವರೂ, ಬಂದು ಬೇಡಿ ಬಯಸಿ ಪ್ರತ್ಯಕ್ಷವಾಗಿಯೇ ತಮಗೆ ನೀಡಿದ ಹರ್ವಿಭಾಗವನ್ನು ಸ್ವೀಕರಿಸಿದರು. ಇದೇ ವೇಳೆಯಲ್ಲಿ ಹಿಂದೆ ಬ್ರಹ್ಮನ ಕೋಪದಿಂದ ಉದಿಸಿ ನಂತರ ನೀರಿನಲ್ಲಿ ಮುಳುಗಿ ತಪಸ್ಸು ಮಾಡುತ್ತಲಿದ್ದ ರುದ್ರನು ಒಮ್ಮಿಂದೊಮ್ಮೆಲೇ ಮೇಲಕ್ಕೆ ಬಂದನು. ಸಾವಿರ ಸೂರ್ಯರು ನೀರಿನ ಆಳದಿಂದ ಮೇಲೆದ್ದು ಬಂದಂತಾಗಿತ್ತು. ಪ್ರತ್ಯಕ್ಷವಾಗಿ ಸರ್ವ ಜಗತ್ತನ್ನೂ ನೋಡತಕ್ಕ ಆ ರುದ್ರದೇವನು, ತನ್ನ ತಪಸ್ಸಿನಿಂದಲೂ ತೇಜಸ್ಸಿನಿಂದಲೂ ಜ್ಞಾನರೂಪಿಯಾಗಿ ಕಂಗೊಳಿಸಿದ್ದನು. ಅದೇ ಕಾಲದಲ್ಲಿ ನೆಲದಲ್ಲಿ ಐದು ಬಗೆಯ, ಮುಗಿಲಿನಲ್ಲಿ ನಾಲ್ಕು ಬಗೆಯ ಸೃಷ್ಟಿಯು ತಲೆದೋರಿತು.

ತಕ್ಷಣದಲ್ಲಿ ರೂಪಗೊಂಡ ಈ ಸೃಷ್ಟಿಗೆ ರುದ್ರ ಸೃಷ್ಟಿ ಎಂದು ಹೆಸರಾಯಿತು. ಹತ್ತು ಸಾವಿರ ವರ್ಷ ನೀರಿನ ಆಳದಲ್ಲಿ ತಪಸ್ಸು ಮಾಡಿ ಮೇಲಕ್ಕೆ ಎದ್ದು ಬಂದ ರುದ್ರದೇವನ

ಕಣ್ಣಿಗೆ ಜನ-ವನಗಳಿಂದಲೂ, ಪಶು-ಪಕ್ಷಿಗಳಿಂದಲೂ, ಹಚ್ಚ ಹಸಿರು ಪಯರು ಪದಾರ್ಥ ಗಳಿಂದಲೂ ತುಂಬಿ ತುಳುಕಿ ರಮ್ಯವಾಗಿ ವಿಜ್ರುಂಭಿಸುವ ಭೂಮಂಡಲವು ಕಂಡು ಬಂದಿತು. ತುಸು ಆಲಿಸಿ ಕೇಳಿದಾಗ ದಕ್ಷ ಪ್ರಜಾಪತಿಯ ಯಜ್ಞದಲ್ಲಿ ಉಚ್ಚ ಕಂಠದಿಂದ ವೇದ ಋಕ್ಕುಗಳನ್ನು ಉಗ್ಗಡಿಸುವ ಋತ್ವಿಜರ ಮಂಜುಳ ಮಂತ್ರ ಘೋಷದ ಗಂಭೀರ ಧ್ವನಿಯು ಕೇಳ ಬಂದಿತು. ಆದರಿಂದ ಮಹಾದೇವನಿಗೆ ಕೋಪ ಬಂದು ಅವನು ಇಂತು ನುಡಿದನು. ಬ್ರಹ್ಮದೇವನು ಮೊದಲು ನನ್ನನ್ನು ಸೃಷ್ಟಿ ಮಾಡಿ ನನಗೆ ಪ್ರಜೆಗಳನ್ನು ಸೃಜಿಸು ಎಂದು ಅಪ್ಪಣೆ ಇತ್ತಿದ್ದನು. ನಾನು ಮಾಡಿದ ಆ ಸೃಷ್ಟಿ ಕಾರ್ಯವನ್ನು ಈಗ ನನ್ನನ್ನು ಬಿಟ್ಟು ಮತ್ತೆ ಬೇರೆ ಯಾರು ಮಾಡಿದರು ?

ಈ ರೀತಿಯಾಗಿ ಕೋಪಾಟೋಪದಿಂದ ಉರಿದು ಉಕ್ಕಳಿಸುವ ರುದ್ರ ದೇವನು ಸಿಟ್ಟಿನಿಂದ ಗರ್ಜನೆ ಮಾಡಿದನು. ಗುಡುಗುವ ಆ ಪರಮೇಶ್ವರನ ಕಿವಿಗಳಿಂದ ಉರಿಯತೆರೆಗಳು ಹೊರ ಚಿಮ್ಮತೊಡಗಿದವು. ಅದರಿಂದ ಅನೇಕ ಭೂತಪ್ರೇತಗಳೂ ಮತ್ತು ವೇತಾಳ ಬೇತಾಳಗಳೂ ಉರಿ ಮೋರೆಯ ಹೆಮ್ಮಾರಿಗಳೂ ಕೈಯಲ್ಲಿ ಬಗೆಬಗೆಯ ಆಯುಧಗಳನ್ನು ಹಿಡಿದು ಕೋಟಿಕೋಟಿಯಾಗಿ ಎದ್ದು ನಿಂತವು.

ಅದನ್ನು ನೋಡಿ ರುದ್ರದೇವನು ವೇದವೇದಾಂಗ ರೂಪವಾದ ದಿವ್ಯರಥವನ್ನು ನಿರ್ಮಿಸಿ ಬ್ರಹ್ಮದೇವರನ್ನೇ ಸಾರಥಿಯನ್ನಾಗಿ ಮಾಡಿಕೊಂಡು ಯುದ್ಧಕ್ಕೆ ಹೊರಟನು. ಗಾಯತ್ರಿಯೇ ಆ ಪರಶಿವನ ಬಿಲ್ಲಾಗಿದ್ದಿತು. ಓಂಕಾರವೇ ಹೆದೆ. ಸಪ್ತಸ್ವರಗಳೇ ಬಾಣಗಳು. ಹೀಗೆ ಆಕಾಶಮಾರ್ಗದಿಂದ ಬರುತ್ತಲಿರುವ ರುದ್ರದೇವನು ದಕ್ಷ ಪ್ರಜಾಪತಿಯ ಯಜ್ಞ ಮಂಟಪಕ್ಕೆ ಬಂದನು. ಅವನನ್ನು ಕಂಡು ಪುರೋಹಿತರ ಸದ್ದು ಗದ್ದಲಗಳೆಲ್ಲ ಅಡಗಿ ಹೋದವು. ಅವರ ಮಂತ್ರ ಪಾರಾಯಣ ಎಲ್ಲವೂ ನಿಂತು ಹೋಯಿತು. ಅದನ್ನು ನೋಡಿ ಋತ್ವಿಜರೆಲ್ಲ ಹೆದರಿ ಹೌಹಾರಿ ದೇವತೆಗಳಿಗೆ ಎಚ್ಚರಿಕೆ ಕೊಟ್ಟರು.

''ದೇವತೆಗಳೇ ನಿಮಗೆ ಬಹಳ ದೊಡ್ಡ ಅಪಾಯವು ಸಂಭವಿಸಲಿದೆ. ಬ್ರಹ್ಮ ದೇವರಿಂದ ಸೃಷ್ಟಿಸಲ್ಪಟ್ಟ ಮಹಾದರ್ಪಿಷ್ಠರಾದ ದುಷ್ಟದೈತ್ಯರು ಬಲಿಷ್ಠರಾದ ಈ ಯಜ್ಞದಲ್ಲಿ ಭಾಗವನ್ನು ಪಡೆಯಲು ಧಾವಿಸಿ ಬರುತ್ತಿದ್ದಾರೆ.'' ಅದನ್ನು ಕೇಳಿ ದೇವತೆಗಳೆಲ್ಲರು ದಕ್ಷಪ್ರಜಾಪತಿಯ ಬಳಿಗೆ ಬಂದು ''ಅಜ್ಜ ನಾವು ಈಗ ಏನು ಮಾಡಬೇಕು ಹೇಳು''. ಎಂದು ಕೇಳಿದರು. ಅದಕ್ಕೆ ದಕ್ಷನು ''ಈಗಲೇ ಶಸ್ತ್ರಾಸ್ತ್ರಗಳನ್ನು ಧರಿಸಿರಿ. ಕೂಡಲೇ ಬರಲಿರುವ ವೈರಿಗಳೊಡನೆ ಯುದ್ಧವನ್ನು ಮಾಡಿರಿ'' ಎಂದು ಹೇಳಿದನು.

ದಕ್ಷನ ಈ ನುಡಿಯನ್ನು ಕೇಳಿ ದೇವತೆಗಳು ಘೋರಾಯುಧಗಳನ್ನು ಪಿಡಿದು ವೀರಾವೇಶದಿಂದ ರುದ್ರಸೇನೆಯೊಂದಿಗೆ ಹೋರಾಡತೊಡಗಿದರು. ಪರಶಿವನ ಘೋರ ಕ್ರೂರ ಪರಿವಾರ ಭೂತವಾದ ಭೂತ, ಪ್ರೇತ, ಪೂತನಾ, ಪಿಶಾಚ, ಪ್ರಮಥ, ವೇತಾಳ ಮುಂತಾದವುಗಳೆಲ್ಲ ಬಗೆಬಗೆಯ ಶಸ್ತ್ರಾಸ್ತ್ರಗಳನ್ನು ಧರಿಸಿ ದೇವತೆಗಳೊಂದಿಗೆ ಕಲಿತನದಿಂದ ಕಾದಿದರು. ಬೆಂಕಿಯಕೊಳ್ಳಿ, ಎಲುಬುಬಾಣ, ಈಟಿ, ಕೊಡಲಿ, ಕುಡುಗೋಲುಗಳನ್ನು ಬೀಸಿದೇವಸೇನೆಯನ್ನು ನಾಶಗೊಳಿಸಿದವು. ಸುರಸೈನಿಕರೂಕೂಡ ಮಂತ್ರಪೂತವಾದಶಸ್ತ್ರಾಸ್ತ್ರಗಳನ್ನು ಆಶಿವನಸೇನೆಯಮೇಲೆಎಸೆದುಮಸಗಿದರು.

ಈ ಘೋರ ಕದನದಲ್ಲಿ ಶಿವನು ಬಾಣ ಬಿಟ್ಟು ಪೂಷನ್ ಎಂಬ ಆದಿತ್ಯ ಗಣದಲ್ಲಿಯ ಒಬ್ಬ ದೇವತೆಯ ಕಣ್ಣನ್ನೇ ಕಿತ್ತು ಬಿಟ್ಟನು. ಅದರಿಂದ ರೊಚ್ಚಿಗೆದ್ದ ಪೂಷನ್ ಕ್ರೋಧಾವೇಶದಿಂದ ಕೆರಳಿ ಗುಂಪು ಗುಂಪಾಗಿ ಪುಂಖಾನು ಪುಂಖವಾಗಿ ಶಿವ ಸೇನೆಯ ಮೇಲೆ ಬಾಣಗಳ ಮಳೆಗರೆದನು. ಅದರಿಂದ ರುದ್ರನಲ್ಲಿ ರೌದ್ರಾವೇಶದಲ್ಲಿ ತುಂಬಿ ಅವನು ರಣ ಭೈರವನಾಗಿ ಆ ಪೂಷಣನ ಮುಖದ ಮೇಲೆ ಹೊಡೆದು ಅವನ ಹಲ್ಲುಗಳನ್ನೆಲ್ಲ ಪಳ ಪಳನೆ ಉದರಿಸಿ ಬಿಟ್ಟನು. ಹೀಗೆ ಶಿವನು ಕೋಪದಿಂದ ಕಿಚ್ಚಾಗಿ ದ್ವೇಷದಿಂದ ಹುಚ್ಚಾಗಿ, ಸುರಸೈನಿಕರ ಮೇಲೆ ಹರಿಹಾಯಲು ದೇವಗಣದಲ್ಲಿಯ ಹನ್ನೊಂದು ಜನ ರುದ್ರರೂ ದಿಕ್ಕು ದಿಕ್ಕಿಗೆ ಓಡತೊಡಗಿದರು. ಅದನ್ನು ಕಂಡು ಆದಿತ್ಯ ಗಣದಲ್ಲಿಯ ಅನ್ಯತಮನೂ ಸ್ವಸ್ವರೂಪದಿಂದ ಧನ್ಯತಮನೂ ಆದ ಭಗವಾನ್ ಶ್ರೀವಿಷ್ಣುವು ತಮ್ಮ ಸ್ವರ್ಗ ಸೈನಿಕರಿಗೆ ನುಡಿದನು.

''ದೇವತೆಗಳೇ, ಸಂಗ್ರಾಮ ಭೂಮಿಯಿಂದ ಹೀಗೇಕೆ ಸೋತು ಓಡುವಿರಿ ? ನಿಮ್ಮ ಬಲ ಪೌರುಷಗಳೆಲ್ಲ ಎಲ್ಲಿ ಅಡಗಿದವು ? ನಿಮ್ಮ ದರ್ಪ ಪ್ರಭಾವಗಳು ಎಲ್ಲಿ ಉಡಗಿದವು ? ನಿಮ್ಮ ಕುಲದ ಕೆಚ್ಚು ಎಲ್ಲಿ ಹೋಯಿತು ? ನಿಮ್ಮ ವಂಶ ವೈಭವವೂ ದೈವೀಗುಣಗಳೂ ಇಷ್ಟು ಬೇಗ ಮರೆತುಹೋದವೇ ? ನಿಮ್ಮ ದೇವ ಕುಲಕ್ಕೆ ಹಿರಿಯನಾದ, ತಾವರೆಯ ಬಸಿರಿನಿಂದ ಬಂದ ಆ ಬ್ರಹ್ಮನನ್ನಾದರೂ ನಮಸ್ಕರಿಸಿರಿ. ಅವನು ಶ್ರೀ ಹರಿಯ ಪ್ರಸಾದವನ್ನು ಪಡೆದು ನಿಮಗೆ ಪೂರ್ಣಾಯುಷ್ಯವನ್ನು ಇಟ್ಟಿದ್ದಾನೆ. ನೀವೆಲ್ಲರೂ ಅಮರರು ಎನ್ನುವುದನ್ನು ಮರೆತೇ ಬಿಟ್ಟಿರಾ ! ''

ಹೀಗೆ ಹೇಳಿ ತನ್ನ ನಾಲ್ಕೂ ಕೈಗಳಲ್ಲಿ ಶಂಖ, ಚಕ್ರ, ಗದಾ ಮತ್ತು ಬಿಲ್ಲು ಬಾಣಗಳನ್ನು ಹಿಡಿದು ಶ್ರೀ ಹರಿಯು ದೇವತೆಗಳನ್ನು ಹುರಿದುಂಬಿಸಿ ಗರುಡನನ್ನು ಏರಿದನು. ಹರಿಹರರಲ್ಲಿ ಘೋರವಾದ ಸಂಗ್ರಾಮಕ್ಕೆ ಮೊದಲಿಟ್ಟಿತು. ಶಿವನು ಕೋಪದಿಂದ ಪಾಶುಪತಾಸ್ತ್ರವನ್ನು ಹರಿಯ ಮೇಲೆ ಬೀಸಿದನು. ವಿಷ್ಣುವು ಕುಪಿತನಾಗಿ ನಾರಾಯಣಾಸ್ತ್ರವನ್ನು ಎಸೆದನು. ಎರಡು ಭೀಕರವಾದ ಅಸ್ತ್ರಗಳು ಮುಗಿಲಿನಲ್ಲಿ ಒಂದನ್ನೊಂದು ತಾಗಿ ಸಂಘಟ್ಟಿಸಿ ಸಂಘರ್ಷವನ್ನು ಸುರು ಮಾಡಿದವು. ಈ ಪಾಶುಪತಾಸ್ತ್ರ, ನಾರಾಯಣಾಸ್ತ್ರಗಳ ಭೀಕರವಾದ ಸಂಗ್ರಾಮವು ದೇವಮಾನದ ಸಾವಿರ ವರ್ಷಗಳವರೆಗೆ ನಡೆಯಿತು. ಹೀಗೆ ಶೈವವೈಷ್ಣವ ಅಸ್ತ್ರಗಳು ಒಂದನ್ನೊಂದು ತಾಕಿ ತಿಕ್ಕಿ ಮುಕ್ಕಿ ತುಮುಲವನ್ನು ನಡೆಸಿದಾಗ ಬ್ರಹ್ಮದೇವರು ಅಲ್ಲಿಗೆ ಬಂದು ಅವೆರಡೂ ಅಸ್ತ್ರಗಳಿಗೆ ಬಿನ್ನವಿಸಿದರು.

''ಅಸ್ತ್ರದೇವತೆಗಳೇ, ಶಾಂತರಾಗಿರಿ. ಜಗತ್ತಿಗೆ ಕ್ಷೇಮವನ್ನು ಉಂಟುಮಾಡುವದೇ ನಿಮ್ಮ ವ್ರತವಾಗಿದೆ. ನಿಮ್ಮ ಸ್ವಭಾವಕ್ಕೆ ಅನುಸಾರವಾಗಿ ನೀವಿರ್ವರೂ ಶಾಂತರಾಗಿರಿ. '' ಬ್ರಹ್ಮದೇವನ ಈ ಬಿನ್ನಹವನ್ನು ಕೇಳಿ ಆ ನಾರಾಯಣಾಸ್ತ್ರ ಮತ್ತು ಪಾಶುಪತಾಸ್ತ್ರಗಳು ಶಾಂತವಾದವು.

ಅನಂತರ ಬ್ರಹ್ಮನು ಆ ಶಿವ ವಿಷ್ಣುದೇವತೆಗಳನ್ನು ಕುರಿತು ನುಡಿದನು. ''ದೇವೋತ್ತಮರಾದ ಹರಿಹರರೇ, ನೀವಿಬ್ಬರೂ ಇನ್ನು ಮುಂದೆ ಜಗತ್ತಿನಲ್ಲಿ ಹರಿಹರೇಶ್ವರರೆಂದು ಖ್ಯಾತಿಯನ್ನು ಪಡೆಯುವಿರಿ. ರುದ್ರನ ಕೋಪದಿಂದ ಉಧ್ವಸ್ತವಾದ ಈ ಯಜ್ಞವು ಹರಿಯ ಕೃಪೆಯಿಂದ ಸಾಂಗವಾಗಿ ಪೂರ್ತಿಗೊಳ್ಳಲಿ. ಈ

ದಕ್ಷಪ್ರಜಾಪತಿಯು ತನ್ನ ಸಂತತಿಯಿಂದ ಪ್ರಪಂಚದಲ್ಲಿ ಖ್ಯಾತಿಯನ್ನು ಪಡೆಯಲಿ.'' ಲೋಕ ಪಿತಾಮಹನಾದ ಬ್ರಹ್ಮನು ದೇವತೆಗಳನ್ನು ಕುರಿತು ಆದೇಶವಿತ್ತನು. ''ಯಜ್ಞಗಳಲ್ಲಿ ಇನ್ನು ಮೇಲೆ ರುದ್ರಭಾಗವನ್ನು ಈ ಶಿವನಿಗೆ ಕೊಡಿರಿ. ರುದ್ರಭಾಗವು ಜ್ಯೇಷ್ಠ ಭಾಗ ಎಂದು ವೇದಗಳಲ್ಲಿ ಹೇಳಲಾಗಿದೆ. ವೇದ ಪ್ರತಿಪಾದ್ಯವಾದ ಈ ರುದ್ರದೇವನನ್ನು ನೀವು ಸ್ತುತಿಸಿರಿ. ಈ ರುದ್ರನು ಸ್ತೋತ್ರದಿಂದ ಪ್ರಸನ್ನನಾಗಿ ನಿಮಗೆ ಇಷ್ಟವಾದ ವರಗಳನ್ನು ನೀಡುವನು. ಬ್ರಹ್ಮದೇವರ ಅಪ್ಪಣೆಯಂತೆ ದೇವತೆಗಳು ಮಹಾದೇವರನ್ನು ಭಕ್ತಿಯಿಂದ ಸ್ತೋತ್ರ ಮಾಡಿದರು.

**'' ಭವಶರ್ವ ಮಹಾದೇವ ಪಿನಾಕಿನ್ ರುದ್ರ ತೇ ಹರ**
**ನತಾಃಸ್ಮ ಸರ್ವೇ ವಿಶ್ವೇಶ ತ್ರಾಹಿ ನಃ ಪರಮೇಶ್ವರ।''**

ಹೀಗೆ ಬಗೆ ಬಗೆಯಾದ ಸ್ತುತಿ ನುತಿ ನತಿಗಳಿಂದ ಸುಪ್ರಸನ್ನನಾದ ಪರಮೇಶ್ವರನು ದೇವತೆಗಳನ್ನು ಕುರಿತು ಸಂತೋಷದಿಂದ ನುಡಿದನು.

''ಭಗನ ನಷ್ಟವಾದ ಕಣ್ಣು ಮೊದಲಿದ್ದಂತೆ ಮತ್ತೆ ಬರಲಿ. ಪೂಷಣನ ಬಿದ್ದ ಹಲ್ಲುಗಳು ಮರಳಿ ಬರಲಿ, ದಕ್ಷಪ್ರಜಾಪತಿಯ ಯಜ್ಞವು ಸಾಂಗವಾಗಿ ನೆರವೇರಲಿ. ದೇವತೆಗಳೇ, ನಾನು ನಿಮ್ಮ ಪಾಶವೀವೃತ್ತಿಯನ್ನು ದೂರಮಾಡುತ್ತೇನೆ. ಆದುದರಿಂದಲೇ ಸರ್ವವಿದ್ಯೆಗಳಿಗೆ ಒಡೆಯನಾದ ನಾನು ಪಶುಪತಿ ಎಂದು ಕರೆಯಲ್ಪಡುತ್ತೇನೆ. ನನ್ನನ್ನು ಭಕ್ತಿಯಿಂದ ಪೂಜಿಸುವ ಸೇವಾಕ್ರಮವು ''ಪಾಶುಪತದೀಕ್ಷೆ'' ಎಂದು ಹೆಸರಾಗುವುದು.'' ರುದ್ರದೇವರ ಈ ಮಾತನ್ನು ಕೇಳಿ ಪಿತಾಮಹನಾದ ಬ್ರಹ್ಮನು ನಸುನಗುತ್ತ ಸ್ನೇಹಪೂರ್ವಕವಾಗಿ ಮಾತನಾಡಿದನು -

''ಮಹಾದೇವ, ನೀನು ಲೋಕದಲ್ಲಿ ಪಶುಪತಿ ಎಂದು ಖ್ಯಾತನಾಗುವೆ. ಪಶುಪ್ರಾಯರಾದ ಅಜ್ಞ ಜನರ ಮಧ್ಯದಲ್ಲಿಯೇ ಇದ್ದು ಅವರ ಅಜ್ಞಾನರೂಪವಾದ ಪಶುತ್ವವನ್ನು ಕಳೆದು ಅವರಿಗೆ ದಿವ್ಯಜ್ಞಾನವನ್ನು ಕೊಟ್ಟು ಅವರಿಗೆಲ್ಲ ಒಡೆಯನಾಗಿ ಉದ್ಧರಿಸುವುದರಿಂದ ನಿನ್ನ 'ಪಶುಪತಿ' ಎಂಬ ಹೆಸರು ಸಾರ್ಥಕವಾಗುವುದು. ಸರ್ವತ್ರವ್ಯಾಪ್ತನಾದುದರಿಂದ ವಿಷ್ಣುವೆಂದೂ ಮತ್ತು ಎಲ್ಲ ದೇವತೆಗಳಲ್ಲಿ ಅಂತರ್ಯಾಮಿಯಾಗಿ ನಿಂತು ಆ ಆಕಾರ್ಯಗಳನ್ನು ಎಲ್ಲ ದೇವತೆಗಳಿಂದ ಮಾಡಿಸುವುದರಿಂದ ಸರ್ವ ದೇವತಾ ನಾಮಗಳಿಂದಲೂ ಮುಖ್ಯವಾಗಿ ವಾಚ್ಯನಾದ ಈ ಶ್ರೀ ಹರಿಯು ಸಮಸ್ತ ಪ್ರಪಂಚದಲ್ಲಿಯೇ ಅತ್ಯಂತ ಪ್ರಖ್ಯಾತನಾಗಿದ್ದಾನೆ. ಸಮಸ್ತ ಲೋಕಗಳಲ್ಲಿ ಸರ್ವ ಚೇತನ ಸಮುದಾಯಕ್ಕೆ ಪೂಜ್ಯವಾದ ಮತ್ತೂ ಆರಾಧ್ಯವಾದ ಮಹಾದೇವತೆ ಎಂದರೆ ಭಗವಾನ್ ಶ್ರೀವಿಷ್ಣುವೇ ಸರಿ''. ಹೀಗೆ ನುಡಿದು ಬ್ರಹ್ಮ ದೇವರು ದಕ್ಷ ಪ್ರಜಾಪತಿಗೆ ''ಈ ಮೊದಲೇ ಮಹಾದೇವರಿಗೆ ಕೊಟ್ಟ ಗೌರಿಯನ್ನು ನೀರಿನಲ್ಲಿ ಮುಳುಗಿ ತಪಸ್ಸು ಮಾಡಿ ಬಂದ ಮಹಾದೇವರಿಗೆ ಮತ್ತೆ ಮರಳಿ ಒಪ್ಪಿಸು'' ಎಂದು ಅಜ್ಞೆಗೈದನು.

ಈ ಮಾತಿಗೆ ದಕ್ಷನು ಸಮ್ಮತಿಸಲು ಬ್ರಹ್ಮದೇವನು ತನ್ನ ಔರಸ ಪುತ್ರಿಯಾದ ಗೌರಿಯನ್ನು ರುದ್ರದೇವನಿಗೆ ಒಪ್ಪಿಸಿದನು. ಅದರಿಂದ ದಕ್ಷಪ್ರಜಾಪತಿಗೆ ಅತ್ಯಂತ ಸಂತೋಷವಾಯಿತು. ಮಹಾದೇವನು ದಕ್ಷಪ್ರಜಾಪತಿಗೆ ಸಂತೋಷವನ್ನುಂಟು

ಮಾಡಲಿಕ್ಕಾಗಿ ದಾಕ್ಷಾಯಣಿಯನ್ನು ಉತ್ಸಾಹದಿಂದ ಪರಿಗ್ರಹಿಸಿದನು. ಆಗ ಬ್ರಹ್ಮದೇವರು ಎಲ್ಲ ದೇವತೆಗಳ ಸಮಕ್ಷವಾಗಿ ಮಹಾದೇವರಿಗೆ ವಾಸಮಾಡಲಿಕ್ಕಾಗಿ ಕೈಲಾಸ ಪರ್ವತವನ್ನು ಕೊಟ್ಟರು. ಪರಮೇಶ್ವರನು ತನ್ನ ಎಲ್ಲ ಭೂತ ಪರಿವಾರ ಮತ್ತು ಗೌರಿಯೊಡನೆ ಕೈಲಾಸ ಪರ್ವತಕ್ಕೆ ತೆರಳಿದನು. ಎಲ್ಲ ದೇವತೆಗಳೂ ಆನಂದದಿಂದ ತಮ್ಮ ತಮ್ಮ ಸ್ಥಾನಗಳಿಗೆ ನಡೆದರು. ಬ್ರಹ್ಮದೇವರು ದಕ್ಷ ಪ್ರಜಾಪತಿಯೊಡನೆ ತನ್ನ ಸತ್ಯಲೋಕಕ್ಕೆ ಪ್ರಯಾಣ ಬೆಳೆಸಿದನು.

*ವರಾಹ ಮಹಾಪುರಾಣದಲ್ಲಿ ಇಪ್ಪತ್ತೊಂದನೇ ಅಧ್ಯಾಯ ಮುಗಿದುದು*



## ಗೌರಿಯ ಮದುವೆ

## ಅಧ್ಯಾಯ - ೨೨

**ಮಹಾತಪ :-** ಆ ಕೈಲಾಸ ಪರ್ವತದಲ್ಲಿ ಪರಮೇಶ್ವರನು ತನ್ನ ಮಡದಿ ಗೌರಿಯೊಡನೆ ಆನಂದದಿಂದ ವಾಸವಾಗಿದ್ದನು. ಈ ಹಿಂದೆ ತನ್ನ ಪತಿಯಾದ ಶಿವನು ತಂದೆ ದಕ್ಷನನ್ನು ದ್ವೇಷಿಸುತ್ತಿದ್ದುದನ್ನು ನೆನೆದಾಗ, ಗೌರಿಗೆ ಚಿಂತಾ ಸಂತಾಪಗಳು ಉಂಟಾಗುತ್ತಿದ್ದವು. "ನನ್ನ ಪತಿಯಾದ ರುದ್ರನು ತಂದೆಯ ಯಜ್ಞವನ್ನು ವಿಧ್ವಂಸಗೊಳಿಸಿದನು. ಅವನ ಪಟ್ಟಣವನ್ನು ಅಪಹರಿಸಿದನು. ಅವನ ಬಂಧು ಬಾಂಧವವರನ್ನೆಲ್ಲ ನನ್ನ ಪತಿಯು ಕೊಂದು ಹಾಕಿದ್ದಾನೆ. ಬಳಗವನ್ನೆಲ್ಲ ಕಳೆದುಕೊಂಡ ಆ ನನ್ನ ಪಿತನ ಮನೆಗೆ ಹೇಗೆ ಹೋಗಲಿ? ಆದುದರಿಂದ ಈ ದೇಹವನ್ನು ತ್ಯಾಗಮಾಡುವೆನು. ತಪಂಗೈದು ಶಿವನನ್ನು ಆರಾಧಿಸಿ ಅವನ ಅನುಜ್ಞೆ ಪಡೆದು ಮತ್ತೊಮ್ಮೆ ಆ ತಂದೆಯ ಮನೆಗೆ ಹೋಗಿ ಬರುವೆನು" ಎಂದು ಗೌರಿಯು ಆಲೋಚನೆಗೈದಳು. ತನ್ನ ತಂದೆಯ ಬಾಳು ಬದುಕನ್ನೆಲ್ಲ ಹಾಳು ಮಾಡಿದ ಪತಿ ಪರಮೇಶ್ವರ ಬಗೆಗೆ ಅವಳಿಗೆ ಬಹಳ ಕೋಪ ಉಂಟಾಯಿತು.

ಕೂಡಲೇ ಆ ಗೌರಿಯು ಮಹಾದೇವರನ್ನು ತ್ಯಜಿಸಿ ಹಿಮಗಿರಿಗೆ ತೆರಳಿದಳು. ತಪಸ್ಸಿಗೆ ಕುಳಿತಳು. ದೀರ್ಘಕಾಲದವರೆಗೆ ಘೋರ ತಪಸ್ಸನ್ನು ಆಚರಿಸಿದಳು. ಅವಳ ತಪಸ್ಸಿನ ತಾಪದಿಂದ ಶರೀರವು ಸೊರಗಿತು. ಕೊನೆಗೆ ಅವಳು ತನ್ನ ಶರೀರದಿಂದ ಹುಟ್ಟಿದ ತಪೋಗ್ನಿಯಿಂದ ದಗ್ಧಳಾದಳು. ಹೀಗೆ ತನ್ನ ಯೋಗಾಗ್ನಿಯಿಂದ ತನ್ನ ದೇಹದಾಹವನ್ನು ಮಾಡಿಕೊಂಡು ಆ ಸತೀದೇವಿಯು ಹಿಮಾಲಯ ಪರ್ವತದ ಹೆಣ್ಣು ಮಗಳಾಗಿ ಹುಟ್ಟಿದಳು. ಶೈಲರಾಜನ ಸುತೆಯಾಗಿ ಜನಿಸಿದ ಆ ಸತೀದೇವಿಗೆ ಉಮಾ, ಕಾಳಿ ಮುಂತಾದ ಹೆಸರುಗಳು ಬಂದವು. ಹಿಮವಂತನ ಮನೆಯಲ್ಲಿ ಪರ್ವತ ರಾಜಕುಮಾರಿಯಾದ ಗೌರಿಯ ದೇಹವು ಅಂಗಪ್ರಭೆಯಿಂದ ಕಂಗೊಳಿಸತೊಡಗಿತು. ಸರ್ವಾಂಗ ಸುಂದರವಾದ ಲಲಿತ ಲಾವಣ್ಯದ ಲೋಭನೀಯ ಮೂರ್ತಿಯಾಗಿ ಆ ಕನ್ಯಾಮಣಿಯು ಗಿರಿರಾಜನಾದ ಆ ಹಿಮವಂತನ ಅಂತಃಪುರದಲ್ಲಿ ಕಣ್ಗೆಸೆದಳು. ಇಂಥ ಚಲುವಿನ ಚಿತ್ತಾರದಂತಿರುವ ಚಾರು ಶರೀರ ಧಾರಣೆಯಾಗಿದ್ದರೂ ಆ ಗೌರಿಯು ಹರನನ್ನು ನೆನೆದು ತಪಸ್ಸನ್ನು ಸುರು ಮಾಡಿದಳು. ಆ ಪರಶಿವನೇ ನನಗೆ ಪತಿಯಾಗಿ

ದೊರಕಬೇಕು ಎಂಬ ಉದ್ದೇಶದಿಂದ ಉಗ್ರತಪಸ್ಸನ್ನು ಕೈಕೊಂಡಳು. ಹಿಮಗಿರಿಯ ಶಿಖರದಲ್ಲಿ ನಿಂತು ಉಗ್ರನೆಂದು ಹೆಸರಾದ ಶಂಭುವನ್ನು ಪತಿಯನ್ನಾಗಿ ಪಡೆಯಬೇಕೆಂದು ಪಾರ್ವತಿಯು ಕೈಕೊಂಡ ತಪಸ್ಸಾದರೂ ಅತ್ಯಂತ ಉಗ್ರವಾಗಿಯೇ ಇತ್ತು. ಹೀಗೆ ಬಹುಕಾಲ ಬಹುಶ್ರಮದಿಂದ ತರುಣ ರಾಜಕುಮಾರಿಯಾದ ಗಿರಿಜೆಯ ತಪೋನುಷ್ಠಾನವನ್ನು ಮಾಡಿದ ಬಳಿಕ ಒಂದು ದಿನ ಅವಳ ಆಶ್ರಮಕ್ಕೆ ಓರ್ವ ಹಣ್ಣು ಹಣ್ಣು ಮುದುಕನಾದ ಬ್ರಾಹ್ಮಣನು ಬಂದನು. ಮುಪ್ಪಿನಿಂದ ಅವನ ಎಲ್ಲ ಅವಯವಗಳೂ ಸಡಿಲಾಗಿದ್ದವು. ಅವನು ನಡೆದರೆ ಅಡಿಗಡಿಗೆ ಎಡವಿ ಬೀಳುತ್ತಿದ್ದನು. ಅವನ ಸರ್ವಾಂಗಗಳನ್ನೂ ಮುಪ್ಪು ಅಪ್ಪಿ ಹಿಡಿದಿತ್ತು. ಅವನು ಹೇಗೋ ನಡುಗುತ್ತ ಪಾರ್ವತಿಯ ಬಳಿಗೆ ಬಂದು ''ಭದ್ರೆ ಬಹಳ ಹಸಿವೆಯಾಗಿದೆ. ಈ ಬುಭುಕ್ಷಿತನಾದ ಬ್ರಾಹ್ಮಣನಿಗೆ ಏನಾದರೂ ತಿನ್ನಲು ಕೊಡು'' ಎಂದು ಕೇಳಿದನು. ಆಗ ಶೈಲರಾಜಕುಮಾರಿಯಾದ ಪಾರ್ವತಿಯು ಆ ವೃದ್ಧ ಬ್ರಾಹ್ಮಣನಿಗೆ ಸ್ನಿಗ್ಧಮಧುರವಾದ ಕಂಠದಿಂದ ಇಂತು ನುಡಿದಳು.

''ಬ್ರಾಹ್ಮಣೋತ್ತಮ, ನಿಮಗೆ ಉಪಹಾರಕ್ಕಾಗಿ ಹಣ್ಣು ಹಂಪಲುಗಳನ್ನು ನೀಡುತ್ತೇನೆ. ಬೇಗನೇ ಸ್ನಾನಮಾಡಿ ಬನ್ನಿರಿ. ಅಷ್ಟರಲ್ಲಿ ಪಾಕವು ಸಿದ್ಧವಾಗುವುದು. ಯಥೇಚ್ಛವಾಗಿ ಊಟವನ್ನು ಮಾಡಬಹುದು''. ಪಾರ್ವತಿಯ ಈ ಮಾತನ್ನು ಕೇಳಿ ವಯಸ್ಕ ವೃದ್ಧನು ಗೌರಿಯ ಆಶ್ರಮದ ಪಕ್ಕದಲ್ಲಿಯೇ ಹರಿಯುತ್ತಲಿರುವ ಗಂಗಾನದಿಗೆ ಸ್ನಾನಕ್ಕೆಂದು ಹೋದನು. ಆ ಮುದಿ ವಿಪ್ರನು ಮೀಯಬೇಕೆಂದು ಮಂದಾಕಿನೀ ನೀರಿನಲ್ಲಿ ಇಳಿದಾಗ ಒಂದು ಭಯಂಕರವಾದ ಮೊಸಳೆಯು ಅವನ ಕಾಲನ್ನು ಹಿಡಿದುಬಿಟ್ಟಿತು. ಆ ಭೀಕರವಾದ ಮಕರವು ಕಾಲನ್ನು ಹಿಡಿದು ಎಳೆಯ ತೊಡಗಲು ಆ ಬ್ರಾಹ್ಮಣನು ಕೆಟ್ಟ ಧನಿಯಿಂದ ಚಟ್ಟನೆ ಚೀರಿದನು. ಪಾರ್ವತಿಯನ್ನು ಕೂಗಿದನು.

''ಅಬ್ರಹ್ಮಣ್ಯಂ, ಅಬ್ರಹ್ಮಣ್ಯಂ ಅಯ್ಯೋ ಸಾಯುತ್ತಲಿದ್ದೇನೆ. ಈ ಹಾಳು ಮೊಸಳೆಯು ನನ್ನ ಕಾಲು ಹಿಡಿದು ಎಳೆಯುತ್ತಲಿದೆ. ಸಾವು ಸೆಳೆಯುತ್ತಲಿದೆ. ಶೈಲಪುತ್ರಿ, ಮರಣವು ನನ್ನನ್ನು ಸೆಳೆಯುವ ಮುನ್ನ ನನ್ನನ್ನು ರಕ್ಷಿಸು.'' ಮೃತ್ಯು ಮುಖದಲ್ಲಿ ಒದ್ದಾಡುತ್ತಲಿರುವ ವೃದ್ಧ ಬ್ರಾಹ್ಮಣನ ಈ ಆರ್ತಧ್ವನಿಯನ್ನು ಕೇಳಿ ಪಾರ್ವತಿಗೆ ಚಿಂತೆಗಿಟ್ಟುಕೊಂಡಿತು.

''ನಾನು ಈವರೆಗೆ ಗಂಡಸಿನ ದೇಹವನ್ನು ಮುಟ್ಟಿಲ್ಲ. ನಾನು ಮುಟ್ಟುವ ಪುರುಷ ದೇಹವೆಂದರೆ ಎರಡು ಮಾತ್ರ. ಒಂದು ತಂದೆಯಾದ ಹಿಮವಂತನ ದೇಹ, ಪತಿಯಾದ ಪರಮೇಶ್ವರ ದೇಹ. ಇವೆರಡು ಪುರುಷ ಶರೀರಗಳನ್ನು ಬಿಟ್ಟು ಬೇರೆ ಪರಪುರುಷ ಶರೀರವನ್ನು ನಾನು ಹಿಂದೆ ಎಂದೂ ಮುಟ್ಟಿಲ್ಲ ಮುಂದೆ ಎಂದು ಮುಟ್ಟುವುದಿಲ್ಲ. ಮೊಸಳೆಯ ಬಾಯಿಗೆ ಬಿದ್ದು ನನ್ನನ್ನು ಕೂಗುತ್ತಿರುವ ಈ ಮುದುಕ ಬ್ರಾಹ್ಮಣನು ನನ್ನ ಪಿತನೂ ಅಲ್ಲ ಪತಿಯೂ ಅಲ್ಲ. ಅಂದ ಬಳಿಕ ಇವನನ್ನು ನಾನು ಮುಟ್ಟುವದೆಂತು! ಮುಟ್ಟದಿದ್ದರೆ ಆ ಬ್ರಾಹ್ಮಣನು ವ್ಯರ್ಥವಾಗಿ ಸತ್ತು ಹೋಗಿ ನನಗೆ ಬ್ರಹ್ಮಹತ್ಯೆಯ ಪಾಪವು ತಟ್ಟುವದು. ಇನ್ನುಳಿದ ಪಾಪವನ್ನು ಹೇಗಾದರೂ ಏನಾದರೂ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಂಡು ಕಳೆದುಕೊಳ್ಳಬಹುದು. ಆದರೆ ಬ್ರಹ್ಮಹತ್ಯಾ

ದೋಷಕ್ಕೆ ಮಾತ್ರ ಯಾವ ಪ್ರಾಯಶ್ಚಿತ್ತವೂ ಇಲ್ಲ. ಪರಿಹಾರವೂ ಇಲ್ಲ. ಆದುದರಿಂದ ನಾನು ಈಗ ಏನು ಮಾಡಬೇಕು? ಏನೇ ಆಗಲಿ, ಪಾಪ! ವೃದ್ಧ ಬ್ರಾಹ್ಮಣನು ಸಾಯುವದನ್ನು ನಾನು ನೋಡಲಾರೆ. ಹೋಗಿ ಆ ಬ್ರಾಹ್ಮಣನನ್ನು ನೀರಿನಿಂದ ಕೈ ಹಿಡಿದು ಮೇಲಕ್ಕೆ ಎತ್ತಿ ಪಾರು ಮಾಡುವೆ.''

ಹೀಗೆ ನಿರ್ಧರಿಸಿ ಗೌರಿಯು ಗಂಗೆಯ ದಂಡೆಗೆ ಧಾವಿಸಿ ಬಂದಳು. ನೀರಿನಲ್ಲಿ ನಿಂದಳು. ಮೊಸಳೆಯು ಹಿಡಿದು ನೀರಿನಲ್ಲಿ ಕುಸಿಯುತ್ತಿರುವ ಆ ಬ್ರಾಹ್ಮಣನಿಗೆ ಕೈಕೊಟ್ಟಳು. ನೀರಿನಲ್ಲಿ ಒದ್ದಾಡುತ್ತಿರುವ ಆ ವೃದ್ಧ ಬ್ರಾಹ್ಮಣನು ಗಿರಿಕನ್ಯೆಯು ನೀಡಿದ ಚಿಗುರು ಬೆರಳಿನ ಚಲುವುಗೈಯನ್ನು ಗಟ್ಟಿಯಾಗಿ ಹಿಡಿದನು. ಪಾರ್ವತಿಯು ತನ್ನ ಕರಪಿಡಿದ ಆ ಮುಪ್ಪಿನ ವಿಪ್ರನನ್ನು ಮೇಲಕ್ಕೆ ಜಗ್ಗಿದಳು. ಕೂಡಲೇ ಅವಳ ಕೈಹಿಡಿದು ಆ ಬ್ರಾಹ್ಮಣನು ಮೊಸಳೆಯ ಬಾಯಿಂದ ಪಾರಾಗಿ ನೀರಿನಿಂದ ಮೇಲೆದ್ದು ತೀರದಲ್ಲಿ ಬಂದು ನಿಂತನು. ಮೇಲೆ ಪಾರಾಗಿ ಬಂದರೂ ಹಿಡಿದ ಪಾರ್ವತಿಯ ಕೈಯನ್ನು ಬಿಡದೆ ಗಟ್ಟಿಯಾಗಿ ಹಿಡಿದು ಸ್ನೇಹ ನಲುಮೆ ತುಂಬಿ ನೇವರಿಸತೊಡಗಿದನು. ಇದೇನು ''ಈ ವೃದ್ಧ ಬ್ರಾಹ್ಮಣನ ಹುಚ್ಚು ನಡತೆ'' ? ಎಂದು ಅಚ್ಚರಿಯಿಂದ ಕಣ್ಣರಳಿಸಿ ಅವನೆಡೆಗೆ ನೋಡಿದಾಗ ಅವಳಿಗಾದ ಕೌತುಕ ಅಷ್ಟಿಷ್ಟಲ್ಲ. ತಾನು ಕೈ ಹಿಡಿದ ಆ ವೃದ್ಧ ಬ್ರಾಹ್ಮಣನು ಬೇರಾರೂ ಆಗದೆ ತನ್ನ ಮನದನ್ನನಾದ ಮಹೇಶ್ವರನೇ ಆಗಿದ್ದ. ಯಾವನನ್ನು ಮೆಚ್ಚಿಸಬೇಕೆಂದು ತಾನು ಇಷ್ಟು ದಿನ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದಳೊ ಆ ಭವ ಭಗವಂತನೇ ಈಗ ಬ್ರಾಹ್ಮಣ ವೇಷದಿಂದ ಅವಳೆದುರು ಬಂದು ನಿಂತಿದ್ದ. ಯಾವನ ಪಾಣಿಗ್ರಹಣಕ್ಕಾಗಿ ತಾನು ಕಾತರಿಸಿ ಕಾಯುತ್ತಿದ್ದಳೊ ಅವನು ತಾನಾಗಿಯೇ ಇಲ್ಲಿಯವರೆಗೆ ಬಂದು ತನ್ನ ಕೈಹಿಡಿದು ಪಾಣಿ ಗ್ರಹಣವನ್ನು ಮಾಡಿಬಿಟ್ಟನು. ಅದರಿಂದ ಗಿರಿಜೆಗೆ ಬಹಳ ನಾಚಿಕೆಯಾಯಿತು. ಅದರಲ್ಲಿಯೂ ಪೂರ್ವ ಜನ್ಮದಲ್ಲಿ ತನ್ನ ತಂದೆಯಾದ ದಕ್ಷಪ್ರಜಾಪತಿಗೆ ಅವಮಾನಗೈದಿದ್ದಾನೆಂಬ ಸಿಟ್ಟಿನಿಂದ ತಾನಾಗಿ ಅವನನ್ನು ಬಿಟ್ಟು ಹೋದದ್ದರಿಂದ ಈಗ ಅವಳಿಗೆ ಮತ್ತಿಷ್ಟು ನಾಚಿಕೆಯಾಯಿತು. ಅವಳು ಏನೂ ಮಾತನಾಡದೆ ತಲೆತಗ್ಗಿಸಿಕೊಂಡು ನಿಂತಳು.

ಮಹಾದೇವನು ಮೌನವಾಗಿ ನಿಂತುಕೊಂಡ ಆ ಮೋಹಿನಿಯನ್ನು ಕಂಡು ನಸು ನಗುತ್ತ ನಲುಮೆ ದುಂಬಿ ನುಡಿದನು -

''ಪ್ರಿಯೆ, ಈಗ ನನ್ನನ್ನು ಕೈ ಹಿಡಿದು ಮೇಲಕ್ಕೆ ಎತ್ತಿ ತಂದ ನೀನು ಇನ್ನು ಮೇಲೆ ನನ್ನನ್ನು ಹೇಗೆ ಬಿಡುವೆ! ಈಗ ನನ್ನ ನಿನ್ನ ಈ ಪಾಣಿಗ್ರಹಣವನ್ನು ವ್ಯರ್ಥವನ್ನಾಗಿ ಮಾಡಿದರೆ ನಿನ್ನ ನಿಜವಾದ ತಂದೆಯಾದ ಬ್ರಹ್ಮದೇವರಿಗೆ ನಿನ್ನನ್ನು ಮದುವೆ ಮಾಡಿಕೊಡಲು ನಾನು ಹೇಳಿ ಕಳಿಸಬೇಕಾಗುತ್ತದೆ. ಪಾರ್ವತಿ, ಇದು ನಗೆಯ ಮಾತಲ್ಲ. ನಿಜವಾಗಿಯೂ ನಿನ್ನ ಕೈಹಿಡಿಯಬೇಕೆಂದೇ ಈ ಮುದುಕ ಬ್ರಾಹ್ಮಣ ವೇಷದಿಂದ ಬಂದು ಮೊಸಳೆಯರೂಪದಿಂದ ಅವನನ್ನು ಹಿಡಿದು ನಿನ್ನನ್ನು ಕರೆದೆ.''

ಪರಮೇಶ್ವರನ ಈ ಮಾತನ್ನು ಕೇಳಿ ಪಾರ್ವತಿಯ ಹೃದಯದಲ್ಲಿ ಆನಂದವು ತುಂಬಿತು. ಮುಖದಲ್ಲಿ ನಾಚಿಕೆ ತುಳುಕಿತು. ತುಟಿಯ ತುದಿಗೆ ನಗೆಮಲ್ಲಿಗೆ ಅರಳಿತು.

ಮಂದಹಾಸದಿಂದ ಸುಂದರವಾದ ಮುಖದಿಂದ ಅವಳು ಪರಮೇಶ್ವರನನ್ನು ಕುಡಿ ನೋಟದಿಂದ ನೋಡಿ ನಸುನಾಚುತ್ತ ತುಸು ನಗುತ್ತ ನುಡಿದಳು -

''ಜಗದೊಡೆಯ ! ನಾನೀಗ ಇಷ್ಟು ಕಷ್ಟು ಪಡುತ್ತಿರುವದು ಯಾರಿಗಾಗಿ ! ಈ ಹೆಣ್ಣು ಜೀವ ಈ ಕಾಡಿನಲ್ಲಿ ಬಿಸಿಲು ಹಣ್ಣು ಉಣ್ಣುವದೂ, ತಪಸ್ಸು ಮಾಡಿ ಮಾಡಿ ಸಣ್ಣಾಗುವದೂ, ವ್ರತೋಪವಾಸಗಳಿಂದ ಹಣ್ಣಾಗಿ, ಜಪ ತಪಗಳಿಂದಾಗಿ ದೇಹವನ್ನು ದಂಡಿಸಿ ಕೊರಗಿ ಸೊರಗಿ ನಿಂತಿದ್ದೂ, ಏತಕ್ಕಾಗಿ ! ದೇವ ದೇವಾ, ನಿನ್ನ ಹೊರತು ಈ ಪಾರ್ವತಿಗೆ ಬೇರೆ ಏನು ಬೇಕಾದೀತು ! ಭಗವನ್, ನೀನೇ ನನ್ನ ಸರ್ವಸ್ವ. ನಿನಗಾಗಿಯೇ ಈ ನನ್ನ ಎಲ್ಲ ತಪಸ್ಸು. ನಿನ್ನ ಅನುಗ್ರಹಕ್ಕಾಗಿಯೇ ನಾನು ಕಾದಿದ್ದೇನೆ. ನಿನ್ನ ಒಲುಮೆಯನ್ನು ಸಂಪಾದಿಸಲಿಕ್ಕಾಗಿಯೇ ಈ ದೇಹವನ್ನು ತೇದಿದ್ದೇನೆ. ಹಿಂದಿನ ಜನ್ಮದಲ್ಲಿ ನಿನ್ನನ್ನೇ ಆರಾಧಿಸಿದ್ದೇನೆ. ಈ ಜನ್ಮದಲ್ಲಿಯೂ ನಿನ್ನ ಮೆಚ್ಚುಗೆಯನ್ನು ಗಳಿಸಲಿಕ್ಕಾಗಿ ನಿನ್ನನ್ನೇ ಕೈ ಹಿಡಿದು ಪತಿಯನ್ನಾಗಿ ಮಾಡಿಕೊಳ್ಳಲಿಕ್ಕಾಗಿ ಈ ತಪಸ್ಸನ್ನು ಕೈಕೊಂಡಿದ್ದೇನೆ. ನೀನೇ ನನ್ನ ಪತಿ. ನೀನೇ ನನಗೆ ಗತಿ. ನನ್ನ ದೇವರೂ ನೀನೇ. ನನ್ನ ದೈವವೂ ನೀನೇ. ನನ್ನ ಧ್ಯೇಯನೂ ನೀನೇ. ಆದರೆ ಪ್ರಭು, ನಾನು ಎಷ್ಟೆಂದರೂ ಹೆಣ್ಣಲ್ಲವೇ ! ನನಗೆ ಸ್ವಾತಂತ್ರ್ಯವಿಲ್ಲ. ಈ ಹಿಮವಂತನು ನನ್ನ ತಂದೆ. ತಾವು ಅವನನ್ನು ಕೇಳಿ ಅವನ ಅನುಮತಿಯಿಂದ ನನ್ನನ್ನು ಮದುವೆ ಮಾಡಿಕೊಳ್ಳಿರಿ'' ಎಂದು ಹೇಳಿ ತನ್ನ ತಂದೆಯ ಮನೆಗೆ ತೆರಳಿದಳು. ಮನೆಗೆ ಬಂದ ಆ ಪರ್ವತ ನಂದಿನಿಯು ತಂದೆಯ ಬಳಿಗೆ ಬಂದು ವಿನಯದಿಂದ ತಲೆ ತಗ್ಗಿಸಿ ಕೈ ಜೋಡಿಸಿ ನುಡಿದಳು.

''ತಂದೆಯೇ, ನನ್ನ ಕಳೆದ ಜನ್ಮದ ಪತಿಯಾದ ಮಹಾದೇವನು ನನ್ನ ತಂದೆಯ ಯಜ್ಞವನ್ನು ಹಾಳುಮಾಡಿದ್ದರಿಂದ ನಾನು ಸಿಟ್ಟಿನಿಂದ ಅವನನ್ನು ಬಿಟ್ಟು ಬಂದೆ. ನನ್ನ ದೇಹವನ್ನು ಸುಟ್ಟುಕೊಂಡೆ. ಮತ್ತೆ ನಿನ್ನ ಹೊಟ್ಟೆಯಿಂದ ಪಾರ್ವತಿಯಾಗಿ ಹುಟ್ಟಿಬಂದೆ. ಈ ಜನ್ಮದಲ್ಲಿಯೂ ಅವನನ್ನೇ ಪತಿಯನ್ನಾಗಿ ಪಡೆಯಬೇಕೆಂದು ಇಷ್ಟು ದಿನ ಘೋರ ತಪಸ್ಸನ್ನು ಮಾಡಿದೆ. ಇದೀಗ ನನ್ನ ತಪಸ್ಸಿಗೆ ಮೆಚ್ಚಿ ಆ ಪ್ರಭು ಪ್ರಸನ್ನನಾದ.

ಮೊದಲು ಆ ಪರಮೇಶ್ವರನು ಓರ್ವ ವೃದ್ಧ ಬ್ರಾಹ್ಮಣ ವೇಷದಿಂದ ನನ್ನ ಆಶ್ರಮಕ್ಕೆ ಬಂದ. 'ಹಸಿವೆ ಆಗಿದೆ, ಊಟಕ್ಕೆ ಹಾಕು'. ಎಂದು ನನ್ನನ್ನು ಯಾಚಿಸಿದ. 'ಸ್ನಾನಮಾಡಿ ಬಾ' ಎಂದು ನಾನು ಹೇಳಲು ಮಿಂದು ಬರಬೇಕೆಂದು ಮಂದಾಕಿನಿಗೆ ನಡೆದ. ಅಲ್ಲಿ ಮೊಸಳೆಯು ಹಿಡಿಯಲು ಆ ಬ್ರಾಹ್ಮಣ ವೇಷದ ಶಂಕರನು ನನ್ನನ್ನು ಕೂಗಿ ಕರೆದ. ಆ ಬ್ರಾಹ್ಮಣನನ್ನು ಬದುಕಿಸಲಿಕ್ಕಾಗಿ ನಾನು ಅವನ ಕೈ ಹಿಡಿದಕೂಡಲೇ ಆ ಬ್ರಾಹ್ಮಣನು ಚಂದ್ರಮೌಲಿಯಾದ ತನ್ನ ಸುಂದರ ಶಿವ ಸ್ವರೂಪವನ್ನು ತೋರಿದ. ಮತ್ತು ನಗುತ್ತ ''ಪಾರ್ವತಿ ನಮ್ಮಿಬ್ಬರ ಪಾಣಿಗ್ರಹಣವು ಆದಂತಾಯಿತು. ನೀನು ಇನ್ನು ಮೇಲೆ ಏನೂ ವಿಚಾರಿಸಬೇಡ'' ಎಂದು ನುಡಿದನು. ಆಗ ನಾನು ನನ್ನ ತಂದೆಯಾದ ಗಿರಿರಾಜನನ್ನು ಕೇಳಿ ಬರುತ್ತೇನೆ ಎಂದು ನಿನ್ನ ಬಳಿಗೆ ಬಂದಿದ್ದೇನೆ. ನಿನಗೆ ಉಚಿತ ಕಂಡಂತೆ ಮಾಡು. ನಿನಗೆ ಯೋಗ್ಯವೆನಿಸಿದ ಏರ್ಪಾಡನ್ನು ಕೂಡಲೇ ಕೈಕೊಳ್ಳು .'' ಗಿರಿರಾಜನಾದ ಹಿಮವಂತನು ಮಗಳ ಈ ಮಾತುಗಳನ್ನು ಕೇಳಿ ಆನಂದ ಭರಿತನಾದನು. ಸಂತಸದುಂಬಿ ತನ್ನ ಕನ್ಯೆಯನ್ನು ಕುರಿತು ನುಡಿದನು-

''ಮಗಳೇ, ನಾನು ಧನ್ಯ, ಧನ್ಯ, ಸ್ವಯಂ ದೇವೋತ್ತಮನಾದ ಮಹಾದೇವನು ಅಳಿಯನಾದ ಬಳಿಕ ನನ್ನ ಸೌಭಾಗ್ಯಕ್ಕೆ ಎಣೆ ಉಂಟೇ ! ಪಾರ್ವತಿ, ನೀನು ನನ್ನ ಮಗಳಾಗಿ ಹುಟ್ಟಿದ್ದರಿಂದ ದೇವತೆಗಳ ಮೇಲುಪಂಕ್ತಿಯಲ್ಲಿ ನಾನು ಗಣ್ಯವ್ಯಕ್ತಿಯಾಗಿ ಇರುವಂತಾಯಿತು. ನಾನು ಈಗ ಬಂದೆ. ನೀನು ಒಂದು ಕ್ಷಣ ಇಲ್ಲಿಯೆ ಕಾಯುತ್ತ ಕುಳಿತಿರು.'' ಪಾರ್ವತಿಗೆ ಹೀಗೆ ಹೇಳಿ ಶೈಲರಾಜನು ಬ್ರಹ್ಮದೇವರ ಬಳಿಗೆ ಬಂದು ನಮಸ್ಕಾರ ಮಾಡಿ ಕೈ ಮುಗಿದು ಹೇಳಿದನು -

''ಪಿತಾಮಹ, ಉಮಾ ದೇವಿಯು ಈಗ ನನ್ನ ಮಗಳಾಗಿ ಹುಟ್ಟಿದ್ದಾಳೆ. ಅವಳನ್ನು ಮಹಾದೇವರಿಗೆ ಕೊಟ್ಟು ಮದುವೆಯನ್ನು ಮಾಡಿ ಕೊಡಬೇಕೆಂದು ಮಾಡಿದ್ದೇನೆ. ಅದಕ್ಕೆ ತಮ್ಮ ಅಪ್ಪಣೆ.'' ಶೈಲರಾಜನಾದ ಹಿಮಾಲಯನ ಯೋಜನೆಯನ್ನು ಬ್ರಹ್ಮದೇವನು ಹೃತ್ಪೂರ್ವಕವಾಗಿ ಅನುಮೋದಿಸಿದನು. ಕೂಡಲೇ ಆ ಪರ್ವತ ಪತಿಯು ತನ್ನ ಮನೆಗೆ ಮರಳಿದನು. ಲಗ್ನದ ತಯಾರಿಕೆಯನ್ನು ತ್ವರಿತವಾಗಿ ನಡಿಸಿದನು. ತುಂಬುರು ನಾರದರನ್ನು ಕರೆಸಿದನು. ಹಾಹಾ ಹೂಹೂ ಗಂಧರ್ವರಿಗೆ ಹೇಳಿ ಕಳುಹಿಸಿದನು. ಕಿನ್ನರರನ್ನು ಬರಮಾಡಿಕೊಂಡನು. ಸುರರೂ ರಾಕ್ಷಸರೂ ಮದುವೆಗೆ ಬಂದರು. ಎಲ್ಲ ಬೆಟ್ಟ ನದಿಗಳೂ, ಶೈಲ ಗಿಡಗಳೂ, ವನಸ್ಪತಿಗಳೂ ಮೂರ್ತಿಮತ್ತಾಗಿ ಆ ಪರ್ವತ ಪುತ್ರಿಯ ವಿವಾಹಕ್ಕಾಗಿ ಉತ್ಸಾಹದಿಂದ ಉಪಸ್ಥಿತವಾದವು. ಈ ಪಾರ್ವತೀ ಪರಮೇಶ್ವರರ ವಿವಾಹದಲ್ಲಿ ಪೃಥ್ವಿಯು ಹಸೆ. ಚಿಗುರೆಲೆಯ ಹಾಸೇ ರತ್ನಗಂಬಳಿ. ಏಳೂ ಸಮುದ್ರಗಳೂ ಪೂರ್ಣ ಕಲಶಗಳು. ಮುಗಿಲು ಮಂದಿರದಲ್ಲಿ ಚಿಕ್ಕೆಗಳ ಹಂದರ ಹಾಕಿ ಸೂರ್ಯಚಂದ್ರರನ್ನು ತೂಗು ದೀಪಗಳನ್ನಾಗಿ ಇಳಿ ಬಿಟ್ಟಿದ್ದರು. ನದಿಗಳು ಬಂದ ಜನರಿಗೆ ಸ್ನಾನ ಪಾನಗಳಿಗೆ ನೀರನ್ನು ಒದಗಿಸುತ್ತಿದ್ದವು. ಹೀಗೆ ಮದುವೆಯ ಎಲ್ಲ ತಯಾರಿಯನ್ನು ಮಾಡಿಕೊಂಡು ಪರ್ವತರಾಜನು ವರನನ್ನು ಅರ್ಥಾತ್ ಹರನನ್ನು ಕರೆಯಲು ತನ್ನ ಸರಿದೊರೆಯ ಗಿರಿಯಾದ ಮಂದರಾಚಲನನ್ನು ಕೊಟ್ಟು ಕಳಿಸಿದನು. ಆ ಮಂದರಾಚಲವು ಕೈಲಾಸ ಪರ್ವತಕ್ಕೆ ಬಂದು ಕರೆಯಲು ಚಂದ್ರಶೇಖರನು ತನ್ನೆಲ್ಲ ಪರಿವಾರದೊಂದಿಗೆ ಹಿಮಗಿರಿಗೆ ಬಂದು ವಿಧಿ ಪೂರ್ವಕವಾಗಿ ಗೌರಿಯನ್ನು ಮದುವೆಯಾದನು.

ಈ ಪಾರ್ವತೀ ಪರಮೇಶ್ವರರ ಮದುವೆಯ ಮಂಗಳಮಹೋತ್ಸವದಲ್ಲಿ ಪರ್ವತ ಎಂಬ ದೇವ ಗಂಧರ್ವನು ಹಾಡಿದನು. ನಾರದನು ಸಂಗೀತ ಕಛೇರಿಯನ್ನು ಮಾಡಿದನು. ಅಪ್ಸರೆಯರು ಕುಣಿದರು. ಸಿದ್ಧರು ನರ್ತಿಸಿದರು. ದೇವತೆಗಳು ನಲಿದಾಡಿದರು. ವನಸ್ಪತಿಗಳು ಹೂಗಳನ್ನು ಎರಚಿದವು. ದೇವತಾ ಸ್ತ್ರೀಯರು ಪುಷ್ಪವೃಷ್ಟಿಯನ್ನು ಮಾಡಿ ದಿವ್ಯ ಗೀತೆಗಳನ್ನು ಹಾಡಿ ಆನಂದದಿಂದ ಕುಣಿದರು. ಬಂದ ಜನರೆಲ್ಲರೂ ಈ ಉತ್ಸವ ಸಮಾರಂಭವನ್ನು ನೋಡಿ ತಣಿದರು. ಚತುರ್ಮುಖ ಬ್ರಹ್ಮದೇವರ ಕಣ್ಣುಗಳಿಂದ ಆನಂದ ಬಾಷ್ಪಗಳು ಉದುರಿದವು. ಶಿವನೊಡನೆ ಒಡಗೂಡಿದ ಶಕ್ತಿ ಸ್ವರೂಪಿಣಿಯಾದ ಆ ಪಾರ್ವತಿಯನ್ನು ಕಂಡು ಚತುರ್ಮುಖನು ಸಂತಸಗೊಂಡು ನುಡಿದನು -

''ಮಗಳೇ, ನಿನ್ನ ಪತಿಯು ನಿನಗೊಬ್ಬಳಿಗೇ ಪತಿಯಲ್ಲ. ಎಲ್ಲ ನಾರಿಯರಿಗೂ ಅವನು ಪತಿ, ಎಲ್ಲ ಪುರುಷರಿಗೂ ಅವನು ಪತಿ. ಇಂಥ ಜಗತ್ಪತಿಯು ನಿನಗೆ ಪತಿಯಾಗಿ ದೊರೆತದ್ದು ನಿನ್ನ ಸೌಭಾಗ್ಯ. ನೀವಿಬ್ಬರೂ ಸತಿಪತಿಯರು ಜಗತ್ತಿನಲ್ಲಿಯ ಎಲ್ಲ

ಪತಿಪತ್ನಿಯರಿಗೂ ಮಂಗಳವನ್ನುಂಟು ಮಾಡುವ ಆದರ್ಶ ದಿವ್ಯ ದಂಪತಿಗಳಾಗಿ ಬಾಳಿರಿ.'' ಹೀಗೆ ನುಡಿದ ಭವಭವಾನಿಯರನ್ನು ಹರಿಸಿ ಪಿತಾಮಹನು ಸತ್ಯಲೋಕಕ್ಕೆ ತೆರಳಿದನು.

ಈ ಪಾರ್ವತೀ ಪರಮೇಶ್ವರರ ವಿವಾಹ ಸಮಾರಂಭವು ತದಿಗೆಯ ದಿನ ನಡೆಯಿತು. ಇದಕ್ಕೆ ಗೌರೀ ತದಿಗೆ ಎಂದು ಹೆಸರು. ಈ ತೃತೀಯಾ ತಿಥಿಯಲ್ಲಿ ಉಪ್ಪನ್ನು ಬಿಟ್ಟು ಉಪವಾಸ ಮಾಡಿದರೆ ಸ್ತ್ರೀಯರಿಗೆ ಸೌಭಾಗ್ಯ ಪ್ರಾಪ್ತಿಯಾಗುವದು. ಗಂಡಸರಿಗೆ ಮಹಾ ಭಾಗ್ಯ ಪ್ರಾಪ್ತಿಯು ಆಗುವದು. ದುರ್ದೈವದಿಂದ ತನ್ನ ಕಾಡು ರೂಪದಿಂದ ಎಲ್ಲರಿಗೂ ಬೇಡಾದ ಕುರೂಪಿ ಹೆಂಗಸಾಗಲೀ, ದುರದೃಷ್ಟದಿಂದ ದರಿದ್ರನಾದ ಗಂಡಸಾಗಲೀ ತದಿಗೆಯ ತಿಥಿಯಲ್ಲಿ ಉಪ್ಪನ್ನು ಬಿಟ್ಟು ಈ ಪಾರ್ವತೀ ಪರಮೇಶ್ವರರ ಕಲ್ಯಾಣೋತ್ಸವದ ಕತೆಯನ್ನು ಒಂದು ವರ್ಷ ಕೇಳಿ ಭಕ್ತಿಯಿಂದ ಆರಾಧಿಸಿದರೆ ಎಲ್ಲ ಇಷ್ಟಾರ್ಥಗಳನ್ನೂ ಪಡೆಯುವರು. ಸೌಭಾಗ್ಯವನ್ನು ಹೊಂದುವರು. ಶಾಂತಿ ಕಾಂತಿಗಳು ತುಷ್ಟಿಪುಷ್ಟಿಗಳು ಈ ಲೋಕದಲ್ಲಿ ಸಮೃದ್ಧವಾಗಿ ಅವರಿಗೆ ಲಭಿಸುವವು.

*ವರಾಹ ಪುರಾಣದಲ್ಲಿ ಇಪ್ಪತ್ತರೆಡನೇ ಅಧ್ಯಾಯವು ಮುಗಿದುದು*



## ಗಣಪತಿ ಉತ್ಪತ್ತಿ

**ಅಧ್ಯಾಯ - ೨೩**

**ಪ್ರಜಾಪಾಲ :-** ಮುನಿವರೇಣ್ಯರೇ, ಗಣಪತಿಯ ಜನ್ಮವು ಹೇಗಾಯಿತು ? ದಯವಿಟ್ಟು ತಿಳಿಸಿರಿ.

**ಮಹಾತಪ :-** ಹಿಂದೆ ಎಲ್ಲ ದೇವತೆಗಳು ಮತ್ತು ಋಷಿಗಳು ಪ್ರಾರಂಭಿಸಿದ ಕಾರ್ಯಗಳೆಲ್ಲವೂ ನಿರ್ವಿಘ್ನವಾಗಿ ನೆರವೇರುತ್ತಿದ್ದವು. ಇದರಂತೆ ದುಷ್ಟ ಜನರು ಕೈಕೊಂಡ ಕಾರ್ಯಗಳೂ ಕೂಡಾ ಯಾವುದೇ ಅಡೆತಡೆ, ಅಡ್ಡಿ ಆತಂಕಗಳಿಲ್ಲದೇ ನಿರ್ವಿಘ್ನವಾಗಿ ಪೂರ್ತಿಗೊಳ್ಳುತ್ತಿದ್ದವು. ಇದನ್ನು ನೋಡಿ ದೇವತೆಗಳಿಗೆ ಚಿಂತೆಯಾಯಿತು. ಅವರೆಲ್ಲರೂ ಮಹಾದೇವರ ಬಳಿಗೆ ಬಂದರು. ''ದುಷ್ಟ ಜನರ ದುರ್ವ್ಯಾಪಾರಗಳಿಗೆ ಅಡ್ಡಿಯನ್ನು ಒಡ್ಡಬೇಕು. ಅವರ ಯಾವ ಕಾರ್ಯಗಳೂ ನಿರ್ವಿಘ್ನವಾಗಿ ನೆರವೇರಬಾರದು'' ಎಂದು ಅವರು ಬಯಸುತ್ತಿದ್ದರು. ತಮ್ಮ ಈ ಮನೋರಥವನ್ನು ಪೂರ್ಣಗೊಳಿಸಲು ಮಹಾದೇವರೇ ಸಮರ್ಥರು ಎಂದು ಅವರೆಲ್ಲರೂ ವಿಚಾರಿಸಿದರು. ಅದಕ್ಕಾಗಿ ಅವರೆಲ್ಲರೂ ಕೈಲಾಸ ಪರ್ವತಕ್ಕೆ ಬಂದು ತಮ್ಮ ಗುರುವಾದ ಶಿವನಿಗೆ ನಮಸ್ಕಾರ ಮಾಡಿ ಬೇಡಿಕೊಂಡರು-

''ಶೂಲ ಪಾಣಿಯಾದ ಮುಕ್ಕಣ್ಣ ದೇವಾ, ದುಷ್ಟ ಜನರ ಕಾರ್ಯಗಳಿಗೆಲ್ಲ ವಿಘ್ನವನ್ನುಂಟು ಮಾಡುವ ಒಬ್ಬ ವಿಘ್ನೇಶ್ವರನನ್ನು ಉತ್ಪಾದಿಸು.'' ದೇವತೆಗಳ ಈ ಮಾತನ್ನು ಕೇಳಿ ಮುದಿತನಾದ ಮಹೇಶ್ವರನು ಪಾರ್ವತಿಯ ಕಡೆಗೆ ನೋಡತೊಡಗಿದನು. ಚೆಲುವಿನ ಪುತ್ಥಳಿಯಂತಿದ್ದ ಆ ಚಾರುಗಾತ್ರಿಯನ್ನು ಎವೆ ಪಿಳುಕಿಸದೆ ಬಿಡುಗಣ್ಣಿನಿಂದ ಮಹಾದೇವರು ನೋಡುತ್ತಲಿರುವಾಗ ಅವನ ದೃಷ್ಟಿಯು ಒಮ್ಮೆಲೇ ದೇವತೆಗಳು ನಿಂತ ಮುಗಿಲಿನ ಕಡೆಗೆ ಹರಿಯಿತು. ಆ ಆಕಾಶವು ಅಮೂರ್ತವಾಗಿದ್ದಿತು. ಅಲ್ಲಿ ಯಾವ

ಮೂರ್ತಿಯೂ ಗೋಚರಿಸಲಿಲ. ಆ ಶೂನ್ಯವಾದ ಆಗಸವನ್ನು ಕಂಡು ಶಿವನ ಮನಸ್ಸಿನಲ್ಲಿ ಒಂದು ಯೋಚನೆ ಬಂದಿತು. ಪೃಥ್ವಿಗೆ ರೂಪವಿದೆ. ಜಲಕ್ಕೂ ರೂಪವಿದೆ. ತೇಜಸ್ಸಿಗೂ ರೂಪವಿದೆ. ವಾಯುವಿಗೂ ಒಂದು ತರಹದ ರೂಪವಿದೆ. ಆದರೆ ಈ ಆಕಾಶಕ್ಕೆ ಮಾತ್ರ ಏಕೆ ರೂಪವಿಲ್ಲ ಎಂದು ಆಲೋಚಿಸಿ ಆ ಮಹಾದೇವನು ಮಂದಹಾಸ ಮಾಡಿದನು.

ಈ ಮಹಾದೇವರ ಗಗನದ ನೋಟ, ಗೌರಿಯ ಬೇಟ, ಮತ್ತು ಹಿಂದೆ ಪರಬ್ರಹ್ಮನ 'ಪೃಥ್ವಿ ಅಫ್ ತೇಜೋ ವಾಯುಗಳ ಗುಣವು ಗಣಪತಿಯಾಗುವದು' ಎಂಬ ಹೇಳಿಕೆಯ ವಾಗ್‌ವಿಲಾಸ ಹಾಗೂ ಮಹಾದೇವರ ಮಂದಹಾಸ ಈ ನಾಲ್ಕರಿಂದ ಇಡೀ ಬ್ರಹ್ಮಾಂಡದಲ್ಲಿಯೇ ಅತ್ಯಂತ ತೇಜಸ್ವಿಯಾದ ಒಬ್ಬ ಕುಮಾರನು ಉದಿಸಿದನು. ಅವನನ್ನು ನೋಡಿದರೆ ಕಿರಣ ಕಾಂತಿಗಳಿಂದ ಅವನೊಬ್ಬ ಮರಿ ರುದ್ರನು ಎಂದು ಎನಿಸುತ್ತಿದ್ದನು. ಅವನ ಮೈ ದೇದೀಪ್ಯಮಾನವಾಗಿದ್ದಿತು. ಅವನ ಮುಖವು ಕಾಂತಿಯ ತಳಿಗೆಯಂತೆ ಹೊಳೆಯುತ್ತಿತ್ತು. ಅವನ ತೇಜೋದೀಪ್ತಿಯಿಂದ ದಿಕ್ಕುಗಳೆಲ್ಲವೂ ಉದ್ಭಾಸಿತವಾಗಿದ್ದವು. ಅವನ ದಿವ್ಯ ಕಾಂತಿ, ಭವ್ಯ ದೇಹ ಮತ್ತು ಅಪ್ರತಿಮ ಸೌಂದರ್ಯಗಳನ್ನು ಕಂಡು ದೇವತೆಗಳ ಮನಸ್ಸು ಕೂಡ ಮುಗ್ಧವಾಯಿತು. ಇವನೊಬ್ಬ ಮಹಾತ್ಮ ಎಂದು ಅವರು ಕೊಂಡಾಡಿದರು. ಇಂಥ ತ್ರಿಭುವನ ಕಮನೀಯವಾದ ಆ ಕುಮಾರನ ಲೋಭನೀಯವಾದ ಲಾವಣ್ಯವನ್ನು ಕಂಡು ಗೌರೀದೇವಿಯು ತನ್ನ ತಾವರೆಗಣ್ಣುಗಳನ್ನು ತೆರೆದು ಎವೆ ಪಿಳುಕಿಸದೇ ನೋಡತೊಡಗಿದಳು. ಆ ಕುಮಾರನ ಮೈಮಾಟವನ್ನೂ ಮತ್ತು ಗೌರಿಯು ಅವನೆಡೆಗೆ ಬೀರಿದ ಬಿಡುಗಣ್ಣಿನ ನಿಡು ನೋಟವನ್ನೂ ನೋಡಿ ಮಹಾದೇವನಿಗೆ ಸಿಟ್ಟು ಬಂದಿತು. ''ಈ ಕುಮಾರನ ರೂಪವು ಅತ್ಯಂತ ಸುಂದರವೂ ಸರ್ವಮೋಹಕವೂ ಆಗಿದೆ. ಹೆಂಗಸರ ಮನಸ್ಸು ಸ್ವಾಭಾವಿಕವಾಗಿ ಚಂಚಲ. ಅದಕ್ಕಾಗಿಯೇ ಗೌರಿಯು ಇವನ ರೂಪಕ್ಕೆ ಮರುಳಾಗಿ ಅರಳು ಗಣ್ಣಿನಿಂದ ಇವನನ್ನು ನೋಡುತ್ತಲಿದ್ದಾಳೆ'' ಎಂದು ಯೋಚಿಸಿದನು. ಈ ವಿಚಾರದಿಂದ ಮಹಾದೇವನಿಗೆ ಕೋಪ ಬಂದು ಅವನು ಆ ಕುಮಾರನಿಗೆ ಶಾಪ ಕೊಟ್ಟನು.

''ಕುಮಾರ, ಇನ್ನು ಮೇಲೆ ನೀನು ಆನೆಯ ಸೊಂಡೆಯುಳ್ಳ ವಕ್ರತುಂಡನಾಗು. ನಿನ್ನ ಹೊಟ್ಟೆಯು ಉಬ್ಬಲಿ, ಹಾವುಗಳೇ ನಿನ್ನ ಜನಿವಾರವಾಗಲಿ '' ಸಿಟ್ಟಿನಿಂದ ಆ ತ್ರ್ಯಂಬಕನು ಹೀಗೆ ಶಾಪವಿತ್ತು ತನ್ನ ಮೈಯನ್ನು ಎದ್ದು ನಿಂತು ಜಾಡಿಸಿದನು. ಅವನ ಮೈ ತುಂಬ ನಿಮಿರಿದ ಕೂದಲುಗಳಿಂದ ನೆಲದ ಮೇಲೆ ನೀರು ಬಿದ್ದಿತು. ಅದರಿಂದ ಆನೆಯ ಮೋರೆಯುಳ್ಳ. ಕಾಡಿಗೆಯಂತೆ ಕಪ್ಪಾದ, ಹೊಂಗೆಯ ಮರದಂತೆ ದಪ್ಪಾದ ಕರಿ ಮೈ ಬಣ್ಣದ ಅನೇಕ ವಿನಾಯಕರು ಎದ್ದು ನಿಂತರು. ಅವರ ಕೈಯಲ್ಲಿ ಬಗೆ ಬಗೆಯ ಆಯುಧಗಳಿದ್ದವು. ಅದನ್ನು ನೋಡಿ ಮಹಾದೇವರ ಮನಸ್ಸು ವ್ಯಾಕುಲವಾಯಿತು. ''ದೇವತೆಗಳ ಅಭೀಷ್ಟವನ್ನು ಪೂರೈಸಲಿಕ್ಕಾಗಿ ನಾನು ಒಬ್ಬ ನಾಯಕನನ್ನು ಸೃಷ್ಟಿ ಮಾಡಿದೆ. ಆದರೆ ಅವನ ಸುತ್ತಲೂ ಇಷ್ಟು ವಿನಾಯಕರು ಏಕೆ ಹುಟ್ಟಿದರು '' ಎಂದು ಮಹಾದೇವನೂ ಇತರ ದೇವತೆಗಳೂ ಚಿಂತೆಗೈಯುತ್ತಿರುವಾಗಲೇ ಆ ಎಲ್ಲ ವಿನಾಯಕರ ತಂಡವು ನೆಲವನ್ನೆಲ್ಲ ನಡುಗಿಸಿ ಬಿಟ್ಟಿತು. ಅವರಿಂದ ಪ್ರಪಂಚವೆಲ್ಲವೂ ಪ್ರಕ್ಷುಬ್ಧವಾಯಿತು.

ಆ ಸಮಯದಲ್ಲಿ ಬ್ರಹ್ಮದೇವರು ಒಂದು ದಿವ್ಯವಾದ ವಿಮಾನವನ್ನು ಏರಿ ಅಲ್ಲಿಗೆ ಬಂದು ಮುಗಿಲಿನ ಅಗಲದಲ್ಲಿ ನಿಂತು ಇಂತು ನುಡಿದರು.

''ದೇವತೆಗಳೇ, ನಿಮ್ಮ ನಿಲಿಂಪ ವರ್ಗಕ್ಕೆಲ್ಲ ನಾಯಕನಾದ ಈ ಮಹಾದೇವನು ದುಷ್ಟ ಕಾರ್ಯಗಳಿಗೆ ವಿಘ್ನವನ್ನು ಒಡ್ಡುವ ವಿನಾಯಕನನ್ನು ಸೃಷ್ಟಿಸಿ ನಿಮ್ಮ ಮೇಲೆ ಪರಮಾನುಗ್ರಹವನ್ನು ಮಾಡಿದ್ದಾನೆ. ಈಶ್ವರನ ಇಂಥ ಪ್ರಸಾದವನ್ನು ಪಡೆದ ನೀವೇ ಧನ್ಯರು.''

ಬ್ರಹ್ಮದೇವರು ದೇವತೆಗಳಿಗೆ ಹೀಗೆ ಹೇಳಿ ರುದ್ರದೇವರನ್ನು ಕುರಿತು ನುಡಿದರು ''ಮಹಾದೇವ, ನಿನ್ನ ಮುಖದಿಂದ ಹುಟ್ಟಿದ ವಿನಾಯಕನು ಈ ಉಳಿದೆಲ್ಲ ವಿನಾಯಕರಿಗೆ ಅಧಿಪತಿಯಾಗಲಿ. ಆ ವಿನಾಯಕರ ಒಡೆಯ ಈ ವಿನಾಯಕನಿಗೆ ನೀನು ಒಡೆಯನಾಗು. ಬೇಕಾದ ವರವನ್ನು ಕೊಡುವ ನಿನ್ನಿಂದ ಈ ವಿನಾಯಕನು ಆಕಾಶದಲ್ಲಿ ನಾಲ್ಕೂ ದಿಕ್ಕುಗಳಲ್ಲಿ ಈ ಶರೀರದಿಂದಲೇ ಸಂಚರಿಸಲಿ. ಅವನ ಅನುಯಾಯಿಗಳಾದ ಉಳಿದ ವಿನಾಯಕರ ಗುಂಪು ತಂಡಗಳಿಂದ ಆಕಾಶವೆಲ್ಲವೂ ತುಂಬಿ ಬಿಟ್ಟಿದೆ. ಅವರೆಲ್ಲರಿಗೂ ಹೊರಟು ಹೋಗಲು ತಿಳಿಸು. ಮತ್ತು ನೀನು ನಿನ್ನ ಮಗನಾದ ಮೂಲ ವಿನಾಯಕನಿಗೆ ಶಸ್ತ್ರಗಳನ್ನೂ ಮತ್ತು ವರವನ್ನೂ ಕೊಟ್ಟು ಅನುಗ್ರಹಿಸು '' ಹೀಗೆ ಹೇಳಿ ಬ್ರಹ್ಮದೇವರು ಹೊರಟು ಹೋದರು. ಅನಂತರ ಮಹಾದೇವನು ತನ್ನ ಮಗನಾದ ಮುಖ್ಯ ವಿನಾಯಕನನ್ನು ಕುರಿತು ಹೇಳಿದನು-

''ಮಗು ನಿನಗೆ ಇನ್ನು ಮೇಲೆ ಜಗತ್ತಿನಲ್ಲಿ ವಿನಾಯಕ, ವಿಘ್ನೇಶ್ವರ, ಗಜಾನನ, ಗಣೇಶ, ಶಿವಕುಮಾರ ಮುಂತಾದ ಅನೇಕ ಹೆಸರುಗಳು ಬರುವವು. ಈ ಕ್ರೂರದೃಷ್ಟಿಯ ಮತ್ತು ಕ್ರೂರ ಕೃತಿಯ ಈ ನಿನ್ನ ವಿನಾಯಕ ಭೃತ್ಯರೆಲ್ಲರೂ ಇಲ್ಲಿದ ಹೊರಟು ಹೋಗಲಿ. ಶ್ರೀ ಹರಿಯ ಪಾದಾರ ವಿಂದಗಳಲ್ಲಿ ತಾವು ಮಾಡಿದ ಕರ್ಮಗಳನ್ನು ಸಮರ್ಪಿಸದೇ ನಾನೇ ಕರ್ತಾ ಎಂಬ ಅಹಂಕಾರದಿಂದ ಮಾಡುವ ಕರ್ಮಗಳೆಲ್ಲವುಗಳ ಪುಣ್ಯಫಲವು ಇವರಿಗೇ ಬರಲಿ. ಆದರೆ ''ನಾಹಂ ಕರ್ತಾ ಹರಿಃಕರ್ತಾ'' ಎಂಬ ಭಾವನೆಯಿಂದ ಕೃರ್ತೃತ್ವಾಭಿಮಾನವಿಲ್ಲದೆ ಮಾಡಿದ ಸತ್ಕಾರ್ಯಗಳಿಗೆ ಬರುವ ವಿಘ್ನ ವಿಡ್ಡೂರಗಳನ್ನು ಬೇಗ ದೂರಗೊಳಿಸಿ ಹಿಡಿದ ಕಾರ್ಯವು ಸಿದ್ಧಿಸುವಂತೆ ನೀನು ಮಾಡು. ಅದಕ್ಕಾಗಿ ಎಲ್ಲದೇವತೆಗಳೂ, ಋಷಿಗಳೂ, ಮನಷ್ಯರೂ, ಯಜ್ಞಯಾಗ ತಪೋಯೋಗ ಮುಂತಾದ ಎಲ್ಲ ಧರ್ಮಕಾರ್ಯಗಳಲ್ಲಿ ನಿನ್ನನ್ನೇ ಮೊದಲು ಪೂಜಿಸಲಿ. ಕಾರ್ಯಾರಂಭದಲ್ಲಿ ನಿನಗೆ ಅಗ್ರಪೂಜೆಯನ್ನು ಸಲ್ಲಿಸದ ಜನರ ಕಾರ್ಯಗಳಿಗೆ ನೀನೇ ವಿಘ್ನ ಒಡ್ಡಿ ನಾಶಮಾಡಲಿ''. ಹೀಗೆ ಹೇಳಿ ಪರಮೇಶ್ವರನು ಎಲ್ಲ ದೇವತೆಗಳಿಂದ ಕೂಡಿಕೊಂಡು ಬಂಗಾರದ ಬಿಂದಿಗೆಗಳಲ್ಲಿ ತೀರ್ಥೋದಕವನ್ನು ತುಂಬಿ ವಿನಾಯಕ ಪಟ್ಟದಲ್ಲಿ ಗಣಪತಿಗೆ ಪಟ್ಟಾಭಿಷೇಕವನ್ನು ಮಾಡಿದನು. ಸ್ನೇಹಪೂರ್ವಕವಾದ ದೃಷ್ಟಿಯಿಂದಲೂ ಹಾಗೂ ಮಹಾದೇವರ ಅಂತಃಕರಣದ ಸ್ನೇಹ ರಸದ ದೃಷ್ಟಿಯಿಂದಲೂ ಗಣಪತಿಗೆ ಅಭಿಷೇಕವಾದದ್ದನ್ನು ಕಂಡು ದೇವತೆಗಳಿಗೆಲ್ಲ ಬಹಳ ಸಂತೋಷವಾಯಿತು. ಆಗ ಅವರೆಲ್ಲರೂ ಶಿವನ ಸನ್ನಿಧಿಯಲ್ಲಿ ನಿಂತು ಕೊಂಡು ಆ ಶಿವಕುಮಾರನನ್ನು ಸ್ತೋತ್ರ ಮಾಡಿದರು.

"ನಮಸ್ತೇ ಗಜವಕ್ತ್ರಾಯ ನಮಸ್ತೇ ಗಣನಾಯಕ
ವಿನಾಯಕ ನಮಸ್ತೇಽಸ್ತು ನಮಸ್ತೇ ಚಂಡ ವಿಕ್ರಮ ॥

ನಮೋಽಸ್ತುತೇ ವಿಘ್ನಕರ್ತ್ರೇ ನಮಸ್ತೇ ಸರ್ಪ ಮೇಖಲ
ನಮಸ್ತೇ ರುದ್ರ ವಕ್ತ್ರೋತ್ಥ ಪ್ರಲಂಬಜಠರಾಶ್ರಿತ ॥

ಸರ್ವದೇವ ನಮಸ್ಕಾರಾದವಿಘ್ನಂ ಕುರು ಸರ್ವದಾ"॥
ವಂದನಂ ಗಜವಕ್ತ್ರಂಗೆ ವಂದನಂ ಗಣನಾಯಕ!
ಬೆನಕನಿಗೆ ನಮಸ್ಕಾರ ನಮಿಪೆ ನಾ ಚಂಡವಿಕ್ರಮ!
ದುಷ್ಟ ಕಾರ್ಯಕ್ಕೆ ವಿಘ್ನಗೈಯ್ಯುವ ಉದ್ದ ಹೊಟ್ಟೆಯ ದೇವಗೆ!
ಹಾವಿನುಡುದಾರವನ್ನು ಧರಿಸಿದ ಶಿವನ ಸುತನಿಗೆ ವಂದನೆ ॥
ಎಲ್ಲದೇವರು ನಿನಗೆ ನಮಿಪರು ನಮ್ಮ ವಿಘ್ನಗಳಳಿವುದು ॥

ಈ ರೀತಿಯಾಗಿ ದೇವತೆಗಳು ಸ್ತೋತ್ರ ಮಾಡಲು ಮಹಾದೇವರಿಂದ ಅಭಿಷಿಕ್ತನಾದ ಆ ಗಣಪತಿಯು ಪಾರ್ವತೀ ದೇವಿಯ ಪುತ್ರತ್ವನ್ನು ಪಡೆದನು. ಇದೆಲ್ಲವೂ ಚತುರ್ಥಿಯ ದಿನವೇ ನಡೆದುದರಿಂದ ಈ ಚೌತೀ ತಿಥಿಯು ತಿಥಿಗಳಲ್ಲೆಲ್ಲ ಅತಿ ಶ್ರೇಷ್ಠವೆನಿಸಿದೆ. ಈ ಚತುರ್ಥೀ ದಿನದಂದು ಭಕ್ತಿಯಿಂದ ಗಣಪತಿಯನ್ನು ಪೂಜಿಸಿ, ಎಳ್ಳನ್ನು ಮಾತ್ರ ತಿಂದಿರುವವರಿಗೆ ತೃಪ್ತನಾಗಿ ಅವನು ಒಲಿಯುವದರಲ್ಲಿ ಸಂಶಯವಿಲ್ಲ. ಈ ಗಣಪತಿಯ ಸ್ತೋತ್ರವನ್ನು ಯಾವನು ಪಠಿಸುವನೋ, ಯಾವನು ಕೇಳುವನೋ ಅವರಿಗೆ ವಿಘ್ನಗಳಾಗಲಿ, ಪಾಪಗಳಾಗಲಿ ಬರುವುದಿಲ್ಲ.

ವರಾಹ ಪುರಾಣದಲ್ಲಿ ಇಪ್ಪತ್ತೂರನೇ ಅಧ್ಯಾಯವು ಮುಗಿದುದು

—o—

## ಸರ್ಪಗಳ ಉತ್ಪತ್ತಿ

## ಅಧ್ಯಾಯ - ೨೪

**ಪ್ರಜಾಪಾಲ :-** ನಾಗಲೋಕದ ಜೀವಿಗಳಿಗೆ ಹಾವುಗಳ ರೂಪವು ಹೇಗಾಯಿ--ತೆಂಬುದನ್ನು ತಿಳಿಸಬೇಕು.

**ಮಹಾತಪ :-** ಸೃಷ್ಟಿಯ ಪ್ರಾರಂಭಕಾಲದಲ್ಲಿ ಬ್ರಹ್ಮದೇವರು ಮರೀಚಿ ಎಂಬ ಮಹಾಮಹರ್ಷಿಯನ್ನು ತನ್ನ ಮಾನಸಪುತ್ರರನ್ನಾಗಿ ಉತ್ಪಾದಿಸಿದನು. ಆ ಮರೀಚಿ ಮುನಿಯ ಮಗನೇ ಕಶ್ಯಪ. ಆ ಕಶ್ಯಪ ಮುನಿಗೆ ದಕ್ಷಪ್ರಜಾಪತಿಯ ಮಗಳಾದ ಕದ್ರೂಳನ್ನು ಕೊಟ್ಟಿತ್ತು. ಕಶ್ಯಪನು ದಾಕ್ಷಾಯಣಿಯಾದ ಆ ಕದ್ರೂಳಲ್ಲಿ ಮಹಾ ಬಲಿಷ್ಠರಾದ ಅನೇಕ ನಾಗಪುತ್ರರನ್ನು ಹಡೆದನು. ಅನಂತ, ವಾಸುಕಿ, ಕಂಬಲ, ಕರ್ಕೋಟಕ, ಪದ್ಮ, ಮಹಾಪದ್ಮ, ಶಂಖ, ಕುಲಿಕ ಮುಂತಾದವರು ಆ ಕದ್ರೂತನಯರಲ್ಲಿ ಪ್ರಮುಖರಾಗಿದ್ದರು. ಈ ನಾಗಸಂತತಿಯಿಂದ ಜಗತ್ತೆಲ್ಲವೂ ತುಂಬಿ ಹೋಯಿತು.

ಇವರೆಲ್ಲರೂ ಕ್ರೂರರೂ, ವಂಚಕರೂ ಆಗಿದ್ದರು. ಅವರು ಮಾಡುವ ಕೆಲಸವೆಲ್ಲವೂ ಅತ್ಯಂತ ಕುತ್ಸಿತವಾಗಿದ್ದವು. ಅವರ ನಾಲಿಗೆಯ ತುದಿಯಲ್ಲಿ ಘೋರವಾದ ಹಾಲಾಹಲ ವಿಷವು ತುಳುಕುತ್ತಿತ್ತು. ಮನುಷ್ಯರನ್ನು ಕಂಡಲ್ಲೆಲ್ಲ ಅವು ಬಾಯಿಂದ ಕಚ್ಚಿ, ಹಲ್ಲು ಚುಚ್ಚಿ, ಕೊಂದು ಸುಟ್ಟು ಬೂದಿ ಮಾಡುತ್ತಿದ್ದವು. ಹೀಗಾಗಿ ಈ ನಾಗ ಕುಲದಿಂದ ಪ್ರತಿದಿನವೂ ಬಹುದೊಡ್ಡ ಪ್ರಮಾಣದ ಸಾವು ನೋವುಗಳು ಉಂಟಾಗತೊಡಗಿದವು. ಹೀಗೆ ಎಲ್ಲ ಕಡೆಗೆ ಸಾವು ನೋವುಗಳು ವಿಪುಲವಾಗಿ ಆಗ ನಾಗ ಸಂತತಿಯಿಂದ ಜಗತ್ತಿಗೆ ಒದಗತೊಡಗಿದವು. ಎಲ್ಲಕಡೆಗೂ ಕ್ಷಯದ ಅಪಾಯವು ತಲೆದೋರಿ ಪ್ರಪಂಚವನ್ನೇ ಕಬಳಿಸತೊಡಗಿದವು. ಆಗ ಎಲ್ಲ ಪ್ರಜೆಗಳೂ ಬ್ರಹ್ಮದೇವರಿಗೆ ಶರಣು ಹೋಗಿ ಪ್ರಾರ್ಥಿಸಿಗೊಂಡರು. ''ಭಗವನ್, ಈ ಹಾವುಗಳ ಹಲ್ಲುಗಳಿಂದ ನಮ್ಮನ್ನು ರಕ್ಷಿಸು. ಈ ಭೀಕರವಾದ ಸರ್ಪಗಳು ನೋಡಿದ ಮಾತ್ರದಿಂದಲೇ ಜೀವಿಗಳ ಪ್ರಾಣವು ಹಾರಿ ಹೋಗುವದು. ಕಚ್ಚಿದರಂತೂ ಕಿಚ್ಚಿನಲ್ಲಿ ಬೇಯಿಸಿ ತೆಗೆದಂತೆ ಸುಟ್ಟು ಹೋಗುವದು. ನೀವು ಮಾಡಿದ ಸೃಷ್ಟಿಯೆಲ್ಲವೂ ಈ ದುಷ್ಟ ಪನ್ನಗಗಳಿಂದ ನಷ್ಟವಾಗಿ ಹೋಗುವದು. ಬ್ರಹ್ಮನ್, ಇದಕ್ಕೇನೂ ಉಪಾಯವಿಲ್ಲವೇ ? ಹಾವುಗಳ ಈ ದುರ್ವ್ಯಾಪಾರವನ್ನು ತಿಳಿದು ನೀವು ಯೋಗ್ಯವಾದದ್ದನ್ನು ಮಾಡಿರಿ.''

**ಬ್ರಹ್ಮ :-** ಪ್ರಜೆಗಳೇ, ನಾನು ನಿಮ್ಮನ್ನು ಖಚಿತವಾಗಿಯೂ ರಕ್ಷಣ ಮಾಡುತ್ತೇನೆ. ಆ ವಿಷಯದಲ್ಲಿ ನಿಮಗೆ ಸಂಶಯ ಬೇಡ. ನೀವು ನಿಮ್ಮ ನಿಮ್ಮ ಸ್ಥಾನಗಳಿಗೆ ಹೋಗಿರಿ.'' ಬ್ರಹ್ಮದೇವರು ಇಂತು ಅಶ್ವಾಸನೆಯನ್ನು ಕೊಟ್ಟ ಬಳಿಕ ಎಲ್ಲ ಪ್ರಜೆಗಳು ತಮ್ಮ ತಮ್ಮ ಸ್ಥಾನಗಳಿಗೆ ನಡೆದರು. ಅನಂತರ ಬ್ರಹ್ಮದೇವರು ಕುಪಿತರಾಗಿ ವಾಸುಕಿಯೇ ಮೊದಲಾದ ನಾಗಧುರೀಣರನ್ನು ಕರೆಯಿಸಿ ಸಿಟ್ಟಿನಿಂದ ಶಾಪವಿತ್ತರು. ''ನೀವು ಪ್ರತಿನಿತ್ಯವೂ ನಾನು ನಿರ್ಮಿಸಿದ ಮಾನವರನ್ನು ಕಚ್ಚುತ್ತೀರಿ. ಬೇರೆ ಪ್ರಾಣಿಗಳನ್ನೂ ಕೊಲ್ಲುತ್ತೀರಿ. ಮಾನವ ಕುಟುಂಬಕ್ಕೆ ನಿಮ್ಮಿಂದ ಘೋರ ಗಂಡಾಂತರವು ಒದಗುತ್ತಲಿದೆ. ಈ ಅಪರಾಧಕ್ಕಾಗಿ ನಿಮಗೆ ಸ್ವಾಯಂಭುವ ಮನ್ವಂತರದಲ್ಲಿ ತಾಯಿಯಿಂದ ಭೀಕರವಾದ ಕಗ್ಗೊಲೆಯು

ಜರಗುವದು.'' ಈ ಬ್ರಹ್ಮದೇವರ ಶಾಪವನ್ನು ಕೇಳಿ ಹಾವುಗಳೆಲ್ಲ ನಡುಗುತ್ತ ಅವರ ಪಾದಗಳ ಮೇಲೆ ಬಿದ್ದವು. ದೈನ್ಯದಿಂದ ಅಂಗಲಾಚಿ ಬೇಡಿಕೊಂಡವು. ''ದೇವ ದೇವಾ, ನಮ್ಮ ಈ ಹಾವಿನ ಜಾತಿಯನ್ನು ಇಷ್ಟು ನೀಚವನ್ನಾಗಿ ಮಾಡಿದವನು ನೀನೇ ಅಲ್ಲವೇ! ನಮಗೆ ವಿಷದ ನಾಲಿಗೆಯನ್ನು ಕೊಟ್ಟವನು ನೀನು. ನಮ್ಮ ಕಣ್ಣಿನಲ್ಲಿ ದಾಹಕ ಶಕ್ತಿಯನ್ನು ಇಟ್ಟವನು ನೀನು. ನಮ್ಮ ಹಲ್ಲುಗಳಲ್ಲಿ ನಂಜಿನ ಹನಿಯನ್ನು ಬಿಟ್ಟವನು ನೀನು. ಇದರಲ್ಲಿ ನಮ್ಮದೇನು ತಪ್ಪಿದೆ! ನಮ್ಮ ಕ್ರೌರ್ಯದುಷ್ಟತೆಯನ್ನು ನಿನಗೆ ಬೇಡವಾಗಿದ್ದರೆ ನೀನು ಕಡಿಮೆ ಮಾಡು. ನಮ್ಮನ್ನು ಶಾಂತಸಾತ್ವಿಕರನ್ನಾಗಿ ಇರಿಸು.''

**ಬ್ರಹ್ಮ :-** ''ನಿಮ್ಮನ್ನು ನಾನು ಹುಟ್ಟಿಸಿದ ಮಾತ್ರಕ್ಕೆ ಕಂಡವರನ್ನೆಲ್ಲ ಕೊಂದು ಹಾಕು ಎಂದು ಹೇಳಿದೆನೇ! ಪ್ರಾಣಿಗಳನ್ನೆಲ್ಲ ತಿಂದು ಹಾಕಿ ಎಂದು ಅಜ್ಞಾಪಿಸಿದೆನೇ! ಮನುಷ್ಯರನ್ನು ನೋಡಿದಲ್ಲೆಲ್ಲ ಕಚ್ಚಿ ಕೊಲ್ಲಲಿಕ್ಕೆ ನಾನು ನಿಮಗೆ ಹೇಳಿರಲಿಲ್ಲ! ಅಂದ ಬಳಿಕ ನೀವು ಮನುಷ್ಯರನ್ನು ಅದೇಕೆ ಅಂಥ ಹುಚ್ಚು ರೊಚ್ಚುಗಳಿಂದ ಕಚ್ಚಿ ಕೊಲ್ಲುವಿರಿ?

**ನಾಗಗಳು :-** ದೇವ ಕುಲದ ದೊರೆಯೇ, ಹಾಗಿದ್ದರೆ ನಮಗೆ ಇರಲು ಬೇರೆ ಸ್ಥಾನವನ್ನೇ ಕೊಡಿರಿ. ನಮಗೂ ಮಾನವರಿಗೂ ಸ್ಥಾನ, ಮಾನ, ಗುರಿ, ಗುರುತು, ನಡೆ, ಎಡೆ ಮುಂತಾದವುಗಳೆಲ್ಲ ಪ್ರತ್ಯೇಕವಾಗಿಯೇ ಇರುವಂತೆ ತಾವು ವ್ಯವಸ್ಥೆ ಮಾಡಿರಿ.

**ಬ್ರಹ್ಮ :-** ಎಲೋ ನಾಗ ನಾಯಕರೇ, ಮಾನವರ ಹಾಗೂ ನಾಗ ಕುಲದವರ ಅನುಸರಣೆಗಾಗಿ ಕೆಲವೊಂದು ನಿಯಮಗಳನ್ನು ನಾನು ಮಾಡುತ್ತೇನೆ. ನೀವು ಅವುಗಳನ್ನು ಪಾಲನ ಮಾಡಬೇಕು. ನನ್ನ ಈ ನಿಯಮ ನಿರ್ದೇಶನಗಳನ್ನು ಕೇಳಿ-

''ನಾಗ ಧುರೀಣರೇ, ನಿಮಗೆ ಸ್ವತಂತ್ರವಾಗಿ ವಾಸಮಾಡಲು ಪಾತಾಲ, ವಿತಲ, ಸುತಲ ಎಂಬ ಮೂರು ಸ್ಥಾನಗಳನ್ನು ಕೊಟ್ಟಿದ್ದೇನೆ. ನೀವು ಅಲ್ಲಿಯೇ ವಾಸ ಮಾಡಿರಿ. ನನ್ನ ಆಜ್ಞೆಯ ಪ್ರಕಾರ ನಿಮಗೆ ಅಲ್ಲಿ ಬಗೆಬಗೆಯ ಭೋಗ ವಿಲಾಸಗಳು ಲಭ್ಯವಾಗುವವು. ನನ್ನ ಏಳನೆಯ ರಾತ್ರಿಯು ಕಳೆಯುವವರೆಗೆ ನೀವು ಸುಖವಾಗಿ ಈ ಕೆಳಲೋಕಗಳಲ್ಲಿ ಇರುವಿರಿ. ಅನಂತರ ವೈವಸ್ವತ ಮನ್ವಂತರದಲ್ಲಿ ಕಶ್ಯಪ ಋಷಿಯ ಮಕ್ಕಳಾಗಿ ಜನಿಸುವಿರಿ. ಆಗ ಗರುಡನು ನಿಮಗೆ ಮಲ ಸೋದರನಾಗಿ ಜನಿಸಿ ನಿಮ್ಮ ಸಂತತಿಯನ್ನು ಭಕ್ಷಣ ಮಾಡುವನು. ಆದರೆ ಅವನು ನಿಮ್ಮೆಲ್ಲರನ್ನೂ ತಿನ್ನುವುದಿಲ್ಲ. ಆದರೆ ಅತ್ಯಂತ ಕ್ರೂರರು ಉನ್ಮತ್ತರು ಆದ ಹಾವುಗಳಿಗೆ ಮಾತ್ರ ಆಗ ಸಾವು ತಪ್ಪಿದ್ದಲ್ಲ. ನೀವು ಭೂಮಂಡಲದಲ್ಲಿ ಸಾವು ಸಮೀಪಿಸಿದವರನ್ನಾಗಲಿ, ಉಪಕಾರ ಮಾಡಿದವರಿಗೆ ಅಪಕಾರ ಮಾಡಿದ ಪಾಪಿ ಜನರನ್ನಾಗಲಿ ಕಚ್ಚಿದರೆ ನಿಮಗೆ ದೋಷವಿಲ್ಲ. ಹಾವಿನ ವಿಷವನ್ನು ಇಳಿಸುವ ಮಣಿ, ಮಂತ್ರ, ಔಷಧ ಹಾವುಗಾರ ಮತ್ತು ಗರುಡ ಮಂಡಲ ಬಂಧನಗಳಿಗೂ ಮತ್ತು ಚಿಕಿತ್ಸಕರಿಗೂ ನೀವು ಹೆದರಿ ನಡೆಯಬೇಕು: ಇಲ್ಲದಿದ್ದರೆ ನೀವೆಲ್ಲರೂ ಹಾಳಾಗಿ ಹೋಗುವಿರಿ.'' ಬ್ರಹ್ಮದೇವರ ಈ ಮಾತನ್ನು ಕೇಳಿ ನಾಗಕುಲದವರೆಲ್ಲರೂ ಪಾತಾಳಲೋಕಕ್ಕೆ ಹೊರಟು ಹೋದರು. ಹೀಗೆ ಬ್ರಹ್ಮದೇವರಿಂದ ಶಾಪವನ್ನೂ ವರವನ್ನೂ ಪಡೆದು ಸಂತಸಗೊಂಡ ಆ ಹಾವುಗಳೆಲ್ಲವೂ ಪಾತಾಳ ಲೋಕದಲ್ಲಿ ವಾಸ ಮಾಡಿದವು.

ಇದೆಲ್ಲ ಸರ್ಪವೃತ್ತಾಂತವು ಪಂಚಮಿಯ ದಿನವೇ ಆದುದರಿಂದ ಇದಕ್ಕೆ ನಾಗಪಂಚಮಿ ಎಂದು ಹೆಸರಾಯಿತು. ಈ ನಾಗಪಂಚಮೀ ತಿಥಿಯು ಸರ್ವಪಾಪ ಪರಿಹಾರಕ ವಾಗಿದೆ. ಆದುದರಿಂದ ಪ್ರತಿ ತಿಂಗಳ ಶುದ್ಧ ಪಂಚಮಿಯ ದಿನ ಹಾವುಗಳಿಗೆ ಹಾಲನ್ನು ಎರೆದು, ಹಾಲಿನಿಂದಲೇ ಅಭಿಷೇಕ ಮಾಡಿ, ಹುಳಿಯನ್ನು ತಿನ್ನದಿರುವವರಿಗೆ ಆ ಹಾವುಗಳು ಏನೂ ಅಪಾಯವನ್ನು ಮಾಡದೆ ಅವರ ಜೊತೆಗೆ ಮೈತ್ರೀಸ್ನೇಹದಿಂದ ಇರುತ್ತವೆ.

*ವರಾಹ ಪುರಾಣದಲ್ಲಿ ಇಪ್ಪತ್ನಾಲ್ಕನೇಯ ಅಧ್ಯಾಯ ಮುಗಿದುದು.*



## ಸ್ಕಂದನ ಉತ್ಪತ್ತಿ

**ಅಧ್ಯಾಯ - ೨೫**

**ಪ್ರಜಾಪಾಲ :-** ಮುನಿಶ್ರೇಷ್ಠಾ, ಅಹಂಕಾರತತ್ವದಿಂದ ಆರು ಮೊಗದ ಸ್ಕಂದನು ಹೇಗೆ ಉತ್ಪನ್ನನಾದನು ? ಈ ನನ್ನ ಸಂದೇಹವನ್ನು ಹೋಗಲಾಡಿಸು.

**ಮಹಾತಪ :-** ಎಲ್ಲ ತತ್ವಗಳಲ್ಲಿ ಮುಖ್ಯವಾದ ಪರತತ್ವ ಎಂದರೆ ಪರಮಾತ್ಮನೇ ಸರಿ. ಆ ಪರಪುರುಷನಿಂದ ಅವ್ಯಕ್ತ ತತ್ವವು ಕಾರ್ಯೋನ್ಮುಖವಾಯಿತು. ಈ ಪ್ರಕೃತಿ ಪುರುಷರ ಸಮರಸದಿಂದ ಮೂರು ಬಗೆಯಾದ ಅಹಂಕಾರ ತತ್ವವು ರೂಪುಗೊಂಡಿತು. ಸೃಷ್ಟಿಕಾರಣನಾದ ಪರಪುರುಷನಿಗೆ ವಿಷ್ಣು ಅಥವಾ ಶಿವ ಎಂದು ಕರೆಯುವರು. ಅವ್ಯಕ್ತ ತತ್ವಕ್ಕೆ ಶ್ರೀದೇವಿಯೇ ಅಭಿಮಾನಿನಿ ಆದುದರಿಂದ ಅವಳೂ ಅವ್ಯಕ್ತಳೆಂದೇ ಕರೆಯಲ್ಪಡುವಳು. ಅವಳಿಗೆ ಉಮಾದೇವಿ ಎಂದೂ ಹೆಸರು. ಈ ಪುರುಷ ಮತ್ತು ಅವ್ಯಕ್ತ ಸಂಯೋಗದಿಂದ ಅಹಂಕಾರವು ಉತ್ಪನ್ನವಾಗುವುದು. ಆ ಅಹಂಕಾರವೇ ದೇವತೆಗಳ ಸೇನಾಪತಿಯಾದ ಗುಹ, ಷಣ್ಮುಖ ಅಥವಾ ಸ್ಕಂದ ಎಂದು ಕರೆಯಿಸಿಕೊಳ್ಳುವ ಆ ಷಣ್ಮುಖನ ಉತ್ಪತ್ತಿಯನ್ನು ಹೇಳುತ್ತೇನೆ ಕೇಳು -

''ಎಲ್ಲದಕ್ಕೂ ಅಧಿಭೂತನಾದ ದೇವದೇವನೆಂದರೆ ಭಗವಾನ್ ಶ್ರೀಮಾನ್ ನಾರಾಯಣನು. ಆ ನಾರಾಯಣದೇವನಿಂದ ಬ್ರಹ್ಮದೇವನು ಉತ್ಪನ್ನನಾದನು. ಬ್ರಹ್ಮದೇವನಿಂದ ಮರೀಚಿ ಮುಂತಾದ ಮುನಿಗಳು ಸೂರ್ಯ ಮುಂತಾದ ದೇವತೆಗಳೂ ಸಂಭೂತರಾದರು. ಅಲ್ಲಿಂದ ಮುಂದೆ ಸುರ, ಅಸುರ, ಗಂಧರ್ವ, ನಾಗ, ದಾನವ, ಮಾನವ, ಪಶುಪಕ್ಷಿ ಹಾಗೂ ಉಳಿದ ಎಲ್ಲ ಸರ್ವ ಪ್ರಾಣಿಗಳೂ ಉತ್ಪನ್ನವಾದವು. ಇದಕ್ಕೆ ಸೃಷ್ಟಿ ಎಂದು ಹೆಸರು. ಈ ಸೃಷ್ಟಿಯು ಹಬ್ಬುತ್ತ ಉಬ್ಬುತ್ತ ಹೋದಂತೆ ಮಹಾಬಲಿಷ್ಠರಾದ ದೇವದೈತ್ಯರು ಸಾಮಾನ್ಯ ಪ್ರಾಣಿಗಳಂತೆ ಗೆಲ್ಲುವ ಹಂಬಲವನ್ನು ಕೊಲ್ಲುವ ಹವ್ಯಾಸವನ್ನು ಹೊತ್ತು ಹಣಾಹಣಿ ಹೋರಾಡ ತೊಡಗಿದರು.

ದೈತ್ಯರ ಸೈನ್ಯದಲ್ಲಿ ಮೊದಲು ಹಿರಣ್ಯಾಕ್ಷ, ಹಿರಣ್ಯಕಶಿಪು, ವಿಪ್ರಚಿತ್ತಿ, ಭೀಮಾಕ್ಷ, ಕ್ರೌಂಚ ಮುಂತಾದ ಮಹಾಬಲಿಷ್ಠರಾದ ಸೇನಾಪತಿಗಳು ಇದ್ದರು. ಅವರು ತಮ್ಮ ತೀಕ್ಷ್ಣವಾದ ಶಸ್ತ್ರಾಸ್ತ್ರಗಳಿಂದ ದೇವತೆಗಳ ಸೈನ್ಯವನ್ನು ಹೊಡೆದು ಹಿಮ್ಮೆಟ್ಟಿಸುತ್ತಿದ್ದರು. ಇಂಥ ಚಂಡವಿಕ್ರಮರಾದ ಪ್ರಚಂಡ ರಾಕ್ಷಸರು ತಮ್ಮ ಹರಿತ ಬಾಣಗಳಿಂದ

ದೇವತೆಗಳನ್ನು ಅನುದಿನವೂ ಸದೆಬಡಿದು ಸೋಲಿಸಿ ಓಡಿಸಿ ಬಿಡುವದನ್ನು ನೋಡಿ ಬೃಹಸ್ಪತ್ಯಾಚಾರ್ಯರಿಗೆ ಬಹಳ ಕೆಡುಕು ಎನಿಸಿತು. ಸೋತು ನಿರ್ವಿಣ್ಣರಾಗಿ ನಿಂತ ಆ ದೇವ ಕುಲದ ಧುರೀಣರನ್ನು ಕಂಡು ಅವರು ನುಡಿದರು -

''ಸುರಪುಂಗವರೇ, ನಾಯಕನಿಲ್ಲದ ಸೇನೆಯು ದೀನವಾಗುವುದು. ಬಲಹೀನವು ಆಗುವುದು. ದೇವೇಂದ್ರನೊಬ್ಬನಿಗೇ ಆ ದೇವತಾ ಸೈನ್ಯವನ್ನೆಲ್ಲವೂ ರಕ್ಷಿಸಲಿಕ್ಕೆ ಆಗುವುದಿಲ್ಲ. ಆದುದರಿಂದ ವಿಲಂಬ ಮಾಡದೇ ಒಬ್ಬ ಸಮರ್ಥ ಸೇನಾಪತಿಯನ್ನು ಹುಡುಕಿರಿ. ಸುರಾಚಾರ್ಯರ ಈ ಸ್ಪಷ್ಟೋಕ್ತಿಯನ್ನು ಕೇಳಿ ದೇವತೆಗಳೆಲ್ಲರೂ ಬ್ರಹ್ಮದೇವರ ಕಡೆಗೆ ನಡೆದರು. ''ನಮಗೊಬ್ಬ ಸೇನಾಪತಿಯನ್ನು ಕರುಣಿಸಬೇಕು'' ಎಂದು ಸಂಭ್ರಾಂತರಾಗಿ ಕೇಳಿಕೊಂಡರು. ಅವರ ಈ ಮಾತನ್ನು ಕೇಳಿ ''ಇವರಿಗೆ ನಾನು ಯಾವ ಹೊಸ ಸೇನಾಪತಿಯನ್ನು ಹುಟ್ಟಿಸಿ ಕೊಡಲಿ!'' ಎಂದು ಬ್ರಹ್ಮನಿಗೆ ತುಸು ಚಿಂತೆಯಾದಂತಾಯಿತು. ಕೂಡಲೇ ಆ ಬ್ರಹ್ಮದೇವನಿಗೆ ತನ್ನ ಮಗನಾದ ರುದ್ರನ ನೆನಪಾಯಿತು. ಅನಂತರ ಎಲ್ಲ ಗಂಧರ್ವರೂ, ದೇವತೆಗಳೂ, ಋಷಿಗಳೂ, ಸಿದ್ಧ ಚಾರಣರೂ ಬ್ರಹ್ಮದೇವರನ್ನು ಮುಂದೆ ಮಾಡಿಕೊಂಡು ಕೈಲಾಸ ಪರ್ವತಕ್ಕೆ ನಡೆದರು. ಅಲ್ಲಿ ಮಹಾದೇವನಾದ ಪ್ರಭು ಪರಮೇಶ್ವರನನ್ನು ಕಂಡು ಭಕ್ತಿಯಿಂದ ನಮಸ್ಕಾರ ಮಾಡಿ ಸ್ತೋತ್ರ ಮಾಡತೊಡಗಿದರು.

ದೇವಾ ಊಚುಃ

**ನಮಾಮ ಸರ್ವೇ ಶರಣಾರ್ಥಿನೋ ವಯಂ**
**ಮಹೇಶ್ವರಂ ತ್ರ್ಯಂಬಕ ಭೂತ ಭಾವನಂ ॥**
**ಉಮಾಪತೇ ವಿಶ್ವಪತೇ ಮರುತ್ಪತೇ**
**ಜಗತ್ಪತೇ ಶಂಕರ ಪಾಹಿ ನಃ ಸ್ವಯಂ ॥**

ಭಗವಾನ್ ಪರಮೇಶ್ವರ, ಉಮಾಪತಿಯಾದ ನಿನಗೆ ನಾವು ಶರಣು ಬಂದಿದ್ದೇವೆ. ಮೂರು ಕಣ್ಣುಳ್ಳವನೂ, ಜಗದೊಡೆಯನೂ ಸರ್ವಪ್ರಾಣಿಗಳ ರಕ್ಷಿಸುವವನೂ, ಆದ ನೀನು ನಮ್ಮನ್ನು ಪಾಲಿಸು.

**ಜಟಾ ಕಲಾಪಾಗ್ರ ಶಶಾಂಕ ದೀಧಿತಿ-**
**ಪ್ರಕಾಶಿತಾಽಶೇಷ ಜಗತ್ರಯಾಮಲ ॥**
**ತ್ರಿಶೂಲ ಪಾಣೇ ಪುರುಷೋತ್ತಮಾಮೃತ**
**ತ್ವಂ ಪಾಹಿ ನೋ ದೈತ್ಯ ಭಯಾದುಪಸ್ಥಿತಾತ್ ॥**

ನಿನ್ನ ಜಡೆ ಮುಡಿಯ ಮೌಲಿಯಲ್ಲಿ ಮಿಂಚುವ ಚಂದ್ರಮನ ಕಾಂತಿ ಕಿರಣಗಳಿಂದ ಮೂರು ಲೋಕಗಳೂ ಬೆಳಗಿವೆ. ತ್ರಿಶೂಲವನ್ನು ಕೈಯಲ್ಲಿ ಪಿಡಿದ ನರೋತ್ತಮ, ನಮಗೆ ಒದಗಿದ ಈ ದೈತ್ಯ ಭಯದಿಂದ ನಮ್ಮನ್ನೀಗ ನೀನೇ ಪಾರುಗಾಣಿಸು.

**ಕಪಾಲ ಮಾಲಿನ್ ಶಶಿಖಂಡ ಶೇಖರ**
**ಸ್ಮಶಾನವಾಸಿನ್ ಸಿತಭಸ್ಮಗುಂಠಿತ ॥**

ಫಣೇಂದ್ರ ಸಂವೀತ ತನೋಽಂತಕಾಂತಕ ॥
ತ್ವಂ ಪಾಹಿ ನೋ ದಕ್ಷಧಿಯಾ ಸುರೇಶ್ವರ ॥

ತಲೆಯ ಮೇಲೆ ಮರಿಚಂದ್ರ, ಕೊರಳಲ್ಲಿ ರುಂಡಮಾಲೆ, ಮೈತುಂಬ ಬಳಿದ ಬೂದಿ, ಸುಡುಗಾಡಿನ ನಿತ್ಯ ನಿವಾಸ, ಹಾವಿನ ಹಾರಗಳಿಂದ ಹೊಳೆ ಹೊಳೆಯುವ ಸುರ ಸಾರ್ವಭೌಮ, ಮೃತ್ಯುವನ್ನು ಮೀರಿ ಮೆಟ್ಟಿ ನಿಂತ ನೀನು ನಮ್ಮನ್ನು ಸಲಹು.

ಅಗ್ನಿಸ್ವರೂಪಪೋಽಸಿ ತರೌ ತಥೋಽಪಲೇ
ಸತ್ಯಸ್ವರೂಪೋಽಸಿ ತಥಾ ತಿಲೇಷ್ವಪಿ ॥
ತೈಲಸ್ವರೂಪೋ ಭಗವಾನ್ ಮಹೇಶ್ವರಃ
ತ್ವಂ ಪಾಹಿ ನೋ ದೈತ್ಯಗಣಾರ್ದಿತಾನ್ ಹರ ॥

ಮರಗಳಲ್ಲಿ ಬೆಂಕಿಯಾಗಿ, ಎಳ್ಳಿನಲ್ಲಿ ಎಣ್ಣೆಯಾಗಿ, ಕಾಡು ಕಲ್ಲುಗಳಲ್ಲಿ ನಿಜರೂಪದಿಂದ ನೆಲೆಸಿದ ಭಗವನ್ ಮಹೇಶ್ವರ, ದಾನವರ ಕಾಟದಿಂದ ಬಳಲಿದ ನಮ್ಮನ್ನು ಕಾಪಾಡು.

ಭವಂತಮೇತೇ ಸುರನಾಯಕಾಃ ಪ್ರಭೋಽ
ಭವಾರ್ಥಿನೋಽನ್ಯಸ್ಯ ವದಂತಿ ತೋಷಕಂ ॥
ಯತಸ್ತತೋ ನೋ ಭವ - ಭೂತಿ - ಭೂಷಣ
ತ್ವಂ ಪಾಹಿ ವಿಘ್ನೇಶ್ವರ ರುದ್ರ ತೇ ನಮಃ ॥

''ಮೈಗೆಲ್ಲ ಬೂದಿ ಲೇಪಿಸಿಗೊಂಡ ಪ್ರಭೋ ಪರಮೇಶ್ವರ, ನಾವೆಲ್ಲ ದೇವಕುಲದ ಮುಂದಾಳುಗಳು ನಿನ್ನನ್ನು ದೈನ್ಯದಿಂದ ಬೇಡಿಕೊಳ್ಳುತ್ತಿದ್ದೇವೆ. ಹೆರವರನ್ನು ಸಂತೋಷಪಡಿಸುವುದೇ ನಿನ್ನ ಸ್ವಭಾವವೆಂದು ಹೇಳುತ್ತಾರೆ. ಆದುದರಿಂದ ಜಗದೊಡೆಯನಾದ ರುದ್ರದೇವಾ, ನಮ್ಮನ್ನು ನೀನು ಸಂರಕ್ಷಿಸು.'' ದೇವತೆಗಳ ಈ ಪ್ರಾರ್ಥನೆಯನ್ನು ಕೇಳಿ ಸಂತುಷ್ಟನಾದ ಮಹಾದೇವರು ಆ ಸುರಪುರದ ನಾಗರಿಕರನ್ನು ಕುರಿತು ''ನಿಮಗೆ ನನ್ನಿಂದ ಏನಾಗಬೇಕಾಗಿದೆ ? ನಿಮಗೆ ಈಗ ಬಂದಿರುವ ತೊಂದರೆ ಏನು ? ಕೂಡಲೇ ತಿಳಿಸಿರಿ'' ಎಂದು ಕೇಳಿದನು.

ಅದಕ್ಕೆ ದೇವತೆಗಳು ದೀನರಾಗಿ ನುಡಿದರು - ''ದೇವತೆಗಳ ಈಶನೇ ! ದೈತ್ಯರ ಸಂಹಾರಕ್ಕಾಗಿ ನಮಗೊಬ್ಬ ಸೇನಾಪತಿಯನ್ನು ಕರುಣಿಸು. ಬ್ರಹ್ಮಾದಿ ದೇವತೆಗಳ ಅಭಿಪ್ರಾಯವೂ ಇದೇ ಆಗಿರುತ್ತದೆ. ನೀನಿತ್ತ ಸೇನಾಪತಿಯಿಂದ ಎಲ್ಲರಿಗೂ ಕ್ಷೇಮ ಉಂಟಾಗುವುದು.'' ದೇವತೆಗಳು ಈ ಪ್ರಾರ್ಥನೆಯನ್ನು ಕೇಳಿ ಮಹಾದೇವನು ಅವರಿಗೆ ಅಭಯದ ಆಶ್ವಾಸನೆಯನ್ನು ನೀಡುತ್ತ ನುಡಿದನು - ''ದೇವತೆಗಳೇ, ನಿಮಗೆ ಇನ್ನು ಚಿಂತೆ ಬೇಡ. ಮನಸ್ಸಿನಲ್ಲಿಯ ಸಂತಾಪವನ್ನು ಕಳೆದು ಶಾಂತರಾಗಿರಿ. ನಿಮಗೆ ಒಬ್ಬ ಒಳ್ಳೇ ಸೇನಾಪತಿಯನ್ನು ಕೊಡುತ್ತೇನೆ. ಎಲ್ಲ ನಾಗರಿಕರಿಗೂ, ಪ್ರಜರಿಗೂ ಭವ್ಯ ಭವಿಷ್ಯವು ಕಾದಿದೆ. ಜಪ, ತಪಸ್ಸು, ಯೋಗ, ಭಕ್ತಿ, ಸತ್ಕರ್ಮಾನುಷ್ಠಾನಗಳಿಗೆ ಉತ್ಕರ್ಷದ ಕಾಲವು ಬರಲಿದೆ. '' ಈ ರೀತಿಯಾಗಿ ಆತುರರಾಗಿ ಬಂದ ದೇವತೆಗಳನ್ನು ಸಂತೈಸಿ ಪ್ರೀತಿಯಿಂದ ಅವರನ್ನೆಲ್ಲ ಪರಮೇಶ್ವರನು ಬೀಳ್ಕೊಟ್ಟನು.

ಆನಂತರ ಮಹಾದೇವರು ಪುತ್ರನನ್ನು ಪಡೆಯಲಿಕ್ಕಾಗಿ ತನ್ನ ದೇಹದಲ್ಲಿಯೇ ಇದ್ದ ಶಕ್ತಿಯನ್ನು ಸಂಚಲನ ಮಾಡಿದನು. ಆ ಶಕ್ತಿಯ ಕ್ಷೋಭದಿಂದ ಅಗ್ನಿ ಆದಿತ್ಯರಿಗೆ ಸಮಾನವಾದ ತೇಜಸ್ಸುಳ್ಳ ಕುಮಾರನು ಜ್ಞಾನಶಕ್ತಿಯಿಂದ ಒಡಗೂಡಿ ಉತ್ಪನ್ನನಾದನು. ಅವನ ಉತ್ಪತ್ತಿಯು ಹಲವು ಬಗೆಯಿಂದಾಗಿ ಅನೇಕ ಮನ್ವಂತರಗಳಲ್ಲಿ ಅವನು ದೇವತೆಗಳ ಸೇನಾಪತಿಯಾಗಿದ್ದನು. ರುದ್ರದೇವರ ಅಹಂಕಾರ ತತ್ವವೇ ದೇವತಾಕಾರ್ಯಕ್ಕಾಗಿ ಸೇನಾಪತಿ ರೂಪದಿಂದ ಉದ್ಭೂತವಾಯಿತು. ಸ್ಕಂದನ ಉತ್ಪತ್ತಿಯು ಆದ ನಂತರ ಬ್ರಹ್ಮದೇವರು ಶಿವನನ್ನು ಗೌರವಿಸಿದರು. ಅದೇ ಉತ್ಪನ್ನನಾದ ಆ ಕುಮಾರನನ್ನು ದೇವತೆಗಳೂ, ಋಷಿಗಳೂ, ಸಿದ್ಧರೂ ಮಹಾದೇವರೂ ವರವನ್ನು ಕೊಟ್ಟು ಸಂತೋಷ ಪಡಿಸಿದರು. ಆಗ ಆ ಶಿವಕುಮಾರನು ದೇವತೆಗಳನ್ನು ಕುರಿತು, ''ನನಗೆ ಆಟವಾಡಲು ಆಟಿಗೆಯ ವಸ್ತುವನ್ನು ಮತ್ತು ಆಡಲು ಜೋಡಿ ಗೆಳೆಯರನ್ನು ಕೊಡಬೇಕು'' ಎಂದು ಕೇಳಿ ಕೊಂಡನು. ಅವನ ಮಾತನ್ನು ಕೇಳಿ ಮಹಾದೇವನು ಪ್ರೇಮದಿಂದ ಆ ಮುದ್ದುಮಗನಿಗೆ ನುಡಿದನು - ''ಕುಮಾರ, ನಿನಗೆ ಆಡಲಿಕ್ಕೆ ಒಂದು ಕೋಳಿಯನ್ನು ಕೊಡುತ್ತೇನೆ. ಮತ್ತು ಶಾಖ, ವಿಶಾಖ ಎಂಬ ಇಬ್ಬರು ಸಂಗಡಿಗರನ್ನು ಕೊಡುತ್ತೇನೆ. ಇಂದಿನಿಂದ ಭೂತಗ್ರಹಗಳಿಗೆಲ್ಲ ನೀನೇ ನಾಯಕ. ದೇವತೆಗಳ ಗುಂಪಿಗೆಲ್ಲ ನೀನೇ ಸೇನಾಪತಿ.'' ಹೀಗೆ ಹೇಳಿ ಮಹಾದೇವನೂ ಮತ್ತು ಎಲ್ಲ ದೇವತೆಗಳೂ ದೇವಸೇನಾ ಪತಿಯಾದ ಸ್ಕಂದನನ್ನು ಹೊಗಳಿದರು.

''ಭವ ತ್ವಂ ದೇವಸೇನಾನೀರ್ಮಹೇಶ್ವರಸುತ ಪ್ರಭೋ
ಷಣ್ಮುಖ ಸ್ಕಂದ ವಿಶ್ವೇಶ ಕುಕ್ಕಟಧ್ವಜ ಪಾವಕ ॥
ಕಂಪಿತಾರೇ ಕುಮಾರೇಶ ಸ್ಕಂದ ಬಾಲಗ್ರಹಾನುಗ
ಜಿತಾರೇ ಕ್ರೌಂಚವಿಧ್ವಂಸ ಕೃತ್ತಿಕಾಜ ಶಿವಾತ್ಮಜ ॥
ಭೂತಗ್ರಹ ಪತಿಶ್ರೇಷ್ಠ ಪಾಪಕಪ್ರಿಯದರ್ಶನ
ಮಹಾಭೂತಪತೇಃ ಪುತ್ರ ತ್ರಿಲೋಚನ ನಮೋಽಸ್ತುತೇ''॥

ಈ ರೀತಿಯಾಗಿ ದೇವತೆಗಳಿಂದ ಪ್ರಶಂಸಿಸಲ್ಪಟ್ಟ ಆ ಶಿವಕುಮಾರ ಸ್ಕಂದನು ಬೆಳೆಬೆಳೆದಂತೆ ಮಹಾ ಪರಾಕ್ರಮಿಯಾದನು. ಹನ್ನೆರಡು ಸೂರ್ಯರಿಗೆ ಸಮಾನವಾಗಿ ತೊಳಗುವ ತನ್ನ ಕಾಂತಿಪೂರದಿಂದ ಅವನೊಂದು ಅಸಹ್ಯ ತೇಜಃಪಿಂಡದಂತೆ ಉರಿಯತೊಡಗಿದನು. ಅವನ ತೇಜಸ್ಸಿನ ತೀಕ್ಷ್ಣತೆಗೆ ಮೂರು ಲೋಕವೇ ಬೇಯತೊಡಗಿತು.

**ಪ್ರಜಾಪಾಲ :-** ಈ ಸ್ಕಂದನು ಮಹಾದೇವರ ಮಗನಾಗಿದ್ದಾನೆ. ಆದರೆ ನೀವು ಆ ಸ್ಕಂದನನ್ನು ಕೃತ್ತಿಕಾಪುತ್ರ ಎಂದು ಬಣ್ಣಿಸಿದಿರಿ. ಅಗ್ನಿಕುಮಾರನೆಂದೂ ವರ್ಣಿಸಿದಿರಿ. ಹಾಗೂ ಆರು ತಾಯಂದರ ಮಗನೆಂದು ಅವನ ಪ್ರಸಿದ್ಧಿ ಇದೆ. ಇದು ಹೇಗೆ ? ತಿಳಿಸಬೇಕು. ಸ್ಕಂದನಿಗೆ ಪಾವಕಿ, ಕೃತ್ತಿಕಾಪುತ್ರ, ಷಣ್ಮುಖ ಮುಂತಾದ ಹೆಸರು ಬರಲು ಕಾರಣವೇನು ? ದಯವಿಟ್ಟು ತಿಳಿಸಿರಿ.

**ಮಹಾತಪ :-** ಇದನ್ನೆಲ್ಲ ನಾನು ನಿನಗೆ ಆದಿ ಮನ್ವಂತರ ಸಮಾಚಾರವನ್ನು ತಿಳಿಸಿದ್ದೇನೆ. ತ್ರಿಕಾಲ ಜ್ಞಾನಿಗಳಾದ ದೇವತೆಗಳು ಹಿಂದಾದುದನ್ನೂ ಮುಂದೆ

ಆಗುವದನ್ನೂ ಅರಿತು ಅದರಂತೆ ಸ್ಕಂದನನ್ನು ಸ್ತೋತ್ರ ಮಾಡಿದ್ದಾರೆ. ಆ ಷಣ್ಮುಖನಿಗೆ ಕೃತ್ತಿಕಾ ನಕ್ಷತ್ರದ ಅಭಿಮಾನಿ ದೇವತೆಯರಾದ ಆರು ಮಾತೆಯರೂ ಅಗ್ನಿಯೂ, ಪಾರ್ವತಿಯೂ ಎರಡನೇ ಜನ್ಮದಲ್ಲಿ ಉತ್ಪತ್ತಿಗೆ ಕಾರಣರಾಗಿದ್ದಾರೆ. ರಾಜನ್, ನೀನು ಪ್ರಶ್ನೆ ಮಾಡಿದ್ದರಿಂದ ಅಮೃತರೂಪವಾದ ಆತ್ಮವಿದ್ಯೆಯ ರಹಸ್ಯವನ್ನೂ ಅಹಂಕಾರ ತತ್ವದ ಉತ್ಪತ್ತಿಯನ್ನೂ ನಿನಗೆ ತಿಳಿಸಿದೆನು. ಸರ್ವ ಪಾಪಗಳನ್ನೂ ಪರಿಹರಿಸುವ ಈ ಷಣ್ಮುಖನಿಗೆ ಬ್ರಹ್ಮದೇವರು ಸ್ವರ್ಗದ ಸೇನಾಪತಿ ಪಟ್ಟದಲ್ಲಿ ಷಷ್ಠೀ ತಿಥಿಯಲ್ಲಿ ಅಭಿಷೇಕ ಮಾಡಿ ಆಶೀರ್ವದಿಸಿದ್ದಾರೆ. ಆದುದರಿಂದ ಪ್ರತಿ ಶುದ್ಧ ಷಷ್ಠಿಯ ದಿನ ಸ್ಕಂದನನ್ನು ಉಪವಾಸವಿದ್ದು ಪೂಜೆ ಮಾಡಿದರೆ ಮನೋರಥಗಳೆಲ್ಲವೂ ಸಿದ್ಧಿಸುವವು. ದರಿದ್ರನು ಐಶ್ವರ್ಯವನ್ನೂ ವಂಧ್ಯಾಪತಿ (ಬಂಜೆಯ ಗಂಡ)ಯೂ ಒಳ್ಳೆಯ ಮಗನನ್ನೂ ಪಡೆಯುವನು. ಇದನ್ನೆಲ್ಲ ಭಕ್ತಿಯಿಂದ ಅವನನ್ನು ಪೂಜಿಸುವವರ ಮನಸ್ಸಿನಲ್ಲಿಯ ಬಯಕೆಗಳೆಲ್ಲವೂ ಪೂರ್ಣಗೊಳ್ಳುವವು. ಈ ಷಣ್ಮುಖ ಸ್ತೋತ್ರವನ್ನು ಹೇಳುವವರ ಮನೆಯಲ್ಲಿ ಮಕ್ಕಳಿಗೆ ಆರೋಗ್ಯವೂ, ಕ್ಷೇಮವೂ ಲಭಿಸುವುದು.

*ವರಾಹ ಪುರಾಣದಲ್ಲಿ ಇಪ್ಪತ್ತೈದನೇ ಅಧ್ಯಾಯವು ಮುಗಿದುದು.*

—o—

## ಆದಿತ್ಯೋತ್ಪತ್ತಿ

**ಅಧ್ಯಾಯ - ೨೬**

**ಪ್ರಜಾಪಾಲ :-** ದ್ವಿಜವರ್ಯರೇ, ಜ್ಯೋತಿರೂಪನಾದ ಆದಿತ್ಯದೇವನಿಗೆ ಆಕಾರಗ್ರಹಣವು ಹೇಗಾಯಿತು ಹೇಳಬೇಕು. ನಿಮ್ಮ ಪಾದಕ್ಕೆ ಅಡ್ಡಬಿದ್ದ ನನ್ನ ಈ ಸಂದೇಹವನ್ನು ಹೋಗಲಾಡಿಸಬೇಕು.

**ಮಹಾತಪ :-** ಜ್ಞಾನಾನಂದ ರೂಪಿಯಾದ ಸನಾತನ ಪರಾಶಕ್ತಿ ಎನಿಸಿದ ಆ ಪರಮಾತ್ಮನು ಬಯಸಿದ ಕೂಡಲೇ ದಿವ್ಯವಾದ ತೇಜಸ್ಸು ಉದ್ಭೂತವಾಯಿತು. ಹೊಳೆಯುವ ಆ ಭಗವನ್ ಮೂರ್ತಿಗೆ ಸೂರ್ಯ ಎಂದೂ ಭಗವಾನ್ ಎಂದೂ ಹೆಸರು. ಆ ಸೂರ್ಯನಲ್ಲಿ ಮೂಲರೂಪಿಯಾದ ಆ ಶ್ರೀ ವಿಷ್ಣುವಿನ ತೇಜಸ್ಸು ಓತಪ್ರೋತವಾಗಿ ತುಂಬಿಕೊಂಡು ಮೂರು ಲೋಕಗಳನ್ನೆಲ್ಲ ಬೆಳಗುತ್ತದೆ. ಅದನ್ನು ಸುರ, ಸಿದ್ಧ, ಮಹಾಋಷಿಗಳೆಲ್ಲರೂ ಸ್ತುತಿಸುತ್ತಾರೆ. ಅದು ಸ್ವಯಂಭೂತವಾಗಿ ತನ್ನಷ್ಟಕ್ಕೆ ತಾನೇ ಹುಟ್ಟಿದ್ದರಿಂದ ಅದಕ್ಕೆ ಸೂರ್ಯ ಎಂದು ಹೆಸರು. ಸರ್ವತ್ರ ವ್ಯಾಪ್ತವಾದ ಆ ತೇಜಸ್ಸಿಗೆ ತಟ್ಟನೆ ದೇಹ ಉಂಟಾಯಿತು. ಶರೀರ ಉಳ್ಳ ಅದನ್ನು ವೇದ ವಾದಿಗಳು 'ರವಿ' ಎಂದು ಹೆಸರಿಟ್ಟು ಕರೆದರು. ಆಕಾಶದಲ್ಲಿ ಉದಿಸಿ ಸಮಸ್ತ ಪ್ರಪಂಚವನ್ನೇ ಬೆಳಗುವದರಿಂದ ಅವನಿಗೆ 'ಭಾಸ್ಕರ' ಎಂತಲೂ, ಬೆಳಕನ್ನು ಬೀರುವದರಿಂದ ಪ್ರಭಾಕರ ಎಂದೂ, 'ದಿವಾ' ಎಂದು ಹೆಸರಾದ ಹಗಲಿನ ಹುಟ್ಟಿಗೆ ಕಾರಣನಾದುದರಿಂದ 'ದಿವಾಕರ'ನೆಂತಲೂ ಎಲ್ಲ ಜಗತ್ತಿಗೆ ಕಾರಣನಾದುದರಿಂದ ಆದಿತ್ಯನೆಂದೂ ವೇದವಿದ್ವಾಂಸರು ಅವನನ್ನು ಕರೆದರು. ಈ ಆದಿತ್ಯನ ತೇಜಸ್ಸಿನಿಂದ ಹನ್ನೆರಡು ಜನ ಬೇರೆಬೇರೆ ಆದಿತ್ಯರು ಹುಟ್ಟಿದರು. ಅವರೆಲ್ಲರಿಗೂ ಮುಖ್ಯನಾಗಿ ಈ ಸೂರ್ಯದೇವನೇ ಎಲ್ಲೆಡೆಗೂ ಸುತ್ತುತ್ತ ಜಗತ್ತನೆಲ್ಲ

ಬೆಳಗುತ್ತಾನೆ. ಪ್ರಪಂಚವನ್ನೆಲ್ಲ ವ್ಯಾಪಿಸಿರುವ ಆ ಸಾಕ್ಷಾತ್ ಪರಮೇಶ್ವರನನ್ನು ನೋಡಿ ಅವನನ್ನು ಆಧರಿಸಿಕೊಂಡು ಇದ್ದ ದೇವತೆಗಳೆಲ್ಲ ಅವನನ್ನು ಸ್ತೋತ್ರಮಾಡಿದರು.

ದೇವಾ ಊಚುಃ

**ಭವಾನ್ ಪ್ರಸೂತಃ ಜಗತಃ ಪುರಾಣಃ**
**ಪ್ರಪಾಸಿ ವಿಶ್ವಂ ಪ್ರಲಯೇ ಚ ಹಂಸಿ ॥**

**ಸಮುತ್ಥಿತಸ್ತ್ವಂ ಸತತಂ ಪ್ರಯಾಸಿ**
**ವಿಶ್ವಂ ಸದಾ ತ್ವಾಂ ಪ್ರಣತಾಃ ಸ್ಮ ನಿತ್ಯಂ ॥**

ಭಗವನ್, ಪುರಾಣ ಪುರುಷನಾದ ನೀನು ಜಗತ್ತಿನ ನಿರ್ಮಾಪಕನಾಗಿರುವೆ. ವಿಶ್ವವನ್ನೆಲ್ಲ ರಕ್ಷಿಸುವವನು ನೀನೇ. ಅಂತ್ಯ ಕಾಲದಲ್ಲಿ ಈ ಪ್ರಪಂಚಕ್ಕೆಲ್ಲ ಅಳಿಗಾಲವನ್ನು ನೀನೆ ತರುವೆ. ನೀನು ಸರ್ವದಾ ಸಂಚರಿಸಿ ಎಲ್ಲ ಕಡೆಗೂ ಬೆಳಕು ಬೀರುವೆ. ಇಂಥ ನಿತ್ಯಾತ್ಮಕನಾದ ನಿನಗೆ ನಮ್ಮ ನಮಸ್ಕಾರ.

**ತೇಜೋಽರಿ ವಿಧ್ವಂಸಕ ವೇದಮೂರ್ತೇ**
**ಪ್ರಪಾಹಿ ಚಾಸ್ಮಾನ್ ಶರಣಾಗತಾನ್ ಸದಾ ॥**

**ವೇದಾಂತವೇದ್ಯೋಽಸಿ ಮಖೇಷು ದೇವ**
**ತ್ವಂ ಹೂಯಸೇ ವಿಷ್ಣುರಿತಿ ಪ್ರಸನ್ನಃ ॥**

ನಿನ್ನ ತೇಜಸ್ಸಿನಿಂದ ವೈರಿಗಳನ್ನು ಸಂಹರಿಸುವ ವೇದ ಮೂರ್ತಿಯೇ, ಶರಣಾಗತರಾದ ನಮ್ಮನ್ನು ರಕ್ಷಿಸು. ವೇದವೇದಾಂತ ಪ್ರತಿಪಾದ್ಯನಾದ ನಿನ್ನನ್ನು ಕುರಿತೇ ದೇವಮುನಿಗಳು ಯಜ್ಞ ಮಾಡಿ ವಿಷ್ಣುರೂಪಿಯಾದ ನಿನಗೆ ಆಹುತಿಗಳನ್ನು ನೀಡುವರು. ನೀನು ನಮ್ಮ ಮೇಲೆ ಪ್ರಸನ್ನನಾಗು.'' ದೇವತೆಗಳ ಈ ಸ್ತೋತ್ರವನ್ನು ಕೇಳಿ ಸೂರ್ಯದೇವನು ತನ್ನ ರೂಪವನ್ನು ಸೌಮ್ಯವನ್ನಾಗಿ ಮಾರ್ಪಡಿಸಿ ಅವರ ಕಣ್ಣಿಗೆ ಗೋಚರನಾದನು. ಸೂರ್ಯದೇವನು ಸೌಮ್ಯರೂಪವನ್ನು ಧರಿಸಿದ್ದೂ, ದೇವತೆಗಳನ್ನು ಅನುಸರಿಸಿದ್ದೂ ಸಪ್ತಮಿ ದಿನದಲ್ಲಿ ನಡೆಯಿತು. ಈ ಸಪ್ತಮೀ ತಿಥಿಯಂದು ಉಪವಾಸ ಮಾಡಿ ಸೂರ್ಯನನ್ನು ಪೂಜಿಸಿದರೆ ಅವನು ಸಂತುಷ್ಟನಾಗಿ ಇಷ್ಟಾರ್ಥ ಕೊಡುವನು. ಆದಿಮನ್ವಂತರದ ಸೂರ್ಯನ ಆಖ್ಯಾನವನ್ನು ನಿನಗೆ ಹೇಳಿದ್ದೇನೆ.

*ವರಾಹ ಪುರಾಣದಲ್ಲಿ ಇಪ್ಪತ್ತಾರನೇ ಅಧ್ಯಾಯ ಮುಗಿದುದು.*

—o—

## ಅಂಧಕಾಸುರನ ಮಾರಣ,ಅಷ್ಟ ಮಾತೆಯರ ಕಾರಣ | ಅಧ್ಯಾಯ - ೨೭

**ಮಹಾತಪ :-** ಹಿಂದೆ ಅಂಧಕ ಎಂಬ ಮಹಾ ಬಲಿಷ್ಠನಾದ ದೈತ್ಯನಿದ್ದನು. ಬ್ರಹ್ಮದೇವರ ವರದಿಂದ ಆ ಅಂಧಕನು ಮದಾಂಧನಾಗಿದ್ದನು. ವರದ ಬಲದಿಂದ ಅವನು ದೇವತೆಗಳನ್ನೆಲ್ಲ ಗೆದ್ದು ತನ್ನ ಕೈವಶದಲ್ಲಿ ಇರಿಸಿಕೊಂಡಿದ್ದನು ಮತ್ತು ಮೇರು ಪರ್ವತದಿಂದ ಎಲ್ಲ ದೇವತೆಗಳನ್ನೂ ಬಡೆದೋಡಿಸಿದನು. ಅಂಧಕನ ಉಪಟಳಕ್ಕೆ ಹೆದರಿದ ದೇವತೆಗಳು ಬ್ರಹ್ಮದೇವನಿಗೆ ಮೊರೆ ಹೊಕ್ಕರು. ಹಂಸವಾಹನನು ಸುರರಿಗೆ ''ಇಲ್ಲಿಗೆ ಬಂದ ಕಾರಣವೇನು'' ಎಂದು ಕೇಳಿದರು. ಆಗ ದೇವತೆಗಳು ತಮ್ಮ ದುಃಖವನ್ನು ತೋಡಿಕೊಂಡರು. ''ಜಗದೊಡೆಯ ! ನಾವೆಲ್ಲರೂ ಅಂಧಕಾಸುರನ ಉಪದ್ರವದಿಂದ ಸಂತ್ರಸ್ತರಾಗಿದ್ದೇವೆ. ನಮ್ಮನ್ನೆಲ್ಲ ಪಿತಾಮಹರಾದ ನೀವೇ ರಕ್ಷಿಸಬೇಕು. '' ಅದನ್ನು ಕೇಳಿ ಬ್ರಹ್ಮದೇವರು ತಮ್ಮ ಅಶಕ್ತಿಯನ್ನು ಪ್ರದರ್ಶಿಸುತ್ತಾ ನುಡಿದರು -

''ದೇವ ಶ್ರೇಷ್ಠರೇ ! ಅಂಧಕನ ಭಯದಿಂದ ನಿಮ್ಮನ್ನು ನಾನು ರಕ್ಷಿಸಲಾರೆ. ನಾನೇ ಅವನಿಗೆ ಈ ಮೊದಲ ವರವನ್ನು ಇತ್ತಿದ್ದೇನೆ. ''ನೀನು ಅವಧ್ಯನಾಗುವಿ, ನಿನ್ನ ದೇಹವು ನೆಲವನ್ನು ಮುಟ್ಟಲಾರದು'' ಎಂದು. ನಾನೇ ವರಕೊಟ್ಟು ನಾನೇ ಹೇಗೆ ಅವನನ್ನು ಕೊಲ್ಲಲಿ ! ಆದುದರಿಂದ ಮಹಾದೇವರಿಗೆ ಶರಣು ಹೋಗುವುದೇ ಸೂಕ್ತವಾಗಿದೆ. ಇಂಥ ದರ್ಪಿಷ್ಠನಾದ ಬಲಿಷ್ಠ ದೈತ್ಯನನ್ನು ಸಂಹರಿಸಲು ವೈರಿ ಭಯಂಕರನಾದ ಮಹಾರುದ್ರನೊಬ್ಬನೇ ಸಮರ್ಥ. ಆದುದರಿಂದ ಆ ಕೈಲಾಸ ಪರ್ವತಕ್ಕೆ ಹೋಗೋಣ.'' ಹೀಗೆ ಹೇಳಿ ಬ್ರಹ್ಮದೇವರು ತಮ್ಮ ಎಲ್ಲ ದೇವತೆಗಳನ್ನು ಸಂಗಡ ಕರೆದುಕೊಂಡು ಕೈಲಾಸ ಪರ್ವತಕ್ಕೆ ಬಂದರು. ಬ್ರಹ್ಮದೇವರನ್ನು ಕಂಡಕೂಡಲೇ ಎದ್ದು ಸ್ವಾಗತ ನೀಡಿ ಆಸನ ಉಪಚಾರಾದಿಗಳನ್ನು ಮಾಡಿ ರುದ್ರದೇವನು ಸರ್ವಲೋಕಗಳ ಒಡೆಯನಾದ ಕಮಲಾಸನನನ್ನು ಕುರಿತು ಮಾತನಾಡಿದನು.

''ಬ್ರಹ್ಮನ್, ಈ ಎಲ್ಲ ದೇವತೆಗಳೂ ನನ್ನ ಬಳಿಗೆ ಬರಲು ಕಾರಣವೇನು ! ಅವರಿಗಾಗಿ ನಾನು ಏನು ಮಾಡಬೇಕು ? ತಮ್ಮ ಅಪ್ಪಣೆಯನ್ನು ತಲೆಯ ಮೇಲೆ ಹೊತ್ತು ನಡೆಸಲು ನಾನು ಸದಾ ಸಿದ್ಧ. ಕೂಡಲೇ ಅಪ್ಪಣೆಯಾಗಲಿ ''

ಆಗ ದೇವತೆಗಳು ಮುಂದೆ ಸರಿದು - ''ದೇವ, ದುಷ್ಟನೂ ಮಹಾ ಬಲಿಷ್ಠನೂ ಆದ ಅಂಧಕಾಸುರನಿಂದ ನಮ್ಮನ್ನು ರಕ್ಷಿಸು''ಎಂದು ಬಿನ್ನವಿಸಿಗೊಂಡರು. ಹೀಗೆ ಸುರಪುಂಗವರು ಶಿವನನ್ನು ಪ್ರಾರ್ಥಿಸುತ್ತಲಿರುವಾಗಲೇ ಅಲ್ಲಿಗೆ ತನ್ನ ಪ್ರಚಂಡ ಸೇನೆಯೊಂದಿಗೆ ಅಂಧಕಾಸುರನು ಬಂದನು. ಶಿವಪಾರ್ವತಿಯರನ್ನು ಕೂಡಿಯೇ ಸಂಹಾರ ಮಾಡಬೇಕೆಂಬ ದುರಾಲೋಚನೆ ಯಿಂದ ಆ ದುಷ್ಟ ದೈತ್ಯನು ಸೇನಾ ಸನ್ನಾಹದೊಡನೆ ಕೈಲಾಸ ಪರ್ವತದ ಮೇಲೆ ಏರಿ ಬಂದು ಮಹಾದೇವರ ಮೇಲೆ ಒಮ್ಮೆಲೆ ಎರಗಿದನು. ಹೀಗೆ ಒಮ್ಮೆಲೆ ಧೂರ್ಜಟಿಯ ಮೇಲೆ ದಾಳಿ ಮಾಡಿದ ಆ ದುರುಳ ದಾನವನನ್ನು ಕಂಡು ರುದ್ರದೇವರು ಕೂಡಲೇ ಯುದ್ಧಕ್ಕೆ ಸಿದ್ಧರಾದರು. ದೇವತೆಗಳು ಆಗ ಮಹಾದೇವರ ಬೆಂಬಲಗರಾಗಿ ದೈತ್ಯರೊಡನೆ ಹೋರಾಟಕ್ಕೆ ಅಣಿಯಾದರು.

ಗೌರೀ ಪತಿಯು, ವಾಸುಕಿ, ಧನಂಜಯ ಮುಂತಾದ ಸರ್ಪಗಳನ್ನು ನೆನೆದು ಬರಮಾಡಿ ಅವುಗಳನ್ನು ತನ್ನ ಕಡಗ, ಕಂಕಣ ಉಡುದಾರಗಳನ್ನೆಲ್ಲ ಸಜ್ಜು ಮಾಡಿಕೊಂಡನು.

ನೀಲ ಎಂಬ ಹೆಸರಿನ ಅಂಧಕನ ಸೇನಾಪತಿಯು ಮತ್ತೇರಿದ ಆನೆಯ ರೂಪವನ್ನು ತಾಳಿ ಮಹಾದೇವರನ್ನು ಮಣಿಸಬಂದನು. ರುದ್ರನೆಡೆಗೆ ನುಗ್ಗಿ ಬರುವ ಆ ಮದ್ದಾನೆಯನ್ನು ನಂದಿಯು ವೀರಭದ್ರನಿಗೆ ತೋರಿಸಿದನು. ಅದನ್ನು ನೋಡಿ ವೀರಭದ್ರನಿಗೆ ಮೈಯಲ್ಲಿ ಆವೇಶ ತುಂಬಿತು. ಅವನು ಒಂದು ಸಿಂಹದ ವೇಷವನ್ನು ಧರಿಸಿ ಆ ನೀಲನಾಗದ ಮೇಲೆ ಆಕ್ರಮಣಗೈದನು. ಹರಿತವಾದ ಉಗುರುಗಳಿಂದ ಆ ನಾಗಾಸುರನನ್ನು ಹೊಡೆದು ಕೊಂದು ಅದರ ಮೈ ಚರ್ಮವನ್ನೇ ಸುಲಿದುಬಿಟ್ಟನು. ಕಾಡಿಗೆಯಂತೆ ಕಪ್ಪಾಗಿ ಹೊಳೆಯುವ ಆ ಆನೆಯ ತೊಗಲನ್ನು ಕಿತ್ತಿ ತಂದು ವೀರಭದ್ರನು ರುದ್ರನಿಗೆ ಒಪ್ಪಿಸಿದನು. ಅದನ್ನು ಪರಮೇಶ್ವರನು ತನ್ನ ಮೈ ಮೇಲೆ ಹೊದ್ದುಕೊಂಡನು. ಅಂದಿನಿಂದ ಮಹಾದೇವನು 'ಗಜಚರ್ಮಾಂಬರಧರ' ಎಂದು ಪ್ರಸಿದ್ಧನಾದನು.

ಹೀಗೆ ಆನೆಯ ತೊಗಲನ್ನು ಉಟ್ಟುಕೊಂಡು, ಹಾವಿನ ಒಡವೆಗಳನ್ನು ಇಟ್ಟುಕೊಂಡು, ಕೈಯಲ್ಲಿ ತ್ರಿಶೂಲವನ್ನು ಹಿಡಿದು, ಉಮಾಪತಿಯು ಅಂಧಕನ ಜೊತೆಗೆ ಯುದ್ಧ ಮಾಡತೊಡಗಿದನು. ಷಣ್ಮುಖನ ಸೇನಾಪತ್ಯದಲ್ಲಿ ದೇವತೆಗಳೆಲ್ಲರೂ ಒಟ್ಟಾಗಿ ದಾನವರೊಡನೆ ಹೋರಾಡಿದರು. ಇದನ್ನು ನೋಡಿ ನಾರದರು ಕೂಡಲೆ ವೈಕುಂಠಲೋಕಕ್ಕೆ ಹೋಗಿ ಕಮಲಾಕಾಂತನಾದ ನಾರಾಯಣನಿಗೆ ಈ ಘೋರವಾದ ಸುರಾಸುರ ಸಂಗ್ರಾಮದ ಸಮಾಚಾರವನ್ನು ಅರುಹಿದರು. ಸಮರ ವಾರ್ತೆಯನ್ನು ಕೇಳಿದ ತಕ್ಷಣವೇ ಶ್ರೀಹರಿಯು ಕೈಯಲ್ಲಿ ಸುದರ್ಶನ ಚಕ್ರವನ್ನು ಹಿಡಿದು ದೈತ್ಯರನ್ನು ಧ್ವಂಸಗೊಳಿಸಲಿಕ್ಕಾಗಿ ರಣಭೂಮಿಗೆ ಬಂದಿಳಿದನು.

ಹರಿಯು ರಣರಂಗದಲ್ಲಿ ಕಾಲಿರಿಸಿದ ಕೂಡಲೇ ಕದನದ ಬಣ್ಣವೇ ಬದಲಿಸಲ್ಪಟ್ಟಿತು. ಸುದರ್ಶನದ ಜ್ವಾಲಾಮಾಲೆಯನ್ನು ಕಂಡು ದೇವತೆಗಳು ಹಿಗ್ಗಿ ಹೂವಾದರು. ದೈತ್ಯರು ಹೆದರಿ, ಹಿಮ್ಮೆಟ್ಟಿ ಓಡತೊಡಗಿದರು. ಆಗ ಉತ್ಸಾಹದುಂಬಿದ ದೇವತೆಗಳು ರುದ್ರದೇವರನ್ನು ಮುಂದೆ ಮಾಡಿಕೊಂಡು ಸ್ವಯಂ ಅಂಧಕಾಸುರರನ್ನು ತಡೆದು ತಾಗಿದರು. ಆದರೆ ಬ್ರಹ್ಮವರದಿಂದ ದೃಪ್ತೋದ್ರಿಕ್ತನಾದ ಆ ದೈತ್ಯನು ಭೀಕರವಾದ ಶಸ್ತ್ರಾಸ್ತ್ರಗಳನ್ನು ತೂರಿ ದೇವತೆಗಳ ದಂಡಿನ ಮೇಲೆ ಎಸೆಯಲು ಸುರಸೇನೆಯೆಲ್ಲ ಖಿನ್ನವಿಷಣ್ಣವಾಗಿ ನಿಂತಿತು. ಆಗ ಸ್ವತಃ ಮಹಾದೇವನೇ ತನ್ನ ತ್ರಿಶೂಲವನ್ನು ಎತ್ತಿಕೊಂಡು ಅಂಧಕನನ್ನು ಎದುರಿಸಿದನು. ಶಿವ ಅಂಧಕರಲ್ಲಿ ತುಮುಲ ಕದನವು ಜರುಗಿತು.

ಕೊನೆಗೆ ಪರಮೇಶ್ವರನು ತನ್ನ ತ್ರಿಶೂಲದಿಂದ ಅಂಧಕಾಸುರನನ್ನು ಒಳ್ಳೇ ಜೋರಿನಿಂದ ಹೊಡೆದನು. ಆದರಿಂದ ಆ ದೈತ್ಯನ ದೇಹದಿಂದ ರಕ್ತವು ಚಿಮ್ಮಿ ನೆಲದ ಮೇಲೆ ಬಿದ್ದಿತು. ಆದರೆ ಅವನ ಮೈಯಿಂದ ಕೋಡಿಗಟ್ಟಿ ಹರಿದ ನೆತ್ತರವು ನೆಲದಲ್ಲಿ ಬಿದ್ದಲ್ಲಿಂದಲೇ ಅಸಂಖ್ಯ ಅಂಧಕ ದೈತ್ಯರು ಎದ್ದು ನಿಂತರು. ಅದನ್ನು ನೋಡಿ ಮಹಾದೇವನಿಗೆ ಅತ್ಯಂತ ಆಶ್ಚರ್ಯವಾಯಿತು. ಕೂಡಲೇ ಆ ಪರಮೇಶ್ವರನು ತನ್ನ ತ್ರಿಶೂಲವನ್ನು ಎತ್ತಿ ಬೀಸಿ ಅಂಧಕ ದೈತ್ಯನನ್ನು ಹೊಡೆದು ಕೊಚ್ಚಿ ಹಾಕಿದನು. ಮತ್ತು

ತನ್ನ ತ್ರಿಶೂಲದ ತುದಿಯಿಂದ ಆ ಅಂಧಕನ ಹೆಣವನ್ನು ಚಚ್ಚಿ ಎತ್ತಿ ಹಿಡಿದು ಆ ಸಂಗ್ರಾಮಾಂಗಣದಲ್ಲಿ ಸಿಂಹನಾದ ಮಾಡುತ್ತ ಕುಣಿದು ಕುಪ್ಪಳಿಸಿದನು. ಮೂಲ ಅಂಧಕಾಸುರನ ನೆತ್ತರದಿಂದ ಉದಿಸಿ ನಿಂತ ಅಂಧಕಾಸುರರನ್ನೆಲ್ಲ ಶ್ರೀ ವಿಷ್ಣುವು ತನ್ನ ಸುದರ್ಶನ ಚಕ್ರದಿಂದ ಸವರಿ ಸಂಹರಿಸಿದನು. ಶೂಲದ ತುದಿಯಿಂದ ಚುಚ್ಚಿ ಮೇಲೆತ್ತಿ ನೆಗಹಿ ಹಿಡಿದ ಆ ಅಂಧಕಾಸುರನ ಶವದಿಂದ ರಕ್ತದ ಹನಿಗಳು ನೆಲದ ಮೇಲೆ ಉದರಿದಾಗೆಲ್ಲ ಅನೇಕಾನೇಕ ಮರಿ ಅಂಧಕಾಸುರರು ಹುಟ್ಟಿ ಯುದ್ಧಕ್ಕಾಗಿ ಸಿದ್ಧರಾಗಿ ಬರುತ್ತಿದ್ದರು. ಅದನ್ನು ಕಂಡು ಮಹಾದೇವನಿಗೆ ಕೋಪ ಬಂದಿತು.

ಉದ್ರಿಕ್ತವಾದ ಕೋಪದಿಂದ ಆ ಪರಮೇಶ್ವರನ ಮುಖದಲ್ಲಿ ಒಂದು ಅಗ್ನಿಯ ಜ್ವಾಲೆಯೇ ಎದ್ದಿತು. ಮುಂದೆ ಆ ಜ್ವಾಲೆಯೇ ಮೈದಳೆದು ಯೋಗೇಶ್ವರಿ ಎಂಬ ದೇವಿಯಾಯಿತು. ಇದರಂತೆ ಶ್ರೀ ಹರಿಯು ಕೂಡ ಮೂರ್ತಿಮಂತವಾದ ಒಂದು ದೈವೀ ಶಕ್ತಿಯನ್ನು ನಿರ್ಮಿಸಿದನು. ಇದರಂತೆ ಮುಂದೆ ಬ್ರಹ್ಮದೇವರೂ, ಸ್ಕಂದನೂ ಮಹಾದೇವರೂ, ಯಮನೂ ಮತ್ತು ವರಾಹರೂಪಿಯಾದ ಶ್ರೀ ವಿಷ್ಣುವೂ ಒಂದೊಂದು ದೇವಿಯ ರೂಪವನ್ನು ನಿರ್ಮಿಸಿದರು. ಇವುಗಳಿಗೆ ಯೋಗೀಶ್ವರೀ, ಮಾಹೇಶ್ವರೀ, ವೈಷ್ಣವೀ, ಬ್ರಾಹ್ಮೀ, ಕೌಮಾರೀ, ಐಂದ್ರೀ ಯಾಮ್ಯಾ, ವಾರಾಹೀ ಎಂದು ಮುಂತಾಗಿ ಹೆಸರುಗಳು ಇರುತ್ತವೆ. ಇವರೇ ಅಷ್ಟಮಾತೃಗಳು ಅರ್ಥಾತ್ ಎಂಟು ಮಾತೆಯರು.

ಇವರಲ್ಲಿ ಕಾಮವು ಯೋಗೀಶ್ವರಿಯ ಅಧಿಷ್ಠಾನವಾಗಿದೆ. ಇದರಂತೆ ಮಾಹೇಶ್ವರಿಗೆ ಕ್ರೋಧ, ವೈಷ್ಣವಿಗೆ ಲೋಭ, ಬ್ರಾಹ್ಮಿಗೆ ಮದ, ಕೌಮಾರಿಗೆ ಮೋಹ, ಮಾಹೇಂದ್ರಿಗೆ ಮಾತ್ಸರ್ಯ, ಯಾಮ್ಯಾಗೆ ಚಾಡಿಕೋರತನ, ವಾರಾಹಿಗೆ ಅಸೂಯೆ ಅದಿಷ್ಠಾನವಾಗಿದೆ. ಈ ಎಲ್ಲ ಎಂಟು ಮಾತೆಯರು ನೆಲದ ಮೇಲೆ ಅಂಧಕನ ಮೈಯಿಂದ ಚಿಮ್ಮಿ ಬಸಿದು ಬಿದ್ದ ನೆತ್ತರವನ್ನೆಲ್ಲ ಪೂರ್ಣವಾಗಿ ಇಂಗಿಸಿ ಬಿಟ್ಟರು. ಆದರಿಂದ ಅವನನ್ನು ಮತ್ತೆ ಮತ್ತೆ ರಕ್ತದಿಂದ ಚಿಗಿತು ನಿಲ್ಲುವಂತೆ ಮಾಡುವ ರಾಕ್ಷಸೀ ಮಾಯೆಗಳೂ ಕೂಡ ನಷ್ಟವಾಗಿ ಹೋದವು. ಹೀಗೆ ಮಹಾ ದೇವರಿಂದ ಹತನಾಗಿ ಅಂಧಕನು ತನ್ನ ಸ್ವರೂಪ ಯೋಗ್ಯವಾದ ಸಿದ್ಧಿಯನ್ನು ಪಡೆದನು.

ಈ ಎಂಟು ಮಾತೆಯರ ಪವಿತ್ರವಾದ ಉತ್ಪತ್ತಿಯ ಕಥೆಯನ್ನು ನಾನು ನಿನಗೆ ಹೇಳಿದೆನು. ಈ ಮಂಗಳಕರವಾದ ಅಷ್ಟಮಾತೆಯರ ಉತ್ಪತ್ತಿಯ ಕಥೆಯನ್ನು ಭಕ್ತಿಯಿಂದ ಕೇಳಿದರೆ ಆ ಮಾತೆಯರೆಲ್ಲರೂ ಸುಪ್ರಸನ್ನರಾಗಿ ಸರ್ವರೀತಿಯಿಂದಲೂ ತಮ್ಮ ಭಕ್ತರನ್ನು ಕಾಯುತ್ತಾರೆ. ಈ ಅಷ್ಟಮಾತೆಯರಿಗೆ ಬ್ರಹ್ಮದೇವರು ಅಷ್ಟಮೀ ತಿಥಿಯನ್ನು ಕೊಟ್ಟಿರುತ್ತಾರೆ. ಈ ಅಷ್ಟಮಿ ತಿಥಿಯಲ್ಲಿ ಬಿಲ್ವ ಪತ್ರಿಯನ್ನು ಮಾತ್ರ ತಿಂದು ಇದ್ದು ಈ ಅಷ್ಟ ಮಾತೃಕಾಗಣವನ್ನು ಭಕ್ತಿಯಿಂದ ಪೂಜಿಸುವ ಮನುಷ್ಯರಿಗೆ ಈ ಮಾತೆಯರು ವಿಪುಲವಾಗಿ ಕ್ಷೇಮವನ್ನೂ ಆರೋಗ್ಯವನ್ನೂ ಪ್ರದಾನ ಮಾಡುತ್ತಾರೆ.

*ವರಾಹ ಪುರಾಣದಲ್ಲಿ ಇಪ್ಪತ್ತೇಳನೇ ಅಧ್ಯಾಯ ಮುಗಿದುದು.*

—o—

## ದುರ್ಗಾದೇವಿಯ ಉತ್ಪತ್ತಿ

ಅಧ್ಯಾಯ - ೨೮

**ಪ್ರಜಾಪಾಲ :-** ಆದಿ ಕ್ಷೇತ್ರದಲ್ಲಿ ಸೂಕ್ಷ್ಮ ರೂಪದಿಂದ ಇದ್ದ ದುರ್ಗಾದೇವಿಯು ಮೈದಾಳಿದ ಬಗೆಯೆಂತು ?

**ಮಹಾತಪ :-** ಹಿಂದೆ ಸಿಂಧು ದ್ವಿಪ ಎಂಬ ರಾಜರ್ಷಿಯಿದ್ದ. ಅವನಲ್ಲಿ ವರುಣನ ಅಂಶವಿದ್ದಿತು. ಅವನು ಮಹಾಪ್ರತಾಪಿ. ಅವನಿಗೆ ಒಂದು ಆಶೆ. ದೇವೇಂದ್ರನನ್ನು ಕೊಲ್ಲುವ ಮಗ ಹುಟ್ಟಬೇಕು ಎಂದು. ಆದಕ್ಕಾಗಿ ಅವನು ಕಾಡಿಗೆ ನಡೆದ. ತಪಂಗೈದ. ದೇಹವನ್ನು ದಂಡಿಸಿದ.

**ಪ್ರಜಾಪಾಲ :-** ಒಳ್ಳೇ ಬ್ರಾಹ್ಮಣ, ಅವನಿಗೆ ಇಂದ್ರ ಮಾಡಿದ ಅಪಕಾರವೇನು ? ಏತಕ್ಕಾಗಿ ಅವನು ಇಂದ್ರನನ್ನು ವಧಿಸುವ ಮಗನನ್ನು ಬಯಸಿ ತಪದಲ್ಲಿ ನಿಂತನು ?

**ಮಹಾತಪ :-** ಕಳೆದ ಜನ್ಮದಲ್ಲಿ ಆ ಸಿಂಧುದ್ವೀಪನು ಸ್ವರ್ಗದ ಬಡಿಗನಾದ ತ್ವಷ್ಟಾರನ ಹೊಟ್ಟೆಯಲ್ಲಿ ಹುಟ್ಟಿದನು. ಬಲಿಷ್ಠರಲ್ಲಿ ಅವನೇ ಆಗ ಗರಿಷ್ಠ. ಯಾವ ಶಸ್ತ್ರಕ್ಕೂ ಅವನು ಹಣಿಯಲಿಲ್ಲ. ಯಾವ ಅಸ್ತ್ರಕ್ಕೂ ಮಣಿಯಲಿಲ್ಲ. ಆಗ ಇಂದ್ರನು ಶಸ್ತ್ರಾಸ್ತ್ರಗಳಿಂದ ಇವನು ಅವಧ್ಯನಾಗಿದ್ದಾನೆ ಎಂದು ತಿಳಿದು ನೀರಿನ ನೊರೆಯಿಂದ ಹೊಡೆದು ಕೊಂದು ಹಾಕಿದನು. ಆ ಸಿಂಧುದ್ವೀಪ ರಾಜನು ಮುಂದೆ ಬ್ರಹ್ಮದೇವರ ಕುಲದಲ್ಲಿ ಜನಿಸಿದನು. ಆದರೆ ಹಿಂದಿನ ಜನ್ಮದ ಕಹಿ ನೆನಪು ಅವನಲ್ಲಿ ಅಚ್ಚಳಿಯದೇ ಉಳಿದಿತ್ತು. ಇಂದ್ರನು ನೊರೆಯಿಂದ ತನ್ನನ್ನು ಜನ್ಮಾಂತರದಲ್ಲಿ ನಾಶ ಮಾಡಿದ್ದನ್ನು ಅವನು ನೆನೆದಾಗ ಸೇಡಿನ ಭಾವ ಕೇಡಿನ ಕಿಚ್ಚಿಗೆ ಗಾಳಿ ಹಾಕಿತು. ಇಂದ್ರನನ್ನು ಕೊಲ್ಲತಕ್ಕ ಮಗನನ್ನು ಪಡೆಯಬೇಕೆಂಬ ಹಂಬಲದ ಬೆಂಬತ್ತಿ ಕಾಡಿಗೆ ಹೋಗಿ ತಪಕ್ಕೆ ನಿಂತ. ಆದಕ್ಕಾಗಿ ಅವನು ಗೈಯುತ್ತಿದ್ದ ತಪಸ್ಸು ಘನಘೋರವಾಗಿದ್ದಿತು.

ಹೀಗೆ ಅವನು ತಪಶ್ಚರ್ಯೆಯಲ್ಲಿದ್ದಾಗ ಅವನ ಮುಂದೆ ವೇತ್ರವತೀ ನದಿಯು ಹರಿಯುತ್ತಿತ್ತು. ಸಿಂಧುದ್ವೀಪನ ಸುಂದರವಾದ ದೇಹ ಮತ್ತು ತಪೋದೀಪ್ತಿಯನ್ನು ಕಂಡು ಆ ಹರಿಯುವ ನದಿಗೂ ಅವನ ಮೇಲೆ ಮನಸ್ಸು ಹರಿಯಿತು. ಕೂಡಲೇ ಆ ನದಿಯು ಒಳ್ಳೇ ಸುಂದರ ಸ್ತ್ರೀ ರೂಪವನ್ನು ತಾಳಿ ರಾಜನ ಬಳಿಗೆ ಬಂದಳು. ಆ ವೇತ್ರವತಿಯ ಕಾಂತಿಸಂಪನ್ನವಾದ ಸೌಂದರ್ಯದ ಸೊಬಗನ್ನು ನೋಡಿ ಮಹಾರಾಜನ ಮನಸ್ಸು ಮುಗ್ಧವಾಯಿತು. ಅವನು ಆತುರನಾಗಿ ಕೇಳಿದನು -

''ಚೆಲುವಿಯೇ ನೀನು ಯಾರು ? ಸುಂದರಿ ನಿಜ ಹೇಳು'' ಮಹಾರಾಜನ ಪ್ರಶ್ನೆಗೆ ಆ ನೀರಿನ ನಾರಿಯು ನಸುನಗುತ್ತ ಉತ್ತರವಿತ್ತಳು. ''ರಾಜನ್, ನಾನು ಹಿಂದೊಮ್ಮೆ ಜಲಾಧಿಪತಿಯಾದ ವರುಣನ ಮಡದಿ ಆಗಿದ್ದೆ. ಈಗ ವೇತ್ರವತಿ ನದಿಯಾಗಿ ಹರಿಯುತ್ತಲಿದ್ದೇನೆ. ನನ್ನ ದಂಡೆಯ ಮೇಲೆ ನಿಂತು ತಪವನ್ನಾಚರಿಸುವ ನಿನ್ನ ಚೆಲುವು ನನ್ನ ಚಿತ್ತವನ್ನು ಚಪಲಗೊಳಿಸಿದೆ. ನಾನು ನಿನ್ನ ರೂಪಶ್ರೀಗೆ ಮಾರು ಹೋಗಿದ್ದೇನೆ. ಕಾಮಿಸಿ ಬಂದ ಕಾಂತೆಯನ್ನು ತಿರಸ್ಕರಿಸಿದರೆ ಬ್ರಹ್ಮಹತ್ಯೆ ದೋಷವು ಬರುವುದು. ಇದನ್ನು ಅರಿತು ನೀನು ಒಲಿದು ಬಂದ ನನ್ನನ್ನು ಸ್ವೀಕರಿಸಿ ನನ್ನ ಕಾಮವಾಸನೆಯನ್ನು ತಣಿಸು ''

ಸೊಬಗಿನ ರಾಣಿಯಂತಿದ್ದ ಆ ಸುಂದರ ಸೀಮಂತಿನಿಯ ಬೆಡಗು ಬಿನ್ನಾಣ, ಸರಸ ಶೃಂಗಾರಗಳು ಮಹಾರಾಜನ ಮನಸ್ಸನ್ನು ಸೂರೆಗೊಂಡಿದ್ದವು. ಅವನು ಬಯಸಿದ್ದೂ ಅದೇ. ಅವಳು ಬೇಡಿದ್ದೂ ಅದೇ. ಆದುದರಿಂದ ಕೂಡಲೇ ಅವನು ಸಮ್ಮತಿಸಿ ತಪಸ್ಸನ್ನು ಬಿಟ್ಟು ಅವಳೊಡನೆ ವಿಹಾರ ಮಾಡಿದನು.

ಅದರಿಂದ ವೇತ್ರವತಿಯ ಉದರದಿಂದ ತೇಜಸ್ವಿಯಾದ ಒಬ್ಬ ಮಗನು ಹುಟ್ಟಿದನು. ಹನ್ನೆರಡು ಸೂರ್ಯರಿಗೆ ಸಮಾನವಾಗಿದ್ದಿತು ಅವನ ಕಾಂತಿ. ವೇತ್ರವತಿಯ ಆ ಬಲಿಷ್ಠ ಪುತ್ರನು ವೇತ್ರಾಸುರ ಎಂದು ಹೆಸರಾದನು. ಅವನು ಬೆಳೆದು ದೊಡ್ಡವನಾದ ಬಳಿಕ ತನ್ನ ಶೌರ್ಯದಿಂದ, ಸಪ್ತದ್ವೀಪಗಳಿಂದ ಕೂಡಿದ ಭೂಮಂಡಲವನ್ನೆಲ್ಲ ಗೆದ್ದನು. ಪ್ರಾಗ್ಜ್ಯೋತಿಷ ರಾಜ್ಯದಲ್ಲಿ ಅಭಿಷಿಕ್ತನಾದ ಅವನು ತನ್ನ ಪ್ರಾಯದ ಉತ್ಸಾಹದಲ್ಲಿ ಸಕಲ ಲೋಕಗಳನ್ನೂ ಗೆಲ್ಲಬೇಕೆಂದು ಸಂಕಲ್ಪಿಸಿದನು. ಮೇರುಪರ್ವತವನ್ನು ಏರಿ ಮೊದಲು ಇಂದ್ರನನ್ನು ಸೋಲಿಸಿದನು. ಆನಂತರ ಅಗ್ನಿಯನ್ನು ಗೆದ್ದನು. ಬಳಿಕ ಯಮನನ್ನು ಪರಾಭವಗೊಳಿಸಿದನು.

ಅವನಿಂದ ಸೋಲನ್ನು ಉಂಡ ಇಂದ್ರನು ಅಗ್ನಿಯ ಬಳಿಗೆ ಓಡಿದನು. ಮುಂದೆ ಅಗ್ನಿಯೂ ಅವನೊಡನೆ ಹೋರಾಡಿ ಭಗ್ನನಾಗಿ ಯಮನಿಗೆ ಮೊರೆಹೊಕ್ಕನು. ಯಮನೂ ಕೂಡ ಆ ವೇತ್ರಾಸುರನ ಶಸ್ತ್ರಾಘಾತವನ್ನು ತಾಳದೆ ನಿರುತಿಯ ಬಳಿಗೆ ಓಡಿಬಂದನು. ನಿರುತಿಯು ವರುಣನಿಗೆ ಶರಣು ಹೋದನು. ವರುಣನು ಇಂದ್ರಾದಿ ದೇವತೆಗಳನ್ನು ಕೂಡಿ ವಾಯುವಿಗೆ ಮೊರೆಹೊಕ್ಕನು. ವಾಯುವು ಕುಬೇರನ ಕಡೆಗೂ, ಕುಬೇರನು ತನ್ನ ಮಿತ್ರನಾದ ಮಹಾದೇವರಿಗೂ ಶರಣು ಹೋದರು. ಇತ್ತ ತನ್ನ ಬಲಗರ್ವದಿಂದ ಕೊಬ್ಬಿದ ಆ ವೇತ್ರಾಸುರನೂ ಕೂಡ ಗದೆಯನ್ನು ಬೀಸುತ್ತ ಕೈಲಾಸಕ್ಕೆ ನಡೆದನು. ಮಹಾದೇವನು ಈ ವೇತ್ರಾಸುರನನ್ನು ಗೆಲ್ಲುವುದು ಅಶಕ್ಯವೆಂದು ಅರಿತು ಎಲ್ಲ ದೇವತೆಗಳನ್ನು ಕರೆದುಕೊಂಡು ಸತ್ಯ ಲೋಕಕ್ಕೆ ಬ್ರಹ್ಮದೇವರ ಬಳಿಗೆ ಧಾವಿಸಿ ಬಂದನು.

ಆಗ ಅಲ್ಲಿ ಜಗತ್ತನ್ನು ನಿರ್ಮಿಸುವ ಬ್ರಹ್ಮನು ಶ್ರೀವಿಷ್ಣುವಿನ ಪಾದದಿಂದ ಹುಟ್ಟಿದ ದೇವಗಂಗೆಯಲ್ಲಿ ಸ್ನಾನಮಾಡಿ ಮುಳುಗಿ ಗಾಯತ್ರೀ ಮಂತ್ರವನ್ನು ಜಪಿಸುತ್ತಿದ್ದನು. ಹೀಗೆ ಜಲದಲ್ಲಿ ನಿಂತು ಜಪವನ್ನು ಮಾಡುತ್ತ ಗಾಯತ್ರೀ ಮಂತ್ರ ಪ್ರತಿಪಾದ್ಯನಾದ ಶ್ರೀವಿಷ್ಣುವನ್ನು ಧ್ಯಾನಮಾಡುತ್ತಲ್ಲಿದ್ದ ಬ್ರಹ್ಮನನ್ನು ನೋಡಿ ದೇವತೆಗಳೆಲ್ಲರೂ ಕೂಗಿ ಕರೆದರು. ''ಪ್ರಜೆಗಳ ಒಡೆಯನೇ, ವೇತ್ರಾಸುರನಿಂದ ಜಗತ್ತಿಗೆಲ್ಲ ಮರಣ ಸಂಕಟವು ಬಂದಿದೆ. ಎಲ್ಲ ದೇವತೆಗಳನ್ನೂ, ಋಷಿಗಳನ್ನೂ ಈ ಸಂಕಟದಿಂದ ನೀನೇ ರಕ್ಷಿಸು. ನಮ್ಮನ್ನು ಪಾಲಿಸು. ಎಲ್ಲರನ್ನು ಕಾಪಾಡು.'' ದೇವಗಣದ ಈ ಮಾತನ್ನು ಕೇಳಿ ಬ್ರಹ್ಮದೇವರಿಗೆ ಚಿಂತೆಗಿಟ್ಟಿತು. ಇಲ್ಲಿ ಯಾವ ಅಸುರನೂ ಇಲ್ಲ. ದೈತ್ಯರೂ ಇಲ್ಲ. ಇದೆಲ್ಲವೂ ಪರಮೇಶ್ವರನಾದ ಶ್ರೀಹರಿಯ ಮಾಯೆಯೇ ಸರಿ.

ಹೀಗೆ ಬ್ರಹ್ಮನು ಆಲೋಚಿಸುತ್ತಿರುವಾಗ ಅವನು ಜಪ ಮಾಡುತ್ತ ಕುಳಿತ ಗಂಗೆಯ ನೀರಿನಿಂದ ಎಂಟು ತೋಳಿನ ಓರ್ವ ಕನ್ಯೆಯು ಪ್ರಕಟವಾದಳು. ಅವಳು ಉಟ್ಟಿದ್ದು ಅಚ್ಚ ಬಿಳಿ ಬಣ್ಣದ ಶುಕ್ಲಾಂಬರ. ಕೊರಳಲ್ಲಿ ಹಾರಗಳು. ತಲೆಯ ಮೇಲೆ ಹೊಳೆಯುವ ಕಿರೀಟ.

ಎಂಟು ತೋಳುಗಳು, ಪ್ರತಿಯೊಂದು ಕೈಯಲ್ಲಿಯೂ ಒಂದೊಂದು ಆಯುಧ. ಅವಳ ವಾಹನ ಸಿಂಹ, ಅವಳು ಕೈಯಲ್ಲಿ ಹಿಡಿದದ್ದು ಶಂಖ, ಚಕ್ರ, ಗದಾ, ಪದ್ಮ, ಪಾಶ, ಖಡ್ಗ, ಘಂಟೆ ಮತ್ತು ಬಾಣ. ಇವಲ್ಲದೆ ಬೇರೆ ಆಯುಧಗಳನ್ನೂ ಬತ್ತಳಿಕೆಯನ್ನೂ ಬೆನ್ನಿಗೆ ಕಟ್ಟಿಕೊಂಡು ಅವಳು ಸಿಂಹಾರೂಢಳಾಗಿ ಸಂಭ್ರಮದಿಂದ ದೈತ್ಯರ ಮೇಲೆ ಎರಗಿದಳು. ದೈತ್ಯರೆಲ್ಲರೂ ಸಾವಿರಾರು ವರ್ಷಗಳವರೆಗೆ ತಮ್ಮ ದಿವ್ಯಾಸ್ತ್ರಗಳಿಂದ ಹೋರಾಡಿ ಅವಳಿಂದ ಕೊನೆಗೆ ಕೊಲ್ಲಲ್ಪಟ್ಟರು. ಕಟ್ಟಕಡೆಗೆ ವೇತ್ರಾಸುರನು ಕೂಡ ಅವಳೊಡನೆ ಬಹು ದೀರ್ಘಕಾಲ ಹೋರಾಡಿ ಧಾರಾತೀರ್ಥದಲ್ಲಿ ದೇಹವಿಟ್ಟನು. ಘೋರ ದೈತ್ಯನಾದ ವೇತ್ರಾಸುರನು ಧರೆಗೆ ಉರುಳಿದ ಕೂಡಲೇ ದೇವತೆಗಳೆಲ್ಲರೂ ಹರ್ಷೋದ್ರೇಕದಿಂದ ಕೂಗಾಡಿದರು. ಕುಣಿದಾಡಿದರು. ಮಹಾದೇವರೂ ಬಂದು ವಂದಿಸಿದರು. ಆಗ ದೇವತೆಗಳು ತಮ್ಮ ಪಕ್ಷಕ್ಕೆ ಬಂದ ಶಿವನನ್ನು ಆನಂದದಿಂದ ಸ್ತುತಿಸಿದರು.

''ದೇವೇಶ, ನೀನು ಹೀಗೆ ಮುಂದೆಯೂ ನಮ್ಮ ಪರವಾಗಿ ಯುದ್ಧ ಮಾಡಿ ಗೆಲುವನ್ನು ತರಬೇಕು'' ಎಂದು ಹೇಳಿ ವಂದಿಸಿದರು. ಆಗ ಮಹಾದೇವರು ಆ ಸಿಂಹವಾಹನಳಾದ ಮಹಾದೇವಿಯನ್ನು ಹೀಗೆ ಸ್ತೋತ್ರ ಮಾಡಿದರು.

ಮಹೇಶ್ವರ ಉವಾಚ

ಜಯಸ್ವ ದೇವಿ ಗಾಯತ್ರಿ ಮಹಾಮಾಯೇ ಮಹಾಪ್ರಭೇ
ಮಹಾದೇವಿ ಮಹಾಭಾಗೇ ಮಹಾಸತ್ತ್ವೇ ಮಹೋತ್ಸವೇ ॥

ದಿವ್ಯ ಗಂಧಾನುಲಿಪ್ತಾಂಗಿ ದಿವ್ಯ ಸ್ರಗ್ದಾಮಭೂಷಿತೇ
ದೇವಮಾತರ್ನಮಸ್ತುಭ್ಯ ಮಕ್ಷರಸ್ಥೇ ಮಹೇಶ್ವರಿ ॥

ತ್ವಂ ಧೀಃ ಶ್ರೀಸ್ತ್ವಮೋಂಕಾರಸ್ತತ್ವೇಚಾಪಿ ಪ್ರತಿಷ್ಠಿತಾ
ಸರ್ವಸತ್ವಹಿತೇ ದೇವಿ ನಮಸ್ತೇ ಪರಮೇಶ್ವರಿ॥

ದಿವ್ಯ ಗಂಧವನ್ನು ಲೇಪನ ಮಾಡಿಕೊಂಡು, ದಿವ್ಯ ಹೂಗಳ ಹಾರಗಳನ್ನು ಧರಿಸಿರುವ ಗಾಯಿತ್ರಿ ದೇವಿಯೇ, ನಿನಗೆ ಗೆಲುವಾಗಲಿ, ದೇವಮಾತೆಯಾದ ನೀನೇ ಅಕ್ಷರ ಪ್ರತಿಪಾದ್ಯಳು. ನೀನೇ ಶ್ರೀ, ನೀನೇ ಧೀ, ನೀನೇ ಓಂಕಾರ. ಸರ್ವಪ್ರಾಣಿ ಗಳಿಗೂ ಹಿತಕರವಾದ ನಿನಗೆ ನಮಸ್ಕಾರ. ಈ ರೀತಿಯಾಗಿ ಪರಮೇಶ್ವರನು ಆ ದೇವಿಯನ್ನು ಸ್ತೋತ್ರ ಮಾಡಿದನು. ದೇವತೆಗಳು ಕೂಡ ಅವಳ ಹೆಸರಿನಿಂದ ಜಯಘೋಷವನ್ನು ಮಾಡಿದರು. ಬ್ರಹ್ಮದೇವರು ನೀರಿನಲ್ಲಿ ತಮ್ಮ ಜಪವನ್ನು ಮುಗಿಸಿ ಹೊರಗೆ ಬರುವಷ್ಟರಲ್ಲಿ ದೇವಿಯು ಎಲ್ಲ ದೈತ್ಯರನ್ನು ಧ್ವಂಸ ಮಾಡಿ ನಿಂತಿದ್ದಳು. ಅವಳನ್ನು ಕಂಡು ದೇವತಾಕಾರ್ಯವು ಸಿದ್ಧವಾಯಿತೆಂದು ಬಗೆದು ಬ್ರಹ್ಮದೇವನು ಮುಂದಿನ ಕಾರ್ಯವನ್ನು ಉದ್ದೇಶಿಸಿ ಮಾತನಾಡಿದನು.

''ಈ ದೇವಿಯು ಹಿಮಾಲಯ ಪರ್ವತಕ್ಕೆ ಹೋಗಲಿ. ನೀವೆಲ್ಲರೂ ವಿಲಂಬ ಮಾಡದೇ ಅಲ್ಲಿಗೆ ಹೋಗಿ ಆನಂದವನ್ನು ಪಡೆಯಿರಿ. ಈ ದೇವಿಯನ್ನು ನವಮಿ ತಿಥಿಯಲ್ಲಿ ಪೂಜೆ ಮಾಡಿದರೆ ಅವಳು ಎಲ್ಲರಿಗೂ ಅಭೀಷ್ಟವಾದ ವರವನ್ನು ಕೊಡುವಳು.

ನವಮಿಯ ದಿನ ಬರಿ ಹಿಟ್ಟನ್ನು ತಿಂದು ಆ ದೇವಿಯನ್ನು ಭಕ್ತಿಯಿಂದ ಆರಾಧನೆ ಮಾಡಿದ ನರರ ಅಥವಾ ನಾರಿಯರ ಮನೋರಥಗಳೆಲ್ಲವೂ ಸಿದ್ಧಿಸುತ್ತವೆ.''

ಮಹಾದೇವರು ಹೇಳಿದ ಈ ದೇವೀಸ್ತೋತ್ರವನ್ನು ಪ್ರತಿದಿನವು ಪ್ರಾತಃಕಾಲದಲ್ಲಿ ಪಠಿಸಿದರೆ ಈ ದೇವಿಯು ಅಂಥ ಭಕ್ತರನ್ನು ಸರ್ವಸಂಕಟ ಗಳಿಂದಲೂ ಎಲ್ಲ ಕುತ್ತು ಆಪತ್ತುಗಳಿಂದಲೂ ಕಾಪಾಡುವಳು.'' ಹೀಗೆ ಹೇಳಿ ಬ್ರಹ್ಮದೇವರು ಆ ದೇವಿಗೆ ನುಡಿದರು - ''ದೇವಿ, ನೀನು ಇನ್ನೂ ಒಂದು ದೊಡ್ಡ ಕಾರ್ಯ ಮಾಡುವುದು ಉಳಿದಿದೆ. ಮುಂದೆ ಮಹಿಷಾಸುರನ ಸಂಹಾರವು ನಿನ್ನಿಂದಲೇ ಆಗಬೇಕಾಗಿದೆ.

ಹೀಗೇ ಹೇಳಿ ಬ್ರಹ್ಮದೇವರೂ, ಎಲ್ಲ ದೇವತೆಗಳೂ ಆ ದೇವಿಯನ್ನು ಹಿಮಗಿರಿಯಲ್ಲಿ ಸ್ಥಾಪನೆ ಮಾಡಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಈ ಕಾತ್ಯಾಯಿನೀ ದೇವಿಯನ್ನು ಹಿಮಾಲಯದಲ್ಲಿ ಸ್ಥಾಪಿಸಿದ್ದರಿಂದ ಅವಳಿಗೆ ಅತ್ಯಂತ ಆನಂದವಾಯಿತು. ಆದರಿಂದ ಈ ನವಮೀ ತಿಥಿಗೆ 'ನಂದಾನವಮಿ' ಎಂದು ಹೆಸರು ಬಂದಿತು. ದೇವಿಯ ಈ ಜನ್ಮ ಕರ್ಮಗಳ ಮಹಿಮೆಯನ್ನು ಕೇಳಿದವರೂ ಪಠಿಸಿದವರೂ ಸರ್ವಪಾಪಗಳಿಂದ ಮುಕ್ತರಾಗಿ ದಿವ್ಯ ಗತಿಯನ್ನು ಹೊಂದುತ್ತಾರೆ.

*ವರಾಹ ಪುರಾಣದಲ್ಲಿ ಇಪ್ಪತ್ತೆಂಟನೇ ಅಧ್ಯಾಯ ಮುಗಿದುದು.*

—o—

## ದಿಕ್ಕುಗಳ ಉತ್ಪತ್ತಿ

ಅಧ್ಯಾಯ - ೨೯

**ಮಹಾತಪ :-** ರಾಜನ್, ಬ್ರಹ್ಮದೇವರ ಕಿವಿಗಳಿಂದ ದಿಕ್ಕುಗಳು ಜನಿಸಿದ ಬಳಿಕ ಅವುಗಳ ಕತೆಯನ್ನು ಹೇಳುತ್ತೇನೆ ಕೇಳು. ಬ್ರಹ್ಮದೇವರು ಸೃಷ್ಟಿಯನ್ನು ಮಾಡಿದ ಬಳಿಕ ಪ್ರಥಮ ಸೃಷ್ಟಿಯಲ್ಲಿ ಅನೇಕ ಪ್ರಜೆಗಳನ್ನು ಸೃಷ್ಟಿ ಮಾಡಿದರು. ಅನಂತರ ಅವರಿಗೆ ಒಂದು ದೊಡ್ಡ ಚಿಂತೆಯಾಯಿತು. ''ನಾನು ಸೃಜಿಸಿದ ಈ ಎಲ್ಲ ಪ್ರಜೆಗಳನ್ನು ಯಾರು ಧರಿಸುವರು ? ಇವೆಲ್ಲರೂ ಎಲ್ಲಿ ಇರಬೇಕು ?'' ಹೀಗೆ ಬ್ರಹ್ಮನು ಆಲೋಚಿಸಿರುತ್ತಿರುವಾಗಲೇ ಅವನ ಕಿವಿಗಳಿಂದ ಅತ್ಯಂತ ತೇಜಸ್ವಿನಿಯಾದ ಹತ್ತು ಜನ ಕನ್ಯೆಯರು ಜನಿಸಿದರು. ಪೂರ್ವಾ, ದಕ್ಷಿಣಾ, ಪಶ್ಚಿಮಾ, ಉತ್ತರಾ, ಊರ್ಧ್ವಾ, ಅಧರಾ ಎಂಬ ಆರು ಜನ ಕನ್ಯಾಮಣಿಗಳು ಅವರಲ್ಲಿ ಮುಖ್ಯರಾಗಿದ್ದರು. ಅವರೆಲ್ಲರಲ್ಲಿ ಪೂರ್ವಾ, ದಕ್ಷಿಣಾ, ಪಶ್ಚಿಮಾ, ಉತ್ತರಾ ಈ ನಾಲ್ಕು ಜನ ಕನ್ಯೆಯರು ಪರಮ ಮಂಗಳಕಾರಕರಾಗಿದ್ದರು. ಈ ಚತುಃಕನ್ಯೆಯರ ಚೆಲುವು ಗಾಂಭೀರ್ಯಗಳು ಅಸಾಮಾನ್ಯಗಳಾಗಿದ್ದವು. ಅವರು ತಮ್ಮನ್ನು ನಿರ್ಮಿಸಿದ ಬ್ರಹ್ಮದೇವರಿಗೆ ಪ್ರೀತಿಯಿಂದ ಕೇಳಿಕೊಂಡರು.

''ದೇವಾದೇವಾ, ನಮಗೆಲ್ಲ ಇರಲು ಅವಕಾಶವನ್ನು ಮಾಡಿಕೊಡು. ನಮಗೆ ನಮ್ಮ ರೂಪ-ಗುಣಕ್ಕೆ ತಕ್ಕಂಥ ಒಳ್ಳೇ ಪತಿಗಳು ದೊರಕುವಂತೆ ಮಾಡು. ಹಾಗೂ ನಾವು ನಮ್ಮ ಪ್ರಿಯಪತಿಗಳೊಂದಿಗೆ ಸಂತೋಷದಿಂದ ನಕ್ಕುನಲಿದಾಡುವಂತೆ ಸ್ಥಾನಮಾನಗಳನ್ನು ಕಲ್ಪಿಸಿಕೊಡು.'' ಅವರ ಬಿನ್ನಹವನ್ನು ಕೇಳಿ ಬ್ರಹ್ಮದೇವರು ಹೀಗೆ ಹೇಳಿದರು.

''ಸುಂದರಿಯರೇ, ಈ ಬ್ರಹ್ಮಾಂಡವೇ ಮೂರುಕೋಟಿ ಯೋಜನ ವಿಸ್ತಾರವಾಗಿದೆ. ಇದರಲ್ಲಿ ನೀವು ಬೇಕಾದಲ್ಲಿ ನಿಮ್ಮ ಇಚ್ಛಾನುಸಾರವಾಗಿ ವಾಸವನ್ನು ಮಾಡಬಹುದು. ನಿಮಗೆ ಅನುರೂಪರಾದ ಪತಿಗಳನ್ನೂ ನಿರ್ಮಿಸಿ ಕೊಡುತ್ತೇನೆ. ನಿಮಗೆ ಸರಿಕಂಡ ದೇಶಗಳಿಗೆನೀವುಹೋಗಬಹುದು'' ಬ್ರಹ್ಮನ ಆಜ್ಞೆಯಂತೆ ಆ ಎಲ್ಲ ಕನ್ಯಾಮಣಿಗಳು ತಮ್ಮ ಮನಬಂದಂತೆ ನಡೆದರು. ಅನಂತರ ಬ್ರಹ್ಮನು ಮಹಾಬಲಿಷ್ಠರಾದ ಲೋಕಪಾಲಕರನ್ನು ಸೃಷ್ಟಿ ಮಾಡಿದನು. ಬಳಿಕ ಕೂಡಲೇ ಆ ಕನ್ಯೆಯರನ್ನು ಬರಮಾಡಿಕೊಂಡು ಅವರನ್ನೆಲ್ಲ ದಿಕ್ಪಾಲರಿಗೆ ಮದುವೆ ಮಾಡಿಕೊಟ್ಟನು. ಆ ಹತ್ತು ಕನ್ಯೆಯರಲ್ಲಿ ಒಬ್ಬಳನ್ನು ಇಂದ್ರನಿಗೂ, ಇನ್ನೊಬ್ಬಳನ್ನೂ ಅಗ್ನಿಗೂ, ಮದುವೆ ಮಾಡಿಕೊಟ್ಟನು. ಇದರಂತೆ ಉಳಿದ ಕನ್ಯೆಯರನ್ನು ಯಮ, ನಿರುತಿ, ವರುಣ, ವಾಯು, ಕುಬೇರ, ಮಹಾದೇವ ಮುಂತಾದವರಿಗೆ ಕೊಟ್ಟನು. ಬ್ರಹ್ಮದೇವರು ಎಲ್ಲ ಕನ್ಯೆಯರನ್ನು ಈ ಲೋಕಪಾಲಕರಿಗೆ ಮದುವೆ ಮಾಡಿಕೊಟ್ಟು ಈ ದೆಶೆಪೆಣ್ಣುಗಳಿಗೆದಶಮೀತಿಥಿಯನ್ನು ಕೊಟ್ಟನು. ಆದುದರಿಂದ ದಶಮೀತಿಥಿಯು ಅವರಿಗೆ ಅತ್ಯಂತ ಪ್ರೀತಿಯದಾಯಿತು. ಈ ದಶಮೀ ತಿಥಿಯಲ್ಲಿ ಕೇವಲ ಮೊಸರನ್ನು ತಿಂದು ಯಾರು ಪೂಜೆಮಾಡುವರೋ ಅವರ ಪಾಪಗಳನ್ನು ದಿಗ್ವನಿತೆಯರು ಪರಿಹಾರ ಮಾಡುತ್ತಾರೆ. ಈ ದಿಕ್ಕುಗಳ ಜನ್ಮದ ಕತೆಯನ್ನು ನೇಮನಿಷ್ಠೆಯಿಂದ ಹೇಳುವವರೂ ಕೇಳುವವರೂ ಬ್ರಹ್ಮಲೋಕದಲ್ಲಿ ಮನ್ನಣೆಹೊಂದುವರು.

*ವರಾಹ ಪುರಾಣದಲ್ಲಿ ಇಪ್ಪತ್ತೊಂಬತ್ತನೇ ಅಧ್ಯಾಯ ಮುಗಿದುದು*

—o—

## ಕುಬೇರನ ಉತ್ಪತ್ತಿ

## ಅಧ್ಯಾಯ - ೩೦

**ಮಹಾತಪ :-** ಧನಪತಿಯಾದ ಕುಬೇರನ ಉತ್ಪತ್ತಿಯ ಸಮಾಚಾರವನ್ನು ಹೇಳುತ್ತೇನೆ ಕೇಳು. ಪರಮಾತ್ಮನ ಶರೀರದಿಂದ ಉದ್ಭೂತವಾದ ವಾಯುದೇವನೇ ಲೋಕ ಪ್ರಯೋಜನಕ್ಕಾಗಿ ಕುಬೇರನ ರೂಪವನ್ನು ಧರಿಸಿದನು.

ಸೃಷ್ಟಿಯ ಆದಿ ಕಾಲದಲ್ಲಿ ಸರ್ಜನೋನ್ಮುಖನಾದ ಬ್ರಹ್ಮದೇವನ ಮುಖದಿಂದ ವಾಯುವು ಹೊರಟಿತು. ಕ್ರೂರವಾಗಿ ಮಳಲನ್ನು ಎರಚುತ್ತಿರುವ ಈ ಗಾಳಿಯನ್ನು ತಡೆದು ಬ್ರಹ್ಮನು ''ನೀನು ದೇಹಧಾರಿಯಾಗು. ಶಾಂತನಾಗು. ದೇವತೆಗಳೆಲ್ಲರ ದ್ರವ್ಯ ಫಲಗಳನ್ನು ನೀನು ರಕ್ಷಿಸುವುದರಿಂದ ನಿನಗೆ 'ಧನಪತಿ' ಎಂದು ಹೆಸರು ಬರುವುದು'' ಎಂದು ಹೇಳಿದನು. ಮತ್ತು ಸಂತುಷ್ಟನಾದ ಬ್ರಹ್ಮದೇವರು ಆ ಧನಪತಿಗೆ ಏಕಾದಶೀ ತಿಥಿಯನ್ನು ಕೊಟ್ಟನು.

ಈ ಏಕಾದಶಿ ತಿಥಿಯಲ್ಲಿ ಬೆಂಕಿಯಲ್ಲಿ ಬೇಯಿಸಿದ ಪದಾರ್ಥಗಳನ್ನು ತಿನ್ನದೇ ಉಪವಾಸವಿದ್ದು ಶುಚಿರ್ಭೂತರಾಗಿ ಹರಿಯನ್ನು ಆರಾಧಿಸುವವರಿಗೆ ಈ ಕುಬೇರನು ಸಂತುಷ್ಟನಾಗಿ ಐಶ್ವರ್ಯವನ್ನೂ ಇಷ್ಟಾರ್ಥವನ್ನೂ ಕೊಡುತ್ತಾನೆ.

*ವರಾಹ ಪುರಾಣದಲ್ಲಿ ಮೂವತ್ತನೇ ಅಧ್ಯಾಯ ಮುಗಿದುದು.*



## ದಿಕ್ಕುಗಳ ಉತ್ಪತ್ತಿ

ಅಧ್ಯಾಯ - ೨೯

**ಮಹಾತಪ :-** ರಾಜನ್, ಬ್ರಹ್ಮದೇವರ ಕಿವಿಗಳಿಂದ ದಿಕ್ಕುಗಳು ಜನಿಸಿದ ಬಳಿಕ ಅವುಗಳ ಕತೆಯನ್ನು ಹೇಳುತ್ತೇನೆ ಕೇಳು. ಬ್ರಹ್ಮದೇವರು ಸೃಷ್ಟಿಯನ್ನು ಮಾಡಿದ ಬಳಿಕ ಪ್ರಥಮ ಸೃಷ್ಟಿಯಲ್ಲಿ ಅನೇಕ ಪ್ರಜೆಗಳನ್ನು ಸೃಷ್ಟಿ ಮಾಡಿದರು. ಅನಂತರ ಅವರಿಗೆ ಒಂದು ದೊಡ್ಡ ಚಿಂತೆಯಾಯಿತು. ''ನಾನು ಸೃಜಿಸಿದ ಈ ಎಲ್ಲ ಪ್ರಜೆಗಳನ್ನು ಯಾರು ಧರಿಸುವರು ? ಇವೆಲ್ಲರೂ ಎಲ್ಲಿ ಇರಬೇಕು ?'' ಹೀಗೆ ಬ್ರಹ್ಮನು ಆಲೋಚಿಸಿರುತ್ತಿರುವಾಗಲೇ ಅವನ ಕಿವಿಗಳಿಂದ ಅತ್ಯಂತ ತೇಜಸ್ವಿನಿಯಾದ ಹತ್ತು ಜನ ಕನ್ಯೆಯರು ಜನಿಸಿದರು. ಪೂರ್ವಾ, ದಕ್ಷಿಣಾ, ಪಶ್ಚಿಮಾ, ಉತ್ತರಾ, ಊರ್ಧ್ವಾ, ಅಧರಾ ಎಂಬ ಆರು ಜನ ಕನ್ಯಾಮಣಿಗಳು ಅವರಲ್ಲಿ ಮುಖ್ಯರಾಗಿದ್ದರು. ಅವರೆಲ್ಲರಲ್ಲಿ ಪೂರ್ವಾ, ದಕ್ಷಿಣಾ, ಪಶ್ಚಿಮಾ, ಉತ್ತರಾ ಈ ನಾಲ್ಕು ಜನ ಕನ್ಯೆಯರು ಪರಮ ಮಂಗಳಕಾರಕರಾಗಿದ್ದರು. ಈ ಚತುಃಕನ್ಯೆಯರ ಚೆಲುವು ಗಾಂಭೀರ್ಯಗಳು ಅಸಾಮಾನ್ಯಗಳಾಗಿದ್ದವು. ಅವರು ತಮ್ಮನ್ನು ನಿರ್ಮಿಸಿದ ಬ್ರಹ್ಮದೇವರಿಗೆ ಪ್ರೀತಿಯಿಂದ ಕೇಳಿಕೊಂಡರು.

''ದೇವಾದೇವಾ, ನಮಗೆಲ್ಲ ಇರಲು ಅವಕಾಶವನ್ನು ಮಾಡಿಕೊಡು. ನಮಗೆ ನಮ್ಮ ರೂಪ-ಗುಣಕ್ಕೆ ತಕ್ಕಂಥ ಒಳ್ಳೇ ಪತಿಗಳು ದೊರಕುವಂತೆ ಮಾಡು. ಹಾಗೂ ನಾವು ನಮ್ಮ ಪ್ರಿಯಪತಿಗಳೊಂದಿಗೆ ಸಂತೋಷದಿಂದ ನಕ್ಕುನಲಿದಾಡುವಂತೆ ಸ್ಥಾನಮಾನಗಳನ್ನು ಕಲ್ಪಿಸಿಕೊಡು.'' ಅವರ ಬಿನ್ನಹವನ್ನು ಕೇಳಿ ಬ್ರಹ್ಮದೇವರು ಹೀಗೆ ಹೇಳಿದರು.

''ಸುಂದರಿಯರೇ, ಈ ಬ್ರಹ್ಮಾಂಡವೇ ಮೂರುಕೋಟಿ ಯೋಜನ ವಿಸ್ತಾರವಾಗಿದೆ. ಇದರಲ್ಲಿ ನೀವು ಬೇಕಾದಲ್ಲಿ ನಿಮ್ಮ ಇಚ್ಛಾನುಸಾರವಾಗಿ ವಾಸವನ್ನು ಮಾಡಬಹುದು. ನಿಮಗೆ ಅನುರೂಪರಾದ ಪತಿಗಳನ್ನೂ ನಿರ್ಮಿಸಿ ಕೊಡುತ್ತೇನೆ. ನಿಮಗೆ ಸರಿಕಂಡ ದೇಶಗಳಿಗೆನೀವುಹೋಗಬಹುದು'' ಬ್ರಹ್ಮನ ಆಜ್ಞೆಯಂತೆ ಆ ಎಲ್ಲ ಕನ್ಯಾಮಣಿಗಳು ತಮ್ಮ ಮನಬಂದಂತೆ ನಡೆದರು. ಅನಂತರ ಬ್ರಹ್ಮನು ಮಹಾಬಲಿಷ್ಠರಾದ ಲೋಕಪಾಲಕರನ್ನು ಸೃಷ್ಟಿ ಮಾಡಿದನು. ಬಳಿಕ ಕೂಡಲೇ ಆ ಕನ್ಯೆಯರನ್ನು ಬರಮಾಡಿಕೊಂಡು ಅವರನ್ನೆಲ್ಲ ದಿಕ್ಪಾಲರಿಗೆ ಮದುವೆ ಮಾಡಿಕೊಟ್ಟನು. ಆ ಹತ್ತು ಕನ್ಯೆಯರಲ್ಲಿ ಒಬ್ಬಳನ್ನು ಇಂದ್ರನಿಗೂ, ಇನ್ನೊಬ್ಬಳನ್ನೂ ಅಗ್ನಿಗೂ, ಮದುವೆ ಮಾಡಿಕೊಟ್ಟನು. ಇದರಂತೆ ಉಳಿದ ಕನ್ಯೆಯರನ್ನು ಯಮ, ನಿರುತಿ, ವರುಣ, ವಾಯು, ಕುಬೇರ, ಮಹಾದೇವ ಮುಂತಾದವರಿಗೆ ಕೊಟ್ಟನು. ಬ್ರಹ್ಮದೇವರು ಎಲ್ಲ ಕನ್ಯೆಯರನ್ನು ಈ ಲೋಕಪಾಲಕರಿಗೆ ಮದುವೆ ಮಾಡಿಕೊಟ್ಟು ಈ ದೆಶೆಪೆಣ್ಣುಗಳಿಗೆದಶಮೀತಿಥಿಯನ್ನು ಕೊಟ್ಟನು. ಆದುದರಿಂದ ದಶಮೀತಿಥಿಯು ಅವರಿಗೆ ಅತ್ಯಂತ ಪ್ರೀತಿಯದಾಯಿತು. ಈ ದಶಮೀ ತಿಥಿಯಲ್ಲಿ ಕೇವಲ ಮೊಸರನ್ನು ತಿಂದು ಯಾರು ಪೂಜೆ ಮಾಡುವವರೋ ಅವರ ಪಾಪಗಳನ್ನು ದಿಗ್ವನಿತೆಯರು ಪರಿಹಾರ ಮಾಡುತ್ತಾರೆ. ಈ ದಿಕ್ಕುಗಳ ಜನ್ಮದ ಕತೆಯನ್ನು ನೇಮನಿಷ್ಠೆಯಿಂದ ಹೇಳುವವರೂ ಕೇಳುವವರೂ ಬ್ರಹ್ಮಲೋಕದಲ್ಲಿ ಮನ್ನಣೆಹೊಂದುವರು.

*ವರಾಹ ಪುರಾಣದಲ್ಲಿ ಇಪ್ಪತ್ತೊಂಬತ್ತನೇ ಅಧ್ಯಾಯ ಮುಗಿದುದು*

—o—

## ಕುಬೇರನ ಉತ್ಪತ್ತಿ

## ಅಧ್ಯಾಯ - ೩೦

**ಮಹಾತಪ :-** ಧನಪತಿಯಾದ ಕುಬೇರನ ಉತ್ಪತ್ತಿಯ ಸಮಾಚಾರವನ್ನು ಹೇಳುತ್ತೇನೆ ಕೇಳು. ಪರಮಾತ್ಮನ ಶರೀರದಿಂದ ಉದ್ಭೂತವಾದ ವಾಯುದೇವನೇ ಲೋಕ ಪ್ರಯೋಜನಕ್ಕಾಗಿ ಕುಬೇರನ ರೂಪವನ್ನು ಧರಿಸಿದನು.

ಸೃಷ್ಟಿಯ ಆದಿ ಕಾಲದಲ್ಲಿ ಸರ್ಜನೋನ್ಮುಖನಾದ ಬ್ರಹ್ಮದೇವನ ಮುಖದಿಂದ ವಾಯುವು ಹೊರಟಿತು. ಕ್ರೂರವಾಗಿ ಮಳಲನ್ನು ಎರಚುತ್ತಿರುವ ಈ ಗಾಳಿಯನ್ನು ತಡೆದು ಬ್ರಹ್ಮನು ''ನೀನು ದೇಹಧಾರಿಯಾಗು. ಶಾಂತನಾಗು. ದೇವತೆಗಳೆಲ್ಲರ ದ್ರವ್ಯ ಫಲಗಳನ್ನು ನೀನು ರಕ್ಷಿಸುವುದರಿಂದ ನಿನಗೆ 'ಧನಪತಿ' ಎಂದು ಹೆಸರು ಬರುವುದು'' ಎಂದು ಹೇಳಿದನು. ಮತ್ತು ಸಂತುಷ್ಟನಾದ ಬ್ರಹ್ಮದೇವರು ಆ ಧನಪತಿಗೆ ಏಕಾದಶೀ ತಿಥಿಯನ್ನು ಕೊಟ್ಟನು.

ಈ ಏಕಾದಶಿ ತಿಥಿಯಲ್ಲಿ ಬೆಂಕಿಯಲ್ಲಿ ಬೇಯಿಸಿದ ಪದಾರ್ಥಗಳನ್ನು ತಿನ್ನದೇ ಉಪವಾಸವಿದ್ದು ಶುಚಿರ್ಭೂತರಾಗಿ ಹರಿಯನ್ನು ಆರಾಧಿಸುವವರಿಗೆ ಈ ಕುಬೇರನು ಸಂತುಷ್ಟನಾಗಿ ಐಶ್ವರ್ಯವನ್ನೂ ಇಷ್ಟಾರ್ಥವನ್ನೂ ಕೊಡುತ್ತಾನೆ.

*ವರಾಹ ಪುರಾಣದಲ್ಲಿ ಮೂವತ್ತನೇ ಅಧ್ಯಾಯ ಮುಗಿದುದು.*



ಲೋಕರಕ್ಷಣೆಯ ಉದ್ದೇಶದಿಂದ ಜ್ಞಾನರೂಪಿಯಾದ ಸಾಕ್ಷಾತ್ ಶ್ರೀ ವಿಷ್ಣುವೇ ಮನುರೂಪದಿಂದ ಉದಿಸಿದನು. ಎಲ್ಲರಿಗಿಂತಲೂ ಶ್ರೇಷ್ಠನಾದ ಶ್ರೀ ಮನ್ನಾರಾಯಣನು ಸೃಷ್ಟಿಯ ಆದಿಕಾಲದಲ್ಲಿ ಹೀಗೆ ಆಲೋಚನೆಯನ್ನು ಮಾಡಿದನು.

''ನಾನು ಸೃಷ್ಟಿ ಮಾಡಿದ ಈ ಜಗತ್ತನ್ನೆಲ್ಲ ನಾನೇ ಪಾಲನೆ ಮಾಡಬೇಕು. ನನ್ನ ಅಂಶ ಸಂಭೂತವಾದ ಯಾವದಾದರೂ ಒಂದು ವ್ಯಕ್ತಿ ವಿಶೇಷವಿಲ್ಲದೇ ಕರ್ಮಕಾಂಡವನ್ನು ಸರಿಯಾಗಿ ಪ್ರಚಾರ ಮಾಡುವುದು ಸಾಧ್ಯವಿಲ್ಲ'' ಎಂದು ಯೋಚಿಸಿ ಈ ಪ್ರಪಂಚವನ್ನು ಪಾಲನ ಮಾಡತಕ್ಕ ತನ್ನ ಸನ್ನಿಧಾನೋಪೇತನಾದ ಮನುವಿನ ಶರೀರವನ್ನು ಸೃಷ್ಟಿ ಮಾಡಿದನು. ಹಿಂದೆ ತನ್ನಿಂದ ಹುಟ್ಟಿದ ಇಂದ್ರಿಯಾಭಿಮಾನಿ ದೇವತೆಗಳಿಗೆಲ್ಲ ತಾನು ವರ ಕೊಟ್ಟಿದ್ದನ್ನು ನೆನೆದು ತನ್ನದೇ ಒಂದು ಜಗತ್ಪಾಲಕರೂಪನಾದ ಈ ಮನುವಿಗೂ ವರ ಕೊಟ್ಟನು.

''ಮೂರು ಲೋಕಗಳನ್ನು ಪಾಲನೆ ಮಾಡಲಿಕ್ಕೆ ಅವತರಿಸಿದ ಮನುರಾಜನೇ, ನೀನು ಸರ್ವಜ್ಞನೂ ಸರ್ವಕರ್ತನೂ ಆದ ಸಾಕ್ಷಾತ್ ಶ್ರೀ ವಿಷ್ಣುವಿನ ಒಂದು ರೂಪನೇ ಆದುದರಿಂದ ಸರ್ವಜನರಿಂದಲೂ ವಂದ್ಯನಾಗುವೆ. ನೀನು ಯಾವಾಗಲೂ ದೇವತಾಕಾರ್ಯವನ್ನು ಮಾಡು. ನಿನಗೆ ಸರ್ವಜ್ಞತ್ವವೂ ಉಪಪನ್ನ ವಾಗಿರುವುದು.'' ಆಗ ವಿಷ್ಣುರೂಪಿಯಾದ ಆ ಮನುವು ಈ ಮೊದಲು ಆಗಿ ಹೋದ ಸೃಷ್ಟಿ ಪ್ರಾದುರ್ಭಾವದ ಸಮಾಚಾರವನ್ನು ನೆನೆದನು. ಅನಾದಿ ಕರ್ಮವಶರಾದ ಜೀವರಾಶಿಗಳನ್ನೆಲ್ಲ ತನ್ನ ಜಠರದಲ್ಲಿರಿಸಿಕೊಂಡು ಜ್ಞಾನರೂಪಿಯಾದ ಭಗವಾನ್ ನಾರಾಯಣನು ಯೋಗನಿದ್ರೆಯಲ್ಲಿ ಪವಡಿಸಿದನು. ಅವನ ಉದರದಿಂದ ದೊಡ್ಡದಾದ ಒಂದು ಪದ್ಮವು ಉತ್ಪನ್ನವಾಯಿತು. ಆ ಪದ್ಮವು ಲೋಕಮಯವಾಗಿದ್ದಿತು. ಸಪ್ತ ದ್ವೀಪಗಳಿಂದಲೂ, ಸಪ್ತ ಕುಲಪರ್ವತಗಳಿಂದಲೂ ಒಡಗೂಡಿ ಪಾತಾಳದವರೆಗೆ ಹಬ್ಬಿದ ಪೃಥ್ವೀ ಮಂಡಲವು ಅದರಿಂದಲೇ ರೂಪಗೊಂಡಿತು. ಅದರ ಕರ್ಣಿಕಾರಸ್ಥಾನದಲ್ಲಿ ಮೇರು ಪರ್ವತವಿದ್ದಿತು. ಅದರ ನಡುವೆ ಬ್ರಹ್ಮದೇವರ ಉದಯವಾಯಿತು. ಹೀಗೆ ಶ್ರೀ ವಿಷ್ಣುವಿನ ನಾಭೀಪದ್ಮದಲ್ಲಿ ಆದ ಲೋಕ ಸೃಷ್ಟಿಯನ್ನು ಕಂಡು ವಾಯುದೇವರಿಗೆ ಬಹಳ ಸಂತೋಷವಾಯಿತು. ಆ ಭಗವಂತನ ಶರೀರದಿಂದಲೇ ಉತ್ಪನ್ನನಾದ ಆ ವಾಯು ಕೈ ಮುಗಿದು ಆ ಪರಮಾತ್ಮನನ್ನು ಬಿನ್ನವಿಸಿಕೊಂಡನು.

''ನಾಶರಹಿತನಾದ ಭಗವಂತನೇ, ಅಜ್ಞಾನವನ್ನು ಗೆಲ್ಲುವ ಜ್ಞಾನರೂಪವಾದ ಈ ಶಂಖವನ್ನು ನೀನು ನಿನ್ನ ಕೈಯಲ್ಲಿ ಧರಿಸು. ಮತ್ತೂ ಅವಿದ್ಯೆಯನ್ನು ಛೇದಿಸಲಿಕ್ಕಾಗಿ ನಿನ್ನ ಕೈಯಲ್ಲಿ ಈ ಖಡ್ಗವೂ ಇರಲಿ. ಹಾಗೂ ವೈರಿ ಭಯಂಕರವಾದ ಕಾಲರೂಪಿಯಾದ ಈ ಚಕ್ರವನ್ನೂ ನೀನು ಧರಿಸು. ಜಗನ್ ಮಾತೆಯೂ ವನಮಾಲಾರೂಪದಿಂದ ನಿನ್ನ ಕಂಠವನ್ನು ಅಲಂಕರಿಸಲಿ. ಚಂದ್ರ ಸೂರ್ಯರು ಶ್ರೀವತ್ಸ ಕೌಸ್ತುಭರೂಪದಿಂದ ನಿನ್ನ ಹೃದಯವನ್ನು ಅಲಂಕರಿಸಿ ಕೊಂಡು ಇರಲಿ. ನಿನ್ನ ವಾಹನವಾದ ವಾಯುದೇವನೇ ಒಂದು ರೂಪದಿಂದ ಗರುಡನೆಂದು ಎನಿಸಿಕೊಳ್ಳಲಿ. ಸರ್ವದಾ ನಿನ್ನನ್ನೇ ಆಶ್ರಯಿಸಿದ

ನಿನ್ನ ಮಡದಿಯಾದ ಈ ಲಕ್ಷ್ಮೀದೇವಿಯು ಜನರ ಪ್ರಯೋಜನಕ್ಕಾಗಿ ಎಲ್ಲ ಕಡೆಗೂ ಸಂಚರಿಸಲಿ. ನಿನಗೆ ದ್ವಾದಶೀ ತಿಥಿಯು ಮೀಸಲಾಗಿರಲಿ. ಈ ದ್ವಾದಶಿಯ ದಿನ ತುಪ್ಪವನ್ನು ತಿಂದು ನಿನ್ನನ್ನು ಆರಾಧಿಸುವರ ಕಾಮನೆಗಳೆಲ್ಲವೂ ಪೂರ್ಣವಾಗಲಿ. ಪುರುಷನಾಗಲಿ, ಸ್ತ್ರೀಯಾಗಲಿ ಈ ದ್ವಾದಶಿಯ ದಿನ ದೇವರಿಗೆ ತುಪ್ಪವನ್ನು ನಿವೇದಿಸಿ ತುಪ್ಪದ ದೀಪವನ್ನು ಹಚ್ಚಿ ಇಟ್ಟು, ನಿನ್ನನ್ನು ಪೂಜಿಸಿ, ನಿನಗೆ ನಿವೇದಿತವಾದ ಆ ತುಪ್ಪವನ್ನು ಭಕ್ಷಣ ಮಾಡಿ ದ್ವಾದಶೀ ವ್ರತವನ್ನು ಪಾಲನೆ ಮಾಡಿದರೆ ಅವರಿಗೆ ಸ್ವರ್ಗಾದಿ ದಿವ್ಯಲೋಕಗಳು ಪ್ರಾಪ್ತವಾಗಲಿ. ಯುಗಯುಗಗಳಲ್ಲಿ ಜೀವರಾಶಿಗಳಿಗೆ ಬಗೆಬಗೆಯ ಶರೀರಗಳನ್ನು ಕೊಟ್ಟು ನೀನೇ ಸೃಷ್ಟಿಯನ್ನು ಮಾಡುತ್ತಿ. ಸೃಷ್ಟಿಗೆ ಬಂದ ಆ ಎಲ್ಲಾ ಜೀವಿಗಳನ್ನು ನೀನು ಸಂರಕ್ಷಿಸುವೆ. ಅಂತ್ಯ ಕಾಲದಲ್ಲಿ ಅವರೆಲ್ಲರನ್ನು ನೀನೇ ಸಂಹಾರ ಮಾಡುವೆ'' ಎಂದು ವಾಯುದೇವರು ಭಗವಂತನನ್ನು ಬಗೆಬಗೆಯಾಗಿ ಕೊಂಡಾಡಿದರು. ಮತ್ತು ಎಲ್ಲ ದೇವದಾನವರನ್ನು ಕುರಿತು ಆ ಭಗವಂತನ ಮಹಾಮಹಿಮೆಯನ್ನು ಬಣ್ಣಿಸಿ ತಿಳಿಸಿ ಹೇಳಿ ಎಲ್ಲರಿಗೂ ಹೀಗೆ ಉಪದೇಶವಿತ್ತರು.

''ದೇವ ದಾನವರೇ, ವೇದವೇದಾಂತಗಳಲ್ಲಿ ಪ್ರತಿಪಾದ್ಯನಾದ ಪುರುಷನೆಂದರೆ ಈ ವಿಷ್ಣುವೇ ಆಗಿರುತ್ತಾನೆ. ಇವನು ಪ್ರತಿಯೊಂದು ಯುಗದಲ್ಲಿಯೂ ಜಗದ್‌ರಕ್ಷಣೆಗಾಗಿ ಅನೇಕ ಶರೀರಗಳನ್ನು ತಾನೂ ಧರಿಸುತ್ತಾನೆ. ಲೋಕಪಾಲನವನ್ನೂ ಮಾಡುತ್ತಾನೆ. ಕೊನೆಗೆ ಆ ರೂಪಗಳನ್ನು ಉಪಸಂಹರಿಸುತ್ತಾನೆ. ಲೋಕೋದ್ಧಾರಕ್ಕಾಗಿ ಅಂಶ, ಆವೇಶ, ಅವತಾರೋಪೇತವಾದ ಮನುಷ್ಯಾದಿ ಆಕಾರಗಳುಳ್ಳ ಆ ದೇವನನ್ನು ಯಾರೂ ಇವನೊಬ್ಬ ಸಾಮಾನ್ಯ ಮಾನವ ಎಂದು ಭಾವಿಸಬಾರದು. ಹೀನ ಬುದ್ಧಿಯಿಂದ ಆ ಭಗವದ್ ರೂಪಗಳನ್ನು ಅಸಡ್ಡೆ ಮಾಡಿ ಕಡೆಗಣಿಸಕೂಡದು.''

ಈ ಪರಮ ಪವಿತ್ರವಾದ ವಿಷ್ಣುವಿನ ಅವತಾರ ರೂಪವಾದ ವೈಷ್ಣವ ಸರ್ಗವನ್ನು ಕೇಳಿದವರ ಪಾಪಗಳೆಲ್ಲವೂ ಪರಿಹಾರವಾಗುವವು. ಇವರಿಗೆ ಇಹಲೋಕದಲ್ಲಿ ಕೀರ್ತಿಯೂ ಪರಲೋಕದಲ್ಲಿ ಸದ್ಗತಿಯೂ ಪ್ರಾಪ್ತವಾಗುವುದು.''

*ವರಾಹ ಪುರಾಣದಲ್ಲಿ ಮೂವತ್ತೊಂದನೇ ಅಧ್ಯಾಯ ಮುಗಿದುದು*

—೦—



# ಧರ್ಮದ ಉತ್ಪತ್ತಿ

ಅಧ್ಯಾಯ - ೩೨

**ಮಹಾತಪ :-** ಇನ್ನು ಮೇಲೆ ಸರ್ವಶ್ರೇಷ್ಠವಾದ ಧರ್ಮದ ಉತ್ಪತ್ತಿಯನ್ನೂ ಅದರ ಮಹಿಮೆಯನ್ನೂ ಹೇಳುತ್ತೇನೆ ಕೇಳು. ಪೂರ್ವ ಕಾಲದಲ್ಲಿ ಪರಾತ್ಪರನೆಂಬ ಹೆಸರುಳ್ಳ ನಾಶರಹಿತನಾದ ಬ್ರಹ್ಮನು ಸೃಷ್ಟಿಯನ್ನು ಮಾಡಿ ಆ ಪ್ರಜೆಗಳನ್ನು ಪಾಲನ ಮಾಡುವ ವಿಚಾರದಲ್ಲಿದ್ದನು. ಪ್ರಜಾಪಾಲನದ ವಿಚಾರದಲ್ಲಿ ಆ ಬ್ರಹ್ಮನು ಇದ್ದಾಗ ಅವನ ದೇಹದ ಬಲಭಾಗದಿಂದ ಬಿಳಿಯ ಗಂಧಮಾಲೆಗಳನ್ನು ಧರಿಸಿದ ಶ್ವೇತ ಕುಂಡಲ ಧಾರಿಯಾದ ಒಬ್ಬ ಪುರುಷನು ಉತ್ಪನ್ನನಾದನು. ಅವನಿಗೆ ನಾಲ್ಕು ಕಾಲುಗಳಿದ್ದು ಎತ್ತಿನ ಆಕಾರವಿದ್ದಿತು. ವೃಷಭರೂಪಿಯಾದ ಆ ಪುರುಷನು ಸಾಕ್ಷಾತ್ ಧರ್ಮ ರೂಪಿಯಾಗಿದ್ದನು. ಆ ಧರ್ಮಪುರುಷನನ್ನು ಕಂಡು ಭಗವಂತನು ''ಸಾಧುವೇ, ನೀನು ಈ ಪ್ರಜೆಗಳನ್ನು ಪಾಲಿಸು. ನೀನು ಈ ಜಗತ್ತಿನಲ್ಲಿ ಎಲ್ಲರಿಗೂ ಹಿರಿಯನಾಗು '' ಎಂದು ಆಶೀರ್ವದಿಸಿದನು.

ಈ ಧರ್ಮವು ಕೃತಯುಗದಲ್ಲಿ ನಾಲ್ಕು ಪಾದಗಳುಳ್ಳದ್ದಾಗಿರುತ್ತದೆ. ತ್ರೇತಾಯುಗದಲ್ಲಿ ಅದಕ್ಕೆ ಮೂರು ಪಾದಗಳು, ದ್ವಾಪರಯುಗದಲ್ಲಿ ಎರಡು, ಕಲಿಯುಗದಲ್ಲಿಯಂತೂ ಧರ್ಮಕ್ಕೆ ಒಂದೇ ಪಾದ. ಆ ಏಕ ಪಾದದಿಂದಲೇ ಆ ಧರ್ಮಪುರುಷನು ಪ್ರಜೆಗಳನ್ನು ರಕ್ಷಿಸುತ್ತಾನೆ. ಆ ಧರ್ಮಪ್ರಭು, ಬ್ರಾಹ್ಮಣರಲ್ಲಿ ಆರು ಬಗೆಯಾಗಿ, ಕ್ಷತ್ರಿಯರಲ್ಲಿ ಮೂರು ಬಗೆಯಾಗಿ, ವೈಶ್ಯರಲ್ಲಿ ಎರಡು ರೀತಿಯಾಗಿ, ಶೂದ್ರರಲ್ಲಿ ಏಕಪ್ರಕಾರವಾಗಿ ಇರುವನು. ರಸಾತಲವೇ ಮೊದಲಾದ ಕೆಳಗಿನ ಲೋಕಗಳಲ್ಲಿಯೂ ಉಳಿದೆಲ್ಲ ದ್ವೀಪಗಳಲ್ಲಿಯೂ, ದೇಶಗಳಲ್ಲಿಯೂ ಆ ಧರ್ಮ ವೃಷಭವು ಗುಣ, ದ್ರವ್ಯ, ಕ್ರಿಯಾ, ಜಾತಿ ಎಂದು ನಾಲ್ಕು ಬಗೆಯಾಗಿ ಇರುವುದು. ವೇದದಲ್ಲಿ ಸಂಹಿತಾ, ಪದ, ಕ್ರಮ, ಎಂದು ಮೂರು ಶೃಂಗ (ಕೋಡು) ಗಳುಳ್ಳದ್ದಾಗಿ ಈ ಧರ್ಮರೂಪಿಯಾದ ಎತ್ತು, ವೇದದ ಮೊದಲು ಕೊನೆಯಲ್ಲಿರುವ ಓಂಕಾರಗಳೇ ಈ ಧರ್ಮ ವೃಷಭದ ಎರಡು ತಲೆಗಳಿದ್ದಂತೆ. ಉದಾತ್ತ ಅನುದಾತ್ತ ಮತ್ತು ಸ್ವರಿತ ಎಂಬ ಮೂರು ಸ್ವರಬಂಧಗಳುಳ್ಳ ಈ ಧರ್ಮಪುರುಷನಿಗೆ ಏಳು ಕೈಗಳು ಉಂಟು.

ಹಿಂದೆ ದೇವಗುರು ಬೃಹಸ್ಪತ್ಯಾಚಾರ್ಯನ ಚೆಲುವಿನ ಮಡದಿಯಾದ ತಾರೆಯನ್ನು ಅಪಹರಿಸಲು ಉಜ್ಜುಗಿಸಿದ ಚಂದ್ರನು ಈ ಧರ್ಮಕ್ಕೆ ಬಹು ದೊಡ್ಡ ಆಘಾತವನ್ನು ಮಾಡಿದನು. ಆಗ ಪೀಡಿತವಾದ ಆ ಧರ್ಮ ವೃಷಭವು ಕಾಡನ್ನು ಸೇರಿತು. ಆಗ ಎಲ್ಲ ದೇವತೆಗಳು ಧರ್ಮವಂಚಿತರಾಗಿ ಅಧಿಕಾರ ಐಶ್ವರ್ಯದ ಆಸೆಯಿಂದ ದೈತ್ಯರ ಸ್ಥಾನಮಾನಗಳನ್ನು ಆಕ್ರಮಿಸಬೇಕೆಂದು ಅಲೆದಾಡಿದರು. ಇದರಂತೆ ದೈತ್ಯರೂ ಕೂಡ ಧರ್ಮ ನಾಶವಾದ ಬಳಿಕ ಯಾವ ನಿಯಮ ನಿಬಂಧನೆಗಳಿಲ್ಲದೇ ಸ್ವಚ್ಛಂದವಾಗಿ ದೇವತೆಗಳ ನೆಲೆಗಳಲ್ಲಿ ಅಲೆದರು. ಚಂದ್ರನ ತಪ್ಪಿನಿಂದ ಕುಪಿತರಾದ ದೇವದಾನವರು ಒಂದು ಹೆಣ್ಣಿನ ಸಲುವಾಗಿ ಘೋರವಾದ ಶಸ್ತ್ರಾಸ್ತ್ರಗಳನ್ನು ಹಿರಿದು ಹೋರಾಡಿದರು. ಹೀಗೆ ದೈತ್ಯರೊಡನೆ ಕೋಪಾಟೋಪದಿಂದ ಕಾದಾಡುವ ದೇವತೆಗಳನ್ನು ಕಂಡು ನಾರದರು ಸಂತಸಗೊಂಡು ಬ್ರಹ್ಮನ ಬಳಿಗೆ ನಡೆದರು. ಮತ್ತು ಅವರಿಗೆ ಈ

ದೇವದಾನವರ ಸ್ತ್ರೀ ನಿಮಿತ್ತಕವಾದ ಯುದ್ಧದ ಸಮಚಾರವನ್ನು ತಿಳಿಸಿದರು. ಸರ್ವಪ್ರಪಂಚಕ್ಕೂ ಪಿತಾಮಹನಾದ ಬ್ರಹ್ಮನು ತನ್ನ ವಾಹನವಾದ ಹಂಸವನ್ನು ಏರಿ, ಅಲ್ಲಿಗೆ ಬಂದು ಆ ಹೋರಾಟವನ್ನು ತಡೆದನು. ಮತ್ತು ನೀವು ಏತಕ್ಕಾಗಿ ಹೋರಾಡುತ್ತಲಿದ್ದೀರಿ ? ಎಂದು ಕೇಳಿದನು. ಅದಕ್ಕೆ ದೇವತೆಗಳು ಸೋಮನೇ 'ಇದೆಲ್ಲ ಕಲಹಕ್ಕೆ ಕಾರಣ', ಎಂದು ಅವನನ್ನು ತೋರಿಸಿದರು. ಆಗ ಬ್ರಹ್ಮದೇವರು ಎಲ್ಲ ದೇವಾಸುರರೊಂದಿಗೆ ಚಂದ್ರನ ನೀತಿಗೆಟ್ಟ ನಡತೆಯಿಂದ ಅಧರ್ಮವೂ ಎಲ್ಲ ಕಡೆಗೂ ಹಬ್ಬಿ ಕೊಬ್ಬಿದ್ದರಿಂದ ಧರ್ಮವು ಕಾಡಿನ ಪಾಲಾಗಿದೆ ಎಂದು ತಿಳಿದು ಅಲ್ಲಿಗೆ ನಡೆದರು. ಕಾಡಿನಲ್ಲಿ ನಾಲ್ಕು ಕಾಲುಗಳುಳ್ಳ ಎತ್ತಿನ ರೂಪವುಳ್ಳ ಧರ್ಮವು ಮಂದಗತಿಯಿಂದ ಹರಿದಾಡುತ್ತಲಿದ್ದಿತು. ಧರ್ಮದ ಈ ದುರವಸ್ಥೆಯನ್ನು ಕಂಡು ಬ್ರಹ್ಮನು ಮಮ್ಮಲನೆ ಮರುಗಿ ದೇವತೆಗಳನ್ನು ಕುರಿತು ನುಡಿದನು.

''ದೇವ ದಾನವರೇ, ಗುರುವಿನ ಮಡದಿಯನ್ನು ಅಪಹರಿಸಲು ಇಚ್ಛಿಸಿದ ಆ ಚಂದ್ರನು ನೀತಿಗೆಟ್ಟಿದ್ದಾನೆ. ಅದರಿಂದ ನನ್ನ ಹಿರಿಯಮಗನಾದ ಧರ್ಮ ಮುನಿಯು ನೊಂದು ನವೆದು ಹೋಗಿದ್ದಾನೆ. ನೀವೆಲ್ಲರೂ ಅವನನ್ನು ಸ್ತುತಿಸಿ ಸಂತೋಷಪಡಿಸಿರಿ.'' ಆಗ ದೇವತೆಗಳು ಆ ಸನಾತನ ಧರ್ಮವನ್ನು ಸ್ತುತಿಸಿ ಕೊಂಡಾಡಿದರು -

''ಸ್ವರ್ಗದ ಮಾರ್ಗವನ್ನೂ, ಕರ್ಮದ ದಾರಿಯನ್ನೂ ತೋರಿಸಿ ಎಲ್ಲರನ್ನೂ ಒಳ್ಳೇ ಗತಿಗಾಣಿಸುವ ಧರ್ಮದೇವತೆಗೆ ನಮಸ್ಕಾರ. ನೀನಿಲ್ಲದಿದ್ದರೆ ಜಗತ್ತೆಲ್ಲವೂ ಉನ್ಮಾರ್ಗಗಾಮಿಯಾಗುವುದು. ಎಲ್ಲರಿಗೂ ಸನ್ಮಾರ್ಗವನ್ನು ತೋರುವ, ಬೆಳಕು ಬೀರುವ ನೀನೇ ನಮಗೆ ಪರಗತಿ ವರಮತಿಗಳನ್ನು ಇತ್ತು ಕಾಪಾಡುವವ. ಧರ್ಮಾತ್ಮ, ನಿನಗೆ ನಮ್ಮ ವಂದನೆ ''. ದೇವತೆಗಳ ಈ ಸ್ತೋತ್ರದಿಂದ ವೃಷಭ ರೂಪಿಯಾದ ಆ ಧರ್ಮದೇವನು ಸಂತುಷ್ಟನಾಗಿ ಪ್ರಸನ್ನ ಮನಸ್ಸಿನಿಂದ ಮಾತುಕತೆಯಾಡಿದನು. ಮತ್ತು ಪ್ರಸನ್ನ ದೃಷ್ಟಿಯಿಂದ ದೇವಾಸುರರ ಕಡೆಗೆ ನೋಡಿದನು. ಧರ್ಮದೇವನ ದೃಷ್ಟಿಕ್ಷೇಪ ಮಾತ್ರದಿಂದಲೇ ದೇವದಾನವರ ದುರ್ಮತಿ, ದುರ್ವಿಚಾರಗಳೆಲ್ಲವೂ ಅಳಿದು ಅವರಲ್ಲಿ ಸದ್ಬುದ್ಧಿಗಳು ಉದಿಸಿದವು. ಅವರ ಮೋಹ ಅಜ್ಞಾನಗಳೆಲ್ಲ ತೊಲಗಿದವು. ಎಲ್ಲರೂ ಧಾರ್ಮಿಕರಾದರು. ಇದನ್ನು ಕಂಡು ಸುಪ್ರೀತರಾದ ಬ್ರಹ್ಮದೇವರು ವೃಷಭಾಕಾರದ ಆ ಧರ್ಮದೇವತೆಗೆ ನುಡಿದರು -

''ಧರ್ಮದೇವಾ, ಇಂದಿನಿಂದ ತ್ರಯೋದಶಿ ತಿಥಿಯು ನಿನಗೆ ಮೀಸಲಾಗಿರಲಿ. ಈ ತ್ರಯೋದಶಿಯ ತಿಥಿಯಂದು ಉಪವಾಸ ಮಾಡಿ ಧರ್ಮಕಾರ್ಯ ಮಾಡುವವರ ಪಾಪಗಳೆಲ್ಲವೂ ಲೋಪವಾಗುವುದು. ಧರ್ಮಪ್ರಭುವೇ, ನೀನು ಈ ಅರಣ್ಯದಲ್ಲಿ ಬಹುಕಾಲದವರೆಗೆ ಇದ್ದುದರಿಂದ ಇದಕ್ಕೆ ಧರ್ಮಾರಣ್ಯ ಎಂದು ಹೆಸರು ಬರುವುದು. ನೀನು ಕೃತಯುಗದಲ್ಲಿ ನಾಲ್ಕು ಪಾದಗಳಿಂದಲೂ, ತ್ರೇತಾಯುಗದಲ್ಲಿ ಮೂರು ಪಾದಗಳಿಂದಲೂ, ದ್ವಾಪರ ಯುಗದಲ್ಲಿ ಎರಡು ಕಾಲುಗಳಿಂದಲೂ ಕಲಿಯುಗದಲ್ಲಿ ಒಂಟಿ ಕಾಲನಿಂದಲೂ ಅವಸ್ಥಿತನಾಗಿ ಈ ಕರ್ಮ ಭೂಮಿಯಲ್ಲಿಯೂ ಸ್ವರ್ಗಾದಿ ಇತರ ಭೋಗ ಭೂಮಿಗಳಲ್ಲಿಯೂ ಇದ್ದುಕೊಂಡು ಪ್ರಪಂಚ ಪಾಲನೆ ಮಾಡು ''.

ಬ್ರಹ್ಮದೇವರು ಹೀಗೆ ಧರ್ಮಕ್ಕೆ ಆದೇಶವಿತ್ತು ಅಲ್ಲಿಂದ ಅದೃಶ್ಯರಾದರು. ದೇವತೆಗಳೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಈ ಧರ್ಮದ ಕತೆಯನ್ನು ಶ್ರಾದ್ಧದಲ್ಲಿ ಪಿತೃಗಳಿಗೆ ಹೇಳಿದವನೂ ಮತ್ತು ತ್ರಯೋದಶಿ ದಿನದಂದು ಪಾಯಸವನ್ನು ಮಾಡಿ ಪಿತೃಗಳಿಗೆ ಅರ್ಪಿಸುವವನೂ ಮರಣಾನಂತರ ಸ್ವರ್ಗವನ್ನು ಪಡೆದು ದೇವತಾ ಸಾಮೀಪ್ಯವನ್ನು ಹೊಂದುವನು.

*ವರಾಹ ಪುರಾಣದಲ್ಲಿ ಮೂವತ್ತೆರಡನೇ ಅಧ್ಯಾಯ ಮುಗಿದುದು.*



## ರುದ್ರೋತ್ಪತ್ತಿ

**ಅಧ್ಯಾಯ - ೩೩**

ಮೊಟ್ಟ ಮೊದಲು ಬ್ರಹ್ಮನ ಕೋಪದಿಂದ ರುದ್ರನು ಉದಯಿಸಿದನು. ಬ್ರಹ್ಮನು ಪ್ರಜೆಗಳನ್ನು ನಿರ್ಮಿಸು ಎಂದು ರುದ್ರನಿಗೆ ಅಪ್ಪಣೆಯನ್ನು ಮಾಡಿದನು. ಆದರೆ ತಪಸ್ಸಿದ್ಧಿಯನ್ನು ಪಡೆಯದೇ ಸೃಷ್ಟಿಯನ್ನು ಮಾಡುವದು ಸಾಧ್ಯವಿಲ್ಲವೆಂದು ಭಾವಿಸಿ ರುದ್ರನು ನೀರಿನಲ್ಲಿ ಮುಳುಗಿ ತಪಸ್ಸನ್ನು ಆಚರಿಸತೊಡಗಿದನು. ಇತ್ತ ಬ್ರಹ್ಮದೇವನು ರುದ್ರನಿಂದ ಸೃಷ್ಟಿಕಾರ್ಯವು ಪ್ರವರ್ತಿಸದಿದ್ದದ್ದನ್ನು ನೋಡಿ ದಕ್ಷನೇ ಮೊದಲಾದ ಪ್ರಜಾಪತಿಗಳನ್ನು ನಿರ್ಮಾಣ ಮಾಡಿದನು. ಅದರಿಂದ ಪ್ರಪಂಚದಲ್ಲಿ ಸೃಷ್ಟಿ ಕಾರ್ಯವು ಸಮೃದ್ಧವಾಗಿ ನಡೆಯಿತು. ಜಗತೆಲ್ಲವೂ ಸಮೃದ್ಧವಾದ ಪ್ರಾಣ ಪ್ರಜಾಕೋಟಿಯಿಂದ ತುಂಬಿ ತುಳುಕತೊಡಗಿತು. ಆನಂತರ ಕೆಲವು ಸಮಯದ ಬಳಿಕ ರುದ್ರದೇವನು ಜಲಸಮಾಧಿಯತಪೋಯೋಗದಿಂದಸಿದ್ಧಿ ಪಡೆದು ನೀರಿನಿಂದಎದ್ದು ಬಂದನು. ಅವನು ಪ್ರಪಂಚದಲ್ಲಿ ಕಾಲಿರಿಸಿದಾಗಸಂಸಾರದತುಂಬಪ್ರಾಣಿಗಳೇಪ್ರಾಣಿಗಳುಕಂಡುಬಂದವು.

ತಪಸ್ಸಿದ್ಧಿಯನ್ನು ಪಡೆದು ಹೊಸ ಸೃಷ್ಟಿಯನ್ನು ಮಾಡಬೇಕೆಂದು ಹುಮ್ಮಸನಿಂದ ಬಂದ ರುದ್ರದೇವನಿಗೆ ನಿರಾಶೆಯಾಯಿತು. ಸಿಟ್ಟೂ ಬಂದಿತು. ತಾನು ಮಾಡಬೇಕೆಂದಿರುವ ಸೃಷ್ಟಿ ಕಾರ್ಯವನ್ನು ದಕ್ಷನೇ ಮೊದಲನಾದ ಪ್ರಜಾಪತಿಗಳು ದಕ್ಷತೆಯಿಂದ ಮಾಡಿ ಮುಗಿಸಿಬಿಟ್ಟಿದ್ದರು. ಮತ್ತೂ ಆ ಪ್ರಜಾಪತಿಗಳು ಪ್ರಾರಂಭಿಸಿದ ಯಜ್ಞಗಳಲ್ಲಿ ಶಿವನಿಗೆ ಯಾವ ಹವಿರ್ಭಾಗವನ್ನೂ ಇಟ್ಟಿರಲಿಲ್ಲ. ಒಂದೂ ಆಹುತಿಯನ್ನೂ ಕೊಟ್ಟಿರಲಿಲ್ಲ. ಇದರಿಂದ ಶಿವನ ಸಿಟ್ಟು ನೂರು ಪಟ್ಟಾಗಿ ಹತ್ತಿ ಉರಿಯಿತು. ಅತಿ ಕೋಪದಿಂದ ಅವನು ದಕ್ಷ ಪ್ರಜಾಪತಿಯ ಯಜ್ಞ ಶಾಲೆಗೆ ಹೋಗಿ ತನ್ನ ಭೂತಪ್ರೇತ ಪರಿವಾರದಿಂದ ಒಡಗೂಡಿ ಯಜ್ಞಮಂಟಪದಲ್ಲಿರುವ ದೇವತೆಗಳನ್ನು ಹೊಡೆದನು. ಋತ್ವಿಜರನ್ನು ಹಿಂಸಿಸಿದನು. ಯಜಮಾನನನ್ನು ಹೊಸೆದು ಹಾಕಿದನು.

ಮಹಾರುದ್ರನು ನಡೆಸಿದ ಈ ಅನಾಹುತ ಹಿಂಸಾಕಾಂಡವನ್ನು ಕಂಡು ಬ್ರಹ್ಮದೇವನು ಅಲ್ಲಿಗೆ ಧಾವಿಸಿ ಬಂದನು. ಮಹಾದೇವನಿಗೆ ಶಾಂತನಾಗಲು ಹೇಳಿದನು. ಸಾಂತ್ವನಗೈದನು. ಹಾಗೂ ದೇವತೆಗಳಿಗೆಲ್ಲ, ಪರಮೇಶ್ವರನಿಗೆ ನಮಸ್ಕಾರ ಮಾಡಿ ಅವನ ಪ್ರಾರ್ಥನೆಯನ್ನು ಮಾಡಬೇಕೆಂದು ಆದೇಶವಿತ್ತನು. ಶಾರದಾಪತಿಯ ಸಂದೇಶದಂತೆ ಸುರಸತ್ತಮರೆಲ್ಲರೂ ಕೂಡಿ ಆ ಮಹಾದೇವನನ್ನು ಭಕ್ತಿಯಿಂದ ಪ್ರಾರ್ಥಿಸಿದರು.

**ದಕ್ಷಯಜ್ಞವಿನಾಶಾಯ ಜಗದ್ಭಯಕರಾಯ ಚ**
**ವಿಶ್ವೇಶ್ವರಾಯ ದೇವಾಯ ಶಿವ ಶಂಭೋ ಭವಾಯ ಚ**
**ಕಪರ್ದಿನೇ ಕರಾಲಾಯ ಮಹಾದೇವಾಯ ತೇ ನಮಃ**

ಈ ರೀತಿಯಾಗಿ ದೇವತೆಗಳೆಲ್ಲರೂ ಶ್ರದ್ಧೆಯಿಂದ ಪ್ರಾರ್ಥನೆಯನ್ನು ಸಲ್ಲಿಸಲು ಶಂಕರನು ಅತ್ಯಂತ ಪ್ರಸನ್ನನಾದನು. ನಿಮಗಾಗಿ ನಾನು ಏನು ಮಾಡಬೇಕು ? ಎಂದು ದೇವತೆಗಳನ್ನು ಕೇಳಿದನು. ಅದಕ್ಕೆ ದೇವತೆಗಳು ''ಶಿವಪ್ರಭು, ನೀನು ನಮ್ಮ ಮೇಲೆ ಪ್ರಸನ್ನನಾಗಿದ್ದರೆ ವೇದಶಾಸ್ತ್ರಗಳ ದಿವ್ಯಜ್ಞಾನವು ನಮಗೆ ಆಗುವಂತೆ ಮಾಡು ಮತ್ತು ಯಜ್ಞಯಾಗಗಳ ರಹಸ್ಯವು ತಿಳಿಯುವಂತೆ ಮಾಡು '' ಎಂದು ಬೇಡಿಕೊಂಡರು.

ಆಗ ಮಹಾದೇವನು ನಕ್ಕು ನುಡಿದನು.

''ದೇವವರರೇ, ನೀವೆಲ್ಲರೂ ಪಶುಗಳಾಗಿರಿ. ನಾನು ನಿಮಗೆ ಒಡೆಯನಾಗಿ ಪಶುಪತಿಯೆನಿಸುವೆನು. ನಿಮಗೆ ಮೋಕ್ಷಕ್ಕೆ ಉಪಯುಕ್ತವಾದ ಜ್ಞಾನವನ್ನು ಉಪದೇಶಿಸುವೆನು.'' ಅದನ್ನು ಕೇಳಿ ದೇವತೆಗಳು ಪ್ರಸನ್ನ ಮನಸ್ಸಿನಿಂದ ''ಇಂದಿನಿಂದ ನೀನೇ ನಮ್ಮ ಪಶುಪತಿ'' ಎಂದು ಹೇಳಿದರು.

ಅವರ ಈ ಸಂವಾದವನ್ನು ಕೇಳಿ ಬ್ರಹ್ಮದೇವರು ರುದ್ರನಿಗೆ ''ಶಂಕರ ಪಶುಪತಿಯಾದ ನಿನಗೆ ಚತುರ್ದಶೀ ತಿಥಿಯು ಮೀಸಲಾಗಿರಲಿ. ಅಂದು ನಿನ್ನನ್ನು ಭಕ್ತಿಯಿಂದ ಪೂಜಿಸಿ, ಉಪವಾಸ ಮಾಡಿ, ಗೋದಿಯ ಹಿಟ್ಟಿನಿಂದ ಅಡಿಗೆ ಮಾಡಿ ಬ್ರಾಹ್ಮಣರಿಗೆ ಭೋಜನ ಹಾಕುವವರಿಗೆ ನೀನು ಸಂತುಷ್ಟನಾಗಿ ದಿವ್ಯ ಸ್ಥಾನವನ್ನು ಕೊಡು. ಪ್ರತಿದಿನವೂ ಪ್ರಾತಃಕಾಲದಲ್ಲಿ ಈ ಪಶುಪತಿಯ ಕತೆಯನ್ನು ಕೇಳಿದವರು ಎಲ್ಲ ಪಾಪಗಳಿಂದ ಮುಕ್ತರಾಗಿ ಶಿವಲೋಕವನ್ನು ಹೊಂದುತ್ತಾರೆ.'' ಎಂದು ಹೇಳಿದರು.

*ವರಾಹ ಪುರಾಣದಲ್ಲಿ ಮೂವತ್ತೂರನೇ ಅಧ್ಯಾಯ ಮುಗಿದುದು.*

—o—

## ಪಿತೃಗಳ ಉತ್ಪತ್ತಿ

ಅಧ್ಯಾಯ - ೩೪

**ಮಹಾತಪ :-** ಮಹಾರಾಜ, ಪಿತೃಗಳ ಉತ್ಪತ್ತಿಯನ್ನು ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ಪ್ರಜಾಸೃಷ್ಟಿಯನ್ನು ಮಾಡಬೇಕೆಂದು ಸೃಷ್ಟಿಕರ್ತನಾದ ಬ್ರಹ್ಮನು ಪರಬ್ರಹ್ಮನ ಧ್ಯಾನವನ್ನು ಮಾಡುತ್ತಲಿದ್ದಾಗ ಆ ಬ್ರಹ್ಮನ ದೇಹದಿಂದ ಹೊಗೆಯ ಬಣ್ಣದ ಹೊಳಪುಳ್ಳ ಪಿತೃಗಳು ಹೊರ ಬಂದರು. ತಪಸ್ವಿಗಳಾದ ಅವರು ದೇವತೆಗಳನ್ನು ಕುರಿತು ನಾವು ಸೋಮಪಾನ ಮಾಡುತ್ತೇವೆ ಎಂದು ಹೇಳುತ್ತ ಆಕಾಶದಲ್ಲಿ ನಿಂತುಕೊಂಡರು. ಮೇಲೆ ಹೋಗಬೇಕೆಂದು ಬಯಸುವ ಅವರನ್ನು ನೋಡಿ ಬ್ರಹ್ಮದೇವರು ನುಡಿದರು.

''ನೀವು ಎಲ್ಲ ಗೃಹಸ್ಥಾಶ್ರಮಿಗಳಿಗೂ ಪಿತೃಗಳು ಆಗಿರಿ. ನಿಮ್ಮಲ್ಲಿ ಮೇಲೆ ಮುಖ ಮಾಡಿದವರು ನಾಂದೀಮುಖ ಎಂದು ಕರೆಸಿಕೊಳ್ಳುವರು'' ಎಂದು ಹೇಳಿ ಬ್ರಹ್ಮದೇವನು ದಕ್ಷಿಣಾಯಣದ ದಾರಿಯನ್ನು ಆ ಪಿತೃಗಳಿಗೆ ಮಾಡಿ ಕೊಟ್ಟನು.

ಅನಂತರ ಬ್ರಹ್ಮನು ಸುಮ್ಮನೆ ಅನೇಕ ಪ್ರಾಣಿಗಳನ್ನು ಸೃಷ್ಟಿ ಮಾಡಿದನು. ಆನಂತರ ಪಿತೃಗಳು ಬ್ರಹ್ಮನಿಗೆ ''ನಮಗೇನಾದರೂ ಜೀವನ ಸಾಧನವನ್ನು ಕಲ್ಪಿಸಿಕೊಡು '' ಎಂದು ಕೇಳಿದರು.

ಆಗ ಬ್ರಹ್ಮದೇವರು ಆ ಪಿತೃಗಳನ್ನು ಕುರಿತು ನುಡಿದರು.

''ನಿಮಗೆ ಅಮಾವಾಸ್ಯೆಯ ದಿನವು ಮೀಸಲಾಗಿರಲಿ. ಅಮಾವಾಸ್ಯೆಯಲ್ಲಿ ದರ್ಭೆ ಎಳ್ಳು ನೀರುಗಳಿಂದ ಮನುಷ್ಯರು ನೀಡುವ ತರ್ಪಣದಿಂದ ನೀವು ತೃಪ್ತಿಯನ್ನು ಹೊಂದಿರಿ. ಮತ್ತು ಅಮಾವಾಸ್ಯೆಯ ದಿನ ಪಿತೃಭಕ್ತಿಯಿಂದ ಎಳ್ಳನ್ನು ದಾನಮಾಡಿ ಉಪೋಷಣಗೈಯುವವರಿಗೆ ನೀವು ಕೂಡಲೇ ವರಗಳನ್ನು ಕೊಡಿರಿ. ಆದರ ಫಲ ಪ್ರದಾನದಲ್ಲಿ ವಿಳಂಬವು ಬೇಡ '' ಎಂದು ಹೇಳಿ ಅನುಗ್ರಹಿಸಿದರು.

*ವರಾಹ ಪುರಾಣದಲ್ಲಿ ಮೂವತ್ನಾಲ್ಕನೇ ಅಧ್ಯಾಯ ಮುಗಿದುದು.*

—o—

## ಸೋಮನ ಉತ್ಪತ್ತಿ

ಅಧ್ಯಾಯ - ೩೫

**ಮಹಾತಪ :-** ಬ್ರಹ್ಮದೇವರ ಮಾನಸ ಪುತ್ರನಾದ ಅತ್ರಿಮುನಿಯು ಮಹಾಕೀರ್ತಿವಂತನಾಗಿದ್ದನು. ಅತ್ರಿಯ ಮಗನೇ ಚಂದ್ರ. ದಕ್ಷಪ್ರಜಾಪತಿಯ ಇಪ್ಪತ್ತೇಳು ಕನ್ಯೆಯರನ್ನು ಚಂದ್ರನಿಗೆ ಮದುವೆ ಮಾಡಿ ಕೊಡಲಾಯಿತು. ಆ ಕನ್ಯೆಯರಿಗೆ 'ದಾಕ್ಷಾಯಣಿಯರು' ಎಂದು ಹೆಸರು. ಸೋಮನ ಈ ಮಡದಿಯರಲ್ಲಿ ರೋಹಿಣಿಯು ಶ್ರೇಷ್ಠಳಾಗಿದ್ದಳು. ದೇಹದ ಶಾಂತಿ ಕಾಂತಿಗಳಿಂದಲೂ, ಮಿಂಚು ಮೈಮಾಟಗಳಿಂದಲೂ, ಗುಣ ಗೌರವಗಳಿಂದಲೂ ಎಲ್ಲ ದಾಕ್ಷಾಯಣಿಯರಿಗಿಂತ ಮಿಗಿಲಾದ ರೋಹಿಣಿಯು ಚಂದ್ರನ ಮೆಚ್ಚಿನ ಮಡದಿಯಾಗಿದ್ದಳು. ಉಳಿದ ಹೆಂಡಂದಿರನ್ನೆಲ್ಲ ಉಪೇಕ್ಷೆ ಮಾಡಿ ಚಂದ್ರನು ರೋಹಿಣಿಯೊಡನೆ ರಮಿಸುತ್ತಿದ್ದನು. ಇದರಿಂದ ಉಳಿದ ದಕ್ಷಕುಮಾರಿಯರಿಗೆ ದುಃಖವಾಗಿ ಅವರು ತಂದೆಯ ಬಳಿಗೆ ಬಂದು ಪತಿಯ ಪ್ರೇಮದ ಪಕ್ಷಪಾತದ ಬಗ್ಗೆ ದೂರು ಹೇಳಿದರು.

ದಕ್ಷನು ತನ್ನ ಮಕ್ಕಳ ಈ ದುರವಸ್ಥೆಯನ್ನು ಕಂಡು ದುಃಖಿತನಾದನು. ಚಂದ್ರನ ಬಳಿಗೆ ಹೋಗಿ 'ಎಲ್ಲ ಮಕ್ಕಳನ್ನೂ ಸಮದೃಷ್ಟಿಯಿಂದ ನೋಡಬೇಕು' ಎಂದು ಹೇಳಿದನು. ಆದರೆ ರೋಹಿಣಿಯ ಚೆಲುವು ನಲಿವುಗಳಿಗೆ ಮನಸೋತು ಮುಗ್ಧನಾದ ಚಂದ್ರನು ದಕ್ಷನ ಮಾತಿಗೆ ಲಕ್ಷ್ಯ ಕೊಡಲಿಲ್ಲ. ಉಳಿದ ತನ್ನ ಕಾಂತೆಯರನ್ನು ಕಣ್ಣೆತ್ತಿ ಕೂಡ ನೋಡಲಿಲ್ಲ. ರೋಹಿಣಿಯ ಜೊತೆಗೆ ಸರಸಾಲಾಪ, ವಿವಿಧ ವಿಲಾಸಗಳನ್ನು ಮಾಡುತ್ತ ಕಾಲವನ್ನು ಕಳೆಯತೊಡಗಿದನು.

ಎಷ್ಟು ಬಾರೆ ಹೇಳಿದರೂ ಕೇಳದೆ ತನ್ನ ಉಳಿದ ಹೆಣ್ಣು ಮಕ್ಕಳನ್ನೆಲ್ಲ ಕಡೆಗಣಿಸಿ ನಡೆಯುವ ಚಂದ್ರನ ವಂಚಕತೆ ಹಾಗೂ ಪ್ರಣಯ ಪಕ್ಷಪಾತಿ ಧೋರಣಗಳನ್ನು ಕಂಡು ದಕ್ಷನಿಗೆ ಕಡುಕೋಪ ಬಂದಿತು. ಕೂಡಲೇ ಅವನು ಚಂದ್ರನಿಗೆ ''ನೀನು ಕ್ಷೀಣನಾಗಿ ಕ್ಷಯ ಹಿಡಿದು ನಾಶ ಹೊಂದು'' ಎಂದು ಶಾಪವನ್ನು ಕೊಟ್ಟನು. ದಕ್ಷನ ಶಾಪದಿಂದ ಚಂದ್ರನು ತಕ್ಷಣದಲ್ಲಿಯೇ ಕ್ಷಯ ಹೊಂದಿದನು. ಚಂದ್ರನು ನಷ್ಟನಾದ ಕೂಡಲೇ ಪೊದೆ ಬಳ್ಳಿಗಳು ನಾಶವಾದವು. ಎಲ್ಲ ಔಷಧಿ ವನಸ್ಪತಿಗಳೂ ಒಣಗಿ ಹೋದವು. ಸಸ್ಯ, ಧಾನ್ಯ ಬೆಳೆಗಳೆಲ್ಲವೂ ಇಲ್ಲದಂತಾಯಿತು. ಅದರಿಂದ ಆಹಾರವಿಲ್ಲದಂತಾಗಿ ಮಾನವರು ಕ್ಷೀಣರಾದರು. ದೇವತೆಗಳು ದೀನರಾದರು. ಆಗ ದೇವತೆಗಳಿಗೆಲ್ಲ ಮರಬಳ್ಳಿ ಪೊದೆ ಬಡ್ಡೆ ಬೇರುಗಳಲ್ಲಿ ಇದ್ದ ಸೋಮನ ಅಸ್ತಿತ್ವದ ಅರಿವಾಯಿತು. ಈಗ ಚಂದ್ರನ ನಿರಂತರ ಅಸ್ತಮನದಿಂದ ಅವರೆಲ್ಲರೂ ಚಿಂತಾಕ್ರಾಂತರಾದರು. ಅದರಿಂದ ಉಪದ್ರುತರಾದ ಅವರೆಲ್ಲರೂ ಶ್ರೀ ವಿಷ್ಣುವಿಗೇ ಶರಣು ಹೋದರು. ಭಗವಂತನು ದೇವತೆಗಳಿಗೆ 'ಬಂದ ಕಾರಣವೇನು ?' ಎಂದು ಕೇಳಿದಾಗ ದೇವತೆಗಳು ಅವನಿಗೆ ದಕ್ಷ ಶಾಪದ ಸಮಾಚಾರವನ್ನು ತಿಳಿಸಿದರು. ಈ ಶಾಪದಿಂದಾದ ಚಂದ್ರನ ಲೋಪವನ್ನೂ ವನಸ್ಪತಿಗಳ ಹಾಗೂ ಬಳ್ಳಿಬೆಳೆಗಳ ವಿನಾಶವನ್ನೂ ತನ್ಮೂಲಕವಾಗಿ ದೇವಮಾನವರ ಗೋಳಾಟವನ್ನೂ ಅವನಲ್ಲಿ ಅರಿಕೆ ಮಾಡಿಕೊಂಡರು. ಅದನ್ನು ಕೇಳಿ ಕರುಣಾಶಾಲಿಯಾದ ಆ ರಮಾರಮಣನು ದೇವತೆಗಳಿಗೆ ಹೀಗೆ ಸಲಹೆ ಮಾಡಿದನು.

''ದೇವತೆಗಳೇ, ಕ್ಷೀರಸಾಗರದಲ್ಲಿ ಎಲ್ಲ ಔಷಧಿಗಳನ್ನೂ, ಬಳ್ಳಿಗಳನ್ನೂ, ತಂದು ಹಾಕಿ ಅದನ್ನು ನೀವೆಲ್ಲರೂ ಒಟ್ಟಾಗಿ ಕಡೆಯಿರಿ. ಅದರಿಂದ ಚಂದ್ರನನ್ನು ಪಡೆಯಿರಿ.'' ಎಂದು ಹೇಳಿದನು. ದೇವತೆಗಳಿಗೆ ಹೀಗೆ ಹೇಳಿ ನೀನು ಶ್ರೀಹರಿಯು ವಾಸುಕಿಯನ್ನು ಕರೆದು ಸಾಗರದಲ್ಲಿ ಮಂದರ ಪರ್ವತವನ್ನು ಇಟ್ಟು ಕಡೆಯುವ ಕೆಲಸಕ್ಕೆ 'ಕಡಗೋಲ ಹಗ್ಗವಾಗಬೇಕೆಂದು' ಅಪ್ಪಣೆ ಇತ್ತನು. ಮತ್ತು ಬ್ರಹ್ಮ ರುದ್ರಾದಿ ದೇವತೆಗಳನ್ನು ಕರೆಯಿಸಿಕೊಂಡು ದೇವ ದಾನವರೊಂದಿಗೆ ಒಡಗೂಡಿ ಸಮುದ್ರಮಂಥನ ಮಾಡಬೇಕಂದು ಆದೇಶ ನೀಡಿದನು.

ಅವನ ಅಪ್ಪಣೆಯಂತೆ ಸುರಾಸುರರೆಲ್ಲರೂ ಕೂಡಿ ಆ ಹಾಲಿನ ಹೆಗ್ಗಡಲನ್ನು ಕಡೆದರು. ಅಮೃತವನ್ನು ಪಡೆದರು. ಅದರಲ್ಲಿಯೇ ಮತ್ತೆ ಚಂದ್ರನೂ ಹುಟ್ಟಿದನು. ಸರ್ವವನಸ್ಪತಿ ಹಾಗೂ ಸಸ್ಯಗಳ ವೃದ್ಧಿಗೆ ಕಾರಣನಾಗಿ ದೇವತೆಗಳಿಗೆಲ್ಲ ಅನ್ನವನ್ನು ಒದಗಿಸುವ ಆ ಚಂದ್ರನೆಂದರೆ ಸರ್ವದೇಹಾಂತರ್ಯಾಮಿ ಆದ ಸಾಕ್ಷಾತ್ ಶ್ರೀ ವಿಷ್ಣುವೇ ಸರಿ. ನಮ್ಮ ಕಣ್ಣಿಗೆ ಕಾಣುವ ಈ ಚಂದ್ರನು ಅವನ ಒಂದು ಅದಿಷ್ಠಾನ ಮಾತ್ರ. ಆ ಮುಖ್ಯ ಚಂದ್ರನಾದ ಭಗವಂತನ ಆಶ್ರಯದಿಂದಲೇ ಮಾನವರು, ಮೂವತ್ತೂರು ಕೋಟಿ ದೇವತೆಗಳೂ, ವೃಕ್ಷಗಳೂ, ಔಷಧಿಗಳೂ ಜೀವಿಸುತ್ತವೆ. ರುದ್ರನು ಆ ಚಂದ್ರನ ಒಂದು ಕಲೆಯನ್ನು ತನ್ನ ತಲೆಯ ಮೇಲೆ ಇಟ್ಟುಕೊಂಡಿದ್ದಾನೆ. ಈ ಮೂಲ ಚಂದ್ರನಿಗೆ ವಿಶ್ವಮೂರ್ತಿ ಎಂದು ಹೆಸರು. ಈ ಕಲಾನಿಧಿಗೆ ಬ್ರಹ್ಮದೇವರು ಸಂಪ್ರೀತನಾಗಿ ಹುಣ್ಣಿಮೆಯ ತಿಥಿಯನ್ನು ಕೊಟ್ಟಿದ್ದಾನೆ. ಪೌರ್ಣಿಮೆಯ ದಿನ ಉಪವಾಸ ಮಾಡಿ ತನ್ನನ್ನು ಉಪಾಸಿಸುವವರಿಗೆ ಆ ಚಂದ್ರನು ಅನ್ನವನ್ನೂ ಜ್ಞಾನವನ್ನೂ ದ್ರವ್ಯವನ್ನೂ ಇತ್ತು ಕಾಪಾಡುತ್ತಾನೆ. ಮತ್ತೂ ಅವನ ದಯದಿಂದ ಭಕ್ತರಿಗೆ ಶಾಂತಿ, ಕಾಂತಿ, ಧನ, ಧಾನ್ಯ, ತುಷ್ಟಿ ಪುಷ್ಟಿಗಳೆಲ್ಲವೂ ಪ್ರಾಪ್ತವಾಗುತ್ತವೆ.

*ವರಾಹ ಪುರಾಣದಲ್ಲಿ ಮೂವತ್ತೈದನೇ ಅಧ್ಯಾಯ ಮುಗಿದುದು.*

—o—

**ಮಹಾತಪ** :- ರಾಜನ್, ಮಣಿಯಿಂದ ಹುಟ್ಟಿದ ಆದಿ ತ್ರೇತಾಯುಗದ ರಾಜರ ಕಥೆಯನ್ನು ಹೇಳುತ್ತೇನೆ ಕೇಳು. ಕೃತಯುಗದಲ್ಲಿ ಸುಪ್ರಭ ಎಂಬ ಹೆಸರುಳ್ಳ ಮಹಾರಾಜನೇ ನೀನು. ಪ್ರಜಾಪಾಲ ಎಂಬ ಹೆಸರಿನಿಂದ ನೀನು ಈಗ ಹುಟ್ಟಿರುವೆ. ಉಳಿದವರೆಲ್ಲ ತ್ರೇತಾಯುಗದ ಬಲಿಷ್ಠ ರಾಜರಾಗಿ ಉದಿಸುವರು. ದೀಪ್ತತೇಜ ಎಂಬ ಹೆಸರಿನ ಆ ಮಣಿಯಿಂದ ಹುಟ್ಟಿದ ಕುಮಾರನು ಶಾಂತನೆಂದೂ, ಸುರಶ್ಮಿಯು ಶಶಿಕರಣನೆಂಬ ಹೆಸರಿನಿಂದಲೂ ಉದಿಸುವರು. ಆಗ ಮಣಿಯಿಂದ ಉದಿಸಿದ ಶುಭದರ್ಶನನು ಪಾಂಚಾಲನಾಗುವನು. ಸುಶಾಂತಿಯು ಸುಂದರ ಎಂಬ ಹೆಸರಿನಿಂದ ಅಂಗವಂಶದಲ್ಲಿ ಜನಿಸುವನು. ಸುಂದರನು ಮುಚುಕುಂದನಾಗುವನು. ಸುದ್ಯುಮ್ನನು ತುರುರಾಜನಾಗುವನು. ಸುಮನನು ಸೋಮದತ್ತ, ಶುಭನು ಸಂವರ್ಣ, ಸುಶೀಲನು ವಸುದಾನ, ಸುಖದನು ಅಸುಪತಿ, ಶಂಭವು ಸೇನಾಪತಿ, ಸುದಾಂತನು ದಶರಥ, ಸೋಮನು ಜನಕರಾಜ ಎಂಬ ಹೆಸರುಗಳನ್ನು ಪಡೆದು ರಾಜಮಹಾರಾಜರಾಗಿ ಮೆರೆಯುವರು. ಬಗೆ ಬಗೆಯ ಯಜ್ಞಯಾಗಗಳನ್ನು ಮಾಡಿ ಮುಂದೆ ಸ್ವರ್ಗವನ್ನು ಪಡೆಯುವರು.

**ವರಾಹ :-** ಧರಣೀದೇವಿಯೇ, ರಾಜರ್ಷಿಯಾದ ಆ ಪ್ರಜಾಪಾಲ ಮಹಾರಾಜನು ಮಹಾತಪ ಮುನಿಯಿಂದ ತನ್ನ ಪರಿವಾರಭೂತರಾದ ಎಲ್ಲ ಮುನಿಕುಮಾರರ ಕತೆಯನ್ನು ಕೇಳಿ ಬ್ರಹ್ಮವಿದ್ಯೆಯ ಉಪದೇಶವನ್ನು ಪಡೆದು ತಪಸ್ಸನ್ನು ಮಾಡಲು ವನಕ್ಕೆ ಹೊರಟು ಹೋದನು. ಮಹಾತಪ ಋಷಿಯೂ ಕೂಡ ಆಧ್ಯಾತ್ಮ ಯೋಗದಿಂದ ತನ್ನ ದೇಹತ್ಯಾಗವನ್ನು ಮಾಡಿ ಪರಬ್ರಹ್ಮನ ನಿತ್ಯ ನಿರಂತರ ಧ್ಯಾನದಿಂದ ಶ್ರೀ ಹರಿಯ ಚರಣಾರವಿಂದದಲ್ಲಿ ಲೀನವಾಗುವನು. ತಪೋನುಷ್ಠಾನಕ್ಕಾಗಿ ಕಾಡಿಗೆ ಹೋದ ಪ್ರಜಾಪಾಲರಾಜನು ಶ್ರೀ ಹರಿಯ ವಿಶೇಷ ಸನ್ನಿಧಾನಯುಕ್ತವಾದ ವೃಂದಾವನ ಕ್ಷೇತ್ರಕ್ಕೆ ಹೋಗಿ ಭಕ್ತಿಯಿಂದ ಗೋವಿಂದನ ಸ್ತೋತ್ರವನ್ನು ಮಾಡಿದನು.

**ನಮಾಮಿ ದೇವಂ ಜಗತಾಂ ಚ ಮೂರ್ತಿಂ**
**ಗೋಪೇಂದ್ರಮಿಂದ್ರಾನುಜಮಪ್ರಮೇಯಂ ।**
**ಸಂಸಾರ ಚಕ್ರ ಭ್ರಮಣೈಕ ದಕ್ಷಂ**
**ಪೃಥ್ವೀಧರಂ ದೇವವರಂ ನಮಾಮಿ ॥**
**ಜಯಸ್ವ ಗೋವಿಂದ ಮಹಾನುಭಾವ**
**ಜಯಸ್ವ ವಿಷ್ಣೋ ಜಯ ಪದ್ಮನಾಭ ।**
**ಜಯಸ್ವ ಸರ್ವಜ್ಞ ಜಯಾಽಪ್ರಮೇಯ**
**ಜಯಸ್ವ ವಿಶ್ವೇಶ್ವರ ವಿಶ್ವಮೂರ್ತೇ ॥**

ಈ ರೀತಿಯಾಗಿ ಮುಕುಂದನನ್ನು ಸ್ತೋತ್ರ ಮಾಡಿ ಪಾಂಚಭೌತಿಕ ಶರೀರವನ್ನು ಬಿಟ್ಟು ಶಾಶ್ವತವಾದ ಮೋಕ್ಷವನ್ನು ಪಡೆದನು.

ವರಾಹ ಪುರಾಣದಲ್ಲಿ ಮುವತ್ತಾರನೇ ಅಧ್ಯಾಯವು ಮುಗಿದುದು

—o—

## ಹರಿನಾಮ ಶ್ರವಣದಿಂದ ಹುಲಿಗೂ ಮುಕ್ತಿ

ಅಧ್ಯಾಯ - ೩೭

**ಧರಣೀದೇವಿ :-** 'ದೇವ, ಭಕ್ತಿಯುಕ್ತವಾದ ಸ್ತ್ರೀಯರಾಗಲಿ, ಪುರುಷರಾಗಲಿ ನಿನ್ನನ್ನು ಹೇಗೆ ಆರಾಧಿಸಬೇಕೆಂಬುದನ್ನು ನಮಗೆ ತಿಳಿಸು.'

**ವರಾಹ :-** ದೇವಿ, ಭಕ್ತಿ ಭಾವದಿಂದಲೇ ನಾನು ಒಲಿಯುವೆನು. ಕೇವಲ ಧನದಿಂದಾಗಲಿ, ಜಪಗಳಿಂದಾಗಲಿ ನನ್ನನ್ನು ಒಲಿಸಿಕೊಳ್ಳಲು ಸಾಧ್ಯವಿಲ್ಲ. ಅಂಥ ಅನನ್ಯ ಭಕ್ತಿಯಿಂದ ನನ್ನನ್ನು ಆರಾಧಿಸುವವರಿಗಾಗಿ ಕೆಲವು ವ್ರತಗಳನ್ನು ಕೇಳು. ಈ ಎಲ್ಲ ಬಗೆಯ ವ್ರತಗಳನ್ನು ಮಾಡುವವರು ಕಾಯಾ, ವಾಚಾ, ಮನಸಾ, ಶ್ರೀ ಹರಿಯನ್ನು ನಂಬಬೇಕು. ಭಕ್ತಿಯಿಂದ ಈ ವ್ರತಗಳನ್ನು ಮಾಡಬೇಕು.

ಅಹಿಂಸಾ, ಸತ್ಯ ಮತ್ತು ಕಳವು ಮಾಡದಿರುವದು ಹಾಗೂ ಬ್ರಹ್ಮಚರ್ಯೆ ಇವು ಮಾನಸಿಕ ವ್ರತಗಳೆನ್ನಿಸುತ್ತವೆ. ಒಪ್ಪತ್ತು ಊಟಮಾಡಿ ರಾತ್ರಿ ಉಪವಾಸ ಇದ್ದು ದೇವರ ಧ್ಯಾನ ಮಾಡುವುದು ದೈಹಿಕ ವ್ರತ. ವೇದವೇದಾಂತಗಳ ಅಧ್ಯಯನ ಹರಿನಾಮ, ಕೀರ್ತನ, ಸತ್ಯ ಭಾಷಣ, ಚಾಡಿ ಹೇಳದಿರುವದು ಇವೆಲ್ಲವೂ ವಾಚಿಕ ವ್ರತವೆನಿಸುವವು. ಈ ಉತ್ತಮವಾದ ವಾಚಿಕವ್ರತ ಎಲ್ಲರಿಗೂ ಹಿತಕರವಾದ ಧರ್ಮವಾಗಿದೆ.

ಈ ವಿಷಯದಲ್ಲಿ ನಿನಗೊಂದು ಕತೆ ಹೇಳುತ್ತೇನೆ ಕೇಳು. ಹಿಂದಿನ ಕಲ್ಪದಲ್ಲಿ ಬ್ರಹ್ಮದೇವರಿಗೆ ಅರುಣಿ ಎಂಬ ಮಗನಿದ್ದನು. ಆತ ಮಹಾ ತಪಸ್ವಿ, ಅವನು ಒಮ್ಮೆ ತಪಸ್ಸಿಗಾಗಿ ಕಾಡಿಗೆ ಹೋದನು. ಅಲ್ಲಿ ಅನ್ನ ನೀರು ಬಿಟ್ಟು ಘೋರ ತಪಸ್ಸನ್ನಾಚರಿಸಿದನು. ರಮ್ಯವಾದ ದೇವಿಕಾನದಿಯ ದಂಡೆಯ ಮೇಲೆ ಒಂದು ರಮಣೀಯವಾದ ಆಶ್ರಮವನ್ನು ಕಟ್ಟಿಕೊಂಡು ಅವನು ತಪೋನಿರತನಾಗಿದ್ದನು. ಒಂದು ದಿನ ಅವನು ಸ್ನಾನಕ್ಕಾಗಿ ನದಿಗೆ ಹೋಗಿದ್ದನು. ಸ್ನಾನ ಮಾಡಿ ಅವನು ಜಪ ಮಾಡುತ್ತ ನದಿಯ ದಂಡೆಯ ಮೇಲೆ ಕುಳಿತುಕೊಂಡಿದ್ದನು. ಆಗ ಭಯಂಕರವಾದ ಬಿಲ್ಲನ್ನು ಹೊತ್ತುಕೊಂಡಿರುವ ಓರ್ವ ಕ್ರೂರ ಬೇಡನು ಬರುವದು ದೂರಿಂದ ಕಂಡಿತು. ಆ ಬೇಡನು ಈ ಬಡ ಬ್ರಾಹ್ಮಣನ ಬಳಿಯಲ್ಲಿರುವ ನಾರು ಬಟ್ಟೆಗಳನ್ನಪಹರಿಸಿ ಅವನನ್ನು ಕೊಂದು ಹೋಗಬೇಕೆಂದು ಧಾವಿಸಿ ಬಂದನು. ಇದನ್ನು ಕಂಡು ಬೆದರಿ ಹೋದ ಆ ಅರುಣಿಯು ಶ್ರೀಮನ್ನಾರಾಯಣನನ್ನು ಸ್ಮರಿಸುತ್ತ ಅಲ್ಲಿಯೇ ನಿಂತನು.

ದೇವರ ಧ್ಯಾನಲೀನನಾಗಿ ಕೈಮುಗಿದು ನಿಂತ ಆ ತೇಜಸ್ವೀ ಬ್ರಾಹ್ಮಣನನ್ನು ಕಂಡು ಆ ಬೇಡನಿಗೆ ಸದ್ಬುದ್ಧಿಯು ಉದಿಸಿತು. ಕೂಡಲೇ ಅವನು ತನ್ನ ಕೈಯಲ್ಲಿಯ ಬಿಲ್ಲು ಬಾಣಗಳನ್ನು ಬಿಸುಟು ತಪಸ್ವಿ ಅರುಣಿಯ ಬಳಿ ಬಂದು ಭಕ್ತಿಯಿಂದ ಬಾಗಿ ನುಡಿದನು.

''ತಪೋಧನ, ನಾನು ನಿನ್ನನ್ನು ಕೊಲ್ಲಬೇಕೆಂಬ ದುರ್ಬುದ್ಧಿಯಿಂದ ಇಲ್ಲಿಗೆ ಬಂದೆ. ನಿನ್ನನ್ನು ನೋಡಿದ ಮಾತ್ರದಿಂದಲೇ ನನ್ನ ಆ ದುರ್ವಿಚಾರವು ಅಳಿಯಿತು. ದುರ್ಬುದ್ಧಿಯು ಮಾಯವಾಯಿತು. ವಿಪ್ರೋತ್ತಮ, ಮಹಾ ಪಾಪಿಷ್ಠನಾದ ನಾನು ಸಾವಿರಾರು ಬ್ರಹ್ಮಹತ್ಯೆಗಳನ್ನು ಮಾಡಿದ್ದೇನೆ. ಹತ್ತು ಸಾವಿರದಷ್ಟು ಹೆಣ್ಣು ಮಕ್ಕಳನ್ನು ಸಂಹರಿಸಿದ್ದೇನೆ. ಇಷ್ಟೆಲ್ಲ ಬ್ರಹ್ಮಹತ್ಯೆ ಮಾಡಿದ ನನಗೆ ಎಂಥ ದುರ್ಗತಿಯಾಗುವದೋ

ಯಾರುಬಲ್ಲರು! ನನಗೀಗ ಕೃತಕರ್ಮಕ್ಕೆ ಪಶ್ಚಾತ್ತಾಪವಾಗಿದೆ. ನಾನು ನಿಮ್ಮ ಬಳಿಯಲ್ಲಿಯೇ ನಿಂತು ತಪಸ್ಸನ್ನು ಆಚರಿಸಬೇಕೆಂದು ನಿರ್ಧರಿಸಿದ್ದೇನೆ. ನನಗೆ ಉಪದೇಶವಿತ್ತು ಅನುಗ್ರಹಿಸಬೇಕು'' ಎಂದು ಬಿನ್ನವಿಸಿಗೊಂಡನು. ಆದರೆ ಮಹಾತಪಸ್ವಿಯಾದ ಅರುಣಿಯು ಇಂಥ ಪಾಪಿಷ್ಟರೊಡನೆ ಮಾತನಾಡುವದೂ ಕೂಡ ಮಹಾ ಪಾಪ ಜನಕ ಎಂದು ಬಗೆದು ಆ ಬೇಡನಿಗೆ ಏನೂ ಉತ್ತರವನ್ನೇ ಕೊಡಲಿಲ್ಲ. ಬೇಡನಿಗೆ ಮಾತ್ರ ಮನಃಪಲ್ಲಟವಾಗಿದ್ದಿತು. ಅರುಣಿಯು ಉತ್ತರ ಕೊಡದಿದ್ದರೂ ಅವನು ಸಿಟ್ಟಗೇಳದೇ ನದಿಗೆ ಹೋಗಿ ಸ್ನಾನಮಾಡಿ ಒಂದು ಗಿಡದಡಿಯಲ್ಲಿ ನಿಂತುಕೊಂಡನು. ಅರುಣಿಯು ತನ್ನ ಜಪಾಹ್ನಿಕಗಳನ್ನು ಮುಗಿಸಿಕೊಂಡು ಆಶ್ರಮಕ್ಕೆ ಹೋದನು. ಮತ್ತೆ ಸೂರ್ಯಾಸ್ತ ಸಮಯದಲ್ಲಿ ಸಾಯಂಕಾಲ ಸ್ನಾನಕ್ಕೆಂದು ಅವನು ಮತ್ತೆ ನದಿಗೆ ಬಂದನು. ಅವನು ನದಿಯ ತೀರದಲ್ಲಿ ನಿಂತು ಸ್ನಾನ ಮಾಡುತ್ತಲಿರುವಾಗಲೇ ಅಲ್ಲಿಗೆ ಒಂದು ಹುಲಿಯು ನೀರು ಕುಡಿಯಲಿಕ್ಕೆಂದು ಬಂದಿತು. ಈ ಕ್ರೂರ ಪಶುವು ತೀರದಲ್ಲಿಯೇ ಸ್ನಾನ ಮಾಡುತ್ತಲಿದ್ದ ಆ ಮುನಿಯನ್ನು ನೋಡಿ ಅವನನ್ನು ಕೊಲ್ಲಬೇಕೆಂದು ಮೈ ಮೇಲೆ ಹಾರಿತು.

ಅದನ್ನು ನೋಡಿ ಅಲ್ಲಿಯೇ ದಂಡೆಯ ಬಳಿಯ ಗಿಡದಡಿಯಲ್ಲಿ ನಿಂತ ಬೇಡನು ಓಡಿ ಬಂದು ಬ್ರಾಹ್ಮಣನನ್ನು ಹಾರಿ ಹಿಡಿಯ ಹೊರಟ ಆ ಹುಲಿಯನ್ನು ಖಡ್ಗದಿಂದ ಹೊಡೆದು ತುಂಡರಿಸಿ ಹಾಕಿದನು. ಹುಲಿಯು ತನ್ನ ಮೈ ಮೇಲೆ ಎರಗ ಬಂದದ್ದನ್ನು ಕಂಡು ಭಗವದ್ಭಕ್ತನಾದ ಅರುಣಿಯು ''ಓಂ ನಮೋ ನಾರಾಯಣಾಯ'' ಎಂದು ಕೂಗಿದನು. ಮರಣ ಕಾಲದಲ್ಲಿ ಮುನಿಯ ಈ ನಾರಾಯಣನ ನಾಮಸ್ಮರಣೆಯು ಹುಲಿಯ ಕಿವಿಗೆ ತಾಕಿತು. ಅದರಿಂದ ಅದು ಹುಲಿಯ ಜನ್ಮವನ್ನು ನೀಗಿ ದಿವ್ಯ ಪುರುಷನಾಯಿತು. ಮತ್ತು ಅರುಣಿಮುನಿಗೆ ಕೃತಜ್ಞತೆಯಿಂದ ನುಡಿಯಿತು.

''ಬ್ರಾಹ್ಮಣೋತ್ತಮ, ನಿನ್ನ ಕೃಪೆಯಿಂದ ನೀನು ಮಾಡಿದ ನಾರಾಯಣನ ನಾಮಸ್ಮರಣೆಯನ್ನು ಅಂತ್ಯ ಕಾಲದಲ್ಲಿ ಶ್ರವಣ ಮಾಡಿದ್ದರಿಂದ ನನ್ನ ಪಾಪ ಪರಿಹಾರವಾಯಿತು. ನಾನು ಈಗ ವಿಷ್ಣುಲೋಕಕ್ಕೆ ಹೋಗುತ್ತೇನೆ.'' ಎಂದು ನುಡಿಯಿತು. ಅದನ್ನು ಕೇಳಿ ಆಶ್ಚರ್ಯಚಕಿತನಾದ ಅರುಣಿಯು ಅವನನ್ನು ಕುರಿತು ಪುರುಷೋತ್ತಮ ನೀನು ಯಾರು ? ಎಂದು ಕೇಳಿದನು. ಆಗ ಆ ಪುರುಷನು ತನ್ನ ಪೂರ್ವಜನ್ಮ ವೃತ್ತಾಂತವನ್ನೆಲ್ಲ ಅರುಹಿದನು :- ''ನಾನು ಕಳೆದ ಜನ್ಮದಲ್ಲಿ ದೀರ್ಘಬಾಹು ಎಂಬ ರಾಜನಾಗಿ ಸರ್ವಧರ್ಮ ವಿಶಾರದನಾಗಿದ್ದೆ. ನನಗೆ ಶುಭಾಶುಭಗಳನ್ನು ತಿಳಿಸುವ ಜ್ಯೋತಿಷ್ಯದ ಜ್ಞಾನವೂ ಚೆನ್ನಾಗಿದ್ದಿತು. ರಾಜ್ಯ, ಐಶ್ವರ್ಯ, ಹಾಗೂ ಜ್ಞಾನಗಳಿಂದ ನಾನು ಉನ್ಮತ್ತನಾಗಿ ಬ್ರಾಹ್ಮಣರಿಂದ ನನಗೇನು ಆಗಬೇಕಾಗಿದೆ ? ನನಗೇನು ಬ್ರಾಹ್ಮಣರ ಕಿಮ್ಮತ್ತಿಲ್ಲ'' ಎಂದು ನುಡಿದು ವಿಪ್ರವೃಂದವನ್ನು ಅವಮಾನಗೊಳಿಸಿದೆ. ಅದರಿಂದ ಕುಪಿತರಾದ ಬ್ರಾಹ್ಮಣರು ನನಗೆ ಶಾಪವಿತ್ತರು. ''ನೀನು ಬ್ರಾಹ್ಮಣರನ್ನು ಅವಮಾನ ಮಾಡಿದ್ದರಿಂದ ನೀನು ಕ್ರೂರವಾದ ಹುಲಿಯಾಗುವೆ. ನಿನ್ನ ಜ್ಞಾನವು ಲೋಪವಾಗುವದು. ಮರಣಕಾಲದಲ್ಲಿ ನಿನಗೆ ಕೇಶವನ ನಾಮಸ್ಮರಣವು ಮಾತ್ರ ಕೇಳಿ ಬರುವುದು.''

ಆಗ ನಾನು ಪಶ್ಚಾತ್ತಾಪದಿಂದ ಆ ಬ್ರಾಹ್ಮಣರನ್ನು ವಂದಿಸಿ ಅನುಗ್ರಹ ಮಾಡಬೇಕೆಂದು ಬಿನ್ನವಿಸಿದೆ. ಅದಕ್ಕೆ ಅವರು ಪ್ರಸನ್ನರಾಗಿ ಕಣ್ಣಿಗೆ ಕಂಡವರನ್ನೆಲ್ಲ ಮುರಿದು ತಿನ್ನುವ ಹುಲಿಯಾದಾಗ ನೀನು ಪ್ರಾಣತ್ಯಾಗದ ಪ್ರಸಂಗದಲ್ಲಿ ನಾರಾಯಣನ ನಾಮಸ್ಮರಣೆಯನ್ನು ಕೇಳಿ ಉದ್ಧೃತನಾಗುವೆ'' ಎಂದು ಹೇಳಿದರು. ಅದರಂತೆ ನಾನೀಗ ಹುಲಿಯಾಗಿ ಹುಟ್ಟಿ ಮರಣ ಕಾಲದಲ್ಲಿ ನೀವು ಮಾಡಿದ ನಾರಾಯಣನ ನಾಮ ಘೋಷವನ್ನು ಆಲಿಸಿ ಈಗ ಆ ಜನ್ಮದಿಂದ ಉದ್ಧೃತನಾದೆ. ವಿಷ್ಣು ಲೋಕಕ್ಕೆ ಇದೋ ಈಗ ಹೊರಟ್ಟಿದ್ದೇನೆ. ಇನ್ನೊಬ್ಬರು ಮಾಡಿದ ವಿಷ್ಣುವಿನ ನಾಮೋಚ್ಚಾರಣೆಯನ್ನು ಮರಣ ಕಾಲದಲ್ಲಿ ಕೇಳಿದರೆ ಎಲ್ಲ ಪಾಪಗಳೂ ಪರಿಹಾರವಾಗುವಾಗ ಸ್ವತಃ ತನ್ನ ಬಾಯಿಂದ ಪ್ರಾಣ ಬಿಡುವಾಗ ಹರಿನಾಮವನ್ನು ಉಚ್ಚಾರಮಾಡಿದರೆ ಕೇಳಬೇಕೆ! ನಿಶ್ಚಿತವಾಗಿಯೂ ಆ ಮನುಷ್ಯನು ಸರ್ವ ಪಾಪಗಳಿಂದ ಮುಕ್ತನಾಗಿ ಮುಕ್ತಿಯನ್ನು ಹೊಂದುವವದರಲ್ಲಿ ಸಂದೇಹವೇ ಇಲ್ಲ ಎಂದು ನಾನು ನನ್ನ ಅನುಭವದಿಂದಲೇ ಎತ್ತಿ ಸಾರುತ್ತೇನೆ. ''ಬ್ರಾಹ್ಮಣರೆಂದರೆ ಚಲಿಸುವ ದೇವರು. 'ಜಂಗಮಾ ಬ್ರಾಹ್ಮಣಾ ದೇವಾಃ, ಕೂಟಸ್ಥಃ ಪುರುಷೋತ್ತಮಃ ॥ ಎಂದರೆ ನಾರಾಯಣನು ಮೂಲಮೂರ್ತಿ, ಬ್ರಾಹ್ಮಣರು ಅವನ ಉತ್ಸವ ಮೂರ್ತಿಗಳಿದ್ದಂತೆ. ದೇವರ ಚಲಪ್ರತಿಮೆಗಳಿದ್ದಂತೆ'' ಎಂದು ಮುಂತಾಗಿ ಹೇಳಿ ಪಾಪ ಮುಕ್ತನಾಗಿ ಆ ದೀರ್ಘಬಾಹುರಾಜನು ಸ್ವರ್ಗಕ್ಕೆ ನಡೆದನು.

ಹುಲಿಯಿಂದ ಮುಕ್ತನಾದ ಆ ಬ್ರಾಹ್ಮಣ ಮುನಿ ಆರುಣಿಯು ಆ ಹುಲಿಯ ಬಾಯಿಂದ ತನ್ನನ್ನು ಪಾರು ಮಾಡಿದ ಆ ಬೇಡನನ್ನು ಕುರಿತು ವ್ಯಾಧ, ನನ್ನನ್ನು ಹಿಡಿಯ ಬಂದ ಹುಲಿಯನ್ನು ಕೊಂದು ನೀನು ನನ್ನನ್ನು ಬದುಕಿಸಿದೆ. ಅದರಿಂದ ನನಗೆ ಸಂತೋಷ ವಾಯಿತು. ನಿನಗೆ ಬೇಕಾದ ವರಗಳನ್ನು ಬೇಡು ಕೊಡುತ್ತೇನೆ''. ಎಂದು ಹೇಳಿದನು. ಅದಕ್ಕೆ ಆ ಬೇಡನು ಬಾಗಿ ವಂದಿಸಿ ವಿನಯದಿಂದ ನುಡಿದನು. ''ಬ್ರಾಹ್ಮಣೋತ್ತಮ, ನಿಮ್ಮಂಥ ಪುಣ್ಯಾತ್ಮರು ನನ್ನೊಡನೆ ಮಾತನಾಡಿದ್ದೇ ನನಗೊಂದು ವರವಾಗಿದೆ. ನನಗಾವ ಬೇರೆ ವರವೇ ಬೇಡ. ನಿಮ್ಮ ಅಪ್ಪಣೆಯಂತೆ ನಾನು ನಡೆಯುತ್ತೇನೆ. ಆಜ್ಞೆ ಮಾಡಿರಿ''.

**ಅರುಣಿ :-** ವ್ಯಾಧನೆ, ಈ ಮೊದಲು ನೀನು ಬಹಳ ಪಾಪಿಯಾಗಿದ್ದೆ. ಆದುದರಿಂದ ನಾನು ನಿನ್ನೊಡನೆ ಮಾತನಾಡಲಿಲ್ಲ. ಈಗ ಶ್ರೀ ಹರಿಯ ನಾಮ ಶ್ರವಣದಿಂದಲೂ ಈ ದೇವಿಕಾನದಿಯ ಸ್ನಾನದಿಂದಲೂ ಮತ್ತು ನನ್ನ ದರ್ಶನ ದಿಂದಲೂ ನಿನ್ನ ದೇಹವು ಶುದ್ಧವಾಗಿದೆ. ನಿನ್ನ ಪಾಪಗಳೆಲ್ಲವೂಪರಿಹಾರವಾಗಿವೆ. ಈಗನಾನುನಿನಗೊಂದುವರವನ್ನು ಕೊಡುತ್ತೇನೆ. ಇನ್ನು ಮೇಲೆನೀನುನನ್ನ ಬಳಿಯಲ್ಲಿಯೇಇದ್ದು ತಪಸ್ಸನ್ನಾಚರಿಸು.

**ವ್ಯಾಧ :-** ಸ್ವಾಮಿ, ತಾವು ಹೇಳಿದ ಆ ವಿಷ್ಣುರೂಪಿಯಾದ ನಾರಾಯಣನನ್ನು ನಮ್ಮಂಥ ಪಾಮರರು ಪಡೆಯುವ ಬಗೆಯೆಂತು ? ಅದನ್ನು ದಯವಿಟ್ಟು ಹೇಳಬೇಕು. ಇದೇ ನಾನು ತಮ್ಮಲ್ಲಿ ಬೇಡುವ ವರ.

**ಋಷಿ :-** ಆ ಭಗವಂತನನ್ನುದ್ದೇಶಿಸಿ ಯಾವುದಾದರೂ ಒಂದು ವ್ರತವನ್ನು ಭಕ್ತಿಯಿಂದ ಮಾಡಿದರೆ ಭಗವತ್ಪ್ರಾಪ್ತಿಯಾಗುವುದು ನಿಶ್ಚಿತ. ಆದುದರಿಂದ ನಾನು ನಿನಗೆ ಒಂದು ವ್ರತವನ್ನು ಹೇಳುತ್ತೇನೆ ಕೇಳು. ಸುಳ್ಳನ್ನು ಆಡಬಾರದು. ಗಣಾನ್ನದ ಊಟವನ್ನು

ಮಾಡಬಾರದು. ಅಂದರೆ ಅನೇಕರು ಗುಂಪುಕೂಡಿ ಕೇವಲ ಭೋಜನೋದ್ದೇಶದಿಂದಲೇ ಸೇರಿದಲ್ಲಿ ಊಟ ಮಾಡಬಾರದು. ಇಂಥ ನಿಯಮವನ್ನಿಟ್ಟುಕೊಂಡು ನೀನು ಇಲ್ಲಿಯೇ ತಪಸ್ಸನ್ನು ಮಾಡುತ್ತಾ ಬೇಕಾದಷ್ಟು ದಿನ ನನ್ನ ಬಳಿ ಇರಬಹುದು ''.

ಅರುಣಿಯ ಈ ಮಾತನ್ನು ಕೇಳಿ ಆ ವ್ಯಾಧನು ಹಾಗೇ ಮಾಡಬೇಕೆಂದು ವಿಚಾರಿಸಿದನು. ಆ ವ್ಯಾಧನಿಗೆ ಬೇರಾವ ಅಪೇಕ್ಷೆಯೂ ಇರಲಿಲ್ಲ. ಅವನು ನಿಜವಾಗಿಯೂ ಮೋಕ್ಷಾರ್ಥಿಯಾಗಿದ್ದನು. ಅದನ್ನು ತಿಳಿದ ಅರುಣಿ ಮುನಿಯು ಅವನನ್ನು ಅದೇ ತನ್ನ ಪಟ್ಟಣದಲ್ಲಿ ಬಿಟ್ಟು ಬೇರೆ ಕಡೆಗೆ ಹೊರಟು ಹೋದನು.

ವರಾಹ ಪುರಾಣದಲ್ಲಿ ಮೂವತ್ತೇಳನೇ ಅಧ್ಯಾಯ ಮುಗಿದುದು



## ಬೇಡನಿಗೆ ವೇದಸ್ಫರಣ

ಅಧ್ಯಾಯ - ೩೮

ಅರುಣಿಯ ಆದೇಶದಂತೆ ಆ ವ್ಯಾಧನು ಸನ್ಮಾರ್ಗವನ್ನಲಂಬಿಸಿದ ತನಗೆ ಉಪದೇಶ ಮಾಡಿದ ಗುರುವನ್ನು ಮನಸ್ಸಿನಿಂದ ನೆನೆದು ನಿರಾಹಾರ ವ್ರತದಿಂದ ತಪಸ್ಸನ್ನಾಚರಿಸತೊಡಗಿದನು. ಹಸಿವೆಯಾದಾಗ ನೆಲದ ಮೇಲೆ ಉದುರಿ ಬಿದ್ದ ಎಲೆಗಳ ತುಂಡು ತುಣುಕುಗಳನ್ನು ತಿನ್ನುತ್ತಿದ್ದನು. ಅದೂ ಕೂಡ ತನ್ನ ನಿಯಮಿತವಾದ ತಪೋನುಷ್ಠಾನವೆಲ್ಲ ಮುಗಿದ ಬಳಿಕ. ಒಂದು ದಿನ ಅವನು ತನ್ನ ಜಪ ತಪಗಳನ್ನೆಲ್ಲ ಮುಗಿಸಿಕೊಂಡು ಹಸಿವೆಯಿಂದ ಬಳಲಿ ತಾನು ಕುಳಿತ ಗಿಡದಡಿಯಲ್ಲಿ ಬಿದ್ದ ಎಲೆಗಳನ್ನು ತಿನ್ನಬೇಕೆಂದು ಬಯಸಿದನು. ಅಷ್ಟರಲ್ಲಿ ಆಕಾಶವಾಣಿಯಾಗಿ ''ಈ ಎಲೆಗಳಲ್ಲಿಯೂ ಜೀವವಿರುವುದರಿಂದ ನೀನು ಇವುಗಳನ್ನು ತಿನ್ನಬೇಡ'' ಎಂದು ಕಠೋರವಾಗಿ ಆಜ್ಞೆಯಾಯಿತು. ಆಗ ಆ ಬೇಡನು ಆ ಮರದ ಕೆಳಗಿನ ಎಲೆಗಳನ್ನು ಬಿಟ್ಟು ಬೇರೊಂದು ಗಿಡಕ್ಕೆ ಹೋಗಿ ಅದರ ಕೆಳಗೆ ಬಿದ್ದ ಎಲೆಗಳನ್ನು ತಿನ್ನಬೇಕೆಂದು ಕೈ ಹಾಕಿದನು. ಪುನಃ ಅಲ್ಲಿಯೂ ಆಕಾಶವಾಣಿಯಾಗಿ ''ಆ ಗಿಡದ ಎಲೆಗಳಲ್ಲಿಯೂ ಬ್ರಾಹ್ಮೀಚೇತನವಿರುತ್ತದೆ. ಆದ್ದರಿಂದ ನೀನು ಇವನ್ನು ತಿನ್ನಬೇಡ'' ಎಂದು ನಿಷೇಧ ಮಾಡಿತು. ಇದರಂತೆ ಎಲ್ಲ ಕಡೆಗೂ ಆಕಾಶವಾಣಿಯು ಅವನ ಎಲೆಯ ಭಕ್ಷಣವನ್ನು ನಿಷೇಧಿಸಿದ್ದರಿಂದ ಅವನು ಪೂರ್ಣ ಆಹಾರವನ್ನೇ ಬಿಟ್ಟು ಗುರುಸ್ಮರಣೆ ಪೂರ್ವಕವಾಗಿ ಮತ್ತೆ ಘೋರವಾದ ತಪಸ್ಸಿಗೆ ತೊಡಗಿದನು. ಹೀಗೆ ಕಠೋರವಾದ ತಪಸ್ಸಿನಲ್ಲಿ ಕೆಲ ಕಾಲವು ಕಳೆದ ಬಳಿಕ ತಪೋಧನರಾದ ದೂರ್ವಾಸ ಮುನಿಗಳು ಅಲ್ಲಿಗೆ ಬಂದರು. ಆಹಾರವಿಲ್ಲದಿದ್ದರೂ ತನ್ನ ತಪೋಬಲದಿಂದ ಅಗ್ನಿಯಂತೆ ತೇಜೋಭಾಸುರನಾಗಿ ಹೊಳೆಯುವ ಆ ಬೇಡನನ್ನು ನೋಡಿದರು. ದೂರ್ವಾಸರನ್ನು ಕಂಡು ಆ ವ್ಯಾಧನು ಎದ್ದು ಸಾಷ್ಟಾಂಗ ವಂದಿಸಿದನು. ಮತ್ತು ಅವರನ್ನು ಕುರಿತು ಭಕ್ತಿಯಿಂದ ಬಾಗಿ ನುಡಿದನು :-

''ಪೂಜ್ಯರೇ, ನಿಮ್ಮ ದರ್ಶನದಿಂದ ನಾನು ಧನ್ಯನಾದೆ. ಈಗ ನಮ್ಮ ಹಿರಿಯರ ಶ್ರಾದ್ಧಕಾಲವು ಪ್ರಾಪ್ತವಾಗಿದೆ. ಈ ಸಂದರ್ಭದಲ್ಲಿ ನೀವು ದೇವರಾಗಿಯೇ ಇಲ್ಲಿ

ದಯಮಾಡಿಸಿದ್ದೀರಿ. ನಾನು ಗಿಡದಿಂದ ತಾವಾಗಿ ಉದುರಿಬಿದ್ದ ಒಣ ಎಲೆಗಳಿಂದ ಶ್ರಾದ್ಧ ಮಾಡಿ ನಿಮ್ಮಂಥ ಬ್ರಾಹ್ಮಣಶ್ರೇಷ್ಠರನ್ನು ಸಂತೋಷಪಡಿಸುತ್ತೇನೆ'' ಎಂದು ಬಿನ್ನವಿಸಿದನು. ದುರ್ವಾಸರು ಆ ಬೇಡನ ತಪೋಬಲದ ಮಟ್ಟನ್ನು ಗುಟ್ಟನ್ನು ಅರಿಯಬೇಕೆಂದು ಸಂಕಲ್ಪಿಸಿ ಇಂತು ನುಡಿದರು.

''ವ್ಯಾಧ, ನಾನು ಇಲ್ಲಿಗೆ ಬಂದದ್ದು ನಿನ್ನನ್ನು ನೋಡಲಿಕ್ಕಾಗಿ, ನನಗೆ ಈಗ ಬಹಳೇ ಹಸಿವೆಯಾಗಿದೆ. ಬರೀ ಎಲೆ ಪುಡಿಗಳಿಂದ ನನ್ನ ಹಸಿವೆ ಹಿಂಗಲಾರದು. ಅಕ್ಕಿ ಗೋದಿಗಳ ಪಕ್ವಾನ್ನವನ್ನು ಮಾಡಿ ಹಸಿವೆಯಿಂದ ಕಸಿವಿಸಿ ಪಡುವ ನನಗೆ ಊಟಕ್ಕೆ ಹಾಕು. ಅದನ್ನು ಕೇಳಿ ಆ ಬೇಡನಿಗೆ ಕಡು ಚಿಂತೆಯಾಯಿತು. ಈ ಕಾಡಿನಲ್ಲಿ ಕಡು ಬಡವ ಬೇಡನಾದ ನಾನು ಅಕ್ಕಿಯನ್ನು ಎಲ್ಲಿಂದ ತರಲಿ ? ಅವುಗಳಿಂದ ಮಾಡುವ ಮೃಷ್ಟಾನ್ನಕ್ಕೆ ಮಸಾಲೆ ಎಲ್ಲಿ ? ಮುಂತಾಗಿ ನೂರು ಚಿಂತೆಗಳು ಅವನ ತಲೆ ತಿನ್ನ ತೊಡಗಿದವು.

ಹೀಗೆ ಯೋಚಿಸುತ್ತಾ ಅವನು ದೀನದೃಷ್ಟಿಯಿಂದ ಮುಗಿಲ ಕಡೆ ನೋಡಿದಾಗ ಒಮ್ಮೆಲೆ ಆಕಾಶದಿಂದ ಅವನ ಬಳಿ ಒಂದು ಬಂಗಾರದ ಸಿದ್ಧ ಪಾತ್ರೆಯು ಬಿದ್ದಿತು. ಅದನ್ನು ಆ ಬೇಡನು ಕೈಗೆತ್ತಿಕೊಂಡು ದುರ್ವಾಸಋಷಿಗೆ ಭಕ್ತಿಯಿಂದ ವಂದಿಸಿ ಭಯದಿಂದ ಬೇಡಿಕೊಂಡನು. ''ಪೂಜ್ಯರೇ, ನಾನು ಬಿಕ್ಷೆ ಬೇಡಿಕೊಂಡು ಬರುವವರೆಗೆ ತಾವು ಇಲ್ಲಿಯೇ ಕುಳಿತುಕೊಳ್ಳಬೇಕು. ನನ್ನ ಮೇಲೆ ಅಷ್ಟು ದಯೆ ತೋರಬೇಕು.''

ಆ ಚಿನ್ನದ ಭಿಕ್ಷಾಪಾತ್ರೆಯನ್ನು ತೆಗೆದುಕೊಂಡು ಆ ಬೇಡನು ಸಮೀಪದ ನಗರದಲ್ಲಿ ಭಿಕ್ಷೆ ಬೇಡಿಕೊಂಡು ಬರಬೇಕೆಂದು ಹೊರಟನು. ನಗರಾಭಿಮುಖವಾಗಿ ನಡೆದ ಅವನ ಎದುರು ಅನೇಕ ಜನರು ಚಿನ್ನದ ಪಾತ್ರೆಗಳನ್ನು ಕೈಯಲ್ಲಿ ಹಿಡಿದು ಬಂದರು. ಅವರೆಲ್ಲರೂ ಬೇರೆ ಬೇರೆ ಗಿಡಗಳಿಂದ ಹೊರಬಿದ್ದಿದ್ದರು. ಪ್ರತಿಯೊಬ್ಬರ ಕೈಯಲ್ಲೂ ಬಗೆಬಗೆಯ ಪಕ್ವಾನ್ನಗಳಿಂದ ತುಂಬಿದ ಬಂಗಾರದ ಹರಿವಾಣಗಳಿದ್ದವು. ಅವರೆಲ್ಲರೂ ಈ ಬೇಡನ ಪಾತ್ರೆಯನ್ನು ವಿವಿಧ ಭಕ್ಷ್ಯ ಮೃಷ್ಟಾನ್ನಗಳನ್ನು ಹಾಕಿ ತುಂಬಿದರು. ಆಗ ಬೇಡನ ಚಿಂತೆಯೆಲ್ಲವೂ ಪರಿಹಾರವಾಯಿತು. ಅವನು ಅತ್ಯಂತ ಆನಂದದಿಂದ ತನ್ನಾಶ್ರಮಕ್ಕೆ ಬಂದನು. ಶುದ್ಧವಾದ ಸ್ಥಳದಲ್ಲಿ ಆ ಪಕ್ವಾನ್ನದ ಪಾತ್ರೆಯನ್ನಿಟ್ಟನು. ದೂರ್ವಾಸರ ಹತ್ತಿರ ಬಂದು ನಮಸ್ಕಾರ ಮಾಡಿ, ''ಪೂಜ್ಯರೇ, ತಾವು ಕೈಕಾಲು ತೊಳೆದುಕೊಂಡು ಭೋಜನಕ್ಕಾಗಿ ದಯಮಾಡಿಸಬೇಕು. ಈ ಅಗ್ರಪೀಠದಲ್ಲಿ ಕುಳಿತುಕೊಳ್ಳಬೇಕು'' ಎಂದು ಪ್ರಾರ್ಥಿಸಿದನು. ಅದನ್ನು ಕೇಳಿ ದೂರ್ವಾಸ ಋಷಿಯು ಆ ಬೇಡನ ತಪಶ್ಶಕ್ತಿಯನ್ನು ಇನ್ನೂ ಪರೀಕ್ಷಿಸಬೇಕೆಂದು ಇಂತು ನುಡಿದರು. ''ಬೇಡನೇ ಕೈಕಾಲು ತೊಳೆದುಕೊಳ್ಳಲು ನದಿಯವರೆಗೆ ಹೋಗಲು ನನ್ನಲ್ಲಿ ತ್ರಾಣವಿಲ್ಲ. ನನ್ನ ಹತ್ತಿರ ಪಾತ್ರೆಯೂ ಇಲ್ಲ. ನಾನು ಹೇಗೆ ಕಾಲು ತೊಳೆದುಕೊಳ್ಳಲಿ !''

ಈ ಮಾತನ್ನು ಕೇಳಿ ಬೇಡನಿಗೆ ಮತ್ತೊಂದು ಚಿಂತೆಯಾಯಿತು. ಕಾಲು ತೊಳೆದು ಕೊಳ್ಳದೆ ಇವರಿಗೆ ಊಟಕ್ಕೆ ಹಾಕುವುದು ಹೇಗೆ ? ಬಹಳ ವಿಚಾರ ಮಾಡಿ ಕೊನೆಗೆ ಅವನು ಮನಸ್ಸಿನಿಂದ ತನ್ನ ಗುರುವನ್ನು ಧ್ಯಾನ ಮಾಡಿ ಆ ದೇವಿಕಾ ನದಿಯನ್ನೇ ಶರಣುಹೊಕ್ಕನು. ಭಕ್ತಿಯಿಂದ ಆ ದೇವಿಕಾ ನದಿಯನ್ನು ಪ್ರಾರ್ಥಿಸಿದನು -

''ಮಹಾನದಿಯೇ, ನಾನು ಜಾತಿಯಿಂದ ಬೇಡ, ಕೃತಿಯಿಂದಲೂ ಯಾರಿಗೂ ಬೇಡ. ನಾನು ಮಾಡಿದ ಘೋರ ಕರ್ಮಗಳು ಅಸಂಖ್ಯವಾಗಿವೆ. ಆದರೂ ನೀನು ಕರುಣಾನಿಧಿಯಾದ ದೇವಿಯಾಗಿರುವೆ. ನನ್ನ ಎಲ್ಲ ಅಪರಾಧಗಳನ್ನು ಮರೆತಿರುವೆ. ನನ್ನನ್ನು ರಕ್ಷಿಸುವುದು ನಿನ್ನ ಕರ್ತವ್ಯವಾಗಿದೆ. ನೀನು ನನ್ನ ಮೇಲೆ ಕೃಪೆಮಾಡು. ನನ್ನ ಮನೆಗೆ ಬಂದ ಋಷಿಯ ಪಾದವನ್ನು ನೀನು ಅಲ್ಲಿಯೇ ನನ್ನಾಶ್ರಮದವರೆಗೆ ಬಂದು ತೊಳೆಯಬೇಕು''. ಬೇಡನ ಈ ಪ್ರಾರ್ಥನೆಯನ್ನು ಕೇಳಿ ಪ್ರಸನ್ನಳಾದ ಆ ನದಿಯು ಅವನ ಬೇಡಿಕೆಯನ್ನು ಮನ್ನಿಸಿದಳು. ಅವನ ಆಶ್ರಮದೊಳಗೆ ತನ್ನ ನೀರಿನ ತರಂಗಗಳನ್ನು ತುಳುಕಿಸುತ್ತ ಬಂದಳು. ಅದನ್ನು ಕಂಡು ದುರ್ವಾಸ ಋಷಿಗೆ ಅತ್ಯಂತ ಆಶ್ಚರ್ಯವೆನಿಸಿತು. ಅವರು ಉಲ್ಲಾಸದಿಂದ ಎದ್ದು ಕೈಕಾಲು ತೊಳೆದುಕೊಂಡು ಅತ್ಯಂತ ಆದರದಿಂದ ಆ ಅನ್ನವನ್ನು ಊಟ ಮಾಡಿದರು.

ಬೇಡನ ಕಾಯಕ್ಲೇಶವನ್ನೂ, ತಪೋಬಲವನ್ನೂ ಕಂಡು ಅವರಿಗೆ ಬಹಳ ಕೌತುಕವಾಗಿದ್ದಿತು. ಸ್ನೇಹದೃಷ್ಟಿಯಿಂದ ಆತನೆಡೆಗೆ ಒಮ್ಮೆ ನೋಡಿದರು. ಘೋರವಾದ ತಪಸ್ಸನ್ನು ಮಾಡಿ ಅವನ ಶರೀರವು ಕೊರಗಿ, ಸೊರಗಿ ಕ್ಷೀಣವಾಗಿದ್ದಿತು. ಬರೀ ಎಲುಬು, ಚರ್ಮ ಮಾತ್ರ ಉಳಿದಿತ್ತು. ಹಸಿವೆಯಿಂದ ಕಂಗೆಟ್ಟ ಆ ಕಾಡುಬೇಡನ ಮೇಲೆ ಕರುಣೆದುಂಬಿ ಆ ದೂರ್ವಾಸರು ನುಡಿದರು -

''ವ್ಯಾಧ, ನಿನಗೆ ಎಲ್ಲ ವೇದಗಳು ಸಾಂಗೋಪಾಂಗವಾಗಿ ಪ್ರತಿಭಾತವಾಗಲಿ. ನಿಗಮಾಗಮಗಳ ರಹಸ್ಯಾರ್ಥವೆಲ್ಲವೂ ನಿನಗೆ ಈಗಲೇ ತಿಳಿದು ಬರಲಿ. ಬ್ರಹ್ಮವಿದ್ಯೆಯು ನಿನಗೆ ಕರತಲಾಮಲಕವಾಗಲಿ. ಇದೇ ನಾನು ನಿನಗೆ ಕೊಡುವ ವರ. ನೀನು ಇಂದಿನಿಂದ ಈ ನನ್ನ ವರದ ಬಲದಿಂದ 'ಸತ್ಯತಪ' ಎಂಬ ಹೆಸರಿನ ಮಹಾಋಷಿಯಾಗುವೆ.'' ಹೀಗೆ ವರಗಳನ್ನು ಪಡೆದ ಆ ಬೇಡನಿಗೆ ಮತ್ತೂ ಚಿಂತೆಯಾಯಿತು. ಅವನು ಶಂಕಿತನಾಗಿ ಅಂಜುತ್ತಲೇ ದೂರ್ವಾಸರನ್ನು ಕೇಳಿದನು - ''ಬ್ರಹ್ಮನ್, ನಾನು ಜಾತಿಯಿಂದ ಬೇಡನಾಗಿದ್ದೇನೆ. ಅಂದ ಮೇಲೆ ವೇದಗಳನ್ನು ಹೇಗೆ ತಿಳಿಯಲಿ ? ಬಾಯಿಂದಲಾದರೂ ಹೇಗೆ ಉಚ್ಚಾರ ಮಾಡಲಿ ?'' ಅವನ ಈ ಶಂಕೆಗೆ ದೂರ್ವಾಸರು ಸಂತೈಸುವ ದನಿಯಲ್ಲಿ ಹೀಗೆ ಉತ್ತರಿಸಿದರು. ''ಸತ್ಪುರುಷ, ಆಹಾರವಿಲ್ಲದೇ ನಿನ್ನ ಮೊದಲಿನ ಶರೀರವು ಕರಗಿ ಹೋಗಿದೆ. ಈಗ ನಿನ್ನ ಈ ಭಯಂಕರವಾದ ತಪಸ್ತಾಪದಿಂದಲೂ, ಘೋರವಾದ ಉಪೋಷಣದ ಕಾವಿನಿಂದಲೂ ನಿನ್ನ ಆ ಕಿರಾತ ಶರೀರವು ಎಂದೋ ದಗ್ಧವಾಗಿ ಹೋಗಿದೆ. ಈಗ ನಿನಗಿದ್ದುದು ತಪೋಮಯವಾದ ಹೊಸ ಬ್ರಾಹ್ಮ ಶರೀರ. ನಿನ್ನ ಹಿಂದಿನ ಅಜ್ಞಾನ, ವಿಪರೀತ ಜ್ಞಾನಗಳೆಲ್ಲ ನಷ್ಟವಾಗಿವೆ. ದಿವ್ಯ ಜ್ಞಾನವು ಉಂಟಾಗಿದೆ. ನಿನ್ನ ದೇಹವು ಶುದ್ಧವಾಗಿದೆ. ಅಂತಃಕರಣವು ಶುದ್ಧವಾಗಿದೆ. ಇದನ್ನೆಲ್ಲ ದಿವ್ಯ ದೃಷ್ಟಿಯಿಂದ ತಿಳಿದೇ ನಾನು ನಿನಗೆ ವೇದಶಾಸ್ತ್ರಗಳೂ ಹಾಗೂ ಬ್ರಹ್ಮವಿದ್ಯೆಯೂ ಸ್ವಯಂ ಪ್ರತಿಭಾತವಾಗಲಿ ಎಂದು ವರವನ್ನಿತ್ತು ಆಶೀರ್ವದಿಸಿದ್ದೇನೆ.

*ವರಾಹ ಪುರಾಣದಲ್ಲಿ ಮೂವತ್ತೆಂಟನೇ ಅಧ್ಯಾಯ ಮುಗಿದುದು.*

—o—

## ಮತ್ಸ್ಯ ದ್ವಾದಶೀ ವ್ರತ



**ಸತ್ಯತಪ :-** ಪೂಜ್ಯ ಬ್ರಹ್ಮೋತ್ತಮನೇ, ಶರೀರಗಳೆರಡೆಂದು ಹೇಳಿದೆಯಲ್ಲ! ಆ ಭೇದವು ಏತರಿಂದೆಂಬುದನ್ನು ನನಗೆ ಹೇಳು.

**ದುರ್ವಾಸಮುನಿ :-** ಶರೀರಗಳು ಎರಡಲ್ಲ. ಅದಕ್ಕೆ ಪ್ರತಿಯಾಗಿ ಭೋಗಶರೀರವೆಂಬುದೂ ಸೇರಿ ಮೂರೆಂದು ಹೇಳಬೇಕು. ದೇಹಿಗಳ ಶರೀರಗಳಲ್ಲಿ ಪರಿಜ್ಞಾನವಿಲ್ಲದ ಮೊದಲನೆ ರೀತಿಯದು ಅಧರ್ಮವೆಂದು ಹೆಸರುಳ್ಳದ್ದು. ವ್ರತಗಳಿಂದ ಕೂಡಿದ ಮತ್ತೊಂದು ಅತಿ ಧಾರ್ಮಿಕವೆಂದೆನಿಸಿಕೊಳ್ಳುವುದು. ಧರ್ಮಾ ಧರ್ಮಗಳ ಉಪಭೋಗಾರ್ಥವಾದುದು ಮೂರನೆಯದು. ಬ್ರಹ್ಮಜ್ಞರಾದ ವಿದ್ವಾಂಸರು ಹೀಗೆ ಶರೀರವನ್ನು ಮೂರು ಬಗೆಯೆನ್ನುವರು. ಅಧರ್ಮ ದೇಹ (ಪಾಪದೇಹ), ಧರ್ಮದೇಹ, ಭೋಗ ಮತ್ತು ಭುಕ್ತಿ ದೇಹ ಎಂದು ಮೂರು ವಿಧವಾಗಿದೆ. ಪ್ರಾಣಿಗಳನ್ನು ಕೊಲ್ಲುತ್ತಿದ್ದ ನಿನ್ನ ಹಿಂದಿನ ಸ್ಥಿತಿಯದು ಪಾಪ ಶರೀರವೆಂಬ ಹೆಸರುಳ್ಳದ್ದಾಗಿತ್ತು. ಈಗ ಒಳ್ಳೆಯ ಕೆಲಸ ಮಾಡುತ್ತ ಋಜುಭಾವದ ತಪಸ್ಸನ್ನು ಆಚರಿಸುತ್ತಿರುವ ನಿನ್ನ ಶರೀರವು ಬೇರೆಯಾದ ಧರ್ಮ (ರೂಪ) ಶರೀರವೆಂದು ನಿರ್ಣಯವಾಗಿದೆ. ಆದುದರಿಂದ ವೇದಶಾಸ್ತ್ರ ಪುರಾಣಗಳನ್ನು ತಿಳಿಯಲು ಸಂಶಯವಿಲ್ಲದೆ ಅರ್ಹನಾಗಿದ್ದೀಯೆ. ಬ್ರಹ್ಮವಾದಿಗಳು ಒಂದೇ ಶರೀರವನ್ನು ಬೇರೆಬೇರೆಯಾಗಿ ತೋರಿಸುವುದು ಅವಸ್ಥೆ (ಸ್ಥಿತಿ)ಯ ಭೇದದಿಂದ ಮೂರು ಬಗೆಯನ್ನು ಹೇಳುವುದಾಗಿದೆ. ಈ ಶರೀರಕ್ಕೆ ಹೆಸರಿನ ವ್ಯತ್ಯಾಸವು (ಮಡಿಕೆಯು ಮಣ್ಣು ಆದರೂ ಸ್ಥಿತಿಯ ವ್ಯತ್ಯಾಸದಿಂದ) ಕುಡಿಗೆ, ಗಡಿಗೆ, ಮಡಿಕೆಗಳಿಗಿರುವಂತೆಯೇ ಇರುತ್ತದೆ. ಕರ್ಮ ಸಮೂಹವು ಬ್ರಾಹ್ಮಣರೇ ಮೊದಲಾದವರಿಗೆ ನಾಲ್ಕು ಬಗೆಯೆಂದು ಹೇಳಿದೆ. ಅದರಲ್ಲಿ ವೇದೋಕ್ತ ಕರ್ಮಗಳನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂವರು ನಿತ್ಯವೂ ಮಾಡುತ್ತಾರೆ. ಶೂದ್ರನಾದರೂ ಮೊದಲು ಮೂವರ ಸೇವೆಯನ್ನು ಮಾಡುತ್ತಾನೆ. ಇವು ವೇದದಲ್ಲಿ ಹೇಳಿರುವ ಕರ್ಮ ಅಥವಾ ಕಾರ್ಯಗಳು. ಈ ಧರ್ಮಗಳನ್ನರಿತು ತಪಸ್ಸನ್ನು ಮಾಡುವ ಮತ್ತು ವೇದಮತಾಸಕ್ತನಾದ ಬ್ರಾಹ್ಮಣನಿಗೆ ನಿಜವಾಗಿಯೂ ಮುಕ್ತಿಯಾಗುವುದು.

**ಸತ್ಯತಪ :-** ಮುನಿಗಳೇ ಪರಬ್ರಹ್ಮ ಎಂಬ ಹೆಸರುಳ್ಳ ಆ ಪರಮಾತ್ಮನನ್ನು ಅರಿಯುವ ಕ್ರಮ ಯಾವುದು ? ಅವನನ್ನು ಹೊಂದುವ ಬಗೆ ಯಾವುದು ?

**ದುರ್ವಾಸ :-** ಬಗೆಬಗೆಯ ದಾನ ಧರ್ಮಗಳಿಂದಲೂ ಅನೇಕ ವಿಧವಾದ ಯಜ್ಞಯಾಗಗಳಿಂದಲೂ ಆ ಪರಮಾತ್ಮನನ್ನು ಹೊಂದಲಿಕ್ಕೆ ಸಾಧ್ಯ.

**ಮಹಾತಪ :-** ಪೂಜ್ಯರೇ, ದಾನಧರ್ಮ ನೀಡುವುದೂ, ಬಹುವ್ಯಯ ಸಾಧ್ಯವಾದ ಯಜ್ಞಯಾಗಗಳನ್ನು ಮಾಡುವದೂ ಸಿರಿವಂತರಿಗೆ ಮಾತ್ರ ಸಾಧ್ಯ. ದುಡ್ಡಿಲ್ಲದ ದರಿದ್ರರು ಹೇಗೆ ಭಗವಂತನನ್ನು ಹೊಂದಬೇಕು! ಹಣವಿಲ್ಲದೆ ಅವರು ಯಜ್ಞ ಮಾಡುವುದು ಹೇಗೆ? ದಾನವೀಯುವುದು ಹೇಗೆ? ಹಣವಿದ್ದರೂ ಎಷ್ಟೋ ಜಿಪುಣರಿಗೆ ದಾನ ಕೊಡಲಿಕ್ಕಾಗುವುದಿಲ್ಲ. ಅಂಥವರಿಗೆ ಹರಿಯು ದೊರಕುವನೋ

ಇಲ್ಲವೋ! ಬಡಬಗ್ಗರಿಗೂ ಕೂಡ ದೇಹಶ್ರಮದಿಂದ ದೇವನನ್ನು ಹೊಂದುವ ಉಪಾಯವೇನಾದರೂ ಇದ್ದರೆ ತಿಳಿಸಬೇಕು.

**ದುರ್ವಾಸ :-** ಹಿಂದೆ ಭೂಮಂಡಲವೆಲ್ಲ ನೀರಿನಲ್ಲಿ ಮುಳುಗಿ ಹೋಗಿ ರಸಾತಲಕ್ಕಿಳಿದಾಗ ಭೂದೇವಿಯು ಭಗವಂತನನ್ನು ಭಕ್ತಿಯಿಂದ ಆರಾಧಿಸಿದಳು. ಉಪವಾಸಾದಿಗಳಿಂದ ದೇಹದಂಡನ ಮಾಡಿ ವ್ರತಗಳನ್ನು ಆಚರಿಸಿದಳು. ಅವಳ ಕಠಿಣವಾದ ವ್ರತ, ಉಪವಾಸ, ನಿಯಮ, ಅನುಷ್ಠಾನಗಳಿಂದ ಗರುಡಧ್ವಜನಾದ ಆ ಶ್ರೀಹರಿಯು ಸುಪ್ರಸನ್ನನಾಗಿ ಭೂದೇವಿಯನ್ನು ಉದ್ಧಾರ ಮಾಡಿದನು. ತನ್ನ ಕೋರೆದಾಡೆಯ ಮೇಲೆ ಹೂವಿನಂತೆ ಇಡೀ ಭೂಮಂಡಲವನ್ನೆಲ್ಲ ಎತ್ತಿ ತಂದು ಮೇಲಿರಿಸಿದನು. ಅದಕ್ಕಾಗಿ ಭೂದೇವಿಯು ಮಾಡಿದ ಉಪವಾಸ ವ್ರತಾನುಷ್ಠಾನಗಳನ್ನು ನಿನಗೆ ತಿಳಿಸುತ್ತೇನೆ ಕೇಳು. ಮಾರ್ಗಶೀರ್ಷ ಮಾಸದ ದಶಮೀ ದಿನದಲ್ಲಿ ಜಿತೇಂದ್ರಿಯನಾಗಿದ್ದುಕೊಂಡು ಸ್ನಾನಮಾಡಿ, ಶುದ್ಧ ವಸ್ತ್ರವನ್ನಟ್ಟು ದೇವತಾಕಾರ್ಯವನ್ನೂ, ಅಗ್ನಿ ಕಾರ್ಯವನ್ನೂ ಮಾಡಿ, ಹುತಶೇಷ ನೈವೇದ್ಯವನ್ನು ಭೋಜನ ಮಾಡಬೇಕು. ಭೋಜನವಾದ ಬಳಿಕ ಐದು ಹೆಜ್ಜೆ ನಡೆದು ಬಂದು ಕಾಲು ತೊಳೆದುಕೊಂಡು ಎಂಟು ಅಂಗುಲ ಉದ್ದವಾದ ಕ್ಷೀರವೃಕ್ಷ (ಹಾಲುಗಿಡ)ದ ಹಲ್ಲುಜ್ಜುವ ಕಡ್ಡಿಯನ್ನು ಅಗಿದು ಅದರಿಂದ ಹಲ್ಲುಜ್ಜಿ ಬಳಿಕ ಆಚಮನ ಮಾಡಬೇಕು.

ಬಳಿಕ ದೇಹದ ಸರ್ವದ್ವಾರಗಳನ್ನು ಯತ್ನಪೂರ್ವಕವಾಗಿ ಮುಟ್ಟಿ, ಶಂಖಚಕ್ರವನ್ನು ಹೆಚ್ಚು ಹೊತ್ತು ಧ್ಯಾನಿಸಿ ಮತ್ತೆ ಕೈಯಲ್ಲಿ ನೀರನ್ನು ತೆಗೆದುಕೊಂಡು ಮನಸ್ಸಿನಲ್ಲಿ ಅವನನ್ನು ಸ್ಮರಿಸಿ, ಕೈನೀರಿನಿಂದ ಆ ದೇವನಿಗೆ ಅರ್ಘ್ಯವನ್ನು ಕೊಡಬೇಕು. ಅರ್ಘ್ಯ ಕೊಡುವಾಗ ''ಪುಂಡರೀಕಾಕ್ಷ, ಅಚ್ಯುತ, ನಾನು ಏಕಾದಶಿಯ ದಿನ ಉಪವಾಸ ಮಾಡಿ, ದ್ವಾದಶಿಯಲ್ಲಿ ಊಟ ಮಾಡುವೆನು. ನನಗೆ ರಕ್ಷಕನಾಗು'' ಎಂದು ಹೇಳಬೇಕು. ಬಳಿಕ ರಾತ್ರಿಯಲ್ಲಿ ದೇವಸನ್ನಿಧಿಯಲ್ಲಿ ವಿಧಿಪೂರ್ವಕವಾಗಿ ನಾರಾಯಣ ಎಂದು ಜಪಿಸುತ್ತಾ ಮಲಗಬೇಕು.

ಮಾರನೆಯ ಬೆಳಗಾಗುತ್ತಲೆ, ಸಮುದ್ರವನ್ನು ಸೇರುವ ನದಿಗೆ ಅಥವಾ ಉಪನದಿಗೆ, ಇಲ್ಲವಾದರೆ ಕೆರೆಗೆ ಹೋಗಿಯಾಗಲಿ, ಮನೆಯಲ್ಲಿಯೇ ಆಗಲಿ, ಆಚಮನ ಮಾಡಿ, ''ಭೂದೇವಿ, ಯಾವಾಗಲೂ ಪ್ರಾಣಿಗಳ ಧಾರಣವೂ, ಪೋಷಣವೂ, ನಿನ್ನಿಂದಲೇ ಆಗುವುದು ಅದರಿಂದ ನಿಜವಾಗಿಯೂ ನನ್ನ ಪಾಪವನ್ನು ಹೋಗಲಾಡಿಸು. ಸುವ್ರತಳೇ, ಮೇದಿನೀ, (ಭೂಮಿ) ಬ್ರಹ್ಮಾಂಡದೊಳಗಿನ ತೀರ್ಥಗಳನ್ನೆಲ್ಲ ನೀನು ಮುಟ್ಟಿರುವೆ. ಆದುದರಿಂದ ಆ ಮಣ್ಣನ್ನು ತೆಗೆದುಕೊಂಡು ಇರುವೆನು. ವರುಣನೇ, ನಿನ್ನಲ್ಲಿ ಯಾವಾಗಲೂ ಸರ್ವರಸಗಳೂ ಶಾಶ್ವತವಾಗಿವೆ. ಅವುಗಳಿಂದ ಈ ಮಣ್ಣನ್ನು ಕೂಡಿಸಿ, ಪವಿತ್ರನನ್ನಾಗಿ ಮಾಡು. ತಡ ಮಾಡಬೇಡ'' ಎಂಬ ಈ ಮಂತ್ರದಿಂದ ಶುದ್ಧವಾದ ಮಣ್ಣನ್ನು ತೆಗೆದುಕೊಂಡು ಮೈಗೆ ಲೇಪಿಸಿಕೊಳ್ಳಬೇಕು. ತೆಗೆದುಕೊಂಡ ಮಣ್ಣನ್ನು ಮೂರು ಭಾಗ ಮಾಡಿ, ಮೂರು ಸಾರಿ ಸರ್ವಾಯುವಗಳಿಗೂ ಬಳಿದುಕೊಳ್ಳಬೇಕು. ಬಳಿಕ ವರುಣ ಮಂತ್ರಗಳಿಂದ ನಿಯಮಾನುಸಾರವಾಗಿ ಸ್ನಾನಮಾಡಬೇಕು.

ಸ್ನಾನ ಮಾಡಿ, ಸಂಧ್ಯಾವಂದನಾದಿಯಾಗಿ ಆವಶ್ಯಕ ಕರ್ಮಗಳನ್ನು ಮಾಡಿ ಮತ್ತೆ ದೇವರ ಸನ್ನಿಧಿಗೆ ಹೋಗಬೇಕು. ಅಲ್ಲಿ ಲಕ್ಷ್ಮೀ ಸಮೇತನಾದ ಪ್ರಭುವಾದ ನಾರಾಯಣನನ್ನು ಪೂಜಿಸಬೇಕು. ''ಕೇಶವಾಯ ನಮಃ'' (ಕೇಶವನಿಗೆ ನಮಸ್ಕಾರ) ಎಂದು ಪರಮಾತ್ಮನ ಪಾದಗಳನ್ನು ''ದಾಮೋದರಾಯನಮಃ'' ಎಂದು ನಡುವನ್ನೂ, ''ನೃಸಿಂಹಾಯನಮಃ'' ಎಂದು ತೊಡೆಗಳನ್ನು, ''ಶ್ರೀ ವತ್ಸಧಾರಿಣೇನಮಃ'' ಎಂದು ಎದೆಯನ್ನೂ, ''ಕೌಸ್ತುಭಧಾರಿಣೇ ನಮಃ'' ಎಂದು ಜಠರವನ್ನೂ, ''ಶ್ರೀಪತಯೇ ನಮಃ'' ಎಂದು ಎದೆಯನ್ನೂ, ''ತ್ರೈಲೋಕ್ಯ ವಿಜಯಾಯನಮಃ'' ಎಂದು ತೋಳುಗಳನ್ನೂ, ''ಸರ್ವಾತ್ಮನೆ ನಮಃ'' ಎಂದು ತಲೆಯನ್ನೂ, ''ಚಕ್ರಧಾರಿಣೇ ನಮಃ'' ಎಂದು ಅವನ ಚಕ್ರವನ್ನೂ, ''ಶಂಕರಾಯನಮಃ'' ಎಂದು ಶಂಖವನ್ನು, ''ಗಂಭೀರಾಯ ನಮಃ'' ಎಂದು ಗದೆಯನ್ನೂ, ''ಶಾಂತಮೂರ್ತಯೇ ನಮಃ'' ಎಂದು ಪದ್ಮವನ್ನೂ ಸ್ಪರ್ಶಿಸಬೇಕು.

ಹೀಗೆ ದೇವೇಶನೂ, ಪ್ರಭುವೂ ಆದ ಆ ನಾರಾಯಣನನ್ನು ಆರಾಧಿಸಿ, ಬಳಿಕ ಆ ದೇವನೆದುರಿಗೆ ಜಲಪೂರ್ಣಗಳೂ, ಹೂಮಾಲೆಗಳಿಂದಲಂಕೃತಗಳೂ ಆದ ನಾಲ್ಕು ಕಲಶಗಳನ್ನು ಇಟ್ಟು ಅವುಗಳ ಮೇಲೆ ಎಳ್ಳು ತುಂಬಿದ (ಸುವರ್ಣ) ನಾಣ್ಯ ಸಹಿತಗಳಾದ ತಾಮ್ರದ ಚಿಕ್ಕ ಪಾತ್ರೆಗಳನ್ನು ಇಡಬೇಕು. ಈ ನಾಲ್ಕು ಕಲಶಗಳೇ ನಾಲ್ಕು ಸಮುದ್ರಗಳೆನಿಸಿಕೊಳ್ಳುವವು. ಆ ನಾಲ್ಕು ಕಲಶಗಳ ನಡುವೆ ವಸ್ತ್ರದಿಂದ ಮುಚ್ಚಿದ ಶುಭಪೀಠವನ್ನಿಡಬೇಕು. ಚಿನ್ನದ, ಬೆಳ್ಳಿಯ, ತಾಮ್ರದ ಮತ್ತು ಮರದ ಪಾತ್ರೆಗಳನ್ನೂ, ಇರಿಸಬೇಕು ಈ ಪಾತ್ರೆಗಳಾವವು ಇಲ್ಲದಿದ್ದರೆ ಮುತ್ತುಗದೆಲೆಯ, ದೊನ್ನೆಯನ್ನೂ, ನೀರಿನಿಂದ ತುಂಬಿ ಕಲಶಗಳ ಮಧ್ಯದ ಪೀಠದಲ್ಲಿಡಬೇಕು.

ದೇವನಾದ ಜನಾರ್ದನ ಮೂರ್ತಿಯನ್ನು ಚಿನ್ನದಿಂದ ಸರ್ವಾವಯವಗಳುಳ್ಳ ಮತ್ಸ್ಯಾಕಾರವಾಗಿ ಮಾಡಿ, ನೀರಿನಿಂದ ತುಂಬಿದ ಮಧ್ಯದ ಪಾತ್ರೆಯಲ್ಲಿ ಸ್ಥಾಪಿಸಬೇಕು. ಸರ್ವಾಭರಣ ಭೂಷಿತನೂ, ಪುಷ್ಪಗಳಿಂದೊಪ್ಪುವವನೂ ಆದ ಆ ಮತ್ಸ್ಯಮೂರ್ತಿಯನ್ನು ಗಂಧ ವಸ್ತ್ರ ಧೂಪ ದೀಪಗಳಿಂದಲೂ, ಬಗೆಬಗೆಯ ಫಲಗಳಿಂದಲೂ ಶಾಸ್ತ್ರೋಕ್ತವಾಗಿ ಪೂಜಿಸಿ, ''ಕೇಶವನೇ, ರಸಾತಲಕ್ಕೆ ಹೋಗಿದ್ದ ವೇದಗಳನ್ನು ಮತ್ಸ್ಯ ರೂಪದಿಂದ ನೀನು ಉದ್ಧರಿಸಿದ ಹಾಗೆಯೇ ನನ್ನನ್ನೂ ಉದ್ಧರಿಸು ದೇವ'' ಎಂದು ಹೇಳಿ ಅಲ್ಲಿಯ ದೇವನೆದುರಿಗೆ ಜಾಗರಣೆಯನ್ನು ಮಾಡಬೇಕು. (ನಿದ್ದೆಯನ್ನು ಮಾಡಬಾರದು) ಆ ರಾತ್ರಿ ಕಳೆದು ಬೆಳಗಾಗಲು ತನ್ನ ಅನುಕೂಲಕ್ಕೆ ತಕ್ಕಂತೆ ಇಟ್ಟಿರುವ ನಾಲ್ಕು ಕಲಶಗಳನ್ನು ನಾಲ್ಕು ಜನ ಬ್ರಾಹ್ಮಣರಿಗೆ ಕೊಡಿಸಬೇಕು. ಪೂರ್ವದಿಕ್ಕಿನ ಕಲಶವನ್ನು ಋಗ್ವೇದವನ್ನು ಚೆನ್ನಾಗಿ ತಿಳಿದವನಿಗೂ, ದಕ್ಷಿಣದ್ದನ್ನು ಸಾಮವೇದಜ್ಞನಿಗೂ ಕೊಡಬೇಕು. ಯಜುರ್ವೇದಿಕನಿಗೆ, ಪಶ್ಚಿಮದ ಕಲಶವನ್ನು ಕೊಡಬೇಕು. ಉತ್ತರದ ಕಲಶವನ್ನು ಬೇಕಾದವರಿಗೆ ಕೊಡಬಹುದು. ಇದೇ ಹೇಳಿರುವ ವಿಧಿ.

ಪೂರ್ವದಿಕ್ಕಿನಲ್ಲಿ ಋಗ್ವೇದವು ಸಂತುಷ್ಟವಾಗಲಿ. ದಕ್ಷಿಣದಲ್ಲಿ ಸಾಮವೇದವೂ ಪಶ್ಚಿಮದಲ್ಲಿ ಯಜುರ್ವೇದವೂ, ಉತ್ತರದಲ್ಲಿ ಅಥರ್ವಣ ವೇದವೂ ತೃಪ್ತವಾಗಲಿ ಎಂದು ದಾತೃವು ಹೇಳಿ, ತೆಗೆದುಕೊಳ್ಳುವವರಿಂದಲೂ ಹೇಳಿಸಬೇಕು.

ಈ ವ್ರತದ ರಹಸ್ಯವಾದ ಮಂತ್ರಗಳನ್ನೂ, ವಿಧಾನಗಳನ್ನೂ ತಿಳಿಸಿದ ಆಚಾರ್ಯನನ್ನು ನಿಯಮದಂತೆ, ಬಗೆಬಗೆಯಲ್ಲಿ ಗಂಧ ಪುಷ್ಪ ಧೂಪ ವಸ್ತ್ರಾದಿಗಳಿಂದ ಪೂಜಿಸಿ, ಸುವರ್ಣದ ಆ 'ಮತ್ಸ್ಯಮೂರ್ತಿ'ಯನ್ನು ಆತನಿಗೆ ಅರ್ಪಿಸಬೇಕು. ಆದರಿಂದ ವ್ರತದ ಫಲವು ಕೋಟಿಗುಣವಾಗಿ ಹೆಚ್ಚುವದು. ಗುರುವನ್ನು ಪಡೆದೂ ಅಜ್ಞಾನದಿಂದ ಉದಾಸೀನ ಮಾಡುವ ಹೀನ ಮನುಷ್ಯನು ಕೋಟಿ ಜನ್ಮಗಳಲ್ಲಿ ನರಕದಲ್ಲಿ ಸಂತಾಪಗೊಳ್ಳುವನು. ವ್ರತದ ವಿಧಿಯನ್ನೂ ಕರ್ಮವನ್ನೂ ತಿಳಿಸುವವನೇ ಗುರುವೆಂದು ಪಂಡಿತರು ಹೇಳುವರು. ಹೀಗೆ ವಿಧಿಗನುಸಾರವಾಗಿ ಕೊಟ್ಟು ಆ ದ್ವಾದಶಿಯಲ್ಲಿ ವಿಷ್ಣುವನ್ನು ಪೂಜಿಸಿ, ಶಕ್ತಿಗನುಸಾರವಾಗಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ದಕ್ಷಿಣೆಯನ್ನೂ ಕೊಡಬೇಕು. ಕಲಶದ ಮೇಲೆ ಇರಿಸಿದ್ದ ಎಳ್ಳು ತುಂಬಿದ ತಾಮ್ರದ ಪಾತ್ರೆಯನ್ನೂ, ನೀರಿನ ಪಾತ್ರೆಯಲ್ಲಿರುವ ದೇವನನ್ನೂ, ಉಳಿದುದೆಲ್ಲವನ್ನೂ ಕುಟುಂಬಿಯಾದ ಬ್ರಾಹ್ಮಣನಿಗೆ ಕೊಡಬೇಕು. ಆಮೇಲೆ ಹೆಚ್ಚಾದ ಪರಮಾನ್ನದಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಬಳಿಕ ವ್ರತಿಯಾದವನು ತಾನು ಮಕ್ಕಳೊಡನೆ, ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡು, ಮೌನದಿಂದ ಊಟಮಾಡಬೇಕು. ಈ ಮತ್ಸ್ಯದ್ವಾದಶೀವ್ರತವನ್ನು ಮಾಡುವವನು ಬ್ರಹ್ಮಲೋಕವನ್ನು ಪಡೆದು ಅಲ್ಲಿ ಬ್ರಹ್ಮನ ಆಯುಷ್ಯದಷ್ಟು ಕಾಲ ನಿಲ್ಲುವನು. ಬಳಿಕ ಬ್ರಹ್ಮನ ಉಪಸಂಹಾರವಾಗುವದು. ಆಗ ಒಡನೆಯೇ ಆ ವ್ರತಿಗೂ ಲಯವುಂಟಾಗುವುದು. ಈ ವ್ರತೋಪವಾಸವನ್ನು ಮಾಡುವ ಮನುಷ್ಯನು ಈ ಜನ್ಮದಲ್ಲಿ ಧನಧಾನ್ಯ ಸೌಭಾಗ್ಯಗಳನ್ನೂ, ಉತ್ತಮಸ್ತ್ರೀಯರನ್ನೂ ಪಡೆಯುವನು. ಉತ್ತಮವಾದ ಈ ದ್ವಾದಶೀ ವಿಧಾನವನ್ನು ಭಕ್ತಿಯಿಂದ ಹೇಳುವವರೂ, ಕೇಳುವವರೂ ಎಲ್ಲಾ ಪಾಪಗಳನ್ನು ಕಳೆದುಕೊಳ್ಳುವರು.

*ವರಾಹ ಪುರಾಣದಲ್ಲಿ ಮೂವತ್ತೊಂಬತ್ತನೇ ಅಧ್ಯಾಯ ಮುಗಿದುದು.*

—o—

**ದುರ್ವಾಸಮುನಿ :-** ಪುಷ್ಯ ಮಾಸದಲ್ಲಿ ದೇವತೆಗಳು ಅಮೃತವನ್ನು ಕಡೆದರು. ಆ ಸಂದರ್ಭದಲ್ಲಿ ದೇವನಾದ ಜನಾರ್ದನನು ತಾನೇ ಕೂರ್ಮರೂಪವನ್ನು ಧರಿಸಿದನು. ಕೂರ್ಮರೂಪಿಯಾದ ಅವನಿಗೆ ಪುಷ್ಯ ಮಾಸದ ಶುಕ್ಲ ಪಕ್ಷದ ದಶಮೀ ತಿಥಿಯು (ಆ ಅವತಾರಕ್ಕೆ) ಉತ್ತಮವಾದುದೆಂದೂ ಉದ್ದಿಷ್ಟವಾಗಿದ್ದಿತೆಂದು ಹೇಳಿದೆ. ಆ ದಶಮಿಯ ದಿನ ಹಿಂದಿನಂತೆ (ಮತ್ಸ್ಯ ದ್ವಾದಶೀ ವ್ರತದಂತೆಯೇ) ಸಂಕಲ್ಪ ಮಾಡಿ ಏಕಾದಶಿಯ ದಿನ ಸ್ನಾನವೇ ಮೊದಲಾದ ನಿತ್ಯ ಕರ್ಮಗಳನ್ನು ಮಾಡಿ, ಭಕ್ತಿಯಿಂದ ವಿಷ್ಣುವನ್ನು ಆರಾಧಿಸಬೇಕು. ಆರಾಧನೆಯಲ್ಲಿ 'ಕೂರ್ಮಾಯ ನಮಃ' ಎಂದು ಮೊದಲು ದೇವರ ಪಾದಗಳನ್ನು ಪೂಜಿಸಿ, 'ನಾರಾಯಣಾಯ ನಮಃ' ಎಂದು ಹರಿಯ ನಡುವನ್ನು 'ಸಂಕರ್ಷಣಾಯ ನಮಃ' ಎಂದು ಉದರವನ್ನು, 'ವಿಶೋಕಾಯ ನಮಃ' ಎಂದು ಹೃದಯವನ್ನು 'ಭವಾಯನಮಃ' ಎಂದು ಕಂಠವನ್ನು 'ಸುಬಾಹವೇ ನಮಃ' ಎಂದು ಭುಜಗಳನ್ನು 'ವಿಶಾಲಾಯ ನಮಃ' ಎಂದು ಶಿರಸ್ಸನ್ನು ಅರ್ಚಿಸಬೇಕು. ದೇವನಿಗೆ ನಮಸ್ಕಾರ ಎಂದು ಅವನ ನಾಮದಿಂದ ಸುಗಂಧ ಪುಷ್ಪಗಳಿಂದ ಅರ್ಚಿಸಬೇಕು ಧೂಪಾದಿಗಳಿಂದಲೂ ಭಕ್ಷ್ಯ ಭೋಜ್ಯ ಫಲಾದಿಯಾದ ಬಗೆಬಗೆಯ ನೈವೇದ್ಯಗಳಿಂದಲೂ ದೇವನನ್ನು ಚೆನ್ನಾಗಿ ಪೂಜಿಸಬೇಕು ದೇವನೆದುರಿಗ ಪೂರ್ಣ ಕಲಶವನ್ನು ಇಟ್ಟು ಅದರೊಳಗೆ ರತ್ನವನ್ನು ಹಾಕಿ, ಬಿಳಿಯ ವಸ್ತ್ರಗಳಿಂದಲೂ, ಮಾಲೆಗಳಿಂದಲೂ, ಹಿಂದಿನಂತೆ ಅಲಂಕರಿಸಬೇಕು. ತನ್ನ ಶಕ್ತಿಗನುಸಾರವಾಗಿ ಚಿನ್ನದಿಂದ ದೇವನ ಕೂರ್ಮಮೂರ್ತಿಯನ್ನು ಮಂದರ ಪರ್ವತ ಸಹಿತನಾಗಿರುವಂತೆ ಮಾಡಿಸಿ ಇಡಬೇಕು. ತುಪ್ಪದಿಂದ ತುಂಬಿದ ಪಾತ್ರೆಯಲ್ಲಿ ಆ ಮೂರ್ತಿಯನ್ನು ಸ್ಥಾಪಿಸಿ, ಪೂರ್ಣ ಕಲಶದ ಮೇಲೆ ಕೂರ್ಮಮೂರ್ತಿ ಸಹಿತವಾದ ಆ ತಾಮ್ರದ ಪಾತ್ರೆಯನ್ನು ಇಟ್ಟು ಪೂಜಿಸಿ ಹಿಂದಿನಂತೆಯೇ ಕುಟುಂಬಿಯಾದ ಬ್ರಾಹ್ಮಣನನ್ನು ಪೂಜಿಸಿ, ಅವನಿಗೆ ದಾನ ಮಾಡಬೇಕು. ಮಾರನೆಯ ದಿನ (ದ್ವಾದಶಿಯಲ್ಲಿ) ಯಥಾಶಕ್ತಿಯಾಗಿ ಬ್ರಾಹ್ಮಣರನ್ನು ದಕ್ಷಿಣೆಯೇ ಮೊದಲಾದವುಗಳಿಂದ ಪೂಜಿಸಿ, ದೇವದೇವನೂ ಕೂರ್ಮರೂಪಿಯೂ ಆದ ನಾರಾಯಣನನ್ನು ಸಂತೋಷಪಡಿಸಬೇಕು. ಬಳಿಕ ಸೇವಕಸಮೂಹದೊಡನೆ ವ್ರತಿಯಾದವನು ಊಟ ಮಾಡಬೇಕು. ವಿಪ್ರ (ಸತ್ಯತಪ)ನೇ, ಭಕ್ತಿಯಿಂದ ಹೀಗೆ ಮಾಡಿದರೆ ಸಮಸ್ತ ಪಾಪವೂ ಪರಿಹಾರವಾಗುವುದು. ಇದರಲ್ಲಿ ವಿಚಾರ ಮಾಡಲೇಬಾರದು. ಈ ವ್ರತವನ್ನು ಮಾಡುವವನು ಸಂಸಾರಚಕ್ರವನ್ನು ಬಿಟ್ಟು ಶುದ್ಧವೂ ಪುರಾತನವೂ ಆದ ವಿಷ್ಣುಲೋಕವನ್ನು ಪಡೆಯವನು. ಅನೇಕ ಜನ್ಮಾಂತರಗಳಲ್ಲಿ ಮಾಡಿದ ಪಾಪರಾಶಿಯು ಒಡನೆಯೇ ನಾಶವಾಗುವುದು. ಈ ಲೋಕದಲ್ಲಿ ಅವನು ಶ್ರೀಮಂತನೂ, ಸತ್ಯಧರ್ಮವುಳ್ಳವನೂ ಆಗುವನು. ಅಲ್ಲದೆ ಹಿಂದೆ ಹೇಳಿರುವ ಫಲವೆಲ್ಲವನ್ನೂ ಪಡೆಯುವನು. ನಾರಾಯಣನು ಕೂಡಲೇ (ಈ ವ್ರತದಿಂದ) ತೃಪ್ತನಾಗುವನು.

*ವರಾಹ ಪುರಾಣದಲ್ಲಿ ನಲವತ್ತನೇ ಅಧ್ಯಾಯ ಮುಗಿದುದು*

—o—

**ದೂರ್ವಾಸಮುನಿ :-** ಪರಮಧಾರ್ಮಿಕನಾದ ಮುನಿಯೇ, ಹೀಗೆಯೇ ಮಾಘಮಾಸದ ಶುಕ್ಲಪಕ್ಷದ ದ್ವಾದಶೀ ದಿನ ಮಾಡಬೇಕಾದ, ಭೂದೇವಿಯನ್ನು ಉದ್ಧರಿಸಿದ ಆದಿವರಾಹದೇವನ ವ್ರತದವಿಚಾರವನ್ನು ಕೇಳು.

ಹಿಂದೆ ಹೇಳಿದ ವಿಧಾನದಿಂದ ಸಂಕಲ್ಪ ಮಾಡಿ, ಸ್ಥಳವನ್ನು ಸಿದ್ಧಪಡಿಸಿ, ವಿದ್ವಾಂಸನಾದವನು ಏಕಾದಶಿಯ ದಿನ ಅಚ್ಯುತನನ್ನು ಗಂಧ, ಧೂಪ, ನೈವೇದ್ಯಾದಿಗಳಿಂದ ಪೂಜಿಸಿ ಬಳಿಕ ಅವನೆದುರಿಗೆ ನೀರು ತುಂಬಿದ್ದ ಕಲಶವನ್ನಿಡಬೇಕು. ' ವರಾಹಾಯ ನಮಃ ' ಎಂದು ಹರಿಯ ಪಾದಗಳನ್ನು 'ಮಾಧವಾಯ ನಮಃ' ಎಂದು ನಡುವನ್ನು 'ಕ್ಷೇತ್ರಜ್ಞಾಯ ನಮಃ' ಎಂದು ಉದರವನ್ನು ವಿಶ್ವರೂಪಾಯ ನಮಃ ಎಂದು ಎದೆಯನ್ನು 'ಸರ್ವಜ್ಞಾಯ ನಮಃ' ಎಂದು ಕಂಠವನ್ನು 'ಪ್ರಜಾನಾಂಪತಯೇ ನಮಃ' ಎಂದು ಶಿರಸ್ಸನ್ನು, 'ಪ್ರದ್ಯುಮ್ನಾಯ ನಮಃ' ಎಂದು ಭುಜಗಳನ್ನೂ, ದಿವ್ಯಾಸ್ತ್ರಾಯ ನಮಃ' ಎಂದು ಚಕ್ರವನ್ನು 'ಅಮೃತೋದ್ಭವಾಯ ನಮಃ' ಎಂದು ಶಂಖವನ್ನು ಅರ್ಚಿಸಬೇಕು. ಇದೇ ಅರ್ಚನೆಯ ಕ್ರಮ. ಬುದ್ಧಿವಂತನಾದವನು ಹೀಗೆ ಪೂಜಿಸಿ ದ್ರವ್ಯಾನುಕೂಲವಿದ್ದಂತೆ ಚಿನ್ನದ, ಬೆಳ್ಳಿಯ ಅಥವಾ ತಾಮ್ರದ ಬೇಕಾದ ಸರ್ವವಸ್ತುಗಳಿಂದ ಕೂಡಿದ ಪೂರ್ಣ ಕಲಶವನ್ನಿರಿಸಬೇಕು. ಪರ್ವತ ನದಿಗಳಿಂದ ಕೂಡಿದ ಭೂದೇವಿಯನ್ನು ಕೋರೆಯ ಹಲ್ಲಿನ ಅಗ್ರದಲ್ಲಿ ಧರಿಸಿರುವಂತೆ ಲಕ್ಷ್ಮೀಪತಿಯೂ, ಮಧುನಾಶಕನೂ ಆದ ದೇವನ ವರಾಹಮೂರ್ತಿಯನ್ನು ಚಿನ್ನದಿಂದ ಅನುಕೂಲವಿದ್ದಷ್ಟು ಪರಿಮಾಣದಲ್ಲಿ ಮಾಡಿಸಿ ಸರ್ವ ವಿಧವಾದ ಧಾನ್ಯ (ಬೀಜ)ದಿಂದ ತುಂಬಿದ ರತ್ನ ಸಹಿತವಾದ ತಾಮ್ರದ ಪಾತ್ರೆಯಲ್ಲಿ ಸ್ಥಾಪಿಸಬೇಕು. ಮೂರ್ತಿ ಸಹಿತವಾದ ಆ ತಾಮ್ರದ ಪಾತ್ರೆಯನ್ನು ಕಲಶದ ಮೇಲಿಡಬೇಕು. ವರಾಹ ಮೂರ್ತಿಗೆ ಬಿಳಿಯ ವಸ್ತ್ರಗಳೆರಡನ್ನು ಉಡಿಸಿ, ಗಂಧ ಪುಷ್ಪಗಳಿಂದಲೂ ಬಗೆಬಗೆಯ ಶುಭಕರವಾದ ನೈವೇದ್ಯಗಳಿಂದಲೂ ಪೂಜಿಸಬೇಕು. ಅಲ್ಲಿಯೇ ಹೂವಿನಿಂದ ಮಂಡಲವನ್ನು ಮಾಡಿ, ಅದರಲ್ಲಿ ಜಾಗರಣೆಯನ್ನು ಮಾಡುತ್ತ, ಹರಿಯು ಅಲ್ಲಿ ಅವತರಿಸುವನೆಂದು ಅವನನ್ನು ಧ್ಯಾನಿಸುತ್ತಲೂ, ಸ್ತುತಿಸುತ್ತಲೂ ಇರಬೇಕು. ಹೀಗೆ ಪೂಜೆ ಮಾಡಿ, ರಾತ್ರಿ ಕಳೆದು, ಸೂರ್ಯೋದಯವಾಗುತ್ತಲೇ ಸ್ನಾನಮಾಡಿ, ಶುಚಿರ್ಭೂತನಾಗಿ ಹರಿಯನ್ನು ಪೂಜಿಸಿ, ವೇದವೇದಾಂತಗಳನ್ನು ಚೆನ್ನಾಗಿ ಅರಿತವನೂ, ಸಾಧುವೃತ್ತಿಯುಳ್ಳವನೂ, ವಿದ್ಯಾವಂತನೂ, ವಿಷ್ಣುಭಕ್ತನೂ, ಶಾಂತನೂ, ಶೋತ್ರಿಯನೂ, ಕುಟುಂಬಿಯೂ ಆದ ಬ್ರಾಹ್ಮಣನಿಗೆ ಕಲಶದೊಡನೆ ವರಾಹ ರೂಪಿಯಾದ ಆ ಹರಿಯನ್ನು ಸಮರ್ಪಿಸಬೇಕು.

ಹಾಗೆ ಅರ್ಪಿಸಿದವನು ಬಳಿಕ ಯಾವ ಫಲವನ್ನು ಪಡೆಯುವನೆಂಬುದನ್ನು ನಾನು ಹೇಳುತ್ತೇನೆ ಕೇಳು. ಈ ಜನ್ಮದಲ್ಲಿ ಸೌಭಾಗ್ಯವನ್ನು, ಕಾಂತಿಯನ್ನೂ, ತೃಪ್ತಿಯನ್ನೂ, ಶ್ರೀಯನ್ನೂ ಪಡೆಯುವನು. ಅಲಕ್ಷ್ಮಿಯು ಕೂಡಲೇ ತೊಲಗಿ, ಲಕ್ಷ್ಮಿಯೂ ತಾನಾಗಿ ಬಲಾತ್ಕಾರದಿಂದ ಅವನ ಮನೆಯನ್ನು ಪ್ರವೇಶಿಸುವಳು. ಈ ಜನ್ಮದಲ್ಲಿ ಈ ಸೌಭಾಗ್ಯಗಳೆಲ್ಲವೂ ಲಭಿಸುವುದಲ್ಲದೆ ಪರಲೋಕದಲ್ಲಿ ಲಭಿಸುವ ಫಲ ವಿಚಾರದಲ್ಲಿ

ಹಿಂದೆ ನಡೆದ ಪುರಾತನ ಇತಿಹಾಸವನ್ನು ಕೇಳು. ಪ್ರತಿಷ್ಠಾನ (ಪೈಠಣ)ದಲ್ಲಿ ವೀರಧನ್ವನೆಂಬ ಪ್ರಸಿದ್ಧನಾದ ದೊರೆಯಿದ್ದನು. ಶತ್ರುಸಂತಾಪಕನಾದ ಆತನು ಒಂದಾನೊಂದು ಸಾರೆ ಬೇಟೆಗಾಗಿ ಕಾಡಿಗೆ ಹೋದನು. ಅಲ್ಲಿ ಋಷಿಗಳು ವಾಸಿಸುತ್ತಿದ್ದ ಪ್ರದೇಶದ ಮಧ್ಯಕ್ಕೆ ಹೋಗಿ, ಮೃಗ ಗಣಗಳನ್ನು ಕೊಲ್ಲುತ್ತಿದ್ದನು. ಅಲ್ಲಿ ಸಂವರ್ತನೆಂಬ ಋಷಿಯ ಪುತ್ರರೂ. ವೇದಾಧ್ಯಯನಾಸಕ್ತರೂ, ಆದ ಐವತ್ತು ಜನ ಸಹೋದರರು ಜಿಂಕೆಗಳ ರೂಪದಿಂದ ವಾಸಿಸುತ್ತಿದ್ದರು. ವೀರ ಧನ್ವರಾಜನು ಅರಿಯದೇ, ಮೃಗ ವೇಷದಿಂದಿದ್ದ ಆ ಬ್ರಾಹ್ಮಣರನ್ನು ಕೊಂದನು.

**ಸತ್ಯತಪ :-** ಬ್ರಹ್ಮನೇ, ಅವರು ಯಾವ ಕಾರಣದಿಂದ ಮೃಗರೂಪವನ್ನು ಧರಿಸಿದ್ದರು ? ಇದನ್ನು ತಿಳಿಯಲು ನನಗೆ ಬಹಳ ಕುತೂಹಲವಾಗಿದೆ. ನಮಸ್ಕರಿಸ್ತತೇನೆ ದಯವಿಟ್ಟು ಹೇಳಿರಿ. ನಮಸ್ಕರಿಸುತ್ತೇನೆ.

**ದೂರ್ವಾಸಮುನಿ :-** ಮುನಿಯೇ, ಒಂದಾನೊಂದು ವೇಳೆ ಅವರು ಕಾಡಿಗೆ ಹೋಗಿ, ಅಲ್ಲಿ ಅದೇ ತಾನೆ ಹುಟ್ಟಿದ ತಬ್ಬಲಿಗಳಾದ ಜಿಂಕೆಯ ಮರಿಗಳನ್ನು ನೋಡಿ ಒಬ್ಬೊಬ್ಬರು ಒಂದೊಂದನ್ನು ಎತ್ತಿಕೊಂಡರು. ಗುಹೆಯಲ್ಲಿಟ್ಟಿದ್ದ ಅವು ಸತ್ತು ಹೋದವು. ಆದರಿಂದ ದುಃಖಿತರಾದ ಅವರೆಲ್ಲರೂ ಸಮೀಪದಲ್ಲಿಯೇ ಇದ್ದ ತಂದೆಯ ಬಳಿಗೆ ಹೋಗಿ ತಾವು ಮಾಡಿದ ಮೃಗ ಹಿಂಸೆಯನ್ನು ನಿಜವಾಗಿ ಹೇಳಿದರು.

**ಋಷಿಪುತ್ರರು :-** ಮುನಿಯೇ, ನಮಗೆ ಕೊಲ್ಲಬೇಕೆಂದು ಮನಸ್ಸಿರಲಿಲ್ಲ. ಆದರೂ ಅಕಸ್ಮಾತ್ತಾಗಿ ಆಗ ತಾನೇ ಹುಟ್ಟಿದ ಐದು ಜಿಂಕೆಯ ಮರಿಗಳನ್ನು ನಾವು ಕೊಂದಿದ್ದೇವೆ. ನಮಗೆ ತಕ್ಕ ಪ್ರಾಯಶ್ಚಿತ್ತವನ್ನು ವಿಧಿಸು.

**ಸಂವರ್ತ :-** ನಮ್ಮ ತಂದೆಯು ಹಿಂಸಕನಾಗಿದ್ದನು. ನಾನು ಅವನಿಗಿಂತ ಹೆಚ್ಚಾಗಿ ಆದೆನು. ನನ್ನ ಮಕ್ಕಳಾದ ನೀವು ಪಾಪ ಕರ್ಮಿಗಳಾದಿರಿ. ಈಗ ನೀವು ಜಿಂಕೆಯ ಚರ್ಮವನ್ನು ಧರಿಸಿ ಮುನಿವೃತ್ತಿಗಳಾಗಿ ಐದುವರ್ಷಕಾಲ ನಡೆಯಿರಿ. ಬಳಿಕ ಶುದ್ಧರಾಗುವಿರಿ.'' ಹೀಗೆ ಹೇಳಿಸಿಕೊಂಡ ಆ ಮಕ್ಕಳು ಜಿಂಕೆಯ ಚರ್ಮವನ್ನು ಹೊದೆದು ಕೊಂಡು ವ್ಯಾಕುಲವಿಲ್ಲದೆ ಶಾಶ್ವತ ಬ್ರಹ್ಮಜಪ ಮಾಡುತ್ತ ಕಾಡಿನಲ್ಲಿದ್ದರು. ಹಾಗೆ ವರ್ಷಕಳೆಯಲು, ವೀರ ಧನ್ವರಾಜನು ಅವರು ಮೃಗ ರೂಪಿಗಳಾಗಿ ಚಲಿಸುತ್ತಿದ್ದಲ್ಲಿಗೆ ಬಂದನು. ಅವರೆಲ್ಲರೂ ಕೃಷ್ಣಾಜಿನವನ್ನು ಧರಿಸಿದವರಾಗಿ ಒಂದು ಮರದ ಕೆಳಗೆ ಜಪ ಮಾಡುತ್ತಿದ್ದರು. ರಾಜನು ಅವರನ್ನು ಜಿಂಕೆಗಳೆಂದೇ ತಿಳಿದುಕೊಂಡನು. ಜಿಂಕೆಗಳೆಂದು ಕೊಂಡೇ ರಾಜನು ಹೊಡೆಯಲಾಗಿ ಈ ಬ್ರಹ್ಮಾದಿಗಳೆಲ್ಲರೂ ಒಟ್ಟಿಗೆ ಮೃತರಾದರು. ಶ್ಲಾಘ್ಯವಾದ ವ್ರತಗಳನ್ನು ಮಾಡುವ ಬ್ರಾಹ್ಮಣರಾದ ಅವರು ಸತ್ತುದುದನ್ನು ನೋಡಿ, ರಾಜನು ಭಯದಿಂದ ನಡುಗುತ್ತಾ ದೇವರಾತಾಶ್ರಮಕ್ಕೆ ಹೋದನು. ಅಲ್ಲಿ ರಾಜನು, ಬ್ರಾಹ್ಮಣರ ಕೊಲೆಯ ವೃತ್ತಾಂತವನ್ನು ಮೊದಲಿನಿಂದಲೂ ಹೇಳಿ ಅತಿ ದುಃಖಿತನಾಗಿ, ''ಮಹಾಮುನಿಯೇ, ನನಗೆ ಬ್ರಹ್ಮಹತ್ಯಾ ದೋಷವು ಬಂದಿತು. ಏನು ಮಾಡಲಿ!'' ಎಂದು ಬಹಳ ಅತ್ತನು. ಋಷಿಯಾದ ದೇವರಾತನು ಅಳುತ್ತಿದ್ದ ರಾಜೋತ್ತಮನಿಗೆ ''ದೊರೆಯೇ, ಹೆದರಬೇಡ. ನಿನ್ನ ಪಾಪವನ್ನು

ಹೋಗಲಾಡಿಸುವೆನು. ರಾಜೇಂದ್ರನೇ, ವರಾಹ ರೂಪಿಯಾದ ದೇವದೇವನೂ, ವಿಷ್ಣುವೂ ಆದ ಆ ಜನಾರ್ದನನು ಸುತಲವೆಂಬ ಹೆಸರಿನ ಪಾತಾಳದಲ್ಲಿ ಮುಳುಗಿದ್ದ ಭೂದೇವಿಯನ್ನು ಉದ್ಧರಿಸಿದ. ಹಾಗೆಯೇ ಬ್ರಹ್ಮಹತ್ಯಾ ಪಾಪದಿಂದ ಕಳವಳಪಡುತ್ತಿರುವ ನಿನ್ನನ್ನು ತಾನಾಗಿಯೇ ಉದ್ಧರಿಸುವನು'' ಎಂದನು. ಹೀಗೆ ಹೇಳಿಸಿಕೊಂಡ ರಾಜನು ಸಂತೋಷವುಳ್ಳವನಾಗಿ, ''ಸಜ್ಜನೋತ್ತಮನೇ, ಆ ದೇವನು ನನಗೆ ಯಾವ ವಿಧದಿಂದ ಪ್ರಸನ್ನನಾಗುವನು ? ಪ್ರಸನ್ನನಾದರೆ ಏತರಿಂದ ಸರ್ವಾಶುಭವೂ (ಪಾಪವೂ) ನಾಶವಾಗುವುದು ?'' ಎಂದು ಕೇಳಿದನು.

**ದೂರ್ವಾಸಮುನಿ :-** ಮುನಿಶ್ರೇಷ್ಠನೇ, ಈ ವೀರ ಧನ್ವರಾಜನು ಹೀಗೆ ಕೇಳಲು ಈ ವರಾಹದ್ವಾದಶೀ ವ್ರತವನ್ನು ದೇವರಾತ ಋಷಿಯು ಹೇಳಿದನು. ಆ ರಾಜನೂ ಅದನ್ನು ಮಾಡಿ, ಈ ಲೋಕದಲ್ಲಿ ವಿಪುಲವಾಗಿ ಭೋಗಗಳನ್ನನುಭವಿಸಿ, ಮರಣ ಕಾಲದಲ್ಲಿ ಹೊಳೆಯುವ ಹೊನ್ನಿನ ವಿಮಾನದಲ್ಲಿ ಕುಳಿತು, ಇಂದ್ರಲೋಕವಾದ ಸ್ವರ್ಗದ ಹತ್ತಿರ ಹೋದನು. ಇಂದ್ರನು ಪೂಜಾದ್ರವ್ಯಗಳ್ನು ತೆಗೆದುಕೊಂಡು ಅವನನ್ನು ಎದುರುಗೊಳ್ಳಲು ಹೋದನು. ಇಂದ್ರನು ಬರುತ್ತಿರುವುದನ್ನು ನೋಡಿ ವಿಮಾನವನ್ನು ತಂದಿದ್ದ ವಿಷ್ಣುದೂತರು, ''ದೇವರಾಜನೇ, ತಪಸ್ಸಿಲ್ಲದವನಾದ ನೀನು ಈ ವೀರಧನ್ವನನ್ನು ನೋಡಕೂಡದು'' ಎಂದರು. ಹೀಗೆ ಲೋಕಪಾಲಕರೆಲ್ಲರೂ ಅವನ ತೇಜಸ್ಸಿನಿಂದ ವಿಸ್ಮಿತರಾಗಿ ಎದುರುಗೊಂಡು ಹೊರಟರು. ಹೀನ ಕರ್ಮರಾದುದರಿಂದ ಅವರೆಲ್ಲರನ್ನೂ ವಿಷ್ಣುದೂತರು ನಿರಾಕರಿಸಿಬಿಟ್ಟರು. ಮಹಾಮುನಿಯೇ, ವೀರಧನ್ವಮಹಾರಾಜನು ಹೀಗೆ ಸತ್ಯಲೋಕದವರೆಗೂ ಹೋಗಿ, ಪುನರ್ಮರಣ ವಿಲ್ಲದುದೂ, ಸುಡುವ ಪ್ರಳಯ ವಿಲ್ಲದದೂ ಆದ ಆ ಲೋಕದಲ್ಲಿ ದೇವತೆಗಳಿಂದ ಸ್ತೋತ್ರ ಮಾಡಿಸಿಕೊಳ್ಳುತ್ತ ಈಗಲೂ ಇದ್ದಾನೆ. ಯಜ್ಞಪುರುಷನಾದ ಆ ನಾರಾಯಣನು ಪ್ರಸನ್ನನಾದರೆ ಯಾವುದಾಗುವದರಲ್ಲಿ ತಾನೇ ಆಶ್ಚರ್ಯವೇನು ! ಒಂದೊಂದು ದ್ವಾದಶೀ ವ್ರತವನ್ನು ವಿಧಿಪೂರ್ವಕವಾಗಿ ಮಾಡಿದರೆ ಈ ಲೋಕದಲ್ಲಿ ಸೌಭಾಗ್ಯವನ್ನೂ, ಆಯುರಾರೋಗ್ಯ ಸಂಪತ್ತುಗಳನ್ನೂ ಬಳಿಕ ಉತ್ತಮವಾದ ಮುಕ್ತಿಯನ್ನೂ ಶ್ರೀ ಹರಿಯು ಕೊಡುತ್ತಾನೆ. ಎಲ್ಲಾ ದ್ವಾದಶೀ ವ್ರತಗಳಿಂದಲೂ ಸಂಪೂರ್ಣ ತೃಪ್ತನಾದ ಅವನು ತನ್ನ ಪದ (ಸ್ಥಾನ)ವನ್ನೇ ಅನುಗ್ರಹಿಸುವನೆಂಬುದರಲ್ಲಿ ಏನಾಶ್ಚರ್ಯ ! ವೇದಗಳೆಂಬ ನಾಲ್ಕು ಮೂರ್ತಿಗಳುಳ್ಳ ನಾರಾಯಣನು ಶ್ರೇಷ್ಠನು ಸಂಶಯವಿಲ್ಲ. ಈ ಕೇಶವನು ಮತ್ಸ್ಯರೂಪದಿಂದ ವೇದಗಳನ್ನು ಹೇಗೆ ಉದ್ಧರಿಸಿದನೋ ಹಾಗೇಯೇ ಕ್ಷೀರಸಾಗರವನ್ನು ಕಡೆಯುವಾಗ ಕೂರ್ಮರೂಪಿಯಾಗಿ ಮಂದರ ಪರ್ವತವನ್ನು ಧರಿಸಿದನು. ಎರಡನೆಯವನಾದ ಈ ವೈಷ್ಣವಮೂರ್ತಿಯನ್ನು ನೋಡು. ಅದರಂತೆಯೇ ವರಾಹ ರೂಪಿಯಾದ ಆ ಪುರುಷೋತ್ತಮನು ರಸಾತಲದಿಂದ ಭೂದೇವಿಯನ್ನು ಉದ್ಧರಿಸಿದನಲ್ಲವೇ ! ಮೂರನೇ ಯದಾದ ಇದೂ ವೈಷ್ಣವ ಮೂರ್ತಿಯೇ ನೋಡು.

*ವರಾಹ ಪುರಾಣದಲ್ಲಿ ನಲವತ್ತೊಂದನೇ ಅಧ್ಯಾಯ ಮುಗಿದುದು*

—o—

**ದೂರ್ವಾಸಮುನಿ :-** ತಿಳಿದವ'ನು ಫಾಲ್ಗುಣ ಮಾಸದ ಶುಕ್ಲಪಕ್ಷದ ಏಕಾದಶಿಯ ದಿನ ಹಿಂದಿನ ಹಾಗೆಯೇ, ಉಪವಾಸ ಮಾಡಿ, ಶಾಸ್ತ್ರೋಕ್ತವಾಗಿ ಹರಿಯನ್ನು ಆರಾಧಿಸಬೇಕು. 'ನರಸಿಂಹಾಯ ನಮಃ' ಎಂದು ಹರಿಯ ಪಾದಗಳನ್ನು 'ಗೋವಿಂದಾಯ ನಮಃ' ಎಂದು ತೊಡೆಗಳನ್ನೂ, 'ವಿಶ್ವಭುಜೇ ನಮಃ' ಎಂದು ನಡುವನ್ನೂ, 'ಅನಿರುದ್ಧಾಯ ನಮಃ' ಎಂದು ಎದೆಯನ್ನೂ 'ಶಿತಿಕಂಠಾಯ ನಮಃ' ಎಂದು ಕತ್ತನ್ನೂ, 'ಪಿಂಗ ಕೇಶಾಯ ನಮಃ' ಎಂದೂ ತಲೆಯನ್ನೂ, 'ಅಸುರ ಧ್ವಂಸನಾಯ ನಮಃ' ಎಂದು ಚಕ್ರವನ್ನೂ 'ತೋಯಾತ್ಮನೇ ನಮಃ' ಎಂದು ಶಂಖವನ್ನೂ ಅರ್ಚಿಸಿ ಗಂಧ ಪುಷ್ಪಫಲಾದಿಗಳನ್ನೂ ಅರ್ಪಿಸಿ, ಆ ದೇವನ ಮುಂದುಗಡೆಯಲ್ಲಿ ಬಿಳಿಯ ವಸ್ತ್ರಗಳೆರಡರಿಂದ ಅಲಂಕೃತವಾದ ಪೂರ್ಣಕಲಶವನ್ನು ಇಡಬೇಕು. ರತ್ನಗರ್ಭವಾದ ಈ ಕಲಶದ ಮೇಲೆ ಸುವರ್ಣದ ನರಸಿಂಹ ಮೂರ್ತಿಯನ್ನು ಅನುಕೂಲವಿದ್ದಂತೆ ಮಾಡಿಸಿ, ತಾಮ್ರದ ಪಾತ್ರೆಯಲ್ಲಾಗಲಿ ಮರದ ಅಥವಾ ಬಿದಿರಿನ ಪಾತ್ರೆಯಲ್ಲಾಗಲಿ ಇರುವಂತೆ ಸ್ಥಾಪಿಸಿ, ಆ ದಿನ ಚೆನ್ನಾಗಿ ಪೂಜಿಸಿ, ದ್ವಾದಶಿಯ ದಿನ ವೇದ ವಿದ್ವಾಂಸನಾದ ಬ್ರಾಹ್ಮಣನಿಗೆ ಅರ್ಪಿಸಬೇಕು. ಹೀಗೆ ವ್ರತವನ್ನು ಮಾಡಿ ಹಿಂದೆ ವತ್ಸನೆಂಬ ದೊರೆಯೊಬ್ಬನು ಏನು ಫಲವನ್ನು ಪಡೆದನೋ ಅದನ್ನು ಹೇಳುವೆನು ಕೇಳು. ಮಹಾಮುನಿಯೇ, ಕಿಂಪುರುಷ ವರ್ಷದಲ್ಲಿ ಭಾರತನೆಂಬ ಪ್ರಸಿದ್ಧನೂ, ಪರಮ ಧಾರ್ಮಿಕನೂ ಆದ ದೊರೆಯಿದ್ದನು. ಅವನಿಗೆ ವತ್ಸನೆಂಬ ಮಗನು ಉದಿಸಿದನು. ಶತ್ರುಗಳು ವತ್ಸನನ್ನು ಯುದ್ಧದಲ್ಲಿ ಸೋಲಿಸಿ, ಅವನ ಕೋಶವನ್ನು ಅಪಹರಿಸಿಬಿಟ್ಟರು. ವತ್ಸನು ಕಾಲು ನಡಿಗೆಯಿಂದ ಪತ್ನಿಯೊಡನೆ ವಸಿಷ್ಠಾಶ್ರಮಕ್ಕೆ ಹೋಗಿ ನಿಂತನು. ಬಹುಕಾಲದ ಮೇಲೆ ಮಹಾತ್ಮನಾದ ವಸಿಷ್ಠನು ವತ್ಸನನ್ನು "ಏತಕ್ಕಾಗಿ ಈ ಮಹಾಶ್ರಮದಲ್ಲಿ ವಾಸುತ್ತೀಯೇ ?" ಎಂದು ಕೇಳಿದನು.

**ದೊರೆ :-** "ಪೂಜ್ಯನೇ, ಹಗೆಗಳು ನನ್ನ ರಾಜ್ಯಕೋಶಗಳೇ ಮೊದಲಾದವನ್ನೆಲ್ಲವನ್ನೂ ಕಿತ್ತುಕೊಂಡರು. ಅಸಹಾಯನಾದ ನಾನು ನಿನ್ನನ್ನು ಮೊರೆ ಹೊಕ್ಕಿದ್ದೇನೆ. ನನಗೆ ಉಪದೇಶ ಮಾಡುವುದರಿಂದ ಅನುಗ್ರಹಿಸಬೇಕು" ಎಂದು ಕೇಳಿದನು.

**ದೂರ್ವಾಸ :-** ಸತ್ಯತಪನೇ, ಹೀಗೆ ಕೇಳಿಕೊಂಡಾಗ ವಸಿಷ್ಠ ಮುನಿಯು ಅವನಿಗೆ ಈ ನರಸಿಂಹ ದ್ವಾದಶೀ ವ್ರತವನ್ನು ಉಪದೇಶಿಸಿದನು. ವತ್ಸರಾಜನೂ ಎಲ್ಲವನ್ನೂ ವಿಧಿಯಂತೆ ಮಾಡಿದನು. ವ್ರತದ ಕಡೆಯಲ್ಲಿ ಭಗವಂತನಾದ ನರಸಿಂಹನು ಸಂತಸಗೊಂಡು ಒಲಿದು, ಅವನಿಗೆ ಯುದ್ಧದಲ್ಲಿ ಶತ್ರುಗಳನ್ನು ಧ್ವಂಸ ಮಾಡುವ ಚಕ್ರವನ್ನು ಅನುಗ್ರಹಿಸಿದನು. ಈ ರಾಜನು ಆ ಚಕ್ರಾಸ್ತ್ರದಿಂದ ತನ್ನ ರಾಜ್ಯವನ್ನು ಮತ್ತೆ ಜಯಿಸಿದನು. ರಾಜ್ಯದಲ್ಲಿದ್ದುಕೊಂಡು ಪ್ರಭುವಾದ ಆ ವತ್ಸನು ಸಾವಿರ ಅಶ್ವಮೇಧ ಯಜ್ಞಗಳನ್ನು ಮಾಡಿದನು. ಸತ್ಪುರುಷರಲ್ಲಿ ಮೇಲಾದ ಅವನು ಕೊನೆಗೆ ವಿಷ್ಣುಲೋಕವೆಂಬ ಸ್ಥಾನವನ್ನು ಪಡೆದನು. ಸತ್ಯತಪನೇ, ಪುಣ್ಯಪ್ರದವೂ, ಪಾಪಹರವೂ ಆದ ಈ ದ್ವಾದಶಿಯನ್ನು ನಿನಗೆ ಹೇಳಿದ್ದೇನೆ. ಶುದ್ಧವಾದ ಮನಸ್ಸಿನಿಂದ ಇದನ್ನು ಕೇಳಿ ನೀನು, ಹೇಗೆ ಇಷ್ಟವೋ ಹಾಗೆ ಮಾಡು.

*ವರಾಹ ಪುರಾಣದಲ್ಲಿ ನಲವತ್ತೆರಡನೇ ಅಧ್ಯಾಯ ಮುಗಿದುದು*

**ದೂರ್ವಾಸಮುನಿ :-** ಮುನಿಯೇ, ಹೀಗೆಯೇ ಚೈತ್ರಮಾಸದ ದ್ವಾದಶೀವ್ರತವನ್ನು ಮಾಡುವೆನೆಂದು ಸಂಕಲ್ಪ ಮಾಡಿ, ಏಕಾದಶಿಯ ದಿನ ಉಪವಾಸ ಮಾಡಿ, ಭಕ್ತಿಯಿಂದ ದೇವದೇವನಾದ ನಾರಾಯಣನನ್ನು ಆರಾಧಿಸಬೇಕು. ' ವಾಮನಾಯ ನಮಃ ' ಎಂದು ಅವನ ಪಾದಗಳನ್ನೂ, 'ವಿಷ್ಣವೇ ನಮಃ' ಎಂದು ಉದರವನ್ನೂ, 'ಸಂಕರ್ಷಣಾಯ ನಮಃ' ಎಂದು ಹೃದಯವನ್ನೂ, 'ವಿಶ್ವಭೃತೇ ನಮಃ' ಎಂದು ಕಂಠವನ್ನೂ, 'ವ್ಯೋಮರೂಪಿಣೇ ನಮಃ' ಎಂದು ಶಿರಸ್ಸನ್ನೂ, 'ವಿಶ್ವಜಿತೇ ನಮಃ' ಎಂದು ತೋಳುಗಳನ್ನು, ಅವುಗಳ ಹೆಸರಿನಿಂದಲೇ ಶಂಖ ಚಕ್ರಗಳನ್ನು ಕ್ರಮವಾಗಿ ಪೂಜಿಸಬೇಕು. ಹೀಗೆ ಸನಾತನ ದೇವದೇವನನ್ನು ಆರಾಧಿಸಿ, ಹಿಂದಿನಿಂದ ರತ್ನಸಹಿತವೂ ಪವಿತ್ರವೂ ಆದ ಪೂರ್ಣ ಕುಂಭವನ್ನು ಅವನ ಮುಂದೆ ಇಡಬೇಕು. ಯಜಮಾನನು ತನ್ನ ಶಕ್ತಿಗನುಸಾರವಾಗಿ ಮಾಡಿಸಿದ ಸುವರ್ಣದ ವಾಮನ ಮೂರ್ತಿಯನ್ನು ಬೆಳ್ಳಗಿರುವ ಯಜ್ಞೋಪವೀತವುಳ್ಳ ವನನ್ನಾಗಿ ಮಾಡಿ ಹಿಂದೆ ಹೇಳಿರುವ ಪಾತ್ರದಲ್ಲಿ ಬಿಜಯ ಮಾಡಿಸಿ, ಆ ಪಾತ್ರೆಯನ್ನು ಕಲಶದ ಮೇಲಿಡಬೇಕು. ವಾಮನಮೂರ್ತಿಯ ಪಕ್ಕದಲ್ಲಿ ಕಮಂಡಲವನ್ನೂ, ಛತ್ರಿಯನ್ನೂ ಪಾದುಕೆಗಳನ್ನೂ ಇಡಬೇಕು. ಜಪಮಾಲೆಯನ್ನು ದೇವನಿಗೆ ಧರಿಸಬೇಕು. ಮುಖ್ಯವಾಗಿ ಕೃಷ್ಣಾಜಿನದ ಆಸನವನ್ನು ಇಡಬೇಕು. ಬೆಳಗಾಗುತ್ತಲೇ (ದ್ವಾದಶಿಯಲ್ಲಿ) ಈ ಸಾಮಗ್ರಿಗಳೆಲ್ಲವುಗಳೊಡನೆ ವಾಮನಮೂರ್ತಿ ಯನ್ನು ಬ್ರಾಹ್ಮಣನಿಗೆ ಅರ್ಪಿಸಬೇಕು. ಅರ್ಪಿಸಿ ''ವಾಮನ ರೂಪಿಯಾದ ವಿಷ್ಣುವು ತೃಪ್ತನಾಗಲಿ'' ಎಂದು ಹೇಳಬೇಕು. ಮಾಸದ ಹೆಸರಿನಿಂದ ಕೂಡಿದವನೂ ಎಂದರೆ ಚೈತ್ರಿಕವಾಮನನು ಪ್ರೀತನಾಗಲಿ ಎಂದು ಹೇಳಬೇಕೆಂದು ಈ ನಿಯಮವನ್ನು ಎಲ್ಲೆಲ್ಲಿಯೂ ಹೇಳಿದೆ. ಹರ್ಯಶ್ವನೆಂಬ ದೊರೆಯಿದ್ದನೆಂದು ಕೇಳಿದ್ದೇವೆ. ಮಕ್ಕಳಿಲ್ಲದ ಅವನು ಪುತ್ರನನ್ನು ಬಯಸಿ, ತಪಸ್ಸನ್ನು ಮಾಡಿದನು. ಮುನಿಶ್ರೇಷ್ಠನೇ ಪುತ್ರನನ್ನು ಬಯಸಿ ಹಾಗೆ ಇಷ್ಟಿಯನ್ನು ಮಾಡುತ್ತಿದ್ದ ಅವನ ಬಳಿಗೆ ದೇವನಾದ ಹರಿಯು ಬ್ರಾಹ್ಮಣರೂಪವನ್ನು ಧರಿಸಿ ಬಂದನು. ಅವನು ದೊರೆಯನ್ನು ''ರಾಜನೇ, ನಿನ್ನ ಪ್ರಯತ್ನವೇನು'' ಎಂದು ಕೇಳಿದನು. ''ಮಗನನ್ನು ಪಡೆಯುವುದಕ್ಕೆ'' ಎಂದು ಅವನು ಹೇಳಿದನು.

ಬ್ರಾಹ್ಮಣನು ರಾಜನಿಗೆ ''ದೊರೆಯೇ ಪ್ರಯತ್ನಪೂರ್ವಕವಾಗಿ ಈ ವಾಮನ ವ್ರತವನ್ನು ಮಾಡು'' ಎಂದು ಹೇಳಿ, ಕ್ಷಣದೊಳಗೆ ಕಣ್ಮರೆಯಾದನು. ರಾಜನು ಮಂತ್ರೋಕ್ತವಾಗಿ ಈ ವ್ರತವನ್ನು ಕೂಡಲೇ ಮಾಡಿ ಜ್ಯೋತಿರ್ಗರ್ಭನೂ ವಿದ್ವಾಂಸನೂ, ದರಿದ್ರನೂ ಆದ ಬ್ರಾಹ್ಮಣನಿಗೆ ವಾಮನ ಮೂರ್ತಿಯೇ ಮೊದಲಾದವುಗಳನ್ನು ಒಪ್ಪಿಸಿದನು. ''ಭಗವಂತನೇ ಅಪುತ್ರವತಿಯಾದ ಅದಿತಿಗೆ ನೀನೇ ಪುತ್ರ (ವಾಮನ)ನಾಗಿ ಉದಿಸಿದರೆ, ಆ ಸತ್ಯದಿಂದ ನನಗೂ ಉತ್ತಮನಾದ ಪುತ್ರನಾಗಲಿ'' ಎಂದು ಪ್ರಾರ್ಥಿಸಿದನು. ಹೇಳಿದ ಈ ನಿಯಮದಿಂದ ಆ ರಾಜನಿಗೆ ಉಗ್ರಿಶ್ವನೆಂದು ಪ್ರಸಿದ್ಧನೂ ಮಹಾಬಲನೂ, ಚಕ್ರವರ್ತಿಯೂ ಆದ ಪುತ್ರನು ಉತ್ಪನ್ನನಾದನು. ಈ ವಾಮನ ದ್ವಾದಶಿಯ ವ್ರತದಿಂದ ಮಗನಿಲ್ಲದವನು ಮಗನನ್ನೂ, ಹಣವಿಲ್ಲದವನು ಹಣವನ್ನೂ,

ರಾಜ್ಯವನ್ನು ಕಳೆದುಕೊಂಡ ದೊರೆಯು ರಾಜ್ಯವನ್ನೂ ಪಡೆಯುವನು. ಮೃತನಾದ ಬಳಿಕ ವಿಷ್ಣುಲೋಕವನ್ನು ಐದುವನು. ಅಲ್ಲಿ ಬಹುಕಾಲ ವಿಹರಿಸಿ, ಮತ್ತೆ ಇಹಲೋಕಕ್ಕೆ ಬಂದು ನಹುಷ ಪುತ್ರನಾದ ಯಯಾತಿಯಂತೆ ಬುದ್ಧಿವಂತನೂ ಚಕ್ರವರ್ತಿಯೂ ಆಗುವನು.

ವರಾಹ ಪುರಾಣದಲ್ಲಿ ನಲವತ್ತೂರನೇ ಅಧ್ಯಾಯ ಮುಗಿದುದು

—o—

## ಪರಶುರಾಮ ದ್ವಾದಶೀ ವ್ರತ

ಅಧ್ಯಾಯ - ೪೪

**ದುರ್ವಾಸಮುನಿ:-** ವೈಶಾಖ ಮಾಸದ ಶುಕ್ಲಪಕ್ಷದ ದಶಮಿಯಲ್ಲಿ ಈ ವ್ರತವನ್ನು ಆಚರಿಸುವವನು ವಿಧಿ ಪ್ರಕಾರವಾಗಿ ಸಂಕಲ್ಪವನ್ನು ಮಾಡಬೇಕು. ಮತ್ಸ್ಯದ್ವಾದಶಿ ವ್ರತದಲ್ಲಿ ಹೇಳಿರುವಂತೆ ಏಕಾದಶಿ ದಿನ ಮೃತ್ತಿಕೆಯನ್ನು ಲೇಪಿಸಿಕೊಂಡು ಸ್ನಾನ ಮಾಡಿ, ಅನಂತರ ದೇವಮಂದಿರಕ್ಕೆ ಹೋಗಬೇಕು. ಅಲ್ಲಿ ಪಂಡಿತನಾದ ವ್ರತಿಯು ಭಕ್ತಿಯಿಂದ ಹರಿಯನ್ನು ಅರ್ಚಿಸಿ ಮಂತ್ರಾದಿಗಳಿಂದ ಎಂದರೆ ''ಜಾಮದಗ್ನ್ಯಾಯ ನಮಃ'' ಎಂದು ಭಗವಂತನ ಚರಣಗಳನ್ನೂ ''ಸರ್ವಧಾರಿಣೇ ನಮಃ'' ಎಂದು ಹೊಟ್ಟೆಯನ್ನೂ, ''ಮಧುಸೂದನಾಯ ನಮಃ'' ಎಂದು ಟೊಂಕವನ್ನೂ, ''ಶ್ರೀವತ್ಸಧಾರಿಣೇ ನಮಃ'' ಎಂದು ತೊಡೆಗಳನ್ನೂ, ''ಕ್ಷತ್ರಾಂತಕಾಯ ನಮಃ'' ಎಂದು ಬಾಹುಗಳನ್ನೂ, ''ಶಿತಿಕಂಠಾಯ ನಮಃ'' ಎಂದು ಹುಬ್ಬುಗಳ ಮಧ್ಯವನ್ನೂ ಅವುಗಳ ಹೆಸರಿನಿಂದ ಶಂಖಚಕ್ರಗಳನ್ನೂ, ''ಬ್ರಹ್ಮಾಂಡಧಾರಿಣೇ ನಮಃ'' ಎಂದು ಶಿರಸ್ಸನ್ನೂ ಪೂಜಿಸಿ ಮೊದಲು ಹೇಳಿದಂತೆ ಸ್ವಾಮಿಯ ಎದುರಿಗೆ ಪೂರ್ಣ ಕಲಶವನ್ನು ಪ್ರತಿಷ್ಠಾಪಿಸಬೇಕು. ಆ ಕಲಶದ ಮೇಲೆ ಬಿದಿರಿನ ಪಾತ್ರೆಯಲ್ಲಿ ಕಾಂಚನದಿಂದ ಪರಶುರಾಮ ದೇವರಮೂರ್ತಿಯನ್ನು ಮಾಡಿಸಿ, ಪ್ರತಿಷ್ಠಾಪಿಸಿ ಶುದ್ಧವಾದ ಎರಡು ವಸ್ತ್ರಗಳನ್ನು ಧರಿಸಬೇಕು. ಆ ಸ್ವಾಮಿಯ ಬಲಕರದಲ್ಲಿ ಪರಶು (ಗಂಡುಗೊಡಲಿ) ಇರುವಂತೆ ಮಾಡಿಸಿರಬೇಕು. ಅರ್ಘ್ಯಪಾದ್ಯಾದಿಗಳಿಂದಲೂ, ಬಗೆಬಗೆಯ ಹೂವುಗಳಿಂದಲೂ, ಗಂಧಾದಿಗಳಿಂದಲೂ ಚೆನ್ನಾಗಿ ಅರ್ಚಿಸಿ ಅವನ ಎದುರುಗಡೆಯಲ್ಲಿ ಭಕ್ತಿಯಿಂದ ಧ್ಯಾನಿಸುತ್ತಾ ಜಾಗರಣೆಯನ್ನು ಮಾಡಬೇಕು. ಆ ರಾತ್ರಿ ಕಳೆದು ಸೂರ್ಯೋದಯವಾಗಲಾಗಿ ಮೊದಲು ಹೇಳಿದ ಪ್ರಕಾರ ಬ್ರಾಹ್ಮಣನಿಗೆ ಎಲ್ಲವನ್ನೂ ಸಮರ್ಪಿಸಬೇಕು. ಹೀಗೆ ವ್ರತವನ್ನು ಮಾಡಿದವನಿಗೆ ದೊರಕುವ ಫಲವನ್ನು ಹೇಳುತ್ತೇನೆ.

ಹಿಂದಕ್ಕೆ ಒಂದಾನೊಂದು ಕಾಲದಲ್ಲಿ ಅತಿ ಬಲಶಾಲಿಯೂ, ಭಾಗ್ಯವಂತನೂ ಆದ ವೀರಸೇನನೆಂಬ ಅರಸನಿದ್ದನು. ಅವನು ಅತ್ಯಂತ ಒಳ್ಳೆಯ ಮನಸ್ಸುಳ್ಳವನು. ಸಂತಾನ ವಿಹೀನನಾದದ್ದರಿಂದ ಘನ-ಘೋರವಾದ ತಪವನ್ನು ಆಚರಿಸುತ್ತಿದ್ದನು. ಆಗ ಅವನನ್ನು ನೋಡಲು ಯಾಜ್ಞವಲ್ಕ್ಯ ಮಹಾಮುನಿಯು ಅಲ್ಲಿಗೆ ಬಂದನು. ಸ್ವಲ್ಪ ದೂರದಲ್ಲಿ ಆಗಮಿಸುತ್ತಿದ್ದ ಪರಮ ತೇಜಸ್ವಿಯಾದ ಅವನನ್ನು ಕಂಡು ವೀರ ಸೇನನು ಕರಗಳನ್ನು ಜೋಡಿಸಿ ಎದಿರುಗೊಂಡು ಎದ್ದು ನಿಂತನು.

ಅರ್ಚಕನಾದ ಆ ಋಷಿಯು ''ಧರ್ಮಜ್ಞನಾದ ಅರಸನೇ ಏಕೆ ತಪಸ್ಸನ್ನು ಆಚರಿಸುತ್ತಿ ? ನಿನಗೆ ಬೇಕಾದ ಕಾರ್ಯವೇನು ? '' ಎಂದು ಕೇಳಿದನು. ಆಗ ಅರಸನು ಈ ರೀತಿ ಉತ್ತರಿಸಿದನು. ''ಮಹಾಭಾಗ್ಯನೇ, ನಾನು ಸಂತಾನವಿಹೀನನು. ನನಗೆ ಪುತ್ರ ಸಂತಾನವಿಲ್ಲ. ಅದುದರಿಂದ ತಪವನ್ನಾಚರಿಸಿ ಈ ದೇಹವನ್ನು ಕ್ಷೀಣಸುವೆನು'' ಎಂದನು. ಆಗ ಯಾಜ್ಞವಲ್ಕ್ಯ ಮುನಿಯು ''ರಾಜನೇ, ಬಹುಕ್ಲೇಶಕರವೂ, ಘೋರವೂ ಆದ ಈ ತಪವು ಸಾಕು. ಅಲ್ಪಾಯಾಸದಿಂದಲೇ ನಿನಗೆ ಪುತ್ರ ಸಂತಾನ ಪ್ರಾಪ್ತಿಯಾಗುವುದು. ಸಂಶಯವಿಲ್ಲ'' ಎಂದನು. ಆಗ ರಾಜನು ''ಪೂಜ್ಯನಾದ ಬ್ರಾಹ್ಮಣನೇ, ಅಲ್ಪಾಯಾಸದಿಂದಲೇ ಹೇಗೆ ನನಗೆ ಪುತ್ರ ಸಂತಾನವಾಗುವುದು ? ವಂದಿಸುವ ನಿನಗೆ ನನಗೆ ಪ್ರೀತಿಯಿಂದ ಇದನ್ನು ವಿವರಿಸು '' ಎಂದನು.

ಕೀರ್ತಿವಂತನಾದ ವೀರಸೇನ ಮಹಾರಾಜನು ಹೀಗೆ ಕೇಳಲು ಯಾಜ್ಞವಲ್ಕ್ಯ ಋಷಿಯು ವೈಶಾಖ ಶುಕ್ಲ ಪಕ್ಷದ ಈ ದ್ವಾದಶಿಯ ವ್ರತವನ್ನು ಉಪದೇಶಿಸಿದನು. ಪುತ್ರನನ್ನು ಪಡೆಯಬೇಕೆಂಬ ಅತಿಯಾದ ಆಸೆಯುಳ್ಳ ಆ ಅರಸನು ಉಪವಾಸ ವ್ರತವನ್ನು ಆಚರಿಸಿ ಪರಮ ಧಾರ್ಮಿಕನೂ, ಪುಣ್ಯಶ್ಲೋಕನೆಂದೂ ನರೋತ್ತಮನೆಂದೂ, ಈಗಲೂ ಹೇಳಿಸಿಕೊಳ್ಳುವವನೂ ಆದ 'ನಳ'ನೆಂಬ ಪುತ್ರನನ್ನು ಪಡೆದನು.

ಈ ವ್ರತಕ್ಕೆ ಇದು ಅಮುಖ್ಯವಾದ ಫಲ (ಇದೇ ಮುಖ್ಯಫಲವಲ್ಲ) ವ್ರತವನ್ನು ಆಚರಿಸಿದವನಿಗೆ ಈ ಜನ್ಮದಲ್ಲಿ ಸುಪುತ್ರನು ಹುಟ್ಟುವನು. ಅವನು ಕೀರ್ತಿವಂತನೂ, ಧನವಂತನೂ, ವಿದ್ಯಾವಂತನೂ ಆಗುವನೆಂಬುವದರಲ್ಲಿ ಆಶ್ಚರ್ಯವೇನಿದೆ? ಈ ಲೋಕದಲ್ಲಿಯಂತೂ ಇಷ್ಟು ಫಲಪ್ರಾಪ್ತಿಯಾಗುತ್ತದೆ. ಇನ್ನು ಪರಲೋಕದಲ್ಲಿ ಯಾವ ಫಲಪ್ರಾಪ್ತಿಯಾಗುವುದು ಎಂಬುದನ್ನು ವಿವರಿಸುವೆ - ಈ ವ್ರತವನ್ನು ಆಚರಿಸಿದವರು ಒಂದು ಕಲ್ಪ ಕಾಲ ಬ್ರಹ್ಮಲೋಕದಲ್ಲಿದ್ದು ಅಪ್ಸರಾಸ್ತ್ರೀಯರ ಸಮೂಹಗಳೊಡನೆ ವಿಹರಿಸುವರು. ತಿರುಗಿ ಸೃಷ್ಟಿಯಲ್ಲಿ ಚಕ್ರವರ್ತಿಗಳಾಗಿ ಜನಿಸುವರು. ಮುವತ್ತು ಸಾವಿರ ಕಲ್ಪ ಕಾಲ ಜೀವಿಸುವರು. ಇದರಲ್ಲಿ ಸಂದೇಹವೇ ಇಲ್ಲ.

*ವರಾಹ ಪುರಾಣದಲ್ಲಿ ನಲವತ್ತನಾಲ್ಕನೇ ಅಧ್ಯಾಯ ಮುಗಿದುದು.*

—o—

## ಶ್ರೀ ರಾಮ ದ್ವಾದಶೀ ವ್ರತ

ಅಧ್ಯಾಯ - ೪೫

**ದುರ್ವಾಸಮುನಿ :-** ಈ ವ್ರತ ಆಚರಿಸುವವನು, ಜ್ಯೇಷ್ಠ ಮಾಸದಲ್ಲಿ ಹೀಗೆಯೇ ಸಂಕಲ್ಪ ಮಾಡಿ ಪರಮದೇವ, ಶ್ರೀರಾಮದೇವನನ್ನು ಅನೇಕ ವಿಧ ಶುಭ ಪುಷ್ಪಾದಿಗಳಿಂದ ವಿಧಿ ಪ್ರಕಾರವಾಗಿ ಅರ್ಚಿಸಬೇಕು. ''ರಾಮಾಭಿರಾಮಾಯ ನಮಃ'' ಎಂದು ದೇವರ ಚರಣಗಳನ್ನು ಅರ್ಚಿಸಬೇಕು. ಅನಂತರ 'ತ್ರಿವಿಕ್ರಮಾಯ ನಮಃ' ಎಂದು ನಡುವನ್ನೂ 'ಧೃತವಿಶ್ವಾಯ ನಮಃ' ಎಂದು ಹೊಟ್ಟೆಯನ್ನೂ, 'ಸಂವತ್ಸರಾಯ ನಮಃ' ಎಂದು ವಕ್ಷಸ್ಥಲವನ್ನೂ, 'ಸಂವರ್ತಕಾಯ ನಮಃ' ಎಂದು ಕೊರಳನ್ನೂ, 'ಸರ್ವಾಸ್ತ್ರಧಾರಿಣೇ ನಮಃ' ಎಂದು ಬಾಹುಗಳನ್ನೂ, 'ಶಂಖಚಕ್ರಾಯ ನಮಃ' ಎಂದು ಶಂಖ ಚಕ್ರಗಳನ್ನೂ, 'ಸಹಸ್ರಶಿರಸೇ ನಮಃ' ಎಂದು ಆ ಮಹಾತ್ಮನ ತಲೆಯನ್ನೂ ಪೂಜಿಸಿ ವಿಧಿ ಪೂರ್ವಕವಾಗಿ, ಮೊದಲು ಹೇಳಿದಂತೆ ವಸ್ತ್ರದಿಂದ ಅಲಂಕೃತವಾದ ಕುಂಭವನ್ನು ಪ್ರತಿಷ್ಠಾಪಿಸಬೇಕು. ಸ್ವರ್ಣದಿಂದ ಮಾಡಿಸಿದ ರಾಮಲಕ್ಷ್ಮಣರ ಮೂರ್ತಿಗಳನ್ನು ಮೊದಲು ಹೇಳಿದಂತೆ ಅರ್ಚಿಸಿ, ಇಷ್ಟಾರ್ಥವನ್ನು ಬಯಸುವವನು ದ್ವಾದಶಿಯ ದಿನ ಪ್ರಾತಃಕಾಲದಲ್ಲಿ ಆ ಮೂರ್ತಿಗಳನ್ನು ಬ್ರಾಹ್ಮಣನಿಗೆ ಸಮರ್ಪಿಸಬೇಕು.

ಪೂರ್ವಕ್ಕೆ ಒಂದಾನೊಂದು ಕಾಲದಲ್ಲಿ ಪುತ್ರ ಸಂತಾನವಿಲ್ಲದ ದಶರಥಮಹಾರಾಜನು ಮೊದಲು ಆ ವ್ರತವನ್ನಾಚರಿಸಿದನು. ನಾಶರಹಿತನಾದ ಆ ವಿಷ್ಣುವು ಪರಿತುಷ್ಟನಾಗಿ ತಾನೇ ನಾಲ್ಕು ಅಂಶಗಳಿಂದ ಆ ದಶರಥ ಮಹಾರಾಜನಿಗೆ, ಮಹಾಬಲಶಾಲಿಯಾಗಿ ರಾಮನೆಂಬ ಹೆಸರಿನಿಂದ ಪುತ್ರನಾಗಿ ಜನಿಸಿದನು.

ಇದು ಇಹಲೋಕದಲ್ಲಿ ದೊರಕುವ ಫಲದ ಮಹಾತ್ಮೆ. ಇನ್ನು ಪರಲೋಕದಲ್ಲಿ ಪ್ರಾಪ್ತಿಯಾಗುವ ಫಲದ ಸಂಗತಿಯನ್ನು ವಿವರಿಸುವೆ. ಈ ವ್ರತವನ್ನು ಮಾಡಿದವನು ಇಂದ್ರನೂ, ದೇವತೆಗಳ ಸಮೂಹವೆಲ್ಲವೂ ಇರುವವರೆಗೂ ಸ್ವರ್ಗಲೋಕದಲ್ಲಿ ಸುಖಗಳನ್ನು ಅನುಭವಿಸುತ್ತಾನೆ. ಅಲ್ಲಿಂದ ಕಾಲವು ಕಳೆಯಲು ಮತ್ತೆ ಭೂಮಿಗೆ ಬಂದು ಅರಸನಾಗಿ ನೂರು ಯಜ್ಞಗಳನ್ನು ಮಾಡುವನು. ಇನ್ನು ಯಾವ ಆಸೆಯೂ ಇಲ್ಲದೇ ವ್ರತವನ್ನು ಆಚರಿಸಿದರೆ ಪಾಪವೆಲ್ಲವೂ ಪರಿಹಾರವಾಗುವುದು. ಅವನು ಸಮರ್ಥನಾಗಿ ಶಾಶ್ವತವಾದ ಲೋಕವನ್ನು ಪಡೆಯುವನು.

*ವರಾಹ ಪುರಾಣದಲ್ಲಿ ನಲವತ್ತೈದನೇ ಅಧ್ಯಾಯ ಮುಗಿದುದು.*

—o—

**ದುರ್ವಾಸಮುನಿ :-** ವ್ರತಮಾಡುವ ಬುದ್ಧಿವಂತನು ಆಷಾಢಮಾಸದ ಶುಕ್ಲ ಪಕ್ಷ ದಶಮಿಯಲ್ಲಿ ಹಿಂದೆ ಹೇಳಿರುವಂತೆಯೇ (ವಿದ್ಯುಕ್ತವಾದ) ಸಂಕಲ್ಪ ಮಾಡಿ ಏಕಾದಶಿ ದಿನ ''ಚಕ್ರಪಾಣಯೇ ನಮಃ'' ಎಂದು ಸ್ವಾಮಿಯ ತೋಳುಗಳನ್ನೂ, 'ಭೂಪತಯೇ ನಮಃ' ಎಂದು ಕಂಠವನ್ನೂ, 'ಶಂಖಾಯ ನಮಃ' ಎಂದು ಶಂಖವನ್ನೂ, 'ಚಕ್ರಾಯ ನಮಃ' ಎಂದು ಚಕ್ರವನ್ನೂ, 'ಪುರುಷಾಯ ನಮಃ' ಎಂದು ಶಿರಸ್ಸನ್ನೂ ಅರ್ಚಿಸಿ ಹಿಂದಿನಂತೆ ದೇವನೆದುರಿಗೆ ವಸ್ತ್ರಯುತವಾದ ಪೂರ್ಣ ಕಲಶವನ್ನು ಸ್ಥಾಪಿಸಬೇಕು. ಸನಾತನನೂ, ಚತುರ್ವ್ಯೂಹನೂ ಆದ ಶ್ರೀ ಕೃಷ್ಣನ ಸುವರ್ಣಮಯವಾದ ಮೂರ್ತಿಯನ್ನು ಕಲಶದ ಮೇಲೆ ಬಿಜಯ ಮಾಡಿಸಬೇಕು.

ವಿಧ್ಯುಕ್ತವಾಗಿ ಆ ದೇವನನ್ನು ಗಂಧಪುಷ್ಪಾದಿಗಳಿಂದ ಕ್ರಮವಾಗಿ ಪೂಜಿಸಿ, ದ್ವಾದಶಿಯದಿನ, ಹಿಂದಿನಂತೆ ವೇದಾಧ್ಯಯನಾಸಕ್ತನಾದ ಬ್ರಾಹ್ಮಣನಿಗೆ ಒಪ್ಪಿಸಬೇಕು. ಹೀಗೆ ಈ ವ್ರತವನ್ನು ಮಾಡುವವನಿಗೆ ಏನು ಪುಣ್ಯವೆಂಬುದನ್ನು ನಾನು ತಿಳಿಸುತ್ತೇನೆ. ''ಶ್ರೇಷ್ಠನೂ, ಯದುವಂಶರ್ಧನನೂ ಆದ ವಸುದೇವನಿದ್ದನಷ್ಟೇ! ಅವನ ಪತ್ನಿಯಾದ ದೇವಕಿಯು ಪತಿಯಂತೆಯೇ ವ್ರತನಿಷ್ಠಳು. ಪತಿವ್ರತೆಯೂ, ಧರ್ಮಪರಾಯಣೆಯೂ ಆದ ಅವಳು ಅಪುತ್ರವತಿಯಾಗಿದ್ದಳು. ಬಹು ಕಾಲದ ಮೇಲೆ ನಾರದ ಮುನಿಯು ಆ ವಸುದೇವನ ಮನೆಗೆ ಬಂದನು. ವಸುದೇವನಿಂದ ಭಕ್ತಿ ಪೂರ್ವಕವಾಗಿ ಪೂಜಿತನಾದ ಆತನು ಮುಂದಿನ ಮಾತನ್ನು ಹೇಳಿದನು ''ಪಾಪರಹಿತನಾದ ವಸುದೇವನೇ, ನಾನು ಹೇಳುವ ದೇವತೆಗಳ ಕಾರ್ಯವನ್ನು ಕೇಳು. ಅದನ್ನೆಲ್ಲ ಕೇಳಿಯೇ ನಾನು ಬೇಗನೆ ನಿನ್ನ ಬಳಿಗೆ ಬಂದಿದ್ದೇನೆ.

ಯದೂತ್ತಮನೇ, ಭೂದೇವಿಯು ದೇವತೆಗಳ ಸಭೆಗೆ ಹೋಗಿ ಮಾತನಾಡುತ್ತಿದ್ದುದನ್ನು ನಾನು ನೋಡಿದ್ದೇನೆ. ಅವಳು ''ದೇವತೆಗಳೇ, ನಾನು ಭಾರವನ್ನು ಹೊರಲಾರೆನು. ದುಷ್ಟ ರಾಕ್ಷಸರು ಒಟ್ಟಿಗೆ ಸೇರಿಕೊಂಡು ನನ್ನನ್ನು ಪೀಡಿಸುತ್ತಾರೆ, ಸುರೋತ್ತಮರೇ, ಅವರನ್ನು ಕೊಲ್ಲಿರಿ'' ಎಂದು ಹೇಳಲಾಗಿ ಆ ದೇವತೆಗಳು ನಾರಾಯಣನ ಬಳಿಗೆ ಹೋದರು.

ಅಲ್ಲಿ ಅವರು ಮನಸ್ಸಿನಿಂದ ಧ್ಯಾನಿಸಿದ ಮಾತ್ರಕ್ಕೆ ಆ ನಾರಾಯಣನು ಅವರಿಗೆ ಕಾಣಿಸಿಕೊಂಡನು. ಸುರೋತ್ತಮನಾದ ಆತನು ''ದೇವತೆಗಳೇ, ಈ ಕಾರ್ಯವನ್ನು ನಾನೇ ಮನುಷ್ಯನಂತೆ ಭೂಲೋಕಕ್ಕೆ ಹೋಗಿ ಸಾಧಿಸುತ್ತೇನೆ. ಸಂಶಯವಿಲ್ಲ. ಆದರೆ ಆಷಾಢಮಾಸದ ಶುಕ್ಲಪಕ್ಷದ ಏಕಾದಶಿಯಲ್ಲಿ ಮನುಷ್ಯ ಸ್ತ್ರೀಯರಲ್ಲಿ ಯಾರು ಪತಿಯೊಡನೆ ಉಪವಾಸ ಮಾಡುವಳೋ ಅವಳ ಗರ್ಭದಲ್ಲಿ ನಾನು ಜನಿಸುತ್ತೇನೆ'' ಎಂದು ಹೇಳಿದನು. ನಾರಾಯಣನಿಂದ ಹೀಗೆ ಹೇಳಿಸಿಕೊಂಡ ದೇವತೆಗಳು ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು. ನಾನಾದರೂ ಉದ್ದೇಶಪೂರ್ವವಾಗಿ ಇಲ್ಲಿಗೆ ಬಂದೆನು. ಪುತ್ರರಿಲ್ಲದಿರುವ ನಿನಗೆ ಅತ್ಯಾವಶ್ಯಕವೆಂದು ಉಪದೇಶಿಸಿದ್ದೇನೆ.

ಮಹಾಕೀರ್ತಿವಂತನಾದ ವಸುದೇವನು ನಾರದನ ಈ ಉಪದೇಶದಿಂದ ಶ್ರೀ ಕೃಷ್ಣದ್ವಾದಶೀ ವ್ರತವನ್ನು ಮಾಡಿ ಕೃಷ್ಣನೆಂದು ಹೆಸರುಳ್ಳ ಪುತ್ರನನ್ನೂ ಹೆಚ್ಚಾದ ಐಶ್ವರ್ಯವನ್ನೂ ಪಡೆದನು. ವಸುದೇವನು ವಿಪುಲವಾದ ಐಶ್ವರ್ಯವನ್ನು ಅನುಭವಿಸಿ ಬಳಿಕ ಪರಮ ಪದವಿಯನ್ನು ಪಡೆದನು. ಸತ್ಯತಪಮುನಿಯೇ, ಈ ವ್ರತವನ್ನು ನೀನು ಆಷಾಢ ಮಾಸದಲ್ಲಿ ಮಾಡಬೇಕಾಗುವುದು.

ವರಾಹ ಪುರಾಣದಲ್ಲಿ ನಲವತ್ತಾರನೇ ಅಧ್ಯಾಯ ಮುಗಿದುದು



## ಶ್ರಾವಣ ದ್ವಾದಶೀ ವ್ರತ

**ಅಧ್ಯಾಯ - ೪೭**

**ದುರ್ವಾಸಮುನಿ:-** ಶ್ರಾವಣ ಮಾಸದ ಶುಕ್ಲ ಪಕ್ಷದ ಏಕಾದಶಿಯಲ್ಲಿ ಈ ವ್ರತವನ್ನು ಆಚರಿಸಬೇಕು. ಮೊದಲು ಹೇಳಿದ ನಿಯಮದಂತೆ ಜನಾರ್ದನನನ್ನು ಗಂಧಪುಷ್ಪಗಳಿಂದ ಪೂಜಿಸಬೇಕು. ''ದಾಮೋದರಾಯ ನಮಃ'' ಎಂದು ದೇವರ ಚರಣಗಳನ್ನೂ ''ಹೃಷಿಕೇಶಾಯ ನಮಃ'' ಎಂದು ನಡುವನ್ನೂ, ಸನಾತನಾಯ ನಮಃ'' ಎಂದು ಹೊಟ್ಟೆಯನ್ನೂ, ''ಶ್ರೀವತ್ಸಧಾರಿಣೇ ನಮಃ'' ಎಂದು ವಕ್ಷಸ್ಥಲವನ್ನು, ''ಚಕ್ರಪಾಣಯೇ ನಮಃ'' ಎಂದು ಬಾಹುಗಳನ್ನು, ''ಹರಯೇ ನಮಃ'' ಎಂದು ಕಂಠವನ್ನು, ''ಮುಂಜಿಕೇಶಾಯ ನಮಃ'' ಎಂದು ತಲೆಯನ್ನೂ, ''ಭದ್ರಾಯ ನಮಃ'' ಎಂದು ಶಿಖೆಯನ್ನೂ ಪೂಜಿಸಬೇಕು. ಹೀಗೆ ಅರ್ಚಿಸಿ ದೇವರೆದುರಿಗೆ ಹಿಂದಿನಂತೆಯೇ ಒಂದು ಜತೆಯ ವಸ್ತ್ರದಿಂದ ಅಲಂಕೃತವಾದ ಕಲಶವನ್ನು ಪ್ರತಿಷ್ಠಾಪಿಸಿ, ಅದರ ಮೇಲೆ ದಾಮೋದರನೆಂಬ ಹೆಸರಿನ ದೇವದೇವನ ಬಂಗಾರದ ಮೂರ್ತಿಯನ್ನು ಪ್ರತಿಷ್ಠಾಪಿಸಬೇಕು. ಹೀಗೆ ವ್ರತವನ್ನು ಮಾಡಿದವರ ಮಹಿಮೆಯನ್ನು ನಾನು ಹೇಳುವೆನು ಆಲಿಸು. ಈ ವ್ರತವನ್ನು ಶ್ರಾವಣಮಾಸದಲ್ಲಿಯೇ ಆಚರಿಸಬೇಕು. ಪಾಪವನ್ನು ತೊಳೆಯುವ ಇದರ ಮಹಿಮೆಯನ್ನು ಕೇಳು.

ಹಿಂದೆ ಕೃತಯುಗದಲ್ಲಿ ಮಹಾ ಪರಾಕ್ರಮಶಾಲಿಯಾದ ನೃಗನೆಂಬ ಅರಸನಿದ್ದನು. ಒಂದಾನೊಂದು ದಿವಸ ಬೇಟೆಯಲ್ಲಿ ಪ್ರೀತಿಯುಳ್ಳ ಆ ಅರಸನು ಘೋರವಾದ ಅರಣ್ಯದಲ್ಲಿ ಅಲೆದಾಡುತ್ತಿದ್ದನು. ಆಗ ಅಕಸ್ಮಾತ್ತಾಗಿ ಆ ರಾಜನು ಅಶ್ವಾರೋಹಣ ಮಾಡಿ, ಆನೆ, ಹುಲಿ, ಸಿಂಹ ಸರ್ಪಗಳಿಂದ ನಿಬಿಡವೂ, ಕಳ್ಳರ ವಾಸಸ್ಥಾನವೂ ಆದ ದೂರದ ಘೋರಕಾನನಕ್ಕೆ ಹೋಗಿ ಬಿಟ್ಟನು.

ಏಕಾಕಿಯಾದ ಆ ರಾಜನು ಅತಿ ದುಃಖಿತನಾಗಿ ಅಶ್ವವನ್ನು ಮರದ ಕೆಳಗೆ ಬಿಟ್ಟು, ತಾನೂ ದರ್ಭೆಯ ಹುಲ್ಲನ್ನು ಹಾಸಿಕೊಂಡು ಅಲ್ಲಿಯೇ ಮಲಗಿ ನಿದ್ರಿಸತೊಡಗಿದನು. ಅಷ್ಟರಲ್ಲಿ ಹದಿನಾಲ್ಕು ಸಾವಿರ ಜನ ವ್ಯಾಧರು ರಾತ್ರಿಯ ಮೃಗಗಳ, ಸಂಹಾರಕ್ಕಾಗಿ ಅಲ್ಲಿಗೆ ಆ ಅರಸನ ಸುತ್ತಮುತ್ತಲೂ ಬಂದರು. ಕಾಂಚನರತ್ನಾಭರಣಗಳಿಂದ ಅಲಂಕೃತನೂ, ಅತಿ ತೇಜಸ್ವಿಯೂ, ಗಂಭೀರನೂ ಆಗಿ ನಿದ್ರಿಸುತ್ತಿರುವ ನೃಗರಾಜನನ್ನು ನೋಡಿದ. ಆ

ವ್ಯಾಧರು ತಕ್ಷಣ ಹೋಗಿ ತಮ್ಮ ಪ್ರಭುವಿಗೆ ಇವನ ಸುದ್ದಿಯನ್ನು ತಿಳಿಸಿದರು. ಆಶೆಬುರಕನಾದ ಅವನು ಆ ರಾಜನ ಸ್ವರ್ಣರತ್ನಗಳಿಗಾಗಿಯೂ ಮತ್ತು ಅವನಲ್ಲಿಯ ಉತ್ತಮ ಅಶ್ವಕ್ಕಾಗಿಯೂ ರಾಜನನ್ನು ಕೊಲ್ಲಲ್ಲು ಉದ್ಯುಕ್ತನಾದನು. ವ್ಯಾಧರು ನಿದ್ರಿಸುತ್ತಿರುವ ರಾಜನನ್ನು ಸಮೀಪಿಸಿ ಕತ್ತಿಗಳನ್ನು ಕೈಗೆ ತೆಗೆದುಕೊಳ್ಳಲು ಪ್ರಾರಂಭಿಸಿದರು. ಅಷ್ಟರಲ್ಲಿಯೇ ಆ ಅರಸನ ದಿವ್ಯ ದೇಹದಿಂದ ಗಂಧಮಾಲ್ಯಾಭರಣ ಗಳಿಂದ ಅಲಂಕೃತಳಾದ ಬೆಳ್ಳಗಿರುವ ವನಿತೆಯೊಬ್ಬಳು ಎದ್ದು ನಿಂತಳು.

ಎದ್ದು ನಿಂತ ಆ ವನಿತೆ ಚಕ್ರವನ್ನು ತೆಗೆದುಕೊಂಡು, ಆ ಬೇಡರನ್ನು ಉರುಳಿಸಿ ಬಿಟ್ಟಳು. ಆ ಕಳ್ಳರನ್ನು ಕೊಂದು, ಆ ದೇವಿಯು ಮತ್ತೆ ಆ ಪ್ರಭುವಿನ ದೇಹವನ್ನೇ ಬೇಗನೆ ಪ್ರವೇಶಿಸುತ್ತಿರುವಾಗಲೇ, ಆ ಅರಸನಿಗೆ ಎಚ್ಚರವಾಯಿತು. ಮತ್ತು ಆ ದೇವಿಯನ್ನು ಅವನು ನೋಡಿಬಿಟ್ಟನು. ಅವಳು ತನ್ನ ದೇಹದಲ್ಲಿ ಐಕ್ಯವಾದುದನ್ನೂ ಕಳ್ಳಬೇಡರ ಸಂಹಾರವಾಗಿರುವದನ್ನೂ ನಿರೀಕ್ಷಿಸಿ ಮತ್ತೆ ಅವನು ಕುದುರೆಯನ್ನೇರಿ ವಾಮದೇವಾಶ್ರಮಕ್ಕೆ ನಡೆದನು. ಅಲ್ಲಿ ಆ ಮುನಿಯನ್ನು ಅತ್ಯಂತ ಭಕ್ತಿಯಿಂದ ನಮಸ್ಕರಿಸಿ, ''ಆ ಸ್ತ್ರೀಯು ಯಾರು ? ಹತರಾದ ಅವರಾರು ? ಮುನಿಯೇ, ಈ ಕಾರ್ಯವನ್ನು ದಯವಿಟ್ಟು ನನಗೆ ವಿವರಿಸು '' ಎಂದನು.

ಆಗ ಅವನು ಈ ರೀತಿ ಉತ್ತರಿಸಿದನು -

**ವಾಮದೇವ :-** ದೊರೆಯೇ ಆಲಿಸು ನೀನು ಬೇರೆಯ ಜನ್ಮದಲ್ಲಿ ಶೂದ್ರಜಾತಿಯವನಾಗಿ ಜನಿಸಿದ್ದಿ. ಆಗ ನೀನು ಬ್ರಾಹ್ಮಣರಿಂದ ಅತ್ಯಂತ ಭಕ್ತಿಯಿಂದ ಶ್ರಾವಣ ಮಾಸದ ಶುಕ್ಲಪಕ್ಷದ ದ್ವಾದಶಿಯ ವ್ರತವನ್ನು ಕೇಳಿ, ವಿಧಿಪೂರ್ವಕವಾಗಿ ಅತ್ಯಂತ ನಿಷ್ಠೆಯಿಂದ ಆಚರಿಸಿದಿ. ಭಕ್ತಿಯಿಂದ ಏಕಾದಶೀ ಉಪವಾಸ ಮಾಡಿ, ಈ ವ್ರತವನ್ನು ಆಚರಿಸುದುದರಿಂದಲೇ ನಿನಗೆ ರಾಜ್ಯವೂ, ನಿನ್ನ ಜೀವವೂ ದೊರೆಯಿತು. ಪಾಪಿಗಳೂ, ಕ್ರೂರಿಗಳೂ, ನೀಚರೂ, ದುಷ್ಟರೂ ಆದ ಆ ಬೇಡರನ್ನು ಕೊಂದ ಆ ದ್ವಾದಶೀವ್ರತದ ದೇವಿಯು ಸರ್ವಾಪತ್ತುಗಳಲ್ಲಿಯೂ ನಿನ್ನನ್ನು ರಕ್ಷಿಸುವಳು. ಈಗಲೂ ರಕ್ಷಿಸುವಳು.

ಶ್ರಾವಣ ದ್ವಾದಶಿಯೆಂಬ ದೇವತೆಯೊಬ್ಬಳೇ ಕೇಡುಗಳಲ್ಲಿ, ವಿಪತ್ತಿನಲ್ಲಿ, ಸಂಕಟ ಸಮಯದಲ್ಲಿ ರಕ್ಷಿಸುವಳು, ಒಬ್ಬಳೇ ರಾಜ್ಯವನ್ನು ಕೊಡುವಳು. ಹೀಗಿರುವಾಗ ಇಂದ್ರಪದವಿಯನ್ನು ದೊರೆಯುವಂತೆ ಮಾಡುವ ಆ ಹನ್ನೆರಡು ದ್ವಾದಶಿಗಳೂ ಅನುಕೂಲವಾದರೆ ಹೇಳುವದೇನಿದೆ ! ''

*ವರಾಹ ಪುರಾಣದಲ್ಲಿ ನಲವತ್ತೇಳನೇ ಅಧ್ಯಾಯವು ಮುಗಿದುದು.*

—o—

**ದುರ್ವಾಸಮುನಿ :-** ಮೊದಲಿನ ವ್ರತದಂತೆಯೇ ಭಾದ್ರಪದ ಮಾಸದ ಶುಕ್ಲ ಏಕಾದಶಿಯಲ್ಲಿ, ಸಂಕಲ್ಪ ಮಾಡಿ ಶಾಸ್ತ್ರೋಕ್ತವಾಗಿ ದೇವದೇವನನ್ನು ಭಕ್ತಿಯಿಂದ ಅರ್ಚಿಸಬೇಕು. 'ಕಲ್ಕಿನೇ ನಮಃ' ಎಂದು ದೇವರ ಚರಣಗಳನ್ನೂ 'ಹೃಷಿಕೇಶಾಯ ನಮಃ' ಎಂದು ನಡುವನ್ನೂ, 'ಮ್ಲೇಂಛವಿದ್ವಂಸನಾಯ ನಮಃ' ಎಂದು ಆ ಜಗನ್ಮೂರ್ತಿಯ ಉದರವನ್ನು 'ಶಿತಿಕಂಠಾಯ ನಮಃ' ಎಂದು ಕೊರಳನ್ನೂ 'ಖಡ್ಗಪಾಣಯೇ ನಮಃ' ಎಂದು ಬಾಹುಗಳನ್ನು 'ಚತುರ್ಭುಜಾಯ ನಮಃ' ಎಂದು ಕರಗಳನ್ನೂ, 'ವಿಶ್ವಮೂರ್ತಯೇ ನಮಃ' ಎಂದು ತಲೆಯನ್ನೂ ಅರ್ಚಿಸಬೇಕು.

ತಿಳಿದವನು ಈ ಪ್ರಕಾರವಾಗಿ ಅರ್ಚಿಸಿ ಹಿಂದಿನಂತೆ ಅವನೆದುರಿಗೆ ಕಲಶವನ್ನು ಸ್ಥಾಪಿಸಿ, ಅದರ ಮೇಲೆ ಬಂಗಾರದ ಕಲ್ಕಿದೇವಮೂರ್ತಿಯನ್ನೂ ವಸ್ತ್ರಾಲಂಕೃತನನ್ನಾಗಿ ಪ್ರತಿಷ್ಠಿಸಬೇಕು. ಗಂಧಪುಷ್ಪಾದಿಗಳಿಂದ ಅರ್ಚಿಸಿ, ದ್ವಾದಶಿಯದಿನ ಬೆಳಿಗ್ಗೆ ಶಾಸ್ತ್ರಜ್ಞರಲ್ಲಿ ಉತ್ತಮನಾದ ಬ್ರಾಹ್ಮಣನಿಗೆ ಅರ್ಪಿಸಬೇಕು. ಹೀಗೆ ಈ ವ್ರತವನ್ನು ಆಚರಿಸಿದರೆ ಯಾವ ಫಲ ದೊರೆಯುತ್ತದೆಂಬುದನ್ನು ಹೇಳುತ್ತೇನೆ. ಮುನಿಯೇ ಕೇಳು - ಪೂರ್ವದಲ್ಲಿ ಕಾಶೀಪಟ್ಟಣದಲ್ಲಿ ಮಹಾಬಲಶಾಲಿಯಾದ ವಿಶಾಲನೆಂಬ ಅರಸನಿದ್ದನು. ದಾಯಾದಿಗಳು ಅವನ ರಾಜ್ಯವನ್ನು ಅಪಹರಿಸಲಾಗಿ ಅವನು ಗಂಧಮಾದನವೆಂಬ ಪರ್ವತಕ್ಕೆ ಹೊರಟು ಹೋದನು. ರಾಜ್ಯವನ್ನೂ, ಐಶ್ವರ್ಯವನ್ನೂ ಕಳೆದುಕೊಂಡು ಆ ನರೋತ್ತಮನು ಕುಂದಿದವನಾಗಿ ಆ ಪರ್ವತದ ಕಣಿವೆಯಲ್ಲಿದ್ದ ಮಂಗಳಕರವೂ, ಸುಂದರವೂ ಆದ ಬದರಿಕಾಶ್ರಮವನ್ನು ಸೇರಿದನು. ಒಂದಾನೊಂದು ಕಾಲದಲ್ಲಿ ಸರ್ವ ದೇವತೆಗಳಿಂದ ವಂದಿತರೂ, ಪೂಜಿತರೂ, ಮುನಿವರ್ಯರೂ ಆದ ನರನಾರಾಯಣರು ಅಲ್ಲಿಗೆ ಬಂದರು. ಶತ್ರುನಾಶಕರಾದ ಅವರು ಅಲ್ಲಿಗೆ ತಮಗಿಂತ ಮೊದಲು ಬಂದ ಪರಮ ಪದವುಳ್ಳ ವಿಷ್ಣುವೆಂಬ ಹೆಸರಿನ, ಪರಬ್ರಹ್ಮನನ್ನು ಧ್ಯಾನಿಸುತ್ತಾ ಇದ್ದ ಪ್ರಭುವನ್ನು ನೋಡಿ, ಪ್ರೀತಿಯುಳ್ಳವರಾಗಿ ಪಾಪ ರಹಿತನಾದ ಅವನಿಗೆ ''ರಾಜೇಂದ್ರನೇ, ನಿನಗೆ ವರವನ್ನು ಕೊಡುವವರು ಬಂದಿದ್ದೇವೆ. ವರವನ್ನು ಬೇಡು'' ಎಂದು ಕೇಳಿದರು.

ಆಗ ಅವನು ಈ ರೀತಿ ನುಡಿದನು. '' ದೊರೆ :- ನೀವಾರೋ ನಾನರಿಯೆನು. ಯಾರಿಗೆ ಯಾವ ವರವನ್ನು ಬೇಡಿಕೊಳ್ಳಲಿ! ನಾನು ಯಾರನ್ನು ಅತ್ಯಂತ ಭಕ್ತಿಯಿಂದ ಪೂಜಿಸುತ್ತಿದ್ದೆನೋ ಅವನಿಂದಲೇ ಮನೋಹರವೂ, ಸಾಧುವೂ ಆದ ವರವನ್ನು ನಾನು ಬಯಸುವೆನು.'' ಹೀಗೆ ಹೇಳಲು ಅವರು ''ರಾಜನೇ ನೀನು ಯಾರನ್ನು ಆರಾಧಿಸುತ್ತಿ? ಯಾವ ವರವನ್ನು ಅಪೇಕ್ಷಿಸುತ್ತಿ? ಎಂಬುದು ನಮಗೆ ಅತ್ಯಂತ ಕುತೂಹಲಕಾರಿಯಾದ ಸಂಗತಿಯಾಗಿದೆ. ಅದರಿಂದ ಅದನ್ನು ನಮಗೆ ತಿಳಿಸು''.

ಹೀಗೆ ಕೇಳಿಸಿಕೊಂಡ ರಾಜನು ''ನಾನು ವಿಷ್ಣುವನ್ನು ಅರ್ಚಿಸುತ್ತಿದ್ದೇನೆ '' ಎಂದು ಹೇಳಿ ಮೌನವಾದನು. ನಂತರ ನರನಾರಾಯಣರು ಮತ್ತೆ ಅಂದರು. ''ರಾಜನೇ, ಆ ದೇವನ ಅನುಗ್ರಹದಿಂದಲೇ ನಾವು ನಿನಗೆ ವರ ಕೊಡುವುದು. ನಿನ್ನ ಮನಸ್ಸಿನಲ್ಲಿ

ಏನಿದೆಯೋ ಆ ವರವನ್ನು ಬೇಡಿಕೋ '' ಎಂದು ಹೇಳಿದರು. ಆಗ ಆ ರಾಜನು ಈ ರೀತಿ ನುಡಿದನು. ''ಯಜ್ಞೇಶ್ವರನಾದ ದೇವನನ್ನು ಬಗೆಬಗೆಯ ದಕ್ಷಿಣೆಗಳುಳ್ಳ ಯಜ್ಞಗಳಿಂದ ಪೂಜಿಸಲು ನನಗೆ ಸಾಮರ್ಥ್ಯವುಂಟಾಗುವಂತೆ ಲೋಕರಕ್ಷಕನಾದ ನಾರಾಯಣದೇವನು ಲೋಕಕ್ಕೆ ದಾರಿಯನ್ನು ತೋರಿಸಲಿ. ನನ್ನೊಡನೆ ಈ ಬದರಿಕಾಶ್ರಮದಲ್ಲಿ ತಪಸ್ಸನ್ನು ಮಾಡುವವನಾದ ತಾನೇ ವರವನ್ನು ಕೊಡಲಿ. ''

ಆಗ ನರನು ಹೇಳಿದನು. ''ಈ ನಾರಾಯಣನು ಮೊದಲು ಮತ್ಸ್ಯಾವತಾರ ಮಾಡಿದನು. ಆನಂತರ ಸುಂದರವಾದ ಕೂರ್ಮರೂಪನಾದನು. ಆನಂತರ ವರಾಹ ದೇವನಾದನು. ಆನಂತರ ನರಸಿಂಹನಾದನು. ಆ ಮೇಲೆ ವಾಮನನಾದನು. ಮುಂದೆ ಮಹಾ ಬಲಶಾಲಿಯಾದ ಪರಶುರಾಮನಾದನು. ತಿರುಗಿ ಶ್ರೀರಾಮನೆಂಬ ರಾಜನಾಗಿ ಎಲ್ಲರನ್ನೂ ಮೋಹಗೊಳಿಸಿದನು. ಸಕಲ ಚೋರರನ್ನೂ ಮ್ಲೇಚ್ಛರನ್ನೂ ಸಂಹರಿಸಿ, ಈ ಭೂಮಿಯನ್ನು ಸಹಜವಾದ ಸ್ಥಿತಿಯುಳ್ಳದ್ದನ್ನಾಗಿ ಮಾಡಿದ ಆ ಹರಿನಾರಾಯಣನು ಈ ಪೂಜ್ಯನೇ. ಆದ್ದರಿಂದಲೇ ಪಾಪದಿಂದ ಭೀತರಾದ ಮಾನವರು ಆ ನಾರಾಯಣನ ನರಸಿಂಹ ರೂಪವನ್ನು, ಮೋಹನಾಶಕ್ಕಾಗಿ ವಾಮನಮೂರ್ತಿಯನ್ನು, ಸಂಪತ್ತಿಗಾಗಿ ಪರಶುರಾಮನನ್ನೂ, ಕ್ರೂರಶತ್ರುಗಳ ವಿನಾಶವಾಗಬೇಕಾದರೆ ಶ್ರೀರಾಮನನನ್ನೂ ಪೂಜಿಸಬೇಕು. ಪುತ್ರರನ್ನು ಬಯಸುವವರು ಬಲರಾಮಕೃಷ್ಣರನ್ನು ಅತ್ಯಂತ ಭಕ್ತಿಯಿಂದ ಪೂಜಿಸಬೇಕು. ರೂಪ ಲಾವಣ್ಯವನ್ನು ಬಯಸುವವರು ಬುದ್ಧನನ್ನು ಪೂಜಿಸಬೇಕು. ಶತ್ರುಗಳ ಕೊಲೆಗೆ ಕಲ್ಕಿಯನ್ನು ಪೂಜಿಸಬೇಕು. ''

ನರಮುನಿಯು ಈ ರೀತಿಯಾಗಿ ಆ ವಿಶಾಲ ರಾಜನಿಗೆ ಹೇಳಿ ಈ ಕಲ್ಕಿದ್ವಾದಶಿ ವ್ರತವನ್ನು ಉಪದೇಶಿಸಿದನು. ಆ ಅರಸನೂ ಕೂಡ ಅವನ ಉಪದೇಶದಂತೆ ಅತ್ಯಂತ ನಿಷ್ಠೆಯಿಂದ ಭಕ್ತಿಯಿಂದ ಈ ವ್ರತವನ್ನು ಆಚರಿಸಿ ಚಕ್ರವರ್ತಿಯಾದನು. ಅವನ ಹೆಸರಿನಿಂದಲೇ ಬದರಿಕಾಶ್ರಮಕ್ಕೆ ವಿಶಾಲೆಯೆಂಬ ಹೆಸರಾಯಿತು. ಆ ಅರಸನು ಆ ಮಾನವ ಜನ್ಮದಲ್ಲಿ ರಾಜ್ಯಭಾರಮಾಡಿ ಧನವನ್ನು ಸಂಪಾದಿಸಿದನು. ಬಗೆಬಗೆಯ ಯಜ್ಞಗಳನ್ನು ಮಾಡಿ ಪರಮ(ಮೋಕ್ಷ) ಮುಕ್ತಿಯನ್ನು ಪಡೆದನು.

*ವರಾಹ ಪುರಾಣದಲ್ಲಿ ನಲವತ್ತೆಂಟನೇ ಅಧ್ಯಾಯವು ಮುಗಿದುದು.*

—o—

## ಪದ್ಮನಾಭ ದ್ವಾದಶೀ ವ್ರತ

ಅಧ್ಯಾಯ - ೪೯

**ದುರ್ವಾಸ ಮುನಿ :-** ಮೊದಲಿನಂತೆಯೇ ಆಶ್ವಯುಜ ಮಾಸದ ಶುಕ್ಲ ಪಕ್ಷದ ದ್ವಾದಶಿಯಲ್ಲಿ ಸನಾತನನಾದ ಪದ್ಮನಾಭ ದೇವರನ್ನು ಆರಾಧಿಸಬೇಕು.

ದೇವರ ಚರಣಗಳಿಗೆ 'ಪದ್ಮನಾಭಾಯ ನಮಃ' ಎಂದೂ, ಹೊಟ್ಟೆಗೆ 'ಸರ್ವದೇವಾಯ ನಮಃ' ಎಂದೂ, ವಕ್ಷಸ್ಥಲಕ್ಕೆ 'ಪುಷ್ಕರಾಕ್ಷಾಯ ನಮಃ' ಎಂದೂ, ಕರಕ್ಕೆ 'ಅವ್ಯಯಾಯ ನಮಃ' ಎಂದೂ, ಅಸ್ತ್ರಗಳಿಗೆ ಮೊದಲಿನಂತೆಯೂ, ತಲೆಗೆ 'ಪ್ರಭವಾಯ ನಮಃ' ಎಂದೂ ಪೂಜಿಸಿ ಪೂರ್ವದಲ್ಲಿ ಹೇಳಿದಂತೆ ವಿಧಿಪ್ರಕಾರವಾಗಿ ಎದುರಿಗೆ ಕಲಶವನ್ನು ಪ್ರತಿಷ್ಠಾಪಿಸಬೇಕು. ಆ ದೇವನನ್ನೇ ಗಂಧ ಪುಷ್ಪಾದಿಗಳಿಂದ ಕ್ರಮವಾಗಿ ಚೆನ್ನಾಗಿ ಅರ್ಚಿಸಿ, ರಾತ್ರಿಯು ಕಳೆದ ನಂತರ ಪ್ರಾತಃಕಾಲದ ಮಂಗಳ ಸಮಯದಲ್ಲಿ ಅದನ್ನು ದಾನ ಕೊಡಬೇಕು. ಈ ರೀತಿ ಮಾಡಿದರೆ ಯಾವ ಪುಣ್ಯವು ಬರುವದೋ ಅದನ್ನು ಹೇಳುತ್ತೇನೆ. ಕೃತಯುಗದಲ್ಲಿ ವೀರ್ಯವಂತನಾದ ಭದ್ರಾಶ್ವನೆಂಬ ಅರಸನಿದ್ದನು. ಅವನ ಹೆಸರಿನಿಂದಲೇ ಒಂದು ಭೂಮಂಡಲವು ಭದ್ರಾಶ್ವವರ್ಷವೆಂಬ ಹೆಸರುಳ್ಳದ್ದಾಯಿತು. ಒಂದಾನೊಂದು ದಿನ ಸತ್ಪುರುಷೋತ್ತಮನಾದ ಅಗಸ್ತ್ಯ ಮುನಿಯು ಅವನ ಮನೆಗೆ ಬಂದು ಈ ರೀತಿ ಹೇಳಿದನು. "ನಿನ್ನ ಮನೆಯಲ್ಲಿ ಏಳು ದಿನ ವಾಸ ಮಾಡುತ್ತೇನೆ" ಎಂದು. ರಾಜನು ಋಷಿಗೆ ತಲೆಬಾಗಿ ನಮಸ್ಕರಿಸಿ 'ವಾಸಮಾಡಿ' ಎಂದು ಹೇಳಿದನು.

ಆ ಅರಸನಿಗೆ ಅತಿ ಸುಂದರಿಯಾದ ಕಾಂತಿಮತಿಯೆಂಬ ಮಡದಿಯಿದ್ದಳು. ಆ ಸುಂದರಿಯು ದ್ವಾದಶಾದಿತ್ಯರಿಗೆ ಸಮಾನವಾದ ತೇಜಸ್ಸುಳ್ಳವಳಾಗಿದ್ದಳು. ಆ ಅರಸನಿಗೆ ಪತ್ನಿಯು ಅವಳೊಬ್ಬಳೇ ಅಲ್ಲದೆ ವ್ರತಶೀಲರೂ ಸುಂದರಿಯರೂ ಆದ ಐದುನೂರು ಜನ ರಾಣಿಯರಿದ್ದರು. ಮಂಗಳಾಂಗಿಯರಾದ ಅವರು ದಿನವೂ ದಾಸಿಯರಂತೆ ಕೆಲಸ ಮಾಡುತ್ತಿದ್ದರು.

ಮಹಾಭಾಗ್ಯಶಾಲಿನಿಯಾದ ಕಾಂತಿಮತಿಯೇ ಅರಸನಿಗೆ ಅತಿ ಪ್ರೀತಿಪಾತ್ರಳಾದ ಅರಸಿಯಾಗಿದ್ದಳು. ಅಗಸ್ತ್ಯನು, ಕಾಂತಿಮತಿಯ ಭಯದಿಂದ ಕೆಲಸಮಾಡುತ್ತ, ಕ್ಲೇಶಪಡುತ್ತಿರುವ ಆ ಮಂಗಳಾಗಿಯರನ್ನೂ ನೋಡಿದನು. ದೊರೆಯು ಕಾಂತಿಮತಿಯ ಆನಂದಮಯವಾದ, ಆಲ್ಹಾದಕರವಾದ ನಗುಮುಖವನ್ನೇ ನೋಡುತ್ತಿರುವದನ್ನೂ ರೂಪದಿಂದಲೂ, ತೇಜಸ್ಸಿನಿಂದಲೂ, ಹೊಳೆಯುತ್ತಿರುವ ಪರಮಶೋಭನಾಂಗಿ ಯಾಗಿರುವ ಕಾಂತಿಮತಿಯನ್ನೂ ನೋಡಿ, ಬಹಳ ಸಂತೋಷವುಳ್ಳವನಾಗಿ, ಆ ಮುನಿಯು "ಜಗನ್ನಾಥನೇ, ಚನ್ನಾಗಿದೆ ಚನ್ನಾಗಿದೆ" ಎಂದನು. ಎರಡನೆಯ ದಿವಸವೂ ಅದೇ ರೀತಿಯಿಂದ ಮಹಾಕಾಂತಿಮಂತಳಾದ ಅರಸಿಯನ್ನು ನೋಡಿ ಅಗಸ್ತ್ಯನು "ಆಶ್ಚರ್ಯ ಆಶ್ಚರ್ಯ ! ಚರಾಚರಾತ್ಮಕವಾದ ಈ ಜಗತ್ತು ಕಳವಾಯಿತು. ಹೋ ಕಳವಾಯಿತು !" ಎಂದು ಹೇಳಿದನು. ಮೂರನೆಯ ದಿನ ಈ ಕಾಂತಿಮತಿಯನ್ನು ನೋಡಿ ಅಗಸ್ತ್ಯನು ತಿರುಗಿ "ಆಶ್ಚರ್ಯ! ಯಾರು ಒಂದೇ ದಿನದಲ್ಲಿ ತೃಪ್ತನಾಗಿ ಅರಸನಿಗೆ ಸರ್ವಸ್ವವನ್ನೂ ದಯಪಾಲಿಸಿರುವನೋ, ಗೋವಿಂದನಾದ ಆ ಪರಮೇಶ್ವರನನ್ನು ಮೂಢರು ಅರಿಯುವದಿಲ್ಲ !" ಎಂದು ಹೇಳಿದನು.

ನಾಲ್ಕನೆಯ ದಿವಸ ತಿರುಗಿ ಕೈಯನ್ನು ಮೇಲೆತ್ತಿ ಹೀಗೆ ಹೇಳಿದನು - ''ಜಗನ್ನಾಥನೇ, ಚೆನ್ನಾಗಿದೆ, ಚೆನ್ನಾಗಿದೆ ! ಸ್ತ್ರೀಯರೇ, ಶೂದ್ರರೇ, ಚೆನ್ನಾಗಿದೆ ಚೆನ್ನಾಗಿದೆ! ಬ್ರಾಹ್ಮಣರೇ ಚೆನ್ನಾಯಿತು ! ದೊರೆಗಳೇ ಒಳ್ಳೆಯದಾಯಿತು ! ವೈಶ್ಯರೇ ಚೆನ್ನಾಗಿದೆ !'' ಎಂದು ಮತ್ತೆ ಮತ್ತೆ ''ಭದ್ರಾಶ್ವನೇ ಚೆನ್ನಾಯಿತು ! ನೀನು ಒಳ್ಳೆಯವನು. ಎಲೈ ಅಗಸ್ತ್ಯ, ನಿನಗೂ ಚೆನ್ನಾಯಿತು ! ಚೆನ್ನಾಯಿತು ! ಚೆನ್ನಾಯಿತು ಪ್ರಹ್ಲಾದ ! ಧ್ರುವನೇ ನಿನಗೆ ಸೊಗಸು ! ಮಹಾವ್ರತನೇ ಸೊಗಸಾಗಿದೆ '' ಎಂದು ಹೇಳುತ್ತಾ ಅಗಸ್ತ್ಯನು ದೊರೆಯ ಸಮೀಪದಲ್ಲಿ ಮೇಲಕ್ಕೆ ಹಾರಿ ಹಾರಿ ಕುಣಿದಾಡಿದನು. ರಾಣಿಯೊಡಗೂಡಿದ ರಾಜೋತ್ತಮನು, ಈ ರೀತಿಯಿಂದ ಕುಣಿದಾಡುವ ಅಗಸ್ತ್ಯಋಷಿಯನ್ನು ಸಮೀಪಿಸಿ ''ಬ್ರಾಹ್ಮಣನೇ ಈ ಸಂತೋಷಕ್ಕೇನು ಕಾರಣ ? ನೀನು ಹೀಗೆ ಕುಣಿದಾಡುತ್ತಿಯಲ್ಲಾ !'' ಎಂದನು. ಆಗ ಅಗಸ್ತ್ಯ ಮುನಿಯು ಹೀಗೆಂದನು - ''ಆಶ್ಚರ್ಯ ! ನೀನು ಮೂರ್ಖ, ಕೆಟ್ಟಪ್ರಭು, ಅಯ್ಯೋ, ನಿನ್ನ ಹಿಂಬಾಲಕರು ಮೂರ್ಖರು. ಅಯ್ಯೋ ಪುರೋಹಿತರೂ ಮೂರ್ಖರು. ಅಯ್ಯೋ ! ಪುರೋಹಿತರೂ ಮೂರ್ಖರು. ಯಾರೂ ನನ್ನ ಅಭಿಪ್ರಾಯವನ್ನು ತಿಳಿಯವದಿಲ್ಲ.'' ಆತನು ಹಾಗೆ ಹೇಳಲು ದೊರೆಯು ಕೈಜೋಡಿಸಿಕೊಂಡು ''ಮಹಾಭಾಗನೇ, ಬ್ರಹ್ಮನೇ, ನೀನು ಹೇಳಿದ ಈ ಪ್ರಶ್ನೆಯೇ ನಮಗೆ ತಿಳಿಯಲಿಲ್ಲ. ನಿನಗೆ ದಯೆ ಬಂದರೆ ತಿಳಿಯುವಂತೆ ಹೇಳು '' ಎಂದನು.

ಅಗಸ್ತ್ಯ ಮುನಿಯು ಹೇಳಿದನು :- ಈ ಅರಸಿಯು ಹಿಂದೆ ಹರಿದತ್ತ ನಗರದಲ್ಲಿ ಹರಿದತ್ತನೆಂಬ ವೈಶ್ಯನ ಮನೆಯಲ್ಲಿ ಸೇವಕಳಾಗಿದ್ದಳು. ನೀನು ಅವಳ ಪತಿಯಾಗಿದ್ದೆ. ಶೂದ್ರನಾದ ನೀನು ಸೇವೆಯಲ್ಲಿ ಆಸಕ್ತನಾಗಿ ಅದೇ ವೈಶ್ಯನ ಮನೆಯಲ್ಲಿ ಕೆಲಸ ಮಾಡುತ್ತಿದ್ದೆ. ಈ ವೈಶ್ಯನು ಆಶ್ವಯುಜ ಮಾಸದಲ್ಲಿ ದ್ವಾದಶೀ ವ್ರತದಲ್ಲಿದ್ದನು. ಅವನು ತಾನೇ ವಿಷ್ಣುಮಂದಿರಕ್ಕೆ ಹೋಗಿ ಪುಷ್ಪ ದೀಪ ಧೂಪಾದಿಗಳಿಂದ ಆ ಹರಿಯನ್ನು ಅರ್ಚಿಸಿ, ಮಹಾಮತಿಗಳಾದ ನಿಮ್ಮನ್ನು ಇಬ್ಬರನ್ನೂ ಅಲ್ಲಿ ದೀಪಗಳನ್ನು ಸರಿಯಾಗಿ ಉರಿಸುವದಕ್ಕಾಗಿ ಕಾವಲಿಟ್ಟು, ತನ್ನ ಮನೆಗೆ ಹೋದನು. ವೈಶ್ಯನು ಹೊರಟು ಹೋದಮೇಲೆ, ನರೋತ್ತಮನೇ, ನೀವಿಬ್ಬರೂ ಹರಿದೀಪಗಳು ಚೆನ್ನಾಗಿ ಉರಿಯುವಂತೆ ಮಾಡಿ, ಬೆಳಗಾಗುವವರೆಗೂ ಒಂದು ರಾತ್ರಿಯೆಲ್ಲ ಅಲ್ಲಿಯೇ ಇದ್ದಿರಿ. ಬಳಿಕ ಕಾಲಾಂತರದಲ್ಲಿ ನೀವು ದಂಪತಿಗಳಿಬ್ಬರೂ, ಮೃತರಾಗಲು ಆ ದೀಪವನ್ನು ದೊಡ್ಡದು ಮಾಡಿದ ಪುಣ್ಯದಿಂದ ಪ್ರಿಯವ್ರತನ ಮನೆಯಲ್ಲಿ ನೀನು ಜನ್ಮವೆತ್ತಿದೆ. ಹಿಂದೆ ವೈಶ್ಯನ ಸೇವಕಳಾಗಿದ್ದ ಇವಳು ನಿನಗೆ ಪತ್ನಿಯು ಆದಳು. ಹರಿಯ ಸನ್ನಿಧಿಯಲ್ಲಿ ಪರರು ಹತ್ತಿಸಿದ ದೀಪವನ್ನು ದೊಡ್ಡದನ್ನಾಗಿ ಮಾಡಿ ಉರಿಸುವುದಕ್ಕೆ ಇಷ್ಟುಫಲವಾದರೆ, ತನ್ನ ದುಡ್ಡನ್ನು (ಹಣವನ್ನು) ವೆಚ್ಚಮಾಡಿ, ಹರಿ ಗೃಹದಲ್ಲಿ ದೀಪವನ್ನು ಹತ್ತಿಸುವವರಿಗೆ ಬರುವ ಪುಣ್ಯವನ್ನು ಎಣಿಸಲು ಸಾಧ್ಯವೇ ಇಲ್ಲ. ಆದುದರಿಂದ ಚೆನ್ನಾಗಿದೆ ! ಹರಿಯೇ ಚೆನ್ನಾಗಿದೆ '' ಎಂದು ನಾನು ಹೇಳಿದೆನು.

ತಿಳಿದವನು, ಬುದ್ಧಿವಂತನು ಕೃತಯುಗದಲ್ಲಿ ಒಂದು ವರ್ಷಕಾಲ ಪೂರ್ತಿಯಾಗಿ ಹರಿಯಲ್ಲಿ ಭಕ್ತಿಯನ್ನು ಮಾಡುವುದು ತ್ರೇತಾಯುಗದಲ್ಲಿ ಅರ್ಧವರ್ಷ ಕಾಲ ಮಾಡುವ ಭಕ್ತಿಗೆ ಸಮವಾಗುವುದು. ದ್ವಾಪರ ಯುಗದಲ್ಲಿ ಮೂರು ತಿಂಗಳು ಭಕ್ತಿಯಿಂದ ಪೂಜಿಸಿ

ಯಾವ ಫಲವನ್ನು ಪಡೆಯುವನೋ ಅದೇ ಫಲವನ್ನು ಕಲಿಯುಗದಲ್ಲಿ ''ನಮೋ ನಾರಾಯಣಾಯ'' (ನಾರಾಯಣನಿಗೆ ನಮಸ್ಕಾರ) ಎಂದು ಹೇಳಿ, ಪಡೆಯುವುದರಲ್ಲಿ ಸಂದೇಹವಿಲ್ಲ. ಆದುದರಿಂದಲೇ ಜಗತ್ತೆಲ್ಲದರಲ್ಲಿಯೂ ಭಕ್ತಿಯು ಮಾತ್ರ ಕಳವಾಯಿತು. ಎಂದು ನಾನು ಹೇಳಿದೆನು. ಅರಸನೇ, ಮತ್ತೊಬ್ಬರು ದೇವರೆದುರಿಗೆ ಹತ್ತಿಸಿದ್ದ ದೀಪವನ್ನು ದೊಡ್ಡದನ್ನಾಗಿ ಮಾಡಿದುದರಿಂದ, ನೀನು ಇಂತಹ ಫಲವನ್ನು ಪಡೆದೆ. ಆದರೂ ಅದನ್ನು ನೀವರಿಯದಿರುವದರಿಂದ 'ಅಯ್ಯೋ ಮೂಢರು ಹರಿಗೆ ದೀಪ ಹತ್ತಿಸುವ ಕಾರ್ಯದ ಫಲವನ್ನು ತಿಳಿಯುವುದಿಲ್ಲ' ಎಂದು ನಾನು ಹೇಳಿದೆನು. ಇಂತಹ ಅರಸರು ಯಾರ ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ಭಕ್ತಿಯಿಂದ ಬಗೆಬಗೆಯ ಯಜ್ಞಗಳನ್ನು ಮಾಡುವರೋ ಅವರು ಸಾಧುಗಳೆನಿಸಿಕೊಳ್ಳುವರು. ನಾನು ಭೂತಲದಲ್ಲಿ ನಾರಾಯಣನ ಹೊರತು ಬೇರಾವುದನ್ನೂ ಕಾಣೆನು. ಆದುದರಿಂದ ''ಅಗಸ್ತ್ಯ'' ಎಂದು ನನ್ನನ್ನು ನಾನೇ ಹೊಗಳಿಕೊಂಡೆನು. ಪತಿಯ ಸೇವೆ ಶುಶ್ರೂಷೆಯನ್ನೂ, ಅವನೆದುರಿಗಿಲ್ಲದಾಗ ಹರಿಸೇವೆಯನ್ನೂ ಮಾಡಿದ ಆ ಸ್ತ್ರೀಯು ಧನ್ಯಳು. ಅಲ್ಲದೆ ದ್ವಿಜಶುಶ್ರೂಷೆ ಯಲ್ಲಿ ಆಸಕ್ತನಾದ ಆ ಶೂದ್ರನೂ ಧನ್ಯನು. ಬಹು ಧನ್ಯನೆನಿಕೊಳ್ಳುವನು. ದ್ವಿಜನ ಅಪ್ಪಣೆಯಿಂದ ಅವರಿಗೆ ಹರಿಭಕ್ತಿ. ಆದುದರಿಂದ ಸ್ತ್ರೀಶೂದ್ರರೇ, ಚೆನ್ನಾಗಿದೆ, ಒಳ್ಳೆಯದು ! ಎಂದೆನು.

ರಾಕ್ಷಸನಾಗಿ ಉದಿಸಿದ್ದರೂ, ಪ್ರಹ್ಲಾದನು ಪುರುಷೋತ್ತಮನಾದ ನಾರಾಯಣನನ್ನು ಹೊರತು ಬೇರಾವುದನ್ನೂ ತಿಳಿಯನು. ಆದುದರಿಂದ ಅವನು ಸಾಧುವೆನಿಸಿಕೊಳ್ಳುವನು. ಬ್ರಹ್ಮನ ವಂಶದಲ್ಲಿ ಹುಟ್ಟಿ, ಧ್ರುವನು ಬಾಲ್ಯದಲ್ಲಿಯೇ ವನಕ್ಕೆ ಹೋಗಿ ವಿಷ್ಣುವನ್ನಾರಾಧಿಸಿ, ಪರಮೋತ್ಕೃಷ್ಟವಾದ ಸ್ಥಾನವನ್ನು ಪಡೆದನು. ರಾಜೋತ್ತಮನೇ, ಆದುದರಿಂದ ''ಧ್ರುವ'' ಎಂದು ನಾನು ಹೇಳಿದೆನು.'' ಭದ್ರಾಶ್ವರಾಜನು, ಮಹಾತ್ಮನಾದ ಅಗಸ್ತ್ಯನ ಈ ಮಾತನ್ನು ಕೇಳಿ, ಆ ಮುನಿಯನ್ನೇ ಸ್ವಲ್ಪವಾದರೂ ಉಪದೇಶ ಮಾಡಬೇಕೆಂದು ಕೇಳಿದನು. ಮಹಾಭಾಗನಾದ ಅಗಸ್ತ್ಯನು ಕಾರ್ತಿಕಮಾಸದ ಹುಣ್ಣಿಮೆಯಲ್ಲಿ ಪುಷ್ಕರಕ್ಕೆ ಹೋಗಬೇಕೆಂದು ಭದ್ರಾಶ್ವವ ಮನೆಯಿಂದ ಹೊರಟುಹೋಗುತ್ತಿರುವಾಗ ಅರಸನು ಮತ್ತೆ ಕೇಳಲು, ಋಷಿವರ್ಯನು ಪದ್ಮನಾಭ ದ್ವಾದಶೀವ್ರತವನ್ನೇ ಉಪದೇಶಿಸಿದನು. ಆಗ ದುರ್ವಾಸ ಮುನಿ :- ತಪೋಧನನಾದ ಸತ್ಯತಪನೇ, ಅದನ್ನೇ ನಾನು ನಿನಗೆ ಹೇಳಿದೆನು. ಅಗಸ್ತ್ಯನು ರಾಜೋತ್ತಮನಿಗೆ ವ್ರತವನ್ನು ಉಪದೇಶಿಸಿ ''ನಾನು ಪುಷ್ಕರಕ್ಕೆ ಹೋಗುತ್ತೇನೆ. ನಿನ್ನ ಮನೆಯು ಸುಪುತ್ರವಾಗಲಿ'' ಎಂದು ಹೇಳಿ ಒಡನೆಯೇ ಬೇಗನೇ ಕಣ್ಮರೆಯಾದನು. ಭದ್ರಾಶ್ವರಾಜನು ಬಳಿಕ ಪದ್ಮನಾಭದ್ವಾದಶೀವ್ರತವನ್ನು ಶಾಸ್ತ್ರೋಕ್ತ ವಿಧಾನದಿಂದ ಮಾಡಿ, ಈ ಜನ್ಮದಲ್ಲಿ ಬೇಕಾದ ಉತ್ತಮವಾದ ಪ್ರಯೋಜನವನ್ನೆಲ್ಲಾ ಪಡೆದನು. ಆತನು ಮಕ್ಕಳುಗಳೊಡಗೂಡಿ, ಉತ್ತಮ ಭೋಗಗಳನ್ನು ಅನುಭವಿಸಿ ಕೊನೆಗೆ ಪದ್ಮನಾಭನ ಅನುಗ್ರಹದಿಂದ ವಿಷ್ಣುಲೋಕವನ್ನು ಪಡೆದನು.

*ವರಾಹ ಪರಾಣದಲ್ಲಿ ನಲವತ್ತೊಂಬತ್ತನೇ ಅಧ್ಯಾಯ ಮುಗಿದುದು.*

—o—

**ದುರ್ವಾಸಋಷಿ :-** ಮುನಿಶ್ರೇಷ್ಠನಾದ ಅಗಸ್ತ್ಯನು ಪುಷ್ಕರತೀರ್ಥಕ್ಕೆ ಹೋಗಿ ಬಂದು ಕಾರ್ತಿಕಮಾಸದ ಹುಣ್ಣಿಮೆಯಲ್ಲಿ ಮತ್ತೆ ಬೇಗನೆ ಭದ್ರಾಶ್ವನ ಅರಮನೆಗೆ ಆಗಮಿಸಿದನು. ಅವನು ಬಂದುದನ್ನು ಪರಮಧಾರ್ಮಿಕನಾದ ಆ ದೊರೆಯು ಕಂಡು, ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದನು. ಪೀಠದಲ್ಲಿ ಕುಳಿತುಕೊಂಡಿರುವ ಶ್ಲಾಘ್ಯವ್ರತನಿಷ್ಠನಾದ ಆ ಋಷಿಯನ್ನು ಕುರಿತು ಮುಂದಿನ ಮಾತನಾಡಿದನು.

**ಅರಸನು :-** ಋಷಿ ವರೋತ್ತಮನೇ, ಮೊದಲು ನೀನು ಹೇಳಿದ ಆಶ್ವಯುಜ ಮಾಸದ ದ್ವಾದಶೀ ವ್ರತವನ್ನು ನಾನು ಮಾಡಿದೆನು. ಈಗ ಕಾರ್ತಿಕ ಮಾಸದಲ್ಲಿ ಯಾವದು ಪುಣ್ಯವ್ರತವಾದದ್ದು ಎಂಬುದನ್ನು ತಿಳಿಸಬೇಕು.

**ಅಗಸ್ತ್ಯಮುನಿ :-** ಪ್ರಭುವೇ, ಕಾರ್ತಿಕ ಮಾಸದಲ್ಲಿ ದ್ವಾದಶಿಯು ಪರಮ ಪವಿತ್ರವಾದುದು. ಅದರಲ್ಲಿ ಉಪವಾಸಮಾಡಿ, ವ್ರತವನಾಚರಿಸುವದರಿಂದ ಯಾವ, ಫಲವು ದೊರೆಯುವದೋ ಅದನ್ನು ವಿವರವಾಗಿ ಹೇಳುವೆನು. ಈ ವ್ರತವನ್ನು ಆಚರಿಸುವವನು ಮೊದಲು ಹೇಳಿದ ವಿಧಿಯಂತೆ ಸರಿಯಾಗಿ ಸಂಕಲ್ಪಮಾಡಿ, ಸ್ನಾನಮಾಡಬೇಕು. ದೋಷರಹಿತನಾದ ಜಗದೀಶ್ವರನಾದ ಆ ನಾರಾಯಣ ದೇವನನ್ನು ಪೂಜಿಸಬೇಕು. ''ಸಹಸ್ರ ಶಿರಸೇ ನಮಃ'' ಎಂದು ಹರಿಯ ಶಿರಸ್ಸನ್ನು ಪೂಜಿಸಬೇಕು. ಪುರುಷಾಯ ನಮಃ ಎಂದು ಬಾಹುಗಳನ್ನು ''ವಿಶ್ವರೂಪಿಣೇ ನಮಃ'' ಎಂದು ಕೊರಳನ್ನು ''ಜ್ಞಾನವಸ್ತ್ರಾಯ ನಮಃ'' ಎಂದು ಶಂಖಚಕ್ರಾದ್ಯಸ್ತ್ರಗಳನ್ನೂ, ''ಶ್ರೀವತ್ಸಾಯ ನಮಃ'' ಎಂದು ವಕ್ಷಸ್ಥಲವನ್ನೂ ''ಜಗದ್ಗ್ರಸಿಷ್ಣವೇ ತುಭ್ಯಂ ನಮಃ'' ಎಂದು ಹೊಟ್ಟೆಯನ್ನೂ, ''ದಿವ್ಯಮೂರ್ತಯೇ ನಮಃ'' ಎಂದು ನಡುವನ್ನೂ ''ಸಹಸ್ರಪಾದಾಯ ನಮಃ'' ಎಂದು ದೇವನ ಪಾದಗಳನ್ನು ಪೂಜಿಸಬೇಕು.

ತಿಳಿವಳಿಕೆಯುಳ್ಳವನು, ಬುದ್ಧಿವಂತನು ಹೀಗೆ ದೇವೇಶನನ್ನು ತಲೆಯಿಂದ ಆರಂಭಿಸಿ ಪಾದದವರೆಗೆ ಅರ್ಚಿಸಿ, ''ದಾಮೋದರಾಯ ನಮಃ'' ಎಂದು ಹರಿಯ ಸರ್ವಾಂಗವನ್ನೂ ಅರ್ಚಿಸಬೇಕು. ಈ ರೀತಿಯಿಂದ ಪೂಜಿಸಿ, ಸ್ವಾಮಿಯೆದುರಿಗೆ ರತಗರ್ಭಗಳಾದ ನಾಲ್ಕು ಕಲಶಗಳನ್ನು, ಗಂಧವನ್ನು ಲೇಪಿಸಿ ಹೂಮಾಲೆಗಳನ್ನು ಕೊರಳಿಗೆ ಸುತ್ತಿ ಬಿಳಿಯ ವಸ್ತ್ರದಿಂದ ಅಲಂಕರಿಸಿ ಪ್ರತಿಷ್ಠಾಪಿಸಬೇಕು. ರಾಜೋತ್ತಮನೇ, ಎಳ್ಳಿನಿಂದ ತುಂಬಿದ ಸುವರ್ಣ ನಾಣ್ಯಗಳುಳ್ಳ ತಾಮ್ರದ ಪಾತ್ರೆಗಳನ್ನು ಕಲಶಗಳ ಮೇಲೆ ಇಟ್ಟು, ಆ ನಾಲ್ಕು ಕಲಶಗಳನ್ನೇ ಆ ನಾಲ್ಕು ಸಮುದ್ರಗಳೆಂದು ಭಾವಿಸಬೇಕು. ಆ ನಾಲ್ಕು ಕಲಶಗಳ ನಡುವೆ ಮೊದಲು ಹೇಳಿದ ಕ್ರಮದಂತೆ ಕಾಂಚನದ ಹರಿಮೂರ್ತಿಯನ್ನು ಸ್ಥಾಪಿಸಬೇಕು. ಯೋಗೀಶ್ವರನೂ, ಯೋಗಿಗಳಿಗೆ ಗೋಚರನೂ, ಪೀತಾಂಬರಧಾರಿಯೂ ಆದ ಆ ಪ್ರಭುವನ್ನು ಈ ರೀತಿಯಾಗಿ ವಿಧ್ಯುಕ್ತವಾಗಿ ಪೂಜಿಸಿ (ಏಕಾದಶಿಯಾದ ಆ ರಾತ್ರಿ) ಅಲ್ಲಿಯೇ ಜಾಗರಣೆಯನ್ನು ಮಾಡಬೇಕು. ಇನ್ನು ಕೆಲವು ಯೋಗಿಗಳು ಮಾಡಿರುವಂತೆ ಹದಿನಾರು ಅರಗಳುಳ್ಳ ಚಕ್ರವನ್ನು ರಚಿಸಿ, ಅದರಲ್ಲಿ ವಿಷ್ಣು ಸಂಬಂಧವಾದ ಯಜ್ಞವನ್ನು ಮಾಡಬೇಕು. ಯೋಗೀಶ್ವರನಾದ ಆ ಹರಿಯನ್ನು

ಪೂಜಿಸಬೇಕು. ನಿಯಮದಂತೆ ಪೂಜಿಸಿ, ಆ ರಾತ್ರಿಯು ಕಳೆದು ಬೆಳಗಾಗುತ್ತಲೇ ಬ್ರಾಹ್ಮಣನಿಗೆ ಅರ್ಪಿಸಬೇಕು. ನಾಲ್ಕು ಸಾಗರಗಳೆಂದು ಭಾವಿಸಿದ ಕಲಶಗಳನ್ನು ನಾಕು ಜನ ಬ್ರಾಹ್ಮಣರಿಗೆ ಕೊಟ್ಟು, ಯೋಗೀಶ್ವರನಾದ ದೇವನನ್ನು ಐದನೆಯ ಬ್ರಾಹ್ಮಣನಿಗೆ ಪರಿಶುದ್ಧವಾದ ಮನಸ್ಸುಳ್ಳವನಾಗಿ ಅರ್ಪಿಸಬೇಕು.

ವೇದಪಾಠಿಗೆ ಕೊಡುವದರ ಎರಡರಷ್ಟು ಗುಣವು ವೇದವನ್ನು ತಿಳಿದವನಿಗೆ ಕೊಟ್ಟರೆ ಲಭಿಸುವುದು. ಯಾವನು ಈ ವ್ರತದ ಮರ್ಮವನ್ನೂ, ವಿಧಿ-ವಿಧಾನವನ್ನೂ ಸಮಂತ್ರಕವಾಗಿ ಹೇಳುವನೋ ಅವನಿಗೆ ಕೊಟ್ಟರೆ ಕೋಟಿಯಷ್ಟು ಫಲಪ್ರಾಪ್ತಿಯಾಗುವುದು. ಗುರುವಿದ್ದರೂ ಕೂಡ ಕೆಟ್ಟ ಬುದ್ಧಿಯುಳ್ಳ ಯಾವನು ಬೇರೆಯವನನ್ನು ಆಶ್ರಯಿಸುವನೋ, ಅರ್ಚಿಸುವನೋ ಅವನು ಖಂಡಿತವಾಗಿಯೂ ದುರ್ಗತಿಯನ್ನು ಹೊಂದುವನು. ಅವನು ಏನೇ ಕೊಟ್ಟರೂ, ಎಷ್ಟು ಕೊಟ್ಟರೂ ಅದು ನಿಷ್ಫಲವಾಗುವುದು. ಆದುದರಿಂದ ಮೊದಲು ಗುರುವಿಗೆ ಕೊಟ್ಟು, ಆ ಮೇಲೆ ಬೇರೆಯವರಿಗೆ ಕೊಡಬೇಕು. ಅವಿದ್ಯಾವಂತನಾಗದೆ, ಒಳ್ಳೆ ವಿದ್ಯಾವಂತನಾದ, ಗುರುವೇ ಜನಾರ್ದನನು. ಸನ್ಮಾರ್ಗದಲ್ಲಿರುವವನಾಗಲಿ, ಅಮಾರ್ಗದಲ್ಲಿರುವವನಾಗಲಿ ಗುರುವೇ ಉತ್ತಮವಾದ ಗತಿ. ಮಾನವನು ಬಂದು ಗುರುವನ್ನು ಗೌರವಿಸಬೇಕು. ಯಾರು ಗುರುವನ್ನು ಪಡೆದು ಅಜ್ಞಾನದಿಂದ ಅವನನ್ನು ಗೌರವಿಸದಿರುವನೋ ಆ ಪುರುಷಾಧಮನು ಕೋಟಿಯುಗಗಳ ಕಾಲ ನರಕದಲ್ಲಿ ಬೇಯುವನು.

ಈ ರೀತಿಯಿಂದ ದ್ವಾದಶಿಯಲ್ಲಿ ವಿಷ್ಣುವನ್ನು ಅರ್ಚಿಸಿ ಮೇಲೆ ಹೇಳಿದಂತೆ ಕಲಶಾದಿಗಳನ್ನು ಬ್ರಾಹ್ಮಣನಿಗೆ ಸಮರ್ಪಿಸಿ, ತನ್ನ ಶಕ್ತಿಗನುಸಾರವಾಗಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ, ದಕ್ಷಿಣೆಯನ್ನು ಕೊಡಬೇಕು. ಪೂರ್ವದಲ್ಲಿ ಬ್ರಹ್ಮನು, ಭೂದೇವಿಯು ಮಾಡಿದ ಈ ವ್ರತವನ್ನು ತಾನೂ ಮಾಡಿ ಪ್ರಾಜಾಪತ್ಯವನ್ನು ಪಡೆದನು. ಮುಕ್ತಿಯೆಂಬ ಶಾಶ್ವತ ಬ್ರಹ್ಮನನ್ನೂ ಪಡೆದನು. ಹಾಗೆಯೇ ಹೈಹಯ ರಾಜನಾದ ಕೃತವೀರ್ಯನು ಈ ವ್ರತದಿಂದ ಕಾರ್ತವೀರ್ಯಾರ್ಜುನನೆಂಬ ಮಗನನ್ನೂ, ಶಾಶ್ವತಪರಬ್ರಹ್ಮನನ್ನೂ ಪಡೆದನು. ಶಕುಂತಲೆಯು ಹೀಗೆಯೇ ವ್ರತವನ್ನು ಮಾಡಿ, ಚಕ್ರವರ್ತಿಯಾದ ಭರತನನ್ನು ದುಷ್ಯಂತನಿಂದ ಮಗನನ್ನಾಗಿ ಪಡೆದಳು. ಅಲ್ಲದೆ, ಗತಿಸಿದ ಹಲವಾರು ರಾಜರು ವೇದದಲ್ಲಿ ಹೇಳಿರುವ ಚಕ್ರವರ್ತಿಗಳೂ ಈ ವ್ರತದಿಂದ ಉತ್ತಮವಾದ ಚಕ್ರವರ್ತಿತ್ವವನ್ನು ಪಡೆದರು. ಪಾತಾಳದಲ್ಲಿ ಮುಳುಗಿದ್ದ ಧರಣೀದೇವಿ (ಭೂದೇವಿ)ಯು ಪೂರ್ವದಲ್ಲಿ ಉತ್ತಮವಾದ ಈ ವ್ರತವನ್ನು ಮಾಡಿದಳು. ಆದುದರಿಂದಲೇ ಇದಕ್ಕೆ ಧರಣೀವ್ರತ ವೆಂದು ಹೆಸರಾಯಿತು. ಈ ವ್ರತವು ನೆರವೇರಲು (ಮುಗಿಯಲು) ವರಾಹರೂಪಿಯಾದ ಹರಿಯು ತೃಪ್ತನಾಗಿ ಭೂದೇವಿಯನ್ನು ಉದ್ಧರಿಸಿ ಸಮುದ್ರದಲ್ಲಿ ಹಡಗಿನಂತೆ ನಿಲ್ಲಿಸಿದನು. ಇದನ್ನು ಕೇಳುವ ಮತ್ತು ಮಾಡುವ ಉತ್ತಮ ಮಾನವನು ಪಾಪವೆಲ್ಲವನ್ನೂ ಕಳೆದುಕೊಂಡು ವಿಷ್ಣುಸಾಯುಜ್ಯವನ್ನು ಪಡೆಯುವನು.

*ವರಾಹ ಪುರಾಣದಲ್ಲಿ ಐವತ್ತನೇ ಅಧ್ಯಾಯ ಮುಗಿದುದು*

—o—

## ಉತ್ತಮಪತಿ ಪ್ರಾಪ್ತಿವ್ರತ

ಅಧ್ಯಾಯ - ೫೧

**ಭದ್ರಾಶ್ವ :-** ಬ್ರಾಹ್ಮಣನೇ, ವಿಜ್ಞಾನೋದಯವನ್ನು ಬಯಸುವವನು ಯಾರನ್ನು ಆರಾಧಿಸಬೇಕು ? ಎಂಬುದನ್ನು ಹೇಳು.

**ಅಗಸ್ತ್ಯಮುನಿ :-** ದೇವ ದೇವೋತ್ತಮನಾದ ಶ್ರೀಮನ್ನಾರಾಯಣನೇ ಆರಾಧಿಸಲರ್ಹನು. ಆ ಲಕ್ಷ್ಮೀಪತಿಯನ್ನು ಒಲಿಸಿಕೊಳ್ಳುವ ಮಾರ್ಗವನ್ನು ಕೇಳು. ಸಕಲ ದೇವಮುನಿ ಮನುಜರಿಗೂ ಪೂಜ್ಯನಾದ ಅವನನ್ನು ಪೂಜಿಸಿದವರು ದುಃಖ ರಹಿತರಾಗುವರು. ರಾಜನ್, ಹಿಂದೆ ನಾರದರಿಂದ ಅಪ್ಸರೆಯರಿಗೆ ಹೇಳಲ್ಪಟ್ಟ ವಿಷ್ಣು ವ್ರತವನ್ನು ಹೇಳುವೆನು.

**ಅಪ್ಸರೆಯರು :-** ಬ್ರಹ್ಮನ್, ನಾವು ಪತಿಯನ್ನು ಇಚ್ಛಿಸುತ್ತೇವೆ. ಮುಕುಂದನು ನಮಗೆ ಪತಿಯಾಗುವ ಮಾರ್ಗವನ್ನು ನಿರೂಪಿಸಿರಿ.

**ನಾರದರು :-** ವಂದನ ಪೂರ್ವಕವಾಗಿ ಪ್ರಶ್ನೆಯನ್ನು ಕೇಳುವದು ಮಂಗಲಕರವು. ನೀವು ನಿಮ್ಮ ತಾರುಣ್ಯದ ಸೊಕ್ಕಿನಿಂದ ನನಗೆ ನಮಸ್ಕಾರ ಮಾಡಲಿಲ್ಲ. ಆದರೆ ನೀವು ನಾರಾಯಣನ ನಾಮೋಚ್ಚಾರಣವನ್ನು ಮಾಡಿದ್ದರಿಂದ ನಿಮ್ಮ ಇಷ್ಟಾರ್ಥವು ಸಿದ್ಧಿಸಲಿ ಎಂಬ ವರವನ್ನು ಕೊಟ್ಟಿದ್ದೇನೆ. ಈಗ ಆ ಹರಿಯು ಪತಿಯಾಗುವ ವರವನ್ನು ಹೇಳುತ್ತೇನೆ. ಚೈತ್ರಮಾಸದ ಶುಕ್ಲಪಕ್ಷದ ಮಂಗಲಕರವಾದ ಏಕಾದಶಿಯ ದಿನ ಉಪೋಷಣಮಾಡಿ ವಿಧಿಪೂರ್ವಕವಾಗಿ ಶ್ರೀಹರಿಯನ್ನು ಪೂಜಿಸಬೇಕು. ಅವನ ಸಮ್ಮುಖದಲ್ಲಿ ಕೆಂಪು ಪುಷ್ಪಗಳಿಂದ ವೃತ್ತವನ್ನು ರಚಿಸಿ, ಆ ಮಂಡಲದಲ್ಲಿ ನೃತ್ಯ, ವಾದ್ಯ, ಸಂಗೀತಾದಿಗಳಿಂದ ಆ ರಾತ್ರಿ ಜಾಗರಣೆಯನ್ನು ಮಾಡಬೇಕು. ''ಭವಾಯ ನಮಃ'' ಎಂದು ದೇವನ ಶಿರಸ್ಸನ್ನೂ, ''ಅನಂಗಾಯ ನಮಃ'' ಎಂದು ಟೊಂಕವನ್ನು, ''ಕಾಮಾಯ ನಮಃ'' ಎಂದು ಬಾಹುಬುಡವನ್ನೂ, ''ಸುಶಾಸ್ತ್ರಾಯ ನಮಃ'' ಎಂದು ಉದರವನ್ನೂ, ''ಮನ್ಮಥಾಯ ನಮಃ'' ಎಂದು ಚರಣಗಳನ್ನೂ, ''ಹರಯೇ ನಮಃ'' ಎಂದು ದೇಹವೆಲ್ಲವನ್ನೂ ಅರ್ಚಿಸಬೇಕು. ಅನಂತರ ದೇವನ ಸಮ್ಮುಖದಲ್ಲಿ ಎಲ್ಲ ಕಡೆಗಳಲ್ಲೂ ಅವನಿಗೆ ನಮಸ್ಕಾರಗಳನ್ನು ಮಾಡಿ, ಅರುಣೋದಯದ ನಂತರ ದ್ವಾದಶಿಯದಿನ ಯೋಗ್ಯನಾದ ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು. ಇತರ ಭೂಸುರರನ್ನೂ ಅರ್ಚಿಸಿ, ಈ ವ್ರತವನ್ನು ಮುಗಿಸಬೇಕು. ಬಳಿಕ ಉತ್ತಮವಾದ ಕಬ್ಬಿನ ಜಲ್ಲೆಯಿಂದ ರಸವನ್ನು ತೆಗೆದು ಅಭಿಷೇಕಿಸಿ ನಾರಾಯಣನನ್ನು ಮಲ್ಲಿಗೆ, ಜಾಜಿ ಹೂಗಳಿಂದ ಪೂಜಿಸಬೇಕು. ಈ ರೀತಿಯಾಗಿ ಇದನ್ನು ಆಚರಿಸಿದರೆ ಹರಿಯು ನಿಮಗೆ ನಿಸ್ಸಂಶಯವಾಗಿ ಒಲಿಯುವನು. ಯುವತಿಯರೇ, ನೀವು ಗರ್ವದಿಂದ ನನಗೆ ವಂದಿಸದೆ ನನ್ನನ್ನು ಪ್ರಶ್ನಿಸಿದ್ದರ ಅವಮಾನ ಪರಿಣಾಮವನ್ನು ಹೇಳುವೆನು. ಈ ವ್ರತದಿಂದ ವೈಕುಂಠಾಧಿಪತಿಯನ್ನು ಪತಿಯಾಗಿ ಪಡೆದ ನೀವು ದುರಹಂಕಾರದಿಂದ ಈ ಸರೋವರದಲ್ಲಿ ಅಷ್ಟಾವಕ್ರ ಮಹಾಮುನಿಯನ್ನು ಅಪಹಾಸ್ಯಮಾಡಿ ಅವನಿಂದ ಶಪಿಸಲ್ಪಡುವಿರಿ. ಈ ಕಾರಣದಿಂದ ಗೋಪಾಲರು ನಿಮ್ಮನ್ನು ಅಪಹರಿಸುವರು. ಮುಂಚೆ ಅಪಹರಿಸುವ ದೇವೇಶನೇ ನಿಮಗೆ ರಮಣನಾಗುವನು.

**ಅಗಸ್ತ್ಯಮುನಿ :-** ನಾರದರು ಈ ರೀತಿಯಾಗಿ ಅಪ್ಸರ ಸ್ತ್ರೀಯವರಿಗೆ ಹೇಳಿ ಹೊರಟು ಹೋದರು. ಆ ಶೋಭನಾಂಗಿಯರು ಈ ವ್ರತವನ್ನು ಮಾಡಿ ಶ್ರೀ ಹರಿಯನ್ನು ಒಲಿಸಿಕೊಂಡರು.

*ವರಾಹ ಪುರಾಣದಲ್ಲಿ ಐವತ್ತೊಂದನೇ ಅಧ್ಯಾಯ ಮುಗಿದುದು*

—o—

## ಶುಭವ್ರತ

ಅಧ್ಯಾಯ - ೫೨

ರಾಜನ್, ಶ್ರೀ ಹರಿಯು ಪ್ರಸನ್ನನಾಗುವ ವ್ರತಗಳಲ್ಲಿ ಪರಮ ಶ್ರೇಷ್ಠವಾದ ವ್ರತವನ್ನು ಕೇಳು. ಮಾರ್ಗಶಿರ ಮಾಸದ ಶುಕ್ಲಪಕ್ಷದ ದಶಮಿಯದಿನ ಸ್ನಾನ ಮಾಡಿ, ಮಧ್ಯಾಹ್ನದಲ್ಲಿ ವಿಷ್ಣುವನ್ನು ಪೂಜಿಸಬೇಕು. ಅಂದು ಮಧ್ಯಾಹ್ನ ಮಾತ್ರ ಊಟ ಮಾಡಬೇಕು. ಭೋಜನಾನಂತರ ದ್ವಾದಶೀ ವ್ರತವನ್ನು ಮಾಡುತ್ತೇನೆಂದು ಸಂಕಲ್ಪ ಮಾಡಬೇಕು. ಏಕಾದಶಿಯದಿನ ಬ್ರಾಹ್ಮಣರಿಗೆ ಭತ್ತ ಗೋಧಿಗಳನ್ನು ಕೊಡಬೇಕು. ಅಂದು ಉಪೋಷಣ ಮಾಡಿ, ದಾನ ಹೋಮಾರ್ಚನೆಗಳನ್ನು ಆಚರಿಸಿ, ಯಾವಾಗಲೂ ಹರಿನಾಮ ಜಪಿಸುತ್ತಿರಬೇಕು. ದ್ವಾದಶಿಯದಿನ ಈ ವ್ರತವನ್ನು ಪರಿಸಮಾಪ್ತಿ ಗೊಳಿಸಬೇಕು. ಮಾರ್ಗಶಿರ ಮಾಸದಿಂದ ಆರಂಭಿಸಿ ನಾಲ್ಕು ಮಾಸಗಳವರೆಗೆ ಪ್ರತಿ ದ್ವಾದಶಿಯಲ್ಲಿಯೂ ಹೀಗೆ ವ್ರತವನ್ನಾಚರಿಸಬೇಕು. ಚೈತ್ರಮಾಸದಿಂದ ಆರಂಭಿಸಿ ನಾಲ್ಕು ತಿಂಗಳು ಹಾಗೆಯೇ ಪರಿಶುದ್ಧನಾಗಿ, ಉಪವಾಸಾದಿಗಳನ್ನು ಮಾಡಿ, ದ್ವಿಜಶ್ರೇಷ್ಠರಿಗೆ ಪಾಯಸ ಪಾತ್ರೆಯನ್ನು ದಾನ ಮಾಡಬೇಕು. ಅದೇ ರೀತಿ ಶ್ರಾವಣದಿಂದ ಮೂರು ತಿಂಗಳು ಭತ್ತವನ್ನು ದಾನಮಾಡಬೇಕು.

ಕಾರ್ತಿಕ ಮಾಸವು ಪ್ರಾರಂಭವಾಗುವವರೆಗೆ ಮೂರು ತಿಂಗಳು ಹಿಂದಿನಂತೆ ಕಳೆದು, ಕಾರ್ತಿಕ ಶುದ್ಧ ದಶಮಿ ದಿವಸ ಪರಿಶುದ್ಧವಾದ ಭಕ್ತಿಯಿಂದ ಹರಿಯನ್ನು ಆ ತಿಂಗಳ ಹೆಸರಿನಿಂದ ಪೂಜಿಸಬೇಕು. ಹಿಂದಿನಂತೆ ಸಂಕಲ್ಪಮಾಡಿ, ಭಕ್ತಿಯಿಂದ ಏಕಾದಶಿಯದಿನ ತನ್ನ ಶಕ್ತಿಗನುಸಾರವಾಗಿ ಬಂಗಾರದಿಂದ ಪಾತಾಳ ಕುಲಪರ್ವತಗಳಿಂದೊಡಗೂಡಿರುವಂತೆ ಭೂದೇವಿಯ ಪ್ರತಿಮೆಯನ್ನು ಮಾಡಿಸಬೇಕು. ಎರಡು ಬಿಳಿಯ ವಸ್ತ್ರಗಳಿಂದಲಂಕರಿಸಿ ಸಕಲ ಬೀಜಗಳೊಡನೆ ಹರಿಯ ಸಮ್ಮುಖದಲ್ಲಿ ನ್ಯಾಸ ವಿಧಿಯಿಂದ ಸ್ಥಾಪಿಸಿ, ಪ್ರಿಯದತ್ತೆ ಯೆಂದು ಪಂಚರತ್ನಗಳಿಂದ ಪೂಜಿಸಿ, ರಾತ್ರಿ ಅಲ್ಲಿಯೇ ಜಾಗರಣೆಯನ್ನು ಮಾಡಬೇಕು. ದ್ವಾದಶಿಯದಿನ ಪ್ರಾತಃಕಾಲದಲ್ಲಿ ಇಪ್ಪತ್ನಾಲ್ಕು ಬ್ರಾಹ್ಮಣ ಶ್ರೇಷ್ಠರನ್ನು ಕರೆದು ಪ್ರತಿಯೊಬ್ಬರಿಗೂ ದಕ್ಷಿಣೆ ಸಹಿತವಾಗಿ ಒಂದು ಹಸುವನ್ನು ದಾನ ಮಾಡಬೇಕು. ಒಬ್ಬೊಬ್ಬರಿಗೂ ಒಂದೊಂದು ಜೊತೆ ಪಂಚೆಯನ್ನೂ, ಚಿನ್ನದ ಉಂಗುರವನ್ನೂ ಕಂಕಣಗಳನ್ನೂ, ಕಡಗಗಳನ್ನೂ ದಾನಮಾಡಬೇಕು.

ವ್ರತಿಯು ರಾಜನಾಗಿದ್ದರೆ ಪ್ರತಿ ಬ್ರಾಹ್ಮಣನಿಗೆ ಒಂದೊಂದು ಗ್ರಾಮವನ್ನೇ ದಾನ ಮಾಡಬೇಕು. ಅವನಿಗೆ ಜೀವನೋಪಾಯಕ್ಕೆ ಬೇಕಾದುದನ್ನು ಕೊಡಬೇಕು. ಶಕ್ತ್ಯಾನುಸಾರವಾಗಿ

ಚಿನ್ನದಿಂದ ಭೂದೇವಿಯನ್ನು ಮಾಡಿಸಿ ಎರಡು ಗೋವುಗಳನ್ನೂ ಜತೆಗೆ ಉಡುಗೆಗಳನ್ನೂ ಕೊಡಬೇಕು. ಹೀಗೆ ಒಂದು ಸಾರೆ ಮಾಡಿದರೆ ವಿಷ್ಣುವು ತೃಪ್ತನಾಗುವನು. ಶಕ್ತಿಯಿಲ್ಲದವನು ಭೂದೇವಿಯ ಪ್ರತಿಮೆಯನ್ನು ಬೆಳ್ಳಿಯಿಂದಲಾದರೂ ಮಾಡಿಸಿ ದ್ವಾದಶೀದಿನ ಬ್ರಾಹ್ಮಣನಿಗೆ ಅರ್ಪಿಸಬೇಕು. ''ಆ ಮುಕುಂದನು ಇದರಿಂದ ನನ್ನ ಮೇಲೆ ಪ್ರಸನ್ನನಾಗಲಿ'' ಎಂದು ದ್ವಾದಶೀ ದಿನ ಬ್ರಾಹ್ಮಣ ಭೋಜನ ಮಾಡಿಸಿ ಕೊಡೆಯನ್ನೂ, ಪಾದರಕ್ಷೆಯನ್ನೂ ದಾನ ಕೊಡಬೇಕು. ಹೀಗೆ ದಾನವನ್ನೂ, ಸುಗ್ರಾಸ ಊಟವನ್ನೂ ಒಂದು ಸಲ ಮಾಡಿಸುವದರಿಂದ ಬರುವ ಪುಣ್ಯವನ್ನು ಊಹಿಸಲೂ ಅಸಾಧ್ಯ. ರಾಜನ್, ಈ ವ್ರತದಿಂದ ಯಾರಿಗೆ ಮಂಗಲವಾಯಿತೆಂಬುದನ್ನು ಕೇಳು. ಕೃತಯುಗದಲ್ಲಿ ಬ್ರಹ್ಮವಾದಿಯಾದ ದೃಡವ್ರತನೆಂಬ ರಾಜನು ಪುತ್ರಾಪೇಕ್ಷೆಯಿಂದ ಬ್ರಹ್ಮನನ್ನು ಪ್ರಶ್ನಿಸಲು ಆ ವಾಣೀಪತಿಯು ಅವನಿಗೆ ಈ ವ್ರತವನ್ನು ಉಪದೇಶಿಸಿದನು. ಆ ರಾಜನು ಈ ವ್ರತವನ್ನು ಭಕ್ತಿ ಪೂರ್ವವಾಗಿ ಆಚರಿಸಿದನು. ಅದರಿಂದ ವ್ರತಾಂತ್ಯದಲ್ಲಿ ವಿಶ್ವಾತ್ಮನು ಪ್ರತ್ಯಕ್ಷನಾಗಿ ''ಎಲೈ ರಾಜನೇ, ನಿನಗಿಷ್ಟವಾದ ವರವನ್ನು ಕೇಳು'' ಎಂದು ಹೇಳಿದನು.

**ರಾಜ:-** ದೇವೇಶ, ನನಗೆ ವೇದ ಮಂತ್ರಗಳನ್ನು ಬಲ್ಲವನೂ, ಧರ್ಮ ಕಾರ್ಯಾಸಕ್ತನೂ, ಕೀರ್ತಿವಂತನೂ, ಸದ್ಗುಣಿಯೂ, ಶೂರನೂ ಆದ ಸುಪುತ್ರನನ್ನು ಕರುಣಿಸು, ಹಾಗೂ ಮುನಿಗಳ ದುಃಖರಹಿತವಾದ ಸ್ಥಾನವನ್ನು ನನಗೆ ಕರುಣಿಸು, ಅವನ ಬಿನ್ನಹಕ್ಕೆ ''ತಥಾಸ್ತು'' ಎಂದು ಹೇಳಿ ಶ್ರೀಹರಿಯು ಅಂತರ್ಧಾನನಾದನು. ಆ ದೊರೆಗೆ ವತ್ಸಶ್ರೀ ಎಂಬ ಮಗನು ಜನಿಸಿದನು. ಅವನು ವೇದ ವೇದಾಂಗ ಪಾರಂಗತನೂ, ಧರ್ಮಕಾರ್ಯರತನೂ ಆಗಿದ್ದನು. ಅವನ ಕೀರ್ತಿಯೂ ಭೂಮಂಡದಲ್ಲೆಲ್ಲ ಪಸರಿಸಿತು. ದೃಢವ್ರತರಾಜನು ವಿಷ್ಣುವಿನ ಕರುಣೆಯಿಂದ ಸಮರ್ಥನಾದ ಆ ಮಗುವನ್ನು ಪಡೆದು, ಸಕಲ ಸುಖದುಃಖಗಳನ್ನು ಸಹಿಸಿ, ತ್ಯಾಗಿಯಾಗಿ ತಪಸ್ಸಿಗಾಗಿ ಅರಮನೆ ಬಿಟ್ಟು ಸುಂದರವಾದ ಹಿಮವತ್ಪರ್ವತದಲ್ಲಿ ಜಿತೇಂದ್ರಿಯನೂ ಪರಿಶುದ್ದನೂ ಆಗಿ ಶ್ರೀಮನ್ನಾರಾಯಣನನ್ನು ಸ್ತುತಿಸುತ್ತಿದ್ದನು.

ಕ್ಷರಾಕ್ಷರಂ ಕ್ಷೀರಸಮುದ್ರ ಶಾಯಿನಂ
ಪೃಥ್ವೀಧರಂ ಮೂರ್ತಿಮತಾಂ ಪರಂ ಪದಂ ।
ಅತೀಂದ್ರಿಯಂ ವಿಶ್ವಭುಜಾಂ ಪುರಸ್ಕೃತಂ
ಮೀನಾಕೃತಿಂ ಸ್ತೌಮಿ ಜನಾರ್ದನ ಪ್ರಭುಂ ॥

ತಥಾಪಿ ಕೂರ್ಮತ್ವಮೃಗತ್ವ ಮುಚ್ಚೈಃ
ತ್ವಯಾ ಕೃತಂ ರೂಪಮನೇಕರೂಪ ।
ಸರ್ವಜ್ಞಭಾವಾದಸಕೃಚ್ಚ ಜನ್ಮ
ಸಂಕೀರ್ತ್ಯತೇ ತೇಽಚ್ಯುತ ನೈತದಸ್ತಿ॥

ನೃಸಿಂಹ ವಾಮನ ನಮೋ ಜಮದಗ್ನಿರಾಮ
ದಶಾಸ್ಯ ಗೋತ್ರಾಂತಕ ವಾಸುದೇವ ।

ನಮೋಽಸ್ತು ತೇ ಬುದ್ಧ ಕಲ್ಕಿನ್ ವರೇಶ
ಶಂಭೋ ನಮಸ್ತೇ ವಿಬುಧಾರಿನಾಶನ ।
ನಮೋಽಸ್ತು ನಾರಾಯಣ ಪದ್ಮನಾಭ
ನಮೋ ನಮಸ್ತೇ ಪುರುಷೋತ್ತಮಾಯ ।
ನಮಃ ಸಮಸ್ತಾಮರ ಸಂಘ ಪೂಜ್ಯ
ನಮೋಽಸ್ತು ತೇ ಸರ್ವವಿದಾಂ ಪ್ರಧಾನ ॥

''ಈ ನಶ್ವರವಾದ ಪ್ರಪಂಚದಲ್ಲಿ ಏಕಮಾತ್ರ ಶಾಶ್ವತ ಸ್ವರೂಪನಾದ, ಕ್ಷೀರ ಸಮುದ್ರದಲ್ಲಿ ಶಯನ ಮಾಡಿದ, 'ಸಮಸ್ತ ಜಗದಾಧಾರನಾದ' ಪ್ರಾಕೃತ ಶರೀರ ರಹಿತನಾದ ಜನಾರ್ದನನನ್ನು ಸ್ತೋತ್ರ ಮಾಡುತ್ತೇನೆ. ಭಗವನ್, ನೀನು ಮತ್ಸ್ಯ-ಕೂರ್ಮ ನೃಸಿಂಹ ಅನೇಕ ಅವತಾರಗಳನ್ನು ಮಾಡಿದ್ದರೂ ಸರ್ವಜ್ಞನೂ, ನಾಶರಹಿತನೂ ಆದ ನಿನಗೆ ಯಾವ ಜನ್ಮ ಕೃತ ಲೇಪವೂ ಇಲ್ಲ. ಇಂಥ ನೃಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ ಮುಂತಾದ ಅನೇಕ ಅವತಾರಗಳನ್ನು ಮಾಡಿ ದೈತ್ಯರನ್ನು ಧ್ವಂಸ ಮಾಡಿದ ನಿನಗೆ ನಮ್ಮ ನಮಸ್ಕಾರವಿರಲಿ. ನಾರಾಯಣ, ಪದ್ಮನಾಭ ಪುರುಷೋತ್ತಮ ಮುಂತಾದ ಅನ್ವರ್ಥಕನಾಮಗಳುಳ್ಳ ಸರ್ವದೇವತಾ ಪೂಜ್ಯನಾದ ಭಗವನ್, ನಿನಗೆ ನನ್ನ ನಮಸ್ಕಾರ. ಕಮಲದಂತೆ ಕಣ್ಣುಳ್ಳ ವ್ಯಕ್ತಾವ್ಯಕ್ತ ಸ್ವರೂಪಿಯಾದ ಶ್ರೀಹರಿಯೇ ನಿನ್ನನ್ನು ವಂದಿಸುವೆ. ನಾನು ನಿನ್ನನ್ನೇ ಮೊರೆ ಹೊಕ್ಕಿದ್ದೇನೆ. ಈ ಸಂಸಾರದಿಂದ ನನ್ನನ್ನು ಉದ್ಧಾರಮಾಡು.'' ದೃಢವ್ರತ ಮಹಾರಾಜನು ದೊಡ್ಡದಾದ ಒಂದು ಮಾವಿನ ಮರದ ಅಡಿಯಲ್ಲಿ ಕುಳಿತು ಈ ರೀತಿಯಾಗಿ ಸ್ತೋತ್ರಮಾಡಲು ಶ್ರೀಹರಿಯು ಪರಮ ಸಂತುಷ್ಟನಾದನು. ಪ್ರಸನ್ನನಾದ ಆ ಪರಮಾತ್ಮನು ಓರ್ವ ಕುಳ್ಳ ವ್ಯಕ್ತಿಯ ರೂಪದಿಂದ ಅಲ್ಲಿಗೆ ಬಂದನು. ಅವನು ಬಂದ ಕೂಡಲೇ ಬಾನುದ್ದವಾಗಿ ಬೆಳೆದ ಆ ಹೆಮ್ಮರವೂ ಕೂಡ ತೀರ ಕುಳ್ಳಾಯಿತು. ಅದನ್ನು ನೋಡಿ ಮಹಾರಾಜನಿಗೆ ಚಿಂತೆಯಾಯಿತು. ''ಈ ವಾಮನ ವ್ಯಕ್ತಿಯು ಬಂದ ಕೂಡಲೇ ಗಗನ ಚುಂಬಿಯಾದ ಈ ಗಿಡವು ಕೂಡ ಗಿಡ್ಡ ಗಿಡವಾಗಿ ಬಿಟ್ಟಿತು. ಇವನು ಪ್ರಾಯಃ ಹಿಂದೆ ವಾಮನಾವತಾರ ಮಾಡಿದ ಶ್ರೀ ಹರಿಯೇ ಇರಬಹುದು'' ಎಂದು ಮಹಾರಾಜನು ವಿಚಾರಿಸಿ ಆ ವಟು ಬ್ರಾಹ್ಮಣನಿಗೆ ನಮಸ್ಕಾರ ಮಾಡಿದನು ಮತ್ತು ಬಿನ್ನವಿಸಿದನು.

''ಭಗವನ್, ನೀನೇ ಈ ಪರಪುರುಷೋತ್ತಮ, ನನ್ನನ್ನು ಅನುಗ್ರಹಿಸುವುದಕ್ಕಾಗಿಯೇ ನೀನು ಇಲ್ಲಿಗೆ ದಯಮಾಡಿಸಿದ್ದೀಯಾ, ಈಗ ನನಗೆ ನಿನ್ನ ನಿಜರೂಪವನ್ನು ತೋರಿಸು.'' ರಾಜನ ಈ ಬೇಡಿಕೆಯನ್ನು ಮನ್ನಿಸಿ ಭಗವಂತನು ಅವನಿಗೆ ತನ್ನ ಶಂಖ, ಚಕ್ರ, ಗದಾಧಾರಿಯಾದ ಭವ್ಯ ದಿವ್ಯ ಸ್ವರೂಪವನ್ನು ತೋರಿಸಿದನು. ಮತ್ತು 'ನಿನ್ನ ಮನಸ್ಸಿನಲ್ಲಿದ್ದ ಬೇಕಾದ ವರವನ್ನು ಬೇಡು' ಎಂದು ಹೇಳಿದನು. ಆಗ ದೃಢವ್ರತ ಮಹಾರಾಜನು ಕೈ ಮುಗಿದು ಮೋಕ್ಷವನ್ನು ಕೊಡಬೇಕೆಂದು ಪ್ರಾರ್ಥಿಸಿಕೊಂಡನು.

ದೃಢವ್ರತನ ಈ ಸದಪೇಕ್ಷೆಗೆ ಶ್ರೀ ಹರಿಯು 'ತಥಾಸ್ತು' ಎಂದು ಹೇಳಿದನು. ಹಾಗೂ ''ನಾನು ಬಂದ ಕೂಡಲೇ ವಿನಯದಿಂದ ಈ ಮಾವಿನ ಮರವೂ ಕೂಡ ಬಾಗಿ ನಿಂತಿದ್ದರಿಂದ ಈ ತೀರ್ಥವು ಕುಬ್ಜಕಾಮ್ರ ತೀರ್ಥವೆಂದು ಹೆಸರಾಗುವುದು. ಇಲ್ಲಿ

ದೇಹತ್ಯಾಗ ಮಾಡಿದ ಯೋಗಿಗಳು ಮೋಕ್ಷವನ್ನು ಹೊಂದುತ್ತಾರೆ. ಉಳಿದವರು ಸ್ವರ್ಗಾದಿ ಸದ್ಗತಿಯನ್ನು ಹೊಂದಿ ನೂರಾರು ವಿಮಾನಗಳಲ್ಲಿ ಆನಂದದಿಂದ ಸಂಚರಿಸುವವರಾಗಲಿ.'' ಹೀಗೆ ಹೇಳಿ ಶ್ರೀ ಹರಿಯು ದೊರೆಯ ದೇಹವನ್ನು ತನ್ನ ಕೈಯಲ್ಲಿನ ಶಂಖದಿಂದ ಮುಟ್ಟಿದನು. ಅದರಿಂದ ಆ ಮಹಾರಾಜನು ಕೂಡಲೇ ಪುರುಷಾರ್ಥವನ್ನು ಹೊಂದಿದನು. ಆದುದರಿಂದ ಭದ್ರಾಶ್ವರಾಜನೇ, ನೀನಾದರೂ ಆ ವಿಷ್ಣುವನ್ನು ಶರಣು ಹೊಂದು. ಅದರಿಂದ ನೀನಾದರೂ ಸದ್ಗತಿ ಹೊಂದುವಿ.

*ವರಾಹ ಪುರಾಣದಲ್ಲಿ ಐವತ್ತೆರಡನೇ ಅಧ್ಯಾಯ ಮುಗಿದುದು*



## ಅಗ್ನಿ ವ್ರತ

**ಅಧ್ಯಾಯ - ೫೩**

**ಅಗಸ್ತ್ಯ :-** ಮಾರ್ಗಶೀರ್ಷ ಶುಕ್ಲ ಪಕ್ಷದಲ್ಲಿ ಪ್ರತಿಪದ ತಿಥಿಯಂದು ರಾತ್ರಿ ಅಗ್ನ್ಯಂತರ್ಗತನಾದ ಶ್ರೀ ನಾರಾಯಣನನ್ನು ಪೂಜಿಸಬೇಕು.

''ವೈಶ್ವಾನರಾಯನಮಃ'' ಎಂದು ವಿಷ್ಣುವಿನ ಪಾದಗಳನ್ನು ನಮಸ್ಕರಿಸಬೇಕು. ''ಅಗ್ನಯೇ ನಮಃ'' ಎಂದು ಅವನ ಉದರವನ್ನು ವಂದಿಸಬೇಕು. ''ಹವಿರ್ಭುಜಾಯ ನಮಃ'' ಎಂದು ಹೃದಯವನ್ನು ಭಜಿಸಬೇಕು. ''ದ್ರವಿಣೋದಾಯ ನಮಃ'' ಎಂದು ತೋಳುಗಳನ್ನು ಅರ್ಚಿಸಬೇಕು. ''ಸಂವರ್ತಾಯ ನಮಃ'' ಎಂದು ತಲೆಯನ್ನು ಮುಟ್ಟಬೇಕು. ''ಜ್ವಲನಾಯ ನಮಃ'' ಎಂದು ಸರ್ವಾಂಗವನ್ನು ಪೂಜಿಸಬೇಕು. ಹೀಗೆ ಶ್ರೀ ಹರಿಯನ್ನು ವಿದ್ಯುಕ್ತವಾಗಿ ಪೂಜಿಸಬೇಕು. ಆನಂತರ ಆ ದೇವರ ಎದುರೇ ಅಗ್ನಿ ಕುಂಡವನ್ನು ಮಾಡಿಸಿ ಮೇಲೆ ಹೇಳಿದ ''ವೈಶ್ವಾನರಾಯ ನಮಃ'' ಎಂದು ಮುಂತಾದ ಮಂತ್ರಗಳಿಂದ ಹೋಮ ಮಾಡಬೇಕು. ಆ ಬಳಿಕ ಅಲಸಂದೆಯಿಂದ ಒಡಗೂಡಿದ ಅನ್ನವನ್ನು ತುಪ್ಪ ಹಾಕಿ ಊಟ ಮಾಡಬೇಕು. ಹೀಗೆ ನಾಲ್ಕು ತಿಂಗಳುಗಳ ವರೆಗೆ ಪ್ರತಿಯೊಂದು ಪಾಡ್ಯತಿಥಿಯಂದು ಅರ್ಥಾತ್ ಶುಕ್ಲಪಕ್ಷ, ಕೃಷ್ಣಪಕ್ಷ ಎರಡೂ ಪ್ರತಿಪತ್‌ಗಳಲ್ಲಿ ಪೂಜೆ ಹೋಮಗಳನ್ನು ಮಾಡಬೇಕು. ಹೀಗೆ ಚೈತ್ರಮಾಸದಿಂದ ಆರಂಭಿಸಿ ನಾಲ್ಕು ತಿಂಗಳ ಕಾಲ ವ್ರತವನ್ನು ಮಾಡಿ ಘೃತ ಪಾಯಸವನ್ನು ಭಕ್ಷಿಸಬೇಕು. ಶ್ರಾವಣ ಮಾಸದಿಂದ ಪ್ರಾರಂಭ ಮಾಡಿ ನಾಲ್ಕು ತಿಂಗಳು ಈ ವ್ರತಕಾಲದಲ್ಲಿ ಬರೀ ಗಂಜಿಯನ್ನು ಸೇವಿಸಬೇಕು. ಅನಂತರ ಚಿನ್ನದ ಒಂದು ಅಗ್ನಿ ಪ್ರತಿಮೆಯನ್ನು ಮಾಡಿಸಿ ಅದನ್ನು ಕೆಂಪು ಬಣ್ಣದ ವಸ್ತ್ರ-ಹೂ-ಗಂಧ ಕುಂಕುಮಗಳಿಂದ ಅಲಂಕರಿಸಬೇಕು. ಅದನ್ನು ಈ ದೇವನ ಪೂಜೆಯಿಂದ ನಾನು ಧನ್ಯನಾದೆನು. ಎಂದು ಹೇಳಿಕೊಂಡು ಯೋಗ್ಯನಾದ ಬ್ರಾಹ್ಮಣನಿಗೆ ಅದನ್ನು ದಾನ ಕೊಡಬೇಕು. ಇದರಿಂದ ಮಾನವನು ಧನ್ಯನಾಗುವನು. ಈ ವ್ರತವನ್ನು ಮಾಡಿ ಕಳೆದ ಕಲ್ಪದಲ್ಲಿ ಶೂದ್ರನಾಗಿದ್ದ ಕುಬೇರನು ಈಗ ಧನ್ಯನಾಗಿದ್ದಾನೆ.

*ವರಾಹ ಪುರಾಣದಲ್ಲಿ ಐವತ್ಮೂರನೇ ಅಧ್ಯಾಯ ಮುಗಿದುದು.*



**ಅಗಸ್ತ್ಯ** :- ಚಂದ್ರನಿಗೆ ಕಾಂತಿ ತಂದು ಕೊಟ್ಟ ಕಾಂತಿ ವ್ರತ ಎಂಬುದಿದೆ. ಅದನ್ನು ಹೇಳುತ್ತೇನೆ ಕೇಳು. ಕಾರ್ತಿಕ ಶುಕ್ಲ ಬಿದಿಗೆಯ ದಿನ ರಾತ್ರಿ ಬಲರಾಮ ಹಾಗೂ ಶ್ರೀ ಕೃಷ್ಣನನ್ನು ಪೂಜಿಸುತ್ತ ಈ ವ್ರತವನ್ನಾಚರಿಸಬೇಕು. 'ಬಲದೇವಾಯ ನಮಃ' ಎಂದು ಪಾದಗಳನ್ನೂ 'ಕೇಶವಾಯ ನಮಃ' ಎಂದು ಶಿರಸ್ಸನ್ನೂ ಅರ್ಚಿಸಬೇಕು. ಅನಂತರ "ನಮೋಽಸ್ತ್ವಮೃತ ರೂಪಾಯ ಸರ್ವೇವಿಧಿವರಾಯ ಚ । ಯಜ್ಞಲೋಕಾಧಿಪತಿಯೇ ಸೋಮಾಯ ಪರಮಾತ್ಮನೇ ॥ ಎಂಬ ಮಂತ್ರದಿಂದ ಬಿದಿಗೆ ಚಂದ್ರನಿಗೆ ಅರ್ಘ್ಯವನ್ನು ಕೊಡಬೇಕು. ಅಂದು ರಾತ್ರಿ ಅನ್ನ, ತುಪ್ಪವನ್ನು ಭೋಜನ ಮಾಡಬೇಕು. ಫಾಲ್ಗುಣವೇ ಮೊದಲಾದ ನಾಲ್ಕು ತಿಂಗಳಲ್ಲಿ ವ್ರತಮಾಡಿ ಪಾಯಸವನ್ನು ಭಕ್ಷಿಸಬೇಕು. ಕಾರ್ತಿಕ ಮಾಸದಲ್ಲಿ ಅಕ್ಕಿಯಿಂದ ಹೋಮ ಮಾಡಬೇಕು. ಚಾತುರ್ಮಾಸ್ಯದಲ್ಲಿ ತಿಲಹೋಮವನ್ನು ಮಾಡಬೇಕು. ವರುಷ ಮುಗಿದ ಬಳಿಕ ಚಿನ್ನದ ಚಂದ್ರನನ್ನು ಮಾಡಿಸಿ ಬೆಳ್ಳಗಿನ ಹೂವು ಬಟ್ಟೆಗಳಿಂದಲಂಕರಿಸಿ ಯೋಗ್ಯ ಬ್ರಾಹ್ಮಣರನ್ನು ಕರಿಸಿ, ಪೂಜಿಸಿ ಅದನ್ನು ದಾನ ಮಾಡಬೇಕು. ಹೀಗೆ ಆ ಸಂವತ್ಸರವು ಪೂರ್ಣವಾದ ಬಳಿಕ ಒಂದು ಬೆಳ್ಳಿಯ ಚಂದ್ರನನ್ನು ಮಾಡಿಸಿ

**ಕಾಂತಿಮಾನಪಿ ಲೋಕೇಽಸ್ಮಿನ್ ಸರ್ವಜ್ಞಃ ಪ್ರಿಯದರ್ಶನಃ ।**
**ತ್ವತ್ಪ್ರಸಾದಾತ್ಸೋಮರೂಪಿನ್ನಾರಾಯಣ ನಮೋಽಸ್ತುತೇ ॥**

ಎಂಬ ಮಂತ್ರವನ್ನುಚ್ಚರಿಸಿ ಆ ಬೆಳ್ಳಿಯ ಚಂದ್ರನ ಪ್ರತಿಮೆಯನ್ನು ಸದ್ಬ್ರಾಹ್ಮಣರಿಗೆ ದಾನ ಕೊಡಬೇಕು. ಇದರಿಂದ ವ್ರತ ಮಾಡಿದವನು ಒಳ್ಳೆಯ ಕಾಂತಿಮಂತನಾಗುವನು. ಪೂರ್ವಕಾಲದಲ್ಲಿ ಅತ್ರಿಮುನಿಯ ಪುತ್ರನಾದ ಚಂದ್ರನು ಆ ವ್ರತವನ್ನು ಮಾಡಿದ್ದರಿಂದ ಪರಮಾತ್ಮನು ಸಂತುಷ್ಟನಾದನು. ಆ ಶ್ರೀ ಹರಿಯು ಚಂದ್ರನಿಗೆ ತಗಲಿದ ಕ್ಷಯವನ್ನು ಕಳೆದು ಅವನಿಗೆ ಅಮೃತ ಕಲೆಗಳನ್ನು ದಯಪಾಲಿಸಿದನು. ಚಂದ್ರನು ರಾತ್ರಿಯಲ್ಲಿ ಆ ಕಲೆಗಳನ್ನೂ, ದ್ವಿಜರಾಜತ್ವವನ್ನೂ ತಪಸ್ಸಿನಿಂದ ಪಡೆದನು. ರಾಜನ್, ಈ ಶುಕ್ಲ ದ್ವಿತೀಯ ದಿನದಂದು ಅಶ್ವಿನೀ ದೇವತೆಗಳನ್ನೂ ಸ್ತೋತ್ರಮಾಡಬೇಕು. ಅವರು ಶೇಷ ವಿಷ್ಣು ಎಂದು ಕರೆಯಿಸಿಕೊಳ್ಳಲ್ಪಡುತ್ತಾರೆ.

*ವರಾಹ ಪುರಾಣದಲ್ಲಿ ಐವತ್ನಾಲ್ಕನೇ ಅಧ್ಯಾಯ ಮುಗಿದುದು*

—o—

## ಸೌಭಾಗ್ಯ ವ್ರತ

ಅಧ್ಯಾಯ - ೫೫

**ಅಗಸ್ತ್ಯ :-** ಮಹಾರಾಜನೇ, ಸ್ತ್ರೀಪುರುಷರಿಬ್ಬರಿಗೂ ಸೊಬಗನ್ನುಂಟುಮಾಡುವ ಸೌಭಾಗ್ಯ ವ್ರತವನ್ನು ಹೇಳುತ್ತೇನೆ ಕೇಳು. ವ್ರತಮಾಡುವವನು ಫಾಲ್ಗುಣ ಶುದ್ಧ ತದಿಗೆಯ ದಿನ ಲಕ್ಷ್ಮೀ ನಾರಾಯಣರನ್ನಾಗಲಿ, ಪಾರ್ವತೀ ಪರಮೇಶ್ವರನ್ನಾಗಲೀ ಪೂಜಿಸಬೇಕು. ''ಗಂಭೀರಾಯ ನಮಃ'', ''ಸುಭಗಾಯ ನಮಃ'', ''ದೇವದೇವಾಯ ನಮಃ'' ''ವಾಚಸ್ಪತಯೇ ನಮಃ'' ''ರುದ್ರಾಯ ನಮಃ'' ಎಂಬ ಮಂತ್ರಗಳಿಂದ ಪೂಜಿಸಿ ತುಪ್ಪ, ಜೇನು ತುಪ್ಪಗಳಿಂದ ತಿಲಹೋಮವನ್ನು ಮಾಡಬೇಕು. ಉಪ್ಪು, ಕಾರ, ಎಣ್ಣೆ, ತುಪ್ಪಗಳನ್ನು ವರ್ಜ್ಯಮಾಡಿ ಗೋದಿಯ ಪದಾರ್ಥಗಳನ್ನು ಮಾತ್ರ ತಿನ್ನಬೇಕು. ಅದು ಕೂಡ ಪತ್ರ ಅಥವಾ ಪಾತ್ರದಲ್ಲಲ್ಲ ನೆಲದ ಮೇಲೆಯೇ ಊಟಮಾಡಬೇಕು. ಇದೇ ರೀತಿ ಕೃಷ್ಣಪಕ್ಷ ತದಿಗೆಯಲ್ಲಿ ಕೊನೆಗೆ ಚಿನ್ನದ ಹರಿಹರ ಪ್ರತಿಮೆಗಳನ್ನು ವಿದ್ವಾಂಸರಿಗೆ ದಾನ ಮಾಡಬೇಕು. ಅನ್ನಕ್ಕೆ ಗತಿಯಿಲ್ಲದವನು ಸದಾಚಾರಿಯಾದ ವೇದಾಧ್ಯಯನ ಮಾಡಿದ ಬ್ರಾಹ್ಮಣನಿಗೆ ತುಪ್ಪ, ಜೇನುತುಪ್ಪ, ಎಳ್ಳೆಣ್ಣೆ, ಬೆಲ್ಲ, ಉಪ್ಪು, ಆಕಳ ಹಾಲು, ತುಂಬಿದ ಆರು ಪಾತ್ರೆಗಳನ್ನು ದಾನ ಮಾಡಬೇಕು. ಇದರಿಂದ ಸ್ತ್ರೀ ಪುರುಷರಿಗೆ ಏಳು ಜನ್ಮ ಸೌಭಾಗ್ಯ ಪ್ರಾಪ್ತಿಯುಂಟು.

*- ವರಾಹ ಪುರಾಣದಲ್ಲಿ ಐವತ್ತೈದನೇ ಅಧ್ಯಾಯ ಮುಗಿದುದು.*

—o—

## ನಿರ್ವಿಘ್ನ ವ್ರತ

ಅಧ್ಯಾಯ - ೫೬

**ಅಗಸ್ತ್ಯ :-** ರಾಜನ್, ವಿಘ್ನ ಪರಿಹಾರವಾಗಲಿಕ್ಕೆ ಫಾಲ್ಗುಣ ಚತುರ್ಥೀ ದಿನ ಅವಿಘ್ನ ವ್ರತವನ್ನು ಮಾಡಬೇಕು. ಈ ವ್ರತಕ್ಕೆ ರಾತ್ರಿ ಊಟ, ಎಳ್ಳಿನ ಪದಾರ್ಥಗಳದೇ ಭೋಜನ. ಅದರಿಂದಲೇ ಹೋಮ ಅದರದೇ ದಾನ. ಹೀಗೆ ನಾಲ್ಕುತಿಂಗಳ ವ್ರತ ಮಾಡಿ ಐದನೇ ತಿಂಗಳಲ್ಲಿ ಬಂಗಾರದ ಗಣಪತಿಯ ಪ್ರತಿಮೆಯನ್ನು ಮಾಡಿಸಿ ದಾನಕೊಡಬೇಕು. ಅದರ ಜೊತೆಗೆ ಎಳ್ಳು ಪಾಯಸ ತುಂಬಿದ ಪಂಚ ಪಾತ್ರಗಳನ್ನೂ ಕೂಡ ದಾನ ಮಾಡಬೇಕು. ಹಿಂದೆ ಸಗರ ಚಕ್ರವರ್ತಿಯು ತನ್ನ ಅಶ್ವಮೇಧಯಾಗಕ್ಕೆ ವಿಘ್ನ ಉಂಟಾದಾಗ ಈ ವ್ರತವನ್ನಾಚರಿಸಿ ಯಜ್ಞವನ್ನು ಪೂರ್ತಿಗೊಳಿಸಿದನು. ಇದರಂತೆ ತ್ರಿಪುರ ನಾಶಮಾಡುವಾಗ ಶಿವನು, ಸಮುದ್ರ ಪಾನ ಮಾಡುವಾಗ ನಾನು, ಅದರಂತೆ ಅನೇಕ ರಾಜರ್ಷಿಗಳು ಈ ವ್ರತದ ಪ್ರಭಾವದಿಂದ ತಮ್ಮ ಕಾರ್ಯಗಳನ್ನು ನಿರ್ವಿಘ್ನವಾಗಿ ನೆರವೇರಿಸಿದನು. ವಿಘ್ನ ನಾಶವಾಗಬೇಕಾದರೆ ಶುಕ್ಲ ಪಕ್ಷ ಚತುರ್ಥಿಯ ದಿನ,

**ಶೂರಾಯ ಧೀರಾಯ ಗಜಾನನಾಯ**
**ಲಂಬೋದರಾಯ ಏಕ ದಂಷ್ಟ್ರಾಯ ನಮಃ।**

ಎಂದು ಪೂಜೆ ಮಾಡಿ ಹೋಮ ಮಾಡಬೇಕು. ಇದರಿಂದ ಯಾವ ಕಾರ್ಯಗಳಲ್ಲೂ ವಿಘ್ನಗಳು ಬರುವುದಿಲ್ಲ.

*ವರಾಹ ಪುರಾಣದಲ್ಲಿ ಐವತ್ತಾರನೇ ಅಧ್ಯಾಯ ಮುಗಿದುದು.*

—o—

## ಶಾಂತಿ ವ್ರತ ಅಧ್ಯಾಯ - ೫೭

**ಅಗಸ್ತ್ಯ :-** ಗೃಹಸ್ಥರಿಗೆ ನಿರಂತರ ಶಾಂತಿಯನ್ನುಂಟುಮಾಡುವ ಒಂದು ವ್ರತವನ್ನು ಹೇಳುತ್ತೇನೆ ಕೇಳು. ಈ ವ್ರತವನ್ನು ಕಾರ್ತೀಕ ಶುದ್ಧ ಪಂಚಮಿಯಿಂದ ಒಂದು ವರ್ಷದವರೆಗೆ ಮಾಡಬೇಕು. ಬಿಸಿ ಮಾಡದ ಆಹಾರವನ್ನು ತಿನ್ನಬೇಕು. ರಾತ್ರಿ ಆದಿಶೇಷನ ಮೇಲೆ ಪವಡಿಸಿದ ಅನಂತ ಪದ್ಮನಾಭನನ್ನು ಪೂಜೆ ಮಾಡಬೇಕು.

'ಅನಂತಾಯ ನಮಃ', 'ವಾಸುಕಿನೇ ನಮಃ' 'ತಕ್ಷಕಾಯ ನಮಃ' 'ಕರ್ಕೋಟಕಾಯ ನಮಃ', 'ಪದ್ಮಾಯ ನಮಃ', 'ಮಹಾಪದ್ಮಾಯ ನಮಃ', 'ಶಿಖಾಪಾಲಾಯ ನಮಃ' 'ಕುಟಿಲಾಯ ನಮಃ' ಎಂದು ಮುಂತಾಗಿ ಮಂತ್ರಗಳನ್ನು ಹೇಳಿ ಶೇಷಶಾಯಿಯಾದ ದೇವರ ಪಾದ, ನಡು, ಹೊಟ್ಟೆ, ಎದೆ, ಕೊರಳು, ತೋಳು, ಮುಖ ಹಾಗೂ ಶಿರಸ್ಸುಗಳನ್ನು ಪೂಜಿಸಬೇಕು. ಮತ್ತು ಶ್ರೀಹರಿಗೆ ಎಳ್ಳುಕೂಡಿಸಿದ ಹಾಲುಗಳಿಂದ ಕ್ಷೀರಾಭಿಷೇಕ ಮಾಡಬೇಕು. ಹಾಗೂ ಹಾಲು ಮತ್ತು ಎಳ್ಳುಗಳಿಂದ ಹೋಮ ಮಾಡಬೇಕು. ಕೊನೆಗೆ ಬಂಗಾರದ ಹಾವನ್ನು ಮಾಡಿ ದಾನ ಕೊಡಬೇಕು. ಈ ವ್ರತವನ್ನು ಮಾಡುವದರಿಂದ ಶಾಂತಿಯು ದೊರೆಯುವುದು. ಹಾವುಗಳ ಭೀತಿಯು ತೊಲಗುವುದು.

*ವರಾಹ ಪುರಾಣದಲ್ಲಿ ಐವತ್ತೇಳನೇ ಅಧ್ಯಾಯ ಮುಗಿದುದು*

—o—

## ಇಷ್ಟ ಸಿದ್ಧಿ ವ್ರತ ಅಧ್ಯಾಯ - ೫೮

**ಅಗಸ್ತ್ಯ :-** ಬಯಸಿದ ಸರ್ವಾರ್ಥಗಳೂ ಸಿದ್ಧಿಸುವ ಕಾಮವ್ರತವನ್ನು ಹೇಳುತ್ತೇನೆ ಕೇಳು.

ಪುಷ್ಯಮಾಸದ ಶುಕ್ಲಪಂಚಮಿಯ ದಿನ ಊಟ ಮಾಡಿ, ಷಷ್ಠಿ ಉಪವಾಸ ಮಾಡಿ ಸಪ್ತಮಿದಿನ ಪಾರಣೆಮಾಡಬೇಕು. ಸ್ಕಂದನಲ್ಲಿ ಅಂತರ್ಯಾಮಿಯಾಗಿರುವ ಶ್ರೀ ವಿಷ್ಣುವನ್ನು ಷಣ್ಮುಖ, ಕಾರ್ತಿಕೇಯ, ಕುಮಾರ ಮುಂತಾದ ಹೆಸರುಗಳಿಂದ ಪೂಜಿಸಿ ಕೊನೆಗೆ ಸ್ಕಂದನ ಬಂಗಾರ ಮೂರ್ತಿಯನ್ನು ಮಾಡಿ ಬ್ರಾಹ್ಮಣರಿಗೆ ದಾನ ಕೊಡಬೇಕು. ಈ ಎಲ್ಲ ಹೆಸರುಗಳಿಂದ ಅಂತರ್ಯಾಮಿಯಾದ ಶ್ರೀ ಹರಿಯನ್ನೇ ಪೂಜಿಸಬೇಕು.

**ಷಡ್‌ವಕ್ತ್ರಃ ಕಾರ್ತಿಕೇಯಶ್ಚ**
**ಸೇನಾನೀಃ ಕೃತ್ತಿಕಾಸುತಃ।**
**ಕುಮಾರಃ ಸ್ಕಂದ ಇತ್ಯೇವಂ**
**ಪೂಜ್ಯೋ ವಿಷ್ಣುಃ ಸ್ವನಾಮಭಿಃ॥**

ಈ ವ್ರತವನ್ನು ನಳರಾಜನೇ ಮುಂತಾದ ಅನೇಕ ರಾಜರು ಮಾಡಿ ತಮ್ಮ ಕಳೆದುಹೋದ ರಾಜ್ಯಗಳನ್ನು ಮರಳಿ ಪಡೆದಿದ್ದಾರೆ.

*ವರಾಹ ಪುರಾಣದಲ್ಲಿ ಐವತ್ತೆಂಟನೇ ಅಧ್ಯಾಯ ಮುಗಿದುದು*

—o—

**ಅಗಸ್ತ್ಯ** :- ಪಾಪಗಳನ್ನು ಕಳೆಯುವ ಆರೋಗ್ಯವ್ರತವನ್ನಾಲಿಸು. ವ್ರತ ಮಾಡುವವನು ಸಪ್ತಮಿಯದಿನ ಸೂರ್ಯನನ್ನು ಉಪೋಷಣೆಯಿಂದ ಪೂಜಿಸಿ ಅಷ್ಟಮಿಯ ದಿನ ಪಾರಣೆ ಮಾಡಬೇಕು. ಈ ಕ್ರಮದಂತೆ ಒಂದು ವರ್ಷದವರೆಗೆ ಸೂರ್ಯನನ್ನು ಅರ್ಚಿಸುವವನಿಗೆ ಇಹದಲ್ಲಿ ಆರೋಗ್ಯವೂ ಐಶ್ವರ್ಯವೂ ಪರತ್ರ ಪುಣ್ಯವೂ ಪ್ರಾಪ್ತವಾಗುವುದು. ರಾಜನೇ, ಪೂರ್ವಕಾಲದಲ್ಲಿ ಭೂಮಂಡಲದ ಸಾರ್ವಭೌಮನಾದ ಅನರಣ್ಯ ಮಹಾರಾಜನು ದೇವತೆಗಳು ಸ್ನಾನಮಾಡುವ ಮಾನಸ ಸರೋವಕ್ಕೆ ಹೋಗಿದ್ದನು. ಆ ಸರೋವರದ ನಟ್ಟನಡುವೆ ನೀರಿನಲ್ಲಿ ಬೆಳ್ಳಗಿನ ಕಮಲವು ತೇಲಾಡುತ್ತ ಲಿದ್ದಿತು. ಈ ತೇಲಾಡುವ ತಾವರೆಯ ಹೂವಿನಲ್ಲಿ ಹೆಬ್ಬೆರಳಿನಾಕಾರದ ಓರ್ವ ಪುರುಷನು ಕುಳಿತಿದ್ದನು. ಅವನು ಉಟ್ಟದ್ದು ಕೆಂಪು ಬಟ್ಟೆ. ಮುಖದಲ್ಲಿ ತೀಕ್ಷ್ಣ ಕಾಂತಿ.

ಅದನ್ನು ನೋಡಿ ಅನರಣ್ಯ ಮಹಾರಾಜನ ಬಾಯಲ್ಲಿ ನೀರುಬಿಟ್ಟಿತು. ಅವನು ಸಾರಥಿಯನ್ನು ಕರೆದು ''ಈ ತೇಲುವ ತಾವರೆಯನ್ನು ತಂದುಕೊಡು. ಅದನ್ನು ನಾನು ತಲೆಯಲ್ಲಿ ಮುಡಿದು ಮಾನ್ಯತೆ ಪಡೆಯುವೆನು. ತಡಮಾಡಬೇಡ'' ಎಂದು ಹೇಳಿದನು. ಅರಸನ ಈ ಅಪ್ಪಣೆಯಂತೆ ಸಾರಥಿಯು ಕಮಲದ ಬಳಿಗೆ ಹೋಗಿ ಅದನ್ನು ಕಿತ್ತಿ ತರಬೇಕೆಂದು ಕೀಳಲು ಕೈ ಹಾಕಿದನು. ಆ ಹೂವನ್ನು ಅವನು ಮುಟ್ಟುವದೊಂದೇ ತಡ, ಭಯಂಕರವಾದ ಓಂಕಾರ ಶಬ್ದವು ಆ ಹೂವಿನಿಂದ ಹುಟ್ಟಿ ಹೊರಟಿತು. ಅದರಿಂದ ಬೆದರಿ ಬೆಚ್ಚಿ ನೀರಿನಲ್ಲಿ ಬಿದ್ದ ಅವನ ಸಾರಥಿಯು ಅರೆ ನಿಮಿಷದಲ್ಲಿ ಸತ್ತು ಹೋದನು. ಮಹಾರಾಜನಿಗಾದರೂ ಆ ಹುಂಕಾರ ಶಬ್ದದಿಂದ ಮೈಯಲ್ಲಿಯ ಶಕ್ತಿ ಸಾಮರ್ಥ್ಯಗಳೆಲ್ಲವೂ ಉಡುಗಿ ಹೋದವು. ಮುಖವು ಕಳೆಗೆಟ್ಟಿತು. ಮೈ ಬಣ್ಣಗೆಟ್ಟಿತು. ಕುಷ್ಠರೋಗವು ಒಮ್ಮೆಲೆ ದೇಹದಲ್ಲಿ ಕಾಣಿಸಿಕೊಂಡಿತು. ಅದನ್ನು ನೋಡಿ ಮಹಾರಾಜನಿಗೆ ಬಹಳ ದುಃಖವಾಯಿತು. ಆಕಸ್ಮಿಕವಾಗಿ ಇದು ಹೀಗೇಕಾಯಿತೆಂದು ಅವನು ಯೋಚಿಸತೊಡಗಿದನು. ಅಷ್ಟರಲ್ಲಿ ಮಹರ್ಷಿ ವಶಿಷ್ಠರು ದಯಮಾಡಿಸಿದರು. ಮಹಾರಾಜನು ವಸಿಷ್ಠರಿಗೆ ನಮಸ್ಕರಿಸಿ ತನ್ನ ದೇಹಕೆಟ್ಟ ಕಾರಣವನ್ನು ಕೇಳಿದನು. ಅದಕ್ಕೆ ವಶಿಷ್ಠರು ಯೋಚಿಸಿ ತಿಳಿಸಿದರು.

''ರಾಜನ್, ಇದು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಮಹಾಕಮಲ. ಇದಕ್ಕೆ ಬ್ರಹ್ಮೋದ್ಭವ ಎಂದು ಹೆಸರು. ಇದರ ದರ್ಶನವಾದರೆ ಸರ್ವ ದೇವತೆಗಳ ದರ್ಶನವೂ ಆದಂತೆ. ಈ ಬ್ರಹ್ಮೋದ್ಭವ ಕಮಲವು ಈ ಮಾನಸ ಸರೋವರದಲ್ಲಿ ಆರು ತಿಂಗಳು ಗೋಚರವಾಗುತ್ತದೆ. ಇದನ್ನು ನೋಡಿದ ಕೂಡಲೇ ನೀರಿನಲ್ಲಿ ಪ್ರವೇಶ ಮಾಡಿದರೆ ಪಾಪಗಳೆಲ್ಲವೂ ಪರಿಹಾರವಾಗುತ್ತವೆ. ಅವನಿಗೆ ಮುಕ್ತಿ ಕಟ್ಟಿಟ್ಟ ಬುತ್ತಿ. ನಿನ್ನ ಸಾರಥಿಯು ಇದನ್ನು ನೋಡಿ ನೀರಿನಲ್ಲಿ ಮುಳುಗಿದನು. ಆದರೆ ದುರ್ಬುದ್ಧಿಯುಳ್ಳ ನೀನು ಮಾತ್ರ ಇಲ್ಲಿಗೆ ಬಂದು ಅದನ್ನು ಮುರಿದುಕೊಂಡು ಹೋಗಬೇಕೆಂದು ಬಯಸಿದೆ. ಆದರಿಂದ ನಿನಗೆ ಕುಷ್ಠರೋಗವು ತಗಲಿತು. ನಿನ್ನ ದೇಹವೆಲ್ಲ ಅಂದಗೆಟ್ಟಿತು.

ದೊರೆಯೇ, ಈ ಬಿಳಿದಾವರೆಯಲ್ಲಿ ಕುಳಿತವನು ಸಾಕ್ಷಾತ್ ಸೂರ್ಯದೇವ. ಅವನೇ ಸಾಕ್ಷಾತ್ ಪರಮಾತ್ಮ. ಈ ಪರಮಾತ್ಮನು ಇದರಲ್ಲಿ ಕುಳಿತಿದ್ದನ್ನು ನೋಡಿದ ಬಳಿಕವೂ ಕೂಡ ನೀನು ಇದನ್ನು ನಿನ್ನ ತಲೆಯ ಮೇಲೆ ಅಲಂಕಾರರೂಪವಾಗಿ ಧರಿಸಬೇಕೆಂದು ಬಯಸಿದೆ. ಅದನ್ನು ತರಲಿಕ್ಕೆ ಸಾರಥಿಯನ್ನು ಕಳಿಸಿದೆ. ಆದರಿಂದ ಅವನು ಸತ್ತು ಹೋದ. ನಿನ್ನ ಮೈಯೆಲ್ಲ ಈ ಬಿಳಿಪು ವ್ಯಾಪಿಸಿತು.

ಅದಕ್ಕಾಗಿಯೇ ರಾಜೇಂದ್ರನೇ, ನೀನು ಆರೋಗ್ಯವ್ರತವನ್ನು ಮಾಡು. ಅದರ ಪ್ರಭಾವದಿಂದ ನಿನ್ನ ಕುಷ್ಠರೋಗವೆಲ್ಲವೂ ನಿವಾರಣೆಯಾಗುವದು.

ವಶಿಷ್ಠರ ಉಪದೇಶದಂತೆ ಅನರಣ್ಯರಾಜನು ಈ ಆರೋಗ್ಯವ್ರತವನ್ನು ಆಚರಿಸಿದನು. ಮತ್ತು ಪ್ರತಿದಿನವೂ ಆ ಮಾನಸ ಸರೋವರಕ್ಕೆ ಬಂದು ಬಿಳಿ ಕಮಲದಲ್ಲಿ ಅಧಿಷ್ಠಿತನಾದ ಸೂರ್ಯನಾರಾಯಣನನ್ನು ಕಂಡು ಅವನನ್ನು ಆರಾಧಿಸಿದನು. ಅದರಿಂದ ಅವನಿಗೆ ಶ್ರೇಯಸ್ಸು, ಪ್ರೇಯಸ್ಸು ಎರಡು ಪ್ರಾಪ್ತವಾದವು.

*ವರಾಹ ಪುರಾಣದಲ್ಲಿ ಐವತ್ತೊಂಬತ್ತನೇ ಅಧ್ಯಾಯ ಮುಗಿದುದು.*



## ಸಂತಾನವ್ರತ

**ಅಧ್ಯಾಯ - ೬೦**

**ಅಗಸ್ತ್ಯ :-** ಸಂತಾನಾಪೇಕ್ಷೆಯುಳ್ಳವರು ಭಾದಪ್ರದ ಶುದ್ಧ ಅಷ್ಟಮಿಯಲ್ಲಿ ಉಪವಾಸ ಮಾಡಿ ಪುತ್ರಪ್ರಾಪ್ತಿ ವ್ರತವನ್ನಾಚರಿಸಬೇಕು. ಸಪ್ತಮಿಯ ದಿನವೇ ವ್ರತಸಂಕಲ್ಪ ಮಾಡಿ ಅಷ್ಟಮಿಯ ದಿನ ಪ್ರಾತಃಕಾಲದಲ್ಲಿ ಸ್ನಾನ ಮಾಡಿ ದೇವಿಕೆಯ ತೊಡೆಯ ಮೇಲೆ ಕುಳಿತಿರುವ ಶ್ರೀ ಕೃಷ್ಣನನ್ನು ಪೂಜಿಸಬೇಕು. ತುಪ್ಪ, ಅಕ್ಕಿಕಾಳು, ಕರಿಯ ಎಳ್ಳು, ಮೊಸರುಗಳಿಂದ ಹೋಮ ಮಾಡಬೇಕು. ಬಳಿಕ ಬ್ರಾಹ್ಮಣರಿಗೆ ಯಥಾಶಕ್ತಿ ಭೋಜನ ಮಾಡಿಸಿ, ದಕ್ಷಿಣೆಯಿತ್ತು ಮೊದಲು ಬಿಲ್ವಪತ್ರಗಳನ್ನು ತಿಂದು ಅನಂತರ ಭೋಜನ ಮಾಡಬೇಕು. ಹೀಗೆ ಪ್ರತಿ ತಿಂಗಳೂ ಶುಕ್ಲ ಪಕ್ಷದಲ್ಲಿಯೂ ಕೃಷ್ಣಪಕ್ಷದಲ್ಲಿಯೂ ಅಷ್ಟಮಿಯ ದಿನ ಉಪವಾಸ ಮಾಡಿ ಈ ವ್ರತವನ್ನು ಆಚರಿಸಿದರೆ ಮಕ್ಕಳಿಲ್ಲದವರಿಗೆ ನಿಶ್ಚಿತವಾಗಿಯೂ ಸಂತತಿಯಾಗುತ್ತದೆ.

ಹಿಂದೆ ಶೂರಸೇನನೆಂಬ ಅರಸನು ಸಂತತಿಯ ಸಲುವಾಗಿ ಹಿಮಾಲಯದಲ್ಲಿ ಉಗ್ರ ತಪಸ್ಸನ್ನು ಮಾಡುತ್ತಿದ್ದನು. ಅವನ ತಪಸ್ಸಿಗೆ ಮೆಚ್ಚಿ ಶ್ರೀ ಹರಿಯು ಈ ಸಂತಾನ ವ್ರತವನ್ನು ಮಾಡಬೇಕೆಂದು ಉಪದೇಶವಿತ್ತನು. ಪರಮಾತ್ಮನ ಉಪದೇಶದಂತೆ ಈ ಶೂರಸೇನನು ಈ ವ್ರತವನ್ನು ಅನುಷ್ಠಾನ ಮಾಡಿ ವಸುದೇವನೆಂಬ ಮಗನನ್ನು ಪಡೆದನು.

*ವರಾಹ ಪರಾಣದಲ್ಲಿ ಅರವತ್ತನೇ ಅಧ್ಯಾಯ ಮುಗಿದುದು.*



ಶೌರ್ಯವ್ರತ

ಅಧ್ಯಾಯ - ೬೧

**ಅಗಸ್ತ್ಯ :-** ಮಹಾ ಪರಾಕ್ರಮ ಮತ್ತು ಪ್ರಚಂಡ ಶಕ್ತಿ ತಮ್ಮಲ್ಲಿ ಬರಬೇಕೆಂದು ಅಪೇಕ್ಷಿಸುವವರು ಆಶ್ವಿಜ ಶುದ್ಧ ಸಪ್ತಮಿ ಸಂಕಲ್ಪ ಮಾಡಿ, ಅಷ್ಟಮಿ ಉಪವಾಸವಿದ್ದು ನವಮಿಯ ದಿನ ದುರ್ಗಾದೇವಿಯನ್ನು ಪೂಜಿಸಬೇಕು. ಹೀಗೆ ಒಂದು ವರುಷದವರೆಗೆ ಮಾಡಿ ವ್ರತದ ಕೊನೆಗೆ ತನ್ನ ಶಕ್ತಿಯಿರುವಷ್ಟು ಕನ್ನೆಯರಿಗೆ ಭೋಜನವನ್ನು ಮಾಡಿಸಿ, ಬಂಗಾರದ ಆಭರಣ, ವಸ್ತ್ರಗಳನ್ನು ಕೊಟ್ಟು ಅಲಂಕರಿಸಿ, ದುರ್ಗಾದೇವಿಯು ಸುಪ್ರೀತಳಾಗಲಿ, ಎಂದು ಬೇಡಿಕೊಳ್ಳಬೇಕು. ಇದರಿಂದ ಹೇಡಿಯು ಶೂರನಾಗುವನು. ರಾಜ್ಯವನ್ನು ಕಳೆದುಕೊಂಡ ದುರ್ಬಲ ದೊರೆಯು ಬಲಿಷ್ಠನಾಗಿ ವೈರಿಗಳನ್ನು ಸಂಹರಿಸಿ ತನ್ನ ರಾಜ್ಯವನ್ನು ತಿರುಗಿ ಪಡೆಯುವನು.

*ವರಾಹ ಪುರಾಣದಲ್ಲಿ ಅರವತ್ತೊಂದನೇ ಅಧ್ಯಾಯ ಮುಗಿದುದು.*



ಸಾರ್ವಭೌಮವ್ರತ

ಅಧ್ಯಾಯ - ೬೨

**ಅಗಸ್ತ್ಯ :-** ಸಾಮಾನ್ಯರಾದರಾಜರುಚಕ್ರವರ್ತಿಯಾಗಬೇಕೆಂದುಅಪೇಕ್ಷೆ ಇದ್ದರೆಈ ವ್ರತವನ್ನು ಮಾಡಬೇಕು. ಕಾರ್ತಿಕಶುದ್ಧ ದಶಮಿಹಗಲುಉಪವಾಸಮಾಡಿ, ಬ್ರಾಹ್ಮಣರನ್ನು ಭೋಜನಮಾಡಿಸಿಸುಂದರವಾದಪುಷ್ಪಗಳಿಂದದಶದಿಕ್ಕುಗಳನ್ನೂ ಪೂಜಿಸಬೇಕು.

**ಸರ್ವಾ ಭವತ್ಯಃ ಸಿದ್ಧ್ಯಂತು ಮಮ ಜನ್ಮನಿ ಜನ್ಮನಿ ||**

ನೀವೆಲ್ಲ ದಿಗಂಗನೆಯರು ನಮ್ಮ ಮೇಲೆ ಜನ್ಮಜನ್ಮಾಂತರಗಳಲ್ಲಿ ಅನುಗ್ರಹವನ್ನು ಮಾಡಿರಿ ಎಂದು ಪ್ರಾರ್ಥಿಸಬೇಕು. ಬಳಿಕ ರಾತ್ರಿ ಮೊಸರನ್ನವನ್ನು ಉಂಡು ಅನಂತರ ಯಥೇಚ್ಛ ಭೋಜನವನ್ನು ಮಾಡಬಹುದು. ಮರುದಿನ ಏಕಾದಶಿ ಉಪೋಷಣ ಮಾಡಿ ದ್ವಾದಶಿ ಶ್ರೀ ಹರಿಯನ್ನು ಪೂಜಿಸಿ ಪಾರಣೆ ಮಾಡಬೇಕು. ಹೀಗೆ ಮಾರ್ಗಶೀರ್ಷ ಮಾಸದ ಶುಕ್ಲ ಪಕ್ಷ, ಕೃಷ್ಣಪಕ್ಷಗಳಲ್ಲಿ ಈ ರೀತಿಯಾಗಿ ವ್ರತವನ್ನು ಮಾಡುವುದರಿಂದ ಕುಬೇರನು ಸಂತುಷ್ಟನಾಗಿ ಸಾರ್ವಭೌಮ ಸಂಪತ್ತು ಪ್ರಾಪ್ತವಾಗುವುದು. ಫಾಲ್ಗುಣ ಶುಕ್ಲ ತ್ರಯೋದಶಿದಿನ ಮಾಡುವ ವ್ರತವು ಧರ್ಮ ವ್ರತವೆನಿಸಿಕೊಳ್ಳುವುದು. ಮಾಘಕೃಷ್ಣ ಚತುರ್ದಶಿಯಿಂದ ಪ್ರಾರಂಭಿಸಿ ಪೂರ್ತಿವರ್ಷ ಪರ್ಯಂತರ ಮಾಡುವ ವ್ರತವು ರೌದ್ರ ವ್ರತವೆನಿಸುವುದು. ಅಮಾವಾಸ್ಯೆಯ ದಿನ ಮಾಡುವ ವ್ರತ ಪಿತೃವ್ರತ ಎನಿಸಿಕೊಳ್ಳುವುದು. ಹೀಗೆ ಹದಿನೈದು ವರ್ಷ ತಿಥಿ ವ್ರತಗಳನ್ನು ಮಾಡುವವನಿಗೆ ನೂರು ರಾಜಸೂಯಯಾಗ ಹಾಗೂ ಸಾವಿರ ಅಶ್ವಮೇಧ ಯಜ್ಞಗಳನ್ನು ಮಾಡಿದಷ್ಟು ಪುಣ್ಯಫಲವು ಬರುವುದು.

*ವರಾಹ ಪುರಾಣದಲ್ಲಿ ಅರವತ್ತೆರಡನೇ ಅಧ್ಯಾಯ ಮುಗಿದುದು.*



**ಭದ್ರಾಶ್ವರಾಜ :-** ಧರ್ಮದ ಮರ್ಮವನ್ನು ಅರಿತ ಅಗಸ್ತ್ಯರೇ, ಈ ಜಗತ್ತಿನಲ್ಲಿ ಆಶ್ಚರ್ಯಕರವಾದುದು ಯಾವದು ನನಗೆ ತಿಳಿಸಿರಿ.

**ಅಗಸ್ತ್ಯ :-** ಜಗತ್ತಿನಲ್ಲಿ ನಿಜವಾದ ಆಶ್ಚರ್ಯವೆಂದರೆ ಸಾಕ್ಷಾತ್ ಜಗದೀಶ್ವರನೇ. ಅವನ ಬಗೆಬಗೆಯ ಕೌತುಕಗಳನ್ನು ನಾನು ಕಂಡಿದ್ದೇನೆ. ಹಿಂದೊಮ್ಮೆ ನಾರದರು ಶ್ವೇತದ್ವೀಪಕ್ಕೆ ಹೋಗಿದ್ದರು. ಅಲ್ಲಿ ಶಂಖ, ಚಕ್ರ, ಪದ್ಮ ಗಳನ್ನು ಧರಿಸಿದ ಅನೇಕ ತೇಜಸ್ವೀ ಪುರುಷರಿದ್ದರು. ಅವರಲ್ಲಿ ನಿಜವಾದ ನಾರಾಯಣನು ಯಾರು ಎನ್ನುವುದೇ ನಾರದರಿಗೆ ತಿಳಿಯಲಿಲ್ಲ. ನಿಜವಾದ ಶ್ರೀವಿಷ್ಣುವನ್ನು ಅರಿತುಕೊಳ್ಳಬೇಕೆಂದು ಅವರು ಬಹುಕಾಲ ತಪಸ್ಸನ್ನು ಮಾಡಿದರು. ಕೊನೆಗೆ ಒಲಿದು ಪ್ರತ್ಯಕ್ಷನಾದ ಶ್ರೀ ವಿಷ್ಣುವು ಬೇಕಾದ ವರವನ್ನು ಕೇಳು ಎಂದು- ಆದೇಶವಿತ್ತಾಗ ನಾರದರು ಕೇಳಿಕೊಂಡರು.

''ಪ್ರಭು, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ ನಿನ್ನನ್ನು ಹೊಂದುವ ದಾರಿಯನ್ನು ತಿಳಿಸು.'' ನಾರದರ ಈ ಕೋರಿಕೆಗೆ ಭಗವಂತನು ಉತ್ತರಿಸಿದ- ''ಬ್ರಹ್ಮನ್, ಪುರುಷ ಸೂಕ್ತದಿಂದ ನನ್ನನ್ನು ಪೂಜಿಸುವುದರಿಂದಲೂ ಮತ್ತು ವೇದ ಸಂಹಿತೆಯ ಅಧ್ಯಯನ ಮಾಡುವುದರಿಂದಲೂ ನನ್ನನ್ನು ಪಡೆಯಬಹುದು.

**ಪೌರುಷಂ ಸೂಕ್ತಮಾಸ್ಥಾಯ ಯೇ ಯಜಂತಿ ದ್ವಿಜಾಶು ಮಾಂ।**
**ತೇ ಮಾಂ ಪ್ರಾಪ್ಸ್ಯಂತಿ ಸತತಂ ಸಂಹಿತಾಧ್ಯಯನೇನ ಚ ॥**
**ಅಲಾಭೇ ವೇದಶಾಸ್ತ್ರಾಣಾಂ**
**ಪಂಚರಾತ್ರೋದಿತೇನ ಹಿ।**
**ಮಾರ್ಗೇಣ ಮಾಂ ಯಜಂತೇ ಯೇ।**
**ತೇ ಮಾಂ ಪ್ರಾಪ್ಸ್ಯಂತಿ ಮಾನವಾಃ ॥**
**ಬ್ರಾಹ್ಮಣ, ಕ್ಷತ್ರಿಯ, ವಿಶಾಂ, ಪಂಚರಾತ್ರಂ, ವಿಧೀಯತೆ।**
**ಶೂದ್ರಾದೀನಾಂ ತು ಮೇ ಕ್ಷೇತ್ರಪದವೀಗಮನಂ ದ್ವಿಜ ॥**
**ಮನ್ನಾಮ ವಿಹಿತಂ ತೇಷಾಮ್**
**ನಾಸ್ಯತ್ಪೂಜಾದಿಕಂ ಚರೇತ್।**
**ಏವಂ ಮಯೋಕ್ತಂ ವಿಪ್ರೇಂದ್ರ**
**ಪುರಾಕಲ್ಪೇ ಪುರಾತನಂ ॥**

**ದೇವ ದೇವ :-** ಬ್ರಾಹ್ಮಣನೇ, ನನ್ನನ್ನು ಪಡೆಯುವ ದಾರಿ ಎರಡು. ಪುರುಷ ಸೂಕ್ತದಿಂದ ವಿಷ್ಣುವನ್ನು ಪೂಜಿಸುವುದು. ಮತ್ತು ವೇದ ಸಂಹಿತೆಯ ಅಧ್ಯಯನವನ್ನು ಮಾಡುವುದು. ವೇದಶಾಸ್ತ್ರಗಳ ರಹಸ್ಯವು ತಿಳಿಯದಿದ್ದರೆ ಪಂಚರಾತ್ರಾಗಮದಲ್ಲಿ ಹೇಳಿದ ಮಾರ್ಗದಲ್ಲಿ ನನ್ನನ್ನು ಅರ್ಥಾತ್ ಪರಮಾತ್ಮನನ್ನು ಪೂಜಿಸುವವರು ನನ್ನನ್ನು ಪಡೆಯುತ್ತಾರೆ ಈ ಎರಡೂ ಮಾರ್ಗಗಳೂ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರಿಗೆ ಉದ್ಧಾರದ ಉಪಾಯಗಳು ಆಗಬಲ್ಲವು. ಶೂದ್ರಾದಿಗಳಿಗೆ ಪುಣ್ಯಕ್ಷೇತ್ರ ಯಾತ್ರೆ ಹಾಗೂ

ತೀರ್ಥಸ್ನಾನ ಮುಂತಾದವುಗಳಿಂದಲೇ ಸಿದ್ಧಿಯೂ ಉಂಟು. ಸಮೃದ್ಧಿಯೂ ಉಂಟು. ಪರಮಾತ್ಮನ ನಾಮಸ್ಮರಣವೆ ಅವರಿಗೆ ದೇವಪೂಜೆ. ಬ್ರಾಹ್ಮಣರಂತೆ ವೇದೋಕ್ತ ಪೂಜೆಯಾಗಲಿ, ವೈಶ್ಯ ಕ್ಷತ್ರಿಯರಂತೆ ಪಂಚಾರಾತ್ರೋಕ್ತ ಪೂಜೆಯಾಗಲಿ ಅವರಿಗೆ ಇಲ್ಲ. ಈ ಪಂಚಾರಾತ್ರಾಗಮವನ್ನು ಹಿಂದಿನ ಕಲ್ಪದಲ್ಲಿ ಹೇಳಿದವನು ನಾನು. ಇದನ್ನು ಕೇಳಿದ ಸಾವಿರ ಜನರಲ್ಲಿ ಒಬ್ಬನು ಗ್ರಹಿಸುತ್ತಾನೆ. ಅವನ ಪೂರ್ವ ಕರ್ಮವು ಸವೆದಿದ್ದರೆ, ಅವನು ನಿಜವಾದ ನನ್ನ ಭಕ್ತನು ಆಗಿದ್ದರೆ ಮಾತ್ರ ಅವನ ಹೃದಯದಲ್ಲಿ ನಾನು ಹೇಳಿದ ಈ ಪಂಚಾರಾತ್ರಾಗಮವೂ ಅದರಲ್ಲಿ ಹೇಳಿದ ಪೂಜಾ ವಿಧಿ ವಿಧಾನಗಳೂ ನೆಲೆಯೂರಿ ನಿಲ್ಲುವವು. ನನ್ನ ಭಕ್ತರಾಗದವರು ರಾಜಸ, ತಾಮಸ ಭಾಗಗಳಿಂದ ಕೂಡಿ ನನ್ನ ಕಡೆಗೆ ಬೆನ್ನು ತಿರುಗುವರು. ಎಲ್ಲ ಯುಗಗಳಲ್ಲಿಯೂ ಸಾತ್ವಿಕರು ಮಾತ್ರ ನನ್ನನ್ನು ಹುಡುಕಿಕೊಂಡು ಬರುವರು. ನಾರದ, ನಿನಗೊಂದು ವರವನ್ನು ಕೊಡುತ್ತೇನೆ. ನಾನೇ ಖುದ್ದಾಗಿ ರಚಿಸಿದ ಪಂಚರಾತ್ರಾಗಮವನ್ನು ನೀನು ಚೆನ್ನಾಗಿ ಅರಿಯುವೆ. ನನ್ನ ಅನುಗ್ರಹವಾದ ಬಳಿಕ ಸಂದೇಹವೇ ಇಲ್ಲ. ಈ ವಿಷಯದಲ್ಲಿ ಪರಬ್ರಹ್ಮಸ್ವರೂಪಿಯಾದ ನನ್ನನ್ನು ಬ್ರಾಹ್ಮಣರು ವೇದಾಧ್ಯಯನದಿಂದಲೂ, ಕ್ಷತ್ರಿಯರು ಯಜ್ಞದಿಂದಲೂ, ವೈಶ್ಯರು ಪಂಚಾರಾತ್ರಾಗಮೋಕ್ತ ಪೂಜಾ ವಿಧಾನದಿಂದಲೂ, ಉಳಿದೆಲ್ಲ ಜಾತಿಯವರು ಭಕ್ತಿಯಿಂದಲೂ ಭಗವಂತನನ್ನು ಪಡೆಯುವರು. ಹೀಗೆ ಭಗವಂತನು ನಾರದರನ್ನು ಕುರಿತು ನುಡಿದು ಅದೃಶ್ಯನಾದನು. ನಾರದರೂ ಕೂಡ ಬೇಗನೇ ಅಲ್ಲಿಂದ ಮಾಯವಾಗಿ ಸ್ವರ್ಗಲೋಕಕ್ಕೆ ತೆರಳಿದರು.

*ವರಾಹ ಪುರಾಣದಲ್ಲಿ ಅರವತ್ತೂರನೇ ಅಧ್ಯಾಯವು ಮುಗಿದುದು.*

—o—

## ಕರಿಯ ಕಾಮಿನಿ, ಬಿಳಿಯ ಭಾಮಿನಿ ಅಧ್ಯಾಯ - ೬೪

**ಭದ್ರಾಶ್ವ :-** ಪೂಜ್ಯರೇ, ಈ ಜಗತ್ತಿನಲ್ಲಿ ಕರಿ ಬಿಳಿ ಬಣ್ಣದ ಇಬ್ಬರು ಹೆಂಗಸರು ಪ್ರಸಿದ್ಧರೆಂದು ಕೇಳಿದ್ದೇನೆ. ಅವರಲ್ಲಿ ಕರಿ ಹೆಣ್ಣು ಯಾರು ? ಬಿಳಿ ಹೆಣ್ಣು ಯಾರು ? ಬ್ರಹ್ಮನ್, ಈ ಪ್ರಪಂಚದಲ್ಲಿ ಎರಡು ದೇಹ, ಆರು ತಲೆ, ಹನ್ನೆರಡು ಬಗೆಗಳುಳ್ಳ ಯಾವ ಪವಿತ್ರ ಪುರುಷನು ಏಳು ರೂಪಿಯಾಗಿದ್ದಾನೆ ? ಬ್ರಾಹ್ಮಣೋತ್ತಮ, ದಾಂಪತ್ಯ ಎಂದರೆ ಏನು ? ಸೂರ್ಯನು ಉದಯಿಸಿ ದಂದಿನಿಂದ ಈ ವರೆಗೆ ಈ ವಿಶ್ವವೆಲ್ಲವು ಹೇಗೆ ಬೆಳೆದು ಬಂದಿತು ?

**ಅಗಸ್ತ್ಯ :-** ರಾಜನೇ, ಈ ಬಿಳಿಯ ಭಾಮಿನಿ, ಕರಿಯ ಕಾಮಿನಿ ಬೇರಾರೂ ಆಗದೇ ಶ್ವೇತ ಕೃಷ್ಣ ವರ್ಣ ವಿಶಿಷ್ಟವಾದ ರಾತ್ರಿಯೇ ಆಗಿದ್ದಾಳೆ. ನೀನು ಕೇಳಿದ ಏಳುರೂಪಗಳುಳ್ಳ ಪುರುಷೋತ್ತಮನೆಂದರೆ ಸಾಕ್ಷಾತ್ ಸಮುದ್ರ ರಾಜನೇ ಸರಿ. ಅವನಿಗೆ ಸಪ್ತ ಸಮುದ್ರ ಎಂದು ಹೆಸರು. ಎರಡು ಮೈ, ಆರು ತಲೆ, ಹನ್ನೆರಡು ಬಗೆಯುಳ್ಳ ಪುರುಷನು ಯಾರು ಎಂದು ನೀನು ಕೇಳಿದಿಯಷ್ಟೇ ! ಇಂಥ ಪುರುಷನೆಂದರೆ ಹನ್ನೆರಡು ತಿಂಗಳುಗಳುಳ್ಳ ಒಂದು ಸಂವತ್ಸರವೇ ಸರಿ. ದಕ್ಷಿಣಾಯಣ, ಉತ್ತರಾಯಣ ಆ ವರ್ಷಪುರುಷನ ಎರಡು ದೇಹಗಳಾಗಿರುತ್ತವೆ. ವಸಂತ, ಗ್ರೀಷ್ಮ ಮೊದಲಾದ ಋತುಗಳು ಅವನ ತಲೆಗಳಾಗಿರುತ್ತವೆ. ಹನ್ನೆರಡು ತಿಂಗಳುಗಳೇ ಅವನ ಬಗೆಗಳು. ಇವನೇ ಸಂವತ್ಸರ ಎಂಬ ಹೆಸರುಳ್ಳ ಕಾಲ ಪುರುಷ. ಈ ಹಗಲು ರಾತ್ರಿಗಳ ನಿತ್ಯ ಸಂಬಂಧಕ್ಕೆ ದಾಂಪತ್ಯ ಎಂದು ಹೆಸರು. ಇಂಥ ಶಾಶ್ವತ ದಾಂಪತ್ಯವನ್ನು ನಿರ್ಮಿಸಿ, ಸೂರ್ಯಚಂದ್ರರಂಥ ಬೆಳಕಿನ ಮರಿಗಳನ್ನು ಹೆತ್ತು, ಜಗದಂಡ ಮಂಡಲವನ್ನೆಲ್ಲ ಬೆಳಗುವ ವಿಷ್ಣುರೂಪಿಯಾದ ಆ ಪರಮಾತ್ಮನ ಸಂಕಲ್ಪದಿಂದಲೇ ಚರಾ-ಚರ ಪ್ರಪಂಚವೆಲ್ಲವೂ ಉತ್ಪನ್ನವಾಯಿತು. ಜಗತ್ಕಾರಣನಾದ ಪರದೇವತೆಯೆ ವಿಷ್ಣು ಎಂದು ತಿಳಿಯಬೇಕು. ವೇದವನ್ನು ತಿಳಿಯದವನು, ವೇದೋಕ್ತ ಕರ್ಮಗಳನ್ನು ಅನುಷ್ಠಾನ ಮಾಡದವನು ಆ ಭಗವಂತನನ್ನು ಅರಿಯಲಾರ. ಈ ವೇದದಲ್ಲಿ ''ಕಾಲಶ್ಚ ನಾರಾಯಣ'' ಎಂದು ಮುಂತಾದ ವಚನಗಳಿಂದ ಆ ವಿಷ್ಣು ಭಗವಂತನ ಕಾಲನಿಯಾಮಕ ಸ್ವರೂಪವನ್ನು ಬಣ್ಣಿಸಿದ್ದಾರೆ.

*ವರಾಹ ಪುರಾಣದಲ್ಲಿ ಅರವತ್ನಾಲ್ಕನೇ ಅಧ್ಯಾಯ ಮುಗಿದುದು.*

—o—

**ಭದ್ರಾಶ್ವ :-** ಮುನಿವರ, ವಿಷ್ಣು ರೂಪಿಯಾದ ಆ ಪರಮಾತ್ಮನು ಎಲ್ಲೆಡೆಗೂ ವ್ಯಾಪಿಸಿ ಎಲ್ಲದಕ್ಕೂ ಆಧಾರನಾಗಿರುವವನಷ್ಟೇ ! ಈ ಭಗವಂತನನ್ನು ಕೃತ ತ್ರೇತಾದಿ ನಾಲ್ಕು ಯುಗಗಳಲ್ಲಿ ಅರಿಯುವ ಬಗೆ ಯಾವುದು ? ಒಂದೊಂದು ಯುಗದಲ್ಲಿ ನಾಲ್ಕು ವರ್ಣದ ಜನರಿಗೆ ವಿಹಿತವಾದ ಆಚಾರಗಳು ಯಾವವು ? ಹಾಗೂ ಬ್ರಾಹ್ಮಣರಿಗೆ ಬೇರೆ ಜಾತಿಯ ಸ್ತ್ರೀಯರ ಸಂಪರ್ಕವು ಉಂಟಾದರೆ ಶುದ್ಧಿಯು ಹೇಗೆ ? ಯಾವುದರಿಂದ ?

**ಅಗಸ್ತ್ಯರು :-** ಕೃತಯುಗದಲ್ಲಿ ಬ್ರಾಹ್ಮಣರು ವೇದೋಕ್ತ ಕರ್ಮಗಳನ್ನು ಆಚರಿಸಬೇಕು. ತ್ರೇತಾಯುಗದಲ್ಲಿ ಯಜ್ಞಗಳನ್ನು ಮಾಡಿ ದೇವತೆಗಳನ್ನು ಮೆಚ್ಚಿಸಬೇಕು. ದ್ವಾಪರ ಯುಗದಲ್ಲಿ ಪಂಚಪಾಂಡವರಲ್ಲಿ ಹಿರಿಯನಾದ ಧರ್ಮರಾಜನು ರಾಜನಾಗಿ ಇರುವವರೆಗೆ ಸತ್ವರಜೋಗುಣಗಳು ಅಧಿಕವಾಗಿ ಇರುತ್ತವೆ. ಅನಂತರ ತಮೋಗುಣದ ಅಭಿವೃದ್ಧಿಯಾಗಿ ಕಲಿಯು ಪ್ರಾರಂಭವಾಗುತ್ತದೆ. ಈ ಕಲಿಯುಗವು ಪ್ರಾರಂಭವಾದ ಬಳಿಕ ಬ್ರಾಹ್ಮಣರು ದಾರಿಬಿಡುವರು. ರಾಜರು ಉಚ್ಛೃಂಖಲರಾಗುವರು. ಇದರಂತೆ ವೈಶ್ಯ ಶೂದ್ರರು ಉನ್ಮಾರ್ಗ ಗಾಮಿ ಗಳಾಗುವರು. ಕೀಳು ಜಾತಿಯ ನೀಚ ಪುರುಷರ ಕೈಯಲ್ಲಿ ರಾಷ್ಟ್ರದ ಅಧಿಕಾರ ಸೂತ್ರಗಳು ಬರುವವು. ಕಲಿಯುಗದ ಜನರಲ್ಲಿ ಸತ್ಯವಿಲ್ಲ. ಮಡಿ-ಮೈಲಿಗೆಯಿಲ್ಲ. ಶುದ್ಧಿಯಿಲ್ಲ, ಸಿದ್ಧಿಯಿಲ್ಲ, ಸಂಪ್ರದಾಯವಿಲ್ಲ. ಜನರೆಲ್ಲರೂ ಧರ್ಮಭ್ರಷ್ಟರಾಗಿ, ಕುಲಜಾತಿಧರ್ಮಗಳನ್ನು ತೊರೆದು ಸ್ವೇಚ್ಛಾಚಾರಿಗಳಾಗಿ ನಾಶವನ್ನು ಹೊಂದುತ್ತಾರೆ.

**ಭದ್ರಾಶ್ವ :-** ಬ್ರಾಹ್ಮಣನಿಗಾಗಲಿ, ಶೂದ್ರನಿಗಾಗಲಿ, ಕ್ಷತ್ರಿಯನಿಗಾಗಲಿ, ಪರಸ್ತ್ರೀ ಸಹವಾಸ ಪಾತಕದಿಂದ ಶುದ್ಧಿಯು ಉಂಟೇ ?

**ಅಗಸ್ತ್ಯ :-** ರಾಜನ್, ಪರಸ್ತ್ರೀಗಮನವು ಎಲ್ಲ ಕಾಲದಲ್ಲಿಯೂ, ಎಲ್ಲ ಜಾತಿಯವರಿಗೂ ಅತ್ಯಂತ ನಿಷಿದ್ಧವಾದದ್ದು. ಯಾವ ಪ್ರಾಯಶ್ಚಿತ್ತದಿಂದಲೂ ಅಗಮ್ಯಾಗಮನದ ಪಾಪವನ್ನು ಪೂರ್ಣವಾಗಿ ಕಳೆದುಕೊಳ್ಳಲಿಕ್ಕಾಗಲಿ ಆ ಭೀಕರ ದೋಷವನ್ನು ತೊಳೆದುಕೊಳ್ಳಲಿಕ್ಕಾಗಲಿ ಸಾಧ್ಯವಿಲ್ಲ. ಎಲ್ಲ ಜಾತಿಯವರಿಗೂ ತನಗಿಂತ ಉತ್ತಮ ಜಾತಿಯವರ ಸಂಸರ್ಗವು ಅತ್ಯಂತ ಘೋರವಾದ ಪಾಪವನ್ನು ತಂದು ಕೊಡುತ್ತದೆ. ಅಧರ್ಮ ವರ್ಣದವರು ಉತ್ತಮ ವರ್ಣದವರೊಡನೆ ಎಂದೂ ಸಂಸರ್ಗವನ್ನು ಮಾಡಬಾರದು. ತಾಯಿ, ತಾಯಿಯ ತಂಗಿ, ಅತ್ತೆ, ಅಣ್ಣನ ಮಡದಿ, ಸೊಸೆ, ಮಗಳು, ಗೆಳೆಯನ ಹೆಂಡತಿ, ಹೆಂಡತಿಯ ಸಹೋದರಿ, ಮೊಮ್ಮಗಳು, ಕಿಂಬಹುನಾ, ತಾನು ವಿಧಿಪೂರ್ವಕವಾಗಿ ಕೈ ಹಿಡಿದ ಮಡದಿಯ ಹೊರತಾಗಿ ಉಳಿದೆಲ್ಲ ಪರನಾರಿಯರೂ ಅಗಮ್ಯೆ ಎನಿಸುವರು.

ಮಡಿವಾಳ, ಅಂಬಿಗ, ಬೇಡ ಮುಂತಾದ ಕೀಳು ಜಾತಿಯ ಕನ್ಯೆಯರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮೊದಲಾದವರಿಗೆ ಅಗಮ್ಯೆ ಎನಿಸುವರು. ಅಗಮ್ಯಾ ಗಮನವು ಸರ್ವಶಾಸ್ತ್ರಗಳಲ್ಲಿಯೂ ನಿಷಿದ್ಧವಾಗಿದೆ.

**ಕದಾಚಿತ್** ಅಜ್ಞಾನ, ಕಾಮಾಂಧ್ಯ, ಪ್ರಲೋಭನ, ಬಲಾತ್ಕಾರ ಮುಂತಾದವುಗಳಿಂದ ಇಂಥ ದುರ್ಘಟನೆಯು ನಡೆದರೆ ಬ್ರಾಹ್ಮಣನು ವಿಶೇಷ ಪ್ರಾಣಾಯಾಮ ಹಾಗೂ ಗಾಯತ್ರಿ ಪುರಶ್ಚರಣಗಳಿಂದ ಶುದ್ಧಿಯನ್ನು ಪಡೆಯಬಹುದು. ಉಳಿದ ಜಾತಿಯವರು ಅತ್ಯಂತ ಭಕ್ತಿಯಿಂದ ವಿಷ್ಣುವನ್ನು ನಿರಂತರ ಸ್ಮರಣೆ ಮಾಡಿ ದಾನಧರ್ಮ, ತೀರ್ಥಸ್ನಾನ, ಪಶ್ಚಾತ್ತಾಪ, ಪುಣ್ಯಕ್ಷೇತ್ರಯಾತ್ರೆ, ಗಂಗಾನದಿಯಲ್ಲಿ ಅವಗಾಹನೆ ಮತ್ತು ಗುರುಹಿರಿಯರ ಸಂತತ ಸೇವೆ ಮುಂತಾದವುಗಳಿಂದ ಕೆಲಮಟ್ಟಿಗೆ ಪಾಪವನ್ನು ಕಳೆದುಕೊಳ್ಳಬಹುದು. ಸರ್ವ ಪಾಪಗಳಿಗೂ ಪರಿಹಾರಕವಾದ ಮುಖ್ಯ ಪ್ರಾಯಶ್ಚಿತ್ತವೆಂದರೆ ಅತ್ಯಂತ ಭಕ್ತಿಯಿಂದ ಹರಿನಾಮಸ್ಮರಣೆಒಂದೇ ಸರಿ.

ವರಾಹ ಪುರಾಣದಲ್ಲಿ ಅರವತ್ತೈದನೇಯ ಅಧ್ಯಾಯ ಮುಗಿದುದು



## ಅಗಸ್ತ್ಯ ಋಷಿಗೆ ಅಬಲೆಯಿಂದ ಸತ್ಕಾರ

**ಅಧ್ಯಾಯ - ೬೬**

**ಭದ್ರಾಶ್ವ :-** ನೀವು ಬಹುವರ್ಷಗಳಿಂದ ಬಾಳಿ ಬದುಕಿ ಚಿರಂಜೀವಿಗಳು ಎನಿಸಿದ್ದೀರಿ. ನಿಮ್ಮ ದೇಹದ ವೃತ್ತಾಂತವನ್ನು ದಯವಿಟ್ಟು ನನಗೆ ತಿಳಿಸಬೇಕು.

**ಅಗಸ್ತ್ಯ :-** ದೊರೆಯೇ, ಅನೇಕ ಕಲ್ಪದಿಂದಿರುವ ವೇದವಿದ್ಯಾ ಪರಿಶೋಧಿತ ವಾದ ಈ ನನ್ನ ದೇಹವು ಬಹು ಆಶ್ಚರ್ಯಕರವಾದುದು. ದೊರೆಯೇ, ನಾನು ಭೂಮಿಯಲ್ಲೆಲ್ಲಾ ಸಂಚರಿಸುತ್ತಾ, ಮೇರು ಪರ್ವತದ ಪಕ್ಕದಲ್ಲಿರುವ ಇಳಾವೃತವೆಂಬ ಮಹಾವರ್ಷ (ಭೂಭಾಗ)ಕ್ಕೆ ಹೋದೆನು. ಅದರಲ್ಲಿ ನಾರು ಬಟ್ಟೆಗಳನ್ನು ಧರಿಸಿ, ಉಪವಾಸದಿಂದ ಕುಂದಿ, ಎಲುಬು ತೊಗಲುಗಳು ಮಾತ್ರಉಳಿದಿರುವ ಒಬ್ಬ ಋಷಿಯನ್ನು ನೋಡಿದೆನು. ರಾಜೋತ್ತಮನೆ, ಅವನನ್ನು ಕಂಡು ನಾನು ಈ ಮುನಿವರ್ಯನು ಯಾರೆಂದು ಯೋಚಿಸುತ್ತಾ ನಿಂತೆನು. ಮತ್ತು ಗೌರವ ನೀಡಿ ಆ ಬ್ರಾಹ್ಮಣೋತ್ತಮನನ್ನು ''ಬ್ರಹ್ಮನೇ, ನಾನು ನಿನ್ನ ಸನ್ನಿಧಿಗೆ ಬಂದಿದ್ದೇನೆ. ನನಗೇ ಏನನ್ನಾದರೂ (ಸ್ವಲ್ಪ) ಕೊಡು'' ಎಂದೆನು. ಆ ಮುನಿಯು ನನಗೆ ''ಬ್ರಾಹ್ಮಣೋತ್ತಮನೆ, ನಿನಗೆ ಸುಖಾಗಮನವಾಗಲಿ ಇಲ್ಲಿಯೇ ಇರು, ನಿನಗೆ ನಾನು ಅತಿಥ್ಯವನ್ನು ಮಾಡಬೇಕು'' ಎಂದು ಹೇಳಿದನು. ಈ ಮಾತನ್ನು ಕೇಳಿ ನಾನು ಆತನ ಪರ್ಣ ಶಾಲೆಯೊಳಗೆ ಹೋಗಿ, ತನ್ನ ತೇಜಸ್ಸಿನಿಂದ ಜ್ವಲಿಸುವಂತೆ ಇರುವ ಈ ಮುನಿಯನ್ನು ನೋಡಿದೆನು. ನಾನು ನೆಲದ ಮೇಲೇ ನಿಂತಿರುವುದನ್ನು ನೋಡಿ ಆ ಬ್ರಾಹ್ಮಣನು ಹುಂ ಕಾರವನ್ನು ಮಾಡಿದನು.

ಆ ಹುಂಕಾರದಿಂದ ಐದು ಜನ ಕನ್ಯೆಯರು ಪಾತಾಳವನ್ನು ಭೇದಿಸಿಕೊಂಡು ಮೇಲೆ ಬಂದರು. ಅವರಲ್ಲಿ ಒಬ್ಬಳು ಸುವರ್ಣದ ಪೀಠವನ್ನು ಹಿಡಿದುಕೊಂಡು ನನಗೆ ಕೊಟ್ಟಳು. ಆಗ ಮತ್ತೊಬ್ಬಳು ಕೈಯಲ್ಲಿದ್ದ ನೀರನ್ನು ನನ್ನ ಕಾಲುಗಳಿಗೆ ಹಾಕಿದಳು. ಇನ್ನೊಬ್ಬಳು ಕಾಲುಗಳನ್ನು ಹಿಡಿದುಕೊಂಡು ತೊಳೆಯಲು ಮೊದಲು ಮಾಡಿದಳು. ಬೇರಿಬ್ಬರು ಬೀಸಣಿಕೆಯನ್ನು ಹಿಡಿದುಕೊಂಡು ನನ್ನ ಪಕ್ಕದಲ್ಲಿ ನಿಂತರು. ಬಳಿಕ ಆ

ಮಹಾತಪಸ್ವಿಯು ಮತ್ತೆ ಹುಂಕರಿಸಿದನು. ಆ ಶಬ್ದವಾದೊಡನೆ ಒಬ್ಬಳು ಯೋಜನ ವಿಸ್ತಾರವುಳ್ಳ ಚಿನ್ನದ ದೋಣಿಯೊಂದನ್ನು ತೆಗೆದುಕೊಂಡು ಬಂದು ಆ ಸರೋವರದಲ್ಲಿ ಬಿಟ್ಟಳು. ಆ ದೋಣಿಯಲ್ಲಿ ಚಿನ್ನದ ಕಲಶಗಳನ್ನು ಹಿಡಿದುಕೊಂಡಿರುವ ನೂರಾರು ಜನ ಶುಭಾಂಗಿಯರಾದ ಕನ್ಯೆಯರು ಬಂದಿದ್ದರು. ದೊರೆಯೇ, ಬಳಿಕ ಆ ಮುನಿಯು ಅವರನ್ನು ನೋಡಿ ನನಗೆ ''ಬ್ರಹ್ಮನೇ, ಸತ್ಪುರುಷೋತ್ತಮನೆ, ಇದೆಲ್ಲವೂ ನಿನಗೆ ಸ್ನಾನಕ್ಕಾಗಿ ಸಿದ್ಧವಾಗಿದೆ. ಈ ದೋಣಿಗೆ ಹೋಗಿ, ನೀನು ಸ್ನಾನ ಮಾಡಬೇಕು'' ಎಂದು ಹೇಳಿದನು. ದೊರೆಯೇ, ಆ ಮೇಲೆ ನಾನು ಅವನ ಮಾತಿನಂತೆ ಆ ದೋಣಿಗೆ ಹೋಗುತ್ತಲೂ ಅದು ಸರೋವರದಲ್ಲಿ ಮುಳುಗಿ ಬಿಟ್ಟಿತು. ದೋಣಿಯೊಳಗೆ ನೀರಿನಲ್ಲಿ ಮುಳುಗಿದ ನಾನು ಒಡನೆಯೇ ಆ ಮುನಿಯನ್ನೂ ದಿವ್ಯವಾದ ವನಿತಾವೃಂದವನ್ನೂ, ನನ್ನನ್ನೂ ಮೇರುಗಿರಿಯ ಮೇಲಿರುವವರನ್ನಾಗಿ ಕಂಡೆನು. ಅಲ್ಲದೆ ಅಲ್ಲಿ ಸಪ್ತ ಸಮುದ್ರಗಳನ್ನೂ, ಸಪ್ತಕಲ ಪರ್ವತಗಳನ್ನೂ, ಸಪ್ತದ್ವೀಪಗಳುಳ್ಳ ಪೃಥ್ವಿಯನ್ನೂ ನೋಡಿದೆನು. ಸುವ್ರತನಾದ ದೊರೆಯೇ, ಈಗಲೂ, ಆ ಉತ್ತಮ ಲೋಕವನ್ನು ಎಂದು ಪಡೆಯುವೆನೋ! ಎಂದು ಚಿಂತೆಯುಳ್ಳವನಾಗಿ ಅದನ್ನೇ ಧ್ಯಾನಿಸುತ್ತಿದ್ದೇನೆ. ರಾಜನೇ, ನನ್ನ ದೇಹದ ವೃತ್ತಾಂತವಾದ ಪರಮಾತ್ಮನ ಈ ಆಶ್ಚರ್ಯವನ್ನು ನಿನಗೆ ಹೇಳಿದೆನು. ಬೇರೆ ಏನನ್ನು ಕೇಳಬಯಸುತ್ತೀಯೆ. !

*ವರಾಹ ಪುರಾಣದಲ್ಲಿ ಅರವತ್ತಾರನೇ ಅಧ್ಯಾಯ ಮುಗಿದುದು.*

—o—

**ಭದ್ರಾಶ್ವ :-** ಪೂಜ್ಯರೇ, ಆ ಉತ್ತಮವಾದ ಲೋಕವನ್ನು ನೋಡಿದ ನೀವು ಅದನ್ನು ಪಡೆಯಲಿಕ್ಕಾಗಿ ಯಾವ ವ್ರತ, ತಪಸ್ಸು, ಅಥವಾ ಧರ್ಮವನ್ನು ಆಚರಿಸಿದಿರಿ ?

**ಅಗಸ್ತ್ಯ :-** ರಾಜನ್, ಶ್ರೀಹರಿಯನ್ನು ಭಕ್ತಿಯಿಂದ ಆರಾಧಿಸದೆ ಯಾವ ಲೋಕವನ್ನೂ ಪಡೆಯಲೂ ಬಯಸಬಾರದು. ಆ ವಿಷ್ಣುವನ್ನು ಭಕ್ತಿಯಿಂದ ಆರಾಧಿಸಿದರೆ ಎಲ್ಲ ಲೋಕಗಳು ಕೈಗೆ ದೊರಕಿದಂತೆಯೇ ಸರಿ. ಆದುದರಿಂದ ನಾನು ಶಾಶ್ವತ ಸ್ವರೂಪಿಯಾದ ಆ ವಿಷ್ಣುವನ್ನು ಒಂದು ನೂರು ವರ್ಷಗಳವರೆಗೆ ಆರಾಧಿಸಿದೆ. ಅವನ ಪ್ರೀತಿಗಾಗಿ ಅನೇಕ ಯಜ್ಞಗಳನ್ನು ಮಾಡಿದೆ. ಯೋಗ್ಯ ಬ್ರಾಹ್ಮಣರಿಗೆ ಕೈ ತುಂಬ ದಕ್ಷಿಣೆಯನ್ನು ನೀಡಿದೆ. ಹೀಗೆ ಬಹುಕಾಲ ಯಜ್ಞಪುರುಷನಾದ ಆ ಜನಾರ್ದನನನ್ನು ದಿವ್ಯವಾದ ಜ್ಞಾನಯಜ್ಞ, ದ್ರವ್ಯಯಜ್ಞ, ತಪೋಯಜ್ಞಗಳಿಂದ ನಾನು ಆರಾಧಿಸುತ್ತಿರುವಾಗ ಆ ನನ್ನ ಯಜ್ಞಗಳಿಗೆ ನಾನು ಕರೆದ ಕೂಡಲೇ ಇಂದ್ರಾದಿ ದೇವತೆಗಳೆಲ್ಲರೂ ಬಂದು ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತುಕೊಳ್ಳುತ್ತಿದ್ದರು.

ಒಂದು ದಿನ ನಾನು ಯಜ್ಞ ಕಾಲದಲ್ಲಿ ಎಲ್ಲ ದೇವತೆಗಳನ್ನು ಆಹ್ವಾನಿಸಿದೆ. ಇಂದ್ರ, ವರುಣ, ವಾಯು ಮುಂತಾದ ದೇವತೆಗಳೆಲ್ಲರೂ ನನ್ನ ಆಮಂತ್ರಣದ ಮೇರೆಗೆ ಬಂದು ತಮ್ಮ ತಮ್ಮ ಸ್ಥಾನಗಳ ಮೇಲೆ ಕುಳಿತರು. ಅಷ್ಟರಲ್ಲಿ ಮೂರು ಕಣ್ಣಿನ ಮಹಾದೇವನು ತನ್ನ ಎತ್ತನ್ನು ಹತ್ತಿಕೊಂಡು ಅಲ್ಲಿಗೆ ಬಂದನು. ರುದ್ರದೇವನಿಗಾಗಿ ಅಲ್ಲಿ ಒಂದು ಸ್ಥಾನವು ಮೊದಲೇ ಕಾದಿರಿಸಲ್ಪಟ್ಟಿದ್ದಿತು. ತಮಗೆ ಕ್ಲಪ್ತವಾದ ಆಸನದ ಮೇಲೆ ಮಹಾರುದ್ರದೇವರು ಆಸೀನರಾದರು. ಹೀಗೆ ಎಲ್ಲ ದೇವತೆಗಳು, ಋಷಿಗಳು, ಹಿರಿಯ ಹಾವುಗಳೂ ಬಂದು ತಮ್ಮ ತಮ್ಮ ನಿರ್ದಿಷ್ಟ ಸ್ಥಾನಗಳಲ್ಲಿ ಉಪವಿಷ್ಟರಾದ ಬಳಿಕ ಬ್ರಹ್ಮದೇವನ ಮೆಚ್ಚಿನ ಮಗನಾದ ಸನತ್‌ಕುಮಾರನು ಅಲ್ಲಿಗೆ ದಯಮಾಡಿಸಿದನು. ಸನತ್‌ಕುಮಾರರ ದೇಹವು ಅಣುಪ್ರಮಾಣದ್ದಾಗಿದ್ದರೂ ಕಾಂತಿಯು ಮಾತ್ರ ಸೂರ್ಯನಿಗೆ ಸಮನಾಗಿದ್ದಿತು. ಅವನು ತ್ರ್ಯಣುಕ ಪರಿಮಾಣದ ವಿಮಾನದಲ್ಲಿ ಕುಳಿತುಕೊಂಡು ಅಲ್ಲಿಗೆ ಬಂದನು. ಅಲ್ಲಿಯ ಯಜ್ಞ ಮಂಟಪದ ಮಹಾಪೀಠದಲ್ಲಿ ಮಂಡಿಸಿದ ಪಾರ್ವತೀ ಪತಿಯನ್ನು ಕಂಡು ತ್ರಿಕಾಲಜ್ಞರಾದ ಸನತ್‌ಕುಮಾರರು ಸಾಷ್ಟಾಂಗ ವಂದನೆಗೈದರು.

ಆಗ ನಾನು ಪರಮಪಾವನವಾದ ಆ ಯಜ್ಞಕ್ಕೆ ದಯಮಾಡಿಸಿದ ಎಲ್ಲ ದೇವೋತ್ತಮರಿಗೂ, ಋಷಿ ಸಮತ್ತರಿಗೂ ವಂದಿಸಿ ಕೈಮುಗಿದು ಕೇಳಿಕೊಂಡೆ. ''ಪೂಜ್ಯರೇ, ತಮ್ಮೆಲ್ಲರಿಗೂ ಪೂಜ್ಯರು ಯಾರು ? ಎಲ್ಲ ದೇವತೆಗಳಲ್ಲಿಯೂ ಶ್ರೇಷ್ಠರು ಯಾರು ?'' ಈ ದೇವ ಸಭೆಯಲ್ಲಿ ನನ್ನ ಈ ಪ್ರಶ್ನೆಯನ್ನು ಕೇಳಿ ಮಹಾದೇವರು ನನ್ನ ಮೇಲೆ ಕೃಪಾದೃಷ್ಟಿಯನ್ನು ಬೀರಿ ಆ ಋಷಿ ದೇವ ಪರಿಷತ್ತಿನಲ್ಲಿ ಇಂತು ನುಡಿದರು. ''ಇಲ್ಲಿ ನೆರೆದ ವಿಖ್ಯಾತರಾದ ಬ್ರಹ್ಮರ್ಷಿಗಳೇ, ದೋಷದೂರರಾದ ದೇವರ್ಷಿಗಳೇ ಮತ್ತು ಮಹಾಬುದ್ಧಿವಂತನಾದ ಅಗಸ್ತ್ಯ ಮುನಿಯೇ,'' ನೀವೆಲ್ಲರೂ ನನ್ನ ಮಾತನ್ನು ಸಾವಧಾನವಾಗಿ ಆಲಿಸಿರಿ -

"ನಾರಾಯಣಃ ಪರೋ ದೇವಃ ಸರ್ವರೂಪೋ ಜನಾರ್ದನಃ"

ಸರ್ವಾಂತರ್ಯಾಮಿಯಾದ ಆ ನಾರಾಯಣನೇ ಎಲ್ಲ ದೇವತೆಗಳಿಗಿಂತ ಶ್ರೇಷ್ಠನಾಗಿದ್ದಾನೆ. ಈ ಜಗತ್ತೆಲ್ಲವೂ ಹುಟ್ಟಿದ್ದು ಅವನಿಂದಲೇ. ಎಲ್ಲರೂ ಯಜ್ಞ ಮಾಡುವುದು ಅವನ ಪ್ರೀತಿಗಾಗಿಯೇ. ಆ ಭಗವಂತನೇ ಮೂರು ಬಗೆಯಾಗಿ ವಿಶ್ವವ್ಯಾಪಾರವನ್ನು ಮಾಡುತ್ತಾನೆ. ಮೊದಲು ತನ್ನ ನಾಭಿಕಮಲದಿಂದ ಸತ್ವಾಧಿಕವಾದ ಬ್ರಹ್ಮದೇವರನ್ನೂ ನಂತರ ರಜಸ್ತಮೋಯುಕ್ತನಾದ ನನ್ನನ್ನೂ ಸೃಷ್ಟಿಸಿದನು. ಶುದ್ಧ ಸತ್ವಾತ್ಮಕನಾದ ಶ್ರೀ ಹರಿಯಿಂದ ರಜಸ್ಸತ್ವ ಪ್ರಧಾನರಾದ ಬ್ರಹ್ಮದೇವರು ರಜಸ್ತಮಃ ಪ್ರಧಾನನಾದ ನಾನು ಜನಿಸಿದ್ದೇನೆ. ಇದರಲ್ಲಿ ಸಂದೇಹವಿಲ್ಲ.

ಸತ್ವ, ರಜಸ್ಸು ಮತ್ತು ತಮಸ್ಸು ಈ ಮೂರರಲ್ಲಿ ಸತ್ವವು ನಾರಾಯಣಾತ್ಮಕವಾಗಿದೆ. ಆದರಿಂದಲೇ ಪ್ರಾಣಿಗಳಿಗೆ ಬಂಧಮೋಚನವಾಗುವುದು. ಸತ್ವಯುಕ್ತವಾದ ರಜೋಧಿಕವಾದ ಈ ಸೃಷ್ಟಿಯನ್ನು ಪೈತಾಮಹೀ ಎಂತಲೂ ಶಾಸ್ತ್ರದಲ್ಲಿ ಕರೆದಿದ್ದಾರೆ. ಶಾಸ್ತ್ರೋಕ್ತ ಎಂದು ಹೇಳಿ ವೇದ ಬಾಹಿರವಾದ ಕಾರ್ಯಗಳನ್ನು ಆಚರಿಸುವುದು ರೌದ್ರ ಕರ್ಮ ಎನಿಸುವುದು. ಅದು ಜನರಿಗೆ ಹಿತಕರವಲ್ಲ. ರಜಸ್ಸಿನ ಸಂಪರ್ಕವಿಲ್ಲದ ಕೇವಲ ತಾಮಸ ಕರ್ಮವು ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ದುರ್ಗತಿಗೆ ಕಾರಣವಾಗಿರುವುದು.

ಕೃತಯುಗದಲ್ಲಿ ಶ್ರೀಮನ್‌ನಾರಾಯಣನು ಸೂಕ್ಷ್ಮವಾದ ಶುದ್ಧ ಸ್ವರೂಪ ದಿಂದ ಆರಾಧಿಸಲ್ಪಡುತ್ತಾನೆ. ತ್ರೇತಾಯುಗದಲ್ಲಿ ಯಾಗಯೋಗಗಳಿಂದಲೂ ದ್ವಾಪರ ಯುಗದಲ್ಲಿ ಪಂಚರಾತ್ರಾದಿ ಆಗಮೋಕ್ತ ವಿಧಿವಿಧಾನಗಳಿಂದಲೂ ಆ ಪರಮಾತ್ಮನ ಪೂಜೆಯು ಭಕ್ತಿಯಿಂದ ಮಾಡಲ್ಪಡುತ್ತದೆ. ಆದರೆ ಕಲಿಯುಗದಲ್ಲಿ ಮಾತ್ರ ತಾಮಸ ಜನರು ಆ ಪರಮಾತ್ಮನನ್ನು ನಾನು ತೋರಿದ ಬಗೆ ಬಗೆಯ ರೀತಿಗಳಿಂದ ಭಕ್ತಿ ಇಲ್ಲದೆ ದ್ವೇಷ ತುಂಬಿ ಮಾಡುತ್ತಾರೆ. ವಾಸ್ತವಿಕವಾಗಿ ವಿಚಾರಿಸಿದರೆ ಆ ಜಗತ್ತಿನಲ್ಲಿ ಪರಮಾತ್ಮನಾದ ಆ ಜನಾರ್ದನನಿಗಿಂತ ಶ್ರೇಷ್ಠನಾದ ದೇವರೇ ಇಲ್ಲ. ಹರಿಗೆ ಮಿಗಿಲಾದ ದೇವರು ಭೂತ ಭವಿಷ್ಯ ವರ್ತಮಾನ ಈ ತ್ರಿಕಾಲದಲ್ಲಿಯೂ ಇರುವುದಿಲ್ಲ.

"ನ ತಸ್ಮಾತ್ ಪರತೋ ದೇವೋ ನ ಭೂತೋ ನ ಭವಿಷ್ಯತಿ"

ಆ ವಿಷ್ಣುವೇ ಬ್ರಹ್ಮ. ಅವನೇ ಮಹೇಶ್ವರ. ಎಲ್ಲ ವೇದಗಳಲ್ಲಿ ಪಂಡಿತರು ಸರ್ವಾಂತ ರ್ಯಾಮಿಯಾದ ಆ ವಿಷ್ಣುವನ್ನೇ ಆರಾಧಿಸಬೇಕೆಂದು ಹೇಳಿದೆ. ಹರಿಹರ ಬ್ರಹ್ಮಾದಿ ತ್ರಿಮೂರ್ತಿಗಳಲ್ಲಿರುವ ವಿಷ್ಣುರೂಪದಲ್ಲಿ ಭೇದವನ್ನು ಕಲ್ಪಿಸಿದರೆ ಮಹಾ ಅನರ್ಥವಾಗುವುದು. ಕೇಶವನನ್ನು ಆರಾಧಿಸಿ ಪೂರ್ವದಲ್ಲಿ ಭೂಲೋಕದ ಜನರೆಲ್ಲರೂ ಭುವರ್ಲೋಕವನ್ನೂ ಪಡೆಯುತ್ತಿದ್ದರು. ಭುವರ್ಲೋಕದಲ್ಲಿ ಆ ಜನಾರ್ದನನನ್ನು ಪೂಜಿಸಿ ಸ್ವರ್ಗಲೋಕವನ್ನು ಹೊಂದುತ್ತಿದ್ದರು. ದೇವಲೋಕದಲ್ಲಿಯೂ ಮತ್ತೆ ಪುನಃ ಶ್ರೀಹರಿಯನ್ನು ಬಗೆ ಬಗೆಯಿಂದ ಸೇವೆಗೈದು ಮೋಕ್ಷವನ್ನು ಜನರು ಪಡೆಯುತ್ತಿದ್ದರು.

ಇದನ್ನು ನೋಡಿ ಅಯೋಗ್ಯರಿಗೂ ಮುಕ್ತಿಯ ಆಶೆಯಾಗಿ ಅವರೂ ಶ್ರೀ ವಿಷ್ಣುವಿನ ಉಪಾಸನೆಯನ್ನು ಮಾಡತೊಡಗಿದರು. ಆಗ ದೇವತೆಗಳು ಅಯೋಗ್ಯರೂ ಕೂಡ ಶ್ರೀ ಹರಿಯ ಸೇವೆಯಿಂದ ಮೋಕ್ಷ ಪಡೆದು ಮುಕ್ತಿ ಮಂದಿರದ ತುಂಬ ದುರ್ಜನರದೇ

ಸಂಮರ್ದವು ಆಗಬಹುದೆಂಬ ಭಯಭ್ರಾಂತಿಗಳಿಗೊಳಗಾಗಿ ಪರಮಾತ್ಮನಿಗೆ ಮೊರೆ ಹೊಕ್ಕರು. ಅವರ ಚಿಂತೆಯನ್ನು ಅರಿತು ಭಗವಂತನು ಇಂತು ನುಡಿದನು.

''ಸುರವರ್ಯರೇ, ಮೊದಲಿನ ಮೂರು ಯುಗಗಳಲ್ಲಿ ಮುಕ್ತಿಗೆ ಬರುವ ಯೋಗ್ಯ ಚೇತನಗಳು ಹೆಚ್ಚಾಗಿದ್ದರೂ ಕಲಿಯುಗದಲ್ಲಿ ಒಮ್ಮೆಲೇ ಕಡಿಮೆಯಾಗಿ ಬಿಡುತ್ತವೆ. ಈ ಕೊನೆಯ ಯುಗದಲ್ಲಿ ನನ್ನನ್ನು ಆಶ್ರಯಿಸಿ ಧ್ಯಾನ ಮಾಡುವವರು ಅತ್ಯಂತ ವಿರಳರಾಗುತ್ತಾರೆ. ನನ್ನ ಮಾಯೆಯಿಂದ ಆವೃತರಾದ ಅವರೆಲ್ಲರೂ ನನ್ನಿಂದ ವಿಮುಖರಾಗಿ ಸ್ವಾರ್ಥಪರರಾಗಿ ಇಂದ್ರಿಯಾರಾಮರಾಗಿ ಬದುಕುತ್ತಾರೆ''. ಹೀಗೆ ಹೇಳಿ ಪರಮಾತ್ಮನು ತನ್ನೆದುರು ನಿಂತಿರುವ ನನಗೆ (ಮಹಾದೇವನಿಗೆ) ಅಪ್ಪಣೆ ಮಾಡಿದನು.

''ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ''

''ರುದ್ರದೇವ, ನೀನು ಮಹಾಶೂರ. ಅಜ್ಞ ಜನರ ಮೋಹನಾರ್ಥನಾಗಿ ಮೋಹಕಶಾಸ್ತ್ರಗಳನ್ನು ರಚಿಸು.'' ನನಗೆ ಈ ರೀತಿಯಾಗಿ ಹೇಳಿ ಶ್ರೀ ಹರಿಯು ಅಲ್ಲಿಂದ ಅದೃಶ್ಯನಾದನು. ನಾನು ಅವನ ಅಜ್ಞೆಯಂತೆ ಅನೇಕ ಮೋಹಕ ಶಾಸ್ತ್ರಗಳನ್ನು ರಚಿಸಿದೆನು. ಅಂದಿನಿಂದ ಆರಂಭ ಮಾಡಿಕೊಂಡು ಈ ಪ್ರಪಂಚದಲ್ಲಿ ಬಹು ಜನರು ನಾನು ರಚಿಸಿದ ಮೋಹಕ ಶಾಸ್ತ್ರಗಳಲ್ಲಿಯೇ ಅಸಕ್ತರಾಗಿರುತ್ತಾರೆ.

ನಿಜವಾದ ಸಂಗತಿಯೆಂದರೆ ವೇದೋಕ್ತವಾದುದೇ ಸರಿಯಾದ ಮಾರ್ಗ ಎಂದು ತಿಳಿದು ಶ್ರೀಮನ್ನಾರಾಯಣ ನೊಬ್ಬನೇ ಸರ್ವೋತ್ತಮವಾದ ಏಕೈಕ ವಸ್ತು ಎಂದು ಉಪಾಸಿಸುವವರು ಮಾತ್ರ ಮುಕ್ತಿಯನ್ನು ಪಡೆಯುತ್ತಾರೆ. ನನ್ನಲ್ಲಿಯೂ ಬ್ರಹ್ಮನಲ್ಲಿಯೂ ವಿಷ್ಣುವಿನ ಹೊರತಾಗಿ ಬೇರೆ ಒಂದು ದೈವೀಶಕ್ತಿಯು ಇದ್ದು ಅದರಿಂದಲೇ ಸೃಷ್ಟಿಸಂಹಾರಾದಿ ಕಾರ್ಯಗಳು ನೆರವೇರುತ್ತವೆ ಎಂದು ತಿಳಿದವರು ನಿಜವಾಗಿಯೂ ಪಾಪಿಗಳು. ಅವರಿಗೆ ನರಕವೇ ಗತಿ. ವೇದ ಮಾರ್ಗದಿಂದ ದೂರಸರಿದ ಪಾಪಿಗಳ ಮೋಹನಾರ್ಥವಾಗಿಯೇ ತರ್ಕ ಸಿದ್ಧಾಂತಾದಿ ಹೆಸರುಗಳಿಂದ ಬೇರೆ ಬೇರೆ ಶಾಸ್ತ್ರಗಳನ್ನು ನಾನು ನಿರ್ಮಿಸಿದ್ದೇನ. ವೇದೋಕ್ತ ಮಾರ್ಗವನ್ನು ಬಿಟ್ಟು ಪಶುಭಾವಕ್ಕೆ ಇಳಿದು ಪಶುಗಳಂತಾದ ಅಜ್ಞ ಜನರು ಪಶುಪತಿಯಾದ ನಾನು ನಿರ್ಮಿಸಿದ ಪಾಶುಪತಾದಿ ಶಾಸ್ತ್ರಗಳೇ ಪ್ರಮಾಣ ಭೂತವಾದ ವೇದವೆಂದು ತಿಳಿಯುತ್ತಾರೆ.

ತಸ್ಮಾದಾರಭ್ಯ ಕಾಲಾತ್ತು ಮತ್ಪ್ರಣೀತೇಷು ಸತ್ತಮ ।
ಶಾಸ್ತ್ರೇಷ್ವಭಿರತೋ ಲೋಕೋ ಬಾಹುಲ್ಯೇನ ಭವೇದತಃ ।
ವೇದಾನು ವರ್ತನಂ ಮಾರ್ಗಂ ದೇವಂ ನಾರಾಯಣಂ ತಥಾ ।
ಏಕೀಭಾವಂ ಚ ಪಶ್ಯಂತೋ ಮುಕ್ತಾಶ್ಚೈವ ಭವಂತಿ ಹಿ ॥
ಯೇ ವೇದ ಮಾರ್ಗ ನಿರ್ಮುಕ್ತಾಸ್ತೇಷಾಂ ಮೋಹಾರ್ಥಮೇವ ಚ
ನಯ - ಸಿದ್ಧಾಂತ - ಸಂಜ್ಞಾಭಿರ್ಮಯಾ ಶಾಸ್ತ್ರಂ ತು ದರ್ಶಿತಂ ॥
ಪಾಶೋಽಯಂ ಪಶುಭಾವಸ್ತು ಸ ಯದಾ ಪತಿತೋ ಭವೇತ್ ।
ತದಾ ಪಾಶುಪತಂ ಶಾಸ್ತ್ರಂ ಜಾಯತೇ ವೇದ ಸಂಜ್ಞಿತಂ ॥

ಹರಿಹರ ಬ್ರಹ್ಮಾದಿ ರೂಪಿಯಾದ ಆ ಪರಮಾತ್ಮನು ವೇದಮೂರ್ತಿ ಎಂದು ಕರೆಯಲ್ಪಡುತ್ತಾನೆ. ವೇದ ಅನುಸಾರಿಯಾಗದ ಶಾಸ್ತ್ರಗಳಿಂದ ಈ ತ್ರಿಮೂರ್ತಿ ರಹಸ್ಯವು ತಿಳಿಯಲು ಸಾಧ್ಯವಿಲ್ಲ. ವೇದವನ್ನು ಚೆನ್ನಾಗಿಬಲ್ಲ ಬ್ರಾಹ್ಮಣರು ಮಾತ್ರ ನನ್ನಲ್ಲಿರುವ ವೇದ ವೇದ್ಯವಾದ ಭಗವತ್ ಸ್ವರೂಪವನ್ನು ತಿಳಿಯುತ್ತಾರೆ.

ಈ ಪ್ರಪಂಚವೆಲ್ಲವೂ ಮೂರರ ಮುರುವಿನಲ್ಲಿ ಬಿಗಿಯಲ್ಪಟ್ಟಿದೆ. ಕೃತ, ತೇತ್ರಾ, ದ್ವಾಪರ ಯುಗಗಳು ಮೂರು. ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ತ್ರಿಮೂರ್ತಿಗಳೂ ಮೂರು. ಸತ್ವ ರಜ, ತಮ ಎಂಬ ಗುಣಗಳು ಮೂರು. ದಕ್ಷಿಣಾ-ಗಾರ್ಹಪತ್ಯ, ಆಹವನೀಯ ಎಂದು ಅಗ್ನಿಗಳೂ ಮೂರು. ಭೂಲೋಕ, ಭುವರ್ಲೋಕ, ಸ್ವರ್ಗಲೋಕ ಎಂದು ಲೋಕಗಳೂ ಮೂರು ಪ್ರಾತಃ, ಮದ್ಯಾಹ್ನ, ಸಾಯಂ ಎಂದು ಕಾಲಗಳೂ ಮೂರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂದು ವರ್ಣಗಳೂ ಮೂರು, ಹೀಗೆ ಈ ಜಗತ್ತೆಲ್ಲವೂ ತ್ರಿಧಾಬದ್ಧವಾಗಿದ್ದು ಇದೆಲ್ಲದಕ್ಕೂ ಆ ಪರಮಾತ್ಮನೇ ನಿಯಾಮಕನಾಗಿದ್ದಾನೆ. ಆದುದರಿಂದ ನಾರಾಯಣನೇ ಪರಾತ್ಪರನೆಂದೂ ಬ್ರಹ್ಮನು ಅವನಿಗಿಂತ ಕಡಿಮೆ, ಅಪರ, ಭಿನ್ನ ಎಂದೂ ಆ ಬ್ರಹ್ಮನಿಗಿಂತ ನಾನು ಕಡಿಮೆಯವನೆಂದೂ ತಿಳಿದವನೇ ನಿಜವಾಗಿ ಜ್ಞಾನಿ. ಸರ್ವರಿಗಿಂತ ಮುಖ್ಯನೂ ಶ್ರೇಷ್ಠನೂ ಸರ್ವಗುಣ ಪರಿಪೂರ್ಣನೂ ಒಬ್ಬನೇ ಇರುತ್ತಾನೆ. ಅವನು ಹೇಯನಲ್ಲವಾದುದರಿಂದ ಅವನಿಗೇ **ಅಹಂ** ಎಂತಲೂ ಹೆಸರು. ಇದಕ್ಕೆ ವಿಪರೀತವಾಗಿ ಮುಖ್ಯನಾದ ನಾರಾಯಣನಿಂದ ನಾನು ಅಭಿನ್ನನಾಗಿದ್ದೇನೆ ಎಂದು ತಿಳಿಯುವದಾಗಲಿ, ಗುಣ ಪರಿಪೂರ್ಣವಾದ ಸರ್ವತಂತ್ರ ಸ್ವತಂತ್ರವಾದ ಮುಖ್ಯವಸ್ತುಗಳು ಈ ಪ್ರಪಂಚದಲ್ಲಿ ಎರಡು ಇರುತ್ತವೆ ಎಂದು ಬಗೆಯುವದಾಗಲೀ ಮೋಹ ಅಥವಾ ಅಜ್ಞಾನವೇ ಸರಿ.

**ಯ ಏವಂ ವೇತ್ತಿ ವಿಪ್ರರ್ಷೇ ಪರಂ ನಾರಾಯಣಂ ತಥಾ**
**ಅಪರಂ ಪದ್ಮಯೋನಿಂ ತು ಬ್ರಹ್ಮಾಣಂ ಚ ಪರಂ ತು ಮಾಂ।**
**ಗುಣತೋ ಮುಖ್ಯತಸ್ತ್ವೇಕ ಏವಾಹಂ ಮೋಹ ಇತ್ಯುಭೇ॥**

*ವರಾಹ ಪುರಾಣದಲ್ಲಿ ಅರವತ್ತೇಳನೇ ಅಧ್ಯಾಯ ಮುಗಿದುದು.*

—o—

**ಅಗಸ್ತ್ಯ :-** ಮಹಾದೇವರು ದೇವತೆಗಳನ್ನೂ ಮತ್ತು ಋಷಿಗಳನ್ನೂ ಕುರಿತು ಈ ರೀತಿಯಾಗಿ ನುಡಿದ ಬಳಿಕ ನಾನು ಆ ಮಹಾರುದ್ರ ದೇವರಿಗೆ ನಮಸ್ಕಾರ ಮಾಡಿದೆನು. ನಮಸ್ಕಾರ ಮಾಡಿ ನಾನು ತಲೆಯೆತ್ತಿ ನೋಡುವಷ್ಟರಲ್ಲಿ ಆ ಮಹಾದೇವರ ದೇಹದಲ್ಲಿ ಬ್ರಹ್ಮದೇವರೂ, ಆ ಬ್ರಹ್ಮದೇವರ ಹೃದಯದಲ್ಲಿ ನಾರಾಯಣನೂ ಇದ್ದುದು ಕಾಣಿಸಿತು. ರುದ್ರದೇವರ ಶರೀರಾಂತರ್ಗತನಾದ ಬ್ರಹ್ಮಹೃದಯಸ್ಥನಾದ ನಾರಾಯಣನ ಮಧ್ಯಾಹ್ನ ಸೂರ್ಯನಂತೆ ತೇಜ ಪುಂಜವಾದ ತ್ರ್ಯಣುಕ ಪ್ರಮಾಣದ ಮೂರ್ತಿಯನ್ನು ನೋಡಿ ಎಲ್ಲ ದೇವತೆಗಳೂ ಋಷಿಗಳೂ ಭಕ್ತಿಯಿಂದ ಜಯಘೋಷವನ್ನು ಮಾಡಿ ಋಗ್ವೇದ ಯಜುರ್ವೇದ ಸಾಮವೇದದ ಮಂತ್ರಗಳಿಂದ ಸ್ತೋತ್ರ ಮಾಡಿದರು. ಮತ್ತು "ಒಂದೇ ದೇಹದಲ್ಲಿ ತ್ರಿಮೂರ್ತಿಗಳೆಲ್ಲರೂ ಕಾಣುತ್ತಿದ್ದೀರಿ. ಇದ್ಹೇಗೆ ?" ಎಂದು ಕೇಳಿದರು. ಅದನ್ನು ಕೇಳಿ ರುದ್ರ ದೇವರು ಹೇಳಿದರು.

"ಈ ಯಜ್ಞದಲ್ಲಿ ನೀನು ನಿನಗಾಗಿ ನೀಡಿದ ಹವಿರ್ಭಾಗವನ್ನು ನಾವು ಮೂವರೂ ತೆಗೆದುಕೊಳ್ಳುತ್ತೇವೆ. ನಮ್ಮಲ್ಲಿ ಭಾವ ಭೇದವಿಲ್ಲ. ನಮ್ಮ ವಿವಿಧ ರೂಪಗಳಲ್ಲಿರುವ ಸಾಮರಸ್ಯವನ್ನು ನಿಜವಾದ ವಿದ್ವಾಂಸರು ತಿಳಿದುಕೊಂಡು ಉಪಾಸನೆ ಮಾಡುತ್ತಾರೆ." ರುದ್ರದೇವರು ಈ ರೀತಿಯಾಗಿ ಮಾತನಾಡಿದ ಮೇಲೆ ಸಕಲ ಮುನಿಗಳು ಆ ಶಂಕರನನ್ನು ಕುರಿತು, "ನೀನು ಮೋಹಶಾಸ್ತ್ರವನ್ನು ರಚಿಸುವ ಕಾರಣವೇನು ?" ಎಂದು ಕೇಳಿದರು. ಅದಕ್ಕೆ ರುದ್ರದೇವರು ಇಂತು ಉತ್ತರವನ್ನಿತ್ತರು.

"ಭಾರತ ದೇಶದಲ್ಲಿ ದಂಡಕಾರಣ್ಯವೆಂಬ ದೊಡ್ಡ ದೇಶವಿದೆ. ಅಲ್ಲಿ ಗೌತಮ ಎಂಬ ಬ್ರಾಹ್ಮಣನು ಅತ್ಯುಗ್ರವಾದ ಘೋರ ತಪವನ್ನಾಚರಿಸಿದನು. ಅವನ ಪ್ರಚಂಡ ತಪಸ್ಸಿಗೆ ಮೆಚ್ಚಿ ಬ್ರಹ್ಮದೇವರು ಪ್ರತ್ಯಕ್ಷರಾಗಿ "ನಿನಗೆ ಬೇಕಾದ ವರವನ್ನು ಕೇಳು" ಎಂದು ಹೇಳಿದರು. ಆಗ ಗೌತಮ ಮುನಿಯು "ಹೊಲಗಳಲ್ಲಿ ನಾನು ಬಿತ್ತಿದ ಧಾನ್ಯಗಳ ಸಸ್ಯಗಳ ಸಾಲುಗಳು ಚೆನ್ನಾಗಿ ಬೆಳೆಯಬೇಕು." ಎಂದು ಕೇಳಿಕೊಂಡನು. ಬ್ರಹ್ಮದೇವರು ಗೌತಮ ಮುನಿಗೆ ಆ ವರವನ್ನು ಕರುಣಿಸಿದರು, ಮುಂದೆ ಗೌತಮ ಋಷಿಯು ಶತಶೃಂಗ ಪರ್ವತದಲ್ಲಿ ತನ್ನ ಪರ್ಣ ಕುಟೀರವನ್ನು ರಚಿಸಿ ವಾಸ ಮಾಡಿದನು. ಗೌತಮ ಋಷಿಯು ಆಶ್ರಮದ ಸುತ್ತ ಹೊಲಗಳನ್ನು ಮಾಡಿ. ಮಣ್ಣನ್ನು ಹದಗೊಳಿಸಿ ಭತ್ತದ ಬೀಜಗಳನ್ನು ಬಿತ್ತಿ ಬೆಳೆ ಮಾಡುತ್ತಿದ್ದನು. ಆಶ್ರಮವಾಸಿಗಳಾದ ಬ್ರಾಹ್ಮಣರು ಅರುಣೋದಯದ ಸಮಯದಲ್ಲಿ ಎದ್ದು ಕೊಯ್ಲಿಗೆ ಬಂದ ಭತ್ತವನ್ನು ಕೊಯ್ದು, ಒಕ್ಕಿ ಅಕ್ಕಿಯನ್ನು ಸಿದ್ದ ಮಾಡಿ ಇಡುತ್ತಿದ್ದರು. ಅನಂತರ ಗೌತಮ ಋಷಿಯು ಆ ಅಕ್ಕಿಯಿಂದ ಅಡುಗೆಯನ್ನು ಮಾಡಿ ಬ್ರಾಹ್ಮಣರಿಗೆ ತೃಪ್ತಿಯಾಗುವಂತೆ ಅತಿಥ್ಯವನ್ನು ನೀಡುತ್ತಿದ್ದನು. ಮುಂದೆ ಕೆಲಕಾಲವು ಕಳೆದ ಬಳಿಕ ಒಂದು ಭಯಂಕರವಾದ ಬರಗಾಲವು ಬಿದ್ದಿತು. ಹನ್ನೆರಡು ವರ್ಷಗಳವರೆಗೆ ಮಳೆಯೇ ಆಗಲಿಲ್ಲ. ಈ ಭೀಕರವಾದ ಬರಗಾಲದಲ್ಲಿ ಎಲ್ಲ ಆಶ್ರಮವಾಸಿಗಳಾದ ಮುನಿಗಳೂ ಯೋಗಿಗಳೂ ಹಸಿವೆ ಬಾಯಾರಿಕೆಗಳಿಂದ ಕಂಗೆಟ್ಟು ಹೋದರು. ಅಡಿವೆ ಅಡಿವೆ ತಿರುಗಿದರು. ಎಲ್ಲಿ ಹೋದರೂ ಅವರ ಹಸಿವು ಹಿಂಗಲಿಲ್ಲ.

ಬಾಯಾರಿಕೆ ಅಳಿಯಲಿಲ್ಲ. ಮನಸ್ಸಿಗೆ ನೆಮ್ಮದಿ ಉಳಿಯಲಿಲ್ಲ. ಆಗ ಎಲ್ಲ ಮುನಿಗಳು ಗೌತಮ ಋಷಿಯ ಆಶ್ರಮಕ್ಕೆ ಬಂದರು. ಋಷಿಮುನಿಗಳೆಲ್ಲರೂ ಒಮ್ಮೆಲೆ ತಮ್ಮ ಆಶ್ರಮಕ್ಕೆ ಬಂದದ್ದನ್ನು ನೋಡಿ ಗೌತಮರಿಗೆ ಸಂತಸವಾಯಿತು. ಅವರು ಅಭ್ಯಾಗತರಾದ ಆ ಎಲ್ಲ ಮುನಿಗಳಿಗೂ ಆದರದಿಂದ ತಲೆ ಬಾಗಿ, ಪ್ರೀತಿಯಿಂದ ಸ್ವಾಗತ ಮಾಡಿ ''ಮುನಿವರ್ಯರೇ, ನೀವೆಲ್ಲರೂ ನನ್ನ ಆಶ್ರಮದಲ್ಲಿಯೇ ಇದ್ದು ಬಿಡಿರಿ'' ಎಂದು ಹೇಳಿದರು. ಅವರ ಆ ಬಿನ್ನಹವನ್ನು ಮನ್ನಿಸಿ ಋಷಿಗಳೆಲ್ಲರೂ ಆ ಗೌತಮರ ಮನೆಯಲ್ಲಿಯೇ ಉಳಿದುಕೊಂಡರು. ಎಷ್ಟೋ ಜನ ಋಷಿಮುನಿಗಳು ಬಂದರೂ ತಮ್ಮ ಆಶ್ರಮದಲ್ಲಿಯೇ ನಿರಂತರ ನೆಲೆಸಿದ್ದರೂ ಗೌತಮರು ಬೇಸರಿಯದೇ ಅತ್ಯಾದರದಿಂದ ಎಲ್ಲರಿಗೂ ಸರ್ವೋತ್ಕೃಷ್ಟವಾದ ಆತಿಥ್ಯವನ್ನು ನೀಡುತ್ತಿದ್ದರು. ಪ್ರತಿದಿನವೂ ಅತಿಥಿಗಳ ಊಟಕ್ಕೆ ಬಗೆ ಬಗೆಯ ಭಕ್ಷ್ಯ ಬೋಜ್ಯಗಳನ್ನು ಮಾಡಿಸಿ ಯಥೇಚ್ಛ ಭೋಜನವನ್ನು ಮಾಡಿಸುತ್ತಿದ್ದರು. ಹೀಗೆ ಕ್ಷಾಮವು ಕಳೆದು ಸುಕಾಲವು ಬರುವವರೆಗೆ ಹನ್ನೆರಡು ವರುಷ ಎಲ್ಲ ಋಷಿಗಳು ದಿನದಿನವೂ ಗೌತಮರ ಆಶ್ರಮದಲ್ಲಿ ಪಂಚಭಕ್ಷ್ಯ, ಪಕ್ವಾನ್ನಗಳ ಭೋಜನವನ್ನು ಮಾಡುತ್ತಾ ಇದ್ದು ಬಿಟ್ಟರು.

ಮುಂದೆ ದೇಶದಲ್ಲಿ ಸುಭಿಕ್ಷೆಯಾಯಿತು. ಸಮೃದ್ಧವಾಗಿ, ಮಳೆಯಾಗಿ, ಭೂಮಿ ಎಲ್ಲವೂ ಸುಜಲಾ ಸುಫಲಾ ಆಗಿ ಕಂಗೊಳಿಸತೊಡಗಿತು. ಅನ್ನದಾನದಲ್ಲಿ ದೀಕ್ಷೆಯುಳ್ಳ ಗೌತಮರು ಎಲ್ಲೆಡೆಗೆ ಸುಕಾಲವಾದರೂ ಮುನಿಗಳನ್ನು ಹೊರಗೆ ಹೋಗಗೊಡದೆ ತಮ್ಮಲ್ಲಿಯೇ ಇಟ್ಟುಕೊಂಡು ಊಟಕ್ಕೆ ಹಾಕಿ ತೃಪ್ತಿಪಡಿಸಿದರು. ಬರಗಾಲವು ಮುಗಿದದ್ದರಿಂದ ಮುನಿಗಳೆಲ್ಲರೂ ತೀರ್ಥಯಾತ್ರೆಗೆ ಹೊರಡಬೇಕೆಂದು ಉತ್ಸುಕರಾದರು. ಒಮ್ಮೆಲೇ ಎಲ್ಲ ಋಷಿಗಳು ಆಶ್ರಮದಿಂದ ಹೊರಡುವ ನಿರ್ಧಾರ ಮಾಡಿದ್ದನ್ನು ನೋಡಿ ಮರೀಚ ಮುನಿಯು ಶಾಂಡಿಲ್ಯ ಮುನಿಗೆ ಕೇಳಿದನು.

''ಶಾಂಡಿಲ್ಯ, ಇಷ್ಟು ದಿನ ನಮಗೆ ಊಟಕ್ಕೆ ಹಾಕಿದ ಗೌತಮ ಋಷಿಯು ನಮ್ಮೆಲ್ಲರಿಗೂ ತಂದೆ ಇದ್ದಂತೆ. ನಾವೀಗ ಬೇರೆ ಕ್ಷೇತ್ರಗಳಲ್ಲಿ ತಪೋನುಷ್ಠಾನಕ್ಕಾಗಿ ಆ ಗೌತಮ ಋಷಿಯನ್ನು ಕೇಳದೆ, ಅವರ ಅಪ್ಪಣೆಯನ್ನು ಪಡೆಯದೇ ಹೋಗುವುದು ಸರಿಯಲ್ಲ.'' ಮರೀಚನ ಮಾತನ್ನು ಕೇಳಿ ಎಲ್ಲ ಮುನಿಗಳು ನಕ್ಕರು. ''ಅನ್ನವನ್ನು ಉಂಡ ಮಾತ್ರಕ್ಕೆ ಗೌತಮನಿಗೆ ನಾವು ನಮ್ಮ ದೇಹವನ್ನು ಮಾರಿಕೊಂಡಿದ್ದೇವೆಯೋ!'' ಎಂದು ನುಡಿದರು. ''ಆದರೂ ಆಶ್ರಮವನ್ನು ಬಿಟ್ಟುಹೋಗಲು ಏನಾದರೂ ಒಂದು ನಿಮಿತ್ತವನ್ನು ಮಾಡಬೇಕು'' ಎಂದು ಅವರು ಯೋಚಿಸಿದರು. ಎಲ್ಲ ಮುನಿಗಳು ಒಂದು ಮಂತ್ರದ ಹಸುವನ್ನು ಮಾಡಿ ಗೌತಮರು ಬ್ರಾಹ್ಮಣರ ಭೋಜನಕ್ಕಾಗಿ ಬೆಳೆದ ಅಕ್ಕಿಯ ಉಗ್ರಾಣದಲ್ಲಿ ಆ ಆಕಳನ್ನು ಬಿಟ್ಟುಬಿಟ್ಟರು. ಅಕ್ಕಿಯ ಸಂಗ್ರಹಾಲಯದಲ್ಲಿ ಹಸು ಹೊಕ್ಕಿದ್ದನ್ನು ನೋಡಿ ಗೌತಮರು ಕೈಯಲ್ಲಿನ ನೀರಿನಿಂದ ಅದಕ್ಕೆ ಪ್ರೋಕ್ಷಣೆ ಮಾಡಿದರು. ಅವರು ಪ್ರೋಕ್ಷಿಸಿದ ನೀರಿನ ಹನಿ ಹಸುವಿನ ಮೈಮೇಲೆ ಬೀಳುವಷ್ಟರಲ್ಲಿಯೇ ಆ ಹಸುವೂ ನೆಲದ ಮೇಲೆ ಸತ್ತು ಬಿದ್ದಿತು. ಆಕಳು ಸತ್ತು ಬಿದ್ದುದ್ದನ್ನು ನೋಡಿ ಮುನಿಗಳೆಲ್ಲರೂ ಹೊರಟು ನಿಂತರು. ಆಗ ಗೌತಮ ಮುನಿಗಳು ಅವರಿಗೆ ಕೈ ಮುಗಿದು ಕೇಳಿಕೊಂಡರು.

"ಪೂಜ್ಯರೇ, ನೀವೇಕೆ ನನ್ನ ಆಶ್ರಮವನ್ನು ಬಿಟ್ಟು ಹೋಗುವಿರಿ ? ನಾನು ನೀಡುವ ಆತಿಥ್ಯವು ಭಕ್ತಿಯಿಂದ ಒಡಗೂಡಿದುದಾಗಿದೆ. ಮತ್ತು ನಾನು ನಿಮ್ಮೆಲ್ಲರಿಗೂ ವಿಧೇಯನಾಗಿದ್ದೇನೆ. ಅಂದ ಬಳಿಕ ನೀವೇಕೆ ನನ್ನನ್ನು ಬಿಟ್ಟು ಹೊರಟು ನಿಂತಿರಿ ? " ಅದನ್ನು ಕೇಳಿ ಋಷಿಗಳು "ಮುನಿವರ್ಯಾ, ನೀವೀಗ ನಮ್ಮ ಕಣ್ಣೆದುರೇ ಗೋವಧೆಯನ್ನು ಮಾಡಿದಿರಿ. ಈ ಗೋಹತ್ಯಾ ಪಾಪವು ನಿಮ್ಮಿಂದ ತೊಲಗಿ ಹೋಗುವವರೆಗೆ ನಾವು ನಿಮ್ಮ ಅನ್ನವನ್ನು ಸ್ವೀಕರಿಸುವುದಿಲ್ಲ" ಎಂದು ನುಡಿದರು. ಅದನ್ನು ಕೇಳಿ ಧರ್ಮ ಶಾಸ್ತ್ರವನ್ನು ಬಲ್ಲ ಗೌತಮ ಋಷಿಯು "ತಪೋಧನರೇ ನನ್ನ ಈ ಗೋವಧೆ ಪಾಪಕ್ಕೆ ಪ್ರಾಯಶ್ಚಿತ್ತವೇನು ? ಈ ಪಾಪಕ್ಕೆ ನನಗೇನಾದರೂ ಪ್ರಾಯಶ್ಚಿತ್ತವನ್ನು ಕೊಡಿರಿ " ಎಂದು ಕೇಳಿದರು.

ಅದಕ್ಕೆ ಋಷಿಗಳು "ಬ್ರಹ್ಮನ್, ಆ ಆಕಳು ಪೂರ್ತಿಯಾಗಿ ಇನ್ನೂ ಸತ್ತಿಲ್ಲ. ಮೂರ್ಛಿತವಾಗಿ ಬಿದ್ದಿದೆ. ಗಂಗೆಯ ನೀರನ್ನು ತಂದು ಅದರಲ್ಲಿ ಇದನ್ನು ತೇಲಿಸಿದರೆ ಇದು ಬದುಕುವುದು. ಪೂರ್ತಿ ಗೋವಧೆ ಆಗಿದ್ದರೆ ಮಾತ್ರ ಅದಕ್ಕೆ ಪ್ರಾಯಶ್ಚಿತ್ತ ಉಂಟು. ಇದಕ್ಕೇನೂ ಪ್ರಾಯಶ್ಚಿತ್ತವಿಲ್ಲ ಹಸುವನ್ನು ಹೊಡೆದು ಮೂರ್ಛೆ ಬೀಳಿಸಿದವರಲ್ಲಿಯೂ ಊಟ ಮಾಡಬಾರದೆಂದೇ ನಮ್ಮ ವ್ರತವು ಇರುತ್ತದೆ. ಅದಕ್ಕೆ ತಾವು ಕೋಪಿಸಬಾರದು." ಎಂದು ಹೇಳಿ ಮುನಿಗಳೆಲ್ಲರೂ ಅಲ್ಲಿಂದ ಹೊರಟು ಹೋದರು. ಆನಂತರ ಬುದ್ಧಿವಂತನಾದ ಗೌತಮ ಮುನಿಯು ದೇವತಾ ಆರಾಧನೆಯ ಇಚ್ಛೆಯಿಂದ ತಪಸ್ಸನ್ನು ಮಾಡಲು ಹಿಮಾಲಯ ಪರ್ವತಕ್ಕೆ ಹೋದನು. ಆ ಹಿಮಗಿರಿಯಲ್ಲಿ ಅವನು ಒಂದು ನೂರಾ ಒಂದು ವರ್ಷಗಳವರೆಗೆ ಮಹಾದೇವನಾದ ನನ್ನನ್ನು ಕುರಿತು ತಪಸ್ಸನ್ನು ಮಾಡಿದನು. ಅವನ ತಪಸ್ಸಿನಿಂದ ಪ್ರೀತ ಪ್ರಸನ್ನನಾದ ನಾನು "ಬಯಸಿದ ವರವನ್ನು ಬೇಡು" ಎಂದು ಹೇಳಿದೆನು. ಅದಕ್ಕೆ ಆ ಗೌತಮನು ಕೈ ಮುಗಿದು "ಭಗವನ್, ನಿನ್ನ ಜಡೆಯಲ್ಲಿರುವ ಗಂಗೆಯನ್ನು ನನಗೆ ಕರುಣಿಸು. ಆ ಪುಣ್ಯ ನದಿಯಾದ ಭಾಗೀರಥಿಯು ನನ್ನ ಜೊತೆಗೆ ಬರಲಿ " ಎಂದು ಕೇಳಿದನು. ಅದಕ್ಕೆ ಮಹಾದೇವನು ತಥಾಸ್ತು ಎಂದು ವರವನ್ನು ಇತ್ತನು. ಮತ್ತೂ ಗಂಗೆಯು ಮಂಡಿಸಿದ ತನ್ನ ಜಟಾಖಂಡದ ಒಂದು ತುಂಡನ್ನು ಕೊಟ್ಟನು. ಅದರಿಂದ ದೇವಗಂಗೆಯು ಧಾರಾಕಾರವಾಗಿ ಹರಿಯತೊಡಗಿತು. ಆ ಸುರಸರಿತೆಯನ್ನು ಕರಕೊಂಡು ಗೌತಮ ಮುನಿಯು ಆಕಳು ಮೂರ್ಛಿತವಾಗಿ ಬಿದ್ದ ಸ್ಥಳಕ್ಕೆ ತೆರಳಿದನು. ಅಲ್ಲೆಲ್ಲ ಗಂಗೆಯ ನೀರು ಹರಿದು ಬಂದ ಕೂಡಲೇ ಸತ್ತಂತೆ ಬಿದ್ದ ಆ ಆಕಳು ಬದುಕಿ ಎದ್ದು ನಿಂತಿತು. ಅಲ್ಲಿಯೇ ದೊಡ್ಡ ಮಡುವಾಗಿ ಪವಿತ್ರ ನೀರಿನ ಒಂದು ಹಿರಿ ಹೊಳೆಯು ಹೊಮ್ಮಿ ಹರಿಯತೊಡಗಿತು. ಈ ಮಹಾನ್ ಆಶ್ಚರ್ಯವನ್ನು ಕಂಡು ಸಪ್ತ ಋಷಿಗಳು ವಿಮಾನದಲ್ಲಿ ಕುಳಿತು ಅಲ್ಲಿಗೆ ಬಂದರು. ಮತ್ತು ಗೌತಮರ ಗೈಮೆಯ ಗರಿಮೆಯನ್ನು ಬಾಯಿ ತುಂಬ ಹೊಗಳಿದರು-

"ಭಲಾ ಗೌತಮಾ, ನಿನ್ನಂಥ ಸತ್ಪುರುಷರೇ ಬೇರೊಬ್ಬರಿಲ್ಲ. ಈ ದಂಡಕಾರಣ್ಯದಲ್ಲಿ ಭಾಗೀರಥಿಯನ್ನು ತಂದು ತುಳುಕಿಸಿದ ಭಾಗ್ಯವು ನಿನ್ನದಾಗಿದೆ." ಸಪ್ತ ಋಷಿಗಳ ಬಣ್ಣನೆಯ ಈ ಮಾತುಗಳನ್ನು ಕೇಳಿ ಹರುಷಗೊಂಡ ಗೌತಮನು ದಿವ್ಯ

ದೃಷ್ಟಿಯಿಂದ ತನ್ನ ಆಶ್ರಮದಲ್ಲಿ ಅಂದು ಆಕಸ್ಮಿಕವಾಗಿ ಆದ ಆ ಧೇನುಪಾತದ ಕಾರಣವನ್ನು ವಿಮರ್ಶಿಸಿದನು. ಋಷಿಗಳ ಕುತಂತ್ರವೆಲ್ಲವೂ ಸ್ಪಷ್ಟವಾಗಿ ಗೋಚರಿಸಿತು. ಆಗ ಕುಪಿತನಾದ ಗೌತಮ ಮುನಿಯು ಹನ್ನೆರಡು ವರ್ಷ ತನ್ನ ಮನೆಯಲ್ಲಿದ್ದು ಹೋಗುವಾಗ ಕುಂಟು ನೆವ ತೆಗೆದು ಎದ್ದು ಹೋದ ಮುನಿಗಳನ್ನೆಲ್ಲ ಶಪಿಸಿದನು -

''ಜಡೆ ಹಾಗೂ ಭಸ್ಮವನ್ನು ಲೇಪಿಸಿಕೊಂಡು ಸುಳ್ಳುವ್ರತವನ್ನು ಮಾಡುವ ಮುನಿಗಳೇ, ನೀವೆಲ್ಲರೂ ವೇದ ಬಾಹ್ಯರೂ ವೈದಿಕ ಕರ್ಮಗಳಿಂದ ಬಹಿಷ್ಕೃತರೂ ಆಗಿರಿ.'' ಗೌತಮನ ಈ ಬಿರು ನುಡಿಗಳನ್ನು ಕೇಳಿ ಸಮಸ್ತ ಋಷಿಗಳು ''ಬ್ರಾಹ್ಮಣೋತ್ತಮ, ಆ ಮುನಿಗಳಿಗೆ ಯಾವಾಗಲೂ ಹೀಗಾಗಬಾರದು. ನಿನ್ನ ಮಾತು ವ್ಯರ್ಥವಾಗುವುದಿಲ್ಲ. ನಿನ್ನಿಂದ ಶಪಿತರಾದ ಆ ಬ್ರಾಹ್ಮಣರೆಲ್ಲರೂ ನೀನು ಹೇಳಿದಂತೆ ಉಪಕಾರಿಗಳಿಗೂ ಅಪಕಾರವನ್ನು ಮಾಡುವರು. ಕಲಿಯುಗದಲ್ಲಿ ಅವರಿಗೆ ಧನಾಶೆಯು ಹೆಚ್ಚಾಗುವುದು. ನಿನ್ನ ಶಾಪದಗ್ಧರಾದ ಆ ಬ್ರಾಹ್ಮಣರು ಕಲಿಯುಗದಲ್ಲಿ ಕ್ರಿಯಾಹೀನರೂ ವೇದ ಕರ್ಮಗಳಿಂದ ಬಹಿಷ್ಕೃತರೂ ಆಗುವರು. ಗೋವಿಗೆ ಜೀವ ದಾನವನ್ನು ಮಾಡಿದ ವಾರಿ(ನೀರು) ಆದುದರಿಂದ ಆ ಗಂಗೆಗೆ ಗೋದಾವರಿ ಎಂದು ಹೆಸರಾಗಲಿ. ಕಲಿಯುಗದಲ್ಲಿ ಗೋದಾವರಿ ನದಿಯ ತಟಾಕಕ್ಕೆ ಬಂದು ಗೋದಾನವನ್ನಾಗಲಿ ಅಥವಾ ಮಿಕ್ಕುಳಿದ ಬೇರೆ ದಾನಗಳನ್ನಾಗಲಿ ಮಾಡುವವರು ಸ್ವರ್ಗವನ್ನು ಪಡೆದು ದೇವತೆಗಳೊಂದಿಗೆ ಸುಖಿಸುವರು. ಸಿಂಹರಾಶಿಯಲ್ಲಿ ಗುರುವಿದ್ದಾಗ ಮಾನವರು ಆ ಗೋದಾವರಿ ನದಿಗೆ ಬಂದು ಸ್ನಾನ ಮಾಡಿ ವಿಧಿ ಪೂರ್ವಕವಾಗಿ ಪಿತೃಗಳಿಗೆ ತರ್ಪಣ ಕೊಟ್ಟರೆ ನರಕದಲ್ಲಿ ಬಿದ್ದ ಪಿತೃಗಳೂ ಕೂಡ ಸ್ವರ್ಗವನ್ನು ಸೇರುತ್ತಾರೆ. ಈ ಮೊದಲೇ ಅವನ ಪಿತೃಗಳು ಸ್ವರ್ಗದಲ್ಲಿದ್ದರೆ ಅವರ ಸಂತತಿಯವರು ಸಿಂಹರಾಶಿಗೆ ಗುರುವಿದ್ದಾಗ ಗೋದಾವರಿಯಲ್ಲಿ ಪಿತೃತರ್ಪಣ ಶ್ರಾದ್ಧ ಮುಂತಾದವುಗಳನ್ನು ಮಾಡಿದರೆ ಅವರ ಪೂರ್ವ ಪಿತೃಪರಂಪರೆಯವರಿಗೆ ಮೋಕ್ಷವು ದೊರೆಯುವುದು. ಅದರಂತೆ ಗೌತಮ, ನೀನು ಈ ಜಗತ್ತಿನಲ್ಲಿ ಪ್ರಖ್ಯಾತನಾಗಿ ಮುಂದೆ ಮುಕ್ತಿಯನ್ನು ಪಡೆಯುವೆ.''

ಈ ಸಪ್ತರ್ಷಿಗಳು ಗೌತಮನನ್ನು ಇಂತು ಸಂತೈಸಿ ನಾನು ಪಾರ್ವತಿಯೊಡನೆ ಯಾವಾಗಲೂ ವಾಸಿಸುವ ಕೈಲಾಸ ಪರ್ವತಕ್ಕೆ ಬಂದರು. ಮತ್ತು ಗೌತಮ ಶಪ್ತರಾದ ಬ್ರಾಹ್ಮಣರಿಗಾಗಿ ಒಂದು ಶಾಸ್ತ್ರವನ್ನು ರಚಿಸಿ ಕೊಡಲು ಕೇಳಿದರು. ಸಪ್ತರ್ಷಿಗಳ ಬಿನ್ನಹದಂತೆ ನಾನು ನಿಶ್ವಾಸ ಎಂಬ ಸಂಹಿತೆಯನ್ನು ರಚಿಸಿದೆನು. ಲಕ್ಷ ಗ್ರಂಥಾತ್ಮಕವಾದ ಈ ನಿಶ್ವಾಸ ಸಂಹಿತೆಯು ಪಾಶುಪತ ದೀಕ್ಷೆಯೆಂದೂ ಪಾಶುಪತ ಯೋಗವೆಂದೂ ಕರೆಯಲ್ಪಡುತ್ತದೆ. ಈ ಪಾಶುಪತ್ಯಾಗಮದಿಂದ ಉದಿಸುವ ಪುರಾಣಗಳು ಶೈವ ಪುರಾಣವೆಂದು ಕರೆಯಲ್ಪಡುತ್ತವೆ. ಈ ಶೈವಾಗಮ ಪುರಾಣಗಳಲ್ಲಿ ಹೇಳಿದ ಕರ್ಮಗಳು ರೌದ್ರ ಕರ್ಮಗಳಾಗಿದ್ದು ಅಶುದ್ಧವೂ ಕ್ಷುದ್ರ ಕರ್ಮವೂ ಆಗಿರುತ್ತವೆ. ಕಲಿಯುಗದಲ್ಲಿ ಇಂದ್ರಿಯಸುಖಕ್ಕಾಗಿರುದ್ರದೇವರನ್ನು ಆಶ್ರಯಿಸಿದ ಕ್ಷುದ್ರಜನರು ತಮ್ಮ ಮನ ಬಂದಂತೆ ಶಾಸ್ತ್ರಗಳನ್ನು ರಚಿಸುತ್ತಾರೆ. ಅಂಥವರನ್ನು ಉಚ್ಛಿಷ್ಟ ರುದ್ರರು ಎಂದು ತಿಳಿಯಬೇಕು. ನನ್ನ ಮಹಿಮೆಗಳನ್ನು ಹೇಳುತ್ತಿದ್ದರೂ ಆ ಶಾಸ್ತ್ರಗಳಿಗೂ ನನಗೂ ಬಹುದೂರ.

ಹಿಂದೆ ನಾನು ದೇವತಾ ಕಾರ್ಯದಲ್ಲಿ ಭೈರವ ರೂಪದಿಂದ ತಾಂಡವ ನೃತ್ಯವನ್ನು ಮಾಡಿ ದುಷ್ಟದೈತ್ಯರನ್ನೆಲ್ಲ ಸಂಹರಿಸುವ ಉದ್ದೇಶದಿಂದ ಭಯಂಕರವಾದ ಅಟ್ಟಹಾಸವನ್ನು ಮಾಡಿದೆನು. ಆಗ ನನ್ನ ಕಣ್ಣಿನಿಂದ ಉದುರಿ ಬಿದ್ದ ನೀರಿನ ಹನಿಗಳೇ ಈ ರೌದ್ರರು. ಈ ರೌದ್ರರು ಸೆರೆಕುಡುಕರು, ಮಾಂಸಭಕ್ಷಕರೂ ಆಗಿರುವರು. ಹೆಣ್ಣಿನ ಲೋಲುಪತೆ ಅವರ ಸ್ವಭಾವಧರ್ಮ, ಗೌತಮ ಶಾಪದಿಂದ ಇಂಥ ಬ್ರಾಹ್ಮಣರು ಹುಟ್ಟಿ ನಾನು ರಚಿಸಿದ ಶೈವ, ಪಾಶುಪತ ಆಗಮಗಳನ್ನೂ ಪುರಾಣ ತಂತ್ರಗಳನ್ನೂ ನಂಬಿ ಇದರಿಂದಲೇ ಸ್ವರ್ಗ ಮತ್ತು ಮೋಕ್ಷಗಳು ದೊರಕುವವೆಂದು ಜನರನ್ನು ವಂಚಿಸುತ್ತ ವೇದಾಂತಿಗಳಾಗಿ ಅಧೋಗತಿಯನ್ನು ಹೊಂದುವರು. ಮೊದಲು ಗೌತಮ ಮುನಿಯ ಶಾಪಾಗ್ನಿಯಿಂದ ದಗ್ಧರಾದ ಆ ಬ್ರಾಹ್ಮಣರು ನನ್ನ ಮಾತನ್ನು ನಂಬಿ ನರಕಕ್ಕೆ ಹೋಗುವರು. ಇದರಲ್ಲಿ ಸಂಶಯವೇ ಇಲ್ಲ.'' ಮಹಾದೇವರ ಈ ಮಾತುಗಳನ್ನು ಕೇಳಿಕೊಂಡು ಬ್ರಹ್ಮನ ಮಕ್ಕಳಾದ ಏಳೂ ಜನ ಋಷಿಗಳು ತಾವು ಬಂದ ದಾರಿಯಿಂದ ಹೊರಟು ಹೋದರು. ಗೌತಮ ಮುನಿಯು ತನ್ನ ಆಶ್ರಮಕ್ಕೆ ನಡೆದನು. ಈ ರೀತಿಯಾಗಿ ಮಹಾದೇವರು ಅಗಸ್ತ್ಯರಿಗೆ ಧರ್ಮ ಲಕ್ಷಣಗಳನ್ನು ಹೇಳಿ ಇದಕ್ಕೆ ವಿಪರೀತವಾದುದೆಲ್ಲವೂ ಅಧರ್ಮ ಅಥವಾ ಪಾಷಂಡಮತ ಎಂದು ತಿಳಿಸಿದರು.

*ವರಾಹ ಪುರಾಣದಲ್ಲಿ ಅರವತ್ತೆಂಟನೇ ಅಧ್ಯಾಯ ಮುಗಿದುದು.*



## ಅಧ್ಯಾಯ - ೬೯

ಅಗಸ್ತ್ಯಮುನಿಗಳು ಸರ್ವಜ್ಞನೂ, ಸರ್ವಕರ್ತಾರನೂ ಆದ ರುದ್ರದೇವರಿಗೆ ನಮಸ್ಕಾರವನ್ನು ಮಾಡಿ ಮತ್ತೆ ಕೇಳಿದರು. "ಭಗವನ್, ಬ್ರಹ್ಮ, ವಿಷ್ಣು ಮಹೇಶ್ವರ ಈ ಮೂರು ದೇವತೆಗಳಾದ ನೀವು ದೀಪವು ತನ್ನ ಪ್ರಭೆಯಿಂದ ಇಡೀ ಕೋಣೆಯನ್ನೇ ವ್ಯಾಪಿಸುವಂತೆ ಈ ತ್ರಿಮೂರ್ತಿಗಳು ಲೋಕತ್ರಯವನ್ನೆಲ್ಲ ವ್ಯಾಪಿಸಿದ್ದೀರಿ. ಆದರೆ ನೀವು ಮೂವರಲ್ಲಿ ಮುಖ್ಯರು ಯಾರು ? ನಿಮ್ಮಲ್ಲಿ ಸರ್ವಾಂತರ್ಯಾಮಿ ಯಾರು ? ಯಾವ ಯಾವ ಕಾಲದಲ್ಲಿ ಯಾವ ಯಾವ ದೇವತೆಗಳಿಗೆ ಪ್ರಾಮುಖ್ಯತೆ ಇರುತ್ತದೆ ? ಅದನ್ನು ದಯವಿಟ್ಟು ಮೂರು ಕಣ್ಣಿನ ನೀನು ನನಗೆ ತಿಳಿಸಬೇಕು." ಅಗಸ್ತ್ಯರ ಪ್ರಾರ್ಥನೆಯನ್ನು ಮನ್ನಿಸಿ ಪರಮೇಶ್ವರನು ತ್ರಿಮೂರ್ತಿಗಳ ಸ್ವರೂಪವನ್ನು ಇಂತು ತಿಳಿಸಿ ಹೇಳಿದನು -

### ರುದ್ರ ಉವಾಚ

**"ವಿಷ್ಣುರೇವ ಪರಂ ಬ್ರಹ್ಮ ತ್ರಿಭೇದಮಿಹ ಪಶ್ಯತೇ ।**
**ವೇದ ಸಿದ್ಧಾಂತ ಮಾರ್ಗೇಷು ತನ್ನ ಜಾನಂತಿ ಮೋಹಿತಾಃ ॥**

**ವಿಶ್ ಪ್ರವೇಶನೇ ಧಾತುಃ ತತ್ರ ಸ್ನು ಪ್ರತ್ಯಯಾದನು ।**
**ವಿಷ್ಣುರ್ಯಸ್ಸರ್ವದೇವೇಷು ಪರಮಾತ್ಮಾ ಸನಾತನಃ ॥**

**ಯೋಽ ಯಂ ವಿಷ್ಣು ಸ್ಸ ದಶಧಾ ಕೀರ್ತ್ಯತೇ ಚೈಕಧಾ ದ್ವಿಜೈಃ ।**
**ಸ ಆದಿತ್ಯೋ ಮಹಾಭಾಗ ಯೋಗೈಶ್ವರ್ಯ ಸಮನ್ವಿತಃ ।**
**ಯೋ ದೇವಕಾರ್ಯಾಣಿ ಸದಾ ಕುರುತೇ ಪರಮೇಶ್ವರಃ ।**
**ಮನುಷ್ಯ-ಭಾವ ಮಾಶ್ರಿತ್ಯ ಸ ಮಾಂ ತ್ರಾತಿ ಯುಗೇ ಯುಗೇ ॥**

ಈ ತ್ರಿಮೂರ್ತಿಗಳಲ್ಲಿ ವಿಷ್ಣುವೇ ಶ್ರೇಷ್ಠನಾಗಿದ್ದಾನೆ. ಅವನಿಗೇ ಪರಬ್ರಹ್ಮನೆಂದು ಹೆಸರು. ವೇದಶಾಸ್ತ್ರಗಳಲ್ಲಿ ಆ ವಿಷ್ಣುವು ಮೂರು ರೂಪಗಳಿಂದ ಜಗದ್ವ್ಯಾಪಾರವನ್ನು ಮಾಡುತ್ತಾನೆಂದು ಹೇಳಲಾಗಿದೆ. ಮೂಢರು ಇದನ್ನು ತಿಳಿಯಲಾರರು. 'ವಿಶಪ್ರವೇಶನೆ ' ಎಂಬ ಧಾತುವಿಗೆ ಪ್ರವೇಶಮಾಡು ಎಂದು ಅರ್ಥ. ಆ ವಿಶಧಾತುವಿಗೆ ಸ್ನು ಪ್ರತ್ಯಯವು ಹತ್ತಿ ವಿಷ್ಣು ಎಂದಾಗುತ್ತದೆ. ಅಂದರೆ ಸರ್ವ ದೇವತೆಗಳಲ್ಲಿಯೂ ಅಂತರ್‌ಯಾಮಿ ಯಾದ ಈ ವಿಷ್ಣು ದೇವತೆಯು ಸರ್ವ ಜಗತ್‌ಕಾರಣನಾದ ಪರಮ ಆತ್ಮ ಆಗಿರುತ್ತಾನೆ. ಈ ವಿಷ್ಣುವಿನ ದಶಾವತಾರ ಲೀಲೆಗಳನ್ನುಕೆಲವರು ಕೊಂಡಾಡಿದರೆ ಹಲವರು ಮೂಲ ನಾರಾಯಣ ರೂಪವನ್ನೆ ಉಪಾಸಿಸುತ್ತಾರೆ. ಇವನೇ ಸವಿತೃ ಮಂಡಲ ಮಧ್ಯವರ್ತಿಯಾದ ಸೂರ್ಯನಾರಾಯಣ. ದೇವತಾ ಕಾರ್ಯವನ್ನು ಪೂರೈಸಲಿಕ್ಕಾಗಿ ಯುಗ ಯುಗದಲ್ಲಿಯೂ ಮನುಷ್ಯ ರೂಪದಿಂದ ಅವತಾರ ಮಾಡಿದ ಆ ಶ್ರೀಹರಿಯು ಜನರಿಗೆ ಸ್ತೋತ್ತಮ ದೇವತೆಗಳ ಉಪಾಸನೆಯಲ್ಲಿ ಪ್ರವೃತ್ತಿ ಹುಟ್ಟಬೇಕೆಂದೂ ಮತ್ತು ದೇವತಾ ಕಾರ್ಯಗಳು ಸಿದ್ಧಿಸಬೇಕೆಂದೂ ನನ್ನನ್ನು ಸ್ತೋತ್ರ ಮಾಡುತ್ತಾನೆ. ಆದರೆ ನಾನು ಮಾತ್ರ ಆ ಶ್ರೀಹರಿಯನ್ನು ಯಾವಾಗಲೂ ಸ್ತೋತ್ರ ಮಾಡುತ್ತೇನೆ. ಸೃಷ್ಟಿಕಾಲದಲ್ಲಿ ಬ್ರಹ್ಮದೇವರನ್ನು

ಸ್ತುತಿಸುತ್ತೇನೆ. ಪ್ರಳಯ ಕಾಲದಲ್ಲಿ ನಾನೇ ಕಾಲನೂ ಆಗುತ್ತೇನೆ. ಬ್ರಹ್ಮದೇವರೂ ದೇವ ದಾನವರೂ ಕೃತಯುಗದಲ್ಲಿ ನನ್ನನ್ನು ಸ್ತೋತ್ರಮಾಡುತ್ತಾರೆ. ಬಗೆ ಬಗೆಯ ಭೋಗಗಳನ್ನು ಬಯಸುವ ದೇವತೆಗಳು ಲಿಂಗಮೂರ್ತಿಯಾದ ನನ್ನನ್ನು ಪೂಜಿಸುತ್ತಾರೆ.

ಆದರೆ ಮೋಕ್ಷವನ್ನು ಬಯಸುವವರು ಮಾತ್ರ ಮನಃಪೂರ್ವಕವಾಗಿ ''ಸಹಸ್ರಶೀರ್ಷಾ ಪುರುಷಃ'' ಎಂದು ವೇದದಲ್ಲಿ ಪ್ರತಿಪಾದಿತನಾದ ಆ ನಾರಾಯಣನನ್ನು ಪೂಜಿಸುತ್ತಾರೆ. ಸಮಸ್ತ ಪ್ರಪಂಚವನ್ನೆಲ್ಲ ವ್ಯಾಪಿಸಿ ಸರ್ವಾಂತರ್ಯಾಮಿಯಾದ ದೇವರೆಂದರೆ ಆ ನಾರಾಯಣನೊಬ್ಬನೇ ಸರಿ. ''ವಿಶ್ವಾತ್ಮಾ ದೇವೋ ನಾರಾಯಣಃ ಸ್ವಯಂ''.

ನಿತ್ಯವೂ ಬ್ರಹ್ಮಯಜ್ಞವನ್ನು ಮಾಡಿ ದೇವತಾರಾಧನೆಗೈಯ್ಯುವದರಿಂದ ಬ್ರಹ್ಮ ದೇವರಿಗೆ ಬಹಳ ಪ್ರೀತಿಯಾಗುತ್ತದೆ. ವೇದಮೂರ್ತಿಗಳಾದ ಆ ಬ್ರಹ್ಮದೇವರಿಗೆ ವೇದೋಕ್ತವಾದ ಬ್ರಹ್ಮಯಜ್ಞದಿಂದಲೇ ಹೆಚ್ಚಿನ ಸಂತೋಷ. ನಾರಾಯಣ, ಶಿವ, ವಿಷ್ಣು, ಶಂಕರ, ಪುರುಷೋತ್ತಮ ಮುಂತಾದ ಎಲ್ಲ ಹೆಸರುಗಳಿಂದ ಪ್ರತಿಪಾದಿತನಾದ ದೇವತೆ ಒಂದೇ ಇದೆ. ಅದೇ ಪರಬ್ರಹ್ಮ, ಶ್ರೀಹರಿ, ವಿಷ್ಣು, ಬ್ರಹ್ಮ, ರುದ್ರರಲ್ಲಿ ಅಂತರ್ಯಾಮಿ ಯಾದ ಹರಿಯ ರೂಪಗಳೆಲ್ಲವೂ ಒಂದೇ. ಅವುಗಳನ್ನು ಬೇರೆಯಾಗಿ ಭಾವಿಸಬಾರದು. ಭಾವಿಸಿದವರು ನರಕ ಹೊಂದುವರು ಎಂದು ಶಾಸ್ತ್ರವಚನ ಉಂಟು.

ಈ ವಾಕ್ಯದ ನಿಜವಾದ ಗೂಡಾರ್ಥವನ್ನೂ ಬ್ರಾಹ್ಮಣ ಶ್ರೇಷ್ಠರು ತಿಳಿದುಕೊಂಡು ಈ ತ್ರಿಮೂರ್ತಿಗಳಲ್ಲಿ ಮತ್ತು ವೇದವೈದಿಕ ಕರ್ಮಗಳಲ್ಲಿ ವಾಸ್ತವಿಕವಾಗಿ ಇದ್ದುದು ಭೇದವೇ ಎಂದು ಚೆನ್ನಾಗಿ ಅರಿಯುವರು. ಬ್ರಹ್ಮ, ವಿಷ್ಣು, ಮಹೇಶ್ವರರೆಂದರೆ ಋಗ್ವೇದ, ಯಜುರ್ವೇದ, ಸಾಮವೇದ ಎಂಬ ಮೂರು ವೇದಗಳಿದ್ದಂತೆ. ವೇದತ್ವೇನ ಅವೆಲ್ಲ ಒಂದೇ ಆಗಿದ್ದರೂ ವಸ್ತುತಸ್ತು ಅವು ಮೂರು ಭಿನ್ನ ಭಿನ್ನವಾಗಿರುತ್ತವೆ. ಅದರಂತೆ ನಾವು ತ್ರಿಮೂರ್ತಿಗಳು ಸ್ಥೂಲರೂಪದಿಂದ ಮತ್ತು ಸ್ಥಾನೈಕ್ಯದಿಂದ ಒಂದೇ ಎಂದು ಹೇಳಿದ್ದರೂ ವಾಸ್ತವಿಕವಾಗಿ ಭಿನ್ನ ಭಿನ್ನರೇ ಆಗಿದ್ದೇವೆ. ನನ್ನಲ್ಲಿ ಇರುವ ಹರಿಯ ರೂಪಕ್ಕೆ ಶಿವ ಎಂದೂ ಬ್ರಹ್ಮನಲ್ಲಿ ಇರುವ ರೂಪಕ್ಕೆ ಬ್ರಹ್ಮನೆಂದೂ, ಹೆಸರಿರುವದರಿಂದ ತ್ರಿಮೂರ್ತಿಗಳು ಒಂದು ಎಂಬ ವಾಕ್ಯಕ್ಕೆ ಬ್ರಹ್ಮ ರುದ್ರ ದೇವತೆಗಳಲ್ಲಿ ಇರುವ ಶ್ರೀ ಹರಿಯು ಒಬ್ಬನೇ. ಅದಿಷ್ಠಾನ ಭೇದ ಮೂಲಕವಾಗಿ ಅವನಿಗೆ ಭೇದವಿಲ್ಲ ಎಂದೇ ತಾತ್ಪರ್ಯವು ಎಂದು ತಿಳಿಯಬೇಕು.

*ವರಾಹ ಪುರಾಣದಲ್ಲಿ ಅರವತ್ತೊಂಬತ್ತನೇ ಅಧ್ಯಾಯ ಮುಗಿದುದು.*

—o—

## ಅಧ್ಯಾಯ - ೭೦

**ರುದ್ರ :-** ಬ್ರಾಹ್ಮಣ ಶ್ರೇಷ್ಠನೇ, ನಾನು ಹಿಂದೆ ನೀರಿನಲ್ಲಿ ಮುಳುಗಿದಾಗ ನಡೆದ ಒಂದು ಕೌತುಕದ ಪ್ರಸಂಗವನ್ನು ಹೇಳುತ್ತೇನೆ ಕೇಳು. ಸೃಷ್ಟಿಯ ಆದಿ ಕಾಲದಲ್ಲಿ ಬ್ರಹ್ಮದೇವರು ನನ್ನನ್ನು ನಿರ್ಮಿಸಿದರು. ಮತ್ತು ಪ್ರಜೆಗಳ ಸೃಷ್ಟಿಯನ್ನು ಮಾಡು ಎಂದು ಹೇಳಿದರು. ನನಗೆ ಸೃಷ್ಟಿ ಕ್ರಮದ ಯಾವ ಜ್ಞಾನವೂ ಇರಲಿಲ್ಲ. ಮತ್ತು ನಾನು ಆ ಕಾರ್ಯಕ್ಕೆ ಸಮರ್ಥನೂ ಆಗಿರಲಿಲ್ಲ. ಆದುದರಿಂದ ನಾನು ಸಮುದ್ರದ ನೀರಿನಲ್ಲಿ ಮುಳುಗಿ ಬಿಟ್ಟೆನು. ನಾನು ನೀರಿನಲ್ಲಿ ಮುಳುಗಿ ಒಂದು ಕ್ಷಣ ನಿಂತು ಮಡಿಯಿಂದ ಶುಚಿರ್ಭೂತನಾಗಿ ಅಂಗುಷ್ಠ ಮಾತ್ರ ಪ್ರಮಾಣ ಉಳ್ಳ ಪರಮೇಶ್ವರನನ್ನು ಧ್ಯಾನ ಮಾಡುತ್ತ ನಿಂತುಕೊಂಡೆನು. ಆಗ ನನ್ನ ಕಣ್ಣೆದುರು ಪ್ರಳಯಕಾಲದ ಬೆಂಕಿಗೆ ಸಮಾನ ಕಾಂತಿಉಳ್ಳ ಹನ್ನೊಂದು ಜನ ಪುರುಷರು ನೀರಿನಿಂದ ಎದ್ದು ಮೇಲೆ ಬಂದರು. ಅವರ ದೇಹದ ಉಗ್ರವಾದ ಕಾಂತಿಯ ಕಿರಣಗಳಿಂದ ಕಡಲಿನ ನೀರು ಕುದಿಯತೊಡಗಿತ್ತು. ಅಷ್ಟು ಉಗ್ರವಾಗಿತ್ತು ಅವರ ದೇಹ ತೇಜಸ್ಸು.

ಆಗ ನಾನು ಅವರನ್ನು ಕೇಳಿದೆ '' ನೀವು ಯಾರು ? ನೀರಿನಲ್ಲಿ ಮೇಲೆದ್ದು ಎಲ್ಲಿ ಹೊರಟಿದ್ದೀರಿ ? ನಿಮ್ಮ ತೇಜಸ್ಸಿನಿಂದ ಸಾಗರದ ಸುತ್ತಲಿನ ನೀರು ಮರಳುತ್ತಲಿದೆ. '' ನಾನು ಹೀಗೆ ಪ್ರಶ್ನೆ ಮಾಡಿದರೂ ಅವರು ಏನೂ ಉತ್ತರ ಕೊಡಲಿಲ್ಲ. ಸುಮ್ಮನೆ ಹೊರಟು ಹೋದರು. ಅವರ ಹಿಂದಿನಿಂದ ಮತ್ತೊಬ್ಬ ತೇಜಸ್ವಿ ಮಹಾಪುರುಷನು ಕಡಲಿನ ಆಳದಿಂದ ಎದ್ದುಮೇಲೆ ಬಂದನು. ಅವನ ಚೆಲುವಿಗೆ ಎಣೆ ಇರಲಿಲ್ಲ. ತುಂಬಿದ ಮೋಡದಂತಿತ್ತು ಅವನ ಮೈಬಣ್ಣ. ಅವನ ಕಣ್ಣುಗಳೋ ಬಿರಿದ ತಾವರೆಯ ಪಕಳೆಗಳು. ನಾನು ಆ ತೇಜಸ್ವಿ ಪುರುಷನಿಗೆ ಮಣಿದು ಕೇಳಿದೆ :-

''ಮಹಾಪುರುಷ, ನೀನು ಯಾರು ? ಈ ಮೊದಲು ಇಲ್ಲಿಂದ ಎದ್ದು ಹೋದ ಹನ್ನೊಂದು ಜನ ಪುರುಷರು ಯಾರು ? ನಿಮ್ಮ ಉದ್ದೇಶವೇನು ? ತಿಳಿಸಬೇಕು. ಅದಕ್ಕೆ ಆ ಮಹಾಪುರುಷನು ಉತ್ತರಿಸಿದನು - ''ಇದೀಗ ನಿನ್ನ ಕಣ್ಣೆದುರು ಕಡಲಿನಿಂದ ಎದ್ದು ಹೋದ ಹನ್ನೊಂದು ಜನ ಪುರುಷರು ತೇಜೋಭಾಸುರರಾದ ಸೂರ್ಯರು. ಬ್ರಹ್ಮದೇವರು ಸೃಷ್ಟಿಯನ್ನು ಮಾಡಿದ ಬಳಿಕ ಇವರನ್ನು ನೆನೆದದ್ದರಿಂದ ಇವರು ಈಗ ಜಗತ್ತಿನ ಪಾಲನೆಗೆ ಹೊರಟಿದ್ದಾರೆ. '' ಅನಂತರ ನಾನು ''ಪೂಜ್ಯರೇ ತಾವು ಯಾರು ? ನಾನು ಶಿವ. ನನಗೆ ತಮ್ಮ ಪರಿಚಯವನ್ನು ಮಾಡಿಕೊಡಬೇಕು '' ಎಂದು ಕೇಳಿಕೊಂಡೆನು. ಅದಕ್ಕೆ ಆ ಪುರುಷ ಶ್ರೇಷ್ಠನು ನನ್ನನ್ನು ಕುರಿತು ಇಂತು ನುಡಿದನು - ''ನಾನು ಸನಾತನ ದೇವನಾದ ನಾರಾಯಣನು. ಪ್ರಳಯ ಕಾಲದ ಹೆಗ್ಗಡಲಿನ ನೀರಿನಮೇಲೆ, ಆಲದ ಎಲೆಯ ಮೇಲೆ ನಾನು ಮಲಗಿರುವುದರಿಂದ ನನಗೆ ಜಲಶಾಯಿ ಎಂದು ಹೆಸರು. ನಿನಗೆ ನಾನು ಈಗ ದಿವ್ಯ ದೃಷ್ಟಿಯನ್ನು ಕೊಡುತ್ತೇನೆ. ನೀನು ಪ್ರಯತ್ನಪೂರ್ವಕವಾಗಿ ನನ್ನ ಕಡೆಗೆ ನೋಡು. ''

ಆಗ ನಾನು ಭಗವಂತನು ಕೊಟ್ಟ ದಿವ್ಯ ಚಕ್ಷುಸ್ಸಿನಿಂದ ಅವನ ದಿವ್ಯ ರೂಪವನ್ನು ನೋಡಿದೆ. ಉರಿಯುವ ಸೂರ್ಯನಂತೆ ತೇಜಃಪುಂಜನಾದ ಆ ಪರಮಾತ್ಮನ ಆಕಾರವು

ಅಂಗುಷ್ಠ ಪ್ರಮಾಣ ಮಾತ್ರ. ಆದರೆ ಹೆಬ್ಬೆರಳಿನ ಆಕಾರದ ಆ ತೇಜೋಮೂರ್ತಿಯ ಹೊಕ್ಕಳದಲ್ಲಿ ಒಂದು ತಾವರೆಯು ಅರಳಿತ್ತು. ಆ ತಾವರೆಯಲ್ಲಿ ಬ್ರಹ್ಮದೇವನು ಕುಳಿತಿದ್ದನು. ಆ ಬ್ರಹ್ಮನ ಬಳಿಯಲ್ಲಿಯೇ ಶಿವನಾದ ನಾನು ನಿಂತಿದ್ದೆನು. ಅದನ್ನು ಕಂಡು ನನಗೆ ಪರಮಾನಂದವೂ, ಅತ್ಯಾಶ್ಚರ್ಯವೂ ಕೂಡಿಯೇ ಆದವು. ಮುಕ್ತ ಕಂಠದಿಂದ ನಾನು ಆ ಪರಮಾತ್ಮನನ್ನು ಸ್ತೋತ್ರ ಮಾಡಿದೆ.

ವರಾಹ ಪುರಾಣದಲ್ಲಿ ಎಪ್ಪತ್ತನೇ ಅಧ್ಯಾಯ ಮುಗಿದುದು



ಮಹಾದೇವ ಉವಾಚ

ಅಧ್ಯಾಯ - ೭೧

ಸಂಸಾರ ಚಕ್ರಭ್ರಮಣೈರನೇಕೈ:
ಕ್ವಚಿದ್ಭವಾನ್ದೇವವರಾದಿ ದೇವ
ಸನ್ಮಾರ್ಗಿಭಿಜ್ಞಾನವಿಶುದ್ಧ ಸತ್ವೈ:
ಉಪಾಸ್ಯತೇ ಕಿಂ ಪ್ರವದಾಮ್ಯಹಂ ತ್ವಾಮ್।

ದೇವ ವರನೇ, ಆದಿದೇವನೇ, ಸಂಸಾರ ಚಕ್ರದಲ್ಲಿ ಸುತ್ತುತ್ತಿರುವವರೂ ಸನ್ಮಾರ್ಗ ಗಾಮಿಗಳೂ, ಜ್ಞಾನದಿಂದ ಪರಿಶುದ್ಧ ಸತ್ವರೂ ಆದ ಹಲವರು ನಿನ್ನನ್ನು ಸರ್ವದಾ ಸೇವಿಸುತ್ತಿರುವರು. ಇಂತಹ ನಿನ್ನನ್ನು ನಾನು ಏನೆಂದು ಬಣ್ಣಿಸಲಿ !

ಏಕಂ ಭವಂತಂ ಪ್ರಕೃತೇಃ ಪರಸ್ತಾದ್:।
ಯೋ ವೇತ್ತಿ ವಾ ಸರ್ವವಿದಾದಿದೇವ।
ಗುಣಾ ನ ತೇ ತು ಪ್ರಸಭಂ ವಿಭೇಧ್ಯಾ
ವಿಶಾಲ ಮೂರ್ತಿರ್ಹಿ ಸುಸೂಕ್ಷ್ಮ ರೂಪಃ।
ವಾಗ್ಯೋನಿಮಾನ್ನೋ ವಿಗತೇಂದ್ರಿಯೋಽಸಿ।
ವಿಕರ್ಮ ಭಾವಾನ್ನವಿಗತ್ಯೈ ಕಕರ್ಮಾ।
ಸಂಸಾರವಾಂಸ್ತ್ವಂ ಹಿ ನ ತಾದೃಶೋಽಸಿ
ಪರಂ ವಪುರ್ದೇವ ವಿಶುದ್ಧಭಾವೈ:
ಸಂಸಾರ ವಿಚ್ಛಿತ್ತಿ ಕರೈರ್ಯಜದ್ಭಿ:
ಅತೋಽವಸೀಯೇತ ಚತುರ್ಭುಜಸ್ತ್ವಂ।
ಪರಂ ನ ಜಾನಂತಿ ಯತೋ ವಪುಸ್ತೇ
ದೇವಾದಯೋಪ್ಯದ್ಭುತ ಕಾರಣಂ ತತ್।

ಆದಿದೇವನೇ, ಅದ್ವಿತೀಯನಾದ ನಿನ್ನನ್ನು ಮೂಲ ಪ್ರಕೃತಿಗೆ ವಿಲಕ್ಷಣನನ್ನಾಗಿ ಯಾವನು ತಿಳಿಯುವನೊ ಅವನು ಸರ್ವಜ್ಞನು. ನಿನ್ನ ಗುಣಗಳಲ್ಲಿ ಭೇದವಿಲ್ಲ. ಬುದ್ಧಿ ಬಲದಿಂದ ನಿನ್ನ ರೂಪವನ್ನು ವಿವರಿಸಲಾಗುವುದಿಲ್ಲ. ನಮಗೆ ನೀನು ವಿಶಾಲ ಮೂರ್ತಿಯಾಗಿಯೂ, ಸೂಕ್ಷ್ಮರೂಪನಾಗಿಯೂ ವೇದ ಮೂಲ ಭೂತನಾಗಿಯೂ, ಸರ್ವಕರ್ತನಾಗಿಯೂ, ಕರ್ಮಲೇಪವಿಲ್ಲದವನಾಗಿಯೂ, ಪ್ರಾಕೃತ ಇಂದ್ರಿಯ

ರಹಿತನಾಗಿಯೂ, ಸಂಸಾರ ವಿಲ್ಲದವನಾಗಿದ್ದರೂ, ಸರ್ವ ಸಂಸಾರಿಯಾಗಿಯೂ ಕಾಣಿಸುತ್ತಿಯೇ, ದೇವ ಪರರೂಪನಾದ ನಿನ್ನನ್ನು ಸಂಸಾರ ವಿಚ್ಛೇದಕವಾದ ಪರಿಶುದ್ಧ ಭಾವದಿಂದ ಪೂಜಿಸುವರು (ನಿನ್ನನ್ನು) ಚತುರ್ಭುಜನೆಂದು ನಿಶ್ಚಯಿಸಿಕೊಳ್ಳುವರು. ದೇವತೆಗಳೇ ಮೊದಲಾದವರೂ ವಿಸ್ಮಯಕಾರಣವಾದ ನಿನ್ನ ರೂಪವನ್ನು ಅರಿಯರು.

**ಅತೋಽವತಾರೋಕ್ತ ತನುಂ ಪುರಾಣಮ್ ।**
**ಆರಾಧಯೇಯುಃ ಕಮಲಾಸನಾದ್ಯಾಃ ।**
**ನ ತೇ ವಪುರ್ವಿಶ್ವಸೃಗಬ್ಜಯೋನಿಃ**
**ಏಕಾಂತತೋ ವೇದ ಮಹಾನುಭಾವಃ ॥**

ಆದುದರಿಂದ ಬ್ರಹ್ಮನೇ ಮೊದಲಾದವರು ಪುರಾತನವಾದ ನಿನ್ನ ಮತ್ಸ್ಯಾದ್ಯವತಾರಗಳ ರೂಪವನ್ನೇ ಪೂಜಿಸುವರು. ದೇವ, ಪ್ರಪಂಚವನ್ನು ಸೃಷ್ಟಿಸುವ ಮಹಾನುಭಾವನಾದ ಬ್ರಹ್ಮನೂ ನಿನ್ನ ಪರರೂಪವನ್ನು ಪೂರ್ಣವಾಗಿ ತಿಳಿಯನು.

**ಪರಂ ತ್ವಹಂ ವೇದ್ಮಿ ಕವಿಂ ಪುರಾಣಮ್ ।**
**ಭವಂತಮಾದ್ಯಂ ತಪಸಾ ವಿಶುದ್ಧಃ ।**
**ಪದ್ಮಾಸನೋ ಮೇ ಜನಕಃ ಪ್ರಸಿದ್ಧಃ**
**ಚೇತಃ ಪ್ರಸೂತಾವಸಕೃತ್ಪುರಾಣೈಃ ॥**

ಆದರೆ ತಪಸ್ಸಿನಿಂದ ಪರಿಶುದ್ಧನಾದ ನಾನು ಕವಿಯೂ, ಪುರಾಣ ಪುರುಷನೂ, ಆದ್ಯನೂ ಆದ ನಿನ್ನನ್ನು ಯಥಾಶಕ್ತಿ ಬಲ್ಲೆನು. ಮಾನಸ ಸೃಷ್ಟಿಯಲ್ಲಿ ನನಗೆ ತಂದೆಯಾದ ಚತುರ್ಮುಖ ಬ್ರಹ್ಮನು ಹಲವು ವೇಳೆ ಪುರಾಣಗಳಿಂದ ಬ್ರಹ್ಮಜ್ಞನೆಂದು ಪ್ರಸಿದ್ಧನಾಗಿ ಲೋಕದ ಅರಿಕೆಗೆ ಬಂದಿರುವನು.

**ಸಂಬುಧ್ಯತೇ ನಾಥ ನ ಮದ್ವಿಧಾ ಹಿ ।**
**ವಿದುರ್ಭವಂತಂ ತಪಸಾ ವಿಹೀನಾಃ**
**ಬ್ರಹ್ಮಾದಿಭಿಸ್ತ್ವತ್ರವರ್ಯೈರಬೋಧ್ಯಂ**
**ತ್ವಾಂ ದೇವರೂಪಾಃ ಪ್ರಣಮಂತಿ ನಿತ್ಯಮ್**

ನಾಥ, ನಿನ್ನನ್ನು ಮಾತ್ರ ತಪೋಹೀನರಾದರೆ ನನ್ನಂಥವರು ಕೂಡ ಸರಿಯಾಗಿ ಅರಿಯಲಾರರು. ಆದುದರಿಂದ ಬಹು ಶ್ರೇಷ್ಠರಾದ ಬ್ರಹ್ಮನೇ ಮೊದಲಾದವರೂ ಪೂರ್ಣವಾಗಿ ಅರಿಯದಿರುವ ನಿನ್ನನ್ನು ದೇವತೆಗಳು ಅರಿಯಲು ಯಾವಾಗಲೂ ವಂದಿಸುತ್ತಿರುವರು.

**ಸೃಷ್ಟಿಂ ಸೃಜಸ್ವೇತಿ ತವೋದಿತಸ್ಯ ।**
**ಸರ್ವಜ್ಞತಾಂ ದೇಹಿ ನಮೋಽಸ್ತು ವಿಷ್ಣೋ ।**
**ಚತುರ್ಮುಖೋ ವಾ ಯದಿ ಕೋಟಿ ವಕ್ತ್ರೋ**
**ಭವೇನ್ನರಃ ಕೋಪಿ ವಿಶುದ್ಧ ಚೇತಾಃ**
**ಸ ತೇ ಗುಣಾನಾಮಯುತಾಕಮಂಶಂ ।**
**ವದೇತ್ತದಾ ದೇವವರ ಪ್ರಸೀದ ।**

**ಸಮೋ ವಿಯುಕ್ತಸ್ಯ ವಿಶುದ್ಧ ಭಾವ-**
**ಸದ್ಭಾವಭಾವೈಕಮನೋನುಗಸ್ಯ**

ವಿಷ್ಣುವೇ, ನಿನಗೆ ನಮಸ್ಕಾರ, ಸೃಷ್ಟಿಯನ್ನು ಮಾಡೆಂದು ನಿನ್ನಿಂದ ಆಜ್ಞಪ್ತನಾದ ನನಗೆ (ಅದಕ್ಕೆ ಬೇಕಾದ) ಸರ್ವಜ್ಞತೆಯನ್ನು ಕೊಡು. ಚತುರ್ಮುಖ ಬ್ರಹ್ಮನಾಗಲಿ, ಪರಿಶುದ್ಧ ಚಿತ್ತನಾದ ಬೇರೆ ಕೋಟಿಮುಖವುಳ್ಳ ಮನುಷ್ಯನೇ ಆಗಲಿ (ಪರಮಾತ್ಮ ಸ್ವಭಾವದಲ್ಲಿ ಅಭಿಪ್ರಾಯವುಳ್ಳ ವಿರಕ್ತನಾದ ಅವನಿಗೆ ಸರಿಯಾದ ಪರಿಶುದ್ಧ ಭಾವವುಂಟಾದರೆ ಆಗ) ಅವನು ನಿನ್ನ ಹತ್ತು ಸಾವಿರ ಗುಣಗಳಲ್ಲಿ ಒಂದು ಭಾಗವನ್ನು ಮಾತ್ರ ಹೇಳಬಲ್ಲನು. ದೇವೋತ್ತಮನೇ ಪ್ರಸನ್ನನಾಗು.

**ಸದಾ ಹೃದಿಸ್ಥೋಽಸಿ ಭಗವನ್ನಮಸ್ತೇ**
**ನ ಸರ್ವಗಸ್ಯಾಸ್ತಿ ಪೃಥಗ್ವ್ಯವಸ್ಥಾ ।**
**ಇತಿ ಪ್ರಕಾಶಂ ಕೃತಮೇತದೀಶ**
**ಸ್ತವಂ ಮಯಾ ಸರ್ವಗತಂ ವಿಬುದ್ಧ್ವಾ।**
**ಸಂಸಾರ ಚಕ್ರ ಕ್ರಮಮಾಣಯುಕ್ತ್ಯಾ**
**ಭೀತಂ ಪುನೀಹ್ಯಚ್ಯುತ ಕೇವಲ ತ್ವಂ ।**

ಈಶನೇ ನೀನು ಸದಾ ನನ್ನ ಹೃದಯದಲ್ಲಿಯೇ ನೆಲೆಸಿರುವೆ. ಸರ್ವಗನಾದವನಿಗೆ ಬೇರೆಯಾದ ಇರುವು (ನೆಲೆ) ಒಂದಿಲ್ಲ. ನೀನು ಸರ್ವಗತನು ಎಂದರಿತೂ ಹೀಗೆ ನಾನು ಈ ಸ್ತುತಿಯನ್ನು ಪ್ರಕಾಶ ಪಡಿಸಿರುವೆನು. ಸಂಸಾರ ಚಕ್ರದಲ್ಲಿ ಸುತ್ತುವುದರಲ್ಲಿ ಭೀತನಾಗಿರುವ ನನ್ನನ್ನು ಶುದ್ಧನೂ ಅಚ್ಯುತನೂ ಆದ ನೀನು ಪವಿತ್ರನನ್ನಾಗಿ ಮಾಡು. ನಿನಗೆ ನಮಸ್ಕಾರ. ಈ ರೀತಿಯಾಗಿ ಮಹಾತೇಜಸ್ವಿಯಾದ ರುದ್ರದೇವನು ಮಾಡಿದ ಸ್ತೋತ್ರದಿಂದ ಶ್ರೀ ಹರಿಯು ಪ್ರಸನ್ನನಾದನು. ತುಂಬಿದ ಮೋಡದಂತೆ ಗಂಭೀರವಾದ ಧ್ವನಿಯಿಂದ ಸಂತಸಗೊಂಡು ಮಾತನಾಡಿದನು.

''ಉಮಾಪತಿಯೇ, ನಿನಗೆ ಕಲ್ಯಾಣವಾಗಲಿ, ನಿನಗೆ ಬೇಕಾದ ವರವನ್ನು ಬೇಡು. ನಾವಿಬ್ಬರೂ ಎಂದಿನಿಂದಲೂ ಒಂದು. ನಮ್ಮಲ್ಲಿ ದ್ವೈಧೀ ಭಾವವಿಲ್ಲ.'' ಆಗ ಮಹಾದೇವನು ಪ್ರಸನ್ನನಾದ ಶ್ರೀಹರಿಯನ್ನು ಕೇಳಿಕೊಂಡನು.

''ಸರ್ವಾಂತರ್ಯಾಮಿಯಾದ ಪ್ರಭುವೇ, ಪ್ರಜೆಗಳನ್ನು ಸೃಷ್ಟಿ ಮಾಡು ಎಂದು ಬ್ರಹ್ಮದೇವರು ನನಗೆ ಆದೇಶವಿತ್ತಿದ್ದಾರೆ. ಆ ಸರ್ಜನ ಕಾರ್ಯಕ್ಕೆ ಬೇಕಾಗುವ ತ್ರಿವಿಧ ಜ್ಞಾನವನ್ನು ಕರುಣಿಸು. ಅದನ್ನು ಕೇಳಿ ಶ್ರೀಹರಿಯು ತಥಾಸ್ತು ಎಂದು ಹೇಳಿ ''ನೀನು ಇನ್ನು ಮೇಲೆ ಸರ್ವಜ್ಞನೂ ಜ್ಞಾನರಾಶಿಯೂ ಆಗಿ ದೇವತೆಗಳಿಗೆಲ್ಲ ಪರಮಪೂಜ್ಯನೂ ಆಗುವೆ. ಇದರಲ್ಲಿ ಸಂದೇಹವಿಲ್ಲ'' ಎಂದು ವರವಿತ್ತು ಅನುಗ್ರಹಿಸಿದನು. ಆಗ ಮಹಾದೇವನು ಶ್ರೀ ವಿಷ್ಣುವಿಗೆ ಇನ್ನೂ ವರವನ್ನು ಕೊಡಬೇಕೆಂದು ಕೇಳಿಕೊಂಡನು.

''ಕೇಶವಾ, ನೀನು ಭೂಲೋಕದಲ್ಲಿ ಮಾನವನಂತೆ ಅವತಾರ ಮಾಡಿ ನನ್ನನ್ನು ಆರಾಧನೆ ಮಾಡು. ನನ್ನನ್ನು ಕುರಿತು ತಪಸ್ಸು ಮಾಡು. ನನ್ನನ್ನು ವಹಿಸಿ ನನ್ನಿಂದ ವರ ಪಡೆದುಕೋ. ಇದರಿಂದ ನಿನ್ನ ಸರ್ವದೇವೋತ್ತಮತ್ವಕ್ಕೆ ಇನಿತೂ ಚ್ಯುತಿಯಿಲ್ಲ. ಪ್ರತ್ಯುತ

ಮತ್ತಿಷ್ಟು ದೇವತೆಗಳಿಗೆ ಪರಮ ಪೂಜ್ಯನು ಆಗುವೆ'' ರುದ್ರನ ಈ ವರವನ್ನು ಕೇಳಿ ಶ್ರೀ ಹರಿಯು ಪ್ರಸನ್ನನಾಗಿ ನುಡಿದನು -

''ರುದ್ರ, ನೀನು ಬೇಡಿದಂತೆ ಎಲ್ಲ ವರಗಳನ್ನು ಕೊಟ್ಟಿದ್ದೇನೆ. ನಿನ್ನ ಪ್ರಾರ್ಥನೆಯಂತೆ ದೇವತಾ ಕಾರ್ಯಕ್ಕಾಗಿ ನಾನು ಭೂತಳದಲ್ಲಿ ಅವತರಿಸಿದಾಗ ನಿನ್ನನ್ನು ಆರಾಧಿಸಿ ವರವನ್ನು ಪಡೆದುಕೊಳ್ಳುತ್ತೇನೆ. ಮತ್ತು ನೀನು ನನ್ನನ್ನು ವಹಿಸು'' ಎಂದು ಕೇಳಿಕೊಂಡ ಮಾತಿನಂತೆ ನಾನು ಮೋಡರೂಪದಿಂದ ನಿನ್ನನ್ನು ನೀರಿನಿಂದ ಮೇಲೆಕ್ಕೆ ಎತ್ತುವೆನು. ನನಗಿಂತ ಮೊದಲು ನಿನ್ನ ಕಣ್ಣೆದುರು ಹಾಯ್ದು ಹನ್ನೊಂದು ಜನ ಆದಿತ್ಯರು ಈಗ ತೇಜೋಲೋಕ ದಿಂದ ಭೂಲೋಕಕ್ಕೆ ಬಂದಿರುತ್ತಾರೆ. ಈ ಆದಿತ್ಯ ಗಣದ ಕೊನೆಯ ಹನ್ನೆರಡನೆಯ ಆದಿತ್ಯನು ನಾನೇ. ನಾನು ಭೂಮಿಯಲ್ಲಿ ಕೃಷ್ಣರೂಪ ದಿಂದ ಅವತರಿಸಿ ನಿನ್ನನ್ನು ಆರಾಧಿಸುತ್ತೇನೆ'' ಹೀಗೆ ಶ್ರೀಹರಿಯು ಮಹಾದೇವನಿಗೆ ವಚನವಿತ್ತ ಪ್ರಕಾರ ತನ್ನ ಅಂಶದಿಂದ ದಿವ್ಯವಾದ ಒಂದು ಮೇಘ ಮಂಡಲವನ್ನು ಸೃಷ್ಟಿಸಿ ನನ್ನನ್ನೂ ಹೊತ್ತು ಅದೃಶ್ಯನಾದನು. ಈ ರೀತಿಯಾಗಿ ಸರ್ವಾಂತರ್ಯಾಮಿ ಯಾಗಿ ಸರ್ವಾಧಾರನೂ ಆದ ಆ ಶ್ರೀ ಹರಿಯ ವರದ ಬಲದಿಂದಲೇ ನಾನು ದೇವತೆಗಳಲ್ಲಿ ಶ್ರೇಷ್ಠನಾದ ಮಹಾದೇವ ಎಂದು ಪೂಜಿತನಾಗಿದ್ದೇನೆ. ನಿಜವಾದ ನಿತ್ಯ ಸತ್ಯವಾದ ಸಂಗತಿ ಎಂದರೆ ನಾರಾಯಣನಿಗಿಂತ ಶ್ರೇಷ್ಠನಾದ ದೇವರು ಹಿಂದೆ ಆಗಿಲ್ಲ. ಮುಂದೆ ಆಗುವುದೂ ಇಲ್ಲ. ಇದೇ ಎಲ್ಲ ಪುರಾಣಗಳ ರಹಸ್ಯಾರ್ಥವಾಗಿದೆ. ಇದನ್ನು ನಾನು ನಿಮಗೆ ಈ ರುದ್ರಗೀತೆಯ ನೆವದಿಂದ ಹೇಳುದ್ದೇನೆ.

## ರುದ್ರ ಉವಾಚ

**ಏವಮೇಷ ಹರಿರ್ದೇವಃ ಸರ್ವಗಃ ಸರ್ವಭಾವನಃ।**
**ವರದೋಽಭೂತ್ ಪುರಾ ಮಹ್ಯಂ ತೇನಾಹಂ ದೈವತೈರ್ವರಃ॥**
**ನಾರಾಯಣಾತ್ಪರೋ ದೇವೋ ನ ಭೂತೋ ನ ಭವಿಷ್ಯತಿ।**
**ಏತದ್ರಹಸ್ಯಂ ವೇದಾನಾಂ ಪುರಾಣಾನಾಂ ಚ ಸತ್ತಮ।**

*ವರಾಹ ಪುರಾಣದಲ್ಲಿ ಎಪ್ಪತ್ತೊಂದನೇ ಅಧ್ಯಾಯ ಮುಗಿದುದು*

—o—

ಎಲ್ಲ ಋಷಿಗಳು ರುದ್ರದೇವರ ತಾತ್ವಿಕ ಉಪದೇಶವನ್ನು ಭಕ್ತಿ ಭರಿತರಾಗಿ ಕೇಳಿದ ಬಳಿಕ ಅವರ ಮುಖದಿಂದ ಇನ್ನೂ ಹೆಚ್ಚಿನ ವಿಷಯಗಳನ್ನು ಆಲಿಸಬೇಕೆಂದು ವಿಶೇಷ ಕೌತುಕ ಉಂಟಾಯಿತು. ಆಗ ಅವರೆಲ್ಲರೂ ರುದ್ರದೇವರಿಗೆ ಭೂಮಿಯ ಪ್ರಮಾಣವನ್ನೂ ಪರ್ವತಗಳ ವಿಸ್ತಾರವನ್ನೂ ಹೇಳಬೇಕೆಂದು ಕೇಳಿದರು. ಅವರ ಬಿನ್ನಹವನ್ನು ಮನ್ನಿಸಿ ರುದ್ರದೇವರು ಭೂಮಂಡಲದ ಗಿರಿಧರೆಗಳ ಸ್ಥಾನಮಾನಗಳನ್ನೂ ಅಗಲ ಆಳಗಳನ್ನೂ ಎತ್ತರ ಬಿತ್ತರಗಳನ್ನೂ ನಿರೂಪಿಸಲು ಪ್ರಾರಂಭಿಸಿದರು.

''ಆದಿ ಪುರುಷನಾದ ಶ್ರೀಮನ್ ನಾರಾಯಣನು ಸೃಷ್ಟಿಯ ಆದಿ ಕಾಲದಲ್ಲಿ ಮೊಟ್ಟ ಮೊದಲು ಬ್ರಹ್ಮದೇವರನ್ನು ನಿರ್ಮಿಸಿದನು. ಆ ಬ್ರಹ್ಮದೇವರು ಮೊದಲು ಸನಕ, ಸನಂದನ, ಸನಾತನ, ಸನತ್‌ಕುಮಾರ ಮುಂತಾದ ಮಹಾಜ್ಞಾನಿಗಳನ್ನೂ ಅನಂತರ ಸ್ವಾಯಂಭುವಮನುವನ್ನೂ ಮತ್ತು ಮರೀಚಿ, ದಕ್ಷ ಮುಂತಾದ ಪ್ರಜಾಪತಿಗಳನ್ನೂ ನಿರ್ಮಿಸಿದನು. ಆ ಸ್ವಾಯಂಭುವ ಮನುವಿಗೆ ಪ್ರಿಯವ್ರತ, ಉತ್ತಾನಪಾದ ಎಂಬ ಇಬ್ಬರು ಮಕ್ಕಳಾದರು. ಪ್ರಿಯವ್ರತನಿಗೆ ಅಗ್ನೀಧ್ರ, ಅಗ್ನಿಬಾಹು, ಮೇಧ, ಮೇಧಾತಿಥಿ, ಧ್ರುವ, ಜ್ಯೋತಿಷ್ಮಂತ, ದ್ಯುತಿಮಂತ, ಹವ್ಯ, ವಪುಷ್ಮಂತ, ಸವನ ಎಂಬ ಹತ್ತು ಜನ ಗಂಡು ಮಕ್ಕಳಾದರು.

ಎರಡನೆಯವನಾದ ಆ ಪ್ರಿಯವ್ರತನು ಸಪ್ತ ದ್ವೀಪಗಳಲ್ಲೂ ತನ್ನ ಏಳು ಜನ ಮಕ್ಕಳನ್ನು ಇಟ್ಟನು. ಅವರಲ್ಲಿ ಅಗ್ನೀಧ್ರನನ್ನು ಜಂಬೂದ್ವೀಪದ ದೊರೆಯನ್ನಾಗಿ ಮಾಡಿದನು. ಮೇಧಾತಿಥಿಯನ್ನು ಶಾಕದ್ವೀಪಕ್ಕೂ, ಜ್ಯೋತಿಷ್ಮಂತನನ್ನೂ ಶಾಲ್ಮಲಿ ದ್ವೀಪಕ್ಕೂ, ದ್ಯುತಿಮಂತನನ್ನು ಕ್ರೌಂಚದ್ವೀಪಕ್ಕೂ, ಹವ್ಯನನ್ನು ಗೋಮೇದಕ್ಕೂ, ವಪುಷ್ಮಂತನನ್ನು ಪ್ಲಕ್ಷ ದ್ವೀಪಕ್ಕೂ, ಸವನನನ್ನು ಪುಷ್ಕರ ದ್ವೀಪಕ್ಕೂ ಒಡೆಯರನ್ನಾಗಿ ಮಾಡಿದನು.

ಪುಷ್ಕರಾಧಿಪತಿಯಾದ ಸವನನಿಗೆ ಮಹಾವೀರ, ಧಾತಕ ಎಂಬಿಬ್ಬರು ಗಂಡು ಮಕ್ಕಳಾದರು. ಅವರಿಬ್ಬರ ಹೆಸರಿನಿಂದ ಆ ಎರಡು ದೇಶಗಳು ಹೆಸರು ಗೊಂಡವು. ಧಾತಕನದು ಧಾತಕೀಖಂಡವೆಂದೂ ಕುಮುದನದು ಕೌಮುದೀಖಂಡ ವೆಂದೂ ಹೆಸರನ್ನು ಪಡೆಯಿತು. ಶಾಲ್ಮಲಿದ್ವೀಪಾಧಿಪನಾದ ಜ್ಯೋತಿಷ್ಮಂತನಿಗೂ ಕುಶ, ವೈದ್ಯುತ, ಜೀಮೂತ ವಾಹನರೆಂಬ ಮೂವರು ಪುತ್ರರು ಉದಿಸಿದರು. ಅವರು ಆಳುತ್ತಿದ್ದ ದೇಶಗಳು ಅವರ ಹೆಸರು ಉಳ್ಳವುಗಳಾದವು. ದ್ಯುತಿಮಂತನಿಗೆ ಕುಶಲ, ಮನು, ಗವ್ಯ, ಪೀವರ, ಅಘ್ರಾಂದ, ತಾರಕಮುನಿ, ದುಂದುಭಿ ಎಂಬ ಏಳು ಜನ ಗಂಡು ಮಕ್ಕಳು. ಅವರ ಹೆಸರುಗಳಿಂದ ಕ್ರೌಂಚದ್ವೀಪದಲ್ಲಿ ಏಳು ಮಹಾದೇಶಗಳಾದವು.

ಕುಶದ್ವೀಪಾಧಿಪತಿಯಿಂದ ಜ್ಯೋತಿಷ್ಮಂತನಿಗೆ ಉದ್ಭಿದ, ವೇಣುಮಂತ, ರಥಪಾಲ, ಮನು, ಧೃತಿ, ಪ್ರಭಾಕರ, ಕಪಿಲ ಎಂಬ ಏಳು ಜನ ಗಂಡು ಮಕ್ಕಳು. ಅವರವರ ದೇಶಗಳು ಅವರವರ ಹೆಸರುಗಳುಳ್ಳವುಗಳಾದವು. ಶಾಕದ್ವೀಪಾಧಿಪತಿಯಾದ ಮೇಧಾತಿಥಿಗೆ ನಾಭಿ, ಶಾಂತ, ಭವಶಿಶಿರ, ಮಖೋದ್ಗಮ, ನಂದ, ಶಿವಕ್ಷೇಮ, ಧ್ರುವರೆಂಬ ಏಳು ಜನ ಗಂಡು ಮಕ್ಕಳು. ವರ್ಷಗಳೂ ಅವರ ಹೆಸರಿನವೇ. ನಾಭಿರಾಜನದು ಹೈಮವತ (ಭಾರತ)

ಎನಿಸುವದು. ಹೇಮಕೂಟದವರೆಗೆ ಕಿಂಪುರುಷವರ್ಷ. ಅದರಿಂದ ಆಚೆ ನಿಷಧಪರ್ವತದ ವರೆಗಿನದು ಹರಿವರ್ಷ. ಮೇರುವನ್ನು ಮಧ್ಯದಲ್ಲಿ ಪಡೆದಿರುವದು ಇಲಾವ್ರತವರ್ಷ. ಬಳಿಕ ಇಲಾವ್ರತದ ಉತ್ತರಕ್ಕೆ ನೀಲದಿಂದಾಚೆ (ನೀಲಶ್ವೇತಗಳ ಮಧ್ಯೆ) ರಮ್ಯಕ ವರ್ಷ. ಶ್ವೇತ ಪರ್ವತದಿಂದ ಉತ್ತರಕ್ಕೆ ಶೃಂಗವತ್ಪರ್ವತದವರೆಗೆ ಹಿರಣ್ಮಯವರ್ಷ. ಶೃಂಗವತ್ಪರ್ವತಕ್ಕೆ ಉತ್ತರದಲ್ಲಿ ಕುರುವರ್ಷ. ಇಲಾವ್ರತಕ್ಕೆ ಪೂರ್ವದಲ್ಲಿ ಮಾಲ್ಯವತ್ಪರ್ವತವಿರುವುದು ಭದ್ರಾಶ್ವವರ್ಷ. ಇಲಾವ್ರತಕ್ಕೆ ಪಶ್ಚಿಮದಲ್ಲಿ ಗಂಧಮಾದನ ಪರ್ವತವಿರುವುದು ಕೇತುಮಾಲವರ್ಷ. ಸ್ವಾಯಂಭುವ ಮನ್ವಂತರದಲ್ಲಿ ಲೋಕದ ಸ್ಥಿತಿಯು ಇರುವುದು ಹೀಗೆ. ಪ್ರತಿ ಕಲ್ಪದಲ್ಲಿಯೂ ಹೀಗೆ ಏಳೇಳು ಜನ ರಾಜರಿಂದ ಭೂಮಿಯ ರಕ್ಷಣೆಯ ವ್ಯವಸ್ಥೆಯು ಮಾಡಲ್ಪಡುತ್ತದೆ. ಕಲ್ಪದ ಈ ಸ್ವಭಾವವು (ಸ್ಥಿತಿಯು) ಯಾವಾಗಲೂ ಇರುತ್ತದೆ.

ಇನ್ನು ನಾಭಿಯ ಸೃಷ್ಟಿಯನ್ನು ಹೇಳುತ್ತೇನೆ. ಅಗ್ನೀಧ್ರಪುತ್ರನಾದ ನಾಭಿರಾಜನು ಮೇರುದೇವಿಯಲ್ಲಿ ಋಷಭನೆಂಬ ಹೆಸರಿನ ಮಗನನ್ನು ಪಡೆದನು. ಋಷಭನಿಗೆ ಭರತನು ಹಿರಿಯ ಮಗನಾಗಿ ಜನಿಸಿದನು. ಆ ಭರತನ ತಂದೆಯಾದ ಋಷಭನು ಮೇರುಗಿರಿಯ ದಕ್ಷಿಣದ ದೊಡ್ಡದಾದ ಭರತಖಂಡವೆಂಬುದನ್ನು ಆಳಿದನು. ಭರತನ ಮಗನು ಸುಮತಿಯೆಂಬುವನು. ಅವನಿಗೆ ರಾಜ್ಯವನ್ನು ಕೊಟ್ಟು ಭರತನು ವನಕ್ಕೆ ಹೋದನು. ಸುಮತಿಯ ಮಗನು ತೇಜನೆಂಬುವನು. ತೇಜನಿಗೆ ಸತ್ಸುತನೂ, ಸತ್ಸುತನಿಗೆ ಇಂದ್ರದ್ಯುಮ್ನನೂ, ಇಂದ್ರದ್ಯುಮ್ನನಿಗೆ ಪರಮೇಷ್ಠಿಯೆಂಬುವನೂ, ಪರಮೇಷ್ಠಿಗೆ ಪ್ರತಿಹರ್ತೃವೂ, ಪ್ರತಿಹರ್ತೃವಿಗೆ ನಿಖಾತನೂ, ನಿಖಾತನಿಗೆ ಉನ್ನೇತೃವೂ, ಉನ್ನೇತೃವಿಗೆ ಅಭಾವನೂ, ಅಭಾವನಿಗೆ ಉದ್ಗಾತ್ರವೂ, ಉದ್ಗಾತ್ರವಿಗೆ ಪ್ರಸ್ತೋತೃನೂ, ಪ್ರಸ್ತೋತೃನಿಗೆ ವಿಭುವೂ, ವಿಭುವಿಗೆ ಪ್ರಭುವೂ, ಪ್ರಭುವಿಗೆ ಅನಂತನೂ ಉದಿಯಿಸಿದನು. ಅನಂತನಿಗೆ ಗಯನೂ, ಗಯನಿಗೆ ನಯನೆಂಬುವವನೂ, ನಯನಿಗೆ ವಿರಾಟನೂ ಪುತ್ರರಾದರು. ಮಹಾವೀರನಾದ ವಿರಾಟನಿಗೆ ಸುಧೀಮಂತನೆಂಬ ಪುತ್ರನು ಉದಯಿಸಿದನು. ಆತನಿಗೆ ನೂರು ಜನ ಗಂಡುಮಕ್ಕಳುದಿಸಿದರು. ಅವರಿಂದ ಈ ಪ್ರಜೆಗಳು ವೃದ್ಧಿಯನ್ನೈದಿದರು. ಅವರಿಂದ ಈ ಭಾರತವರ್ಷವೂ, ಸಪ್ತದ್ವೀಪವೂ ತುಂಬಿತು. ಅವರ ಸಂತತಿಯವರು ಈ ಉತ್ತರಭೂಮಿಯನ್ನನುಭವಿಸಿದರು. ಕೃತ, ತ್ರೇತಾದಿ, ಚತುರ್ಯುಗಗಳು ಎಪ್ಪತ್ತೊಂದು ಆದರೆ ಒಂದು ಮನ್ವಂತರವಾಗುವುದು. ಭೂಮಿಯ ವಿಚಾರವನ್ನು ಹೇಳುತ್ತ, ಶುಭವಾದ ಈ ಸ್ವಾಯಂಭುವ ಮನ್ವಂತರವನ್ನು ಹೇಳಿದನು.

*ವರಾಹ ಪುರಾಣದಲ್ಲಿ ಎಪ್ಪತ್ತೆರಡನೇ ಅಧ್ಯಾಯ ಮುಗಿದುದು.*

—o—

**ಋದ್ರ :-** ಇನ್ನು ಮುಂದೆ ಜಂಬೂದ್ವೀಪದ ವಿಚಾರವನ್ನು ಹೇಳುತ್ತೇನೆ. ಸಮುದ್ರಗಳ ಸಂಖ್ಯೆಯನ್ನು, ದ್ವೀಪಗಳ ವಿಸ್ತಾರವನ್ನು, ವರ್ಷ (ಭೂಭಾಗ)ಗಳನ್ನು, ಅವುಗಳಲ್ಲಿರುವ ನದಿಗಳಾವುವು ಎಂಬುದನ್ನೂ ಹೇಳುತ್ತೇನೆ. ಮಹಾಭೂತಗಳ ಪ್ರಮಾಣವನ್ನೂ ಬೇರೆಬೇರೆಯಾಗಿ ಚಂದ್ರಸೂರ್ಯರ ಗತಿಯನ್ನೂ, ಸಪ್ತ ದ್ವೀಪಗಳಲ್ಲಿ ಅಂತರ್ಗತವಾಗಿರುವ ಸಾವಿರಾರು ದ್ವೀಪಗಳ ವ್ಯತ್ಯಾಸವನ್ನೂ ಇಲ್ಲಿ ಕ್ರಮವಾಗಿ ಹೇಳಲು ಸಾಧ್ಯವಾಗುವದಿಲ್ಲ. ನವ (ಒಂಬತ್ತು) ವರ್ಷಗಳುಳ್ಳ ಜಂಬುದ್ವೀಪದ ವಿಸ್ತಾರವನ್ನೂ ದಿಟವಾಗಿ ಯೋಜನ ಪ್ರಮಾಣಗಳಿಂದ ಹೇಳುತ್ತೇನೆ.

ಜಂಬೂದ್ವೀಪವು, ಒಂದು ಲಕ್ಷ ಯೋಜನ ವಿಸ್ತಾರವುಳ್ಳದ್ದಾಗಿದೆ, ಸುತ್ತಲೂ ಹಲವು ದೇಶಗಳಿಂದ ಕೂಡಿ, ಬಗೆಬಗೆಯಾದ ಶುಭಗಳುಳ್ಳದಾಗಿ ಸಿದ್ಧಚಾರಣರಿಂದ ನಿಬಿಡವಾದುದಾಗಿದೆ. ಎಲ್ಲೆಡೆಯಲ್ಲಿಯೂ ಸರ್ವಧಾತುಗಳನ್ನು ಹೆಚ್ಚಾಗಿ ಪಡೆದಿರುವ ಬಂಡೆಗಳಿಂದ ಕೂಡಿದ ಪರ್ವತಗಳ ಸೊಗಸುಳ್ಳದ್ದಾಗಿದೆ. ಪರ್ವತಗಳಿಂದ ಹುಟ್ಟುವ ನದಿಗಳಿಂದ ಕೂಡಿದ ಇದು ಐಶ್ವರ್ಯ ಕಾಂತಿಯುಳ್ಳದ್ದೂ, ದೊಡ್ಡದೂ ಆಗಿದೆ. ಎಲ್ಲ ಕಡೆಯಲ್ಲೂ ಮಂಡಲಾಕಾರವಾಗಿ, ನವ (ಒಂಭತ್ತು) ವರ್ಷ (ಭೂಭಾಗ) ಗಳಿಂದ ಕೂಡಿದುದೂ, ಶ್ರೀಮಂತನಾದ ನಾರಾಯಣನು ನೆಲೆಸಿದುದೂ ಆಗಿದೆ.

ಜಂಬೂದ್ವೀಪದ ವಿಸ್ತಾರಕ್ಕೆ ಸರಿಯಾಗಿ ಉಪ್ಪುನೀರಿನ ಸಮುದ್ರವು ಅದನ್ನು ಎಲ್ಲಾ ಕಡೆಯಲ್ಲೂ ಸುತ್ತಿಕೊಂಡಿದೆ. ಅದರಲ್ಲಿ ಪೂರ್ವಕ್ಕೆ ಹಬ್ಬಿ, ಅತಿದೀರ್ಘವಾದ ಮುಂದೆ ಹೇಳುವ ಆರು ಪರ್ವತಗಳು ಎರಡು ಕಡೆಗಳಲ್ಲಿಯೂ ಪೂರ್ವಪಶ್ಚಿಮ ಸಮುದ್ರಗಳನ್ನು ಪ್ರವೇಶಿಸಿರುವವು. ಅವುಗಳಲ್ಲಿ ಹಿಮವತ್ಪರ್ವತವು ಹಿಮಮಯವಾದುದು. ಹೇಮಕೂಟವೆಂಬುದು ಸುವರ್ಣ ಮಯವಾದುದು. ದೊಡ್ಡದಾದ ನಿಷಧವು ಎಲ್ಲೆಡೆಯಲ್ಲೂ ಅತಿಸುಖಕರವಾದುದು. ಈ ವರ್ಷ ಪರ್ವತಗಳ ಮೂರರ ಉತ್ತರದಲ್ಲಿ ಸುವರ್ಣಾದ್ರಿಯೆನಿಸಿಕೊಂಡಿರುವ ನಾನು ಹೇಳಿದ ಮೇರು ಪರ್ವತವು ನಾಲ್ಕು ಬಣ್ಣಗಳುಳ್ಳದಾಗಿರುವುದು. ಮೇರುವು ವೃತ್ತಾಕೃತಿಯುಳ್ಳದಾಗಿ ನಿಂತಿದೆ. ಸುಂದರವಾದ ಪಾರ್ಶ್ವಗಳಲ್ಲಿ ಅದು ಹಲವು ಬಣ್ಣಗಳುಳ್ಳದ್ದಾಗಿ ಬ್ರಹ್ಮ ಗಣದಿಂದ ಕೂಡಿದುದಾಗಿದೆ.

ಮೇರುವಿಗೆ ಉತ್ತರದಲ್ಲಿ ವೈಡೂರ್ಯಮಯವಾದ ನೀಲಪರ್ವತವೂ, ಹಿರಣ್ಮಯವಾಗಿ ಬೆಳ್ಳಗಿರುವ ಶ್ವೇತಪರ್ವತವೂ, ಸುವರ್ಣಮಯವಾಗಿ ನವಿಲುಗರಿಯ ಬಣ್ಣದಿಂದಿರುವ ಶೃಂಗವತ್ ಪರ್ವತವೂ ಇದೆ. ಶ್ರೇಷ್ಠವಾದ ಈ ಮೂರುವರ್ಷ ಪರ್ವತಗಳೂ ಸಿದ್ಧಚಾರಣರು ವಿಹರಿಸತಕ್ಕಂತಹ ರಮ್ಯ ವನಗಳಾಗಿವೆ. ಅವುಗಳ ನಡುವೆ ಇರುವ ವಿಸ್ತಾರವು ಒಂಬತ್ತು ಸಾವಿರ ಯೋಜನವೆನ್ನುವರು.

ಜಂಬೂದ್ವೀಪದ ನಡುವೆ ಮೇರುವಿನಿಂದುದಿಸಿದ ಇಲಾವ್ರತವೆಂಬ ವರ್ಷವಿದೆ. ಅದು ಮೇರುವಿನ ಸುತ್ತಲೂ ಒಂಭತ್ತು ಸಾವಿರ ಯೋಜನವುಳ್ಳದ್ದಾಗಿದೆ. ಇಲಾವೃತದ ಮಧ್ಯದಲ್ಲಿ ಮಹಾಮೇರುವು ಹೊಗೆಯಿಲ್ಲದ ಅಗ್ನಿಯಂತಿದೆ. ಮೇರುಪರ್ವತದ ಆಧಾರಕ್ಕಾಗಿ ದಕ್ಷಿಣೋತ್ತರಭಾಗಗಳಲ್ಲಿ ಆರುವರ್ಷಗಳಲ್ಲೂ ವರ್ಷಪರ್ವತಗಳಿವೆ.

ವರ್ಷಪರ್ವತಗಳೆಲ್ಲವೂ ತುದಿಯಲ್ಲಿ ಯೋಜನದಷ್ಟು ಅಗಲವುಳ್ಳದ್ದಾಗಿವೆ. ಈ ರಾಜಪರ್ವತಗಳು ಎರಡು ಸಾವಿರ ಯೋಜನ ಎತ್ತರವಿರುವವು. ಜಂಬೂದ್ವೀಪದ ವಿಸ್ತಾರಕ್ಕನುಗುಣವಾಗಿ ಅವುಗಳ ಉದ್ದವಿದೆ. ಅವುಗಳಲ್ಲಿ ನೀಲ ನಿಷಧ ಪರ್ವತಗಳೆರಡು. ಲಕ್ಷಯೋಜನ ಉದ್ದವಾಗಿವೆ. ಶ್ವೇತ, ಹೇಮಕೂಟ, ಹಿಮವತ್, ಶೃಂಗವತ್ಪರ್ವತಗಳು ನೀಲ ನಿಷಧಗಳಿಗಿಂತ ಕಡಿಮೆಯಾದ ಉದ್ದವುಳ್ಳವು. ಜಂಬೂದ್ವೀಪದ ಪರಿಮಿತಿಗೆ ಅನುಸಾರವಾಗಿ ನಿಷಧವೂ, ನೀಲವೂ ಲಕ್ಷಯೋಜನ ಉದ್ದವುಳ್ಳದ್ದಾಗಿವೆ. ಹೇಮಕೂಟ ಶ್ವೇತಗಳು ನಿಷಧಕ್ಕಿಂತ ಹತ್ತನೆಯ ಒಂದು ಭಾಗ ಕಡಿಮೆಯಾದ ಉದ್ದವುಳ್ಳದ್ದು. ಹಿಮವತ್ ಶೃಂಗ ಪರ್ವತಗಳು ಹೇಮಕೂಟಕ್ಕಿಂತ ಇಪ್ಪತ್ತನೆಯ ಒಂದುಭಾಗ ಕಡಿಮೆಯಾದ ಉದ್ದವುಳ್ಳವುಗಳಾಗಿವೆ.

ಹಿಮಪರ್ವತವು ಪೂರ್ವ ಪಶ್ಚಿಮದ ಕೊನೆಗಳಲ್ಲಿ ಎಂಟರಲ್ಲೊಂದು ಭಾಗ ವಿಸ್ತಾರವುಳ್ಳದ್ದಾಗಿದೆ. ಜಂಬೂದ್ವೀಪವು ವೃತ್ತಾಕಾರವಾಗಿರುವುದರಿಂದ ವರ್ಷಗಳ ಮತ್ತು ವರ್ಷಪರ್ವತಗಳ ಉದ್ದವು ಹೆಚ್ಚು ಕಡಿಮೆಯಾಗುತ್ತದೆ. ಈ ಪರ್ವತಗಳ ಮಧ್ಯದಲ್ಲಿರುವ ದೇಶಗಳೂ, ವರ್ಷಗಳೂ, ಝರಿಗಳ ಮತ್ತು ಜಲಪಾತಗಳ ಹಳ್ಳತಟ್ಟುಗಳಿಂದಲೂ, ಪರ್ವತಗಳಿಂದಲೂ, ಹಲವು ನದಿಗಳಿಂದಲೂ ಆವೃತಗಳಾಗಿರುವುದರಿಂದ ಒಂದರಿಂದ ಮತ್ತೊಂದಕ್ಕೆ ಹೋಗುವುದು ಅಸಾಧ್ಯ. ಅವುಗಳಲ್ಲಿ ಎಲ್ಲೆಲ್ಲಿಯೂ ನಾನಾಜಾತಿಯ ಪ್ರಾಣಿಗಳು ವಾಸಿಸುತ್ತವೆ. ಭರತನ ಸಂತತಿಯವರು ವಾಸಮಾಡುವದು ಹೈಮವತ ಅಥವಾ ಭಾರತವರ್ಷವೆನಿಸಿಕೊಳ್ಳುವುದು. ಹಿಮವತ್ಪರ್ವತ ದಿಂದ ಹೇಮಕೂಟದವರೆಗಿರುವುದು ಕಿಂಪುರುಷವರ್ಷ. ಹೇಮಕೂಟ ದಿಂದಾಚೆಗೆ ನಿಷಧದವರೆಗಿರುವುದು ಹರಿವರ್ಷವೆನಿಸುವುದು.

ಹರಿವರ್ಷಕ್ಕಿಂತ ಆಚೆಗೆ ಮೇರುಪರ್ವತದ ಪಕ್ಕದಲ್ಲಿರುವದು ಇಲಾವೃತ ವರ್ಷ. ಇಲಾವೃತಕ್ಕಿಂತ ಆಚೆಗೆ ಉತ್ತರದಲ್ಲಿ ನೀಲ ಪರ್ವತವಿದೆ. ಅದರಾಚೆಗೆ ರಮ್ಯಕ ವರ್ಷವು ಪ್ರಸಿದ್ಧವಾಗಿದೆ. ರಮ್ಯಕದಿಂದಾಚೆಗೆ ಶ್ವೇತಪರ್ವತ. ಶ್ವೇತಕ್ಕೆ ಉತ್ತರದಲ್ಲಿ ಹಿರಣ್ಮಯ ವರ್ಷವೆಂದೂ ಪ್ರಸಿದ್ಧವಾಗಿದೆ. ಹಿರಣ್ಮಯಕ್ಕಿಂತ ಆಚೆಗೆ ಶೃಂಗವತ್ಪರ್ವತ ವಿರುವುದು.ಅದರಾಚೆ ಇರುವುದು ಕುರುವರ್ಷವೆನಿಸಿಕೊಳ್ಳುವುದು. ದಕ್ಷಿಣೋತ್ತರ ಗಳಲ್ಲಿರುವ ಭಾರತ ಕುರುವರ್ಷಗಳೆರಡು ಬಿಲ್ಲಿನ ಆಕಾರವಾಗಿವೆ. ಕಿಂಪುರುಷವೇ ಮೊದಲಾದ ನಾಲ್ಕು ವರ್ಷಗಳು ಉದ್ದವಾಗಿವೆ. ಇಲಾವೃತ ವರ್ಷವು ಚಚ್ಚೌಕವಾಗಿದೆ. ನಿಷಧವು ಮೇರೆಯಾಗಿರುವ ಪ್ರದೇಶಕ್ಕೆ ಕೆಳಭಾಗದಲ್ಲಿರುವವು ಮೇರುವಿಗೆ ದಕ್ಷಿಣಭಾಗದ ಆಧಾರಾರ್ಥವಾದವುಗಳೆಂದೂ, ಶೃಂಗಪರ್ವತಕ್ಕೆ ಮೇಲುಗಡೆ ಮೇರುವಿನ ಕಡೆಗಿರುವವು ಉತ್ತರಭಾಗದ ಆಧಾರಾರ್ಥವಾದವುಗಳೆಂದೂ ಹೇಳುವರು.

ಹೀಗೆ ಆಧಾರಕ್ಕಾಗಿ (ನೆಲಗಟ್ಟಿಗಾಗಿ) ಮೇರುವಿನ ದಕ್ಷಿಣದಲ್ಲಿ ಮೂರು ವರ್ಷಗಳೂ, ಉತ್ತರದಲ್ಲಿ ಮೂರುವರ್ಷಗಳೂ ಇವೆ. ಅವುಗಳ ನಡುವೆ ಮೇರುವಿರುವ ಇಲಾವೃತ ವರ್ಷವಿದೆಯೆಂದರಿಯಬೇಕು. ಅದರ ಉದ್ದವು ಮೂವತ್ತನಾಲ್ಕುಸಾವಿರ ಯೋಜನವೆಂದು ಹೇಳಿದೆ. ಅದರ ಪಶ್ಚಿಮದಲ್ಲಿ ಗಂಧಮಾದನ ಪರ್ವತವಿದೆ. ಅದು

ಉದ್ದ ಎತ್ತರ ವಿಸ್ತಾರಗಳಲ್ಲಿ ಮಾಲ್ಯವತ್ ಪರ್ವತಕ್ಕೆ ಸಮಾನವಾದುದು. ಅವೆರಡರ ನಡುವೆ ದುಂಡಾದ ಕನಕಪರ್ವತವಾದ ಮೇರುವಿದೆ. ಆ ಸುವರ್ಣಾದ್ರಿಯು ನಾಲ್ಕು ಬಣ್ಣಗಳುಳ್ಳದ್ದಾಗಿ ಬುಡದಲ್ಲಿ ಚಚ್ಚೌಕವಾಗಿದೆ. ಅವ್ಯಕ್ತವಾಗಿದ್ದ ಎಲ್ಲಾ ಧಾತುಗಳೂ, ಜಲಾದಿಗಳೂ ಉದಿಸುವದು ಆ ಸುವರ್ಣಾದ್ರಿಯಿಂದಲೇ.

ಪ್ರಕೃತಿ ಪರಿಣಾಮ ರೂಪವಾದುದೂ, ಶಬ್ದ ಸ್ಪರ್ಶಾದಿ ಗುಣಗಳುಳ್ಳದ್ದೂ, ನಾಲ್ಕುದಳಗಳುಳ್ಳದ್ದೂ, ದೊಡ್ಡದೂ ಆದ ಭೂಮಿಯೆಂಬ ಕಮಲವು ಸ್ಪಷ್ಟವಾಗಿ ತಿಳಿಯದೆ ಇರುವದಾಗಿದೆ. ಆ ಭೂಕಮಲಕ್ಕೆ ಮೇರುಪರ್ವತವೇ ಬೀಜಕೋಶ ವಾಗಿದೆ. ಮೇರುವಿನೊಡಗೂಡಿದ ಪೃಥವೀ ಪದ್ಮದಿಂದ (ವಿಸ್ತಾರವಾದ) ಹಲವು ಬಗೆಯ ಕಾರ್ಯಗಳೆಲ್ಲವೂ ಉದಿಸಿದವು.

ಅಲ್ಲಿ ಅನೇಕ ಕಲ್ಪಕಾಲ ಜೀವಿಸುವ ಪುಣ್ಯಶಾಲಿಗಳೂ, ಜ್ಞಾನಿಗಳೂ ಆದ ಮಹಾತ್ಮರೂ ಮಹಾಯೋಗಿಗಳೂ, ಮಹಾದೇವನೂ, ಜಗತ್ತಿನಿಂದಲೇ ಧ್ಯಾನ ಮಾಡಿಸಿಕೊಳ್ಳುವ ಜನಾರ್ದನನಾಮಕನಾದ, ಸರ್ವಲೋಕಾಂತಕನಾದ, ಅನಂತನಾದ, ಸರ್ವವ್ಯಾಪಕನಾದ ನಾಶರಹಿತನಾದ ಪುರುಷೋತ್ತಮನಾದ ಸಾಕಾರನಾದ ಆ ಪರಮಾತ್ಮನನ್ನು ಪಡೆಯುವರು.

ಆ ಪರಮಾತ್ಮನಿಂದಲೇ ಲೋಕಪದ್ಮವು ಉದಿಸಿತು. ಆ ಲೋಕ ಪದ್ಮದಲ್ಲಿ ನಾಲ್ಕು ಪ್ರಸಿದ್ಧವಾದ ಮಹಾವರ್ಷಗಳೆಂಬ ಭೂಭಾಗಗಳು ಇರುತ್ತವೆ. ಆ ಲೋಕಪದ್ಮದಲ್ಲಿ ಚಂದ್ರಸೂರ್ಯರಿಗೆ ಆಶ್ರಯವಾಗಿರುವ ಮೇರುಪರ್ವತವು ಎಂಭತ್ತು ನಾಲ್ಕು ಸಾವಿರ ಯೋಜನ ಎತ್ತರವಿದೆ. ಹದಿನಾರು ಸಾವಿರ ಯೋಜನ ಭೂಗರ್ಭದ ಆಳದಲ್ಲಿ ಇಳಿದಿದೆ. ಅದರ ವಿಸ್ತಾರವು ಮೂವತ್ತೆರಡು ಸಾವಿರ ಯೋಜನ. ಒಂದೊಂದು ಬದಿಯಲ್ಲಿ ಹೀಗೆ ದುಂಡಾಗಿರುವ ಇಡೀ ಮೇರು ಪರ್ವತದ ಮೇಲ್ಭಾಗದ ಸುತ್ತಳತೆಯು ತೊಂಭತ್ತಾರು ಸಾವಿರ ಯೋಜನದ್ದಾಗಿದೆ. ಇದು ಅನೇಕ ಮುತ್ತು ರತ್ನಗಳಿಗೆ ಖಣಿಯಾಗಿದೆ. ಔಷಧ ವನಸ್ಪತಿಗಳ ಆಗರವಾಗಿದೆ. ಎಲ್ಲ ದೇವತೆಗಳ ಮನೆಗಳೂ ಇದರಲ್ಲೇ ಇರುತ್ತವೆ. ಹದಿನಾಲ್ಕು ಸಾವಿರ ಯೋಜನದ ಮೇಲಿರುವ ಬ್ರಹ್ಮದೇವರ ಸುಂದರವಾದ ಸಭಾಸ್ಥಾನವೂ ಈ ಮೇರು ಪರ್ವತದಲ್ಲಿಯೇ ಕಂಗೊಳಿಸುತ್ತದೆ. ಅಮರಾವತಿಯಲ್ಲಿ ಪ್ರವಹಿಸುವ ದೇವಗಂಗೆಯೂ ಕೂಡ ಈ ಮೇರುಪರ್ವತದಲ್ಲಿ 'ಚಕ್ರಪಾದ ಗಿರಿ' ಎಂಬ ಶೈಲ ಪ್ರದೇಶದಲ್ಲಿ ಹುಟ್ಟಿ ಹರಿದು ಭೂಮಿಗೆ ಬಂದಿದ್ದಾಳೆ.

*ವರಾಹ ಪುರಾಣದಲ್ಲಿ ಎಪ್ಪತ್ತೂರನೇ ಅಧ್ಯಾಯ ಮುಗಿದುದು.*

—o—

**ರುದ್ರ :-** ಚಕ್ರದ ಅರೆಕಾಲುಗಳಂತಿರುವ ಪರ್ವತಗಳನ್ನು ದಿಕ್ಕು ದಿಕ್ಕಿಗೂ ಹರಡಿ ನಾನಾ ಧಾತುಗಳಿಂದ ಹೊಳೆಯುತ್ತ ಅತಿ ಕಾಂತಿಯುತವಾಗಿರುವ ಅದೇ ಮೇರುವಿನ ಪೂರ್ವಭಾಗದಲ್ಲಿ ಅಸಾಧ್ಯ ಬಲದಿಂದ ಗರ್ವಿತರಾದ ದೇವದಾನ ರಾಕ್ಷಸಾದಿಗಳ ಅನೇಕ ನಗರಗಳು ಸುವರ್ಣಮಯವಾಗಿ ಒಳ್ಳೆಯ ಪ್ರಾಕಾರವೂ ಹೆಬ್ಬಾಗಿಲೂ ಉಳ್ಳದ್ದಾಗಿವೆ.

ಆ ಪಟ್ಟಣಗಳ ಶ್ರೇಷ್ಠವಾದ ಪೂರ್ವಭಾಗದ ಅತಿ ಶಾಂತಿಯುತವಾದ ಪ್ರದೇಶದಲ್ಲಿ ಅಮಾನುಷರಿಂದ ಪೂರ್ಣವಾದುದೂ, ನೂರಾರು ವಿಮಾನಗಳುಳ್ಳದ್ದೂ, ದೊಡ್ಡ ಕೊಳಗಳಿಂದ ಕೂಡಿದುದೂ ಸರ್ವದಾ ಶುಭಯುತವೂ, ಹೂಗಳ ಚಿತ್ರವರ್ಣಗಳ ಸೊಗಸುಳ್ಳದ್ದೂ, ಪತಾಕಾ ಧ್ವಜಗಳ ಸಾಲುಗಳಿಂದೊಪ್ಪುವದೂ, ದೇವಯಕ್ಷಾಪ್ಸರರಿಂದಲೂ, ಋಷಿಗಳಿಂದಲೂ ಶೋಭಿಸುವುದೂ, ಸಮೃದ್ಧವೂ ಮನೋಹರವೂ ಆದ 'ಅಮರಾವತಿ'ಯೆಂಬ ಇಂದ್ರನ ನಗರವು ಮೆರೆಯುವದು. ಆ ಅಮರಾವತಿಯ ನಡುವೆ ವಜ್ರವೈಡೂರ್ಯಗಳ ಜಗಲಿಯುಳ್ಳದ್ದೂ, ಗುಣಗಳಿಂದ ಲೋಕತ್ರಯದಲ್ಲೂ ಪ್ರಸಿದ್ಧವೂ ಆದ ಸುಧರ್ಮವೆಂಬ ಹೆಸರಿನ ಸಭೆಯು ಒಪ್ಪುತ್ತಿರುವದು. ಈ ಸಭೆಯಲ್ಲಿ ಶ್ರೀಪತಿಯೆಂಬ ಶ್ರೀಮಂತನೂ, ಸಹಸ್ರಾಕ್ಷನೂ, ಶಚೀಪತಿಯೂ ಮಹಾತ್ಮನಾದ ಸೂರ್ಯನ ವಂಶೀಯನೂ ಆದ ಸಾಕ್ಷಾದಿಂದ್ರನು ದೇವವಂಶೀಯರಾದ ಸಿದ್ಧಾದಿ ಸರ್ವರಿಂದ ಪರಿವೃತನಾಗಿ ಸುರಾಧ್ಯಕ್ಷನಾಗಿ ಸರ್ವದೇವ ನಮಸ್ಕೃತನಾಗಿರುವನು.

ಆ ಅಮರಾತಿಯ ದಕ್ಷಿಣ ದಿಕ್ಕಿನಲ್ಲಿ ವಿಸ್ತಾರವಾದುದೂ, ಅನೇಕ ಗುಣಗಳುಳ್ಳದೂ ಅಥವಾ ಅಗ್ನಿಯಂತೆ ಹೊಳೆಯುವದೂ ಆದ 'ತೇಜೋವತಿ'ಯೆಂಬ ಮಹಾತ್ಮನಾದ ಅಗ್ನಿದೇವನ ಪಟ್ಟಣವಿರುವದು. ಅದಕ್ಕೆ ಪಶ್ಚಿಮದಲ್ಲಿ ಅದರಂತೆಯೇ ಗುಣಯುತವೂ ಅಥವಾ ಯಮನಂತೆಯೇ ಬಣ್ಣವುಳ್ಳದ್ದೂ, ಮನೋಹರವೂ, ತ್ರಿಲೋಕ ಪ್ರಸಿದ್ಧವೂ ಆದ ಯಮಪುರಿಯು 'ಸಂಯಮನಿ'ಯೆಂಬ ಹೆಸರಿನಿಂದೊಪ್ಪುವದು. ನಾಲ್ಕನೆಯ ದಿಕ್ಕಿನಲ್ಲಿ ವಿರೂಪಾಕ್ಷನೂ, ಬುದ್ಧಿವಂತನೂ ಆದ ನಿಋತಿಯ 'ಕೃಷ್ಣವರ್ತಿ'ಯೆಂಬ ಪ್ರಸಿದ್ಧವಾದ ಪಟ್ಟಣವಿರುವದು. ಅದಕ್ಕೆ ಉತ್ತರಭಾಗದ ಐದನೆಯ (ಪಶ್ಚಿಮ) ದಿಕ್ಕಿನಲ್ಲಿ ಉದಕಾಧಿಪತಿಯೂ, ಮಹಾತ್ಮನೂ ಆದ ವರುಣನ 'ಶುದ್ಧವತಿ'ಯೆಂಬ ಪಟ್ಟಣವು ಪ್ರಸಿದ್ಧವಾಗಿರುವದು. ಆರನೆಯ ವಾಯವ್ಯ ದಿಕ್ಕಿನಲ್ಲಿ ಶುದ್ದವತಿಗುತ್ತರದಲ್ಲಿ ಸರ್ವಗುಣಾಧಿಕವಾದ ವಾಯುದೇವನ 'ಗಂಧವತಿ'ಯೆಂಬ ಪಟ್ಟಣವವು ಹೆಸರುಗೊಂಡಿರುವುದು. ಅದರಿಂದಾಚೆಗೆ ಉತ್ತರದಿಕ್ಕಿನಲ್ಲಿ ಯಕ್ಷಾಧಿಪನಾದ ಕುಬೇರನ 'ಮಹೋದಯ'ವೆಂಬ ಹೆಸರಿನ ವೈಡೂರ್ಯ ವೇದಿಕೆಯುಳ್ಳ ಶುಭಕರವಾದ ಪಟ್ಟಣವು ಮನೋಹರವಾಗಿದೆ. ಹೀಗೆಯೇ ಎಂಟನೆಯ ಈಶಾನ್ಯದಲ್ಲಿ ನಾನಾ ವಿಧ ಭೂತಗಳಿಂದ ಕೂಡಿದ 'ಮನೋಹರಾ' ಎಂಬ ಮಹಾತ್ಮನಾದ ಈಶಾನದೇವನ ಪಟ್ಟಣವಿರುವದು. ಬಗೆ ಬಗೆಯ ವನಗಳಿಂದಲೂ, ಹೂಗಳಿಂದಲೂ, ಒಪ್ಪುತ್ತ ಸರ್ವ ಆಶ್ರಮಿಗಳಿಂದ ಪ್ರಾರ್ಥಿಸಲ್ಪಡುವ ಈ ದೇವಲೋಕವು ಸ್ವರ್ಗವೆನಿಸಿ ಕೊಂಡಿರುವದು.

*ವರಾಹ ಪುರಾಣದಲ್ಲಿ ಎಪ್ಪತ್ನಾಲ್ಕನೇ ಅಧ್ಯಾಯ ಮುಗಿದುದು.*

—o—

ಉದ್ದ ಎತ್ತರ ವಿಸ್ತಾರಗಳಲ್ಲಿ ಮಾಲ್ಯವತ್ ಪರ್ವತಕ್ಕೆ ಸಮಾನವಾದುದು. ಅವೆರಡರ ನಡುವೆ ದುಂಡಾದ ಕನಕಪರ್ವತವಾದ ಮೇರುವಿದೆ. ಆ ಸುವರ್ಣಾದ್ರಿಯು ನಾಲ್ಕು ಬಣ್ಣಗಳುಳ್ಳದ್ದಾಗಿ ಬುಡದಲ್ಲಿ ಚಚ್ಚೌಕವಾಗಿದೆ. ಅವ್ಯಕ್ತವಾಗಿದ್ದ ಎಲ್ಲಾ ಧಾತುಗಳೂ, ಜಲಾದಿಗಳೂ ಉದಿಸುವದು ಆ ಸುವರ್ಣಾದ್ರಿಯಿಂದಲೇ.

ಪ್ರಕೃತಿ ಪರಿಣಾಮ ರೂಪವಾದುದೂ, ಶಬ್ದ ಸ್ಪರ್ಶಾದಿ ಗುಣಗಳುಳ್ಳದ್ದೂ, ನಾಲ್ಕುದಳಗಳುಳ್ಳದ್ದೂ, ದೊಡ್ಡದೂ ಆದ ಭೂಮಿಯೆಂಬ ಕಮಲವು ಸ್ಪಷ್ಟವಾಗಿ ತಿಳಿಯದೆ ಇರುವದಾಗಿದೆ. ಆ ಭೂಕಮಲಕ್ಕೆ ಮೇರುಪರ್ವತವೇ ಬೀಜಕೋಶ ವಾಗಿದೆ. ಮೇರುವಿನೊಡಗೂಡಿದ ಪೃಥವೀ ಪದ್ಮದಿಂದ (ವಿಸ್ತಾರವಾದ) ಹಲವು ಬಗೆಯ ಕಾರ್ಯಗಳೆಲ್ಲವೂ ಉದಿಸಿದವು.

ಅಲ್ಲಿ ಅನೇಕ ಕಲ್ಪಕಾಲ ಜೀವಿಸುವ ಪುಣ್ಯಶಾಲಿಗಳೂ, ಜ್ಞಾನಿಗಳೂ ಆದ ಮಹಾತ್ಮರೂ ಮಹಾಯೋಗಿಗಳೂ, ಮಹಾದೇವನೂ, ಜಗತ್ತಿನಿಂದಲೇ ಧ್ಯಾನ ಮಾಡಿಸಿಕೊಳ್ಳುವ ಜನಾರ್ದನನಾಮಕನಾದ, ಸರ್ವಲೋಕಾಂತಕನಾದ, ಅನಂತನಾದ, ಸರ್ವವ್ಯಾಪಕನಾದ ನಾಶರಹಿತನಾದ ಪುರುಷೋತ್ತಮನಾದ ಸಾಕಾರನಾದ ಆ ಪರಮಾತ್ಮನನ್ನು ಪಡೆಯುವರು.

ಆ ಪರಮಾತ್ಮನಿಂದಲೇ ಲೋಕಪದ್ಮವು ಉದಿಸಿತು. ಆ ಲೋಕ ಪದ್ಮದಲ್ಲಿ ನಾಲ್ಕು ಪ್ರಸಿದ್ಧವಾದ ಮಹಾವರ್ಷಗಳೆಂಬ ಭೂಭಾಗಗಳು ಇರುತ್ತವೆ. ಆ ಲೋಕಪದ್ಮದಲ್ಲಿ ಚಂದ್ರಸೂರ್ಯರಿಗೆ ಆಶ್ರಯವಾಗಿರುವ ಮೇರುಪರ್ವತವು ಎಂಭತ್ತು ನಾಲ್ಕು ಸಾವಿರ ಯೋಜನ ಎತ್ತರವಿದೆ. ಹದಿನಾರು ಸಾವಿರ ಯೋಜನ ಭೂಗರ್ಭದ ಆಳದಲ್ಲಿ ಇಳಿದಿದೆ. ಅದರ ವಿಸ್ತಾರವು ಮೂವತ್ತೆರಡು ಸಾವಿರ ಯೋಜನ. ಒಂದೊಂದು ಬದಿಯಲ್ಲಿ ಹೀಗೆ ದುಂಡಾಗಿರುವ ಇಡೀ ಮೇರು ಪರ್ವತದ ಮೇಲ್ಭಾಗದ ಸುತ್ತಳತೆಯು ತೊಂಭತ್ತಾರು ಸಾವಿರ ಯೋಜನದ್ದಾಗಿದೆ. ಇದು ಅನೇಕ ಮುತ್ತು ರತ್ನಗಳಿಗೆ ಖಣಿಯಾಗಿದೆ. ಔಷಧ ವನಸ್ಪತಿಗಳ ಆಗರವಾಗಿದೆ. ಎಲ್ಲ ದೇವತೆಗಳ ಮನೆಗಳೂ ಇದರಲ್ಲೇ ಇರುತ್ತವೆ. ಹದಿನಾಲ್ಕು ಸಾವಿರ ಯೋಜನದ ಮೇಲಿರುವ ಬ್ರಹ್ಮದೇವರ ಸುಂದರವಾದ ಸಭಾಸ್ಥಾನವೂ ಈ ಮೇರು ಪರ್ವತದಲ್ಲಿಯೇ ಕಂಗೊಳಿಸುತ್ತದೆ. ಅಮರಾವತಿಯಲ್ಲಿ ಪ್ರವಹಿಸುವ ದೇವಗಂಗೆಯೂ ಕೂಡ ಈ ಮೇರುಪರ್ವತದಲ್ಲಿ 'ಚಕ್ರಪಾದ ಗಿರಿ' ಎಂಬ ಶೈಲ ಪ್ರದೇಶದಲ್ಲಿ ಹುಟ್ಟಿ ಹರಿದು ಭೂಮಿಗೆ ಬಂದಿದ್ದಾಳೆ.

*ವರಾಹ ಪುರಾಣದಲ್ಲಿ ಎಪ್ಪತ್ತೂರನೇ ಅಧ್ಯಾಯ ಮುಗಿದುದು.*

—೦—

**ರುದ್ರ :-** ಚಕ್ರದ ಅರೆಕಾಲುಗಳಂತಿರುವ ಪರ್ವತಗಳನ್ನು ದಿಕ್ಕು ದಿಕ್ಕಿಗೂ ಹರಡಿ ನಾನಾ ಧಾತುಗಳಿಂದ ಹೊಳೆಯುತ್ತ ಅತಿ ಕಾಂತಿಯುತವಾಗಿರುವ ಅದೇ ಮೇರುವಿನ ಪೂರ್ವಭಾಗದಲ್ಲಿ ಅಸಾಧ್ಯ ಬಲದಿಂದ ಗರ್ವಿತರಾದ ದೇವದಾನ ರಾಕ್ಷಸಾದಿಗಳ ಅನೇಕ ನಗರಗಳು ಸುವರ್ಣಮಯವಾಗಿ ಒಳ್ಳೆಯ ಪ್ರಾಕಾರವೂ ಹೆಬ್ಬಾಗಿಲೂ ಉಳ್ಳದ್ದಾಗಿವೆ.

ಆ ಪಟ್ಟಣಗಳ ಶ್ರೇಷ್ಠವಾದ ಪೂರ್ವಭಾಗದ ಅತಿ ಶಾಂತಿಯುತವಾದ ಪ್ರದೇಶದಲ್ಲಿ ಅಮಾನುಷರಿಂದ ಪೂರ್ಣವಾದುದೂ, ನೂರಾರು ವಿಮಾನಗಳುಳ್ಳದ್ದೂ, ದೊಡ್ಡ ಕೊಳಗಳಿಂದ ಕೂಡಿದುದೂ ಸರ್ವದಾ ಶುಭಯುತವೂ, ಹೂಗಳ ಚಿತ್ರವರ್ಣಗಳ ಸೊಗಸುಳ್ಳದ್ದೂ, ಪತಾಕಾ ಧ್ವಜಗಳ ಸಾಲುಗಳಿಂದೊಪ್ಪುವದೂ, ದೇವಯಕ್ಷಾಪ್ಸರರಿಂದಲೂ, ಋಷಿಗಳಿಂದಲೂ ಶೋಭಿಸುವುದೂ, ಸಮೃದ್ಧವೂ ಮನೋಹರವೂ ಆದ 'ಅಮರಾವತಿ'ಯೆಂಬ ಇಂದ್ರನ ನಗರವು ಮೆರೆಯುವದು. ಆ ಅಮರಾವತಿಯ ನಡುವೆ ವಜ್ರವೈಡೂರ್ಯಗಳ ಜಗಲಿಯುಳ್ಳದ್ದೂ, ಗುಣಗಳಿಂದ ಲೋಕತ್ರಯದಲ್ಲೂ ಪ್ರಸಿದ್ಧವೂ ಆದ ಸುಧರ್ಮವೆಂಬ ಹೆಸರಿನ ಸಭೆಯು ಒಪ್ಪುತ್ತಿರುವದು. ಈ ಸಭೆಯಲ್ಲಿ ಶ್ರೀಪತಿಯೆಂಬ ಶ್ರೀಮಂತನೂ, ಸಹಸ್ರಾಕ್ಷನೂ, ಶಚೀಪತಿಯೂ ಮಹಾತ್ಮನಾದ ಸೂರ್ಯನ ವಂಶೀಯನೂ ಆದ ಸಾಕ್ಷಾದಿಂದ್ರನು ದೇವವಂಶೀಯರಾದ ಸಿದ್ಧಾದಿ ಸರ್ವರಿಂದ ಪರಿವೃತನಾಗಿ ಸುರಾಧ್ಯಕ್ಷನಾಗಿ ಸರ್ವದೇವ ನಮಸ್ಕೃತನಾಗಿರುವನು.

ಆ ಅಮರಾತಿಯ ದಕ್ಷಿಣ ದಿಕ್ಕಿನಲ್ಲಿ ವಿಸ್ತಾರವಾದುದೂ, ಅನೇಕ ಗುಣಗಳುಳ್ಳದೂ ಅಥವಾ ಅಗ್ನಿಯಂತೆ ಹೊಳೆಯುವದೂ ಆದ 'ತೇಜೋವತಿ'ಯೆಂಬ ಮಹಾತ್ಮನಾದ ಅಗ್ನಿದೇವನ ಪಟ್ಟಣವಿರುವದು. ಅದಕ್ಕೆ ಪಶ್ಚಿಮದಲ್ಲಿ ಅದರಂತೆಯೇ ಗುಣಯುತವೂ ಅಥವಾ ಯಮನಂತೆಯೇ ಬಣ್ಣವುಳ್ಳದ್ದೂ, ಮನೋಹರವೂ, ತ್ರಿಲೋಕ ಪ್ರಸಿದ್ಧವೂ ಆದ ಯಮಪುರಿಯು 'ಸಂಯಮನಿ'ಯೆಂಬ ಹೆಸರಿನಿಂದೊಪ್ಪುವದು. ನಾಲ್ಕನೆಯ ದಿಕ್ಕಿನಲ್ಲಿ ವಿರೂಪಾಕ್ಷನೂ, ಬುದ್ಧಿವಂತನೂ ಆದ ನಿಋತಿಯ 'ಕೃಷ್ಣವರ್ತಿ'ಯೆಂಬ ಪ್ರಸಿದ್ಧವಾದ ಪಟ್ಟಣವಿರುವದು. ಅದಕ್ಕೆ ಉತ್ತರಭಾಗದ ಐದನೆಯ (ಪಶ್ಚಿಮ) ದಿಕ್ಕಿನಲ್ಲಿ ಉದಕಾಧಿಪತಿಯೂ, ಮಹಾತ್ಮನೂ ಆದ ವರುಣನ 'ಶುದ್ಧವತಿ'ಯೆಂಬ ಪಟ್ಟಣವು ಪ್ರಸಿದ್ಧವಾಗಿರುವದು. ಆರನೆಯ ವಾಯವ್ಯ ದಿಕ್ಕಿನಲ್ಲಿ ಶುದ್ಧವತಿಗುತ್ತರದಲ್ಲಿ ಸರ್ವಗುಣಾಧಿಕವಾದ ವಾಯುದೇವನ 'ಗಂಧವತಿ'ಯೆಂಬ ಪಟ್ಟಣವವು ಹೆಸರುಗೊಂಡಿರುವುದು. ಅದರಿಂದಾಚೆಗೆ ಉತ್ತರದಿಕ್ಕಿನಲ್ಲಿ ಯಕ್ಷಾಧಿಪನಾದ ಕುಬೇರನ 'ಮಹೋದಯ'ವೆಂಬ ಹೆಸರಿನ ವೈಡೂರ್ಯ ವೇದಿಕೆಯುಳ್ಳ ಶುಭಕರವಾದ ಪಟ್ಟಣವು ಮನೋಹರವಾಗಿದೆ. ಹೀಗೆಯೇ ಎಂಟನೆಯ ಈಶಾನ್ಯದಲ್ಲಿ ನಾನಾ ವಿಧ ಭೂತಗಳಿಂದ ಕೂಡಿದ 'ಮನೋಹರಾ' ಎಂಬ ಮಹಾತ್ಮನಾದ ಈಶಾನದೇವನ ಪಟ್ಟಣವಿರುವದು. ಬಗೆ ಬಗೆಯ ವನಗಳಿಂದಲೂ, ಹೂಗಳಿಂದಲೂ, ಒಪ್ಪುತ್ತ ಸರ್ವ ಆಶ್ರಮಿಗಳಿಂದ ಪ್ರಾರ್ಥಿಸಲ್ಪಡುವ ಈ ದೇವಲೋಕವು ಸ್ವರ್ಗವೆನಿಸಿ ಕೊಂಡಿರುವದು.

*ವರಾಹ ಪುರಾಣದಲ್ಲಿ ಎಪ್ಪತ್ನಾಲ್ಕನೇ ಅಧ್ಯಾಯ ಮುಗಿದುದು.*

—o—

ಮೇರು ಪರ್ವತಕ್ಕೆ ಸೇರಿದ ಸಾವಿರಾರು ಗುಡ್ಡಗಳಲ್ಲಿ ಹಲವು ಬಹಳ ಎತ್ತರವಾಗಿರುತ್ತವೆ. ಮೇರುವಿನ ಎಂಟು ದಿಕ್ಕುಗಳಿಗೂ ಎಂಟು ಉಪಪರ್ವತಗಳೂ ಇರುತ್ತವೆ. ಅವಕ್ಕೆ ಮರ್ಯಾದಾಗಿರಿಗಳು ಎಂದು ಹೆಸರು. ಮೇರುವಿನ ಪೂರ್ವ ಭಾಗದಲ್ಲಿ ಮಂದರವೂ, ದಕ್ಷಿಣದಲ್ಲಿ ಗಂಧಮಾದನವೂ, ಪಶ್ಚಿಮದಲ್ಲಿ ವಿಪುಲಾಚಲವೂ, ಉತ್ತರದಲ್ಲಿ ಸುಪಾರ್ಶ್ವಗಿರಿಯೂ ಪಾದಪರ್ವತಗಳಾಗಿ ಇರುತ್ತವೆ. ಈ ನಾಲ್ಕೂ ಪರ್ವತಗಳ ಶಿಖರಗಳಲ್ಲಿ ಅಸಂಖ್ಯ ದೇವ, ಅಸುರ, ಯಕ್ಷ, ಅಪ್ಸರೆಯರು ಸೇವಿಸುವ ನಾಲ್ಕು ಮಹಾವೃಕ್ಷಗಳಿರುತ್ತವೆ.

ಮಂದರಗಿರಿ ಶಿಖರದಲ್ಲಿ 'ಕದಂಬ' ಎಂಬ ವೃಕ್ಷವಿರುವುದು. ಭದ್ರಾಶ್ವ ವರ್ಷದಲ್ಲಿ 'ಭದ್ರಾಶ್ವ' ಎಂಬ ಹೆಮ್ಮರವಿದೆ. ಆ ಭದ್ರಾಶ್ವ ವರ್ಷದಲ್ಲಿಯೇ 'ಹಯಗ್ರೀವ' ರೂಪಿಯಾದ ಶ್ರೀ ಹರಿಯು ಸಿದ್ಧ ಮಂತ್ರಗಳಿಂದ ಸೇವಿಸಲ್ಪಡುತ್ತಾನೆ. ಆ ಅಶ್ವಮುಖನಾದ ಆ ಭಗವಂತನಿಂದಲೇ ಆ ದೇಶಕ್ಕೆ 'ಭದ್ರಾಶ್ವ' ಎಂಬ ಹೆಸರು ಬಂದಿದೆ.

ದಕ್ಷಿಣ ಶೈಲ ಶಿಖರದಲ್ಲಿ ದೊಡ್ಡದಾದ ಒಂದು ನೇರಿಳೆಯ ಮರವಿದೆ. ಆ ಮರದಿಂದ ಯಾವಾಗಲೂ ಒಂದೇ ಸಮನಾಗಿ ಅಮೃತದಂತೆ ಸಿಹಿಯಾದ ಸುಗಂಧವಾಸನೆಯುಳ್ಳ ನೀರಲ ಹಣ್ಣುಗಳು ಪರ್ವತದ ಮೇಲೆ ಬೀಳುತ್ತಲಿರುತ್ತವೆ. ಕೆಳಗೆ ಬಿದ್ದ ಹಣ್ಣುಗಳು ಒಡೆದು ರಸವು ಕೋಡಿಯಾಗಿ ಹರಿದು ನದಿಯಾಗಿ ಸೀಕರಣೆಯ ರಸದಂತೆ ಸ್ವಾದು ಪ್ರವಾಹ ಯುಕ್ತವಾಗಿ ಹರಿಯುತ್ತಲಿದೆ. ಈ ಪರ್ವತದಲ್ಲಿ ಅತ್ಯಂತ ತೇಜಸ್ವಿಯಾದ ಜಾಂಬೂನದ ಎಂಬ ಹೆಸರಿನ ಬಂಗಾರವು ಇರುತ್ತದೆ. ಬೆಂಕಿಯ ಕಿಡಿಯಂತಿರುವ ಆ ಬಂಗಾರವನ್ನು ದೇವತೆಗಳು ಧರಿಸುತ್ತಾರೆ. ಮತ್ತು ಆ ನೀರಲ ಹಣ್ಣಿನ ರಸದ ಆಸ್ವಾದವನ್ನು ದೇವ, ದಾನವ, ಗಂಧರ್ವ, ಯಕ್ಷ, ರಾಕ್ಷಸ ಮುಂತಾದವರು ಪ್ರೀತಿಯಿಂದ ಕುಡಿಯುತ್ತಾರೆ. ಅದು ಅಮೃತವಿದ್ದಂತೆ. ಈ ಜಂಬೂವೃಕ್ಷ (ನೇರಳೆಗಿಡ) ದಿಂದ ಇದಕ್ಕೆ 'ಜಂಬೂದ್ವೀಪ' ಎಂಬ ಹೆಸರು ಬಂದಿದೆ.

ಸುಪಾರ್ಶ್ವಪರ್ವತದ ಉತ್ತರ ಶಿಖರದಲ್ಲಿ ಮೂರು ಯೋಜನ ಸುತ್ತಳತೆಯುಳ್ಳ ಒಂದು ದೊಡ್ಡ ಆಲದ ಮರವಿದೆ. ಬ್ರಹ್ಮದೇವರ ಮಾನಸ ಪುತ್ರರಾದ ಸನುತ್ಸುಜಾತ ಮುಂತಾದ ಬ್ರಹ್ಮರ್ಷಿಗಳ ತಪಸ್ಸಿನಿಂದ ಅದು ಬಹಳ ಪ್ರಸಿದ್ಧಿಯನ್ನು ಹೊಂದಿತು. ಅಲ್ಲಿ ಕುರುಗಳೆಂಬ ಕ್ಷಮಾಶೀಲರೂ ದೋಷರಹಿತರೂ ಆದ ಭಗವದ್‌ಭಕ್ತರು ಆಗಿ ಹೋದರು. ಅವರ ಹೆಸರಿನಿಂದಲೇ ಆ ದೇಶವು ಕುರುವರ್ಷ ಎಂದು ಪ್ರಸಿದ್ಧವಾಯಿತು.

*ವರಾಹ ಪುರಾಣದಲ್ಲಿ ಎಪ್ಪತ್ತೈದನೇ ಅಧ್ಯಾಯ ಮುಗಿದುದು*

—o—

ಉಪ ಪರ್ವತ

## ಅಧ್ಯಾಯ - ೭೬

**ರುದ್ರ** :- ಮಂದರವೇ ಮೊದಲಾದ ನಾಲ್ಕು ಕುಲಪರ್ವತಗಳಿಗೆ ನಾಲ್ಕು ಉಪ ಪರ್ವತಗಳು ಇರುತ್ತವೆ. ಆ ನಾಲ್ಕೂ ಉಪಪರ್ವತಗಳಲ್ಲಿ ಅರಣೋದ, ಮಾನಸ, ಅಸಿತೋದ, ಮಹಾಭದ್ರ ಎಂದು ನಾಲ್ಕು ಸರೋವರಗಳು ಇರುತ್ತವೆ. ಅರುಣೋದ ಸರೋವರದ ಪೂರ್ವದಲ್ಲಿ ಏಕಶೃಂಗ, ಮಣಿಶೃಂಗ ಮುಂತಾದ ಪರ್ವತಗಳೂ, ಮಾನಸ ಸರೋವರದ ದಕ್ಷಿಣಕ್ಕೆ 'ಕೈಲಾಸ' 'ಹಿಮವತ್' ಪರ್ವತಗಳೂ ಅಸಿತೋದ ಪರ್ವತದ ಸುತ್ತಮುತ್ತ 'ಪಾರಿಯಾತ್ರ', 'ಶೃಂಗವಂತ' ಮುಂತಾದ ಪರ್ವತಗಳೂ 'ಮಹಾಭದ್ರ ಸರೋವರದ' ಉತ್ತರಕ್ಕೆ 'ಹಂಸಕೂಟ', 'ಇಂದ್ರಶೈಲ', 'ಶತಶೃಂಗ' ಮುಂತಾದ ಪರ್ವತಗಳೂ ಇರುತ್ತವೆ.

*ವರಾಹ ಪುರಾಣದಲ್ಲಿ ಎಪ್ಪತ್ತಾರನೇ ಅಧ್ಯಾಯ ಮುಗಿದುದು*



ಶ್ರೀ ಸರೋವರ

## ಅಧ್ಯಾಯ - ೭೭

**ರುದ್ರದೇವ** :- ಸೀತಾಂತ ಪರ್ವತ ಕುಮುದ ಪರ್ವತಗಳ ನಡುವಿನ ಕಣಿವೆಯ ಭಾಗದಲ್ಲಿ ಮುನ್ನೂರು ಯೋಜನ ಉದ್ದ ನೂರು ಯೋಜನ ಅಗಲವಾದ 'ಶ್ರೀ ಸರೋವರ'ವೆಂಬ ದೊಡ್ಡ ಸರಸ್ಸು ಇದೆ. ದೇವ ಗಂಧರ್ವರಿಂದ ಸೇವಿತವಾದ ಈ ಸರೋವರದಲ್ಲಿ ಸಾಕ್ಷಾತ್ ಶ್ರೀದೇವಿಯಾದ ಮಹಾಲಕ್ಷ್ಮಿಯು ನಿರಂತರವೂ ನೆಲೆಸಿರುತ್ತಾಳೆ. ಆ ಶ್ರೀ ಸರೋವರದ ತೀರದಲ್ಲಿ ನೂರಾರು ಯೋಜನ ಉದ್ದಗಲವುಳ್ಳ ಮತ್ತು ಸರ್ವವಿಧವಾದ ಸ್ವಾದು ಸುಗಂಧ ಫಲ ಪುಷ್ಪ ಭರಿತವಾದ ಒಂದು ಬಿಲ್ವ ವನದಲ್ಲಿ ಅನೇಕ ದೇವತೆಗಳು ಹಾಗೂ ಮುನಿಗಳು ವಾಸವಾಗಿ ಶ್ರೀದೇವಿಯನ್ನು ಸೇವಿಸುತ್ತಾರೆ. ಅಲ್ಲಿಯೇ ಕಶ್ಯಪ ಋಷಿಗಳ ಆಶ್ರಮವೂ ಇರುತ್ತದೆ.

ಮಹಾನೀಲ ಮತ್ತು ಕಕುಭ ಗಿರಿಗಳ ನಡುವೆ ಸುಖಾ ಎಂಬ ಒಂದು ನದಿ ಇದೆ. ಆ ನದಿಯ ತಟಾಕದಲ್ಲಿ ಐವತ್ತು ಯೋಜನ ಉದ್ದವೂ ಮೂವತ್ತು ಯೋಜನ ಆಗಲವೂ ಆದ ಸುಂದರವಾದ ತಾಲ ವನದಲ್ಲಿ ಅನೇಕ ಸಾಧಕರು ಅನುಷ್ಠಾನ ಮಾಡುತ್ತಿರುತ್ತಾರೆ. ದೇವೇಂದ್ರನ ಐರಾವತದ ಮಾದರಿಯ ಅನೇಕ ಆನೆಗಳು ಅಲ್ಲಿ ಉಂಟು.

*ವರಾಹ ಪುರಾಣದಲ್ಲಿ ಎಪ್ಪತ್ತೇಳನೇ ಅಧ್ಯಾಯ ಮುಗಿದುದು*



**ಮಹಾದೇವ :-** ದಕ್ಷಿಣದಿಕ್ಕಿನಲ್ಲಿ ಇರುವಸಿದ್ಧ ಪುರುಷರನೆಲೆಗಳನ್ನು ಹೇಳುತ್ತೇನೆ ಕೇಳಿರಿ. ಶಿಖರ ಪರ್ವತ ಹಾಗೂ ಪತಂಗಾಚಲಗಳ ನಟ್ಟ ನಡುವೆ ಒಂದು ಪರಿಶುದ್ಧವಾದ ಭೂಮಿಇದೆ. ಅಲ್ಲಿ ಯವೈಶಿಷ್ಯವೆಂದರೆ ಅಲ್ಲಿ ಹೆಣ್ಣು ಜಾತಿಯೇಇಲ್ಲ. ಸ್ತ್ರೀಶೂನ್ಯವಾದಈ ದೇಶದಲ್ಲಿ ಒಂದೂ ಗಿಡವೂ ಇಲ್ಲ. 'ಇಕ್ಷುಕ್ಷೇಪ' ಎಂಬ ಶಿಖರದಲ್ಲಿ ಔದುಂಬರ ವನವು ಬಹಳರಮ್ಯವಾಗಿದ್ದು ಅದನ್ನು ಎಂಟು ಜನ ದೇವತಾಸ್ತ್ರೀಯರು ಸೇವಿಸುತ್ತಾರೆ. ಅದರಲ್ಲಿ ಕರ್ದಮ ಪ್ರಜಾಪತಿಯ ಆಶ್ರಮವಿದೆ. ತಾಮ್ರಾಭ ಮತ್ತು ಪತಂಗ ಪರ್ವತಗಳ ನಡುವೆ ಬೃಹತ್ ಪ್ರಮಾಣದ ಒಂದು ದೊಡ್ಡ ಸರೋವರವಿದ್ದು ಅದು ಅನೇಕ ಸಿದ್ಧ ಗಂಧರ್ವರಿಗೆ ಆಶ್ರಯವಾಗಿದೆ. ಅದರಲ್ಲಿ ಸಾವಿರ ಎಸಳುಗಳುಳ್ಳ ಅನೇಕ ಕೆಂದಾವರೆಗಳೂ ಅಸಂಖ್ಯ ಬಿಳಿದಾವರೆಗಳೂ ತಳ ತಳಿಸುತ್ತವೆ. ಈ ಸರೋವರದ ನಟ್ಟನಡುವೆ ಧಾತುರತ್ನಾಲಂಕೃತವಾದ ದ್ವೀಪ ಶಿಖರವೊಂದಿದ್ದು ಅದರಲ್ಲಿ ಪುಲೋಮ ಎಂಬ ವಿದ್ಯಾಧರರಾಜನು 'ವಿದ್ಯಾಧರಪುರ'ವೆಂಬ ಪಟ್ಟಣವನ್ನು ಕಟ್ಟಿಕೊಂಡು ತನ್ನ ಲಕ್ಷಾಧಿಕ ಪರಿವಾರದೊಂದಿಗೆ ವಾಸವಾಗಿದ್ದನು. ಇದರಂತೆ ವಿಶಾಖಾಚಲ ಮತ್ತು ಶ್ವೇತಪರ್ವತಗಳ ನಡುವೆ ಒಂದು ದೊಡ್ಡ ಸರೋವರವಿದೆ. ಅದರ ದಂಡೆಯಲ್ಲಿ ಪೂರ್ವಕ್ಕೆ ಒಂದು ಮಹತ್ತರವಾದಮಾವಿನತೋಪುಇದ್ದು ಅಲ್ಲಿ ದೇವಗಂಧರ್ವರುವಾಸಿಸುವರು.

ಸುಮಾಲ ವಸುಧಾರ ಪರ್ವತಗಳ ನಡುವಿನ ಬಿಲ್ವವನದಲ್ಲಿ ಅನೇಕ ಗುಹ್ಯಕರು ವಾಸವಾಗಿದ್ದಾರೆ. ಆ ವಸುಧಾರ ಮತ್ತು ರತ್ನಧಾರ ಪರ್ವತಗಳ ಮಧ್ಯದ ಮುತ್ತುಗದ ಕಾಡು ತನ್ನ ನರುಗುಂಪಿನ ಮರವಾಸನೆಯಿಂದ ಅನೇಕ ಸಿದ್ಧ ಬುದ್ಧರನ್ನು ಆಕರ್ಷಿಸಿರುತ್ತದೆ. ಅಲ್ಲಿ ಒಂದು ದೊಡ್ಡ ಸೂರ್ಯದೇವಸ್ಥಾನವಿದ್ದು ಪ್ರತಿತಿಂಗಳೂ ಸೂರ್ಯನಾರಾಯಣನು ಅಲ್ಲಿ ತಂಗಿ ಮುಂದೆ ಹೋಗುತ್ತಾನೆ. ಪಂಚಕೂಟ ಕೈಲಾಸ ಪರ್ವತಗಳ ಮಧ್ಯದ ಪ್ರಾಣಿಗಳಿಗೆ ಅಗಮ್ಯವಾದ ಭೂಖಂಡವು ಸ್ವರ್ಗದ ಮೆಟ್ಟಲಿನಂತಿದೆ. ಇನ್ನು ಪಶ್ಚಿಮ ದಿಕ್ಕಿನ ಬೆಟ್ಟ ಕಣಿವೆಗಳನ್ನು ಹೇಳುತ್ತೇನೆ ಕೇಳು. ಸುಪಾರ್ಶ್ವ ಮತ್ತು ಶಿಖಿ ಶೈಲಗಳ ನಡುವೆ ನೂರು ಯೋಜನ ವಿಸ್ತೀರ್ಣವಾದ ಭೂಮಿಯೆಲ್ಲ ಒಂದೇ ಕಲ್ಲು ಹಾಸಿಗೆಯದಿದ್ದು ಮುಟ್ಟಿದರೆ ಸುಟ್ಟುಬಿಡುವಷ್ಟು ಯಾವಾಗಲೂ ಕಾಯ್ದು ಕೆಂಡವಾಗಿರುತ್ತದೆ. ಅದರ ನಡುವಿನ ಮೂವತ್ತು ಯೋಜನದಲ್ಲಿ ಅಗ್ನಿ ಮಂಡಲವಿದ್ದು ಅಲ್ಲಿ ಪ್ರಳಯಾಗ್ನಿಯು ಸೌದೆ ಇಲ್ಲದೇ ಉರಿಯುತ್ತದೆ. ಕುಮುದ ಅಂಜನ ಪರ್ವತಗಳ ನಡುವೆ ಒಂದು ಪುಣ್ಯದ ಸರೋವರವಿದ್ದು ಅದರ ದಡದಲ್ಲಿ ಬೃಹಸ್ಪತಿಯ ಉಪವನವಿದೆ. ಪಿಂಜರ ಮತ್ತು ಗೌರಗುಡ್ಡಗಳ ನಡುವೆ ಅನೇಕ ಕೊಳ್ಳಗಳು ದರಿಕಂದರಗಳು ಇದ್ದು ಅಲ್ಲಿನ ಹಸಿರು ಛಾವಣಿಯಲ್ಲಿ ಒಂದು ಹರಿಮಂದಿರವಿದೆ.

ಶುಕ್ಲ ಮತ್ತು ಪಾಂಡುರ ಎಂಬ ಎರಡು ಬೆಟ್ಟಗಳ ನಡುವೆ ಒಂದೇ ಕಲ್ಲಿನ ಪ್ರದೇಶವಿದ್ದು ಅಲ್ಲಿ ಒಂದೂ ಗಿಡ ಮರಗಳಿಲ್ಲ. ಅಲ್ಲಿ ಒಂದು ಕೊಳವಿದ್ದು ಅದರಲ್ಲಿಯ

ನೀರು ಅಲುಗಾಡುವುದಿಲ್ಲ. ಈ ಕೊಳದ ನಟ್ಟ ನಡುವೆ ಒಂದು ದೊಡ್ಡ ಆಲದ ಮರವಿದ್ದು ಅದರಲ್ಲಿ ಪಾರ್ವತೀ ಪತಿಯು ವಾಸವಾಗಿದ್ದಾನೆ. ಸಹಸ್ರಶಿಖರ ಹಾಗೂ ಕುಮುದ ಪರ್ವತಗಳ ನಟ್ಟ ನಡುವೆ 'ಇಕ್ಷುಕ್ಷೇಪ' ಎಂಬ ಗಿರಿಶಿಖರವು ತಲೆ ಎತ್ತಿ ನಿಂತಿದ್ದು ಅಲ್ಲಿ ಇಂದ್ರನ ದೊಡ್ಡ ಆಶ್ರಮವಿರುತ್ತದೆ. ಶಂಖಕೂಟ, ವೃಷಭ ಪರ್ವತಗಳ ನಡುವೆ 'ಪುರುಷಸ್ಥಳ' ಎಂಬ ಬನವು ಫಲ ಪುಷ್ಪಗಳಿಂದ ಮನೋಹರವಾಗಿದೆ. ಕಪಿಂಜಲ ಮತ್ತು ನಾಗಪರ್ವತಗಳ ಮಧ್ಯಭಾಗವು ದ್ರಾಕ್ಷ, ಖರ್ಜೂರ, ವನಗಳಿಂದ ಕೂಡಿದ್ದು ನಿಬಿಡವಾದ ಜನವಸತಿಯುಳ್ಳದ್ದಾಗಿದೆ. ಪುಷ್ಕರ ಮತ್ತು ಮಹಾಮೇಘಗಿರಿಗಳ ನಡುವಿನ ನೂರು ಯೋಜನ ಉದ್ದದ ಕೊಳ್ಳವು ಗಿಡಬಳ್ಳಿಗಳಿಲ್ಲದೇ ಶೂನ್ಯವಾಗಿದೆ. ಆದರೆ ಅದರ ಪಕ್ಕದಲ್ಲಿಯೇ ನಾಲ್ಕು ಉಪವನಗಳೂ ಕಂಗೊಳಿಸುತ್ತಿವೆ. ಇವಲ್ಲದೇ ಇನ್ನೂ ಎಷ್ಟೆಷ್ಟೋ ಪರ್ವತ ಪ್ರದೇಶಗಳೂ ಹಳ್ಳಕೊಳ್ಳಗಳೂ ಕಣಿವೆ ಕಂದರಗಳೂ ಉಂಟು.

*ವರಾಹ ಪುರಾಣದಲ್ಲಿ ಎಪ್ಪತ್ತೆಂಟನೇ ಅಧ್ಯಾಯ ಮುಗಿದುದು*



## ಗಿರಿಶಿಖರಗಳ ಮೇಲಿನ ದೇವಾಯತನಗಳು — ಅಧ್ಯಾಯ - ೭೯

**ರುದ್ರ :-** ಮುಂದೆ, ಪರ್ವತಗಳ ಮೇಲಿನ ದೇವನಿವಾಸಗಳನ್ನು ವರ್ಣಿಸುತ್ತೇನೆ ಕೇಳಿರಿ. ಅವುಗಳಲ್ಲಿ ಸೀತಾ ಎಂಬ ಹೆಸರಿನ ಪರ್ವತದ ಮೇಲೆ ಮಹೇಂದ್ರನ ಕ್ರೀಡಾಸ್ಥಾನ. ಅದರಲ್ಲಿ ದೇವರಾಜನ ಪಾರಿಜಾತ ವೃಕ್ಷದ ವನ. ಅದರ ಪೂರ್ವ ಪಾರ್ಶ್ವದಲ್ಲಿ ಕುಂಜರವೆಂಬ ಗಿರಿ. ಅದರ ಮೇಲೆ ದಾನವರ ಎಂಟು ಪಟ್ಟಣಗಳು.

ಹಾಗೆಯೇ ವಜ್ರಕಪರ್ವತದದಲ್ಲಿ ರಾಕ್ಷಸರ ಅನೇಕ ಪಟ್ಟಣಗಳು. ಅವುಗಳ ಹೆಸರು ನೀಲಕಗಳೆಂದು. ಅವು ಕಾಮರೂಪಿಗಳು. ಮಹಾ ನೀಲವೆಂಬ ಉತ್ತಮ ಪರ್ವತದಲ್ಲಿ ಕಿನ್ನರರ ಹದಿನೈದು ಸಾವಿರ ಪಟ್ಟಣಗಳು ಪ್ರಸಿದ್ಧವಾಗಿವೆ. ಅಲ್ಲಿ ದೇವದತ್ತ ಚಂದ್ರಾದಿಗಳಾದ ಹದಿನೈದು ಜನ ಗಂಧರ್ವ ಕಿನ್ನರ ರಾಜರು ಇರುತ್ತಾರೆ. ಚಂದ್ರೋದಯ ಪರ್ವತದಲ್ಲಿ ಸುವರ್ಣದ ಪಟ್ಟಣಗಳು ಗುಹೆಗಳಲ್ಲಿರುವವು. ಅವು ನಾಗರ ನಿವಾಸಗಳು. ಗುಹಾಪ್ರವೇಶ ಮಾಡುವ ಆ ದಾನವೇಂದ್ರರು ಗರುಡನ ವಿಷಯದಲ್ಲಿ ಸ್ಥಿರವಾದ ಅನುರಾಗದಿಂದ ಗುಹೆಗಳಲ್ಲಿ ನೆಲೆಸಿರುವರು. ವೇಣುಮತ್ಪರ್ವತದಲ್ಲೂ ವಿದ್ಯಾಧರರ ಮೂರು ಪಟ್ಟಣಗಳು. ಒಂದೊಂದು ಮೂವತ್ತು (ನೂರು) ಯೋಜನ ವಿಸ್ತಾರವುಳ್ಳದ್ದು. ವಿದ್ಯಾಧರರಿಗೆ, ಉಲೂಕ, ರೋಮಶ, ಮಹಾವ್ರತ, ಮೊದಲಾದವರು ದೊರೆಗಳು. ಅಲ್ಲಿ ಒಂದೊದು ಉತ್ತಮ ಪರ್ವತದಲ್ಲಿ ಗರುಡನು ತಾನೇ ನೆಲಿಸಿರುವನು. ಕುಂಜರವೆಂಬ ಒಳ್ಳೆಯ ಬೆಟ್ಟದಲ್ಲಿ ಶಿವನು ಯಾವಾಗಲೂ ನೆಲಿಸಿರುವನು. ಪಶುಧಾರ ಪರ್ವತದಲ್ಲಿಯೂ ವೃಷಭಧ್ವಜನಾದ ಮಹಾದೇವನೂ, ಯೋಗಿವರನೂ ಅನಾದಿಪುರುಷನೂ ಆದ ಶಂಕರನು ಅನೇಕ ಕೋಟಿ ಸಹಸ್ರ ಭೂತಗಣ ಪರಿವಾರವುಳ್ಳವನಾಗಿ ನೆಲಿಸಿರುವನು. ವಸುಧಾರದಲ್ಲಿ ಪುಷ್ಪವಂತ

(ಚಂದ್ರಸೂರ್ಯ)ರ ಮತ್ತೂ ವಸುಗಳ ನಿವಾಸವೂ ಇದೆ. ವಸುಧಾರ, ರತ್ನಧಾರ ಪರ್ವತಗಳ ಮೇಲೆ ಕ್ರಮವಾಗಿ ಅಷ್ಟವಸುಗಳ ಎಂಟುಪಟ್ಟಣಗಳೂ ಸಪ್ತರ್ಷಿಗಳ ಏಳುಪಟ್ಟಣಗಳೂ ಇರುವವು. ಉತ್ತಮವಾದ ಏಕಶೃಂಗ ಪರ್ವತದಲ್ಲಿ ಚತುರ್ಮುಖ ಬ್ರಹ್ಮನ ನಿವಾಸವಿದೆ. ಗಜ ಪರ್ವತದಲ್ಲಿ ಮಹಾಭೂತಗಳಿಂದ ಪರಿವೃತಳಾಗಿ ಸಾಕ್ಷಾದ್ ಭಗವತಿ ಗೌರಿಯಿರುವಳು. ಶ್ರೇಷ್ಠವಾದ ವಸುಧಾರಾ ಪರ್ವತದಲ್ಲಿ ಮುನಿ, ಸಿದ್ಧ, ವಿದ್ಯಾಧರರ ನೆಲೆಯಾದ ಎಂಭತ್ತುನಾಲ್ಕು ಉತ್ತಮವಾದ ಪಟ್ಟಣಗಳು ಕೋಟೆ ಹೆಬ್ಬಾಗಿಲುಗಳಿಂದ ಕೂಡಿರುವವು. ಅಲ್ಲಿ ಯುದ್ಧಶೀಲರಾದ ಪರ್ವತರೆಂಬ ಹೆಸರಿನ ಗಂಧರ್ವರು ವಾಸಮಾಡುವರು. ಅವರ ಒಡೆಯನು ರಾಜರಾಜನಾದ ಕುಬೇರ ದೇವನು.

ಪಂಚಕೋಟಿಯಲ್ಲಿ ಸುರಶ್ರೇಷ್ಠರೂ, ದಾನವರೂ ಇರುವರು. ಶತಶೃಂಗದಲ್ಲಿ ದಾನವ ಯಕ್ಷರ ನೂರು ಪಟ್ಟಣಗಳಿವೆ. ಪ್ರಭೇದಕ ಪರ್ವತದ ಪಶ್ಚಿಮಾರ್ಧದಲ್ಲಿ ದೇವದಾನವ ಸಿದ್ಧಾದಿಗಳ ಪಟ್ಟಣಗಳಿವೆ. ಆ ಗಿರಿಯ ಶಿಖರದಲ್ಲಿ ಮಹತೀ ಎಂಬ ಕಲ್ಲಿದೆ. ಪ್ರತಿ (ಪರ್ವ) ಪೌರ್ಣಮೆಯಲ್ಲೂ ಸಾಕ್ಷಾತ್ ಚಂದ್ರನು ಅಲ್ಲಿಳಿಯುವನು.

ಈ ಪರ್ವತದ ಉತ್ತರ ಭಾಗದಲ್ಲಿ ತ್ರಿಕೂಟವೆಂಬ ಪರ್ವತವಿದೆ. ಅಲ್ಲಿ ಬ್ರಹ್ಮನಿರುವನು. ಅಲ್ಲಿ ಒಂದೆಡೆಯಲ್ಲಿ ಅಗ್ನಿದೇವಾಲಯವಿದೆ. ಅಲ್ಲಿ ದೇವತೆಗಳು ಮೂರ್ತಿಮಂತನಾದ ಅಗ್ನಿಯನ್ನು ಸೇವಿಸುವರು. ಉತ್ತರದಲ್ಲಾದರೂ ಶೃಂಗವೆಂಬ ಉತ್ತಮ ಪರ್ವತದಲ್ಲಿ ದೇವತೆಗಳ ಆಲಯಗಳಿವೆ. ಪೂರ್ವದಲ್ಲಿ ನಾರಾಯಣ ದೇವಾಲಯವೂ, ಮಧ್ಯದಲ್ಲಿ ಬ್ರಹ್ಮ ದೇವಾಲಯವೂ, ಪಶ್ಚಿಮದಲ್ಲಿ ಶಂಕರ ದೇವಾಲಯವೂ ಇದೆ. ಅಲ್ಲಿ ಯಕ್ಷರೇ ಮೊದಲಾದವರ ಕೆಲವು ಪಟ್ಟಣಗಳಿವೆ. ಅದರ ಉತ್ತರತೀರದಲ್ಲಿ ಜಾತುಚ್ಛವೆಂಬ ಮಹಾ ಪರ್ವತದಲ್ಲಿ ಮೂವತ್ತು ಯೋಜನದಳತೆಯ ವೃತ್ತಾಕಾರವಾದ ನಂದಲವೆಂಬ ಸರೋವರವಿದೆ. ಅಲ್ಲಿ ಶತಶೀರ್ಷ. ಪ್ರಚಂಡನೆನಿಸಿಕೊಂಡಿರುವ ನಂದನೆಂಬ ನಾಗರಾಜನು ವಾಸಮಾಡುವನು. ಮೇಲೆ ಹೇಳಿದ ಈ ಎಂಟನ್ನು ದೇವಪರ್ವತಗಳೆಂದು ತಿಳಿಯಬೇಕು. ಅವು ಅನುಕ್ರಮವಾಗಿ ಚಿನ್ನ, ಬೆಳ್ಳಿ, ರತ್ನ, ವೈಡೂರ್ಯ, ಮಣಿಶಿಲೆ ಮೊದಲಾದವುಗಳ ಬಣ್ಣವುಳ್ಳವು. ಈ ಪೃಥ್ವಿಯು ನೂರಾರು ಲಕ್ಷ ಕೋಟಿ ಸಂಖ್ಯೆಯ ಪರ್ವತಗಳಿಂದ ಪೂರ್ಣವಾಗಿದೆ. ಅವುಗಳಲ್ಲಿ ಸಿದ್ಧವಿದ್ಯಾಧರರ ಗೃಹಗಳಿವೆ. ಮೇರುವಿನ ಪಕ್ಕದ ಕೇಸರಿ ಮಂಡಲದ ಭೂಮಿಯು ಸಿದ್ಧಲೋಕವೆಂದು ಹೊಗಳಿಸಿ ಕೊಳ್ಳಲ್ಪಡುವದು. ಈ ಭೂಮಿಯು ಕಮಲಾಕಾರದಿಂದಿದೆ. ಈ ಕ್ರಮವನ್ನೇ ಎಲ್ಲಾ ಪುರಾಣಗಳಲ್ಲಿಯೂ ಸಮಾನವಾಗಿ ಹೇಳಿದೆ.

*ವರಾಹ ಪುರಾಣದಲ್ಲಿ ಎಪ್ಪತ್ತೊಂಬನೇ ಅಧ್ಯಾಯ ಮುಗಿದುದು.*

—o—

## ಅಧ್ಯಾಯ - ೮೦

**ರುದ್ರ :-** ಇನ್ನು ನದಿಗಳ ಉತ್ಪತ್ತಿಯನ್ನು ಕೇಳಿ. ಯಾವುದು ಆಕಾಶ ಸಮುದ್ರವೆನಿಸಿಕೊಳ್ಳುವುದೋ ಅದರಿಂದ ಆಕಾಶಗಾಮಿನಿಯಾದ ಗಂಗಾ ನದಿಯು ಪ್ರವಹಿಸಿತು. ಅದನ್ನು ಯಾವಾಗಲೂ ಐರಾವತವು ಕಲಕುತ್ತದೆ. ಆ ಗಂಗೆಯು ಎಂಭತ್ತನಾಲ್ಕು ಸಾವಿರ ಯೋಜನ ಎತ್ತರದಿಂದ ಮೇರುವಿನ ಮೇಲೆ ಬೀಳುತ್ತದೆ. ಹೀಗೆ ಬಿದ್ದ ಗಂಗೆಯು ಮೇರು ಶಿಖರ ಪ್ರದೇಶಗಳಿಂದ ಜಾರಿ ನಾಲ್ಕು ಭಾಗ (ಶಾಖೆ)ಗಳಾಗಿ ಸೀತಾ, ಅಲಕನಂದಾ, ಚಕ್ಷು, ಭದ್ರಾ ಎಂಬ ಹೆಸರುಗಳಿಂದ ಹರಿಯಿತು. ಆ ಶಾಖೆಗಳಲ್ಲಿ ಎಂಭತ್ತೊಂದು ಸಾವಿರ ಪರ್ವತಗಳನ್ನು ಸೀಳಿ (ಭೇದಿಸಿ)ಕೊಂಡು ಭೂಮಿಗೆ ಬಂದು (ಅಲಕನಂದೆಯು) ಗಂಗೆಯೆನಿಸಿಕೊಳ್ಳುತ್ತದೆ.

ಇನ್ನು ಗಂಧಮಾದವನದ ಪಕ್ಕದ ಅಮರಗಂಡಿಕೆಯು ವರ್ಣಿಸಲ್ಪಡುತ್ತದೆ. ಅದರ ಉದ್ದವು ಮೂವತ್ತೊಂದು ಸಾವಿರ ಯೋಜನ, ಅಗಲವು ನಾಲ್ಕುನೂರು ಯೋಜನ. ಅಲ್ಲಿಯ ದೇಶಗಳೆಲ್ಲವೂ ಕೇತುಮಾಲಗಳು. ಪುರುಷರು ಕೃಷ್ಣವರ್ಣದವರು. ಮಹಾಬಲಶಾಲಿಗಳು. ಸ್ತ್ರೀಯರು ಉತ್ಪಲ ವರ್ಣದವರಾಗಿ ಶುಭದರ್ಶನೆಯರಾಗಿರುವರು. ಅಲ್ಲಿ ದೊಡ್ಡ ಹಲಸಿನಮರಗಳು ಇವೆ. ಅಲ್ಲಿ ಬ್ರಹ್ಮಪುತ್ರನಾದ ಈಶ್ವರನು ವಾಸಿಸುವನು. ಅಲ್ಲಿರುವ ಮನುಷ್ಯರು ಅಲ್ಲಿಯ ನೀರು ಕುಡಿಯುವುದರಿಂದ ಹತ್ತು ಸಾವಿರ ವರ್ಷ ಜೀವಿಸುವವರಾಗಿ ರೋಗ ಮುಪ್ಪು ಇಲ್ಲದವರಾಗಿರುವರು.

ಒಂದೇ ಶಿಖರವುಳ್ಳ ಮಾಲ್ಯವತ್ಪರ್ವತದ ಪೂರ್ವದಲ್ಲಿ ಪೂರ್ವ ಗಂಡಿಕೆಯಿದೆ. ಸಾವಿರ ಯೋಜನ ಆಳತೆಯುಳ್ಳದ್ದು. ಭದ್ರಾಶ್ವಗಳೆಂಬ ದೇಶಗಳು ಅಲ್ಲಿರುವವು. ಮಂಗಳಕರವಾದ ಮಾವಿನಮರಗಳ ವನವು ಅಲ್ಲಿದೆ. ಕರಿಯಮಾವಿನಮರಗಳು. ಅಲ್ಲಿಯ ಪುರುಷರು ಬೆಳ್ಳಗೆ ಪದ್ಮ ವರ್ಣದವರಾಗಿಯೂ ಸ್ತ್ರೀಯರು ಬಿಳಿಯ ನೈದಿಲೆಯ ಬಣ್ಣದವರಾಗಿಯೂ ಇರುವರು. ಅವರ ಆಯಸ್ಸು ಹತ್ತು ಸಾವಿರ ವರ್ಷ. ಅಲ್ಲಿ ಐದು ಕುಲಪರ್ವತಗಳಿರುವವು. ಅವು ಶೈಲವರ್ಣ, ಮಾಲ್ಯವಂತ ನೀರಜಸ್ಕ, ತ್ರಿಪರ್ಣ, ನೀಲ ಎಂಬ ಹೆಸರಿನವು. ಅವುಗಳಿಂದ ಪ್ರವಹಿಸುವ ನದಿಗಳ ತೀರದಲ್ಲಿರುವ ದೇಶಗಳಿಗೆ ಆ ನದಿಗಳ ಹೆಸರೇ ಇದೆ.

ಆ ದೇಶಗಳು ಈ ನದಿಗಳ ನೀರನ್ನು ಉಪಜೀವಿಸುತ್ತವೆ. ಸೀತಾ, ಸುವಾಹಿನೀ, ಹಂಸವತೀ, ಕಾಸಾ, ಮಹಾವಕ್ತ್ರಾ, ಚಂದ್ರವತೀ, ಕಾವೇರಿ, ಸುರಸಾಖ್ಯಾವತೀ, ಇಂದ್ರವತೀ, ಅಂಗಾರವಾಹಿನೀ, ಹರಿತ್ತೋಯಾ, ಸೋಮಾವರ್ತಾ, ಶತಹ್ರದಾ, ವನಮಾಲಾ, ವಸುಮತಿ, ಹಂಸಾ, ಸುಪರ್ಣಾ, ಪಂಚಗಂಗಾ, ಧನುಷ್ಮತೀ, ಮಣಿವಪ್ರಾ, ಸುಬ್ರಹ್ಮಭಾಗಾ, ವಿಲಾಸಿನೀ, ಕೃಷ್ಣತೋಯಾ, ಪುಣ್ಯೋದಾ, ನಾಗವತಿ, ಶಿವಾ, ಶೈವಲಿನೀ, ಮಣಿತಟಾ, ಕ್ಷೀರೋದಾ, ವರುಣಶಾಲೀ, ವಿಷ್ಣುಪದೀ, ಎಂಬಿವು ಆ ಪರ್ವತಗಳಿಂದ ಪ್ರವಹಿಸುವ ನದಿಗಳು. ಈ ಮಹಾನದಿಗಳ ನೀರನ್ನು ಕುಡಿಯುವವರು ಹತ್ತು ಸಾವಿರ ವರ್ಷ ಆಯುಸ್ಸುಳ್ಳವರಾಗಿ ಪಾರ್ವತೀ ಪರಮೇಶ್ವರರ ಭಕ್ತರಾಗಿರುವರು.

*ವರಾಹ ಪುರಾಣದಲ್ಲಿ ಎಂಬತ್ತನೇ ಅಧ್ಯಾಯ ಮುಗಿದುದು.*

—o—

## ನೈಷಧದಲ್ಲಿರುವ ಕುಲಾಚಲ ದೇಶ ನದಿಗಳ ವರ್ಣನೆ | ಅಧ್ಯಾಯ - ೮೧

**ರುದ್ರ :-** ಭದ್ರಾಶ್ವ ವರ್ಷದೇಶಗಳ ಮತ್ತು ಕೇತುಮಾಲವರ್ಷ ದೇಶಗಳ ಸ್ವಭಾವವನ್ನು ನಿಮಗೆ ವಿಸ್ತಾರವಾಗಿ ಹೇಳುದುದಾಯಿತು. ನೈಷಧವೆಂಬ ಮಹಾಪರ್ವತದ ಪಶ್ಚಿಮದಲ್ಲಿರುವ ಕುಲಪರ್ವತ ದೇಶ ನದಿಗಳನ್ನು ಹೇಳುತ್ತೇವೆ. ವಿಶಾಖ, ಕಂಬಲ, ಜಯಂತ, ಕೃಷ್ಣ, ಹರಿತ, ಅಶೋಕ, ವರ್ಧಮಾನ ಎಂಬ ಈ ಏಳು ಕುಲ ಪರ್ವತಗಳು ಕೋಟಿ ಸಂಖ್ಯೆಯ ಪರ್ವತಗಳ ಜನಕಗಳು. ಅವುಗಳಲ್ಲಿರುವ ದೇಶಗಳನ್ನು ಅದೇ ಹೆಸರಿನವುಗಳನ್ನಾಗಿಯೇ ಅರಿಯಬೇಕು. ಸೌರಗ್ರಾಮಾಂತ, ಸಾತಪ, ಕೃತಸುರಾ, ಶ್ರವಣ, ಕಂಬಲ, ಮಾಹೇಯಾಚಲ, ಕೂಟವಾಸ, ಮೂಲ, ತಪ, ಕ್ರೌಂಚ, ಕೃಷ್ಣಾಂಗ, ಮಣಿಪಂಕಜ, , ಚೂಡಮಲ, ಸೋಮೀಯ, ಸಮುದ್ರಾಂತಕ, ಕುರುಕುಂಜ, ಸುವರ್ಣತಟ, ಕುಹ, ಶ್ವೇತಾಂಗ, ಕೃಷ್ಣಪಾದ, ವಿದ, ಕಪಿಲ, ಕರ್ಣಿಕ, ಮಹಿಷ, ಕುಬ್ಜ, ಕರನಾಟ, ಮಹೋತ್ಕಟ, ಶುಕ, ನಾಕ, ಸಗಜ, ಭೂಮ, ಕಕುರಂಜನ, ಮಹಾನಾಹ, ಕಿಕಿಸಪರ್ಣ, ಭೌಮಕ, ಚೋರಕ, ಧೂಮಜನ್ಮ, ಅಂಗಾರಜ, ಜೀವಲೌಕಿಕ, ವಾಚಾಸಹಾಂಗ, ಮಧುರೇಯ, ಶುಕೇಯ, ಚಕೇಯ, ಶ್ರವಣ, ಮತ್ತಕೌಶಿಕ, ಗೋದಾವಾಮ, ಕುಲಪಂಜಾಬ, ವರ್ಜಹ, ವೋದಶಾಲ ಎಂಬ ದೇಶಗಳು ಈ ಪರ್ವತಗಳಲ್ಲಿರುವ ನದಿಗಳನ್ನು ಸೇವಿಸುವುವು. ಪ್ಲಾಕ್ಷಾ, ಮಹಾಕದಂಬಾ, ಮಾನಸೀ, ಶ್ಯಾಮಾ, ಸುಮೇಧಾ, ಬಹುಲಾ, ವಿವರ್ಣಾ, ಪುಂಖಾ, ಮೂಲಾ, ದರ್ಭವತೀ, ಭದ್ರನದೀ, ಶುಕನದೀ, ಪಲ್ಲವಾ, ಭೀಮಾ, ಪ್ರಭಂಜನಾ, ಕಾಂಬಾ, ಕುಶಾವತೀ, ದಕ್ಷಾ, ಕಾಸಾವತೀ, ತುಂಗಾ, ಪುಣ್ಯೋದಾ, ಚಂದ್ರಾವತಿ, ಸುಮೂಲಾವತೀ, ಕಕುಪದ್ಮಿನಿ, ವಿಶಾಲಾ, ಕರಂಟಕಾ, ಪೀವರೀ, ಮಹಾಮಾಯಾ, ಮಹಿಷೀ, ಮಾನುಷಿ, ಚಂಡಾ ಎಂಬವು ಮುಖ್ಯ ನದಿಗಳು. ಉಳಿದ ಸಾವಿರಾರು ಚಿಕ್ಕನದಿಗಳು.

*ವರಾಹ ಪುರಾಣದಲ್ಲಿ ಎಂಬತ್ತೊಂದನೇ ಅಧ್ಯಾಯ ಮುಗಿದುದು.*

—೦—

## ಮೇರುವಿನ ದಕ್ಷಿಣೋತ್ತರಗಳಲ್ಲಿರುವ ವರ್ಷ(ಭೂಭಾಗ)ಗಳ ವರ್ಣನೆ



**ರುದ್ರ :-** ಮೇರುವಿನ ಉತ್ತರದಲ್ಲಿಯೂ, ದಕ್ಷಿಣದಲ್ಲಿಯೂ, ಪರ್ವತ ಪ್ರಾಂತದಲ್ಲಿರುವ ವರ್ಷ(ಭೂಭಾಗ)ಮೊದಲಾದವುಗಳನ್ನು ಕ್ರಮವಾಗಿ ಹೇಳುತ್ತೇನೆ. ಬ್ರಾಹ್ಮಣರೇ ಗಮನವಿಟ್ಟು ಕೇಳಿ. ಮೇರುವಿನ ಉತ್ತರದಲ್ಲೂ, ಶ್ವೇತಪರ್ವತಕ್ಕೆ ದಕ್ಷಿಣದಲ್ಲೂ, ವಾಯವ್ಯದಲ್ಲಿ ರಮ್ಯಕವೆಂಬ ವರ್ಷ (ಭೂಭಾಗ)ವಿದೆ. ಅಲ್ಲಿ ಬುದ್ಧಿ ಪ್ರಧಾನರೂ, ನಿರ್ಮಲರೂ, ಮುಪ್ಪು, ದುರ್ಗತಿ ಇಲ್ಲದವರೂ ಆದ ಮನುಷ್ಯರಿರುವರು.

ಅಲ್ಲಿರುವ ಬಹಳ ದೊಡ್ಡ ಆಲದ ಮರವು ಕೆಂಪು ಬಣ್ಣದೆನಿಸಿಕೊಂಡಿದೆ. ಅದರ ಹಣ್ಣಿನ ರಸವನ್ನು ಕುಡಿಯುವುದರಿಂದ ಮನುಷ್ಯರೆಲ್ಲರೂ ಹತ್ತು ಸಾವಿರ ವರ್ಷ ಆಯಸ್ಸುಳ್ಳವರೂ, ದೇವರರೂಪಿಗಳೂ ಆಗುವರು. ಶ್ವೇತಪರ್ವತಕ್ಕೆ ಉತ್ತರದಲ್ಲಿ ತ್ರಿಶೃಂಗಕ್ಕೆ ದಕ್ಷಿಣದಲ್ಲಿ ಹಿರಣ್ಮಯವೆಂಬ ವರ್ಷವಿದೆ. ಅಲ್ಲಿ ಹೈರಣ್ಯವತೀ ನದಿ ಇದೆ. ಬಲಶಾಲಿಗಳೂ, ಕಾಮರೂಪಿಗಳೂ ಆದ ಯಕ್ಷರು ಅಲ್ಲೇ ವಾಸಿಸುವರು. ಅಲ್ಲಿಯವರ ಆಯುಸ್ಸು ಹನ್ನೊಂದು ಸಾವಿರ ವರ್ಷ. ಅಲ್ಲಿಯ ಬೇರೆ ಪ್ರಾಣಿಗಳು ಸಾವಿರದೈನೂರು ವರ್ಷಕಾಲ ಜೀವಿಸುವವು. ಈ ಸ್ಥಳದಲ್ಲಿ ನಿಂಬೆಗಿಡಗಳೂ, ಹಲಸಿನ ಮರಗಳೂ ಇವೆ. ಆ ಹಣ್ಣುಗಳನ್ನು ಒಂದು ಸಾರಿ ತಿನ್ನುವುದರಿಂದಲೇ ಅಲ್ಲಿಯವರು ಹಲವು ವರ್ಷ ಜೀವಿಸುವರು. ಹಾಗೆಯೇ ತ್ರಿಶೃಂಗದಲ್ಲಿ ರತ್ನಸುವರ್ಣ, ಸರ್ವರತ್ನ ಶಿಖರಗಳೆಂದು ಎರಡು ಶೃಂಗಗಳು ಕ್ರಮವಾಗಿ ಮೇಲಾಗಿರುವವು. ಅವುಗಳ ಉತ್ತರಭಾಗದ ಶಿಖರದಿಂದ ಉತ್ತರ ಸಮುದ್ರದವರೆಗೂ ಉತ್ತರಕುರು (ವರ್ಷ) ದೇಶವಿದೆ.

ಅಲ್ಲಿ ಕ್ಷೀರವೃಕ್ಷಗಳೂ ಮಾವಿನ ಮರಗಳೂ ಇವೆ. ಆ ಮರಗಳಲ್ಲಿಯೇ ವಸ್ತ್ರಾಭರಣಗಳು ದೊರೆಯುವವು. ಭೂಮಿಯು ಚಿನ್ನದ ಮರಳುಳ್ಳದ್ದಾಗಿ ರತ್ನಮಯವಾಗಿದೆ. ಅಲ್ಲಿ ಸ್ವರ್ಗಚ್ಯುತರಾದ ಮನುಷ್ಯರು ವಾಸಿಸುವರು. ಅವರು ಹದಿಮೂರುಸಾವಿರ ವರ್ಷ ಆಯಸ್ಸುಳ್ಳವರು. ಅದೇ ದ್ವೀಪದ ಪಶ್ಚಿಮದಲ್ಲಿ ದೇವಲೋಕದಿಂದ ನಾಲ್ಕುಸಾವಿರ ಯೋಜನ ದಿಂದಾಚೆ ಸಾವಿರ ಯೋಜನ ಸುತ್ತಳತೆಯುಳ್ಳ ಚಂದ್ರದ್ವೀಪವಿದೆ. ಅದರ ಮಧ್ಯದಲ್ಲಿ ಚಂದ್ರಕಾಂತ, ಸೂರ್ಯಕಾಂತಗಳೆಂಬ ಹೆಸರಿನ ಬೆಟ್ಟದ ಚಿಲುಮೆಗಳಿವೆ. ಅವುಗಳ ನಡುವೆ ಅನೇಕ ವೃಕ್ಷಗಳಿಂದಿಡಿದು ಅನೇಕ ಉಪನದಿಗಳಿಂದ ಕೂಡಿದ ಚಂದ್ರಾವರ್ತಾ ಎಂಬ ದೊಡ್ಡ ನದಿಯಿದೆ. ಈ ಕುರುವರ್ಷದ ಕಡೆಯ ಉತ್ತರ ಪಾರ್ಶ್ವದಲ್ಲಿ ದೇವಲೋಕದಿಂದ ಐದು ಸಾವಿರ ಯೋಜನದಿಂದಾಚೆಗೆ ಸಮುದ್ರದ ಅಲೆಗಳ ಸಾಲಿನಿಂದ ತುಂಬಿದ ಸಾವಿರ ಯೋಜನ ಮಂಡಲಾಕಾರವಾದ ಸೂರ್ಯದ್ವೀಪವಿದೆ.

ಅದರ ನಡುವೆ ಉತ್ತಮವಾದ ಗಿರಿಯೊಂದಿದೆ. ಅದರ ಎತ್ತರವು ನೂರು ಯೋಜನ. ಅದರಿಂದ ಸೂರ್ಯಾವರ್ತವೆಂಬ ನದಿಯು ಹೊರಟಿದೆ. ಅಲ್ಲಿ ಸೂರ್ಯನ ವಾಸಸ್ಥಾನವಿದೆ. ಅಲ್ಲಿ ಸೂರ್ಯದೇವನ ಭಕ್ತರಾದ ಸೂರ್ಯನ ಬಣ್ಣದ ಪ್ರಜೆಗಳು

ಹತ್ತುಸಾವಿರ ವರ್ಷ ಆಯಸ್ಸುಳ್ಳವರಾಗಿರುವರು. ಆ ದ್ವೀಪದ ಪಶ್ಚಿಮದಲ್ಲಿ ನಾಲ್ಕು ಸಾವಿರ ಯೋಜನದಿಂದಾಚೆಗೆ ಸಮುದ್ರ ಪ್ರದೇಶದಲ್ಲಿ ಸಾವಿರ ಯೋಜನ ಸುತ್ತಳತೆಯುಳ್ಳ ಭದ್ರಾಕಾರವೆಂಬ ವೃತ್ತಾಕಾರ ದ್ವೀಪವಿದೆ. ಅಲ್ಲಿ ವಾಯುದೇವನ ಭದ್ರಾಸನವು ಹಲವು ರತ್ನಗಳಿಂದ ಕೂಡಿ ಮನೋಹರವಾಗಿದೆ. ಅಲ್ಲಿ ಪೂರ್ಣದೇಹಧಾರಿಯಾದ ವಾಯುದೇವನಿರುವನು. ಜನರು ಚಿನ್ನದ ಬಣ್ಣದವರಾಗಿ ಐದುಸಾವಿರ ವರ್ಷ ಆಯಸ್ಸುಳ್ಳವರಾಗಿರುವರು.

*ವರಾಹ ಪುರಾಣದಲ್ಲಿ ಎಂಬತ್ತೆರಡನೇ ಅಧ್ಯಾಯವು ಮುಗಿದುದು*



## ಭಾರತ ವರ್ಷದ ಒಂಬತ್ತು ಖಂಡಗಳ ವರ್ಣನೆ | ಅಧ್ಯಾಯ - ೮೩

**ರುದ್ರ :-** ಈ ಭೂಮಿಯು ಕಮಲದಂತಿದೆಯೆಂದು ಹೇಳಿದುದಾಯಿತು. ಈಗ ಭಾರತವರ್ಷದ ಒಂಬತ್ತು ಭೇದಗಳನ್ನು ಕೇಳಿ. ಇಂದ್ರಕಸೇರು, ತಾಮ್ರವರ್ಣ, ಗಭಸ್ತಿ, ನಾಗದ್ವೀಪ, ಸೌಮ್ಯ, ಗಂಧರ್ವ, ವಾರುಣ, ಭಾರತ ಎಂಬಿವು ಒಂಭತ್ತು ಖಂಡಗಳು. ಸಾಗರದಿಂದ ಸುತ್ತಲ್ಪಟ್ಟ ಒಂದೊಂದು ಸಾವಿರ ಯೋಜನದಳತೆಯವು. ಅಲ್ಲಿ ಏಳು ಕುಲಪರ್ವತಗಳಿವೆ. ಮಹೇಂದ್ರ, ಮಲಯ, ಸಹ್ಯ, ಶಕ್ತಿಮಂತ, ಋಕ್ಷ, ವಿಂಧ್ಯ, ಪಾರಿಯಾತ್ರ ಎಂಬವೇ ಆ ಕುಲಪರ್ವತಗಳು. ಇವಲ್ಲದೆ ಬೇರೆ ಮಂದರ, ಶಾರ, ದುರ್ದರ, ಕೈಲಾಸ, ಮೈನಾಕ, ವೈದ್ಯುತ, ವಾರಂಧಮ, ಪಾಂಡರ, ತುಂಗಪ್ರಸ್ಥ, ಕೃಷ್ಣಗಿರಿ, ಜಯಂತ, ಐರಾವತ, ಋಷ್ಯಮೂಕ, ಗೋಮಂತ, ಚಿತ್ರಕೂಟ, ಶ್ರೀಪರ್ವತ, ಚಕೋರಕೂಟ, ಶ್ರೀಶೈಲ, ಕೃತಸ್ಥಲ ಎಂಬಿವು ಚಿಕ್ಕ ಬೆಟ್ಟಗಳು. ಇವುಗಳಿಗಿಂತಲೂ ಚಿಕ್ಕವೂ ಉಂಟು. ಅವುಗಳಲ್ಲಿ ಆರ್ಯರ ಮತ್ತು ಮ್ಲೇಚ್ಛರ ದೇಶಗಳಿವೆ.

ಆ ದೇಶಗಳು ಮುಂದಿನ ನದಿಗಳ ನೀರನ್ನು ಕುಡಿಯುತ್ತವೆ. ಗಂಗಾ, ಸಿಂಧು, ಸರಸ್ವತಿ, ಶತದ್ರು, ವಿತಸ್ತಾ, ವಿಪಾಶಾ, ಚಂದ್ರಭಾಗಾ, ಸರಯೂ, ಯಮುನಾ, ಇರಾವತಿ, ದೇವಿಕಾ, ಕುಹೂ, ಗೋಮತೀ, ಧೂತಪಾಪಾ, ಬಾಹುದಾ, ದೃಷದ್ವತೀ, ಕೌಶಕೀ, ನಿಸ್ವೀರಾ, ಗಂಡಕೀ, ಚಕ್ಷುಷ್ಮತಿ, ಲೋಹಿತಾ ಎಂಬಿವು ಹಿಮವತ್ಪಾದಿಂದ ಉದಿಸಿದ ನದಿಗಳು. ವೇದಸ್ಮೃತಿ, ವೇದವತಿ, ಸಿಂಧುಪರ್ಣಾ, ಚಂದ್ರನಾಭಾ, ನಾಶದಾಚಾರಾ, ರೋಹೀಪಾರಾ, ಚರ್ಮಣ್ವತೀ ವಿದಿಶಾ, ವೇದತ್ರಯೀ, ವಪಂತೀ ಎಂಬವು ಪಾರಿಯಾತ್ರದಲ್ಲಿ ಹುಟ್ಟಿದ ನದಿಗಳು. ಶೋಣಾ, ಜ್ಯೋತಿರಥಾ ನರ್ಮದಾ, ಸುರಸಾ, ಮಂದಾಕಿನೀ, ದಶಾರ್ಣಾ, ಚಿತ್ರಕೂಟಾ, ತಮಸಾ, ಪಿಪ್ಪಲಾ, ಕರತೋಯಾ, ಪಿಶಾಚಿಕಾ, ಚಿತ್ರೋತ್ಪಲಾ, ವಿಶಾಲಾ, ವಂಜುಕಾ, ಬಾಲವಾಹಿನೀ, ಶುಕ್ತಿಮತೀ, ವೀರಜಾ, ಪಂಕಿನೀ, ರಾತ್ರೀ ಎಂಬೀ ನದಿಗಳು ಋಕ್ಷ ಪರ್ವತದಲ್ಲಿ ಹುಟ್ಟಿರುವವು. ಮಣಿಬಾಲಾ, ಶುಭಾ, ತಾಪೀ, ಪಯೋಷ್ಣಿ, ಶೀಘ್ರೋದಾ, ವೇಷ್ಣಾ, ಪಾಶಾ, ವೈತರಣಿ, ವೈದಿಪಾಲಾ, ಕುಮುದ್ವತೀ, ತೋಯಾ, ದುರ್ಗಾ, ಅಂತ್ಯಗಿರಾ ಈ ನದಿಗಳು ವಿಂಧ್ಯ ಪಾದೋತ್ಪನ್ನಗಳು.

ಗೋದಾವರೀ, ಭೀಮರಥಿ, ಕೃಷ್ಣಾ, ವೇಣೀ, ವಂಜುಲಾ, ತುಂಗಭದ್ರಾ, ಸುಪ್ರಯೋಗಾ, ಬ್ರಾಹ್ಯಾಕಾವೇರಿ, ಎಂಬೀ ನದಿಗಳು ಸಹ್ಯಪರ್ವತ ಪಾದದಲ್ಲಿ ಹುಟ್ಟಿದವುಗಳು. ಶತಮಾಲಾ, ತಾಮ್ರಪರ್ಣಿ, ಪುಷ್ಪಾವತೀ, ಉತ್ಪಲಾವತೀ ಎಂಬವು ಮಲಯ ಪರ್ವತದ ನದಿಗಳು. ತ್ರಿಯಾಮಾ, ಋಷಿಕುಲ್ಯಾ, ಇಕ್ಷುಲಾ, ತ್ರೈಕಂದಲಾ, ಮೂಲಿನೀ, ವಂಶವರಾ ಎಂಬ ನದಿಗಳು ಮಹೇಂದ್ರ ಪರ್ವತದಲ್ಲಿ ಹುಟ್ಟುವವು. ಋಷೀಕಾ ಶ್ರೀಸತೀ, ಮಂದಗಾಮಿನೀ, ಪಲಾಶಿನೀ ಎಂಬ ನದಿಗಳು ಶುಕ್ತಿಮತ್ಪರ್ವತದಲ್ಲಿ ಹುಟ್ಟುವವು. ಮೇಲೆ ಹೇಳಿದ ಇವು ಮುಖ್ಯವಾದ ಕುಲಪರ್ವತ ನದಿಗಳು. ಉಳಿದವು ಕ್ಷುದ್ರ ನದಿಗಳು. ಜಂಬೂದ್ವೀಪವು ಲಕ್ಷಯೋಜನದಳತೆಯುಳ್ಳದ್ದು.

*ವರಾಹ ಪುರಾಣದಲ್ಲಿ ಎಂಬತ್ತಮೂರನೇ ಅಧ್ಯಾಯವು ಮುಗಿದುದು.*



## ಶಾಕದ್ವೀಪ ವರ್ಣನೆ

**ಅಧ್ಯಾಯ - ೮೪**

**ರುದ್ರ :-** ಇನ್ನು ಶಾಕದ್ವೀಪವನ್ನು ತಿಳಿಯಿರಿ. ಅದು ಜಂಬೂದ್ವೀಪದ ಎರಡರಷ್ಟು ವಿಸ್ತಾರವಾಗಿರುವುದರಿಂದ ಲವಣ ಸಮುದ್ರ ಜಂಬೂದ್ವೀಪಗಳ ವಿಸ್ತಾರಕ್ಕೆ ಸಮವಾಗಿದೆ. ಆದುದರಿಂದ ಎರಡರಷ್ಟು ಸುತ್ತಳತೆಯುಳ್ಳದ್ದು. ಆ ದೇಶದವರು ಪುಣ್ಯಾತ್ಮರೂ, ಚಿರಜೀವಿಗಳೂ ಆಗಿರುವರು. ಕ್ಷಾಮ, ವಾರ್ಧಕ್ಯ, ವ್ಯಾಧಿರಹಿತರೂ ಅಹುದು. ಆ ದೇಶದಲ್ಲಿ ಏಳೇ ಕುಲಪರ್ವತಗಳಿರುವುವು. ಆ ದ್ವೀಪದ ಒಂದು ಕಡೆ ಲವಣ ಸಮುದ್ರವೂ, ಮತ್ತೊಂದು ಕಡೆ ಕ್ಷೀರಸಮುದ್ರವೂ ಇವೆ.

ಆ ದ್ವೀಪದ ಪೂರ್ವಭಾಗದಲ್ಲಿ ವಿಸ್ತಾರವಾದ ಉದಯವೆಂಬ ಮಹಾಪರ್ವತ. ಅದರ ಪಶ್ಚಿಮದಲ್ಲಿ ಜಲಧಾರವೆಂಬ ಗಿರಿಯಿದೆ ಅದೇ ಚಂದ್ರ ಎಂದು ಪ್ರಸಿದ್ಧವಾಗಿದೆ ಇಂದ್ರನು ಅದರ ನೀರನ್ನು ತೆಗೆದುಕೊಂಡು ಮಳೆಯನ್ನು ಸುರಿಸುತ್ತಾನೆ. ಅದರ ಪಶ್ಚಿಮದಲ್ಲಿ ಶ್ವೇತಶಿರವೆಂಬ ಗಿರಿಗಳು ಇರುವವು. ಹಲವು ಬಗೆಯ ಪ್ರಜೆಗಳು ಅಲ್ಲಿ ವಿಹರಿಸುವರು. ಅದರ ಪಶ್ಚಿಮದಲ್ಲಿ ರಜತಗಿರಿ. ಅದನ್ನೇ ನಾಕವೆಂಬ ಹೆಸರಿನಿಂದ ಕರೆಯುವರು. ಅದರ ಪಕ್ಕದಲ್ಲಿ ಅಂಬಿಕೇಯಪರ್ವತ. ಅದನ್ನೇ ಶಾಕವೆಂಬ ಹೆಸರಿನಿಂದ ಕರೆಯುವರು. ಅದರ ಪಕ್ಕದಲ್ಲಿ ದೇವಾಂಬಿಕೆಯ ಪರ್ವತ. ಅದನ್ನೇ ವಿಭ್ರಾಜಸವೆಂದೂ ಕೇಸರಿಯೆಂದೂ ಹೇಳುವರು. ಅದರಿಂದ ವಾಯು ಬೀಸುವುದು. ದ್ವೀಪದಲ್ಲಿರುವ ವರ್ಷ (ಭೂಭಾಗ) ಗಳಿಗೂ ಆಯಾ ಪರ್ವತಗಳ ಹೆಸರೇ. ಹೇಗೆಂದರೆ- ಉದಯ, ಸುಕುಮಾರ, ಜಲಧಾರ, ಕ್ಷೇಮಕ, ಮಹಾದ್ರುಮ ಎಂಬಿವು (ವರ್ಷಗಳ) ಮುಖ್ಯ ನಾಮಗಳು. ಪರ್ವತಗಳ ಎರಡನೆಯ ಹೆಸರುಗಳನ್ನು ವರ್ಷಗಳಿಗೂ ಹೇಳಬಹುದು. ದ್ವೀಪದ ನಡುವೆ ಶಾಕವೃಕ್ಷವಿದೆ. ಅಲ್ಲಿ ಏಳು ಮಹಾನದಿಗಳು ಎರಡೆರಡು ಹೆಸರಿನವು. ಸುಕಮಾರೀ, ಕುಮಾರೀ, ನಂದಾ, ವೇಣಿಕಾ, ಧೇನು, ಇಕ್ಷುಮತೀ, ಗಭಸ್ತಿ ಎಂಬಿವು ನದಿಗಳು.

*ವರಾಹ ಪುರಾಣದಲ್ಲಿ ಎಂಬನ್ನಾಲ್ಕನೇ ಅಧ್ಯಾಯ ಮುಗಿದುದು.*



## ಕುಶದ್ವೀಪ ವರ್ಣನೆ

ಅಧ್ಯಾಯ - ೮೫

**ರುದ್ರ :-** ಬಳಿಕ ಮೂರನೆಯದಾದ ಕುಶದ್ವೀಪವನ್ನು ಕೇಳಿ. ಕ್ಷೀರ ಸಮುದ್ರವನ್ನು ಶಾಕದ್ವೀಪದ ವಿಸ್ತಾರಕ್ಕೆ ಎರಡರಷ್ಟಿರುವ ಕುಶದ್ವೀಪವು ಸುತ್ತಿಕೊಂಡಿದೆ. ಅಲ್ಲಿಯೂ ಏಳು ಕುಲಪರ್ವತಗಳು ಒಂದೊಂದು ಎರಡು ಹೆಸರುಗಳುಳ್ಳವು. ಹೇಗೆಂದರೆ ಕುಮುದಕ್ಕೆ ವಿದ್ರುಮವೆಂದೂ ಹೆಸರು. ಉನ್ನತವಾದ ಆ ಹೇಮಪರ್ವತವೇ ದ್ರೋಣವೆನಿಸುವುದು. ಪುಷ್ಪವಂತನೇ ಕಂಕಪರ್ವತವೆನಿಸಿಕೊಳ್ಳುವದು.

ಕುಶೇಶಯವೇ ಅಗ್ನಿಮಂತವು. ಆರನೇಯದಾದ ಮಹಿಷ ಪರ್ವತವೇ ಹರಿ ಪರ್ವತವೆನಿಸಿಕೊಳ್ಳುವುದು. ಅಲ್ಲಿ ಅಗ್ನಿಯು ವಾಸಿಸುವನು. ಏಳನೆಯದು ಕಕುದ್ರವೆಂಬ ಹೆಸರಿನದು. ಅದೇ ಮಂದರವೆನಿಸಿಕೊಳ್ಳುವುದು. ಈ ಪರ್ವತಗಳು ಕುಶದ್ವೀಪ ದಲ್ಲಿರುವವು. ಈ ಪರ್ವತಗಳ ವರ್ಷಗಳೂ (ಭೂಭಾಗ) ಎರಡು ಹೆಸರುಗಳುಳ್ಳವು. ಕುಮುದ ಪರ್ವತ ಪ್ರದೇಶದ ಶ್ವೇತವರ್ಷಕ್ಕೆ ಮೊದಲು ಉದ್ಭಿದವೆಂಬ ಹೆಸರು. ಉನ್ನತ ಅಥವಾ ಹೇಮಪರ್ವತ ಪ್ರದೇಶವಾದ ಲೋಹಿತ ವರ್ಷಕ್ಕೆ ರಥಾಕಾರವೆಂದೂ ಹೆಸರು. ದ್ರೋಣಪರ್ವತದ ಹರಿವರ್ಷವೇ ಬಲಾಧನವೆನಿಸಿಕೊಳ್ಳುವುದು.

ಕುಶದ್ವೀಪದಲ್ಲಿ ನದಿಗಳು ಎರಡು ಹೆಸರುಗಳುಳ್ಳವು. ಪ್ರತೋಯಾ ನದಿಗೇ ಪ್ರವೇಶಾ ಎಂದೂ ಹೆಸರು. ಎರಡೆಯದಾದ ಶಿವಾನದಿಯು ಯಶೋದಾ ಎಂಬ ಹೆಸರನ್ನೂ ಪಡೆದಿರುವುದು. ಮೂರನೆಯದಾದ ಚಿತ್ರಾ ಎಂಬುದೇ ಕೃಷ್ಣಾ ಎನಿಸಿಕೊಳ್ಳುವದು. ನಾಲ್ಕನೆಯ ಹ್ಲಾದಿನಿಗೆ ಚಂದ್ರೆಯೆಂದೂ ಹೆಸರು. ವಿದ್ಯುಲ್ಲತೆಯೆಂಬ ಐದನೆಯದಕ್ಕೆ ಶುಕ್ಲೆಯೆಂದೂ ಹೆಸರು. ಆರನೆಯ ವರ್ಣೆಯು ವಿಭಾವರಿಯೂ ಆಗಿದೆ. ಏಳೆಯ ಮಹತೀನದಿಗೇ ಧೃತಿಯೆಂದೂ ಹೆಸರು. ಇವು ಮುಖ್ಯ ನದಿಗಳು. ಉಳಿದವು ಅಲ್ಪನದಿಗಳು. ಹೀಗೆ ಈ ಕುಶದ್ವೀಪದ ಸನ್ನಿವೇಶವನ್ನು ಹೇಳಿದುದಾಯಿತು. ಈ ದ್ವೀಪದ ನಡುವೆ ದೊಡ್ಡದಾದ ದರ್ಭೆಯ ಪೊದೆಯಿದೆ. ಈ ಕುಶದ್ವೀಪವು ಅಮೃತ ಸಮಾನವಾದ ಕ್ಷೀರ ಸಮುದ್ರಕ್ಕೆರಡರಷ್ಟಿರುವ ದಧಿ ಸಮುದ್ರದಿಂದ ಸುತ್ತಲ್ಪಟ್ಟಿದೆ.

*ವರಾಹ ಪುರಾಣದಲ್ಲಿ ಎಂಬತ್ತೈದನೇ ಅಧ್ಯಾಯ ಮುಗಿದುದು*

—o—

## ಕ್ರೌಂಚ ದ್ವೀಪ ವರ್ಣನೆ

ಅಧ್ಯಾಯ - ೮೬

**ರುದ್ರ :-** ಇನ್ನು ಕ್ರೌಂಚ ದ್ವೀಪವೇ ನಾಲ್ಕನೆಯದಾಗಿದೆ. ಕುಶದ್ವೀಪದ ಎರಡರಷ್ಟು- ಳತೆಯುಳ್ಳ ಕ್ರೌಂಚ ದ್ವೀಪದಿಂದ ದಧಿಸಮುದ್ರ ಆವೃತವಾಗಿದೆ. ಕ್ರೌಂಚ ದ್ವೀಪದಲ್ಲಿ ಏಳೇ ಮುಖ್ಯಪರ್ವತಗಳು. ಕ್ರೌಂಚಪರ್ವತಕ್ಕೆ ವಿದ್ಯುಲ್ಲತ ವೆಂದೂ ಹೆಸರು. ರೈವರ್ತ ಪರ್ವತಕ್ಕೆ ಮಾನಸವೆಂದೂ, ಪಾವಕವೆಂದೂ ಹೆಸರು. ಅಂಧಕಾರ ಪರ್ವತಕ್ಕೆ ಅಚ್ಛೋದಕ ವೆಂದೂ ಹೆಸರು. ದೇವಾವೃತ್ತವು ದೇವಾವೃತವೆಂದೂ ಹೆಸರುಳ್ಳದ್ದು. ಅದು ಸುರಾಪ ವೆಂದೂ ಹೇಳಿಸಿಕೊಳ್ಳುವದು. ದೇವಿಷ್ಠ ಪರ್ವತಕ್ಕೆ ಕಾಂಚನ ಶೃಂಗವೆಂದೂ ಹೆಸರು. ದೇವಾನಂದಕ್ಕೆ ಪಕ್ಕದಲ್ಲಿರುವ ಗೋವಿಂದ ಪರ್ವತಕ್ಕೆ ದ್ವಿವಿಂದ ಎಂದೂ ಹೆಸರು. ಪುಂಡರೀಕ ಪರ್ವತವು ತೋಯಾಸಹವೆಂದೂ ಹೆಸರುಳ್ಳದ್ದಾಗಿದೆ. ಈ ಏಳು ರತ್ನಮಯವಾದ ಪರ್ವತಗಳು ಕ್ರೌಂಚದ್ವೀಪದಲ್ಲಿರುವವು. ಎಲ್ಲವೂ ಒಂದಕ್ಕಿಂತ ಮತ್ತೊಂದು ಎತ್ತರವುಳ್ಳವು. ಅಲ್ಲಿಯ ವರ್ಷಗಳು - ಕ್ರೌಂಚ ಪ್ರಾಂತದಲ್ಲಿ ಕುಶಲವೆಂಬ ದೇಶವಿದೆ. ಅದಕ್ಕೆ ಮಾಧವವೆಂದೂ ಹೆಸರು.

ವಾಮುಕದ ಮನೋನುಗವೆಂಬ ವರ್ಷಕ್ಕೆ ಸುನರ್ತಕವೆಂದೂ ಹೆಸರು. ಆದಾದ ಮೇಲೆ ಉಷ್ಣವುಳ್ಳ ಸಪ್ರಕಾಶ ವರ್ಷವಿದೆ. ಆ ಮೇಲೆ ಪಾವಕ ವರ್ಷ. ಅದೇ ಸುದರ್ಶನವೆನಿಸಿಕೊಳ್ಳುವುದು. ಆ ಮೇಲೆ ಅಂಧಕಾರ ವರ್ಷ. ಅದಕ್ಕೆ ಸಮ್ಮೋಹವೆಂದೂ ಹೆಸರು. ಆಮೇಲೆ ಮುನಿದೇಶ. ಅದು ಪ್ರಕಾಶವೆನಿಸಿಕೊಳ್ಳುವದು. ಆದಾದ ಮೇಲೆ ದುಂದುಭಿವೇಶ. ಅದೇ ಅನರ್ತವೆನಿಸಿಕೊಳ್ಳುವದು. ಕ್ರೌಂಚ ದ್ವೀಪದಲ್ಲಿಯೂ ಏಳೇ ನದಿಗಳು. ಗೌರೀ, ಕುಮುದ್ವತೀ, ಸಂಧ್ಯಾ, ರಾತ್ರಿ, ಮನೋಜವಾ, ಖ್ಯಾತಿ, ಪುಂಡರೀಕಾ ಎಂಬ ಇವೇ ಆ ಏಳು ನದಿಗಳು. ಗೌರಿಯೇ ಪುಷ್ಪವಹಾ ಎನಿಸಿಕೊಳ್ಳುವುದು. ಕುಮುದ್ವಿತಿಗೇ ಅರ್ಧಮತಿಯೆಂದೂ, ಸಂಧ್ಯೆಗೇ ರೌದ್ರೆಯೆಂದೂ, ರಾತ್ರಿಗೆ ಸುಖಾವಹೆಯೆಂದೂ, ಮನೋಜವೆಗೆ ಭೋಗಜವೆಯೆಂದೂ, ಆ ಖ್ಯಾತಿಗೆ ಕ್ಷಿಪ್ರೋದಾ ಎಂದೂ ಪುಂಡರೀಕೆಗೆ ಬಹುಲೆಯೆಂದೂ ಹೆಸರು. ಇವಲ್ಲದೆ ಅನೇಕ ಕ್ಷುದ್ರ ನದಿಗಳು ಇಲ್ಲಿವೆ. ದೇಶವು ಚಿತ್ರವರ್ಣದ್ದು. ಕ್ರೌಂಚ ದ್ವೀಪವು ಘೃತ ಸಮುದ್ರದಿಂದಲೂ, ಘೃತ ಸಮುದ್ರವು ಶಾಲ್ಮಲಿ ದ್ವೀಪದಿಂದಲೂ ಆವೃತವಾಗಿದೆ.

*ವರಾಹ ಪುರಾಣದಲ್ಲಿ ಎಂಬತ್ತಾರನೇ ಅಧ್ಯಾಯ ಮುಗಿದುದು.*

—o—

## ಶಾಲ್ಮಲಿ ದ್ವೀಪ ವರ್ಣನೆ



**ರುದ್ರ :-** ಉಳಿದ ಮೂರು ದ್ವೀಪಗಳಲ್ಲಿರುವ ಮನುಷ್ಯರನ್ನು ಬಳಿಕ ಹೇಳುತ್ತೇನೆ. ಐದನೆಯದಾದ ಶಾಲ್ಮಲಿದ್ವೀಪದ ವಿಚಾರವನ್ನು ಹೇಳುತ್ತೇನೆ ಕೇಳಿ. ಕ್ರೌಂಚ ದ್ವೀಪದ ಅಥವಾ ಘೃತಸಮುದ್ರದ ಎರಡರಷ್ಟು ವಿಸ್ತಾರವುಳ್ಳ ಶಾಲ್ಮಲಿದ್ವೀಪವು ಘೃತ ಸಮುದ್ರವನ್ನು ಸುತ್ತಿಕೊಂಡಿದೆ. ಅಲ್ಲಿರುವ ಮುಖ್ಯ ಪರ್ವತಗಳು ಏಳು. ನದಿಗಳೂ ಅಷ್ಟೇ ಇವೆ. ಬಹಳ ದೊಡ್ಡದಾದ ಪೀತ, ಸುವರ್ಣಮಯವಾಗಿಯೂ, ಸರ್ವಗುಣ ವುಳ್ಳದ್ದಾಗಿಯೂ ಇರುವ ಸೌವರ್ಣ, ರೋಹಿತ, ಸುಮನಸ, ಕುಶಲ, ಜಾಂಬೂನದ, ವೈದ್ಯುತ ಎಂಬಿವು ಕುಲಪರ್ವತಗಳ ಮತ್ತು ವರ್ಷಗಳ ಹೆಸರುಗಳಾಗಿವೆ. ಇನ್ನು ಆರನೆಯದಾದ ಗೋಮೇದ ದ್ವೀಪವನ್ನು ಹೇಳುತ್ತೇನೆ. ಶಾಲ್ಮಲ ದ್ವೀಪವು ಸುರಾಸಮುದ್ರದಿಂದಾವೃತವಾಗಿರುವಂತೆ ಸುರಾಸಮುದ್ರವು ಅದಕ್ಕೆರಡರಷ್ಟಿರುವ ಗೋಮೇದದಿಂದ ಆವೃತವಾಗಿದೆ. ಗೋಮೇದದಲ್ಲಿ ಮುಖ್ಯ ಪರ್ವತಗಳು ಎರಡೇ. ತಾಮತಾವಸರನೆಂಬುದು ಒಂದು, ಕುಮುದವೆಂದು ಇನ್ನೊಂದು. ಕಬ್ಬಿನ ಹಾಲಿನ ಸಮುದ್ರವು ಗೋಮೇದ ದ್ವೀಪವನ್ನು ಸುತ್ತಿದೆ. ಆ ಸಮುದ್ರವನ್ನು ಅದಕ್ಕೆರಡರಷ್ಟಿರುವ ಪುಷ್ಕರ ದ್ವೀಪವು ಆವರಿಸಿದೆ. ಆ ಪುಷ್ಕರ ದ್ವೀಪದಲ್ಲಿ ಮಾನಸವೆಂಬ ಪರ್ವತವಿದೆ. ತನ್ನಷ್ಟೇ ಆಳತೆಯ ಸಿಹಿ ನೀರಿನ ಸಮುದ್ರದಿಂದ ಸುತ್ತಲ್ಪಟ್ಟಿರುವ ಪುಷ್ಕರದ್ವೀಪವು ಎರಡು ವರ್ಷ(ದೇಶ)ಗಳಾಗಿ ಭಾಗವಾಗಿದೆ. ಸಿಹಿನೀರಿನ ಸಮುದ್ರವಾದ ಮೇಲೂ ಕೊಪ್ಪರಿಗೆಯಂತೆ ಸುತ್ತಲೂ ಭೂಮಿ ಇದೆ. ಅಥವಾ ಈ ಭೂಮಿಯು ಹಂಡೆಯ ಆಕಾರವುಳ್ಳದ್ದಾಗಿದೆ. ಕೊಪ್ಪರಿಗೆಯಂತಿರುವ ಭೂಮಿಯಿಂದ ಕೂಡಿರುವ ಬ್ರಹ್ಮಾಂಡದ ಸ್ಥಿತಿಯೂ ಇಷ್ಟೆ. ಈ ಬಗೆಯ ಮಂಡಲಾಕಾರವಾದ ದ್ವೀಪಗಳ ಗಣನೆಯಿದೆ. ಇಂತಹ ದ್ವೀಪಗಳು ಏಳು. ಕಲ್ಪಕಲ್ಪದಲ್ಲೂ ರಸಾತಳದೊಳಗೆ ಹೋಗುವ ಈ ಮಂಡಲಗಳನ್ನು ಶ್ರೀ ವರಾಹರೂಪ, ದಾರಿಯಾದ ಶ್ರೀಭಗವಾನ್ನಾರಾಯಣನು ಒಂದೇ ಕೋರೆ ದಾಡೆಯಿಂದೆತ್ತಿ ನೆಲೆಯನ್ನು ನಿಲ್ಲಿಸುತ್ತಾನೆ. ಬ್ರಾಹ್ಮಣರೇ, ನಿಮಗೆ ಭೂಮಿಯ ಉದ್ದ, ಅಗಲಗಳನ್ನೂ ಮಾರ್ಗವನ್ನೂ ಹೇಳಿದ್ದೇನೆ. ನಿಮಗೆ ಮಂಗಳವಾಗಲಿ ಕೈಲಾಸ ನಿವಾಸಕ್ಕೆ ಹೋಗುವೆನು.

**ಶ್ರೀ ವರಾಹ :-** ಹೀಗೆ ಹೇಳಿ, ರುದ್ರನು ಕ್ಷಣ ಮಾತ್ರದಲ್ಲಿ ಕೈಲಾಸಪರ್ವತಕ್ಕೆ ಹೊರಟು ಹೋದನು. ಆ ದೇವತೆಗಳೂ, ಋಷಿಗಳೇ ಮೊದಲಾದವರೆಲ್ಲರೂ ಬಂದಂತೆಯೇ ಹಿಂದೆ ಹೊರಟು ಹೋದರು.

*ವರಾಹ ಪುರಾಣದಲ್ಲಿ ಎಂಬತ್ತೇಳನೇ ಅಧ್ಯಾಯ ಮುಗಿದುದು.*

—o—

**ಭೂದೇವಿ :-** ವರಾಹದೇವ, ಈಶಾನ ಭವ ಎಂಬ ಹೆಸರುಳ್ಳ ಶಿವನೇ ಪವಿತ್ರನಾದ ಪರಮಾತ್ಮ ಎಂದು ಕೆಲವರು ತಿಳಿಸುತ್ತಾರೆ. ಮತ್ತೆ ಹಲವರು ಶ್ರೀ ವಿಷ್ಣುವೇ ಪರಮಾತ್ಮ ಎಂದು ಹೇಳುತ್ತಾರೆ. ಇನ್ನುಳಿದವರು ನಾಲ್ಕು ಮುಖವುಳ್ಳ ಬ್ರಹ್ಮನೇ ಪರಮಾತ್ಮ ಎಂದು ತಿಳಿಯುತ್ತಾರೆ. ವರಾಹ ಮೂರ್ತಿಯೇ, ಈ ಮೂವರಲ್ಲಿ ನಿಜವಾದ ಪರಮಾತ್ಮ ಯಾರು ? ಸರ್ವೋತ್ಕೃಷ್ಟ ದೇವತೆ ಯಾರು ? ಎಂಬುದನ್ನು ನನಗೆ ತಿಳಿಸು. ಆ ಪರವಸ್ತುವನ್ನು ತಿಳಿದುಕೊಳ್ಳಲು ನನಗೆ ಅತ್ಯಂತ ಕುತೂಹಲವಾಗಿದೆ.'' ಭೂದೇವಿಯ ಈ ಪ್ರಶ್ನೆಯನ್ನು ಕೇಳಿ ವರಾಹಸ್ವಾಮಿಯು ಈ ರೀತಿಯಾಗಿ ನುಡಿದನು.

***ವರಾಹ ಉವಾಚ :***

**''ಪರೋ ನಾರಾಯಣೋ ದೇವಃ ತತಸ್ತಸ್ಮಾತ್ ಚತುರ್ಮುಖಃ ।**
**ತಸ್ಮಾತ್ ರುದ್ರೋಽಭವದ್ದೇವಿ ಸ ಚ ಸರ್ವಜ್ಞತಾಂ ಗತಃ॥''**

ದೇವೀ, ಈ ಜಗತ್ತಿನಲ್ಲಿ ನಾರಾಯಣನೇ ಶ್ರೇಷ್ಠ ದೇವತೆಯಾಗಿದ್ದಾನೆ. ಅವನಿಂದಲೇ ಚತುರ್ಮುಖನು ಹುಟ್ಟಿದನು. ಆ ಚತುರ್ಮುಖ ಬ್ರಹ್ಮನಿಂದ ಮಹಾದೇವನು ಹುಟ್ಟಿದನು. ಈ ರುದ್ರ ಬ್ರಹ್ಮಾದಿಗಳಿಗೆಲ್ಲ ಮೂಲ ಕಾರಣನಾದ ಆ ನಾರಾಯಣನು ಸ್ವಾಭಾವಿಕ ಸರ್ವಜ್ಞತ್ವ ಉಳ್ಳವನಾಗಿದ್ದಾನೆ. ಅವನ ಅನುಗ್ರಹದಿಂದ ಬ್ರಹ್ಮದೇವರಿಗೂ, ರುದ್ರದೇವರಿಗೂ ಯಥಾಯೋಗ್ಯವಾದ ಸರ್ವಜ್ಞತ್ವವು ಪ್ರಾಪ್ತವಾಗಿರುತ್ತದೆ. ಸರ್ವಜ್ಞನಾದ ಶಿವನ ಲೀಲೆಗಳು ಬಗೆ ಬಗೆಯಾಗಿವೆ. ಆಶ್ಚರ್ಯಕಾರಕವೂ ಆಗಿವೆ. ಮೂರು ಕಣ್ಣುಗಳುಳ್ಳ ಆ ಮಹಾದೇವನು ತ್ರಿಶೂಲಧಾರಿಯಾಗಿ ರಮಣೀಯವಾದ ಕೈಲಾಸ ಶಿಖರದಲ್ಲಿ ಯಾವಾಗಲೂ ವಾಸಮಾಡುತ್ತಾನೆ. ಒಂದು ದಿನ ಪಾರ್ವತಿಯೊಡಗೂಡಿ ಆ ಶಂಕರನು ಸರ್ವದೇವತೆಗಳಿಂದ ವಂದಿತನಾಗಿ ಆ ಕೈಲಾಸ ಗಿರಿಯಲ್ಲಿ ಮಂಡಿಸಿದಾಗ ಬ್ರಹ್ಮದೇವರು ದೇವತೆಗಳೊಡನೆ ಅಲ್ಲಿಗೆ ಬಂದರು. ಆಗ ರುದ್ರದೇವನು ಎದ್ದು ಸ್ವಾಗತ ಮಾಡಿ ವಿಧಿಪೂರ್ವಕವಾಗಿ ಬ್ರಹ್ಮದೇವರನ್ನು ಪೂಜಿಸಿ, ''ಇಷ್ಟು ಅವಸರದಿಂದ ಇಲ್ಲಿಗೆ ಬಂದ ಕಾರಣವೇನು?'' ಎಂದು ಕೇಳಿದನು. ಅದಕ್ಕೆ ಬ್ರಹ್ಮದೇವರು ನುಡಿದರು -

''ಮಹಾದೇವ, ಅಂಧಕ ಎಂಬ ದುಷ್ಟ ದೈತ್ಯನು ಬಹಳ ಪ್ರಬಲನಾಗಿದ್ದಾನೆ. ಅವನ ಉಪಟಳವನ್ನು ತಾಳಲಾರದೆ ದೇವತೆಗಳೆಲ್ಲ ನನಗೆ ಶರಣು ಬಂದಿದ್ದಾರೆ. ಅವರೆಲ್ಲರಿಗೂ ನಿನ್ನೆಡೆಗೆ ಹೋಗಲು ಹೇಳಿ ನಾನು ಅವರೊಡನೆ ಇಲ್ಲಿಗೆ ಬಂದಿದ್ದೇನೆ.'' ಈ ರೀತಿಯಾಗಿ ಮಾತನಾಡಿ ಬ್ರಹ್ಮದೇವರು ರುದ್ರನನ್ನು ನೋಡಿದರು. ಮತ್ತು ಪರಮೇಶ್ವರನಾದರೂ ಮಹಾಪ್ರಭು ನಾರಾಯಣನನ್ನು ಮನಃಪೂರ್ವಕವಾಗಿ ಪ್ರಾರ್ಥಿಸಿದರು. ತಕ್ಷಣದಲ್ಲಿಯೇ ಆ ಶಿವ ಮತ್ತು ಬ್ರಹ್ಮದೇವರ ನಡುವೆ ಶ್ರೀ ನಾರಾಯಣನು ಪ್ರಾದುರ್ಭೂತನಾದನು. ಆಗ ಏಕಾಭಿಪ್ರಾಯವುಳ್ಳ ಆ ಹರಿಹರ ಬ್ರಹ್ಮರು ಪರಸ್ಪರ ಸೂಕ್ಷ್ಮ ದೃಷ್ಟಿಯಿಂದ ಆನಂದಭರಿತರಾಗಿ ನೋಡಿದರು. ಈ ಮೂವರ ದೃಷ್ಟಿ ಸಾಮರಸ್ಯದಿಂದ ಕೂಡಲೇ ಒಂದು ಕನ್ಯಾ ಸೃಷ್ಟಿಯಾಯಿತು. ಕನ್ನೈದಿಲೆಯಂತೆ ಕಪ್ಪು ಕಣ್ಣು, ನೀಲ ಕುಂತಳ, ನಿಡಿದಾದ ಮೂಗು ಹರವಾದ ಹಣೆ, ಸುಂದರವಾದ ಮುಖ, ಚೆಲುವಿನ ನಿಲುವು. ದೇವತೆಗಳ ಶ್ರೇಷ್ಠ ಸ್ತ್ರೀಯರಲ್ಲಿ ಇರುವ ಸರ್ವ ಲಕ್ಷಣಗಳು ಅವಳಲ್ಲಿ ಇದ್ದವು. ಆಗ ಬ್ರಹ್ಮ, ರುದ್ರ,

ಮಹೇಶ್ವರ ಮೂವರು ಅವಳನ್ನು ಕಂಡು "ಮಂಗಳಾಂಗಿಯೇ ನೀನು ಯಾರು ? ವಿದ್ಯಾವತಿಯೇ ! ಇಲ್ಲಿ ನಿನ್ನ ಕೆಲಸವೇನು ? ಎಂದು ಕೇಳಿದರು. ಆಗ ಕಪ್ಪು, ಬಿಳಿ ಹಾಗೂ ಹಳದಿ ಎಂಬ ಮೂರು ಬಣ್ಣಗಳುಳ್ಳ ಈ ಕನ್ನಿಕೆಯು ಆ ತ್ರಿಮೂರ್ತಿಗಳಿಗೆ ಕೈಮುಗಿದು "ಮಹನೀಯರೇ, ನಿಮ್ಮ ಮೂವರ ದೃಷ್ಟಿ ಸಾಮರಸ್ಯದಿಂದ ನಾನು ಮೈದಾಳಿದ್ದೇನೆ. ನಿಮ್ಮ ಶಕ್ತಿಯ ಅಭಿವ್ಯಕ್ತಿಯಂತಿದ್ದ ನನ್ನನ್ನು ನೀವು ಅರಿಯಿರಾ ?" ಎಂದು ಕೇಳಿದಳು. ಆಗ ಆ ತ್ರಿಮೂರ್ತಿಗಳು ಸಂತುಷ್ಟರಾಗಿ "ನೀನು ತ್ರಿಕಲಾದೇವಿ ಎಂದು ಪ್ರಸಿದ್ಧಳಾಗಿ ಪ್ರಪಂಚವನ್ನು ರಕ್ಷಿಸು. ನೀನು ನಿನ್ನ ಮೂರು ಬಣ್ಣಗಳಿಂದ ಮೂರು ಬೇರೆ ಬೇರೆ ರೂಪಗಳನ್ನು ಧರಿಸು" ಎಂದು ವರವನ್ನು ಕೊಟ್ಟರು.

ತ್ರಿಮೂರ್ತಿಗಳ ವರದಂತೆ ರೂಪಗೊಂಡ ಅತ್ಯಂತ ಶುಭ್ರ ವರ್ಣದ ಬ್ರಾಹ್ಮೀ ಮೂರ್ತಿಯು ಬ್ರಹ್ಮಸೃಷ್ಟಿ ವಿಧಾನದಿಂದ ಪ್ರಜೆಗಳನ್ನು ಸೃಷ್ಟಿಸುತ್ತಾಳೆ. ಕೆಂಬಣ್ಣದ ವಿಷ್ಣುಮಾಯೆ ಎಂದು ಕರೆಯಿಸಿಕೊಳ್ಳಲ್ಪಡುವ ವೈಷ್ಣವೀದೇವಿಯು ಸರ್ವಲೋಕ ಗಳನ್ನೂ ಕಾಪಾಡುತ್ತಾಳೆ. ಕೃಷ್ಣವರ್ಣದ ರೌದ್ರಮೂರ್ತಿಯು ತ್ರಿಶೂಲ, ಕೋರೆಹಲ್ಲುಗಳಿಂದ ಭೀಕರಾಕಾರಳಾಗಿ ಜಗತ್ತನ್ನು ಸಂಹರಿಸುತ್ತಾಳೆ. ಆ ಮೂವರೂ ದೇವಿಯರು ತ್ರಿಮೂರ್ತಿಗಳ ಅಪ್ಪಣೆ ಪಡೆದು ತಪೋನುಷ್ಠಾನಕ್ಕಾಗಿ ಕ್ರಮವಾಗಿ ಶ್ವೇತಪರ್ವತ, ಮಂದರ ಪರ್ವತ, ನೀಲ ಪರ್ವತಗಳಿಗೆ ಹೊರಟುಹೋದರು.

ಮುಂದೆ ಬ್ರಹ್ಮದೇವರು ನಿರ್ಮಿಸಿದ ಮಾನಸ ಕುಮಾರರು ಸೃಷ್ಟಿಯ ಅಭಿವೃದ್ಧಿಗೆ ಅನುಪಯುಕ್ತರಾದಾಗ ಬ್ರಹ್ಮದೇವರಿಗೆ ಪ್ರಜಾಭಿವೃದ್ಧಿಯ ಬಗೆಗೆ ಬಹಳ ಚಿಂತೆಯಾಯಿತು. ಆಗ ಬ್ರಹ್ಮದೇವರು ಬ್ರಾಹ್ಮೀದೇವಿಯು ತಪಂಗೈಯುತ್ತಿರುವ ಶ್ವೇತಪರ್ವತಕ್ಕೆ ಹೋದರು. ಅಲ್ಲಿ ತಪೋನಿರತಳಾದ ಆ ಸೃಷ್ಟಿದೇವಿಗೆ ವರವಿತ್ತು ಅವಳ ಸಹಕಾರದಿಂದ ಪ್ರಪಂಚವೆಲ್ಲವೂ ಅಭಿವೃದ್ಧಿಯನ್ನು ಹೊಂದುವಂತೆ ಮಾಡಿದರು. ಶ್ವೇತವರ್ಣಳಾದ ಆ ಬ್ರಾಹ್ಮೀದೇವಿಗೆ ಸೃಷ್ಟಿದೇವಿ, ತ್ರಿಶಕ್ತಿದೇವಿ ಎಂಬ ಹೆಸರುಗಳು ಇರುತ್ತವೆ. ಅವಳು ಜ್ಞಾನಪ್ರಪಂಚಕ್ಕೆಲ್ಲ ಅಧಿದೇವತೆಯಾದುದರಿಂದ ಅವಳಿಗೆ ವಾಗೀಶ್ವರಿ, ಸರಸ್ವತೀ, ವಿದ್ಯೇಶ್ವರೀ, ಅಮಿತಾಕ್ಷರೀ, ಏಕಾಕ್ಷರೀ ಎಂದು ಮುಂತಾಗಿ ಕರೆಯುತ್ತಾರೆ. ಬ್ರಹ್ಮದೇವರು ಆ ಸರಸ್ವತಿಯನ್ನು ಬಹುವಿಧವಾಗಿ ಸ್ತೋತ್ರ ಮಾಡಿದರು.

**ಜಯಸ್ವ ಸತ್ಯಸಂಭೂತೇ ಧ್ರುವೇ ದೇವಿ ಧರೇಕ್ಷರೇ ।**
**ಸರ್ವಗೇ ಸರ್ವಭೂತಮಹೇಶ್ವರೀ ।**

ಸತ್ಯಸ್ವರೂಪಳೂ ಅಕ್ಷರ ಪ್ರಪಂಚದ ಅಧಿದೇವತೆಯೂ, ಎಲ್ಲ ಪ್ರಾಣಿಗಳಿಗೆ ಮಹೇಶ್ವರಿಯೂ, ಎಲ್ಲರ ತಾಯಿಯೂ, ಎಲ್ಲ ಕಡೆಗೆ ಇರುವವಳೂ ಆದ ಮಹಾದೇವಿಯೇ ನಿನಗೆ ಗೆಲುವಾಗಲಿ. ಸರ್ವ ವಿದ್ಯೆಗಳ ಅಧೀಶ್ವರಿಯಾದ ನೀನು ಭಕ್ತರಿಗೆಲ್ಲ ಸಿದ್ಧಿ, ಬುದ್ಧಿಗಳನ್ನು ಪ್ರದಾನ ಮಾಡುವಿ. ನಿನ್ನನ್ನು ಧ್ಯಾನ ಮಾಡಿ ಋತುಸ್ನಾತಳಾದ ಮಡದಿಯೊಡನೆ ಒಡಗೂಡಿದ ಪುರುಷನಿಗೆ ನಿನ್ನ ಅನುಗ್ರಹದಿಂದ ನಿಜವಾಗಿಯೂ ಸಂತಾನಪ್ರಾಪ್ತಿಯಾಗುವುದು.

*ವರಾಹ ಪುರಾಣದಲ್ಲಿ ಎಂಬತ್ತೆಂಟನೇ ಅಧ್ಯಾಯ ಮುಗಿದುದು.*

—o—

ಮಂದರ ಪರ್ವತದಲ್ಲಿ ತಪಸ್ಸನ್ನು ಮಾಡುತ್ತಿದ್ದ ವೈಷ್ಣವೀದೇವಿಯು ಕೌಮಾರವ್ರತವನ್ನಂಗೀಕರಿಸಿ ಏಕಾಂಗಿನಿಯಾಗಿ ವಿಶಾಲ ಕ್ಷೇತ್ರದಲ್ಲಿ ನಿಂತು ತಪಸ್ಸನ್ನು ಮಾಡಿದಳು. ಹೀಗೆ ಬಹಳ ಕಾಲವು ಕಳೆದ ಬಳಿಕ ಆ ವೈಷ್ಣವಿಯ ಮನಸ್ಸು ಪ್ರಕ್ಷುಬ್ಧವಾಯಿತು. ಅವಳ ಆ ಮನೋಕ್ಷೋಭದಿಂದ ಒಂದು ಲಕ್ಷ ಜನ ಅತ್ಯಂತ ಸುಂದರರಾದ ತೇಜಸ್ವಿನೀ ಕುಮಾರಿಯರೂ ಮತ್ತು ಅಸಂಖ್ಯ ಬಗೆಬಗೆಯ ಪ್ರಜೆಗಳೂ ಉತ್ಪನ್ನರಾದರು. ಆ ಲಕ್ಷ ಜನ ಕನ್ಯಾಮಣಿಗಳಿಗಾಗಿ ಆ ದೇವಿಯು ತಕ್ಷಣವೇ ತನ್ನ ತಪಃಶ್ಶಕ್ತಿಯಿಂದ ಅದೇ ಮಂದರಪರ್ವತದಲ್ಲಿ ದಿವ್ಯವಾದ ಪಟ್ಟಣವನ್ನೂ ಮತ್ತು ಇರಲಿಕ್ಕೆ ಅನೇಕ ಬಂಗಾರದ ಬೆಟ್ಟಗಳಂತಿರುವ ದಿವ್ಯಭವ್ಯ ಮನೆಗಳನ್ನೂ ಸಿದ್ಧಗೊಳಿಸಿದಳು.

ವಿದ್ಯುತ್ಪ್ರಭೆ, ಚಂದ್ರಕಾಂತಿ, ಸುಜಾತಾ, ಧೃತಾಚೀ, ಶಶಿನೀ, ಶೀಲಮಂಡಿತಾ, ಜಯಂತೀ ಮುಂತಾದ ಆ ಕನ್ಯಾಮಣಿಗಳಿಂದ ಪರಿಪರಿಯಿಂದ ಪರಿಸೇವಿತಳಾದ ಆ ವೈಷ್ಣವೀದೇವಿಯು ತಪೋನಿರತಳಾಗಿದ್ದಾಗ ಒಂದು ದಿನ ಅಲ್ಲಿಗೆ ದೇವರ್ಷಿಗಳಾದ ನಾರದರು ಬಂದರು. ದೇವಿಯ ಪರಿಚಾರಿಕೆಯಾದ ವಿದ್ಯುತ್ಪ್ರಭಾ ಎಂಬ ಕುಮಾರಿಯು ತನ್ನ ಒಡತಿಯ ಆಜ್ಞೆಯಂತೆ ನಾರದರಿಗೆ ಅರ್ಘ್ಯಪಾದ್ಯಾದಿಗಳನ್ನಿತ್ತು ಸತ್ಕರಿಸಿದಳು. ನಂತರ ನಾರದರು ಆ ವೈಷ್ಣವೀದೇವಿಗೆ ನಮಸ್ಕರಿಸಿದರು. ಅವರು ತಮ್ಮ ಪೀಠದಲ್ಲಿ ಕುಳಿತುಕೊಂಡ ಬಳಿಕ ದೇವಿಯು, ''ಮುನಿವರ್ಯನೇ, ನಿನಗೆ ಸುಸ್ವಾಗತ. ನೀನು ಎಲ್ಲಿಂದ ಬಂದೆ ? ಇಲ್ಲಿಗೆ ಬಂದ ಉದ್ದೇಶವೇನು ? ನನ್ನಿಂದ ಏನಾಗಬೇಕು ? ತಿಳಿಸು '' ಎಂದು ಹೇಳಿದಳು. ಆಗ ನಾರದರು, ''ದೇವೇಶ್ವರಿ, ನಾನು ಬ್ರಹ್ಮಲೋಕದಿಂದ ಇಂದ್ರ ಲೋಕಕ್ಕೂ, ಅಲ್ಲಿಂದ ಕೈಲಾಸಪರ್ವತಕ್ಕೂ, ಹೋಗಿ ಕೈಲಾಸದಿಂದ ನೇರವಾಗಿ ಇಲ್ಲಿಗೆ ಬಂದಿದ್ದೇನೆ. ನಾನು ಇಲ್ಲಿಗೆ ಬಂದದ್ದು ನಿನ್ನ ದರ್ಶನಕ್ಕಾಗಿಯೇ'' ಎಂದು ಹೇಳಿದರು.

ವೈಷ್ಣವೀದೇವಿಯ ಚೆಲ್ವಿಕೆಯು ಮೂರು ಲೋಕಗಳೂ ನೋಡಿ ಅಚ್ಚರಿಯಿಂದ ಬೆರಳು ಕಚ್ಚುವಂತಿತ್ತು. ಅಪ್ರಾಕೃತವಾದ ಅನಿಂದ್ಯ ಸೌಂದರ್ಯವನ್ನು ಹದಿನಾಲ್ಕು ಲೋಕಗಳಲ್ಲಿ ಎಲ್ಲಿಯೂ ಕಾಣದ ನಾರದರಿಗೆ ಲಾವಣ್ಯದ ಖಣಿಯಂತಿದ್ದ ಆ ದೇವೀಮಣಿಯ ದೇಹದ ರೂಪರಾಶಿಯನ್ನು ಕಂಡು ಏನೋ ನೆನಪು ಆದಂತಾಯಿತು. ಕೂಡಲೇ ಅವರು ದೇವಿಗೆ ಪ್ರಣಾಮ ಮಾಡಿ ಅಲ್ಲಿಂದ ತಟ್ಟನೆ ಆಕಾಶಕ್ಕೆ ಹಾರಿ ನಡೆದರು.

ಅಲ್ಲಿಂದ ನಾರದರು ಗಗನಮಾರ್ಗದಿಂದ ಭೂಮಿಗಿಳಿದು ಸಮುದ್ರದೊಳಗೆ ಹೊಕ್ಕರು. ಸಾಗರದ ಗರ್ಭದಲ್ಲಿ ಮಹಿಷಾಸುರನಿಂದ ರಕ್ಷಿತವಾದ ದೈತ್ಯರಾಜಧಾನಿಗೆ ಪ್ರಯಾಣ ಬೆಳೆಸಿದರು. ಕೋಣದಂತೆ ಆಕಾರವಿರುವ ಆ ಮಹಿಷಾಸುರನು ನಾರದರನ್ನು ಕಂಡು ಭಕ್ತಿಯಿಂದ ಪೂಜಿಸಿದರು. ಮತ್ತು ''ವಿಶೇಷ ಸಮಾಚಾರವೇನಾದರೂ ಯಾವ ಲೋಕದಲ್ಲಿಯಾದರೂ ಎಂತಾದರೂ ಇದ್ದರೆ ದಯವಿಟ್ಟು ತಿಳಿಸಬೇಕು'' ಎಂದು ಬಿನ್ನವಿಸಿದನು. ಆಗ ನಾರದರು ಆ ದೈತ್ಯನ ಎದುರು ವೈಷ್ಣವೀದೇವಿಯ ಅತ್ಯದ್ಭುತವಾದ ಸೌಂದರ್ಯದ ಸಮಾಚಾರವನ್ನು ತಿಳಿಸಿದರು. ಈ ಪ್ರಪಂಚದಲ್ಲಿಯೇ ಅಂಥ ಚೆಲುವಿನ

ಚಿತ್ತಾರ ಬೇರೊಂದಿಲ್ಲವೆಂದು ಬಣ್ಣಿಸಿದರು. ಅದನ್ನು ಕೇಳಿದ ಮಹಿಷಾಸುರನ ಮನಸ್ಸು ಮರುಳಾಗಿ ಆ ವಾಗೀಶ್ವರಿಯನ್ನೇ ನೆನೆಯತೊಡಗಿತು.

ಆಗ ನಾರದರು ಆ ಮಹಿಷಾಸುರರನ್ನು ಕುರಿತು "ಬ್ರಹ್ಮಲೋಕದಿಂದ ಆಕಸ್ಮಾತ್ತಾಗಿ ನಾನು ಮಂದರಾಚಲಕ್ಕೆ ಹೋದಾಗ ಅಲ್ಲಿಯ ದೇವೀಪುರದಲ್ಲಿ ಕೌಮಾರವ್ರತಾ ಚಾರಣೆಯೂ, ತಪಸ್ವಿನಿಯೂ ಆದ ಆ ದೇವಿಯೂ ನನ್ನ ಕಣ್ಣಿಗೆ ಬಿದ್ದಳು. ಇಂಥ ಹೆಣ್ಣನ್ನು ನಾನು ಹದಿನಾಲ್ಕು ಲೋಕಗಳಲ್ಲಿಯೇ ಕಂಡಿದ್ದಿಲ್ಲ. ಅನೇಕ ದೇವ ಗಂಧರ್ವರೂ, ದೈತ್ಯನಾಯಕರೂ, ಋಷಿಪುಂಗವರೂ ಅವಳ ಸೇವೆಯನ್ನು ಮಾಡುತ್ತಿಲಿದ್ದಾರೆ. ದೇವ ಗಂಧರ್ವರನ್ನು ಜಯಿಸದೆ ದೇವಕುಲದ ಆ ಹೆಣ್ಣನ್ನು ಅಥವಾ ಆ ದಿವ್ಯ ಹೆಣ್ಣನ್ನು ನೀನು ಪಡೆಯಲಾರೆ" ಎಂದು ಹೇಳಿ ನಾರದರು ಅಲ್ಲಿಂದ ತಕ್ಷಣದಲ್ಲಿ ಕಣ್ಮರೆಯಾಗಿ ಹೊರಟು ಹೋದರು.

ನಾರದರು ಹೊರಟು ಹೋದ ಬಳಿಕ ಮಹಿಷಾಸುರನಿಗೆ ವೈಷ್ಣವೀದೇವಿಯದೇ ಹುಚ್ಚು ಹಿಡಿಯಿತು. ಹೇಗಾದರೂ ಮಾಡಿ ಅವಳನ್ನು ತನ್ನ ವಶಪಡಿಸಿಕೊಳ್ಳಲಿಕ್ಕಾಗಿ ಅವನು ತನ್ನ ಮಂತ್ರಿಮಂಡಲದ ಅವಸರದ ಸಭೆಯನ್ನು ಕರೆದನು. ಅವರೆದುರು ವೈಷ್ಣವೀ ದೇವಿಯ ಚೆಲುವಿಕೆ ಚಾರಿಮೆಯನ್ನು ಬಣ್ಣಿಸಿ ಅವಳನ್ನು ಕರೆತರುವ ಬಗೆಯಾವುದು ? ಎಂದು ವಿಚಾರಿಸಿದನು. ಆಗ ಅವನ ಅಷ್ಟಪ್ರಧಾನರಲ್ಲಿ ಒಬ್ಬನಾದ ಪ್ರಘಸ ಎಂಬ ಸಚಿವನು "ಆ ವೈಷ್ಣವೀ ದೇವಿಯು ಪರಾಶಕ್ತಿರೂಪಗಳಾಗಿದ್ದಾಳೆ. ಗುರುಪತ್ನಿ, ರಾಜಪತ್ನಿ ಮುಂತಾದ ಪರಸ್ತ್ರೀಯರ ಅಪಹಾರದಿಂದ ರಾಜನು ನಾಶ ಹೊಂದುತ್ತಾನೆ" ಎಂದು ತಿಳಿಯಪಡಿಸಿದನು. ಕೂಡಲೇ ವಿಘಸ ಎಂಬ ಮತ್ತೊಬ್ಬ ಮಂತ್ರಿಯು ಎದ್ದು ನಿಂತು ಪ್ರಘಸ ಮಂತ್ರಿಯ ಮಾತನ್ನು ಅನುಮೋದಿಸುತ್ತ ಇಂತು ನುಡಿದನು -

"ಇಲ್ಲಿ ನಡೆದ ಮಂತ್ರಿಗಣದವರೇ ಹಾಗೂ ಮಹಾರಾಜರೇ, ಪ್ರಘಸ ಅಮಾತ್ಯನು ನುಡಿದದ್ದು ನಿಜ. ಕನ್ಯೆಯರನ್ನು ಮನಬಂದಂತೆ ಕದ್ದೊಯ್ಯುವುದಾಗಲೀ ಓಡಿಸಿಕೊಂಡು ಹೋಗುವುದಾಗಲೀ ನಮ್ಮ ಮಹಾರಾಜರಂಥ ದೊಡ್ಡ ಮನುಷ್ಯರಿಗೆ ಶೋಭಿಸುವುದಿಲ್ಲ. ನಮ್ಮಲ್ಲಿಯ ಒಬ್ಬ ಮಂತ್ರಿಯನ್ನು ಕಳಿಸಿ ಕನ್ಯೆಯ ಹಿತ ಬಂಧುಗಳನ್ನು ನಿಮ್ಮ ಹುಡುಗಿಯನ್ನು ನಮ್ಮ ಮಹಾರಾಜರಿಗೆ ಕೊಡಿರಿ ಎಂದು ಕೇಳಿಸಬೇಕು. ಹೀಗೆ ಸಾಮೋಪಾಯದಿಂದಲೇ ಕೆಲಸವಾಗಿ ಬಿಟ್ಟರೆ ಎಲ್ಲವೂ ತಾನಾಗಿಯೇ ಮಂಗಳಕಾರ್ಯವು ನಿರ್ವಿಘ್ನವಾಗಿ ನಡೆದುಹೋಗುವದು. ಈ ಸಾಮೋಪಾಯಕ್ಕೆ ಮಣಿಯದಿದ್ದರೆ ದಾನೋಪಾಯ. ಅದಕ್ಕೂ ಮಣಿಯದಿದ್ದರೆ ಭೇದೋಪಾಯ. ಅದಕ್ಕೂ ಮಣಿಯದಿದ್ದರೆ ದಂಡೋಪಾಯ. ಕೊನೆಗೆ ಇದಾವ ಚತುರೋಪಾಯ ಗಳಿಂದ ಆ ಕನ್ನೆಯು ದೊರಕದಿದ್ದರೆ ಆ ದೇವೀಪುರದ ಮೇಲೆಯೇ ದಂಡಯಾತ್ರೆ ಬೆಳೆಸಿ ಯುದ್ಧಮಾಡಿ ಅವಳನ್ನು ಹಿಡಿದು ತರೋಣ."

ವಿಘಸನ ಈ ಯುಕ್ತವಾದವು ಎಲ್ಲರಿಗೂ ಹಿಡಿಸಿತು. ಎಲ್ಲರೂ ಕೂಡಿ ಆ ವೈಷ್ಣವೀದೇವಿಯ ಕಡೆಗೆ ವಿದ್ಯುತ್ಪ್ರಭ ಎಂಬ ದೂತನನ್ನು ಕೊಟ್ಟು ಕಳಿಸಿದರು. ಆ ದೂತನು ಹೋದ ಬಳಿಕ ವಿಘಸನ ಸಲಹೆಯಂತೆ ಮಹಿಷಾಸುರನು ವಿರೂಪಾಕ್ಷನೆಂಬ

ತನ್ನ ಸೇನಾಪತಿಗೆ ಚತುರಂಗ ಸೈನ್ಯವನ್ನು ಸಜ್ಜುಗೊಳಿಸಲು ಹೇಳಿದನು. ಅವನ ಅಪ್ಪಣೆಯಂತೆ ಬಲವೀರ್ಯಗಳಲ್ಲಿ ಇಂದ್ರನಿಗೆ ಹೆಗೆಲೆಣೆಯಾಗಿ ನಿಲ್ಲಬಲ್ಲ ಒಂದು ಸಹಸ್ರ ಸೇನಾಪತಿಗಳು ಆಯುಧಗಳನ್ನು ಹಿಡಿದು ನಿಂತುಕೊಂಡರು. ಅವರ ನೇತೃತ್ವದಲ್ಲಿ ಒಂಭತ್ತು ಕೋಟಿ ದೈತ್ಯರು ಘೋರಾಸ್ತ್ರಗಳನ್ನು ಹಿಡಿದು ವಿಚಿತ್ರವಾದ ವಾಹನಾ ರೂಢರಾಗಿ ಯದ್ಧೋನ್ಮಾದದಿಂದ ಜಿಗಿದು ನೆಗೆದು ಕುಣಿದು ಕುಪ್ಪಳಿಸಿದರು.

**ಶ್ರೀ ವರಾಹ :-** ಅನಂತರ ಕಾಮರೂಪಿಯೂ, ಮಹಾಬಲಶಾಲಿಯೂ ಆದ ಮಹಿಷಾಸುರನು ಮದಗಜವನ್ನು ಏರಿ ಮೇರು ಪರ್ವತವನ್ನು ಮೆಟ್ಟಿ ಅಮರಾವತಿಯನ್ನು ತಲುಪಿದನು. ಕುಪಿತರಾದ ದೇವತೆಗಳು ವಾಹನಾರೂಢರಾಗಿ ದೈತ್ಯ ಸೇನೆಯನ್ನು ಎದುರಿಸಿದರು. ದೇವದಾನವರಲ್ಲಿ ಅತ್ಯಂತ ಭೀಷಣವಾದ ಸಂಗ್ರಾಮವು ಮಸಗಿತು. ಮಹಿಷಾಸುರನ ಸೈನ್ಯದಲ್ಲಿಯ ಎಂಟು ಜನ ಬಂಟರು ಅಮರಾವತಿಯ ಅಷ್ಟವಸುಗಳನ್ನು ಕೆಣಕಿ ಕದನವಾಡಿದರು. ಮತ್ತೆ ಹನ್ನೆರಡು ಜನ ಸೊಕ್ಕಿನ ರಕ್ಕಸರು ದೇವಸೇನೆಯ ದ್ವಾದಶ ಆದಿತ್ಯರನ್ನು ತಾಗಿ ಹಣಾಹಣಿಯಾಗಿ ಹೋರಾಡಿದರು. ಇನ್ನು ದೈತ್ಯ ದುರೀಣರ ಹನ್ನೊಂದು ಜನರ ಒಂದು ಗುಂಪು ಏಕಾದಶ ರುದ್ರರನ್ನು ರಭಸದಿಂದ ತಿವಿದೆಬ್ಬಿಸಿ ಪ್ರಾಣಾಂತಿಕವಾದ ನಿಕರದ ಸಂಗ್ರಾಮವನ್ನು ನಡೆಸಿದರು.

ಬ್ರಹ್ಮದೇವರ ವರದಿಂದ ಅವಧ್ಯನಾಗಿ ಬಲವೀರ್ಯಗಳಿಂದ ಕೊಬ್ಬಿ ಉನ್ಮತ್ತನಾದ ಮಹಿಷಾಸುರನು ಸ್ವಯಂ ಇಂದ್ರನನ್ನು ಎದುರಿಸಿದನು. ಅಸಂಖ್ಯ ದೇವದಾನವ ಸೈನಿಕರು ಛಿನ್ನ ವಿಚ್ಛಿನ್ನ ದೇಹವುಳ್ಳವರಾಗಿ ಅಂಗಭಂಗವನ್ನು ಹೊಂದಿ ರಣರಂಗದ ರಕ್ತದ ಮಡುವಿನಲ್ಲಿ ಮುಳುಗಿ ಬಿದ್ದರು. ಕೊನೆಗೆ ರಾಕ್ಷಸರ ದಾರುಣವಾದ ಶಸ್ತ್ರಾಘಾತ, ಅಸ್ತ್ರಪಾತಗಳಿಂದ ಕ್ಷತವಿಕ್ಷತರಾದ ದೇವತೆಗಳು ಕಂಗೆಟ್ಟು ಓಡಿ ಹೋಗಿ ಬ್ರಹ್ಮಲೋಕವನ್ನು ಸೇರಿದರು.

*ವರಾಹ ಪುರಾಣದಲ್ಲಿ ಎಂಬತ್ತೊಂಬತ್ತನೇ ಅಧ್ಯಾಯ ಮುಗಿದುದು.*

—o—

ಇತ್ತ ಮಹಿಷಾಸುರನು ಕಳಿಸಿದ ವಿದ್ಯುತ್‌ಪ್ರಭ ಎಂಬ ದೂತನು ಮಂದರ ಪರ್ವತಕ್ಕೆ ಬಂದು ಸ್ನಾನ ಮಾಡಿ ಶುಚಿರ್ಭೂತನಾಗಿ ವೈಷ್ಣವೀದೇವಿಯ ಬಳಿಗೆ ಬಂದನು. ಆ ದೈತ್ಯದೂತನು ಆ ದೇವಿಯ ಬಳಿಗೆ ಬಂದಾಗ ನೂರಾರು ಕನ್ಯಾ ಕುಮಾರಿಯರು ಆ ದೇವಿಯ ಸೇವೆಗೈಯುತ್ತಿದ್ದರು. ಹೀಗೆ ನುಡಿದನು. "ದೇವಿ, ಹಿಂದೆ ಆದಿ ಸೃಷ್ಟಿಯಲ್ಲಿ ಸಾರಸ್ವತ ಎಂಬ ಒಬ್ಬ ಋಷಿಯು ಇದ್ದನು. ಆ ಸಾರಸ್ವತಮುನಿಗೆ ಸುಪಾರ್ಶ್ವ ಎಂಬ ಮಹಾರಾಜನು ಮಿತ್ರನಾಗಿದ್ದನು. ಆ ಸುಪಾರ್ಶ್ವನ ಮಗನಾದ ಸಿಂಧು ದ್ವೀಪನು ಮಹಾ ತೇಜಸ್ವಿಯೂ, ಅತ್ಯಂತ ಪ್ರತಾಪಶಾಲಿಯೂ ಆಗಿದ್ದನು. ಈ ಸಿಂಧುದ್ವೀಪ ಮಹಾರಾಜನು ಮಾಹೀಷ್ಮತೀ ಪಟ್ಟಣದಲ್ಲಿ ಅನ್ನ ನೀರು ಬಿಟ್ಟು ಘೋರ ತಪಸ್ಸು ಮಾಡುತ್ತ ಕುಳಿತುಕೊಂಡಾಗ ಅಲ್ಲಿಗೆ ಒಂದು ಅತ್ಯಂತ ಸುಂದರವಾದ ಎಮ್ಮೆಯು ಬಂದಿತು.

ಆ ಎಮ್ಮೆಯು ಬೇರಾರೂ ಆಗದೆ ಮಾಹಿಷ್ಮತೀ ಎಂಬ ಹೆಸರಿನ ರಾಜಕುಮಾರಿಯೇ ಆಗಿದ್ದಳು. ವಿಪ್ರಚಿತ್ತಿ ಎಂಬ ದೈತ್ಯರಾಜನಿಗೆ ಮಾಹಿಷ್ಮತೀ ಎಂಬ ಕನ್ಯೆ ಇದ್ದು ಅವಳ ಚೆಲುವು ಅಪ್ಸರೆಯರನ್ನು ನಾಚಿಸುತ್ತಿತ್ತು. ಒಮ್ಮೆ ಆ ದೈತ್ಯರಾಜನ ನಂದಿನಿಯು ವನವಿಹಾರಕ್ಕಾಗಿ ಮಂದರ ಪರ್ವತದ ಸುಂದರವಾದ ಕಂದರ ಪ್ರದೇಶಗಳಿಗೆ ಹೋಗಿದ್ದಳು. ಆ ಮಂದರ ದ್ರೋಣಿಯಲ್ಲಿ ಒಂದು ರಮಣೀಯವಾದ ಪುಣ್ಯಾಶ್ರಮವಿದ್ದಿತು. ಆ ಆಶ್ರಮದ ಸುತ್ತ ನಂದನವನದಂತೆ ಒಂದು ಸೊಗಸಾದ ಹೂದೋಟವಿದ್ದಿತು. ಅಲ್ಲಿ ಹೂಗಳ ಭಾರದಿಂದ ಬಳಕುವ ಬಳ್ಳಿಗಳನ್ನೂ, ಮಧುಭಾರದಿಂದ ತುಳುಕುವ ಹೂವಿನ ಗೊಂಚಲಗಳನ್ನೂ, ಮದತುಂಬಿ ಹಾಡುವ ತುಂಬಿಗಳ ಸಂಭ್ರಮದ ಗೀತ ಗುಂಜಾರವನ್ನೂ ಕೇಳಿ ನೋಡಿದ ಆ ದೈತ್ಯರಾಜಕುವರಿಗೆ ಆ ಆಶ್ರಮದಲ್ಲಿಯೇ ತಾನು ನೆಲಿಸಬೇಕೆಂದು ಬಯಕೆಯಾಯಿತು.

ಆದರೆ ಆಶ್ರಮದಲ್ಲಿ ಈ ಮೊದಲೇ ಅಸ್ವರ ಎಂಬ ಋಷಿಯು ತಪಸ್ಸು ಮಾಡುತ್ತ ಕುಳಿತಿದ್ದನು. ಆ ಋಷಿಯನ್ನು ಹೇಗಾದರೂ ಮಾಡಿ ಹೆದರಿಸಿ ಅಲ್ಲಿಂದ ಓಡಿಸಿ ಬಿಡಬೇಕು. ಆನಂತರ ಆ ಆಶ್ರಮವನ್ನು ತಾನೇ ಆಕ್ರಮಿಸಬೇಕು ಎಂದು ಅವಳು ಹಂಚಿಕೆ ಹಾಕಿದಳು. ಮತ್ತು ಅದಕ್ಕಾಗಿ ತಾನು ಎಮ್ಮೆಯ ರೂಪವನ್ನು ತೆಗೆದುಕೊಂಡು ಅದೇ ರೂಪದಿಂದ ತನ್ನ ಗೆಳತಿಯರೊಂದಿಗೆ ಋಷಿಯ ಆಶ್ರಮದೊಳಗೆ ಹೊಕ್ಕಳು. ಒಮ್ಮೆಲೆ ತನ್ನ ಮೇಲೆ ಚಿಮ್ಮಿಬಂದ ಆ ಚೆಲುವಿನ ಎಮ್ಮೆಗಳನ್ನು ಅಸ್ವರ ಮುನಿಯ ಕಂಡು ಆಶ್ಚರ್ಯಚಕಿತನಾದನು. ಆ ಮಹಿಷೀ ಪಡೆಯ ಮುಂದಿರುವ ಒಂದು ಎಮ್ಮೆಯಂತೂ ಹಮ್ಮು ಹೊಗರೇರಿ ಒಳ್ಳೇ ಬಿಮ್ಮಿನಿಂದ ಆ ಮುನಿಯನ್ನು ಕೋಡಿನಿಂದ ಇರಿಯ ಬಂದಿತು. ಅದನ್ನು ಕಂಡಕೂಡಲೇ ಇವಳು ರಾಜಕುಮಾರಿಯಾದ ಮಾಹಿಷ್ಮತೀ ಎಂದು ಮುನಿಗೆ ತಿಳಿದುಹೋಯಿತು. ತನ್ನನ್ನು ಅಲ್ಲಿಂದ ಹೆದರಿಸಿ ಓಡಿಸಬೇಕೆಂದು ಬಂದ ಆ ರಾಜಪುತ್ರಿಯ ದುರ್ಬುದ್ಧಿಯನ್ನು ತಿಳಿದು ಕುಪಿತನಾದ ಆ ಮಹರ್ಷಿಯು "ನೀನು ಒಂದು ನೂರು ವರ್ಷ ಎಮ್ಮೆ ಆಗಿಯೇ ಇರು ಎಮ್ಮೆಯ ರೂಪದಿಂದ ನನ್ನನ್ನು ಬೆದರಿಸಲು ಬಂದ ನಿನಗೆ ಇದೇ ತಕ್ಕ ಪ್ರಾಯಶ್ಚಿತ್ತ" ಎಂದು ಶಾಪವಿತ್ತನು.

ಆಗ ಮುನಿಯ ಶಾಪದಿಂದ ಬೆದರಿ ನಡುಗುತ್ತ ಆ ಮಾಹಿಷ್ಮತಿಯು ಆ ಋಷಿಯ ಕಾಲಮೇಲೆ ಬಿದ್ದು ತನ್ನ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡಳು. ಆಗ ಅಸ್ವರ ಮುನಿಯ ಕೋಪದ ಕೋಟೆಗೆ ಒಂದು ಕರುಣೆಯ ಕಿಂಡಿಯೊಡೆದು, ''ಈ ಎಮ್ಮೆಯ ರೂಪದಿಂದಲೇ ನೀನು ಒಬ್ಬ ಮಗನನ್ನು ಪಡೆದ ಬಳಿಕ ನಿನಗೆ ಈ ಮಹಷೀರೂಪದಿಂದ ಬಿಡುಗಡೆಯಾಗುವದು'' ಎಂದು ಮಾರ್ನುಡಿದನು. ಹೀಗೆ ಅಸ್ವರ ಮುನಿಯ ಶಾಪವನ್ನು ಹೊತ್ತು ಎಮ್ಮೆಯ ಮೈಯಿಂದ ತಿರುಗಾಡುತ್ತಿರುವ ಆ ಮಾಹಿಷ್ಮತಿಯು ಸಿಂಧುದ್ವೀಪ ರಾಜನು ತಪಸ್ಸು ಮಾಡುತ್ತಾ ಕುಳಿತ ನರ್ಮದಾ ತೀರಕ್ಕೆ ಬಂದಳು. ಆಗ ನರ್ಮದೆಯ ನೀರಿನಲ್ಲಿ ಇಂದುಮತಿ ಎಂಬ ದೈತ್ಯಕನ್ನೆಯು ಮೈತೊಳೆಯುತ್ತಿದ್ದಳು. ಮೊದಲೇ ಚೆಲುವೆಯಾದ ಆ ತರುಣಿಯ ಅಂಗಾಂಗ ಲಾವಣ್ಯವು ಬಟ್ಟೆಬಿಟ್ಟು ನದಿಯಲ್ಲಿ ಮೀಯುವಾಗ ಇನ್ನೂ ಮೋಹಕವಾಗಿ ಕಾಣುತ್ತಿತ್ತು.

ದಂಡೆಯಲ್ಲಿ ತಪಸ್ಸು ಮಾಡುತ್ತ ಕುಳಿತ ಸಿಂಧುದ್ವೀಪ ಮುನಿಯ ಕಣ್ಣಿಗೆ ಆ ದೈತ್ಯಬಾಲೆಯ ಚೆಲುವು ಚಿತ್ತಾರವಾಗಿ ಹಿಡಿಸಿತು. ಮುನಿಯ ಮನ ಮೀನವಾಗಿ ನೀರಿನಲ್ಲಿ ಮೀಯುವ ಮುಗದೆಯ ಹಿಂದೆ ಓಡಿತು. ಚಿತ್ತ ಚಂಚಲಿಸಿತು. ಕುಳಿತಲ್ಲಿಯೇ ಶಕ್ತಿಪಾತವಾಗಿ ಒಂದು ಕಲ್ಲಿನ ಡೋಣಿಯಲ್ಲಿ ಬಿದ್ದಿತು. ಎಮ್ಮೆಯ ರೂಪದಲ್ಲಿದ್ದ ಮಾಹಿಷ್ಮತಿಯು ಆ ಡೋಣಿಯಲ್ಲಿಯ ನೀರನ್ನು ಕುಡಿದಳು. ಅದರಿಂದ ಆ ಮಹಿಷಿಯ ಗರ್ಭಧಾರಣವಾಗಿ ಮಹಿಷ ಎಂಬ ಮಗನನ್ನು ಹೆತ್ತಳು. ಮಾಹಿಷ್ಮತಿ ಎಂಬ ಹೆಸರಿನ ಶಾಪಗ್ರಸ್ತಳಾದ ವಿಪ್ರಚಿತ್ತಿಯ ಆ ಮಗಳೇ ಈ ಮಹಿಷಾಸುರನ ತಾಯಿ. ಬ್ರಹ್ಮದೇವರ ವಂಶದಲ್ಲಿ ಜನಿಸಿದ ಸಿಂಧುದ್ವೀಪ ಋಷಿಯೇ ಇವನ ತಂದೆ. ಇಂಥ ದೈತ್ಯರಾಜನಾದ ಮಹಿಷಾಸುರನು ''ದೇವಿ, ನಿನ್ನನ್ನು ಮದುವೆಯಾಗಲು ಬಯಸಿದ್ದಾನೆ. ಮಹಾದೇವಿಯೇ, ಮಹಾಬಲಿಷ್ಠನಾದ ನಮ್ಮ ದೊರೆಯು ಎಲ್ಲ ದೇವತೆಗಳನ್ನು ಗೆದ್ದು ಮೂರು ಲೋಕಗಳನ್ನು ನಿನಗೆ ಪ್ರೀತಿಯ ಕಾಣಿಕೆಯಾಗಿ ಕೊಡುವನು. ನೀನು ನಿನ್ನನ್ನೇ ಅವನಿಗೆ ಒಪ್ಪಿಸಿಬಿಡು.'' ಈ ದೈತ್ಯದೂತನ ಮಾತುಗಳನ್ನು ಕೇಳಿ ಆ ಪರಮಾದೇವಿಯು ಏನೂ ಮಾತನಾಡಲಿಲ್ಲ. ಬರೀ ನಕ್ಕು ಬಿಟ್ಟಳು. ನಗುತ್ತಿದ್ದ ಆ ದೇವಿಯ ಉದರದಲ್ಲಿ ಮೂರು ಲೋಕಗಳೂ ಆ ದೂತನಿಗೆ ಕಂಡವು. ತಕ್ಷಣದಲ್ಲಿಯೇ ಆ ದೈತ್ಯದೂತನು ಅದನ್ನು ನೋಡಿ ಬೆಚ್ಚಿ ಬಿದ್ದನು. ಹುಚ್ಚ ಆದನು. ಬೆಪ್ಪನಂತಾಗಿ ಬೆದರಿ ನಿಂತನು. ಆಗ ಆ ದೇವಿಯ ಬಾಗಿಲು ಕಾಯುವ ಜಯಾ ಎಂಬ ಹೆಸರಿನ ದಾಸಿಯು ಅಸುರರ ಆ ಆಳುಮಗನನ್ನು ಕುರಿತು ಇಂತು ನುಡಿದಳು.

''ದೂತನೇ, ಹೆಣ್ಣಿನ ಹುಚ್ಚು ತಲೆಗೇರಿದವನ ಮಾತಿನಂತೆಯೇ ಇದೆ ನಿನ್ನ ಒಡೆಯನ ನುಡಿ. ಆದರೆ ಇಲ್ಲಿಯ ಸಮಾಚಾರವನ್ನು ಚೆನ್ನಾಗಿ ತಿಳಿದುಕೋ. ಈ ದೇವಿಯು ಶಾಶ್ವತ ಕುಮಾರಿಯೇ ಆಗಿದ್ದಾಳೆ. ಅವಳನ್ನಂತೂ ಬಿಟ್ಟುಬಿಡು. ಅವಳ ಕಾಲ ಧೂಳಿಯ ಆಳುಗಳಾದ ಅನೇಕ ಕುಮಾರಿಕೆಯರೂ ಇಲ್ಲಿ ಇರುತ್ತಾರೆ. ಅವರ ಪೈಕಿ ಯಾರೊಬ್ಬರ ಅಡಿ ಹುಡಿಯೂ ನಿನ್ನ ಒಡೆಯನ ಮುಡಿಯನ್ನು ಎಂದೂ ಸೋಂಕಲಾರದು. ಇನ್ನು ಈ ಸಾಕ್ಷಾತ್ ದೇವಿಯ ಮಾತಂತೂ ದೂರ ಉಳಿಯಿತು. ನಿನ್ನ

ಬದುಕು ಸಾವಿನ ಅಂಚಿಗೆ ಸಮೀಪಿಸಬಾರದೆಂದಿದ್ದರೆ ಬೇಗನೇ ಇಲ್ಲಿಂದ ಹೊರಟು ಹೋಗು.'' ಈ ಮಾತನ್ನು ಕೇಳಿ ಆ ಅಸುರ ರಾಯಭಾರಿಯು ಕಾಲು ಕಿತ್ತಿದನು. ಅಷ್ಟರಲ್ಲಿ ಮುಗಿಲಿನಲ್ಲಿ ನಾರದರು ಕಾಣಿಸಿಕೊಂಡರು. ಎಲ್ಲ ಕುಮಾರಿಯರೂ ಆನಂದದಿಂದ ಸ್ವಾಗತ ನೀಡಿದರು. ''ಇಂದೇ ಸುದಿನ. ಇದೇ ಸುದೈವ.'' ಎನ್ನುತ್ತ ನಾರದರು ಬಂದು ಆ ವೈಷ್ಣವೀದೇವಿಗೆ ನಮಸ್ಕಾರ ಮಾಡಿ ಆಸನದ ಮೇಲೆ ಕುಳಿತುಕೊಂಡರು. ಉಳಿದ ಸಖೀ ಕುಮಾರಿಯರು ನೀಡಿದ ಸತ್ಕಾರವನ್ನು ಸ್ವೀಕರಿಸಿ ನಾರದರು ನುಡಿದರು.

''ದೇವಿ, ಎಲ್ಲ ದೇವತೆಗಳೂ ನನ್ನನ್ನು ನಿನ್ನ ಕಡೆಗೆ ಕಳಿಸಿಕೊಟ್ಟಿದ್ದಾರೆ. ಮಹಿಷ, ಎಂಬ ದೈತ್ಯನು ಯುದ್ಧದಲ್ಲಿ ಎಲ್ಲ ದೇವತೆಗಳನ್ನು ಗೆದ್ದಿದ್ದಾನೆ. ನಿನ್ನನ್ನು ಹಿಡಿಯುವ ಎತ್ತುಗಡಿಯಲ್ಲಿದ್ದಾನೆ. ಎಂದು ದೇವತೆಗಳು ನನ್ನನ್ನು ನಿನ್ನೆಡೆ ಕಳಿಸಿಕೊಟ್ಟಿದ್ದಾರೆ. ನೀನು ಸ್ಥಿರಳಾಗಿ ನಿಂತು ಆ ದೈತ್ಯರಾಜನನ್ನು ಧ್ವಂಸಗೊಳಿಸು.'' ಹೀಗೆ ಹೇಳಿ ಕೂಡಲೇ ನಾರದರು ಅದೃಶ್ಯರಾಗಿ ಅಲ್ಲಿಂದ ಹೊರಟು ಹೋದರು. ಕೂಡಲೇ ವೈಷ್ಣವೀದೇವಿಯು ತನ್ನ ಪರಿವಾರದ ಎಲ್ಲ ಕನ್ಯಾಮಣಿಗಳಿಗೆ ಯುದ್ಧಕ್ಕೆ ಸಿದ್ಧರಾಗಲು ಅಪ್ಪಣೆ ನೀಡಿದಳು. ಕೂಡಲೇ ಎಲ್ಲ ಕುಮಾರಿಯರು ಮಹಾದೇವಿಯ ಶಾಸನದಂತೆ ಖಡ್ಗ, ಢಾಲು, ಬಿಲ್ಲು, ಬಾಣಗಳನ್ನು ಹಿಡಿದು ನಿಂತರು. ಅತ್ತ ದೇವತೆಗಳ ಸೇನೆ ಎಲ್ಲವೂ ಮಹಿಷಾಸುರನ ದೈತ್ಯ ಸೈನ್ಯದ ದಾರುಣವಾದ ದಾಳಿಯಿಂದ ದಿಕ್ಕೆಟ್ಟು ಚದುರಿ ಓಡಿಹೋಗಲು ಮಹಿಷಾಸುರನು ತನ್ನ ಸೈನ್ಯಕ್ಕೆಲ್ಲ ಮಂದರ ಪರ್ವತದೆಡೆಗೆ ನಡೆಯಲಿಕ್ಕೆ ಅಪ್ಪಣೆ ಮಾಡಿದನು.

ದಾನವೇಂದ್ರನ ಪ್ರಚಂಡವಾದ ಸೇನೆಯು ವೈಷ್ಣವೀಪುರದ ಬಳಿ ಬರುವಷ್ಟರಲ್ಲಿ ಸುಂದರಿಯರ ಸೇನಾಪಥಕವು ಶಸ್ತ್ರಹಿಡಿದು ಯುದ್ಧಕ್ಕೆ ಸಿದ್ಧವಾಗಿ ನಿಂತುಕೊಂಡಿತ್ತು. ದೈತ್ಯ ಸೈನ್ಯವು ಬಂದ ಕೂಡಲೇ ಜಲಜಮುಖಿಯರೆಲ್ಲರೂ ಜ್ವಾಲಾಮುಖಿಯರಾಗಿ ಸಿಡಿದೆದ್ದು ದಾನವ ಸೇನೆಯನ್ನೆಲ್ಲ ಖಡ್ಗಗಳಿಂದ ಕಡಿದು ಹಾಕಿದರು. ಬಿಲ್ಲು ಬಾಣಗಳಿಂದ ಕೊಚ್ಚಿ ಹಾಕಿದನು. ದೈತ್ಯರ ರುಂಡಗಳೆಲ್ಲ ದಂಡದಿಂದ ಖಂಡಿಸಲ್ಪಟ್ಟು ರಣಾಂಗಣದಲ್ಲಿ ಅತ್ತಿತ್ತ ಬಿದ್ದವು. ಹೀಗೆ ಕ್ಷಣ ಮಾತ್ರದಲ್ಲಿ ದೈತ್ಯವೀರರೆಲ್ಲರೂ ಕುಮಾರಿ ಬಳಗದಿಂದ ಉಧ್ವಸ್ತರಾಗಿ ಹೋಗಲು ಉಳಿದ ದೈತ್ಯರೆಲ್ಲರೂ ಹಾಹಾಕಾರವನ್ನು ಮಾಡುತ್ತ ಓಡತೊಡಗಿದರು. ಇದನ್ನು ಕಂಡು ಮಹಿಷಾಸುರನು ಈ ಎಲ್ಲ ಕುಮಾರಿಯನ್ನು ಕೊಂದು ಬಿಡಬೇಕೆಂದು ಗದೆಯನ್ನು ಎತ್ತಿ ಹೊಡೆಯ ಹೊರಟನು. ತನ್ನೆಡೆಗೆ ಬರ ಹೊರಟ ಆ ಕೋಣ ದೈತ್ಯನನ್ನು ಕಂಡು ಕೋಪಗೊಂಡ ದೇವಿಯು ಇಪ್ಪತ್ತು ಕೈಗಳನ್ನು ತಳೆದು ಪ್ರತಿಯೊಂದು ಕೈಯಲ್ಲಿಯೂ ಬಿಲ್ಲು, ಕತ್ತಿ, ಶಕ್ತಿ, ಬಾಣ, ತ್ರಿಶೂಲ, ಗದೆ, ಒನಕೆ, ಮುಂತಾದ ಬೇರೆ ಬೇರೆ ಆಯುಧಗಳನ್ನು ಹಿಡಿದು ಸಿಂಹವನ್ನೇರಿ ಆ ಮಹಿಷಾಸುರರನ್ನು ಎದುರಿಸಿದಳು.

ಆಗ ಅವಳು ರುದ್ರದೇವರನ್ನು ಸ್ಮರಿಸಲು ಶಿವ ಎತ್ತನ್ನು ಹತ್ತಿ ಅಲ್ಲಿಗೆ ಬಂದನು. ಅವನಿಗೆ ಅಲ್ಲಿಯೇ ನಿಲ್ಲಲು ಹೇಳಿ ಆ ಪರಮೇಶ್ವರಿಯು ಎಲ್ಲ ದೈತ್ಯರನ್ನೂ ಕೊಂದು ಹಾಕಿದಳು. ಆ ಮಹಿಷಾಸುರನು ಮಾತ್ರ ಕೆಲವು ಕಾಲ ಯುದ್ಧ ಮಾಡಿ ಸೋತು ಹೋಗುತ್ತಿದ್ದನು. ಕೆಲವು ದಿನಗಳ ಮೇಲೆ ಮತ್ತೆ ಬಂದು ಯುದ್ಧಕ್ಕೆ ನಿಲ್ಲುತ್ತಿದ್ದನು. ಹೀಗೆ

ಕೆಲವು ದಿನ ಯುದ್ಧ, ಕೆಲವು ದಿನ ಓಡಿಹೋಗುವುದು. ಹೀಗೆ ಆ ದೈತ್ಯನು ಸಮರವನ್ನು ಎಳೆಸುತ್ತ, ಸಾವನ್ನು ತಪ್ಪಿಸುತ್ತ, ಹತ್ತುಸಾವಿರ ವರ್ಷ ಓಡಾಡಿದನು. ಕಡೆಗೆ ಆ ವೈಷ್ಣವೀ ದೇವಿಯು ಆ ದುಷ್ಟ ದೈತ್ಯನನ್ನು ಬೆನ್ನಟ್ಟಿ ಬ್ರಹ್ಮಾಂಡದ ತುಂಬಾ ಓಡಾಡಿ ಕೊನೆಗೆ ಶತಶೃಂಗ ಪರ್ವತದಲ್ಲಿ ಅವನನ್ನು ಹಿಡಿದಳು. ಶೂಲದಿಂದ ಹೊಡೆದು, ಕಾಲಿನಿಂದ ಅವನ ತಲೆಯನ್ನು ಒದ್ದು, ಖಡ್ಗದಿಂದ ಶಿರಸ್ಸನ್ನು ಕತ್ತರಿಸಿ ಹಾಕಿದಳು. ದೇವಿಯ ಶಸ್ತ್ರಾಸ್ತ್ರದಿಂದ ಆದೈತ್ಯನ ದೇಹದೊಳಗಿದ್ದ ಸಚ್ಚೇತನವು ಸ್ವರ್ಗದೊಳಗೆ ಸೇರಿತು. ವೈಷ್ಣವೀದೇವಿಯು ಮಹಿಷಾಸುರನ ಮರ್ದನ ಮಾಡಿದ್ದನ್ನು ನೋಡಿ ದೇವತೆಗಳೆಲ್ಲರೂ ಆನಂದದಿಂದ ಅವಳನ್ನು ಸ್ತೋತ್ರ ಮಾಡಿದರು. ಬ್ರಹ್ಮದೇವರೂ ಅವರೊಟ್ಟಿಗೆ ಧ್ವನಿ ಕೂಡಿಸಿದರು. ದೇವತೆಗಳ ಈ ಸ್ತೋತ್ರವನ್ನು ಕೇಳಿ ಪ್ರಸನ್ನಳಾದ ಆ ಪರಮೇಶ್ವರಿಯು ಅವರಿಗೆಲ್ಲ ಬೇಕಾದ ವರ ಬೇಡಿರಿ ಎಂದು ಹೇಳಿದಳು. ಅದಕ್ಕೆ ದೇವತೆಗಳು ''ದೇವಿ, ನಾವು ಇದೀಗ ಹೇಳಿದ ಈ ದೇವೀಸ್ತೋತ್ರವನ್ನು ಯಾರು ಪ್ರತಿನಿತ್ಯವೂ ಪಠಿಸಿ ನಾರಾಯಣನಿಗೆ ಸಮರ್ಪಣೆ ಮಾಡುತ್ತಾರೋ ಅವರ ಮನೋರಥವು ಪೂರ್ಣವಾಗಬೇಕು.'' ಎಂದು ಕೇಳಿಕೊಂಡರು. ಅದಕ್ಕೆ ಆ ಪರಮೇಶ್ವರಿಯು ಹಾಗೇ ಆಗಲಿ ಎಂದು ವರವಿತ್ತು ದೇವತೆಗಳನ್ನು ಪ್ರಸನ್ನ ಮನಸ್ಸಿನಿಂದ ಬೀಳ್ಕೊಟ್ಟಳು.

*ವರಾಹ ಪುರಾಣದಲ್ಲಿ ತೊಂಭತ್ತನೇ ಅಧ್ಯಾಯ ಮುಗಿದುದು.*



**ವರಾಹ :-** ಹರಿ, ಹರ, ಬ್ರಹ್ಮ ಈ ತ್ರಿಮೂರ್ತಿಗಳ ದೃಷ್ಟಿ ಸಾಮರಸ್ಯದಿಂದ ಹುಟ್ಟಿದ ತ್ರಿಕಲಾದೇವಿಯ ವೈಷ್ಣವಾಂಶದ ಮಹಿಮೆಯನ್ನು ನಾನು ನಿನಗೆ ಈವರೆಗೆ ತಿಳಿಸಿದೆ. ಇನ್ನು ತಮಸ್ಸಂಭೂತಳಾದ ರೌದ್ರೀದೇವಿಯ ಸಮಾಚಾರವನ್ನು ಹೇಳುತ್ತೇನೆ ಕೇಳು. ಶಿವಶಕ್ತಿ ಸ್ವರೂಪಿಣಿಯಾದ ಈ ರೌದ್ರೀದೇವಿಯು ನೀಲಾಚಲ ಪರ್ವತಕ್ಕೆ ಹೋಗಿ ಪಂಚಾಗ್ನಿ ಸಾಧನವನ್ನು ಮಾಡಿಕೊಂಡು ಭಯಂಕರ ತಪಸನ್ನು ಮಾಡತೊಡಗಿದಳು. ಆ ಕಾಲದಲ್ಲಿ 'ರೂರೂ' ಎಂಬ ಮಹಾತೇಜಸ್ವಿಯಾದ ಒಬ್ಬ ದೈತ್ಯನು ಬ್ರಹ್ಮ ದೇವರಿಂದ ವರವನ್ನು ಪಡೆದು ಬಲೋದ್ದೃಪ್ತನೂ, ಮದೋನ್ಮತ್ತನೂ ಆಗಿ ಸಮುದ್ರ ಮಧ್ಯದಲ್ಲಿ 'ಮಹಾವನ' ಎಂಬ ರತ್ನಸಾರ ಖಚಿತವಾದ ಪಟ್ಟಣವನ್ನು ಕಟ್ಟಿಕೊಂಡು ಎಲ್ಲ ದೇವತೆಗಳಿಗೂ ಭಯಂಕರನಾಗಿ ವಾಸವಾಗಿದ್ದನು. ಆ ದುಷ್ಟ ದೈತ್ಯನು ಚತುರಂಗ ಸೈನ್ಯವನ್ನು ಕಟ್ಟಿಕೊಂಡು ಲೋಕಪಾಲಕರ ಪಟ್ಟಣಗಳನ್ನೆಲ್ಲ ಗೆಲ್ಲಬೇಕೆಂದು ಅಮರಾವತಿಯ ಮೇಲೆ ಏರಿ ಬಂದನು. ಅವನ ಆ ಸೇನಾಸನ್ನಾಹದ ಅಬ್ಬರ ಉಬ್ಬರಗಳನ್ನೂ, ಹೊಡೆತ ಬಡಿತಗಳನ್ನೂ, ಹೋರಾಟ ಏರಾಟಗಳನ್ನೂ ತಾಳಲಾರದೇ ದೇವ ಸೈನ್ಯ ಎಲ್ಲವೂ ದಿಕ್ಕಾಪಾಲಾಗಿ ಹೋಯಿತು.

ಆಗ ಎಲ್ಲ ದೇವತೆಗಳೂ ಹೆದರಿ ಹೌಹಾರಿ ರೌದ್ರಿ ದೇವಿಯು ತಪಂಗೈಯುತ್ತಿದ್ದ ನೀಲಾಚಲಕ್ಕೆ ಬಂದು ಆ ದೇವಿಗೆ ಶರಣುಹೋದರು. ರೂರೂ ರಾಕ್ಷಸನು ಅವರನ್ನು ಬೆನ್ನಟ್ಟಿ ಬರುತ್ತಲಿದ್ದನು. ಆಗ ದೇವತೆಗಳು ಅವಳಿಗೆ ತಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿಕೊಂಡರು. ಅದನ್ನು ಕೇಳಿ ಆ ರೌದ್ರೀದೇವಿಯು ದೇವತೆಗಳ ಎದುರು ನಕ್ಕುಬಿಟ್ಟಳು. ಅವಳ ಅಟ್ಟಹಾಸದಿಂದಲೇ ಅನೇಕ ಕುಮಾರಿಯರು ಹುಟ್ಟಿ ಶಸ್ತ್ರಾಸ್ತ್ರಗಳನ್ನು ಹಿಡಿದು ಹೋರಾಟಕ್ಕೆ ಹೊರಟು ನಿಂತರು. ಎಲ್ಲರ ಕೈಯಲ್ಲಿಯೂ ತ್ರಿಶೂಲ, ಅಂಕುಶ, ಪಾಶ ಮುಂತಾದ ಮಾರಕಾಸ್ತ್ರಗಳು ಮಿಂಚುತ್ತಿದ್ದವು. ಇಂಥ ಕೋಟ್ಯಾವಧಿ ಕುಮಾರಿಯರು ಕೂಡಲೇ ಕದನಕ್ಕೆ ಇಳಿದು ರೂರೂ ರಾಕ್ಷಸನ ಸೈನಿಕರನ್ನೆಲ್ಲ ತಿಕ್ಕಿಮುಕ್ಕಿ ಹೊಡೆದು ಕೊಂದು ಹಾಕಿದರು. ಒಂದು ಕ್ಷಣ ದೈತ್ಯ ಸೈನ್ಯವೆಲ್ಲವೂ ಧ್ವಂಸವಾಗಿ ಹೋಯಿತು.

ಅದನ್ನು ಕಂಡು ರೂರೂ ದೈತ್ಯನು ರೌರವಿ ಎಂಬ ಮಾಯೆಯನ್ನು ನಿರ್ಮಿಸಿ ದೇವತೆಗಳ ಮೇಲೆ ಬಿಟ್ಟನು. ಅದರಿಂದ ದೇವತೆಗಳೆಲ್ಲರೂ ಮೂರ್ಛಿತರಾಗಿ ಮಲಗಿದರು. ಅದನ್ನು ಕಂಡು ರೌದ್ರೀದೇವಿಯೂ ರೋಷಾಂಧಳಾಗಿ ಆ ದೈತ್ಯನನ್ನು ತನ್ನ ತ್ರಿಶೂಲದಿಂದ ತಿವಿದಳು. ಅದರಿಂದ ಆ ರೂರೂ ರಾಕ್ಷಸನ ತೊಗಲು ಹಾಗೂ ಬೋಳ ತಲೆ ಎರಡು ಬೇರೆ ಬೇರೆಯಾದವು. ಕ್ಷಣ ಮಾತ್ರದಲ್ಲಿ ಆ ರಾಕ್ಷಸನ ಚರ್ಮಮುಂಡಗಳನ್ನು ಆ ದೇವಿಯು ಖಡ್ಗದಿಂದ ಕತ್ತರಿಸಿ ಹಾಕಿದಳು. ದೈತ್ಯನ ಚರ್ಮಮುಂಡಗಳನ್ನೂ ಕಡಿದು ಹಾಕಿದ್ದರಿಂದ ಅವಳು ಚಾಮುಂಡಾ ಎಂದು ಪ್ರಸಿದ್ಧಳಾದಳು. ಕಾಲರಾತ್ರಿ ಸ್ವರೂಪಿಣಿಯೂ, ದುಷ್ಟ ಸಂಹಾರಿಣಿಯೂ ಆದ ಆ ಪರಮೇಶ್ವರಿಯ ಕೋಟ್ಯಾವಧಿ ಕುಮಾರೀ ಸೇವಿಕೆಯರು ಪೂಜ್ಯಳಾದ ಅವಳನ್ನು ಬಳಸಿನಿಂತು ''ನಮಗೆಲ್ಲ ಹಸಿವೆ ಆಗಿದೆ. ನಮಗೆ ಊಟಕ್ಕೆ ಕೊಡು.'' ಎಂದು

ಕೇಳಿಕೊಂಡರು. ಆಗ ಆ ಪರಮೇಶ್ವರಿಯು ಮಹಾದೇವನನ್ನು ಧ್ಯಾನಿಸಿದಳು. ಕೂಡಲೇ ಪ್ರತ್ಯಕ್ಷವಾದ ಪರಮೇಶ್ವರನನ್ನು ಕುರಿತು ಕೇಳಿಕೊಂಡಳು. ''ದೇವತೆಗಳ ಒಡೆಯನಾದ ಮಹಾಪ್ರಭು, ಇವರಿಗೆಲ್ಲ ಏನಾದರೂ ತಿನ್ನಲಿಕ್ಕೆ ಕೊಡಿರಿ. ಇವರಿಗೆ ಹಸಿವು ಬಹಳವಾಗಿದೆ. ಹಸಿದ ಇವರಿಗೆ ಏನನ್ನಾದರೂ ಕೊಡದಿದ್ದರೆ ಅವರು ಕಡೆಗೆ ನನ್ನನ್ನೇ ತಿಂದು ಬಿಡುವರು.'' ಅದನ್ನು ಕೇಳಿ ಮಹಾದೇವರು ಹೇಳಿದರು -

''ಕಾಲರಾತ್ರಿಯಾದ ಪರಮೇಶ್ವರಿ, ಈ ನಿನ್ನ ಪರಿವಾರದ ಎಲ್ಲಾ ಕನ್ಯಾಕುಮಾರಿಯರಿಗೆ ನಾನು ಆಹಾರವನ್ನು ನಿರ್ಧರಿಸುತ್ತೇನೆ ಕೇಳು - ಈ ಭೂಮಂಡಲದಲ್ಲಿ ಯಾವ ಗರ್ಭಿಣಿಯಾದ ಸ್ತ್ರೀಯು ಪರಪುರುಷರ ಬಟ್ಟೆಯನ್ನು ಮುಟ್ಟುವಳೋ ಅವಳ ಗರ್ಭವು ಈ ನಿನ್ನ ಕುಮಾರಿಯರಿಗೆ ಆಹಾರ ಭಾಗವಾಗಲಿ. ಅವರಲ್ಲಿ ಮತ್ತೆ ಕೆಲವರು ಅಜ್ಞ ಜನರ ಕಲಹಗಳಲ್ಲಿ ಆಗುವ ಬಲಿ ಕೊಲೆಗಳಿಂದ ಬದುಕಲಿ. ಇನ್ನೂ ಕೆಲವರು ಹೆರಿಗೆಯ ಮನೆಯಲ್ಲಿಯೇ ಪೂಜಿತರಾಗಿ ಸಮಯ ಬಂದಾಗ ಜನಿಸಿದ ಮಕ್ಕಳನ್ನೂ ನುಂಗಿ ತೇಗಲಿ. ಉಳಿದವರು ಹೊಲ, ಮನೆ, ಗದ್ದೆ, ಕೆರೆ, ಬಾವಿ ತೋಪುಗಳಲ್ಲಿ ಅಳುತ್ತಲಿರುವ ಅಳುಬುರುಕ ಹೆಂಗಸರ ದೇಹದಲ್ಲಿ ಪ್ರವೇಶಿಸಿ ಅಲ್ಲಿ ಜರಗುವ ಅಮಂಗಳ ಅನಾಹುತಗಳಿಂದ ತೃಪ್ತಿಯನ್ನು ಪಡೆಯಲಿ.'' ಹೀಗೆ ಹೇಳಿ ಮಹಾದೇವರು ಆ ಚಾಮುಂಡಾದೇವಿಯನ್ನು ಸ್ತೋತ್ರ ಮಾಡಿದರು. ಸ್ವಯಂ ರುದ್ರದೇವರು ಮಾಡಿದ ಆ ಸ್ತೋತ್ರದಿಂದ ಆ ಮಹಾದೇವಿಯು ಸುಪ್ರಸನ್ನಳಾಗಿ ಬೇಕಾದ ವರಬೇಡು ಎಂದು ಕೇಳಿದಳು. ಅದಕ್ಕೆ ರುದ್ರದೇವರು ''ದೇವಿ, ನಾನು ಮಾಡಿದ ಆ ದೇವೀ ಸ್ತೋತ್ರವನ್ನು ಪಠಿಸುವವರಿಗೆ ನೀನು ವರವನ್ನು ಕೊಡಬೇಕು. ಮತ್ತು ಅವರಿಗೆ ಸಂತಾನ, ಸಂಪತ್ತು, ಸೌಭಾಗ್ಯ ಮುಂತಾದವುಗಳನ್ನು ಸಮೃದ್ಧಿಯಾಗಿ ನೀನು ಕರುಣಿಸಬೇಕು.'' ಎಂದು ಹೇಳಿ ಮಹಾದೇವರು ಅಲ್ಲಿಂದ ಅಂತರ್ಹಿತರಾದರು. ದೇವತೆಗಳೂ ಸ್ವರ್ಗಕ್ಕೆ ತೆರಳಿದರು. ದೇವಿಯ ಆ ಅವತಾರದ ಹಾಗೂ ಉತ್ಪತ್ತಿಯ ಕಥೆಯನ್ನು ಕೇಳಿದವರಿಗೆ ದಿವ್ಯಗತಿಯಾಗುವುದರಲ್ಲಿ ಸಂದೇಹವಿಲ್ಲ. ರಾಜ್ಯವನ್ನು ಕಳೆದುಕೊಂಡು ದೊರೆಯು ನವಮಿ, ಅಷ್ಟಮಿ, ಚತುರ್ದಶಿ ಗಳಲ್ಲಿ ಉಪವಾಸ ಮಾಡಿ ದೇವಿಯನ್ನು ಆರಾಧನೆ ಮಾಡಿದರೆ ಒಂದು ವರ್ಷದೊಳಗೆ ತನ್ನ ರಾಜ್ಯವನ್ನು ಮತ್ತೆ ಪಡೆಯುವನು. ಈ ತ್ರಿಶಕ್ತಿಯ ಮಹಿಮೆಯನ್ನು ಬರೆದ ಪುಸ್ತಕವು ಮನೆಯಲ್ಲಿದ್ದರೆ ಬೆಂಕಿ, ಹಾವು, ಚೇಳು ಮುಂತಾದ ಭಯವು ಸಮೀಪದಲ್ಲಿ ಸಹ ಸುಳಿದಾಡುವುದಿಲ್ಲ. ರುದ್ರನ ತಾಮಸ ಶಕ್ತಿಯೇ ಚಾಮುಂಡಿ, ಶ್ರೀ ವಿಷ್ಣುವಿನ ಪಾಲಿನೀ ಶಕ್ತಿಯೇ ವೈಷ್ಣವೀ, ಬ್ರಹ್ಮನ ಸತ್ವ ಶಕ್ತಿಯೇ ಬ್ರಾಹ್ಮೀ ಎಂದು ಎನಿಸಿಕೊಳ್ಳಲ್ಪಡುವುದು. ಆ ದೇವಿಯರ ಎಲ್ಲ ಅವತಾರ ರೂಪಗಳಲ್ಲಿಯೂ ಅವರಿಗೆ ಅನುಗುಣವಾಗಿ ಬ್ರಹ್ಮ, ವಿಷ್ಣು, ಮಹೇಶ್ವರರು ಪತಿಗಳಾಗುವರು. ಈ ರೌದ್ರೀದೇವಿಯು ಎಷ್ಟು ರೂಪಗಳನ್ನು ಧರಿಸಿರುವಳೋ ರುದ್ರನು ತಾನು ಅಷ್ಟೇ ರೂಪಗಳನ್ನು ಧರಿಸಿ ಅವಳನ್ನು ಸೇವಿಸುವನು. ಆ ದೇವಿಯ ರೂಪಗಳನ್ನು ಸೇವಿಸುವ ಮನುಷ್ಯರ ಮೇಲೆಯೂ ಆ ರುದ್ರ ದೇವನು ಪ್ರಸನ್ನನಾಗುವನು.

*ವರಾಹ ಪುರಾಣದಲ್ಲಿ ತೊಂಬತ್ತೊಂದನೇ ಅಧ್ಯಾಯವು ಮುಗಿದುದು*

—o—

**ವರಾಹ :-** ಭೂದೇವಿಯೇ, ರುದ್ರವ್ರತದ ಉತ್ಪತ್ತಿಯನ್ನು ಹೇಳುತ್ತೇನೆ ಕೇಳು. ಇದರ ಜ್ಞಾನದಿಂದ ನಿಸ್ಸಂದೇಹವಾಗಿ ಎಲ್ಲ ಪಾಪಗಳೂ ತೊಳೆದು ಹೋಗುತ್ತವೆ. ಬ್ರಹ್ಮದೇವನು ಮೂರನೇಯ ಸಲ ರುದ್ರದೇವನನ್ನು ಸೃಷ್ಟಿಸಿ ಕುತೂಹಲ ದಿಂದ ತಾನು ಹುಟ್ಟಿಸಿದ ಆ ಮಗುವನ್ನು ಹೆಗಲಮೇಲೆ ಏರಿಸಿಕೊಂಡನು. ಬ್ರಹ್ಮದೇವರ ಹೆಗಲ ಮೇಲೆ ಕುಳಿತ ಆ ಪಿಂಗಾಕ್ಷನಾದ ಶಂಕರನು ಬ್ರಹ್ಮನ ಹೆಗಲ ಮೇಲೆ ಕುಳಿತುಕೊಂಡಾಗ ಆ ಬ್ರಹ್ಮದೇವನ ಐದನೆಯ ತಲೆಯು ತನ್ನ ಮಗನಾದ ರುದ್ರನ ಮೇಲಿನ ಸ್ನೇಹದಿಂದ

**''ಕಪಾಲಿನ್ ರುದ್ರ, ಬಭ್ರೋಽಥ ಭವ ಕೈರಾತ ಸುವ್ರತ ।**
**ಪಾಹಿ ವಿಶ್ವಂ ವಿಶಾಲಾಕ್ಷ ಕುಮಾರ ವರ ವಿಕ್ರಮ'' ॥**

ಎಂಬ ಮಂತ್ರವನ್ನು ಬಾಯಿಂದ ಉಚ್ಚರಿಸಿತು. ಆದರಲ್ಲಿಯ ಮೊಟ್ಟ ಮೊದಲನೆಯ ಕಪಾಲಿ ಎಂಬ ಶಬ್ದವನ್ನು ಕೇಳಿಯೇ ರುದ್ರನಿಗೆ ಕೋಪ ಬಂದಿತು. ಕೂಡಲೇ ಅವನು ತನ್ನ ಎಡಗೈ ಹೆಬ್ಬೆರಳಿನ ಉಗುರಿನಿಂದ ಬ್ರಹ್ಮದೇವರ ಆ ತಲೆಯನ್ನು ಕತ್ತರಿಸಿ ಬಿಟ್ಟನು. ಬ್ರಹ್ಮನ ಆ ತಲೆಬುರುಡೆಯು ರುದ್ರನ ಕೈಗೆ ಅಂಟಿಕೊಂಡಿತು. ಅದೇನಾದರೂ ರುದ್ರನ ಕೈಬಿಟ್ಟು ಕೆಳಗೆ ಬೀಳಲಿಲ್ಲ. ಆಗ ರುದ್ರನು ಬ್ರಹ್ಮದೇವರನ್ನು ಕುರಿತು ''ತಂದೆಯೇ, ಈ ಬ್ರಹ್ಮ ಕಪಾಲವು ನನ್ನ ಕೈಬಿಟ್ಟು ಕೆಳಗೆ ಬೀಳುವ ಬಗೆಯಾವದು. ಮತ್ತೂ ನನ್ನ ಈ ಬ್ರಹ್ಮಹತ್ಯಾ ದೋಷವು ಹೇಗೆ ಪರಿಹಾರವಾಗುವದು ?'' ಎಂದು ಕೇಳಿದನು. ಆಗ ಬ್ರಹ್ಮದೇವರು ''ರುದ್ರನೇ, ನೀನು ಇದಕ್ಕಾಗಿ ಕಾಪಾಲಿಕ ವ್ರತವನ್ನು ಅನುಷ್ಠಾನಮಾಡು. ನಿನ್ನ ಸ್ವಂತ ಪ್ರಭಾವದಿಂದಲೂ ಈ ಕಾಪಾಲಿಕ ವೃತ್ತಿಯಿಂದಲೂ ನಿನ್ನ ಪಾಪಪರಿಹಾರವಾಗಿ ಈ ಬ್ರಹ್ಮ ಕಪಾಲವು ನಿನ್ನ ಕೈಬಿಟ್ಟು ಹೋಗುವುದು.'' ಎಂದು ತಿಳಿಸಿದನು.

ಅದನ್ನು ಕೇಳಿ ರುದ್ರನು ಮಹೇಂದ್ರಗಿರಿಗೆ ಬಂದು ಆ ಬ್ರಹ್ಮದೇವರ ತಲೆಯನ್ನು ಒಡೆದು ಮೂರುಭಾಗವನ್ನಾಗಿ ಮಾಡಿದನು. ಆ ತಲೆಯ ಕೂದಲಗಳಿಂದ ಆ ಮಹಾದೇವನು ಯಜ್ಞೋಪವೀತವನ್ನು ಮಾಡಿ ಧರಿಸಿ, ಅದರ ಎಲುಬಿನಿಂದ ಜಪಮಣಿಯನ್ನು ಮಾಡಿ ಕೈಯಲ್ಲಿ ಹಿಡಿದು, ಮತ್ತೊಂದು ಕೈಯಿಂದ ರಕ್ತದಿಂದ ತುಂಬಿದ ಆ ತಲೆಯ ಒಂದು ಚಿಪ್ಪನ್ನು ಹಿಡಿದುಕೊಂಡನು. ಆ ತಲೆಯ ಇನ್ನೊಂದು ಭಾಗವನ್ನು ಮತ್ತೆ ಒಡೆದು ಹೋಳು ಮಾಡಿ ಇನ್ನೊಂದು ಚೂರನ್ನು ತನ್ನ ಜಡೆಯ ಮುಡಿಯ ಮೇಲೆ ಇಟ್ಟುಕೊಂಡನು. ಹೀಗೆ ಮಾಡಿ ಶಂಕರನು ನಿತ್ಯವೂ ತೀರ್ಥಗಳಲ್ಲಿ ಸ್ನಾನವನ್ನು ಮಾಡುತ್ತ, ಅಖಂಡ ಭೂಮಂಡಲವನ್ನೆಲ್ಲ ಸುತ್ತಿದನು. ಮೊದಲು ಸಮುದ್ರದಲ್ಲಿ ಸ್ನಾನಮಾಡಿ, ಅನಂತರ ಗಂಗೆಯಲ್ಲಿ ಮಿಂದು, ಆನಂತರ ಸರಸ್ವತಿಯಲ್ಲಿ ಮುಳುಗಿ, ಬಳಿಕ ಗಂಗಾ ಯಮುನಾ, ಸಂಗಮದಲ್ಲಿ ಅವಗಾಹನಗೈದು, ಬಳಿಕ ಶತದ್ರು, ದೇವಿಕಾ, ವಿತಥಾ, ಚಂದ್ರಭಾಗಾ, ಗೋಮತಿ, ಸಿಂಧು, ತುಂಗಭದ್ರಾ, ಗೋದಾವರಿ, ಗಂಡಕಿ ಮುಂತಾದ ನದಿಗಳಲ್ಲಿ ಹೋಗಿ ಸ್ನಾನ ಮಾಡಿದನು. ಅನಂತರ ನೇಪಾಳಕ್ಕೂ ಅಲ್ಲಿಂದ ಕೈಲಾಸಕ್ಕೂ, ದಾರುವನಕ್ಕೂ ಹೋಗಿ ತದನಂತರ ಕೇದಾರಕ್ಷೇತ್ರಕ್ಕೆ ಬಂದು ಅಲ್ಲಿಂದ ಭದ್ರೇಶ್ವರಕ್ಕೆ ಹೋಗಿ ಕೊನೆಗೆ ಗಯಾ ಕ್ಷೇತ್ರಕ್ಕೆ ಬಂದನು.

ಆ ಗಯಾ ಕ್ಷೇತ್ರದಲ್ಲಿಯ ಫಲ್ಗು ತೀರ್ಥದಲ್ಲಿ ಸ್ನಾನಮಾಡಿ ಆ ಪರಮೇಶ್ವರನು ಪಿತೃಗಳಿಗೆ ತರ್ಪಣವನ್ನು ಕೊಟ್ಟನು. ಹೀಗೆ ಶಿವನು ತೀರ್ಥದಿಂದ ತೀರ್ಥಕ್ಕೆ ಕ್ಷೇತ್ರದಿಂದ ಕ್ಷೇತ್ರಕ್ಕೆ ಗಡಿಬಿಡಿಯಿಂದ ಓಡಾಡುತ್ತಲಿರುವಾಗ ಬ್ರಹ್ಮಾಂಡವನ್ನು ಸುತ್ತುವ ಭರದಲ್ಲಿ ಅವನ ಮೈಮೇಲಿನ ಉಡುಗೆಯು ಉಚ್ಚಿಬಿದ್ದಿತು. ಉಡದಾರದಲ್ಲಿ ಕಟ್ಟಿಕೊಂಡಿದ್ದ ಲಂಗೋಟಿಯು ಎಲ್ಲಿಯೋ ಕಳಚಿ ಬಿದ್ದುಹೋಯಿತು. ಹೀಗೆ ಉಡುಗೆ ಉಡುದಾರದಲ್ಲಿಯ ಕೌಪೀನಗಳು ಬಿದ್ದುಹೋದ ಬಳಿಕ ಆ ಶಂಕರನು ನಗ್ನ ಕಾಪಾಲಿಕನಾದನು. ಬಳಿಕ ಮತ್ತೆ ಎರಡು ವರುಷಗಳ ಕಾಲ ಅವನು ಬ್ರಹ್ಮಾಂಡವನ್ನೆಲ್ಲ ಸುತ್ತಿ ಪ್ರತಿಯೊಂದು ತೀರ್ಥದಲ್ಲಿ ಮುಳಗಿ ಆ ಬ್ರಹ್ಮ ಕಪಾಲವನ್ನು ತನ್ನ ಕೈಯಿಂದ ಬಿಡಬೇಕೆಂದು ಪ್ರಯತ್ನಮಾಡಿದನು. ಏನಾದರೂ ಆ ತಲೆಯೋಡು ಇವನ ಕೈ ಬಿಡಲಿಲ್ಲ ಮತ್ತೆ ಅವನು ಎರಡು ವರ್ಷ ಹಿಮಗಿರಿಯಲ್ಲಿ ಪರಿಭ್ರಮಿಸಿದನು. ಹೀಗೆ ತಿರುಗಿ ತಿರುಗಿ ಕೊನೆಗೆ ಅವನ ತಲೆಕೆಟ್ಟು ಹೋಗುವ ಪ್ರಸಂಗ ಬಂದಿತು. ಇಂಥ ವಿಭ್ರಾಂತ ಅವಸ್ಥೆಯಲ್ಲಿಯೇ ಮತ್ತೆ ಅವನು ಹಿಮಗಿರಿಯಲ್ಲಿಯ ಹಿಂದೆ ತಾನು ಹೋಗಿ ಬಂದ ಎಲ್ಲ ತೀರ್ಥ ಕ್ಷೇತ್ರಗಳಲ್ಲಿಯೂ ಹೋಗಿ ಮುಳುಗಿ ಬಂದನು. ಕೊನೆಗೆ ಹನ್ನೆರಡನೇ ವರುಷ ಆ ಮಹಾದೇವನು ಕಾಶಿಗೆ ಹೋಗಿ ಗಂಗೆಯಲ್ಲಿ ಸ್ನಾನ ಮಾಡತೊಡಗಿದನು. ಕಾಶಿಯ ಭಾಗೀರಥಿಯಲ್ಲಿ ಸ್ನಾನ ಮಾಡಿದ ಕೂಡಲೇ ಶಿವನ ಕೈಯಲ್ಲಿಯ ಆ ಬ್ರಹ್ಮಕಪಾಲವು ಬಿಟ್ಟುಹೋಯಿತು.

ಕಾಶಿಯಲ್ಲಿ ಆ ಕೈಲಾಸಪತಿಯು ಸ್ನಾನಮಾಡಿದ ಆ ತೀರ್ಥವು ಕಪಾಲಮೋಚನ ತೀರ್ಥ ಎಂದೂ ಈಗಲೂ ಹೆಸರಾಗಿದೆ. ಇದಕ್ಕೂ ಮೊದಲು ಶಿವನು ದಕ್ಷಿಣ ಭಾರತದ ಹರಿಹರ ಕ್ಷೇತ್ರಕ್ಕೆ ಹೋಗಿ ದೇವಾಂಗ ತೀರ್ಥದಲ್ಲಿ ಸ್ನಾನ ಮಾಡಿ, ಸೋಮೇಶ್ವರನನ್ನು ಚೆನ್ನಾಗಿ ಪೂಜಿಸಿ, ಬಳಿಕ ಚಕ್ರತೀರ್ಥಕ್ಕೆ ಹೋಗಿ ಅಲ್ಲಿ ಮಿಂದು ಅಲ್ಲಿಂದ ತ್ರಿಜಲೇಶ್ವರಕ್ಕೆ ಬಂದು ಅಲ್ಲಿಂದ ಅಯೋಧ್ಯೆಗೆ ತೆರಳಿದ್ದನು. ಬಳಿಕ ಹನ್ನೆರಡನೇ ವರುಷ ತನ್ನ ಜೊತೆಗೆ ಸಂಚರಿಸುವ ಭೂತಗಣಗಳೊಂದಿಗೆ ಕಾಶಿಗೆ ಹೋಗಿ ಅಲ್ಲಿ ಸ್ನಾನ ಮಾಡಿ ಆ ಬ್ರಹ್ಮಕಪಾಲದಿಂದ ತನ್ನ ಕೈ ತೊಳೆದುಕೊಂಡು ಅಲ್ಲಿರುವ ವಿಶ್ವೇಶ್ವರನನ್ನು ಭಕ್ತಿಯಿಂದ ಪೂಜಿಸಿ ತನ್ನ ಬ್ರಹ್ಮಹತ್ಯಾಪಾಪದಿಂದ ಮುಕ್ತನಾದನು.

ಅಂದಿನಿಂದ ಆ ತೀರ್ಥವು ಕಪಾಲಮೋಚನ ತೀರ್ಥವೆಂದು ಪ್ರಸಿದ್ಧವಾಯಿತು. ಅದರಲ್ಲಿ ಸ್ನಾನಮಾಡುವದರಿಂದ ಬ್ರಹ್ಮಹತ್ಯಾದೋಷವು ಪರಿಹಾರವಾಗುವದು. ಮಹಾದೇವನ ಕೈಯಿಂದ ಬ್ರಹ್ಮ ಕಪಾಲವು ಬಿದ್ದು ಹೋದುದನ್ನು ನೋಡಿ ಬ್ರಹ್ಮದೇವರು ದೇವತೆಗಳೊಂದಿಗೆ ಬಂದು ಶಿವನಿಗೆ ಹೀಗೆ ನುಡಿದರು. ''ವಿರೂಪಾಕ್ಷನಾದ ರುದ್ರದೇವನೇ, ಲೋಕಮಾರ್ಗ ವ್ಯವಸ್ಥಾಪಕನಾದ ನೀನು ಕೈಯಲ್ಲಿ ತಲೆಬುರುಡಿಯನ್ನು ಹಿಡಿದು ಎಲ್ಲ ತೀರ್ಥಗಳನ್ನು ನಗ್ನನಾಗಿ ತಿರುಗಾಡಿ ಬಂದುದರಿಂದ ಈ ವ್ರತವು **'ನಗ್ನ ಕಾಪಾಲಿಕವ್ರತ'** ಎಂದು ಮುಂದೆ ಪ್ರಸಿದ್ಧವಾಗುವದು. ಹಿಮವತ್ ಪರ್ವತದಲ್ಲಿ ನೀನು ಸಂಚರಿಸುವಾಗ ನಿನಗೆ ಉಂಟಾದ ಬಭ್ರುತೆಯು ಭಾಭ್ರವ್ಯವ್ರತವೆನಿಸುವುದು. ಕಾಶಿಯಲ್ಲಿ ನೀನು ಗಂಗೆಯಲ್ಲಿ

ಸ್ನಾನಮಾಡಿ ಅನುಷ್ಠಾನಗೈದ ವ್ರತಕ್ಕೆ ಶೈವವ್ರತವೆಂದು ಹೆಸರಾಗುವುದು. ಶಿವದೇವ, ನೀನು ಮಾಡಿದ ವ್ರತಗಳೆಲ್ಲವೂ ಶೈವವ್ರತಗಳೆನಿಸಿ ಅವುಗಳನ್ನು ಆಚರಿಸುವವರು ನಿನ್ನ ಅನುಗ್ರಹದಿಂದ ತಮ್ಮ ಎಲ್ಲ ಪಾಪಗಳನ್ನೂ ಕಳೆದುಕೊಂಡು ಶುದ್ಧರೂ ಸಿದ್ಧರೂ ಆಗುವರು.'' ಹೀಗೆ ಹೇಳಿದ ಬ್ರಹ್ಮದೇವರು ಎಲ್ಲ ದೇವತೆಗಳೊಡನೆ ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದರು.

*ವರಾಹ ಪುರಾಣದಲ್ಲಿ ತೊಂಭತ್ತೆರಡನೇ ಅಧ್ಯಾಯ ಮುಗಿದುದು*



## ಸತ್ಯತಪನ ಕೌತುಕದ ಕತೆ

ಅಧ್ಯಾಯ - ೯೩

**ಧರಣೀದೇವಿ :-** ಸತ್ಯತಪನೆಂಬ ಮುನಿಯ ಚರಿತ್ರವು ಮುಂದೆ ಕೌತುಕ ಪೂರ್ಣವಾಗಿ ಬರುವದು ಎಂದು ನೀವು ಹೇಳಿದ್ದಿರಿ. ಅದನ್ನು ಕೇಳಬೇಕೆಂದು ನನಗೆ ಈಗ ಬಹಳ ಕುತೂಹಲವಾಗಿದೆ. ದಯವಿಟ್ಟು ತಿಳಿಸಬೇಕು.

**ವರಾಹ :-** ಆ ಸತ್ಯತಪನು ಭೃಗುವಂಶದಲ್ಲಿ ಜನಿಸಿದ ಒಳ್ಳೇ ಬ್ರಾಹ್ಮಣನಾಗಿದ್ದನು. ಆದರೆ ಸುತ್ತಮುತ್ತಲಿನ ವನದಲ್ಲಿಯ ಗೊಲ್ಲ ಭಿಲ್ಲರ ಸಹವಾಸದಿಂದ ಅವನೂ ಒಬ್ಬ ಕಾಡುಬೇಡನಂತಾಗಿದ್ದನು. ಎಷ್ಟೋ ದಿನಗಳವರೆಗೆ ಕಿರಾತ ಸಂಸ್ಕಾರದಲ್ಲಿಯೇ ಬೆಳೆದ ಬಳಿಕ ಒಂದಾನೊಂದು ದಿನ ಆ ಸತ್ಯತಪಮುನಿಯು ಅರುಣಿ ಎಂಬ ಬ್ರಹ್ಮಜ್ಞಾನಿಯಾದ ಮಹರ್ಷಿಯ ಸಂಪರ್ಕದಲ್ಲಿ ಬಂದನು. ದೊಡ್ಡವರ ಸಹವಾಸದಿಂದ ಏನಾಗಲಿಕ್ಕಿಲ್ಲ ? ಬೇಡವಾದ ಬೇಡರ ವಾತಾವರಣದಲ್ಲಿಯೇ ಬೆಳೆದು ಬ್ರಾಹ್ಮಣ್ಯವೆಲ್ಲ ಬಾಡಿಹೋದ ಆ ಸತ್ಯತಪನಿಗೆ ಅರುಣಿ ಮುನಿಗಳ ಸತ್ಸಂಗದಿಂದ ಕೆಟ್ಟ ಸಂಸ್ಕಾರಗಳೆಲ್ಲವೂ ಅಳಿದವು. ದುರ್ವಿಚಾರವೆಲ್ಲವೂ ಕಳೆದವು. ದೇವರಲ್ಲಿ ಆಗಾಧ ಶ್ರದ್ಧೆ ಮೂಡಿತು. ಧರ್ಮದಲ್ಲಿ ಬಲವಾದ ನಂಬುಗೆ ಬೆಳೆಯಿತು. ಅವನ ಬ್ರಾಹ್ಮಣ್ಯವು ಮತ್ತೆ ಮರುಕಳಿಸಿ ಮಿನುಗತೊಡಗಿತು. ಅವನು ದುರ್ವಾಸಋಷಿಗಳ ಬಳಿಗೆ ಹೋಗಿ ಅವರಿಂದ ದಿವ್ಯವಾದ ತತ್ತ್ವೋಪದೇಶ ಪಡೆದನು. ಮತ್ತು ಮಂತ್ರೋಪದೇಶವನ್ನು ಹೊಂದಿದನು. ಹಿಮಾಚಲದ ಉತ್ತರದ ತಪ್ಪಲಿನ ಪ್ರದೇಶದಲ್ಲಿ ಪುಣ್ಯವತಿಯಾದ ಪುಷ್ಪಭದ್ರಾ ನದಿಯು ಹರಿಯುತ್ತಲಿದೆ. ಆ ನದೀ ತೀರದಲ್ಲಿ ಭದ್ರವಟ ಎಂಬ ದೊಡ್ಡದಾದ ಆಲದ ಮರವಿದೆ. ಅದರ ಕೆಳಗೆ ಚಿತ್ರಶಿಲಾ ಎಂಬ ಒಂದು ದಿವ್ಯವಾದ ಹಾಸುಗಲ್ಲನ್ನು ಹಾಸಿದಂತಿದೆ. ಆ ಚಿತ್ರಶಿಲೆಯ ಮೇಲೆ ಕುಳಿತು ಸತ್ಯತಪನು ಉಗ್ರವಾದ ತಪಸ್ಸನ್ನು ಆಚರಿಸುತ್ತಿದ್ದನು.

ಒಂದು ದಿನ ಕೊಡಲಿಯಿಂದ ಹೋಮಕ್ಕಾಗಿ ಸಮಿಧೆಗಳನ್ನು ಅವನು ಕಡಿಯುತ್ತಿರುವಾಗ ಅವನ ಎಡಗೈ ತೋರುಬೆರಳು ಕತ್ತರಿಸಲ್ಪಟ್ಟಿತು. ಆ ಕಡಿದ ಬೆರಳಿನಿಂದ ರಕ್ತವು ಸೋರಲಿಲ್ಲ. ಮಾಂಸವು ತೋರಲಿಲ್ಲ. ಅದರಿಂದ ಭಸ್ಮವು ಉದುರುತ್ತಿತ್ತು. ಆ ಮುನಿಯು ಕತ್ತರಿಸಿ ಬಿದ್ದ ತನ್ನ ಬೆರಳನ್ನು ಮತ್ತೆ ಅಲ್ಲಿಯೇ ಕೂಡಿಸಿ ಮೊದಲಿದ್ದಂತೆ ಮಾಡಿದನು. ಆ ಆಲದ ಮರದಲ್ಲಿ ಅಂದು ರಾತ್ರಿ ತಂಗಿದ್ದ ಒಂದು ಕಿನ್ನರ

ದಂಪತಿಗಳ ಜೋಡಿಯು ಸತ್ಯತಪಮುನಿಯ ಈ ಕೌತುಕದ ಗೈಮೆಯನ್ನು ಕಂಡು ಅತ್ಯಾಶ್ಚರ್ಯದಿಂದ ಬೆಪ್ಪ ಬಡಿದು ಕುಳಿತಲ್ಲಿಯೇ ತೆಪ್ಪನೆ ಮಲಗಿಕೊಂಡಿತು.

ಬೆಳಗಾದ ಬಳಿಕ ಆ ಕಿನ್ನರ ದಂಪತಿಗಳು ಇಂದ್ರಲೋಕಕ್ಕೆ ಹೋದರು. ಯಕ್ಷ ಗಂಧರ್ವರಿಂದ ತುಂಬಿದ ದೇವತೆಗಳ ಸಭೆಯಲ್ಲಿ ದೇವೇಂದ್ರನು ಈ ಕಿನ್ನರ ಮಿಥನಕ್ಕೆ ''ನೀವೇನಾದರೂ ಅಪೂರ್ವವಾದ ಕೌತುಕವನ್ನು ಎಲ್ಲಿಯಾದರೂ ನೋಡಿದ್ದರೆ ಹೇಳಿರಿ ಎಂದು ಕೇಳಿದನು.'' ಆಗ ಆ ಕಿನ್ನರ ದಂಪತಿಗಳು ಹಿಮಾಚಲದ ಉದೀಚ್ಯ ಪಾದದಲ್ಲಿ ಪುಷ್ಪಭದ್ರಾದಂಡೆಯ ಮೇಲೆ ಆಲದ ಗಿಡದೆಡೆಯಲ್ಲಿ ಸತ್ಯತಪಮುನಿಯ ಕತ್ತರಿಸಿದ ಬೆರಳಿನಿಂದ ರಕ್ತ ಮಾಂಸಗಳು ಸುರಿಯದೇ ಕೇವಲ ಭಸ್ಮವು ಅವನ ಬೆರಳಿನಿಂದ ಉದುರಿದ ಸಮಾಚಾರವನ್ನು ತಿಳಿಸಿದರು. ಅದನ್ನು ಕೇಳಿ ಇಂದ್ರನು ಆ ಭಸ್ಮಸ್ರವಣದ ಕೌತುಕವನ್ನು ಕಣ್ಣಮುಟ್ಟ ನೋಡಬೇಕೆಂದು ತನ್ನ ಸಹೋದರನಾದ ಉಪೇಂದ್ರನನ್ನೂ ಜೊತೆಗೆ ಕರೆದುಕೊಂಡು ಹಿಮವತ್ ಪರ್ವತಕ್ಕೆ ಹೊರಟನು.

ಆಗ ಉಪೇಂದ್ರನಾದ ಶ್ರೀಹರಿಯು ವರಾಹ ರೂಪವನ್ನು ಧಾರಣ ಮಾಡಿದನು. ದೇವೇಂದ್ರನು ಬೇಡನಾದನು. ಆ ಇಬ್ಬರೂ ಇಂದ್ರೋಪೇಂದ್ರರು ಕೂಡಿ ವ್ಯಾಘ್ರ ವರಾಹ ವೇಷದಿಂದ ಸತ್ಯತಪನು ತಪಸ್ಸುಮಾಡುತ್ತ ಕುಳಿತ ಪುಷ್ಪ ಭದ್ರಾನದೀತೀರದ ಆಲದ ಮರದ ಬಳಿಗೆ ಬಂದರು. ವಿಷ್ಣು ಹಂದಿಯು ರೂಪದಿಂದ ಋಷಿಗಳ ಕಣ್ಣಿಗೆ ಕಾಣಿಸಿಕೊಂಡನು. ಮರುಕ್ಷಣದಲ್ಲಿ ಕಣ್ಮರೆಯಾದನು. ಆನಂತರ ಮತ್ತೆ ಆ ಹಂದಿಯ ತಪೋ ನಿರತನಾದ ಸತ್ಯತಪನ ದೃಷ್ಟಿಗೆ ಗೋಚರವಾಯಿತು.

ಅಷ್ಟರಲ್ಲಿ ಬಿಲ್ಲುಬಾಣಗಳನ್ನು ಹಿಡಿದುಕೊಂಡು ಒಬ್ಬ ಬೇಡನು ಬಂದನು. ಅತ್ಯಂತ ಕಾಂತಿಶಾಲಿಯಾದ ಆ ಇಂದ್ರರೂಪಿ ಬೇಡನು ''ಪೂಜ್ಯ ಮುನಿಯೇ, ಇಲ್ಲಿ ದೊಡ್ಡದಾದ ಒಂದು ಹಂದಿಯು ನಿಮ್ಮ ಕಣ್ಣಿಗೇನಾದರೂ ಬಿದ್ದಿತೇ ? ನಮ್ಮ ಸೇವಕರ ಜೀವನಕ್ಕಾಗಿ ನಾನು ಅದನ್ನು ಕೊಲ್ಲಬೇಕಾಗಿದೆ. ಆ ಹಂದಿಯು ಎಲ್ಲಿದೆ ?'' ಎಂದು ಕೇಳಿದನು. ಸತ್ಯತಪ ಋಷಿಗೆ ದೊಡ್ಡ ಚಿಂತೆಯಾಯಿತು. ಈಗ ಏನೆಂದು ಇವನಿಗೆ ಉತ್ತರಿಸುವದು? ಇವನಿಗೆ ಈ ಹಂದಿಯನ್ನು ತೋರಿಸಿದರೆ ತತ್‌ಕ್ಷಣವೇ ಇವನು ಅದನ್ನು ಕೊಂದು ಬಿಡುತ್ತಾನೆ. ತೋರಿಸದಿದ್ದರೆ ಈ ಬೇಡನ ಕುಟುಂಬ ಪರಿವಾರವೆಲ್ಲವೂ ಹಸಿವೆಯಿಂದ ಸಂಕಟ ಪಡುವರು. ಹಸಿವೆಯಿಂದ ಕಂಗೆಟ್ಟು ಈ ಬೇಡ ಕುಟುಂಬವನ್ನು ನೋಡಲಾ ? ಬೆನ್ನಲ್ಲಿ ಬಾಣ ನಾಟಿ ರಕ್ತ ಸೋರುತ್ತ ನನ್ನ ಈ ಋಷಿ ಆಶ್ರಮಕ್ಕೆ ಶರಣು ಬಂದ ಊನದೀನವಾದ ಆ ಹಂದಿಯನ್ನು ನೋಡಲಾ ? ಎತ್ತಹೋದರೂ ಪಾಪ ತಪ್ಪಿದ್ದಲ್ಲ. ಏನು ಮಾಡಲಿ ? ಹೇಗೆ ಉತ್ತರ ಕೊಡಲಿ ? ಆ ಸತ್ಯತಪಮುನಿಯು ಕ್ಷಣ ತಲೆ ಹಿಡಿದುಕೊಂಡು ತೆಪ್ಪಗೆ ಕುಳಿತನು. ಮರುಕ್ಷಣದಲ್ಲಿ ಆ ಋಷಿಯ ತಲೆಯಲ್ಲಿ ಏನೋ ಹೊಳೆಯಿತು. ಕೂಡಲೇ ಆ ಋಷಿಯು ಹಂದಿಯ ಬಗ್ಗೆ ಕೇಳ ಬಂದ ಆ ಬೇಡನಿಗೆ ಹೀಗೆ ಉತ್ತರಿಸಿದನು.

''ವ್ಯಾಧನೇ, ದೇವರು ಮಾಡುವ ಕೆಲಸವನ್ನು ಕಣ್ಣಿಗೂ ಹೇಳುವ ಕೆಲಸವನ್ನು ನಾಲಿಗೆಗೂ ಒಪ್ಪಿಸಿದ್ದಾನೆ. ನೋಡುವ ಕಾರ್ಯವನ್ನು ಮಾಡಲು ಸಮರ್ಥವಾದ ಕಣ್ಣಿಗೆ

ತಾನು ನೋಡಿದ್ದನ್ನು ಹೇಳಲು ನಾಲಿಗೆ ಇಲ್ಲ. ಹೇಳುವ ನಾಲಿಗೆಯುಳ್ಳ ಬಾಯಿಗೆ ನೋಡುವ ಕಣ್ಣಿಲ್ಲ. ಹೀಗಾಗಿ ನಿನಗೆ ಆ ಹಂದಿಯ ಸಮಾಚಾರವನ್ನು ಯಾರು ತಿಳಿಸಬೇಕು ?'' ಸತ್ಯ ತಪಮುನಿಯ ಈ ಸತ್ಯನಿಷ್ಠೆಯನ್ನು ನೋಡಿ ಹಂದಿ ಹಾಗೂ ಭಿಲ್ಲನ ವೇಷಧರಿಸಿದ ವಿಷ್ಣು ಹಾಗೂ ಇಂದ್ರದೇವರಿಗೆ ಬಹಳ ಸಂತೋಷವಾಯಿತು. ಅವರಿಬ್ಬರೂ ಆ ಋಷಿಗೆ ತಮ್ಮ ನಿಜರೂಪವನ್ನು ತೋರಿಸಿ ''ನಾವಿಬ್ಬರೂ ನಿನ್ನ ಮೇಲೆ ಪ್ರಸನ್ನರಾಗಿದ್ದೇವೆ. ಬೇಕಾದ ವರವನ್ನು ಕೇಳು '' ಎಂದು ಹೇಳಿದರು.

ಅದನ್ನು ಕೇಳಿ ಆ ಸತ್ಯತಪಮುನಿಯು ಇಂತು ನಮಿಸಿ ನುಡಿದನು. ''ಪೂಜ್ಯರೇ, ದೇವಾಧಿದೇವತೆಗಳಾದ ನಿಮ್ಮ ದರುಶನದಿಂದಲೇ ನಾನು ಕೃತಾರ್ಥನಾದೆನು. ಇದಕ್ಕಿಂತ ಹೆಚ್ಚಿನ ವರವು ಭೂಮಂಡದಲ್ಲಿ ಬೇರೆ ಏನು ಇದೆ? ಅದರೂ ನೀವು ಇಬ್ಬರು ದೇವತೆಗಳು ನನಗೆ ಪ್ರತ್ಯಕ್ಷರಾದ್ದರಿಂದ ಎರಡು ವರಗಳನ್ನು ಕೇಳಿಕೊಳ್ಳುತ್ತೇನೆ. ಈ ಸ್ಥಳದಲ್ಲಿ ಒಂದು ತಿಂಗಳು ಭಕ್ತಿಯಿಂದ ಬ್ರಾಹ್ಮಣರ ಪೂಜೆ ಮಾಡುವುದರಿಂದ ಎಲ್ಲ ಪಾಪಗಳ ಪರಿಹಾರವು ಆಗಬೇಕು. ಎರಡನೇ ವರದಿಂದ ನನಗೆ ಮೋಕ್ಷವನ್ನು ಕರುಣಿಸಿರಿ.''

ಇಂದ್ರ ಮತ್ತು ಶ್ರೀವಿಷ್ಣು ಸತ್ಯತಪನಿಗೆ ಅಭೀಪ್ಸಿತವಾದ ವರವನ್ನು ಕೊಟ್ಟು ಅದೃಶ್ಯರಾದರು. ಅವರ ವರದಿಂದ ಸತ್ಯತಪಮುನಿಯು ಅಲ್ಲಿಯೇ ನಿಂತು ತಪಸ್ಸು ಮಾಡಿ ಬ್ರಹ್ಮಜ್ಞಾನವನ್ನು ಪಡೆದನು. ಅವನು ಅಲ್ಲಿ ಇದ್ದಾಗಲೇ ಆತನ ಗುರುವೂ ತಪಸ್ಸಿದ್ದನೂ ಆದ ಅರುಣಿ ಋಷಿಯು ಭೂಪ್ರದಕ್ಷಿಣೆಯನ್ನು ಮಾಡಿಕೊಂಡು ತೀರ್ಥಯಾತ್ರೆ ಮಾಡುತ್ತ ಅಲ್ಲಿಗೆ ಬಂದನು. ಸತ್ಯತಪನ ಮುಖವನ್ನು ನೋಡಿಯೇ ಅರುಣಿಗೆ ತಿಳಿದುಹೋಯಿತು. ಇವನಿಗೆ ಬ್ರಹ್ಮಾಪರೋಕ್ಷವಾಗಿದೆ ಎಂದು. ಅವನು ಹೃದಯ ತುಂಬಿ ತನ್ನ ಶಿಷ್ಯ ಸತ್ಯತಪನಿಗೆ ನುಡಿದನು. ''ಸುವ್ರತನಾದ ವತ್ಸ, ನಿನ್ನ ತಪಸ್ಸು ಸಿದ್ಧಿಸಿದೆ. ನಿನ್ನ ಕಣ್ಣು ಬ್ರಹ್ಮನನ್ನು ಕಂಡು ಧನ್ಯವಾಗಿದೆ. ನಿನ್ನ ಭಕ್ತಿ ಪಕ್ವವಾಗಿದೆ. ಮುಕ್ತಿ ಸನ್ನಿಹಿತವಾಗಿದೆ. ಆದುದರಿಂದ ಇನ್ನು ಹೊರಡು. ನನ್ನ ಜೊತೆಗೆ ಬಾ. ಮಗನೇ ಎದ್ದೇಳು. ನನ್ನ ಜೊತೆಗೆ ಹೆಜ್ಜೆ ಹಾಕು. ಎಲ್ಲಿ ಹೋದರೆ ಪುನರ್ಜನ್ಮವು ಇಲ್ಲವೋ ಅಂಥ ದಿವ್ಯ ಸ್ಥಾನಕ್ಕೆ ಹೊರಡೋಣ. ಆ ಶ್ರೀ ಹರಿಯ ಚರಣಗಳನ್ನು ಶರಣು ಹೋಗಿ ನಿರಂತರ ಧ್ಯಾನಿಸೋಣ '' ಎಂದು ಹೇಳಿದನು. ಆ ಆಧ್ಯಾತ್ಮದ ಕರೆಗೆ ಕಾದು ಕುಳಿತ ಸತ್ಯತಪನು ತಕ್ಷಣವೇ ತನ್ನ ಗುರುವಿನೊಡನೆ ವೈಕುಂಠ ಪ್ರಯಾಣಕ್ಕೆ ಸಿದ್ಧನಾದನು. ಇಬ್ಬರೂ ನಾರಾಯಣನ ನಿರಂತರ ಧ್ಯಾನ ಪರಾಯಣರಾದರು. ಸತತ ಶ್ರೀ ಹರಿಯ ಧ್ಯಾನ ಚಿಂತನದಿಂದ ಅವನ ಪಾದಾರವಿಂದ ಗಳಲ್ಲಿಯೇ ಲೀನರಾಗಿ ಆ ಭಗವದ್ ಅನುಗ್ರಹದಿಂದ ಪರಮಪದವನ್ನು ಹೊಂದಿದರು.

*ವರಾಹ ಪುರಾಣದಲ್ಲಿ ತೊಂಭತ್ತಾಮೂರನೇ ಅಧ್ಯಾಯ ಮುಗಿದುದು.*

—o—

## ಅಧ್ಯಾಯ - ೯೪

ಸ್ವಾಯಂಭುವ ಮನ್ವಂತರದಲ್ಲಿ ವೈಷ್ಣವೀದೇವಿಯು ಮಂದರಗಿರಿಯಲ್ಲಿ ಮಹಿಷಾಸುರನನ್ನು ಕೊಂದ ಬಳಿಕ ಚೈತ್ರಾಸುರ ಎಂಬ ಮತ್ತೊಬ್ಬ ದೈತ್ಯನು ದಕ್ಷಿಣ ದೇಶದಲ್ಲಿ ಬಹಳ ಉಪದ್ರವವನ್ನು ಜನರಿಗೆ ಮಾಡತೊಡಗಿದನು. ಆಗ ಬ್ರಹ್ಮದೇವರ ದೇಹದಿಂದ ಹೊರಟ ಗಾಯತ್ರೀದೇವಿಯು ಅಷ್ಟಭುಜಗಳುಳ್ಳವಳಾಗಿ ವಿಂಧ್ಯಪರ್ವತದಲ್ಲಿ ಆ ಚೈತ್ರಾಸುರನನ್ನು ಸಂಹರಿಸಿದಳು. ಈ ನಂದಾದೇವಿಯೂ ಮಹಿಷಾಸುರನ ಮರ್ದಿನಿಯಾದ ಆ ಪರಾಶಕ್ತಿಯ ಒಂದು ಕಲಾರೂಪವೇ ಸರಿ. ವೈಷ್ಣವೀ ಶಕ್ತಿಯಿಂದ ಈ ಎಲ್ಲ ದುಷ್ಟಶಕ್ತಿಗಳ ಸಂಹಾರದ ಕಥೆಯೆಂದರೆ ಜ್ಞಾನವು ಅಜ್ಞಾನದ ವಿನಾಶವನ್ನು ಮಾಡಿ ಗೆಲವು ಪಡೆದದ್ದರ ಗುರುತು ಎಂದು ತಿಳಿಯಬಹುದು. ಮಹಿಷಾಸುರನೆಂದರೆ ಮೂರ್ತಿಮಂತ ಅಜ್ಞಾನ. ಆ ವೈಷ್ಣವೀ ದೇವಿಯು ಜ್ಞಾನಶಕ್ತಿ ಸ್ವರೂಪಳು. ಅಜ್ಞಾನವು ಜ್ಞಾನದಿಂದ ನಾಶವಾಗಿ ಸುಜ್ಞಾನಕ್ಕೆ ಯಾವಾಗಲೂ ವಿಜಯವಾಗುವದು ಎಂಬುವದೇ ಈ ಕಥೆಯ ತಿರುಳು ಎಂದು ತಿಳಿಯಬೇಕು. ಈ ಜ್ಞಾನಅಜ್ಞಾನಗಳ ಹೋರಾಟಕ್ಕೆ ಮೂರ್ತಸ್ವರೂಪವನ್ನು ಕೊಟ್ಟರೆ ಅದೇ ಇತಿಹಾಸವಾಗುತ್ತದೆ. ವಸ್ತುತಸ್ತು ಅದು ಒಂದು ಅಜ್ಞಾನದ ಅಪಕರ್ಷ ಮತ್ತೂ ಜ್ಞಾನದ ಉತ್ಕರ್ಷವನ್ನು ಹೇಳುವ ಶಾಶ್ವತ ಸತ್ಯವಾಗಿ ಸ್ವಯಂ ಸಿದ್ಧ ತತ್ವವಾಗಿ ಜ್ಞಾನಿಗಳ ಹೃದಯದಲ್ಲಿ ಸ್ಫುಟವಾಗಿ ಮೂಡಿ ನಿಲ್ಲುತ್ತದೆ.

**(ಅಥವಾ ಜ್ಞಾನ ಶಕ್ತಿಸ್ಸಾ ಮಹಿಷೋಽ ಜ್ಞಾನಮಾರ್ತಿಮಾನ್**
**ಅಜ್ಞಾನಂ ಜ್ಞಾನಸಾಧ್ಯಂ ತು ಭವತೀತಿ ನ ಸಂಶಯಃ ॥**

**ಮೂರ್ತಿಪಕ್ಷೇ ಚೇತಿಹಾಸ ಮಮೂರ್ತೇ ಚೈಕವದ್ ಹೃದಿ**
**ಖ್ಯಾಪ್ಯತೇ ವೇದವಾಕ್ಯೈಶ್ಚ ಇಹ ಸಾ ವೇದವಾದಿಭಿಃ ॥)**

ದೇವಿ, ನಾನೀಗ ನಿನಗೆ ಪಂಚಮಹಾಪಾತಕವನ್ನೂ ಕೂಡ ನಾಶ ಮಾಡುವ ಶ್ರೀ ವಿಷ್ಣುವಿನ ಪೂಜೆಯ ವಿಚಾರವನ್ನು ಹೇಳುತ್ತೇನೆ ಕೇಳು. ದಾರಿದ್ರ್ಯ ಕುಷ್ಠಾದಿ ರೋಗಗಳಿಂದ ಪೀಡಿತರಾದ ಮನುಷ್ಯರು, ಸಂತತಿ ಇಲ್ಲದವರು ಮಂಡಲದಲ್ಲಿ ಲಕ್ಷ್ಮೀಯುಕ್ತನಾದ ನಾರಾಯಣನನ್ನು ಬರೆದು ಪೂಜಿಸಿದರೆ ಆಯುಷ್ಯ, ಆರೋಗ್ಯ, ಐಶ್ವರ್ಯ, ಸಂತತಿ, ಎಲ್ಲವೂ ದೊರೆತು ಮನುಷ್ಯನಿಗೆ ಸುಖಪ್ರಾಪ್ತಿಯು ಆಗುತ್ತದೆ. ಆದರೆ ಇದಕ್ಕೆ ಮೊದಲು ಯೋಗ್ಯನಾದ ಗುರುವಿನ ಸಹಾಯವನ್ನು ದೊರಕಿಸಬೇಕು. ಹರಿಯಂತೆ ಗುರುವನ್ನು ಭಕ್ತಿಯಿಂದ ಪೂಜಿಸಿ ಆ ಗುರುವಿನೊಂದಿಗೆ ಕಾರ್ತಿಕ ಶುದ್ಧ ದಶಮಿಯ ದಿನ ಹಾಲುಗಿಡದ ದಂತಕಾಷ್ಠವನ್ನು ಮಂತ್ರ ಪೂರ್ವವಾಗಿ ಅಗಿದು ಹಲ್ಲನ್ನು ಉಜ್ಜಿ ದೇವರಮನೆಯಲ್ಲಿಯೇ ಮಲಗಬೇಕು. ಅಂದು ಶಿಷ್ಯನಿಗೆ ಬಿದ್ದ ಕನಸುಗಳನ್ನು ಗುರುವು ಪರಿಶೀಲಿಸಬೇಕು. ಏಕಾದಶಿ ದಿನ ಶಿಷ್ಯನು ದೇವರ ಸೇವೆ ಮಾಡಬೇಕು. ದೇವಾಲಯಕ್ಕೆ ಹೋಗಿ ಬರಬೇಕು. ಪಂಡಿತನಾದ ಗುರುವು ಬಗೆಬಗೆಯ ಲಕ್ಷಣಗಳಿಂದ ಭೂಮಿಯನ್ನು ಪರೀಕ್ಷಿಸಿ ಯೋಗ್ಯವಾದ ಸ್ಥಳದಲ್ಲಿ ಹದಿನಾರು ಗಾಲಿಗಳುಳ್ಳ ಚಕ್ರವನ್ನು

ಸರ್ವತೋಭದ್ರ ಮುದ್ರೆಯುಳ್ಳದ್ದನ್ನಾಗಿ ಬರೆಯಬೇಕು. ಅಥವಾ ಎಂಟು ಎಲೆಗಳು ಎದ್ದು ಕಾಣುವ ಒಂದು ಕಮಲವನ್ನಾದರೂ ಬರೆಯಬೇಕು. ಬಿಳಿಯ ಬಟ್ಟೆಯಿಂದ ಶಿಷ್ಯನ ಕಣ್ಣನ್ನು ಗಟ್ಟಿಯಾಗಿ ಕಟ್ಟಬೇಕು. ಬೊಗಸೆಯಲ್ಲಿ ಹೂ ತುಂಬಿಕೊಂಡು ನಿಂತ ಅವನನ್ನು ಗುರುಮಂಡಲದ ಹತ್ತಿರ ಬರಮಾಡಿಕೊಳ್ಳಬೇಕು. ಗುರುವು ಗಂಧವನ್ನು ಬಳಿಯುವದರಿಂದ ಅಷ್ಟಪತ್ರ ಮಂಡಲವನ್ನು ಮಾಡಿದ್ದರೆ ಪೂರ್ವಪತ್ರದಲ್ಲಿ ಇಂದ್ರನನ್ನೂ, ಆಗ್ನೇಯದಲ್ಲಿ ಅಗ್ನಿಯನ್ನು, ದಕ್ಷಿಣದಲ್ಲಿ ಯಮನನ್ನೂ, ನೈರುತ್ಯದಲ್ಲಿ ನಿರತಿಯನ್ನೂ, ಉತ್ತರದಲ್ಲಿ ಕುಬೇರನನ್ನೂ, ಈಶಾನ್ಯದಲ್ಲಿ ರುದ್ರನನ್ನೂ ಆವಾಹನೆಮಾಡಿ ಪೂಜಿಸಿ ಪದ್ಮಮಧ್ಯದಲ್ಲಿ ಶ್ರೀ ವಿಷ್ಣುವನ್ನು ಪೂಜಿಸಬೇಕು. ಪೂರ್ವದಳದಲ್ಲಿ ಬಲರಾಮನನ್ನೂ ದಕ್ಷಿಣ ದಳದಲ್ಲಿ ಅನಿರುದ್ಧನನ್ನೂ ಪಶ್ಚಿಮ ದಳದಲ್ಲಿ ಪ್ರದ್ಯುಮ್ನನನ್ನೂ ಉತ್ತರ ದಳದಲ್ಲಿ ವಾಸುದೇವನನ್ನೂ ಪೂಜಿಸಬೇಕು.

ಪರಮಾತ್ಮನ ಎಡಗಡೆಗೆ ಲಕ್ಷ್ಮೀದೇವಿಯನ್ನೂ, ದಕ್ಷಿಣದಲ್ಲಿ ಗದೆಯನ್ನು ವಾಯುವ್ಯದಲ್ಲಿ ಪದ್ಮವನ್ನೂ, ಬಲಗಡೆಗೆ ಗರುಡನನ್ನೂ ಇಟ್ಟು ಪೂಜಿಸಬೇಕು. ಧನಸ್ಸು, ಖಡ್ಗ, ಶ್ರೀವತ್ಸ, ಕೌಸ್ತುಭ ಮುಂತಾದವುಗಳನ್ನು ಅಲ್ಲಲ್ಲಿ ಇರಿಸಿ ಪೂಜಿಸಿ ಎಂಟು ದಿಕ್ಕಿನ ದಳಗಳಲ್ಲಿಯೂ ಎಂಟು ಕಲಶಗಳನ್ನು ವಿಧಿಪೂರ್ವಕವಾಗಿ ಇಟ್ಟು ಒಂಬತ್ತನೇ ವೈಷ್ಣವ ಕಲಶವನ್ನೂ ಅಲ್ಲಿ ಸ್ಥಾಪಿಸಬೇಕು. ಪಂಡಿತನಾದ ಗುರುವು ಭುಕ್ತಿ ಮುಕ್ತಿಯ ಅಪೇಕ್ಷೆಯಿಂದ ಈ ಎಲ್ಲ ಕಲಶೋದಕಗಳಿಂದ ಸ್ನಾನಮಾಡಿ ಲೋಕಪಾಲಕರನ್ನು ಪೂಜಿಸಿ ಕಣ್ಣು ಕಟ್ಟಿಕೊಂಡಿರುವ ಶಿಷ್ಯನನ್ನು ಪ್ರದಕ್ಷಿಣಾಕಾರವಾಗಿ ಅಲ್ಲಿಗೆ ಬರಮಾಡಿಕೊಳ್ಳಬೇಕು. ಅವರಿಗೆ ಅಗ್ನಿ ವರುಣ ವಾಯು ಚಂದ್ರ ಮುಂತಾದ ಮಂತ್ರಗಳಿಂದ ಅಭಿಮಂತ್ರಿತವಾದ ನೀರುಗಳಿಂದ ಪ್ರೋಕ್ಷಣೆಮಾಡಿ ಅನಂತರ ಆ ಶಿಷ್ಯರಿಗೆ ತತ್ತ್ವೋಪದೇಶಮಾಡಬೇಕು. ಹರಿ ಗುರುಗಳ ಮಹಿಮೆಯನ್ನು ತಿಳಿಸಿ ಹೇಳಬೇಕು. '' ಓಂ ನಮೋ ಭಗವತೇ ಸರ್ವರೂಪಿಣೆ ಹೂಂಫಟ್ ಸ್ವಾಹಾ '' ಎಂಬ ಹದಿನಾರು ಅಕ್ಷರವುಳ್ಳ ಮಂತ್ರದಿಂದ ಉರಿಯುತ್ತಿರುವ ಅಗ್ನಿಯಲ್ಲಿ ಹೋಮಮಾಡಬೇಕು. ಹೋಮವಾದ ಬಳಿಕ ವ್ರತಿಯಾದವನು ಆನೆ, ಕುದುರೆ, ಹೊನ್ನ, ರನ್ನ, ಚಿನ್ನ, ಗ್ರಾಮ, ಧಾಮ, ಕ್ಷೇತ್ರ, ಪಾತ್ರ, ಮುಂತಾದವುಗಳನ್ನು ಗುರುದಕ್ಷಿಣೆಯಾಗಿ ಆಚಾರ್ಯರಿಗೆ ಭಕ್ತಿಯಿಂದ ದಾನಕೊಡಬೇಕು. ದರಿದ್ರನಾಗಿದ್ದರೆ ಯಥಾನುಕೂಲ ದಾನ ಮಾಡಬೇಕು.

ವ್ರತವನ್ನು ಧಾರಣ ಮಾಡಿದ ಮನುಷ್ಯನು ವರಾಹಪುರಾಣವನ್ನು ಶ್ರವಣ ಮಾಡಿದರೆ ಎಲ್ಲ ವೇದ ಪುರಾಣಗಳನ್ನೂ ಕೇಳಿದಂತಾಗುವದು. ಎಲ್ಲ ಮಂತ್ರಗಳನ್ನೂ ಜಪಿಸಿದಂತಾಗುವದು. ಪುಷ್ಕರ, ಪ್ರಯಾಗ, ಕಾಶಿ, ಕುರುಕ್ಷೇತ್ರ, ತ್ರಿವೇಣಿ ಸಂಗಮ, ಮುಂತಾದ ಪುಣ್ಯಕ್ಷೇತ್ರಗಳಲ್ಲಿ ಗ್ರಹಣ ಸಂಕ್ರಮಣ ಕಾಲದಲ್ಲಿ ಮಂತ್ರ ಜಪಮಾಡುವವರ ಎರಡರಷ್ಟು ಫಲವು ಕೇವಲ ವರಾಹಪುರಾಣ ಶ್ರವಣಮಾತ್ರದಿಂದ ಪ್ರಾಪ್ತವಾಗುವುದು. ಹೀಗೆ ವ್ರತವನ್ನು ಮಾಡಿ ಯಥಾ ಶಕ್ತಿ ಅನ್ನದಾನವನ್ನು ಮಾಡಿಸಬೇಕು. ಅನ್ನದಾನಕ್ಕಿಂತ ಹೆಚ್ಚಿನ ದಾನವಿಲ್ಲ. ಈ ವಿಷಯದಲ್ಲಿ ಮಹಾತ್ಮರಾದ ವಶಿಷ್ಠ ಮತ್ತು ಶ್ವೇತರಾಜರ ಸಂವಾದವು ಒಳ್ಳೇ ಉದ್ಬೋಧಕವಾದ ಐತಿಹಾಸಿಕ ಪ್ರಕರಣವಾಗಿದೆ. ಪರ್ವ ಕಾಲದಲ್ಲಿ ಇಳಾವೃತ ವರ್ಷದಲ್ಲಿ ಶ್ವೇತ ಎಂಬ ರಾಜನಿದ್ದನು.

ಅವನು ಒಂದು ದಿನ ವಶಿಷ್ಠರ ಹತ್ತಿರ ಬಂದು ''ಪೂಜ್ಯರೇ, ನಾನು ಭೂದಾನವನ್ನು ಮಾಡಬೇಕೆಂದು ಬಯಸಿದ್ದೇನೆ. ಅದಕ್ಕೆ ತಾವು ಅನುಮತಿಯನ್ನು ಕೊಡಬೇಕು'' ಎಂದು ಕೇಳಿಕೊಂಡನು. ಅದಕ್ಕೆ ವಶಿಷ್ಠರು ''ಮಹಾರಾಜಾ, ಎಲ್ಲ ಕಾಲದಲ್ಲಿಯೂ ಎಲ್ಲರಿಗೂ ಆನಂದ ವನ್ನುಂಟು ಮಾಡುವ ದಾನವೆಂದರೆ ಅನ್ನದಾನ. ಆದುದರಿಂದ ರಾಜನ್ ಮೊದಲು ನೀನು ಅನ್ನದಾನವನ್ನು ಮಾಡು. ಒಂದು ಅನ್ನದಾನವನ್ನು ಸರಿಯಾಗಿ ಮಾಡಿದರೆ ಎಲ್ಲ ದಾನವನ್ನೂ ಮಾಡಿದಂತಾಗುವದು'' ಎಂದು ಹೇಳಿದರು. ವಶಿಷ್ಠರ ಈ ಮಾತು ಮಹಾರಾಜನಿಗೆ ಅಷ್ಟು ಹಿಡಿಸಲಿಲ್ಲ. ಅನ್ನದಾನಕ್ಕಿಂತ ಹೆಚ್ಚಿನ ದಾನಮಾಡುವ ಯೋಗ್ಯತೆ ತನ್ನಲ್ಲಿ ಇರುವಾಗ ಅನ್ನದಾನದಂಥ ಚಿಕ್ಕಪುಟ್ಟ ದಾನವನ್ನು ತಾನೇಕೆ ಮಾಡಬೇಕೆಂದು ಉದಾಸೀನ ಮಾಡಿದನು. ಯಾರಿಗೂ ಊಟಕ್ಕೆ ಹಾಕದೆ ಆ ಶ್ವೇತ ರಾಜನು ಅನೇಕ ಯೋಗ್ಯ ಬ್ರಾಹ್ಮಣರಿಗೆ ಹಾಗೇ ಧನಕನಕಗಳನ್ನು ದಾನ ಕೊಡುತ್ತಿದ್ದನು.

ಬೆಳ್ಳಿ, ಬಂಗಾರ, ರತ್ನ, ಮನೆ, ಹೊಲ, ಗ್ರಾಮ, ಜಹಗೀರಿಗಳನ್ನು ಬ್ರಾಹ್ಮಣರಿಗೆ ದಾನವಿತ್ತನು. ಒಂದು ಸಹಸ್ರ ಅಶ್ವಮೇಧ ಯಾಗಗಳನ್ನು ವಶಿಷ್ಠರ ನೇತೃತ್ವದಲ್ಲಿ ನೆರವೇರಿಸಿ ವಿಪುಲವಾಗಿ ಧನಕನಕ ರತ್ನಾಭರಣಗಳನ್ನೂ ದಾನಕೊಟ್ಟನು. ಆದರೆ ಅಲ್ಪವೆಂದು ಅನ್ನದಾನವನ್ನು ಮಾತ್ರ ಅವನು ಎಂದೂ ಮಾಡಲಿಲ್ಲ. ಮುಂದೆ ಆ ಮಹಾರಾಜನು ಕಾಲಪ್ರಾಪ್ತವಾದ ಮರಣವನ್ನು ಹೊಂದಿದ ಬಳಿಕ ಸ್ವರ್ಗಲೋಕಕ್ಕೆ ಹೋದನು. ಸ್ವರ್ಗದಲ್ಲಿ ಹಸಿವೆ ನೀರಡಿಕೆಗಳು ಅವನನ್ನು ಪೀಡಿಸ ತೊಡಗಿದವು. ಆ ಅಮರಾವತಿಯಲ್ಲಿ ಬೇಕುಬೇಕಾದ ಸುಖಭೋಗ ಸಾಮಗ್ರಿಗಳು ಇದ್ದರೂ ಹಸಿವೆಯಿಂದ ಅವನು ಕಂಗೆಟ್ಟು ಹೋದನು. ಬಾಯಾರಿಕೆಯಿಂದ ಗಂಟಲು ಕಿತ್ತಿ ಬರುವಂತಾಯಿತು. ಆದುದರಿಂದ ಸ್ವರ್ಗ ಸುಖವು ಅವನಿಗೆ ಸೊಗಯಿಸಲಿಲ್ಲ. ಆಗ ಆ ಮಹಾರಾಜನು ಶ್ವೇತ ಪರ್ವತಕ್ಕೆ ಹೋಗಿ ಅಲ್ಲಿಯ ಸರೋವರದ ಹತ್ತಿರ ಸಾರಿದನು. ಆ ಸರೋವರದ ದಂಡೆಯ ಮೇಲೆ ಅವನು ಹಿಂದೆ ಸ್ವರ್ಗಕ್ಕೆ ಬರುವಾಗ ಬಿಟ್ಟು ಬಂದ ಮನುಷ್ಯ ದೇಹವು ಅರ್ಧ ಸುಟ್ಟು ಬಿದ್ದಿತ್ತು. ಮಹಾರಾಜನು ಹೋಗಿ ಆಶೆಯಿಂದ ಅಲ್ಲಲ್ಲಿ ರಕ್ತ ಮಾಂಸ ಮೆತ್ತಿದ ತನ್ನ ಹೆಣದ ಎಲುವಿನ ಚೂರುಗಳನ್ನು ನೆಕ್ಕಲು ತೊಡಗಿದನು. ಅಷ್ಟು ತೀವ್ರವಾಗಿದ್ದಿತು ಅವನ ಹಸಿವು. ಹೀಗೆ ಎಲುವುಗಳನ್ನು ನೆಕ್ಕಿ ಮತ್ತೆ ವಿಮಾನವನ್ನು ಏರಿ ಅವನು ಸ್ವರ್ಗಕ್ಕೆ ಹೋದನು. ಹೀಗೆ ಅವನು ದಿನಾಲು ತನ್ನ ಮಾಂಸ ರಕ್ತಗಳನ್ನು ತಾನೇ ತಿನ್ನುತ್ತಿರಲಾಗಿ ಒಂದು ದಿನ ಅದು ವಶಿಷ್ಠರ ಕಣ್ಣಿಗೆ ಬಿದ್ದಿತು. ಅವರು ಆ ಶಿಷ್ಯನನ್ನು ಕುರಿತು ''ಶ್ವೇತರಾಜ ಇದೇನು ನಿನ್ನ ದುರವಸ್ಥೆ ? ಸ್ವಮಾಂಸವನ್ನೇ ತಿನ್ನುವ ಪ್ರಸಂಗವು ನಿನಗೆ ಏಕೆ ಬಂದಿತು ?'' ಎಂದು ಕೇಳಿದರು. ಅದಕ್ಕೆ ಆ ಮಹಾರಾಜನು :-

''ಭಗವನ್, ನಾನು ಪೂರ್ವದಲ್ಲಿ ಯಾರಿಗೂ ಅನ್ನವನ್ನು ನೀಡಲಿಲ್ಲ. ಕುಡಿಯಲು ನೀರನ್ನು ಹನಿಸಲಿಲ್ಲ. ಉಳಿದೆಲ್ಲ ದಾನವನ್ನು ಮಾಡಿದೆ. ಅದರಿಂದ ನನಗೆ ಈಗ ಸ್ವರ್ಗವಾದರೂ ಉಪವಾಸ ಸಂಕಟಪಡುವ ಪ್ರಸಂಗ ಬಂದಿದೆ. ಹಸಿವು ನೀರಡಿಕೆಗಳು ನನ್ನನ್ನು ಕಂಗಾಲನನ್ನಾಗಿ ಮಾಡಿವೆ.''

ರಾಜನ ಈ ಮಾತನ್ನು ಆಲಿಸಿ ವಶಿಷ್ಠರು ದುಃಖದಿಂದ ನುಡಿದರು.-

"ರಾಜನ್, ಬಹಳ ಹಸಿದಿರುವ ನಿನಗೆ ನಾನು ಏನು ಮಾಡಲಿ! ಜಗತ್ತಿನಲ್ಲಿ ಯಾರಿಗೂ ಏನೂ ಕೊಡದೇ ಬರುವದಿಲ್ಲ. ಕೊಟ್ಟದ್ದು ಎಲ್ಲಿಯೂ ಹೋಗುವದಿಲ್ಲ. ಕೊಡದಿರುವ ಯಾವ ವಸ್ತುವೂ ನಮಗೆ ದೊರಕಲಾರದು. ನೀನು ಹಿಂದೆ ಬೇಕಾದಷ್ಟು ಧನ, ಕನಕ, ಹೊಲ, ಮನೆಗಳನ್ನು ದಾನ ಮಾಡಿದರೂ ಅನ್ನದಾನವನ್ನು ಮಾತ್ರ ಮಾಡದಿರುವದರಿಂದ ನಿನಗೆ ಈಗ ಸರ್ವ ಐಶ್ವರ್ಯವು ಪ್ರಾಪ್ತವಾಗಿದ್ದರೂ ಅನ್ನವು ಮಾತ್ರ ದೊರಕಲಿಲ್ಲ." ಇದನ್ನು ಕೇಳಿ ಶ್ವೇತಮುನಿಯು ವಶಿಷ್ಠರಿಗೆ ಮತ್ತೆ ನಮಸ್ಕರಿಸಿ "ಮಹಾಮುನಿಗಳೆ, ದಾನ ಮಾಡದ್ದನ್ನು ಪಡೆಯಲು ಏನಾದರೂ ಉಪಾಯವಿದ್ದರೆ ತಿಳಿಸಬೇಕು " ಎಂದು ಬಿನ್ನವಿಸಿದನು. ಅದನ್ನು ಕೇಳಿ ವಶಿಷ್ಠರು ನುಡಿದರು- " ಹಿಂದೆ ದಾನ ಮಾಡದಿದ್ದುದನ್ನು ಈಗ ಪಡೆಯಲು ಒಂದು ಉಪಾಯವಿದೆ. ಅದನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ವಿನೀತಾಶ್ವ ಎಂಬ ಅರಸನು ಸರ್ವಮೇಧ ಎಂಬ ಶ್ರೇಷ್ಠ ಯಜ್ಞವನ್ನು ಮಾಡಿದನು. ಆ ಯಜ್ಞದಲ್ಲಿ ಆ ಭೂಪತಿಯು ಹಸುಗಳನ್ನೂ ಆನೆ ಕುದುರೆ ಧನಧಾನ್ಯಗಳನ್ನೂ ಬ್ರಾಹ್ಮಣರಿಗೆ ವಿಪುಲವಾಗಿ ದಾನವಿತ್ತನು. ಆದರೆ ಅತ್ಯಲ್ಪವಾದುದೆಂದು ಅನ್ನದಾನವನ್ನು ಮಾತ್ರ ಅವನು ಮಾಡಲಿಲ್ಲ. ಮುಂದೆ ಆ ರಾಜನು ಬದುಕಿ ಇರುವವರೆಗೆ ಅನೇಕ ಪುಣ್ಯಕಾರ್ಯಗಳನ್ನು ಮಾಡಿ ಕೊನೆಗೆ ಗಂಗೆಯ ನೀರಿನಲ್ಲಿ ದೇಹತ್ಯಾಗಮಾಡಿ ಸ್ವರ್ಗವನ್ನು ಸೇರಿದನು. ನಿನ್ನಂತೆ ಅನ್ನದಾನ ಮಾಡದ ಆ ರಾಜನನ್ನು ಸ್ವರ್ಗದಲ್ಲಿ ಹಸಿವೆಯ ಕಸಿವಿಸಿಯು ಕಾಡತೊಡಗಿತು. ಹೀಗೆ ಅನ್ನಕ್ಕಾಗಿ ಕಂಗೆಟ್ಟು ಆ ರಾಜನು ವಿಮಾನದಲ್ಲಿ ಕುಳಿತು ಮಾನವಲೋಕಕ್ಕೆ ಬಂದನು. ನೀಲ ಪರ್ವತದಲ್ಲಿ ಗಂಗೆಯ ತೀರದಲ್ಲಿ ಅವನ ದೇಹವು ಹಾಗೇಬಿದ್ದಿತ್ತು. ಆ ಗಂಗಾನದಿ ತಟಾಕದಲ್ಲಿಯೇ ಇವನ ಕಡೆಯಿಂದ ಬದುಕಿ ಇದ್ದಾಗ ಅನೇಕ ಯಜ್ಞಗಳನ್ನು ಮಾಡಿಸಿದ ಪುರೋಹಿತರೂ ಅಲ್ಲಿಯೇ ಕುಳಿತಿದ್ದರು. ಅವರಿಗೆ ನಮಸ್ಕರಿಸಿ ವಿನೀತಾಶ್ವರಾಜನು ಕೇಳಿಕೊಂಡನು.-

"ಋಷಿವರ್ಯ, ನನ್ನ ಈ ಪ್ರಾಣಾಂತಿಕ ಹಸಿವೆಗೆ ಕಾರಣವೇನು ? ಈ ಕ್ಷುಧೆಯ ಪರಿಹಾರಕ್ಕೆ ಏನಾದರೂ ಉಪಾಯವು ಗೊತ್ತಿದ್ದರೆ ಹೇಳಿ." ಅದನ್ನು ಕೇಳಿ ಪುರೋಹಿತರು ಇಂತು ನುಡಿದರು. " ರಾಜನೇ ನೀನು ತಿಲಧೇನು, ಜಲಧೇನು, ಗುಡಧೇನು, ರಸಧೇನು ಮುಂತಾದವುಗಳನ್ನು ಕೂಡಲೇ ದಾನ ಮಾಡು. ಅದರಿಂದ ನಿನ್ನ ಹಸಿವೆ ಬಾಯಾರಿಕೆ, ಬಳಲಿಕೆ ತೊಳಲಿಕೆ ಎಲ್ಲವೂ ದೂರಾಗುವದು." ಆಗ "ಆ ತಿಲಧೇನುವನ್ನು ದಾನಮಾಡುವ ಬಗೆ ಯಾವುದು " ಎಂಬ ರಾಜನ ಪ್ರಶ್ನೆಗೆ ಪುರೋಹಿತರಾದ ಋಷಿಗಳು ಉತ್ತರಿಸಿದರು.-

"ತಿಲಧೇನು ಅಂದರೆ ಎಳ್ಳಿನಿಂದ ರಚಿಸಿದ ಆಕಳು ಎಂದು ಅರ್ಥ. ೬ಳ ಸೊಲಿಗೆ ಎಳ್ಳಿನಿಂದ ಒಂದು ಆಕಳವನ್ನು, ಹದಿನಾರು ಸೊಲಿಗೆಯಿಂದ ಒಂದು ಕರುವನ್ನು ರಚಿಸಬೇಕು. ಆ ಎಳ್ಳಿನ ಹಸುವಿನ ಮೂಗನ್ನು ಗಂಧದಿಂದಲೂ ನಾಲಿಗೆಯನ್ನು ಬೆಲ್ಲದಿಂದಲೂ ಬಾಲವನ್ನು ಗಂಟೆಯಿಂದಲೂ ಕೊಂಬುಗಳನ್ನು ಚಿನ್ನದಿಂದಲೂ ಮಾಡಿ ಅಲಂಕರಿಸಿ ಅದರ ಮೇಲೆ ಕೃಷ್ಣಾಜಿನವನ್ನು ಹೊದಿಸಿ ಮಂತ್ರೋಕ್ತವಾದ ವಿಧಿಯಿಂದ ಅದನ್ನು ಬ್ರಾಹ್ಮಣರಿಗೆ ದಾನಕೊಡಬೇಕು.

ಅನ್ನಂ ಮೇ ಜಾಯತಾಮನ್ಯತ್ಪಾನಂ ಸರ್ವರಸಾಸ್ತಥಾ ।
ಸರ್ವಂ ಸಂಪಾದಯಾಸ್ಮಾಕಂ ತಿಲಧೇನೋ ದ್ವಿಜಾರ್ಪಿತೇ ॥

''ಬ್ರಾಹ್ಮಣಾರ್ಪಿತವಾದ ತಿಲಧೇನುವೇ, ನನಗೆ ಅನ್ನವೂ, ನೀರೂ ಸರ್ವ ರಸಗಳೂ ದೊರೆಯಲಿ, ನಮಗೆಲ್ಲವನ್ನೂ ದೊರಕಿಸಿಕೊಡು'' ಎಂದು ದಾನ ಮಾಡುವವನು ಹೇಳಬೇಕು.

ಗೃಹ್ಣಾಮಿ ದೇವಿ ತ್ವಾಂ ಭಕ್ತ್ಯಾ ಕುಟುಂಬಾರ್ಥಂ ವಿಶೇಷತಃ ।
ಭಜಸ್ವ ಕಾಮಾನ್ಮಾಂ ದೇವಿ ತಿಲಧೇನೋ ನಮೋಸ್ತು ತೇ ॥

''ದೇವಿ, ಮುಖ್ಯವಾಗಿ ಕುಟುಂಬ ರಕ್ಷಣೆಗಾಗಿ ನಿನ್ನನ್ನು ಭಕ್ತಿಯಿಂದ ಆಶ್ರಯಿಸುತ್ತೇನೆ. ತಿಲಧೇನುವೇ, ನಿನಗೆ ನಮಸ್ಕಾರ'' ಎಂದು ದಾನವನ್ನು ತೆಗೆದುಕೊಳ್ಳುವವನು ಹೇಳಬೇಕು. ಮೇಲಿನಂತೆ ಹೇಳಿ, ಬಳಿಕ ತಿಲಧೇನುವನ್ನು ಕೊಡಬೇಕು. ರಾಜೋತ್ತಮನೇ, ಅದು ಸರ್ವೇಷ್ಟ ಲಾಭವನ್ನೂ ಮಾಡುವದರಲ್ಲಿ ಸಂಶಯವಿಲ್ಲ. ಇದನ್ನು ಕೇಳುವವರೂ, ಭಕ್ತಿಯಿಂದ ಆ ದಾನವ್ರತವನ್ನು ಮಾಡುವವರೂ, ಸರ್ವ ಪಾಪಗಳನ್ನೂ ಕಳೆದುಕೊಂಡು ವಿಷ್ಣು ಲೋಕವನ್ನು ಸೇರುವರು.

*ವರಾಹ ಪುರಾಣದಲ್ಲಿ ತೊಂಬತ್ತನಾಲ್ಕನೇ ಅಧ್ಯಾಯ ಮುಗಿದುದು*



## ನೀರಿನ ಆಕಳಿನ ದಾನ

**ಅಧ್ಯಾಯ - ೯೫**

**ಪುರೋಹಿತ :-** ಮಹಾರಾಜ, ಜಲದೇನುವಿನ ವಿಚಾರವನ್ನು ಹೇಳುತ್ತೇನೆ ಕೇಳು. ಪುಣ್ಯ ದಿನದಲ್ಲಿ ವಿಧಿಪೂರ್ವಕವಾಗಿ ಹಸುವಿನ ಮೈದೊಗಲಿನಳತೆಯ ಪ್ರದೇಶವನ್ನು ಗೋಮಯದಿಂದ ಸಾರಿಸಬೇಕು. ಸಾರಿಸಿದ ಆ ಮಂಡಲದ ನಟ್ಟ ನಡುವೆ ಒಂದು ಪೂರ್ಣ ಕಲಶವನ್ನು ಇರಿಸಬೇಕು. ಕರ್ಪುರ, ಚಂದನ, ಗಂಧಗಳಿಂದ ತುಂಬಿದ ಆ ಪೂರ್ಣ ಕಲಶವೇ ಆಕಳು ಎಂದು ಭಾವಿಸಿ ಅದರ ಪಕ್ಕದಲ್ಲಿ ಕರುವಿನ ಪ್ರತಿನಿಧಿಯೆಂದು ಮತ್ತೊಂದು ಚಿಕ್ಕ ಕಲಶವೊಂದನ್ನು ಸ್ಥಾಪಿಸಬೇಕು. ಪತ್ರ ಪುಷ್ಪಗಳಿಂದ ಅಲಂಕರಿಸಿ ಅದಕ್ಕೆ ದೂರ್ವಾಂಕುರಗಳನ್ನು ಏರಿಸಿ ಅದರ ಒಳಗೆ ಪಂಚರತ್ನಗಳನ್ನು ಹಾಕಿ ಸುತ್ತೆಲ್ಲ ನೆಲ್ಲೀಕಾಯಿ, ಕಲ್ಲು, ಹೂ, ಸಾಸಿವೆ ಮತ್ತು ಇತರ ಅನೇಕ ಧಾನ್ಯಗಳನ್ನು ಕಲಶದ ಸುತ್ತು ಮುತ್ತಲೂ ಹರಡಿ, ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಪಾತ್ರೆಗಳನ್ನು ಇಡಬೇಕು. ಒಂದು ಪಾತ್ರೆಯಲ್ಲಿ ತುಪ್ಪ, ಎರಡನೇಯದರಲ್ಲಿ ಮೊಸರು, ಮೂರನೇಯದರಲ್ಲಿ ಜೇನುತುಪ್ಪ, ನಾಲ್ಕನೇಯದರಲ್ಲಿ ಸಕ್ಕರೆ ಹಾಕಿ ತುಂಬಿ ಇಡಬೇಕು.

ಕಲ್ಪಿತವಾದ ಆ ಕಲಶಧೇನುವಿಗೆ ಬಂಗಾರದಿಂದ ಮುಖವನ್ನೂ, ಕೃಷ್ಣಾಗರುವಿನಿಂದ ಕೊಂಬನ್ನು, ಎಲೆಗಳಿಂದ ಕಿವಿಗಳನ್ನು, ಮುತ್ತುಗಳಿಂದ ಕಣ್ಣು, ತಾಮ್ರದಿಂದ ಪೃಷ್ಠ, ಕಂಚಿನಿಂದ ಮೈ, ದರ್ಭೆಗಳಿಂದ ಕೂದಲು, ಸೂತ್ರದಿಂದ ಬಾಲ, ಕಪ್ಪು ಒಡವೆಯಿಂದ ಗಂಟೆ, ಕಂಬಳೀದಾರದಿಂದ ಹೂಮಾಲೆ, ಬೆಲ್ಲದಿಂದ ಬಾಯಿ, ಮುತ್ತಿನ ಚಿಪ್ಪಿನಿಂದ ಹಲ್ಲು, ಸಕ್ಕರೆಯಿಂದ ನಾಲಿಗೆ, ಬೆಣ್ಣೆಯಿಂದ ಮೊಲೆ, ಕಬ್ಬಿನಿಂದ ಕಾಲುಗಳನ್ನು ಕಲ್ಪಿಸಿ

ಅದನ್ನು ಕೃಷ್ಣಾಜಿನದ ಮೇಲೆ ಸ್ಥಾಪಿಸಿ, ಹೂ ಗಂಧ ಮಾಲೆಗಳಿಂದ ಪೂಜಿಸಿ ಕುಟುಂಬಿಯೂ ವೇದಾಧ್ಯಾಯಿಯೂ ಆದ ಯೋಗ್ಯ ಬ್ರಾಹ್ಮಣನಿಗೆ ದಾನ ಕೊಡಬೇಕು. ಈ ಜಲಧೇನುವನ್ನು ದಾನ ಕೊಟ್ಟವನು ಒಂದು ದಿನ, ಕೊಂಡವನು ಮೂರು ರಾತ್ರಿ ಕೇವಲ ನೀರನ್ನು ಮಾತ್ರ ಕುಡಿದು ಉಪವಾಸವಿರಬೇಕು. ಈ ಜಲಧೇನು ದಾನದಿಂದ ಸೆರೆ ಕುಡಿದವನು, ತಂದೆಯ ತಲೆ ಕಡಿದವನು, ಬ್ರಾಹ್ಮಣನನ್ನು ಸಾಯ ಹೊಡೆದವನು, ಗುರುವಿನ ಮಡದಿಯ ಸೆರಗು ಹಿಡಿದವನು ಎಲ್ಲರೂ ತಮ್ಮ ಪಾಪಗಳನ್ನು ಕಳೆದುಕೊಂಡು ವಿಷ್ಣು ಪದವನ್ನು ಐದುವರು.

ವರಾಹ ಪುರಾಣದಲ್ಲಿ ತೊಂಬತ್ತೆದನೇ ಅಧ್ಯಾಯ ಮುಗಿದುದು



## ರಸಧೇನು ದಾನ

**ಅಧ್ಯಾಯ - ೯೬**

ರಾಜನ್, ರಸಧೇನು ದಾನದ ವಿಧಾನವನ್ನು ಹೇಳುತ್ತೇನೆ. ಸಾರಿಸಿದ ನೆಲದ ಮೇಲೆ ಕೃಷ್ಣಾಜಿನ ದರ್ಭೆಗಳನ್ನು ಹರಿವಿ ಅದರ ಮೇಲೆ ಕಬ್ಬಿನ ಹಾಲಿನಿಂದ ತುಂಬಿದ ಕೊಡವನ್ನು ಇಡಬೇಕು. ಅದನ್ನೇ ಹಸುವೆಂದು ತಿಳಿದು ಅದರ ಪಕ್ಕದಲ್ಲಿಯೇ ಕರುವಿನ ಸ್ಥಾನದಲ್ಲಿ ಮತ್ತೊಂದು ಚಿಕ್ಕ ಕಬ್ಬಿನ ಹಾಲುತುಂಬಿದ ಕಲಶವನ್ನು ಇರಿಸಬೇಕು. ಆ ಕಲಶ ಧೇನುವಿಗೆ ಕಬ್ಬಿನ ಕಾಲು, ಬೆಳ್ಳಿಯ ಗೊರಸು, ಚಿನ್ನದ ಕೊಂಬು, ವಸ್ತ್ರದ ಬಾಲ, ತುಪ್ಪದ ಮೊಲೆ, ಹೂವಿನ ಗಂಗೆದೊಗಲು, ಸಕ್ಕರೆಯ ಬಾಯಿ, ಹಣ್ಣಿನ ಹಲ್ಲು, ತಾಮ್ರದ ಪೃಷ್ಠ, ಹೂಗಳ ರೋಮ, ಮುತ್ತಿನ ಕಣ್ಣುಗಳನ್ನು ಕಲ್ಪಿಸಿ ಅದರಲ್ಲಿ ಏಳು ವಿಧವಾದ ಭತ್ತಗಳನ್ನು ಹಾಕಬೇಕು. ನಾಲ್ಕು ದಿಕ್ಕುಗಳಲ್ಲಿ ದೀಪವನ್ನು ಹಚ್ಚಿಡಬೇಕು. ಧೂಪವನ್ನು ಹಾಕಬೇಕು. ನಾಲ್ಕು ದಿಕ್ಕುಗಳಲ್ಲಿ ಎಳ್ಳುತುಂಬಿದ ಪಾತ್ರೆಯನ್ನು ಇಡಬೇಕು. ಇಂಥ ರಸಧೇನುವನ್ನು ಮಕ್ಕಳು ಮರಿಗಳುಳ್ಳ ವೇದಾಧ್ಯಾಯಿಗೆ ದಾನ ಕೊಡಬೇಕು. ಇದನ್ನು ದಾನ ಕೊಡುವವನೂ ಕೊಳ್ಳುವವನೂ ಒಂದು ಹೊತ್ತು ಉಪವಾಸ ಮಾಡಬೇಕು. ಈ ರಸಧೇನು ದಾನದಿಂದ ದಾನಮಾಡಿದವನ ಸರ್ವ ಪಾಪ ಪರಿಹಾರವಾಗಿ ಅವನು ಸ್ವರ್ಗಸೇರುವದು ಮಾತ್ರವಲ್ಲದೇ ಅವನ ಹಿಂದಿನ ಹತ್ತು ತಲೆ ಮುಂದಿನ ಹತ್ತು ತಲೆಯವರೂ ಕೂಡ ಸ್ವರ್ಗವನ್ನು ಪಡೆಯುತ್ತಾರೆ.

## ಬೆಲ್ಲದ ಹಸುವಿನ ದಾನ

**ಪುರೋಹಿತ :-** ಗುಡಧೇನು (ಬೆಲ್ಲದ ಆಕಳು)ವಿನ ದಾನವು ಸರ್ವ ಮನೋರಥಗಳನ್ನು ಪೂರ್ಣಮಾಡುವದು. ಸಾರಿಸಿದ ನೆಲದ ಮೇಲೆ ಕೃಷ್ಣಾಜಿನ ದರ್ಭೆಗಳನ್ನು ಹಾಸಿ ಬೆಲ್ಲದಿಂದ ಆಕಳವನ್ನೂ ಕರುವನ್ನೂ ಮಾಡಿ ಅದಕ್ಕೆ ಬಂಗಾರ ಮುತ್ತು ರತ್ನ ಬೆಳ್ಳಿ ತಾಮ್ರ ಬೆಣ್ಣೆ ಮುಂತಾದವು ಗಳಿಂದ ಕಣ್ಣು-ಕಿವಿ-ಕೈಕಾಲು ಮುಂತಾದವುಗಳನ್ನು ಮಾಡಬೇಕು. ನಾಲ್ಕು ಭಾರ ಅಥವಾ ಎರಡು ಭಾರ ಕನಿಷ್ಠ ಒಂದು

ಭಾರ ತೂಕದ ಆ ಹಸುವನ್ನು ಬಗೆಬಗೆಯ ಹಣ್ಣುಕಾಯಿ ಗಳಿಂದ ಅಲಂಕರಿಸಿ ವೇದ ಓದಿದ ಬ್ರಾಹ್ಮಣರಿಗೆ ದಾನ ಕೊಟ್ಟು ಯಥಾಶಕ್ತಿ ಸಾವಿರ ಚಿನ್ನದ ನಾಣ್ಯ ಅಥವಾ ಅದರ ಅರ್ಧ ಗಿರ್ಧ ದಕ್ಷಿಣೆಯನ್ನಾಗಲಿ ಕೊನೆಗೆ ತನ್ನ ಶಕ್ತ್ಯಾನುಸಾರವಾಗಲಿ ದಕ್ಷಿಣೆಯನ್ನು ಕೊಡಬೇಕು. ದಾನಕೊಡುವಾಗ ಕೊಡುವವನು ಪೂರ್ವಕ್ಕೆ ಮುಖಮಾಡಿ

**ಗುಡಧೇನೋ ಮಹಾವೀರ್ಯೇ ಸರ್ವಸಂಪತ್ಪ್ರದೇ ಶುಭೇ ।**
**ದಾನಾದಸ್ಮಾಚ್ಚ ಭೋ ದೇವಿ ಭಕ್ಷ್ಯಭೋಜ್ಯಂ ಪ್ರಯಚ್ಛ ಮೇ ॥**

**ವಾಚಾಕೃತಂ ಕರ್ಮಕೃತಂ ಮನಸಾ ಯದ್ವಿಚಿಂತಿತಂ ।''**
**ಮಾನಕೂಟಂ ತುಲಾತೂಟಂ ಕನ್ಯಾಗೋsರ್ಥೇ ಉದಾಹೃತಂ ।**
**ಅನೃತಂ ನಾಶಮಾಯಾತು ಗುಡಧೇನೋ ದ್ವಿಜಾರ್ಪಿತೇ ॥**

ಎಂದು ಮಂತ್ರವನ್ನು ಹೇಳಿ ''ಬ್ರಾಹ್ಮಣನಿಗೆ ಕೊಟ್ಟ ಎಲೇ ಬೆಲ್ಲದ ಹಸುವೇ! ಈ ನಿನ್ನ ದಾನದಿಂದ ನಾನು ಈವರೆಗೆ ಮಾತಿನಿಂದ ಮನಸ್ಸಿನಿಂದ ಕೃತಿಯಿಂದ ಮಾಡಿದ ಪಾಪವೂ, ತೂಕ ಅಳತೆಯಲ್ಲಿ ನಾನು ಮಾಡಿದ ಮೋಸವೂ, ಹೆಣ್ಣಿಗಾಗಿ ಹಸುವಿಗಾಗಿ ಅಥವಾ ಬೇರೆ ಕಾರ್ಯಕ್ಕಾಗಿ ನಾನು ಹೇಳಿದ ಸುಳ್ಳು, ಇವುಗಳಿಂದ ಬಂದ ನನ್ನ ಪಾಪವನ್ನೆಲ್ಲ ಪರಿಹರಿಸು. ನಮಗೆ ಸರ್ವ ಸಂಪದವನ್ನು ಸೌಭಾಗ್ಯವನ್ನೂ ಕೊಡು. ಈ ದಾನದಿಂದ ನನಗೆ ಭಕ್ಷ ಭೋಜ್ಯಗಳು ದೊರಕಲಿ '' ಎಂದು ಪ್ರಾರ್ಥಿಸಬೇಕು. ಇಂಥ ಬೆಲ್ಲದ ಹಸುವನ್ನು ಇಂತು ದಾನಕೊಡುವವರು ಹಾಲು ಹೊಳೆ ಹರಿಯುವಲ್ಲಿ, ಮೊಸರಿನ ಮಡು ಮೊರೆಯುವಲ್ಲಿ, ತುಪ್ಪದ ಪಾಯಸ ತುಳುಕುವಲ್ಲಿ ಪ್ರಯಾಣ ಮಾಡುವರು.

## ಸಕ್ಕರೆಯ ಗೋದಾನ

ಬೆಲ್ಲದ ಹಸುವಿನಂತೆ ಸಕ್ಕರೆ ಹಸುವಿನ ದಾನದಿಂದಲೂ ವಿಶೇಷ ಪುಣ್ಯವುಂಟು. ಸಾರಿಸಿದ ನೆಲದ ಮೇಲೆ ಜಿಂಕೆಯ ಚರ್ಮವನ್ನು ಹಾಸಿ, ದರ್ಭೆಯನ್ನು ಹರಡಿ, ಅದರ ಮೇಲೆ ಸಕ್ಕರೆಯಿಂದ ಹಸುವನ್ನು ರಚಿಸಿ, ಅದಕ್ಕೆ ಮುಖ ಕಣ್ಣು, ಕೊಂಬುಗಳನ್ನು ರಚಿಸಿ, ಪಂಚರತ್ನ ಗಂಧ ಪುಷ್ಪ ವಸ್ತ್ರಗಳಿಂದ ಅಲಂಕರಿಸಿ ಬಡಬ್ರಾಹ್ಮಣನಿಗೆ ಅದನ್ನು ದಾನಕೊಟ್ಟು ಯಥಾಶಕ್ತಿ ದಕ್ಷಿಣೆಯನ್ನು ಅರ್ಪಿಸಬೇಕು. ಬಡಬ್ರಾಹ್ಮಣನಿಗೆ ಅದನ್ನು ದಾನಕೊಟ್ಟು ಯಥಾಶಕ್ತಿ ದಕ್ಷಿಣೆಯನ್ನು ಅರ್ಪಿಸಬೇಕು. ಈ ದಾನ ಕೊಟ್ಟವನು ಒಂದು ದಿನ, ಕೊಂಡವನು ಮೂರುದಿನ ಬರೇ ಸಕ್ಕರೆಯ ಮೇಲೆಯೇ ಇರಬೇಕು.

## ಜೇನು ಧೇನು ದಾನ

ಪುರೋಹಿತ ಮಧು ಧೇನು (ಜೇನುತುಪ್ಪದ ಹಸು)ವಿನ ದಾನವು ಸರ್ವಪಾಪಗಳಿಗೆ ಪರಿಹಾರಕವಾಗಿದೆ. ಸಾರಿಸಿದ ನೆಲದ ಮೇಲೆ ಕೃಷ್ಣಾಜಿನ ದರ್ಭೆಗಳನ್ನು ಹಾಸಿ, ಅದರಮೇಲೆ ಹದಿನಾರು ಜೇನು ತುಂಬಿದ ಕೊಡಗಳಿಂದ ಆಕಳಿನ ಹಾಗೂ ಕರುವಿನ ಆಕಾರವನ್ನು ರಚಿಸಬೇಕು. ಚಿನ್ನದಿಂದ ಆ ಹಸುವಿನ ಮುಖವನ್ನು, ಅಗರು ಗಂಧಗಳಿಂದ ಕೊಂಬು, ತಾಮ್ರದಿಂದ ಪೃಷ್ಠ, ಬಟ್ಟೆಯಿಂದ ಗಂಗೆದೊಗಲು, ಬಿಳಿ ಕಂಬಳಿಸುತ್ತಿದ ಕಬ್ಬಿನ

ಗಳಗಳಿಂದ ಕಾಲು, ಬೆಲ್ಲದಿಂದ ಬಾಯಿ, ಸಕ್ಕರೆಯಿಂದ ನಾಲಿಗೆ, ಹೂಗಳಿಂದ ತುಟಿ, ಹಣ್ಣುಗಳಿಂದ ಹಲ್ಲು, ದರ್ಭೆಗಳಿಂದ ಕೂದಲು, ಬೆಳ್ಳಿಯಿಂದ ಗೊರಸು, ಎಲೆಗಳಿಂದ ಕಿವಿ ಮುಂತಾದವುಗಳನ್ನು ಪ್ರಮಾಣಕ್ಕೆ ತಕ್ಕಂತೆ ಮಾಡಿ ಸರ್ವಲಕ್ಷಣ ಸಂಪನ್ನವಾದ ಒಂದು ಉತ್ತಮ ಜೇನು ಧೇನುವನ್ನು ನಿರ್ಮಿಸಬೇಕು. ಆ ಜೇನಿನ ಆಕಳಿನ ನಾಲ್ಕೂ ಕಡೆಗೂ ನಾಲ್ಕು ಎಳ್ಳಿನ ಪಾತ್ರೆಗಳನ್ನು ಇರಿಸಬೇಕು. ಕಂಚಿನ ಮೊಲೆ ಕಂಠಾಭರಣಗಳನ್ನು ಮಾಡಿಸಿ ಗಂಧಪುಷ್ಪಾದಿಗಳಿಂದ ಪೂಜಿಸಿ ಬಡ ಬ್ರಾಹ್ಮಣನಿಗೆ

**ರಸಜ್ಞಾ ಸರ್ವ ದೇವಾನಾಂ ಸರ್ವಭೂತ ಹಿತೇ ರತಾ ।**
**ಪ್ರೀಯಂತಾಂ ಪಿತರೋ ದೇವಾ ಮಧುಧೇನೋ ನಮೋಸ್ತುತೇ ॥**

ಎಂಬ ಮಂತ್ರವನ್ನು ಹೇಳಿ ಆ ಹಸುವಿನ ಬಾಲದ ಬುಡವನ್ನು ಮುಟ್ಟಿ ಸಂಕಲ್ಪ ಪೂರ್ವಕವಾಗಿ ದಾನಕೊಡಬೇಕು. ಮತ್ತು "ಮಧು ವಾತಾ ಋತಾಯತೇ" ಎಂಬ ಮಧುಸೂಕ್ತವನ್ನು ಹೇಳಿ ದಾನಕೊಟ್ಟು ಮೇಲೆ ಛತ್ರಿ ಮತ್ತು ಪಾದರಕ್ಷೆಗಳನ್ನೂ ಕೊಡಬೇಕು. ದಾನಕೊಡುವವನು ಕೂಡ "ಅಹಂಃ ಗೃಹ್ಣಾಮಿ ತ್ವಾಂ ದೇವಿ ಕುಟುಂಬಾರ್ಥೇ ವಿಶೇಷತಃ। ಕಾಮಂ ಕಾಮದುಘೇ ಕಾಮಾನ್ಮಧು ಧೇನೋ ನಮೋಽಸ್ತುತೇ" ಎಂದು ಮಂತ್ರ ಹೇಳಿ ಸ್ವೀಕರಿಸಬೇಕು. ಈ ಮಧುದೇನು ದಾನವಿತ್ತವನು ಒಂದು ದಿನ, ಕೊಂಡವನು ಮೂರುದಿನ ಬರೀ ಪಾಯಸ ಜೇನುತುಪ್ಪ ತಿಂದಿರಬೇಕು. ಇದರಿಂದ ದಾನಿಯೂ ಅವನ ಪೂರ್ವಜರೂ ಸದ್ಗತಿಯನ್ನು ಹೊಂದುವರು.

## ಹಾಲಿನ ಹಸು, ಮೊಸರಿನ, ಆಕಳು ಬೆಣ್ಣೆ ಭತ್ತದ ಧೇನುಗಳ ದಾನ

**ಪುರೋಹಿತ :-** ರಾಜನ್, ಇದೇ ರೀತಿಯಾಗಿ ಹಾಲು ತುಂಬಿದ ಕಲಶವನ್ನು ಹಸುವಿನ ಆಕಾರವಾಗಿ ಇರಿಸಿ, "ಆಪ್ಯಾಯಸ್ವ ಸಮೇ ತುತೇ " ಎಂಬ ಮಂತ್ರದಿಂದ ಕ್ಷೀರ ಧೇನುವನ್ನು ದಾನಕೊಡಬೇಕು. ಅದರಂತೆ ಮೊಸರು ತುಂಬಿದ ಪೂರ್ಣ ಕುಂಭವನ್ನು ಹಸುವನ್ನಾಗಿ ಭಾವಿಸಿ "ದಧಿಕ್ರಾವ್ಣೋ ಅಕಾರಿಷಂ" ಎಂಬ ಮಂತ್ರವನ್ನು ಹೇಳಿ ಯೋಗ್ಯನಾದ ಬ್ರಾಹ್ಮಣನಿಗೆ ವಸ್ತ್ರಾಲಂಕಾರ ಸಹಿತವಾಗಿ ದಧಿಧೇನುವನ್ನು ದಾನಕೊಡಬೇಕು. ಇದರಂತೆ ತಾಜಾ ಬೆಣ್ಣೆ ಯಿಂದ ತುಂಬಿದ ಕಲಶವನ್ನು ನವನೀತ ಧೇನುವನ್ನಾಗಿ ಭಾವಿಸಿ ಅದನ್ನು ಅಲಂಕರಿಸಿ ಪೂಜಿಸಿ

**ಪುರಾ ದೇವಾಃ ಸುರೈಸ್ಸರ್ವೈಃ ಸಾಗರಸ್ಯ ತು ಮಂಥನೇ।**
**ಉತ್ಪನ್ನಂ ದಿವ್ಯಮಮೃತಂ ನವನೀತಮಿದಂ ಶುಭಂ**
**ಆಪ್ಯಾಯಕಂತು ಭೂತಾನಾಂ ನವನೀತ ನಮೋಸ್ತುತೇ॥**

ಎಂಬ ಮಂತ್ರವನ್ನು ಹೇಳಿ ಯೋಗ್ಯನಾದ ಜ್ಞಾನಿಗೆ ದಾನಕೊಡಬೇಕು, ಯಥಾಶಕ್ತಿ ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು ಅವರಿಗೆ ಹಾಸಿಗೆಯನ್ನು ದಾನ ಕೊಡಬೇಕು. ಇದೇ ಕ್ರಮದಲ್ಲಿ ಉಪ್ಪಿನಿಂದ ಹಸುಕರುಗಳನ್ನು ಮಾಡಿ ಲವಣ ಧೇನು ದಾನ ಮಾಡಿದರೆ ಶಾಸ್ತ್ರದಲ್ಲಿ ಸ್ವರ್ಗ ಪ್ರಾಪ್ತಿಯಾಗುವದೆಂದು ಹೇಳಿದ್ದಾರೆ. ಗ್ರಹಣ, ಸಂಕ್ರಾಂತಿ, ಅಥವಾ ಬೇರೆ ಶುಭಪ್ರಸಂಗದಲ್ಲಿಯೂ ಸುಗಂಧ ಪುಷ್ಪದೀಪಗಳಿಂದ ಸರ್ವಾಲಂಕಾರ ಭೂಷಿತವಾದ ಉಪ್ಪಿನ ಹಸುವನ್ನು ಪೂಜಿಸಿ ಜೋಡು ವಸ್ತ್ರವನ್ನು ಹೊದಿಸಿ

"ಇಮಾಂ ಗೃಹಾಣ ಭೋ ವಿಪ್ರ ರುದ್ರರೂಪಾಂ ನಮೋಸ್ತು ತೇ
ರಸಜ್ಞಾ ಸರ್ವಭೂತಾನಾಂ ಸರ್ವ-ದೇವ-ನಮಸ್ಕೃತಾ ।
ಕಾಮಂ ಪೂರಯ ಮೇ ದೇವಿ ರುದ್ರರೂಪೇ ನಮೋಽಸ್ತು ತೇ ॥

ಎಂಬ ಮಂತ್ರದಿಂದ ಆ ಉಪ್ಪಿನ ಹಸುವನ್ನು ಯಥಾ ಶಕ್ತಿ ದಕ್ಷಿಣೆಯೊಂದಿಗೆ ದಾನ ಕೊಡಬೇಕು. ನಾಲ್ಕು ಭಾರ ತೂಕದ ಹತ್ತಿಯಿಂದ ಹಸುವನ್ನೂ ಅದರ ಕಾಲು ಭಾಗದಿಂದ ಕರುವನ್ನೂ ರಚಿಸಿ ಮಂತ್ರಗಳಿಂದ ಆವಾಹಿಸಿ ವಿಧಿಪೂರ್ವಕವಾಗಿ ಬ್ರಾಹ್ಮಣನಿಗೆ ದಾನ ಕೊಡಬೇಕು. ದಾನಕಾಲದಲ್ಲಿ ಈ ಮಂತ್ರವನ್ನು ದಾನಕೊಡುವವನು ಹೇಳಬೇಕು.

"ಯಥಾ ದೇವಗಣಃ ಸರ್ವಸ್ತ್ವಯಾ ಹೀನೋ ನ ವರ್ತತೇ
ತಥಾ ಉದ್ಧರ ಮಾಂ ದೇವಿ ಪಾಹಿ ಸಂಸಾರ ಸಾಗರಾತ್ ॥

ಬ್ರಾಹ್ಮಣರಿಗೆ ಆ ಹತ್ತಿಯ ಹಸುವನ್ನಿತ್ತು ಯಥಾ ಶಕ್ತಿ ದಕ್ಷಿಣೆ ಕೊಡಬೇಕು. ಪುಣ್ಯಕಾಲದಲ್ಲಿ ಭತ್ತಗಳಿಂದ ಹಸು ಹಾಗೂ ಕರುಗಳನ್ನು ರಚಿಸಿ ಧೂಪ ದೀಪಗಳಿಂದ ಪೂಜಿಸಿ ಯೋಗ್ಯನಾದ ಬ್ರಾಹ್ಮಣನಿಗೆ -

ತ್ವಂ ಹಿ ವಿಪ್ರ ಮಹಾಭಾಗ ವೇದವೇದಾಂಗ ಪಾರಗ
ಮಯಾ ದತ್ತಂಚ ಗೃಹ್ಣೀಷ್ವ ಪ್ರಸೀದ ತ್ವಂ ದ್ವಿಜೋತ್ತಮ॥

ಪ್ರೀಯತಾಂ ಮಮ ದೇವೇಶೋ ಭಗವಾನ್ಮಧುಸೂದನಃ
ಯಾ ಚ ಲಕ್ಷ್ಮೀಸ್ತು ಗೋವಿಂದೇ ಸ್ವಾಹಾ ಯಾ ಚ ವಿಭಾವಸೌ ॥

ಶಕ್ರೇ ಶಚೀತಿ ವಿಖ್ಯಾತಾ ಶಿವೇ ಗೌರೀತಿ ಸುಸ್ಥಿತಾ
ಗಾಯತ್ರೀ ಬ್ರಹ್ಮಣಃ ಪ್ರೋಕ್ತಾ ಜೋತ್ಸ್ನಾ ಚಂದ್ರೇ ರವೇಃ ಪ್ರಭಾ ॥

ಬುದ್ಧಿರ್ಬೃಹಸ್ಪತೇಃ ಖ್ಯಾತಾ ಮೇಧಾ ಮುನಿಷು ಸತ್ರಮಾ
ತಸ್ಮಾತ್ಸರ್ವಮಮಯೀ ದೇವೀ ಧಾನ್ಯ ರೂಪೇಣ ಸಂಸ್ಥಿತಾ ॥

ಎಂಬ ಮಂತ್ರವನ್ನು ಹೇಳಿ ಆ ಧಾನ್ಯ ಧೇನುವನ್ನು ಸತ್ಪಾತ್ರದಲ್ಲಿ ದಾನ ಕೊಡಬೇಕು. ಅದರಿಂದ ಈ ಲೋಕದಲ್ಲಿ ಸುಖವನ್ನು ಅನುಭವಿಸಿ ಮುಂದೆ ಆ ದಾನಿಯು ರುದ್ರಲೋಕವನ್ನು ಪಡೆಯುವನು. ರಾಜನೇ, ಕಪಿಲಾಧೇನುವಿನ ದಾನವು ಮಾನವರನ್ನೂ ಹರಿಯ ಲೋಕಕ್ಕೆ ಕರೆದೊಯ್ಯುತ್ತದೆ. ಕಪಿಲ ಧೇನುವಿನ ತಲೆಕೊರಳುಗಳಲ್ಲಿ ಸರ್ವತಿಥಿಗಳೂ ಇರುತ್ತದೆ.

ಪ್ರಾತಃಕಾಲದಲ್ಲಿ ಕಪಿಲ ಗೋವಿನ ಪ್ರದಕ್ಷಿಣೆಯನ್ನು ಮಾಡಿದರೆ ಭೂಪ್ರದಕ್ಷಿಣೆ ಮಾಡಿದ ಪುಣ್ಯವು ಬರುತ್ತದೆ. ಕಪಿಲ ಧೇನುವಿನ ಗೋಮೂತ್ರದಲ್ಲಿ ಸ್ನಾನಮಾಡಿದರೆ ಗಂಗಾಸ್ನಾನ ಮಾಡಿದ ಪುಣ್ಯವು ಪ್ರಾಪ್ತವಾಗುತ್ತದೆ. ಹಿಂದಿನ ಹತ್ತು ಜನ್ಮಗಳಲ್ಲಿ ಮಾಡಿದ ಪಾಪಗಳು ತೊಳೆದು ಹೋಗುತ್ತವೆ. ಒಂದು ಕಪಿಲ ಧೇನುವನ್ನು ದಾನ ಮಾಡಿದರೆ ಸಾವಿರ ಗೋದಾನ ಮಾಡಿದ ಫಲ ಉಂಟು. ಅದನ್ನು ತುರಿಸಿದರೆ ನೂರು ಗೋದಾನದ ಫಲ. ಅದಕ್ಕೆ ಹುಲ್ಲು ನೀರು ಕೊಟ್ಟರೆ ಗೋಮೇಧ ಯಜ್ಞ ಮಾಡಿದ ಫಲ ಎಂದು

ಶಾಸ್ತ್ರಗಳು ಹೇಳಿವೆ. ಇಂಥ ಕಪಿಲಾ ಧೇನುವನ್ನು ದಾನ ಮಾಡಿದವನು ವಿಷ್ಣು ಲೋಕವನ್ನು ಹೊಂದುವನು. ಈ ಕಪಿಲಾ ಧೇನುಗಳು ಸುವರ್ಣ ಕಪಿಲಾ, ಗೌರಪಿಂಗಲಾ, ರಕ್ತಾಕ್ಷೀ (ಕೆಂಪು ಕಣ್ಣಿನದು) ಗುಡ ಪಿಂಗಲಾ (ಬೆಲ್ಲದಂತೆ ಪಿಂಗಟ ವರ್ಣ ಉಳ್ಳದ್ದು) ಬಹುವರ್ಣಾ (ಹಂಡಬಂಡ) ಶ್ವೇತ ಪಿಂಗಲಾ (ಬೆಳ್ಳಗಾಗಿ ಗೋರೋಚನ ವರ್ಣ ಉಳ್ಳದ್ದು) , ಶ್ವೇತ ಪಿಂಗಾಕ್ಷೀ (ಬಿಳಿ ಹಾಗೂ ನಸುಗೆಂಪು ಬಣ್ಣದ್ದು) ಕೃಷ್ಣ ಪಿಂಗಲಾ (ಕಪ್ಪು ಮತ್ತೂ ಪಿಂಗಟವರ್ಣದ ಕಣ್ಣುಳ್ಳದ್ದು), ಪಾಟಲಾ (ಪಾದರೀ ಹೂವಿನ ಬಣ್ಣದ್ದು), ಪುಚ್ಛ ಪಿಂಗಲಾ (ಗೋರೋಚನ ಬಣ್ಣದ ಬಾಲ ಉಳ್ಳದ್ದು), ಖುರಶ್ವೇತಾ (ಬಿಳಿಯ ಗೊರಸಿನದು) ಹೀಗೆ ಆಕಳುಗಳು ಬಗೆಬಗೆಯ ಬಣ್ಣ ಹಾಗೂ ಲಕ್ಷಣ ಉಳ್ಳವುಗಳು ಇರುತ್ತವೆ. ಅವುಗಳಲ್ಲಿ ಸರ್ವ ಲಕ್ಷಣ ಸಂಪನ್ನವಾದ ಗೋವುಗಳನ್ನು ಆರಿಸಿ ಬ್ರಾಹ್ಮಣರಿಗೆ ದಾನ ನೀಡಬೇಕು. ಸತ್ಪಾತ್ರದಲ್ಲಿ ದಾನವಿತ್ತ ಈ ಹಸುಗಳು ದಾನಿಗಳಿಗೆ ವಿಷ್ಣುಮಾರ್ಗವನ್ನು ತೋರಿಸುವವು.

## ಎರಡು ಕಡೆ ಮೋರೆಯುಳ್ಳ ಆಕಳು

ಪುರೋಹಿತ :- ಮಹಾರಾಜ, ಉಭಯಮುಖೀ ಗೋದಾನದ ವಿಧಾನವನ್ನು ಹೇಳುತ್ತೇನೆ. ಕೇಳು- ಭೂದೇವಿಯು ವರಾಹ ದೇವರನ್ನು ಕುರಿತು ಕಪಿಲಾಧೇನು ಅಂದರೆ ಏನು ? ಅದರ ಲಕ್ಷಣವೇನು? ಈಯಲಾದ ಕಪಿಲ ಧೇನುವಿನ ದಾನದಿಂದ ಯಾವ ಪುಣ್ಯವುಂಟು ? ಎಂದು ಪ್ರಶ್ನೆ ಮಾಡಿದಳು.

ಅದಕ್ಕೆ ವರಾಹ ದೇವರು ಇಂತು ಉತ್ತರಿಸಿದರು -

"ಭೂದೇವಿಯೆ, ಹೋಮ ಹವನಗಳಿಗಾಗಿ, ಅಗ್ನಿಹೋತ್ರದ ಸಲುವಾಗಿ, ಪರಮಾತ್ಮನ ಪಂಚಾಮೃತ ಅಭಿಷೇಕಕ್ಕಾಗಿ ಉಪಯುಕ್ತವಾದ ಧೇನುವೇ ಕಪಿಲಾಧೇನು ಎನಿಸುತ್ತದೆ. ಇಂಥ ಪುಣ್ಯಕಾರ್ಯಗಳಿಗಾಗಿಯೇ ಬ್ರಹ್ಮದೇವರು ಎಲ್ಲ ತೇಜೋ ದ್ರವ್ಯಗಳನ್ನು ಕೂಡಿಸಿ ಕಪಿಲಾಧೇನುವನ್ನು ನಿರ್ಮಿಸಿದ್ದಾನೆ. ಈ ಕಪಿಲೆಯು ಪವಿತ್ರಗಳಲ್ಲಿ ಅತ್ಯಂತ ಪವಿತ್ರ. ಮಂಗಳಗಳಿಗೆಲ್ಲ ಪರಮ ಮಂಗಳ. ಹಿಂದೆ ಹೇಳಿದ ಕಪಿಲ ಧೇನುಗಳು ಮಾನವರನ್ನು ಉದ್ಧಾರ ಮಾಡುವದರಲ್ಲಿ ಸಂಶಯವಿಲ್ಲ. ಅಯೋಗ್ಯರಿಂದ ಈ ಕಪಿಲೆಯನ್ನು ದಾನಪಡೆಯಬಾರದು. ಅಯೋಗ್ಯರು ಕಪಿಲೆಯ ಹೈನವನ್ನು ತಿಂದರೆ ಮುಂದೆ ನಾಯಿ ಜನ್ಮ ಪಡೆದು ಅಮೇಧ್ಯ ಭಕ್ಷಣ ಮಾಡುವ ಪ್ರಸಂಗವು ಬರುವದು. ಕೋಟಿ ಬೇರೆ ಹಸುಗಳನ್ನು ದಾನ ಕೊಡುವುದಕ್ಕಿಂತ ಒಂದು ಕಪಿಲಾ ದಾನವು ಪ್ರಶಸ್ತವಾಗಿದೆ. ಅದರಲ್ಲಿಯೂ ಉಭಯ ಮುಖಿ ಕಪಿಲಾ ದಾನವು ಅತ್ಯಂತ ಪ್ರಶಸ್ತವಾಗಿದೆ. ಕಪಿಲಾಧೇನು ಗರ್ಭಿಣಿಯಾದ ಬಳಿಕ ಅದರ ಪ್ರಸವ ಕಾಲವನ್ನು ನಿರೀಕ್ಷಿಸುತ್ತಿರಬೇಕು. ಕಪಿಲೆಯು ಈಯುವ ಹೊತ್ತಿನಲ್ಲಿ ತಾಯಿಯ ಗರ್ಭದಿಂದ ಕರುವಿನ ಮೋರೆಯು ಹೊರಗೆ ಬಂದಾಗ ಆ ಕಪಿಲೆಗೆ ಎರಡುಕಡೆ ಮುಖಗಳು ಇದ್ದಂತಾಗಿ ಅದು ಉಭಯ ಮುಖೀ ಗೋ ಎನಿಸುತ್ತದೆ.

ಹೀಗೆ ಕರು ಅರ್ಧ ಹೊರಗೆ ಬಂದಾಗ ಆ ಧೇನುವು ಭೂದೇವಿ ಇದ್ದಂತೆ. ಆ ವೇಳೆಯಲ್ಲಿ ವೇದಾಧ್ಯಯನ ಮಾಡಿದ ಯೋಗ್ಯ ಮನುಷ್ಯನಿಗೆ ಚಿನ್ನದ ಕೊಂಬು ಬೆಳ್ಳಿಯ

ಗೊರಸುಗಳಿಂದ ಸಹಿತವಾಗಿ ಆ ಉಭಯ ಮುಖಿ ಗೋವನ್ನು ದಕ್ಷಿಣೆ ಇತ್ತು ದಾನ ಕೊಟ್ಟರೆ ಬ್ರಹ್ಮಲೋಕ ಪ್ರಾಪ್ತಿಯಾಗುತ್ತದೆ. ಈ ದಾನದಿಂದ ಮಾನವನ ಸಕಲ ಪಾಪಗಳೂ ಪರಿಹಾರವಾಗುತ್ತದೆ. ಈ ಉಭಯ ಮುಖಿ ಗೋವನ್ನು ದಾನ ಕೊಡುವವನು ಆ ದಿನ ಬರಿ ಹಾಲು ಅಥವಾ ಪಾಯಸವನ್ನು ಭಕ್ಷಣ ಮಾಡಿ ಉಪವಾಸ ಮಾಡಬೇಕು. ಇಂಥ ಉಭಯ ಮುಖೀಗೋವನ್ನು ದಾನ ಮಾಡಿದರೆ ಸಪ್ತ ದ್ವೀಪಗಳಿಂದ ಸಹಿತವಾದ ಸಮಗ್ರ ಭೂಮಂಡಲವನ್ನೆ ದಾನ ಮಾಡಿದಷ್ಟು ಪುಣ್ಯ ಬರುವದು. ಅತ್ಯಂತ ಪುಣ್ಯಕರವಾದ ಈ ದಾನ ಕೊಡುವಾಗ ದಾನಿಯು.-

''ಇಮಾಂ ಗ್ರಹಾಣೋಭಯಮುಖೀಂ ಉಭಯತ್ರ ಶಮೋಸ್ತು
ತೇ ದದೇ ವಂಶ ವಿವೃದ್ಧ್ಯರ್ಥಂ ಸದಾ ಸ್ವಸ್ತಿಕರೀ ತವ ॥

ಎಂಬ ಮಂತ್ರವನ್ನು ಹೇಳಿ ಯಥಾ ಶಕ್ತಿ ಬಂಗಾರದ ನಾಣ್ಯವನ್ನು ದಕ್ಷಿಣೆ ಕೊಡಬೇಕು. ದಾನ ತೆಗೆದು ಕೊಳ್ಳುವವನೂ ಕೂಡ -

''ಪ್ರತಿಗೃಹ್ಣಾಮಿ ತ್ವಾಂ ಧೇನೋ ಕುಟುಂಬಾರ್ಥೇ ವಿಶೇಷತಃ
ಶುಭಂ ಭವತು ಮೇ ನಿತ್ಯಂ ದೇವಧಾತ್ರಿ ನಮೋಸ್ತು ತೇ ॥

ಮೇ ನಿತ್ಯಂ ಸ್ವಸ್ತಿ ಭವತು ರುದ್ರಾಂಗೇತಿ ನಮೋ ನಮಃ ।
ಓಂ ದ್ಯೌ ಸ್ತ್ವಾ ದದಾತು ಪೃಥಿವೀ ತ್ವಾ ಪ್ರತಿಗೃಹ್ಣಾತು ।

ಎಂದು ಮುಂತಾದ ಮಂತ್ರಗಳನ್ನು ಹೇಳಿ ಆ ಹಸುವನ್ನು ಸ್ವೀಕರಿಸಬೇಕು. ಮಾಘ ಶುದ್ಧ ದ್ವಾದಶೀ ದಿನ ಎಳ್ಳಿನ ಹಸುವನ್ನೂ ದಾನಕೊಟ್ಟರೆ ವಿಷ್ಣುಪದ ಪ್ರಾಪ್ತಿಯಾಗುವದು. ಶ್ರಾವಣ ಶುಕ್ಲ ದ್ವಾದಶೀ ದಿನ ನಿಜನಾದ ಹಸುವನ್ನೇ ಸುವರ್ಣ ದಕ್ಷಿಣೆಯೊಂದಿಗೆ ದಾನವೀಯಬೇಕು.

## ಬ್ರಹ್ಮಾಂಡ ದಾನ

ಗೋದಾನದಂತೆ ಬ್ರಹ್ಮಾಂಡ ದಾನವೂ ಅತ್ಯಂತ ಪುಣ್ಯಕರವಾಗಿದೆ. ಬ್ರಹ್ಮಾಂಡದಾನವೆಂದರೆ - ಬಂಗಾರದಿಂದ ತಕ್ಕ ಆಕಾರದ ಬ್ರಹ್ಮಾಂಡವನ್ನು ಮಾಡಿಸಿ ಕಾರ್ತಿಕ ಶುದ್ಧ ದ್ವಾದಶೀ ಅಥವಾ ಹುಣ್ಣಿಮೆ ದಿನ ಸತ್ಪಾತ್ರದಲ್ಲಿ ದಾನ ಮಾಡಬೇಕು. ಸರ್ವಬೀಜ ರಸದಿಂದ ಕೂಡಿರುವ ರತ್ನ ಖಚಿತವಾದ ಈ ಬ್ರಹ್ಮಾಂಡದ ಮಾದರಿಯನ್ನು ದಾನವೀಯುವದರಿಂದ ಸರ್ವ ದಾನ ಮಾಡಿದ ಪುಣ್ಯವು ಬರುತ್ತದೆ. ಉಳಿದಾವ ದಾನ ಮಾಡಿದರೂ ಅದು ಬ್ರಹ್ಮಾಂಡದ ಏಕ ದೇಶವೇ ಆಗುತ್ತದೆ. ಪೂರ್ತಿ ಬ್ರಹ್ಮಾಂಡ ದಾನ ಮಾಡಿದರೆ ಸರ್ವಯಜ್ಞಗಳನ್ನೂ ಮಾಡಿದ ಪುಣ್ಯ ಫಲವು ಬರುತ್ತದೆ.''

ಪುರೋಹಿತರ ಬಾಯಿಂದ ಹೀಗೆ ಬ್ರಹ್ಮಾಂಡದಾನ ಮಹಿಮೆಯನ್ನು ಕೇಳಿ ವಿನೀತಾಶ್ವ ರಾಜನು ಒಂದು ದೊಡ್ಡ ಬಂಗಾರದ ಕೊಡದಲ್ಲಿ ಬ್ರಹ್ಮಾಂಡವನ್ನು ಕಲ್ಪಿಸಿ ವಿಧಿ ಪೂರ್ವಕವಾಗಿ ಅದೇ ಋಷಿಗೆ ಗಂಗಾ ತಟಾಕದಲ್ಲಿ ಬ್ರಹ್ಮಾಂಡ ದಾನವನ್ನು ಮಾಡಿದನು. ಅದರಿಂದ ಅವನ ಹಸಿವೆ ನೀರಡಿಕೆಗಳೆಲ್ಲವೂ ಪರಿಹೃತವಾದವು '' ಎಂದು ವಸಿಷ್ಠ ಮಹರ್ಷಿಗಳು ಹಿಂದಿನ ಇತಿಹಾಸವನ್ನು ಹೇಳಿ ಶ್ವೇತರಾಜನಿಗೆ ''ರಾಜನ್ ;

ನೀನಾದರೂ ಏನೀತಾಶ್ವ ರಾಜನಂತೆ ಗೋದಾನ ಬ್ರಹ್ಮಾಂಡದಾನಗಳನ್ನು ಮಾಡಿ ನಿನ್ನ ಕ್ಷುಧಾಬಾಧೆಯನ್ನು ಹೋಗಲಾಡಿಸಿಕೋ'' ಎಂದು ಉಪದೇಶ ಮಾಡಿದರು. ಗುರುಗಳ ಉಪದೇಶದಂತೆ ಶ್ವೇತರಾಜನು ಕಪಿಲಾದಾನ ಬ್ರಹ್ಮಾಂಡದಾನಗಳನ್ನು ಯಥಾಸಾಂಗವಾಗಿ ನೆರವೇರಿಸಿದನು. ಅದರಿಂದ ಆ ಭೂಪತಿಯ ಹಸಿವು ಹಿಂಗಿತು. ಬಾಯಾರಿಕೆ ಇಂಗಿತು. ತೃಪ್ತಿ ಉಂಟಾಯಿತು. ಅವನು ಆನಂದದಿಂದ ಸ್ವರ್ಗದಲ್ಲಿ ವಾಸ ಮಾಡಿದನು.

**ವರಾಹ** - ಭೂದೇವಿ, ಸರ್ವ ಕಾಮನೆಗಳನ್ನು ಪೂರೈಸುವ ಈ ವರಾಹ ಸಂಹಿತೆಯನ್ನು ನಾನು ನಿನಗಾಗಿ ಈ ವರೆಗೆ ಹೇಳಿದೆ. ಸ್ವಯಂ ಪರಮಾತ್ಮ ಸ್ವರೂಪಿಯಾದ ನಾನು ಇದನ್ನು ಮೊದಲು ಬ್ರಹ್ಮದೇವರಿಗೆ ಹೇಳಿದ್ದೆ. ಬ್ರಹ್ಮನು ಇದನ್ನು ತನ್ನ ಮಗನಾದ ಪುಲಸ್ತ್ಯನಿಗೆ ಹೇಳಿದ್ದನು. ಪುಲಸ್ತ್ಯನು ಇದನ್ನು ಮತ್ತೆ ಶ್ರೀ ಪರುಶುರಾಮ ದೇವರ ಸನ್ನಿಧಿಯಲ್ಲಿ ಬಿನ್ನವಿಸಿದನು. ಪರುಶುರಾಮ ಪ್ರಭುವು ತನ್ನ ಶಿಷ್ಯನಿಗೆ ವರಾಹ ಸಂಹಿತೆಯನ್ನು ಉಪದೇಶಿಸಿದನು. ಉಗ್ರನಿಂದ ಮನು ಮಹಾರಾಜನು ಇದನ್ನು ಪಡೆದು ಮಾನವ ಕುಲಕ್ಕೆಲ್ಲ ಬೋಧಿಸಿದನು. ಅದನ್ನೇ ನಾನು ನಿನಗೆ ಬೋಧಿಸಿದೆ. ಇದು ಈ ವರಾಹ ಸಂಹಿತೆಯ ಈ ವರೆಗೆ ಪ್ರಚಾರವಾದ ಕ್ರಮ. ಈಗ ಇದರ ಮುಂದಿನ ಎರಡನೆಯ ಉಪದೇಶ ಕ್ರಮವನ್ನು ಆಲಿಸು. ಇದನ್ನು ಮೊಟ್ಟಮೊದಲು ಅರಿತವನು ಸರ್ವಜ್ಞನಾದ ಪರಮಾತ್ಮ. ಅವನಿಂದ ನಾನು, ನನ್ನಿಂದ ನೀನು. ನಿನ್ನಿಂದ ತಪಸ್ಸಿದ್ಧರಾದ ಸನತ್ಕುಮಾರ ಮುನಿಯೇ ಮೊದಲಾದವರು ಈ ವರಾಹ ಸಂಹಿತೆಯವನ್ನು ತಿಳಿದುಕೊಳ್ಳವರು. ಕ್ರಮವಾಗಿ ಮುಂದೆ ವ್ಯಾಸರೂ ಅವರಿಂದ ರೋಮಹರ್ಷಿಣಿಯೂ ರೋಮಹರ್ಷಿಣಿಯಿಂದ ಶುನಕ ಪುತ್ರರಾದ ಶೌನಕರೂ ಈ ಪುರಾಣವನ್ನು ಉಪದೇಶ ಪಡೆಯುವರು.

ಹದಿನೆಂಟು ಪುರಾಣಗಳನ್ನೆಲ್ಲ ಸರಿಯಾಗಿ ಬಲ್ಲವರೆಂದರೆ ಬಾದರಾಯಣ ಗುರುಗಳು ಮಾತ್ರ. ಒಟ್ಟು ಪುರಾಣಗಳು ಹದಿನೆಂಟು. ೧) ಬ್ರಹ್ಮ ೨) ಪದ್ಮ ೩) ವಿಷ್ಣು ೪) ಶಿವ ೫) ಭಾಗವತ ೬) ನಾರದ ೭) ಮಾರ್ಕಂಡೇಯ ೮) ಅಗ್ನಿ ೯) ಭವಿಷ್ಯ ೧೦) ಬ್ರಹ್ಮವೈವರ್ತ ೧೧) ಲಿಂಗ ೧೨) ವರಾಹ ೧೩) ಸ್ಕಂದ ೧೪) ವಾಮನ ೧೫) ಕೂರ್ಮ ೧೬) ಮತ್ಸ್ಯ ೧೭) ಗರುಡ ೧೮) ಬ್ರಹ್ಮಾಂಡ. ಈ ವರಾಹ ಪುರಾಣ ಹಾಗೂ ಇತರ ಪುರಾಣಗಳನ್ನು ಭಕ್ತಿಯಿಂದ ಓದಿ ಪಾರಾಯಣ ಶ್ರವಣ ಮಾಡುವವರು ಪುಣ್ಯಭಾಗಿಗಳಾಗುವರು. ಅದರಲ್ಲಿಯೂ ಕಾರ್ತೀಕ ಶುದ್ಧ ದ್ವಾದಶೀದಿನ ಕೊನೆಗೆ ಈ ಹದಿನೆಂಟು ಪುರಾಣಗಳ ನಾಮೋಚ್ಚಾರಣಮಾಡಿ ಈ ಪುಸ್ತಕಗಳನ್ನು ಗಂಧಪುಷ್ಪಾದಿಗಳಿಂದ ಯಾರು ಪೂಜಿಸುವರೋ, ಪುರಾಣಿಕರಿಗೆ ಭೂಮಿಕಾಣಿ ಧನಕನಕಾದಿಗಳನ್ನು ಕೊಡುವರೋ ಅವರು ವಿಷ್ಣು ಸಾಯುಜ್ಯವನ್ನು ಪಡೆಯುವರು.

*ವರಾಹ ಪುರಾಣದಲ್ಲಿ ತೊಂಭತ್ತಾರನೇ ಅಧ್ಯಾಯ ಮುಗಿದುದು.*

—೦—

ವರಾಹ ರೂಪಧಾರಿಯಾದ ಶ್ರೀ ವಿಷ್ಣು ಪೃಥ್ವಿಯನ್ನು ಉದ್ಧರಿಸಿ ಆ ಭೂದೇವಿಯನ್ನು ಸಂತೈಸಿದಾಗ ಆ ಕ್ಷೇತ್ರಕ್ಕೆ ಸನತ್ಕುಮಾರರು ಐತಂದರು. ಸನತ್ಕುಮಾರರು ಅಲ್ಲಿದ್ದ ಭೂದೇವಿಯನ್ನು ಕಂಡು ಅವಳ ಎದುರು ಒಳಿತಾಗಲಿ ಎಂದು ಶುಭವಚನವನ್ನು ನುಡಿದು ಮಾತನಾಡಿದರು.-

''ಮಾಧವನ ಪ್ರಿಯಳಾದುದರಿಂದ ಮಾಧವಿ ಎಂಬ ಹೆಸರುಳ್ಳ ಭೂದೇವಿಯೇ, ನಿನ್ನನ್ನು ಧರಿಸಿದವನು ವಿಷ್ಣು. ನಿನ್ನನ್ನು ಆ ಶ್ರೀ ಹರಿಯು ಎತ್ತಿ ಹಿಡಿದಾಗ ನೀನು ಏನನ್ನು ಕಂಡೆ ? ಮತ್ತು ವರಾಹರೂಪಿಯಾದ ಶ್ರೀ ಹರಿಯ ಮುಖದಿಂದ ಏನನ್ನು ಕೇಳಿದೆ ? ಅದನ್ನೆಲ್ಲ ನನ್ನ ಸಲುವಾಗಿ ಹೇಳು''

ಬ್ರಹ್ಮಪುತ್ರರಾದ ಸನತ್‌ಕುಮಾರರ ಪ್ರಾರ್ಥನೆಯನ್ನು ಮನ್ನಿಸಿ ಭೂದೇವಿಯು ಅತ್ಯಂತ ಆನಂದದಿಂದ ಮಾತಾನಾಡಿದಳು.

**ಭೂದೇವಿ :-** ಬ್ರಹ್ಮ ಶ್ರೇಷ್ಠನಾದ ಸನತ್‌ಕುಮಾರ, ನನ್ನ ಕೇಳಿಕೆ, ಅದಕ್ಕೆ ಶ್ರೀಹರಿಯ ಹೇಳಿಕೆ ಎರಡನ್ನೂ ನಿನಗೆ ತಿಳಿಸುತ್ತೇನೆ ಕೇಳು. ಸಂಸಾರ ಬಂಧನದಿಂದ ಬಿಡುಗಡೆಮಾಡುವ ಅನೇಕ ಧರ್ಮ ರಹಸ್ಯಗಳನ್ನು ಆ ಸ್ವಾಮಿಯು ನನ್ನ ಪ್ರಶ್ನೆಗಳ ಉತ್ತರರೂಪವಾಗಿ ಹೇಳಿದ್ದಾನೆ. ಈ ಪ್ರಪಂಚದಲ್ಲಿ ಕರ್ಮ ಪ್ರವಾಹದಲ್ಲಿ ಪತಿತನಾದ ವಿಷ್ಣು ಭಕ್ತನ ಕರ್ತವ್ಯಗಳೇನು ? ಮೋಕ್ಷಸಾಧಕವಾದ ಗುಹ್ಯ ಧರ್ಮಗಳಾವವು ? ಕರ್ಮಗಳಾವವು ? ಇದೆಲ್ಲವನ್ನೂ ಆ ಭಗವಂತನು ನನಗೆ ತಿಳಿಸಿ ಹೇಳಿದ್ದಾನೆ. ನಾನು ಅವನ ಬಾಯಿಂದ ಕೇಳಿದ ಆ ಎಲ್ಲ ಗೂಢವಾದ ತತ್ವಾರ್ಥಗಳನ್ನೂ ನಿಮಗೆ ತಿಳಿಸಿ ಹೇಳುತ್ತೇನೆ ಚಿತ್ತ ವಿಟ್ಟು ಆಲಿಸಿರಿ''

ಧರಣೀ ದೇವಿಯ ಈ ಮಾತುಗಳನ್ನು ಕೇಳಿ ಜಿಜ್ಞಾಸು ವೃತ್ತಿಯ ಸನತ್‌ಕುಮಾರನಿಗೆ ಬಹಳ ಆನಂದವಾಯಿತು. ಸ್ವಯಂ ಶ್ರೀ ಹರಿಯೇ ಉಪದೇಶಿಸಿದ್ದ ಈ ದಿವ್ಯ ಜ್ಞಾನದ ಸದುಪಯೋಗವು ತನಗೊಬ್ಬರಿಗೆ ಅಲ್ಲದೆ ಎಲ್ಲ ತತ್ವ ಬುಭುತ್ಸುಗಳಿಗೂ ಆಗಬೇಕು. ಎಂಬ ಹೆಬ್ಬಯಕೆಯಿಂದ ಅವನು ಕೋಕಾಮುಖ ಕ್ಷೇತ್ರಕ್ಕೆ ಧಾವಿಸಿ ಹೋದನು. ಅಲ್ಲಿಂದ ಬ್ರಹ್ಮವಾದಿ ತಪಸ್ವಿಗಳನ್ನೆಲ್ಲ ಭೂದೇವಿ ಇದ್ದಲ್ಲಿಗೆ ತಾನೇ ಸ್ವತಃ ಕರೆದುಕೊಂಡು ಬಂದನು. ಮತ್ತು ಭೂದೇವಿಗೆ ನಮಸ್ಕರಿಸಿ ಪ್ರಾರ್ಥಿಸಿಕೊಂಡನು.

'' ತಾಯಿ, ಧರ್ಮ ಬೋಧವನ್ನು ನಮಗೆ ಮಾಡು'' ಆಗ ಧರಾದೇವಿಯು ಭಗವದ್‌ಭಕ್ತನಾದ ಆ ಸನತ್ಕುಮಾರನನ್ನು ವಂದಿಸಿ ಅತ್ಯಂತ ಪ್ರಸನ್ನ ಚಿತ್ತಳಾಗಿ ಆ ಎಲ್ಲ ಋಷಿಗಳನ್ನು ಸವಿದನಿಯಿಂದ ಮಾತನಾಡಿದಳು. ''ಋಷಿಗಳೇ, ಶ್ರೀ ಹರಿಯ ಮುಖದಿಂದ ಬಂದ ಮಾತನ್ನು ಹೇಳುತ್ತೇನೆ. ಆಲಿಸಿರಿ-

''ಈ ಸೃಷ್ಟಿಯ ಮೊದಲು ಸೂರ್ಯಚಂದ್ರರಾಗಲಿ, ಗಾಳಿ ಬೆಳಕುಗಳಾಗಲಿ, ನಕ್ಷತ್ರ ನೀಹಾರಿಕೆಗಳಾಗಲಿ ಯಾವದೂ ಇರಲಿಲ್ಲ. ಎಲ್ಲ ದಿಕ್ಕುಗಳೂ ಸ್ತಬ್ಧವಾಗಿದ್ದವು. ಅಲ್ಲಿ ಯಾವದೂ ತಿಳಿಯುತ್ತಿರಲಿಲ್ಲ. ಅಲ್ಲಿ ಗಾಳಿ ಬೀಸುತ್ತಿರಲಿಲ್ಲ. ಮಿಂಚು

ಮಿಂಚುತ್ತಿರಲಿಲ್ಲ. ಗ್ರಹ ನಕ್ಷತ್ರ ರಾಶಿಗಳು ಯಾವೂ ಬೆಳಗುತ್ತಿರಲಿಲ್ಲ. ಇಂದ್ರ ಮೊದಲಾದ ಯಾವ ದೇವತೆಗಳೂ ಅಲ್ಲಿ ಇರಲಿಲ್ಲ. ಆಗ ಇದ್ದವರು ಮೂವರು ಮಾತ್ರ. ಬ್ರಹ್ಮ, ವಿಷ್ಣು, ಮಹೇಶ್ವರ. ಇಂಥ ಸಂದರ್ಭದಲ್ಲಿ ವನ ಪರ್ವತಗಳ ಭಯಂಕರವಾದ ಭಾರದಿಂದ ಕುಸಿದು ನೀರಿನಲ್ಲಿ ಮುಳುಗಿದ ಭೂದೇವಿಯು ಬ್ರಹ್ಮದೇವರಿಗೆ ಶರಣು ಹೋಗಿ '' ಅಜ್ಞನಾದ ಬ್ರಹ್ಮನೇ, ಬೆಟ್ಟ ಬಯಲುಗಳಿಂದ ಸಹಿತವಾಗಿ ನಾನು ನೀರಿನಲ್ಲಿ ಮುಳುಗಿದ್ದೇನೆ. ನನ್ನನ್ನು ಉದ್ಧರಿಸು '' ಎಂದು ಮೊರೆ ಹೊಕ್ಕು ಬೇಡಿಕೊಂಡಳು.

ಅದನ್ನು ಕೇಳಿ ಜಗತ್ತಿಗೆಲ್ಲ ಮುತ್ತಜ್ಜನಾದ ಬ್ರಹ್ಮನು ಒಂದುಗಳಿಗೆ ಆಲೋಚನೆ ಗೈದು ಭೂದೇವಿಯನ್ನು ಕುರಿತು ಇಂತು ನುಡಿದನು. ''ವಸುಂಧರೇ! ನಿನ್ನನ್ನು ಈ ಸಂಕಟದಿಂದ ನಾನು ಪಾರು ಮಾಡಲು ಸಮರ್ಥನಲ್ಲ. ನಿನ್ನನ್ನು ಈ ಕುತ್ತಿನಿಂದ ರಕ್ಷಿಸಬೇಕಾದರೆ ಸುರಶ್ರೇಷ್ಠನಾದ ಆ ವಿಷ್ಣು ಒಬ್ಬನೇ ಸಮರ್ಥನು. ಅದಕ್ಕಾಗಿ ನೀನು ಸರ್ವ ಜಗತ್ ಕಾರಣನೂ ಸರ್ವ ದೇವತೆಗಳಿಗಿಂತ ಸರ್ವಶ್ರೇಷ್ಠನೂ ಆದ ಶ್ರೀ ವಿಷ್ಣುವನ್ನೇ ಶರಣು ಹೋಗು'' ಬ್ರಹ್ಮದೇವರ ಈ ವಚನವನ್ನು ಕೇಳಿ ಭೂದೇವಿಯು ಕೈಮುಗಿದು ಆದಿಶೇಷನ ಪರ್ಯಂಕದಲ್ಲಿ ಪವಡಿಸಿದ ಆ ಪರಮಾತ್ಮನನ್ನು ಪ್ರಾರ್ಥಿಸಿದಳು-

''ಜಗದೊಡೆಯನಾದ ದೇವೋತ್ತಮಾ, ನನಗೆ ಪ್ರಸನ್ನನಾಗು, ಸೂರ್ಯಚಂದ್ರರಿಗೆ ಬೆಳಕನ್ನು ನೀಡಿದವನು ನೀನು. ಯಮ, ಕುಬೇರ, ಇಂದ್ರ, ವರುಣ, ಅಗ್ನಿ, ವಾಯು ಮುಂತಾದ ಎಲ್ಲ ದೇವತೆಗಳ ಎಲ್ಲ ಹೆಸರುಗಳಿಂದ ನಿಜವಾಗಿ ಮುಖ್ಯವಾಚ್ಯನಾಗಿ, ಅವರೆಲ್ಲರಿಗೂ ನಿಯಾಮಕನಾಗಿರುವ ನೀನೇ. ಕ್ಷರಾಕ್ಷರ ನಿಯಾಮಕನಾಗಿರುವ ನೀನು ಮಚ್ಛ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ ಮುಂತಾದ ಅನೇಕ ಅವತಾರಗಳನ್ನು ಎತ್ತಿ ಜಗದೋದ್ಧಾರವನ್ನು ಮಾಡಿರುವೆ. ವಿಶ್ವ ವಿಸ್ತಾರನಾಗಿ ಸಮಸ್ತ ಜಗದಾಧಾರನೆಂದು ಪ್ರಥಿತನಾದುದರಿಂದ ನಿನಗೆ ಪೃಥಿವಿ ಎಂದು ಹೆಸರು, ಬಲವೀರ್ಯಸಂಪನ್ನನಾದುದರಿಂದ ವಾಯು, ಆನಂದ ಪೂರ್ಣನಾಗಿ ಬೆಳಗುವದರಿಂದ ಆಕಾಶ, ಎಲ್ಲರನ್ನೂ ರಕ್ಷಿಸುವುದರಿಂದ ಆಪ. ತೇಜೋರೂಪ ನಾದುದರಿಂದ ಜ್ಯೋತಿ ಮುಂತಾದ ಹೆಸರುಗಳಿಂದ ಕರೆಯಲ್ಪಡುವೆ. ನೀನು ಪಂಚ ಮಹಾಭೂತಗಳ ಮತ್ತು ತನ್ಮಾತ್ರಾಗಳ ನಿಯಾಮಕನಾಗಿ, ಕಲಾ ಕಾಷ್ಠಾ ಮುಹೂರ್ತಾದಿ ರೂಪ ಕಾಲ ನಿಯಾಮಕನೂ ಆಗಿ ಕಾಲಸ್ವರೂಪನೂ ಆಗಿರುವೆ. ನದೀ, ಸಾಗರ, ಮೇರು, ಮಂದರ, ವಿಂಧ್ಯ, ಹಿಮಾಲಯ ಮುಂತಾದ ಬೆಟ್ಟ ಬಯಲು, ಬಾನು, ನೈಕಲೋಕ, ಚರ-ಅಚರ, ಚೇತನ-ಅಚೇತನ, ರೂಪವಾದ ಅಖಂಡ ಬ್ರಹ್ಮಾಂಡದ ಸಂಚಾಲಕಶಕ್ತಿಯೇ ನೀನಾಗಿರುವೆ.

ಪರ್ವತಗಳಲ್ಲಿ ನೀನು ಹಿಮಾಲಯ, ಆಯುಧಗಳಲ್ಲಿ ನೀನು ಸುದರ್ಶನ ಚಕ್ರ. ಬಿಲ್ಲುಗಳಲ್ಲಿ ನೀನು ಶಿವನ ಕೈಯಲ್ಲಿಯ ಪಿನಾಕ. ಯೋಗಗಳಲ್ಲಿ ನೀನು ಸಾಂಖ್ಯ ಯೋಗ. ವೇದಗಳಲ್ಲಿ ನೀನು ಸಾಮವೇದ, ದೇವತೆಗಳಲ್ಲಿ ನೀನು ಸಾಕ್ಷಾತ್ ನಾರಾಯಣ. ಸರ್ವಾತ್ಮಕನೂ, ಸರ್ವಗತನೂ ಆದ ನಿನಗೆ ನನ್ನ ಅನಂತ ನಮಸ್ಕಾರಗಳು. ಮುಳುಗತಕ್ಕ ನನ್ನನ್ನು ರಕ್ಷಿಸಲು ನೀನೊಬ್ಬನೇ ಸಮರ್ಥನು. ''

ಭೂದೇವಿಯು ಮಾಡಿದ ಈ ಕೇಶವನ ಸ್ತೋತ್ರವನ್ನು ಪ್ರತಿದಿನ ಎರಡೂ ಹೊತ್ತು ಪಠಿಸಿದವರು ಸಂಸಾರ ಬಂಧನದಿಂದ ಮುಕ್ತರಾಗುತ್ತಾರೆ. ಇದರಿಂದ ದರಿದ್ರನಿಗೆ ಐಶ್ವರ್ಯ, ಅಪುತ್ರನಿಗೆ ಪುತ್ರ, ಮಡದಿ ಇಲ್ಲದವರಿಗೆ ಮಡದಿ, ಪತಿ ಇಲ್ಲದವಳಿಗೆ ಪತಿಯ ಪ್ರಾಪ್ತಿಯು ಆಗುವುದು.

ವರಾಹ ಪುರಾಣದಲ್ಲಿ ತೊಂಭತ್ತೇಳನೇ ಅಧ್ಯಾಯ ಮುಗಿದುದು



## ಭೂದೇವಿಯ ಜಿಜ್ಞಾಸೆ

**ಅಧ್ಯಾಯ - ೯೮**

ಭೂದೇವಿಯ ಈ ಸ್ತೋತ್ರದಿಂದ ಪರಿತುಷ್ಟನಾದ ಪರಮಾತ್ಮನು ಅವಳಿಗೆ ಮಧುರ ಕಂಠದಿಂದ ಇಂತು ಮಾರ್ನುಡಿದನು.- ''ದೇವಿ, ನಿನ್ನ ಪ್ರೀತಿಗಾಗಿ ನಾನು ನೀನು ಬಯಸಿದ್ದನ್ನೆಲ್ಲ ಮಾಡುತ್ತೇನೆ. ಬೆಟ್ಟ ಬಯಲು, ಭೂಮಿ ಸೀಮಿ, ಸಾನು ಕಾನು, ಗ್ರಾಮ, ಧಾಮ, ನದೀ ಸಮುದ್ರ ಮತ್ತೂ ಸಪ್ತದ್ವೀಪಗಳಿಂದೊಡಗೂಡಿದ ನಿನ್ನನ್ನು ನಾನು ಧರಿಸುತ್ತೇನೆ ಹಾಗೂ ಉದ್ಧರಿಸುತ್ತೇನೆ.'' ಭೂದೇವಿಗೆ ಹೀಗೆ ಆಶ್ವಾಸನೆ ಇತ್ತು ಸಂತೈಸಿ ಶ್ರೀಹರಿಯು ತಾನು ಪ್ರಚಂಡವಾದ ವರಾಹ ರೂಪವನ್ನು ಸ್ವೀಕರಿಸಬೇಕೆಂದು ಸಂಕಲ್ಪಿಸಿದನು. ಆರು ಸಾವಿರ ಯೋಜನ ಎತ್ತರ, ಮೂರುಸಾವಿರ ಯೋಜನ ಬಿತ್ತರ, ಒಂಬತ್ತು ಸಾವಿರ ಯೋಜನ ಉದ್ದಳತೆಯುಳ್ಳ ಅತ್ಯದ್ಭುತ ವರಾಹ ರೂಪವನ್ನು ಧರಿಸಿದನು. ಪರ್ವತ, ವನ, ಪಟ್ಟಣ, ಸಪ್ತದ್ವೀಪಗಳಿಂದ ಕೂಡಿದ ಅಖಂಡ ಭೂಮಂಡಲವನ್ನೆಲ್ಲ ತನ್ನ ಪ್ರಚಂಡವಾದ ಕೋರೆಹಲ್ಲಿನಿಂದ ರಸಾತಳದಿಂದ ಮೇಲಕ್ಕೆ ಎತ್ತಿದನು. ಹೀಗೆ ಶ್ರೀ ಹರಿಯು ತನ್ನ ವಜ್ರದಂಷ್ಟ್ರದಿಂದ ಒಂದು ಸಾವಿರ ವರ್ಷಗಳ ವರೆಗೆ ಏಳು ದ್ವೀಪ, ಏಳು ಕಡಲುಗಳಿಂದ ಒಡಗೂಡಿದ ಪೊಡವಿಯನ್ನೆಲ್ಲ ಎತ್ತಿ ಹಿಡಿದಿದ್ದನು.

ಕರ್ದಮ ಪ್ರಜಾಪತಿಯು ಆಳುತ್ತಲಿದ್ದ ವರಾಹ ಕಲ್ಪದ ಆ ಎಪ್ಪತ್ತೊಂದನೇ ಯುಗದಲ್ಲಿ ತನ್ನನ್ನು ಎತ್ತಿ ಹಿಡಿದ ಶ್ರೀ ವಿಷ್ಣುವನ್ನು ಭೂದೇವಿಯು ಸಂಪೂರ್ಣ ಶರಣಾಗತಳಾಗಿ, ಸ್ತೋತ್ರ ಮಾಡಿ, ಅನೇಕ ಪ್ರಶ್ನೆಗಳನ್ನು ಕೇಳಿ ತನ್ನ ಈ ಧರ್ಮ ರಹಸ್ಯ ಜಿಜ್ಞಾಸೆಗೆ ಸರಿಯಾಗಿ ಉತ್ತರವನ್ನಿತ್ತು ಕರುಣಿಸು ಎಂದು ಬಿನ್ನವಿಸಿದಳು.

**''ಅಹಂ ಚ ಶಿಷ್ಯಾ ದಾಸೀ ಚ ತವ ಭಕ್ತ್ಯಾ ವ್ಯವಸ್ಥಿತಾ ।**
**ರಹಸ್ಯಂ ಧರ್ಮಸಂಯುಕ್ತಂ ತನ್ಮಮಾಚಕ್ಷ್ವ ಮಾಧವ ॥**

ಸ್ವಾಮಿನ್ ಮಾಧವ, ನಾನು ನಿನ್ನ ಶಿಷ್ಯಳೂ ಮತ್ತು ದಾಸಿಯೂ ಆಗಿದ್ದೇನೆ. ಭಕ್ತಿಯಿಂದ ನಿನ್ನನ್ನು ಅನೇಕ ಧರ್ಮ ಪ್ರಶ್ನೆಗಳನ್ನು ಮಾಡಿದ್ದೇನೆ. ನನ್ನ ಈ ಎಲ್ಲ ಧರ್ಮ ಆಚಾರವಿಚಾರ ಜಿಜ್ಞಾಸಾ ಶಂಕೆಗಳಿಗೆ ಉತ್ತರ ರೂಪವಾಗಿ ಧರ್ಮ ಸೂಕ್ಷ್ಮವನ್ನೂ ರಹಸ್ಯ ಪ್ರಮೇಯಗಳನ್ನು ನನಗೆ ತಿಳಿಸು.''

ಧರಣೀ ದೇವಿಯ ತತ್ತ್ವ ಬುಭುತ್ಸೆಯ ಬಿನ್ನಪವನ್ನು ಆಲಿಸಿ ನಾರಾಯಣನು ಅವಳ ಪ್ರಶ್ನೆಗಳಿಗೆಲ್ಲ ಉತ್ತರಿಸಿದನು.-

''ವಸುಂಧರೆ, ನಿನ್ನ ಶಂಕೆಗಳಿಗೆಲ್ಲ ಸಮಾಧಾನದ ರೂಪದಿಂದ ಶಾಸ್ತ್ರ ಪುರಾಣಗಳ ಪ್ರಮೇಯ ರಹಸ್ಯವನ್ನೂ, ಜ್ಞಾನಿಗಳ ಹಾಗೂ ನನ್ನ ಭಕ್ತರ ಆಚಾರ ಧರ್ಮಗಳನ್ನೂ, ಕರ್ತವ್ಯ ಕರ್ಮಗಳನ್ನೂ, ಮತ್ತೂ ಮಾನವರ ಸ್ಥಿತಿಗತಿಗಳನ್ನೂ ತಿಳಿಸುತ್ತೇನೆ ಕೇಳು .''

ಕ್ಷುದ್ರ ಮನಸ್ಸಿನ ಮಾನವರು ಮಾಡುವ ನೂರಾರು ಯಜ್ಞಗಳಿಂದಲೂ, ಸಾವಿರಾರು ದಾನ ಧರ್ಮಗಳಿಂದಲೂ, ನಾನು ಸಂತುಷ್ಟನಾಗುವುದಿಲ್ಲ. ಆದರೆ ಭಕ್ತಿಯಿಂದ ನನ್ನಲ್ಲಿ ಮನಸ್ಸನ್ನು ಇಟ್ಟು, ಶಾಸ್ತ್ರ ಪರಾಮರ್ಶದಿಂದ ನನ್ನ ಸರಿಯಾಗಿ ಜ್ಞಾನಮಾಡಿಕೊಂಡು, ನನ್ನನ್ನು ಉಪಾಸನೆ ಮಾಡುವ ಏಕಾಂತ ಭಕ್ತರಿಗೆ ಮಾತ್ರ ನಾನು ಒಲಿಯುತ್ತೇನೆ. ತಿಳುವಳಿಕೆಯುಳ್ಳ ಯಾವ ಭಕ್ತನು ಬೈಗು ಬೆಳಗು, ಹಗಲು ರಾತ್ರಿ, ಅನುದಿನವೂ ನನ್ನನ್ನು ನೆನೆಯುವನೋ ಮತ್ತೂ ಯಾರ ಚಿತ್ತವು ನನ್ನಲ್ಲಿ ಎಂದೂ ಭಕ್ತಿಯನ್ನು ಕಳೆದುಕೊಳ್ಳುವದಿಲ್ಲವೋ ಮತ್ತು ಯಾವ ಮನುಷ್ಯರು ದಶಮಿ, ಏಕಾದಶಿ, ದ್ವಾದಶಿ ಈ ತಿಥಿತ್ರಯವನ್ನು ಶಾಸ್ತ್ರೋಕ್ತವಾಗಿ ಪರಿಪಾಲನೆ ಮಾಡುವರೋ ಅಂಥವರು ನನ್ನನ್ನು ಹೊಂದುತ್ತಾರೆ. ಅಂಥ ನನ್ನ ಭಕ್ತರಿಗೆ ಸ್ವರ್ಗವೂ ಕೂಡ ಸುಲಭವಾಗಿ ದೊರಕುತ್ತದೆ. ಏಕಾದಶೀ ದಿನ ಉಪವಾಸ ಮಾಡಿ ದ್ವಾದಶಿಯ ದಿನವೂ ಶ್ರೀ ಹರಿಯ ಉಪವಾಸ ಅಂದರೆ ಶ್ರೀ ಹರಿಯ ನಿರಂತರ ಧ್ಯಾನವನ್ನು ಮಾಡಬೇಕು. ಬೊಗಸೆಯಲ್ಲಿ ನೀರನ್ನು ತೆಗೆದುಕೊಂಡು '' ನಮೋ ನಾರಾಯಣಾಯ '' ಎಂದು ಹೇಳಿ ಸೂರ್ಯನನ್ನು ನೋಡಿ ನಾರಾಯಣನಿಗೆ ಅರ್ಘ್ಯವನ್ನು ಕೊಡಬೇಕು. ಮತ್ತೂ ದ್ವಾದಶಿಯ ದಿನ ಶ್ರೀ ಹರಿಯನ್ನು ಧೂಪ, ದೀಪ ಮತ್ತೂ, ಬೆಳ್ಳಗಿನ ಹೂವುಗಳಿಂದ ಭಕ್ತಿಯಿಂದ ಪೂಜಿಸಬೇಕು.

**''ಸುಮಾನಿ ಸುಮನಾ ಗೃಹ್ಯ ಪ್ರೀಯತಾಂ ಭಗವಾನ್ ಹರಿಃ''**
ಎಂಬ ಮಂತ್ರದಿಂದ ಭಕ್ತಿಯಿಂದ ದೇವರಿಗೆ ಹೂಗಳನ್ನು ಏರಿಸಬೇಕು.

**''ನಮೋಸ್ತು ವಿಷ್ಣವೇ ವ್ಯಕ್ತಾsವ್ಯಕ್ತ ಗಂಧವಿಶೇಷಕಾನ್**
**ಸುಗಂಧಾನ್ವಾ ಗೃಹಾಣ ನಮೋ ಭಗವತೇ ವಿಷ್ಣವೇ''**
ಎಂಬ ಮಂತ್ರದಿಂದ ಶ್ರೀ ಹರಿಗೆ ಗಂಧವನ್ನು ಸಮರ್ಪಿಸಬೇಕು.

''ಶ್ರುತ್ವಾ ಪ್ರತ್ಯಾಗತಮಾಧಾರಸವನಂ ಪತಯೇ ಭವಂ ಪ್ರವಿಷ್ಟಂ ಮೇ ಧೂಪನಂ ಗೃಹ್ಣಾತು ಭಗವಾನಚ್ಯುತಃ'' ಎಂಬ ಮಂತ್ರದಿಂದ ಧೂಪವನ್ನು ಬೆಳಗಬೇಕು.

ಸಾಸುವೆ, ಗೋಧಿ, ಹೆಸರು, ಅಕ್ಕಿ, ನವಣಿ, ಮುಂತಾದ ಧಾನ್ಯಗಳಿಂದ ಅಡಿಗೆ ಮಾಡಿ ನನಗೆ ಸಮರ್ಪಿಸಿ ನನ್ನನ್ನು ವಿಧಿಪೂರ್ವಕವಾಗಿ ಪೂಜೆಮಾಡಿ ನನ್ನ ಪ್ರಸಾದವೆಂದು ಭಕ್ಷಿಸುವವನು ನನ್ನ ಪರಮಾನುಗ್ರಹಕ್ಕೆ ಪಾತ್ರನಾಗುತ್ತಾನೆ. ಬ್ರಾಹ್ಮಣಾದಿ ಜಾತಿಯವರು ಮಾಡಬೇಕಾದ ಧರ್ಮಗಳನ್ನು ಹೇಳುತ್ತೇನೆ. ಕೇಳು.

ಬ್ರಾಹ್ಮಣನಾದವನು ನನ್ನಲ್ಲಿ ಭಕ್ತಿಯನ್ನಿಟ್ಟು ಷಟ್ಕರ್ಮ ಅಂದರೆ- ಯಜ್ಞ ಮಾಡುವದು ಮಾಡಿಸುವದು, ಪಾಠ ಓದುವದು ಹೇಳುವದು. ದಾನವನ್ನು ಕೊಡುವದು ಕೊಳ್ಳುವದು. ಈ ಆರು ವಿಹಿತಕರ್ಮಗಳನ್ನು ಆಚರಿಸಬೇಕು. ಬ್ರಾಹ್ಮಣನಾದವರಿಗೆ ಅಹಂಕಾರವು ಇರಬಾರದು. ಇಂದ್ರಿಯಗಳ ಮೇಲೆ ಮನಸ್ಸಿನ ಪ್ರಭುತ್ವ ಇರಬೇಕು.

ಲಾಭದೆಡೆಗೆ ದೃಷ್ಟಿಯಿರಬಾರದು. ಶಾಸ್ತ್ರ ಪ್ರವಚನವನ್ನು ಹೇಳದೇ ಇರಬಾರದು. ಯಜ್ಞಯಾಗಗಳನ್ನು ಮಾಡಿಸಬೇಕು. ತಾನೂ ಮಾಡಬೇಕು. ಕೆರೆ, ಕಾಲುವೆ ಧರ್ಮಛತ್ರ ಮುಂತಾದ ಲೋಕೋಪಕಾರ ಕಾರ್ಯಗಳನ್ನು ಯಥಾ ಶಕ್ತಿ ಮಾಡಬೇಕು. ಬ್ರಾಹ್ಮಣನ ಧರ್ಮ ಮೂರು. ದೇವರಲ್ಲಿ ಭಕ್ತಿ. ಇಂದ್ರಿಯನಿಗ್ರಹ. ಪರೋಪಕಾರ. ಈ ಮೂರು ಮುಖ್ಯ ಧರ್ಮಗಳ ಆಚರಣೆಯಿಂದ ಬ್ರಾಹ್ಮಣನು ನನ್ನನ್ನು ಪಡೆಯುತ್ತಾನೆ.

ಕ್ಷತ್ರಿಯನಾದವನು ದಾನಿಯಾಗಿರಬೇಕು. ಶೂರನಾಗಿರಬೇಕು. ಮತ್ತು ಯಾವಾಗಲೂ ಯಜ್ಞಯಾಗಾದಿ ಕಾರ್ಯಗಳನ್ನು ಮಾಡುತ್ತಿಲಿರಬೇಕು. ಆದರೆ ಕ್ಷತ್ರಿಯನಲ್ಲಿ ಶೌರ್ಯದ ಜೊತೆಗೆ ಕ್ರೌರ್ಯ ಇರಬಾರದು. ಐಶ್ವರ್ಯದ ಜೊತೆಗೆ ಅಹಂಕಾರ ಬಾರದಂತೆ ಎಚ್ಚರಿಕೆ ವಹಿಸಬೇಕು. ಪ್ರತಿಷ್ಠೆ ಬೆಳೆದರೂ ಪ್ರಶಂಸೆಯ ಹುಚ್ಚಿಗೆ ಬೀಳಬಾರದು. ಕೃತಿ ಹೆಚ್ಚಾಗಬೇಕು. ಮಾತು ಕಡಿಮೆಯಾಗಬೇಕು. ಜನರ ಗುಣ ಪರೀಕ್ಷೆ ಮಾಡುವ ಬುದ್ಧಿಯಿರುವದು ಕ್ಷತ್ರಿಯನಿಗೆ ಆವಶ್ಯಕವಾಗಿದೆ. ಕ್ಷತ್ರಿಯನಲ್ಲಿ ಇರಬೇಕಾದ ಮುಖ್ಯಗುಣವೆಂದರೆ ಭಗವದ್ಭಕ್ತರಲ್ಲಿ ಪ್ರೀತಿ ವಿಶ್ವಾಸ ಇರುವದು. ಕೆಟ್ಟ ಕೆಲಸ ಮಾಡುವ ಚಪಲತೆ ಇಲ್ಲದಿರುವದು. ದೇಶದ ಮತ್ತು ತನ್ನ ಏಳಿಗೆಗೆ ಬೇಕಾದ ಶೌರ್ಯ, ಚಾತುರ್ಯ, ಧೈರ್ಯ ಮುಂತಾದ ಗುಣಗಳನ್ನು ಬೆಳೆಸಿಕೊಳ್ಳುವದು, ಕ್ರೌರ್ಯ ಚಾಡಿಕೇಳುವದು ಅಸೂಯೆ ಮುಂತಾದ ಅವಗುಣಗಳನ್ನು ಬೆಳಿಸಿಗೊಳ್ಳದಿರುವದು ಇವೇ ಆಗಿವೆ. ಇಂಥ ಸದ್ಗುಣಿಯಾದ ಕ್ಷತ್ರಿಯನು ನನ್ನನ್ನು ಭಜಿಸಿದರೆ ಅವನು ನನ್ನ ಲೋಕವನ್ನೇ ಹೊಂದುತ್ತಾನೆ. ವೈಶ್ಯರು ಮುಖ್ಯವಾಗಿ ಭಕ್ತಿ ಪಂಥವನ್ನು ಹಿಡಿಯಬೇಕು. ಅತೀ ಲಾಭದ ಆಶೆ ಮಾಡದೆ ಪ್ರಾಮಾಣಿಕತೆಯಿಂದ ಸ್ವಧರ್ಮವಾದ ವಾಣಿಜ್ಯ ವ್ಯವಹಾರವನ್ನು ಮಾಡಬೇಕು. ಲಾಭ ಬಂದಾಗ ಹಿಗ್ಗಬಾರದು. ಹಾನಿಯಾದಾಗ ಕುಗ್ಗಬಾರದು. ಋತುಕಾಲದಲ್ಲಿ ಸ್ವಸ್ತ್ರೀ ಗಮನವನ್ನು ಮಾಡುತ್ತಾ ಮೋಹವನ್ನು ತೊರೆದು ಶಾಂತ ಚಿತ್ತದಿಂದ ದೇವರ ಪೂಜೆಯನ್ನು ಮಾಡಬೇಕು. ಯೋಗ್ಯರಾದ ಅಧಿಕಾರಿಗಳಿಂದ ಶಾಸ್ತ್ರೋಕ್ತ ಪುಣ್ಯ ಕರ್ಮಗಳನ್ನೂ ದಾನಧರ್ಮಗಳನ್ನೂ ಮಾಡಿ ಮಾಡಿಸುತ್ತಲೇ ಇರಬೇಕು. ಇಂಥ ಯೋಗ್ಯರಾದ ವೈಶ್ಯರು ನನ್ನನ್ನು ಎಂದೂ ಬಿಡುವದಿಲ್ಲ. ನಾನು ಅವರನ್ನು ಎಂದೂ ಬಿಡುವದಿಲ್ಲ. ಇದರಂತೆ ಶೂದ್ರರು ಹರಿಪ್ರೀತಿಕಾರಕವಾದ ತಮ್ಮ ಧರ್ಮಕರ್ಮಗಳನ್ನು ಯಾವಾಗಲೂ ಆಚರಿಸಬೇಕು. ಭಾಗವತಾದಿ ಪುರಾಣಗಳಲ್ಲಿ ಭಕ್ತಿಯನ್ನು ಇಟ್ಟು ದೊಡ್ಡವರ ಬಾಯಿಂದ ಕೇಳಬೇಕು. ಲೋಭವನ್ನು ಬಿಡಬೇಕು. ಮೋಹವನ್ನು ತೊರೆಯಬೇಕು. ಅಹಂಕಾರಕ್ಕೆ ಅವನಲ್ಲಿ ಇನಿತೂ ಆಸ್ಪದ ಇರಕೂಡದು. ದೇವರಿಗೆ ನಿತ್ಯವೂ ನಮಸ್ಕಾರವನ್ನು ಮಾಡಬೇಕು. ದೇವರನ್ನೇ ಯಾವಾಗಲೂ ಧ್ಯಾನಿಸಬೇಕು. ದೊಡ್ಡವರನ್ನು ಕಂಡರೆ ವಂದಿಸಬೇಕು. ಇಂಥ ಯೋಗ್ಯನಾದ ಶೂದ್ರನಿದ್ದರೆ ಸಾವಿರ ಜನ ಋಷಿಗಳನ್ನು ಕೂಡ ತೊರೆದು ನಾನು ಆ ಶೂದ್ರನ ಕಡೆಗೇ ಓಡಿಹೋಗುತ್ತೇನೆ.

**''ತ್ಯಕ್ತ್ವಾ ಋಷಿ ಸಹಸ್ರಾಣಿ ಶೂದ್ರಮೇವ ಭಜಾಮ್ಯಹಂ ॥**

ಈ ನಾಲ್ಕು ಜಾತಿಯವರಲ್ಲದೆ ಉಳಿದ ಎಲ್ಲ ಜನರಿಗೂ ಕೆಲವು ಸಾಮಾನ್ಯ

ಧರ್ಮಗಳಿದ್ದು ಅವುಗಳ ಆಚರಣೆಯಿಂದ ಅವರೆಲ್ಲರಿಗೂ ಶ್ರೀ ಹರಿಯ ಅನುಗ್ರಹವಾಗಿ ಸದ್ಗತಿಯಾಗುವದು. ಎಲ್ಲ ಮಾನವರೂ ಮೋಹ ಕಾಮಗಳನ್ನು ತೊರೆಯಬೇಕು. ಸುಖ ದುಃಖಗಳನ್ನು ಕಡೆಗಣಿಸಬೇಕು. ನಾಲಿಗೆಯ ಸವಿಯನ್ನು ಬಿಟ್ಟು ಬಿಡಬೇಕು. ಹೆಂಡತಿ, ಮಗ, ತಾಯಿ, ತಂದೆ, ಹೊಲ, ಮನೆ, ಐಶ್ವರ್ಯ ಮತ್ತು ಭೋಗ ಸಾಮಗ್ರಿಗಳ ಮೇಲಿನ ವ್ಯಾಮೋಹವನ್ನು ಕಡಿಮೆಮಾಡಿ ಯಾವಾಗಲೂ ಹರಿಪ್ರೀತಿಕಾರಕವಾದ ವಿಹಿತ ಕರ್ಮಾನುಷ್ಠಾನವನ್ನು ಮಾಡಬೇಕು. ದೇವತಾಕಾರ್ಯದಲ್ಲಿ ಆಸಕ್ತಿ, ಅನ್ಯಕಾರ್ಯದಲ್ಲಿ ಜುಗುಪ್ಸೆ, ಎಲ್ಲ ಪ್ರಾಣಿಗಳ ಮೇಲೆ ದಯೆ, ದೊಡ್ಡವರಲ್ಲಿ ಗೌರವ, ದೇವರಲ್ಲಿ ಭಕ್ತಿ, ಅಲ್ಪತೃಪ್ತಿ, ವ್ರತನಿಷ್ಠೆ, ಕಾರ್ಯಕಾಲದಲ್ಲಿ ಮೌನ, ಯದೃಚ್ಛಾ ಲಾಭಸಂತೋಷ ಮುಂತಾದವುಗಳು ಪ್ರತಿಯೊಬ್ಬ ಮಾನವನಲ್ಲಿ ಇರಬೇಕಾದ ಅವಶ್ಯಕ ಗುಣಗಳಾಗಿರುತ್ತವೆ. ಮನುಷ್ಯನು ದೇವರಲ್ಲಿಯೇ ಮನಸ್ಸನ್ನು ಇಟ್ಟು, ಸ್ನಾನಮಾಡಿ, ಶುಚಿರ್ಭೂತನಾಗಿ ಪುಷ್ಪ, ಗಂಧ, ಧೂಪ, ದೀಪಗಳಿಂದ ಪೂಜಿಸಿ ಗಡ್ಡೆ, ಗೆಣಸು, ಹಣ್ಣು, ಕಾಯಿ, ಹಾಲು, ಅಲಸಂದಿ ಯಾವದೂ ಇಲ್ಲದಿದ್ದರೆ ಬರೀ ಗಂಜಿ. ಕೊನೆಗೆ ನೀರನ್ನಾದರೂ ಸ್ವೀಕರಿಸಿ ದೇವರನ್ನು ಆರಾಧಿಸಬೇಕು. ನಾಲ್ಕು ಅಥವಾ ಆರು ಇಲ್ಲವೆ ಹತ್ತು ಹದಿನೈದು ದಿನಗಳಿಗೆ ಅಥವಾ ತಿಂಗಳಿಗೊಮ್ಮೆ ಫಲಹಾರವನ್ನು ಮಾಡಿ ಉಪವಾಸ ವ್ರತದಿಂದ ನನ್ನನ್ನು ಆರಾಧಿಸಬೇಕು. ಅಂದರೆ ಏಳು ಜನ್ಮಗಳಲ್ಲಿ ಹರಿಯನ್ನು ಕುರಿತು ಮಾಡಿದ ತಪಸ್ಸಿನ ಫಲವು ಪ್ರಾಪ್ತವಾಗುವದು.

**ವರಾಹ :-** ಗಂಧವತಿಯಾದ ಪೃಥ್ವೀದೇವಿಯೇ, ಮಾನವನು ನಾನು ಹೇಳಿದಂತೆ ಕಾರ್ಯಗಳನ್ನು ಮಾಡಿದರೆ ಮಾತ್ರ ಅವನ ಕರ್ಮಾಚರಣೆಯು ಸಫಲವಾಗುವದು. ಎಲ್ಲ ಕರ್ಮಗಳನ್ನೂ ಮಾಡುವಾಗ ಮನುಷ್ಯರಿಗೆ ಅಹಂಕಾರ ಲೇಶವೂ ಇರಕೂಡದು. ಇಂದ್ರಿಯಗಳನ್ನು ಬಿಗಿಹಿಡಿಯಬೇಕು. ಕ್ಷಮೆ ದಯೆ ಶಮ ಮುಂತಾದ ಗುಣಗಳು ಅವನ ಬಾಳಿನ ಉಸಿರಾಗಬೇಕು. ದೇವರಲ್ಲಿ ಯಾವಾಗಲೂ ಮನಸ್ಸನ್ನು ಇರಸಿರಬೇಕು. ಮಾಂಸವನ್ನೂ ಎಂದೂ ತಿನ್ನಕೂಡದು. ಹಣ್ಣುಕಾಯಿ, ಗಡ್ಡೆಗೆಣಸು, ಕಾಯಿಪಲ್ಲೆ, ಹಾಲು ಮುಂತಾದ ಅನಿಷಿದ್ಧವಾದ ಆಹಾರವನ್ನು ಉಣ್ಣಬೇಕು. ಷಷ್ಠೀ, ಅಷ್ಟಮೀ, ಚತುರ್ದಶೀ ಅಮಾವಾಸ್ಯೆ ಹಾಗೂ ದಶಮೀ ಏಕಾದಶೀ ದ್ವಾದಶೀ ಮುಂತಾದ ತಿಥಿಗಳಲ್ಲಿಯೂ ಪರ್ವಕಾಲ ಪುಣ್ಯಕಾಲಗಳಲ್ಲಿಯೂ ಸ್ತ್ರೀ ಸಂಗವನ್ನು ಮಾಡಬಾರದು. ಹೀಗೆ ದೃಢ ವ್ರತನಾಗಿ ಯೋಗ ವಿಧಾನದಿಂದ ಧರ್ಮ ಕರ್ಮಗಳನ್ನು ಮಾಡುವ ಪುಣ್ಯಾತ್ಮರು ವಿಷ್ಣು ಲೋಕವನ್ನು ಪಡೆಯುವರು. ಶ್ರೀಹರಿಯ ಆ ದಿವ್ಯ ಲೋಕದಲ್ಲಿ ಮುಪ್ಪು, ಮೋಹ, ಬೇನೆ, ಬೇಸರ, ಜಾಡ್ಯ, ಮೌಢ್ಯ ಯಾವದೂ ಇಲ್ಲ. ಅಲ್ಲಿ ಹೋದ ಎಲ್ಲರಿಗೂ ನಾಲ್ಕು ತೋಳುಗಳು, ಗದಾ, ಖಡ್ಗ ಮುಂತಾದ ಆಯುಧಗಳು ಸ್ವಯಂ ಪ್ರಾಪ್ತವಾಗುವವು. ಈ ರೀತಿಯ ದಿವ್ಯ ಲೋಕ ಪ್ರಾಪಕವಾದ ನನ್ನ ಪೂಜಾ ಪರ್ಯುಪಾಸನಾದಿ ಮಾರ್ಗವನ್ನು ಬಿಟ್ಟು, ಸ್ವಚ್ಛಂದವಾಗಿ ಬಾಳುವವರು ಬಗೆ ಬಗೆಯ ದುಃಖಗಳಿಗೊಳಗಾಗುವರು. ಈ ಬಾಳಿನಲ್ಲಿ ಅಜ್ಞ ಜನರು ಅನುಭವಿಸುವ ಗೋಳು ಗಂಡಾಂತರ ಕ್ಲೇಶ ಭವಣೆಗಳು ಅಸಹ್ಯವಾಗಿವೆ.

ಅಹಂಕಾರಾವೃತೋ ನಿತ್ಯಂ ನರೋ ಮೋಹೇನ ಚಾವೃತಃ ।
ಯೋ ಮಾಂ ನೈವ ಪ್ರಪದ್ಯೇತ ತತೋ ದುಃಖತರಂ ನು ಕಿಂ ॥೧೦॥

ಮನುಷ್ಯನು ಮೋಹದಿಂದ ಗರ್ವಾಂಧನಾಗಿ ನನ್ನ ಕಡೆಗೆ ಬಾರದಿದ್ದರೆ ಅದಕ್ಕಿಂತ ಹೆಚ್ಚಿನ ದುಃಖವು ಯಾವುದಿದೆ ?

ಸರ್ವಾಶೀ ಸರ್ವ ವಿಕ್ರೇತಾ ನಮಸ್ಕಾರ ವಿವರ್ಜಿತಃ ।
ಯೋ ನ ಮಾಂ ಪ್ರತಿಪದ್ಯೇತ ತತೋ ದುಃಖತರಂ ನು ಕಿಂ॥ ೧೧ ॥

ಇದ್ದದ್ದನ್ನೆಲ್ಲ ಮಾರಿ, ತೂರಿ, ಕಂಡದ್ದನ್ನೆಲ್ಲ ಕೊಂಡು, ಸಿಕ್ಕದ್ದನ್ನೆಲ್ಲ ತಿಂದು ಯಾವ ಗುರುಹಿರಿಯರಿಗೂ ತಲೆಬಾಗದೇ ದೇವರಿಂದ ದೂರ ಓಡಿದ ಮಾನವನಿಗಿಂತ ದುಃಖಿ ಯಾರು ?

ಪ್ರಾಪ್ತ ಕಾಲೇ ವೈಶ್ವದೇವೇ ದೃಷ್ಟ್ವಾ ಚಾತಿಥಿಮಾಗತಂ ।
ಅದತ್ವಾ ತಸ್ಯ ಯೋ ಭುಂಕ್ತೇ ತತೋ ದುಃಖತರಂ ನು ಕಿಂ॥ ೧೨ ॥

ವೈಶ್ವದೇವ ಮಾಡುವ ಕಾಲದಲ್ಲಿ ಅತಿಥಿಯು ಮನೆಗೆ ಬಂದಾಗ ಅವನಿಗೆ ಅನ್ನವನ್ನು ಕೊಡದೇ ತಾನೇ ಭೋಜನವನ್ನು ಮಾಡಿದರೆ ಅವನಿಗಿಂತ ಪಾಪಿ ಯಾರು ?

ಸರ್ವಾನ್ನಾನಿ ತು ಸಿದ್ಧಾನಿ ಪಾಕ ಭೇದಂ ಕರೋತಿಯಃ
ತಸ್ಯ ದೇವಾ ನ ಚಾಶ್ನಂತಿ ತತೋ ದುಃಖತರಂ ನು ಕಿಂ ॥ ೧೩ ॥

ಪಂಕ್ತಿಯಲ್ಲಿ ಪರಪಂಕ್ತಿಯನ್ನು ಮಾಡಿ ತಾನೊಬ್ಬನೇ ಸಮೀಚೀನ ಭೋಜನವನ್ನು ಮಾಡಿದರೆ ಅವನಂಥ ಸ್ವಾರ್ಥಿ ಯಾರು ?

ಅಸಂತುಷ್ಟಸ್ತು ವೈಷಮ್ಯೇ ಪರದಾರಾಭಿಮರ್ಶಕಃ ।
ಪರೋಪತಾಪೀ ಮಂದಾತ್ಮಾ ತತೋ ದುಃಖತರಂ ನು ಕಿಂ॥ ೧೪ ॥

ತನ್ನ ಮಡದಿಗಿಂತ ಪರಸ್ತ್ರೀಯು ಚಲುವೆ ಎಂದು ಅತೃಪ್ತಿಯಿಂದ ಪರಸ್ತ್ರೀ ಸಹವಾಸವನ್ನು ಮಾಡಿ ಪರರಿಗೆ ತಾಪ, ತನಗೆ ಪಾಪವನ್ನುಂಟು ಮಾಡುವ ಮೂರ್ಖನಿಗಿಂತ ದುಃಖಿ ಯಾರು ?

ಅಕೃತ್ವಾ ಪುಷ್ಕಲಂ ಕರ್ಮ ಗೃಹೇ ಸಂವಸತೇ ನರಃ ।
ಮೃತ್ಯು ಕಾಲವಶಂ ಪ್ರಾಪ್ತಃ ತತೋ ದುಃಖತರಂ ನು ಕಿಂ ॥ ೧೫ ॥

ಯಾವ ಪುಣ್ಯ ಕಾರ್ಯವನ್ನೂ ಮಾಡದೇ ಮನೆಯಲ್ಲಿಯೇ ಇದ್ದು ವ್ಯರ್ಥವಾಗಿ ಆಯುಷ್ಯವನ್ನು ಕಳೆದು ಸಾವನ್ನು ಅಪ್ಪುವದಕ್ಕಿಂತ ಹೆಚ್ಚಿನ ದುಃಖ ಯಾವದು ?

ಹಸ್ತ್ಯಶ್ವರಥಯಾನಾನಿ ಗಮ್ಯಮಾನಾನಿ ಪಶ್ಯತಿ ।
ಧಾವತ್ಯಸ್ಯಾಗ್ರತಃ ಪೃಷ್ಠೇ ತತೋ ದುಃಖತರಂ ನು ಕಿಂ ॥ ೧೬ ॥

ಈ ಲೋಕದಲ್ಲಿ ಆನೆ, ಕುದುರೆ, ರಥಗಳಲ್ಲಿ ಕುಳಿತು ಮೆರೆಯುವವರು ಕೆಲವರು. ಇನ್ನುಳಿದವರು ಅವರ ಮುಂದೆ ಅಥವಾ ಹಿಂದೆ ಓಡುತ್ತಲಿರಬೇಕು. ಇದಕ್ಕಿಂತ ಹೆಚ್ಚಿನ ದುಃಖ ಯಾವದು ?

**ಅಶ್ನಂತಿ ಪಿಶಿತಂ ಕೇಚಿತ್ ಕೇಚಿಚ್ಛಾಲಿಸಮನ್ವಿತಂ ।**
**ಶುಷ್ಕಾನ್ನಂ ಕೇಚಿದಶ್ನಂತಿ ತತೋ ದುಃಖತರಂ ನು ಕಿಂ ॥೧೭॥**

ಕೆಲವರಿಗೆ ಮದ್ಯಮಾಂಸ ಭೋಜನ, ಇನ್ನು ಕೆಲವರಿಗೆ ಸಣ್ಣಕ್ಕಿಯ ಊಟ. ಉಳಿದವರಿಗೆ ಒಣ ಅನ್ನಕ್ಕೂ ಗತಿ ಇರುವುದಿಲ್ಲ. ಇದಕ್ಕಿಂತ ದುಃಖ ಯಾವದು ?

**ವರವಸ್ತ್ರಾವೃತಾಂ ಶಯ್ಯಾಂ ಸಮಾಸೇವತಿ ಭೂಷಿತಾಂ ।**
**ಕೇಚಿತ್ತೃಣೇಷು ಶೇರಂತೇ ತತೋ ದುಃಖತರಂ ನು ಕಿಂ ॥೧೮॥**

ಕೆಲವರು ಹಂಸದುಪ್ಪಳದ ಹಾಸಿಗೆಯ ಮೇಲೆ ವಸ್ತ್ರ ಅಲಂಕಾರಗಳಿಂದ ಭೂಷಿತರಾಗಿ ಬೆಳ್ಳಗಿನ ಸೊಳ್ಳೆ ಪರದೆಯೊಂದಿಗೆ ಮಲಗುತ್ತಾರೆ. ಕೆಲವರು ನೆಲದಲ್ಲಿ ಹುಲ್ಲುಗಳ ಮೇಲೆಯೆ ಒರಗುತ್ತಾರೆ. ಇದಕ್ಕಿಂತ ಹೆಚ್ಚಿನ ದುಃಖವಾವುದು ?

**ಸುರೂಪೋ ದೃಶ್ಯತೇ ಕಶ್ಚಿತ್ ಪುರುಷಶ್ಚಾತ್ರ ಕರ್ಮಭಿಃ ।**
**ಕೇಚಿದ್ವಿರೂಪಾ ದೃಶ್ಯಂತೇ ತತೋ ದುಃಖತರಂ ನು ಕಿಂ ॥೧೯॥**

ಇದರಂತೆ ಈ ಪ್ರಪಂಚದಲ್ಲಿ ಮನ್ಮಥರಂತೆ ಅತ್ಯಂತ ಸುಂದರವಾದ ರೂಪದಿಂದ ಚೆಲುವಿನ ಚಂದ್ರಾಮರು ಕೆಲವರು. ಅಷ್ಟಾವಕ್ರದೇಹದಿಂದ ಕಾಡಸಿದ್ಧರಂತೆ ವಿದ್ರೂಪಿಗಳು ಕೆಲವರು.

**ವಿದ್ವಾನ್ಸ್ಮೃತೀ ಗುಣಜ್ಞಶ್ಚ ಸರ್ವಶಾಸ್ತ್ರ ವಿಶಾರದಃ ।**
**ಕೇಚಿನ್ಮೂಕಾಶ್ಚ ದೃಶ್ಯಂತೇ ತತೋ ದುಃಖತರಂ ನು ಕಿಂ ॥೨೦॥**

ಕೆಲವರು ಮಹಾ ಪಂಡಿತರು. ಕೆಲವರು ಮಹಾ ಮೂರ್ಖರು. ಕೆಲವರು ಒಳ್ಳೇ ಮಾತುಗಾರರು. ಹಲವರು ಹುಟ್ಟ ಮೂಕರು. ಕೆಲವರು ಸರ್ವಶಾಸ್ತ್ರ ವಿಶಾರದರು. ಹಲವರು ನಿರಕ್ಷರ ಕುಕ್ಷಿಗಳು. ಇವೇ ಮೊದಲಾದ ವೈಷಮ್ಯಕ್ಕಿಂತ ಹೆಚ್ಚಿನ ದುಃಖ ಯಾವದು ?

**ವಿದ್ಯ ಮಾನೇ ಧನೇ ಕೇಚಿತ್ಕೃ ಪಣಾ ಭೋಗ ವರ್ಜಿತಾಃ ।**
**ದರಿದ್ರೋ ಜಾಯತೇ ದಾತಾ ತತೋ ದುಃಖತರಂ ನು ಕಿಂ ॥೨೧॥**

ಬೇಕಾದಷ್ಟು ಐಶ್ವರ್ಯವಿದ್ದರೂ ಕೆಲವು ಶ್ರೀಮಂತರು ಜಿಪುಣತನದಿಂದ ಏನನ್ನೂ ಭೋಗಿಸುವುದಿಲ್ಲ. ಮುಕ್ತ ಹಸ್ತದಿಂದ ದಾನ ಮಾಡುವ ಕೊಡುಗೈ ದಾನಿಗಳು ದಾರಿದ್ರ್ಯದಲ್ಲಿ ಬಳಲುತ್ತಾರೆ. ಇದಕ್ಕಿಂಕ ಹೆಚ್ಚಿನ ದುಃಖವು ಯಾವುದಿದೆ ?

**ದ್ವಿಭಾರ್ಯಃ ಪುರುಷೋ ಯಸ್ತು ತಯೋರೇಕಾ ಪ್ರಶಂಸತಿ ।**
**ಏಕಾತು ದುರ್ಭಗಾ ತತ್ರ ತತೋ ದುಃಖತರಂ ನು ಕಿಂ ॥೨೨॥**

ಒಬ್ಬ ಮನುಷ್ಯನು ಇಬ್ಬರು ಹೆಂಡಂದಿರನ್ನು ಮಾಡಿಕೊಂಡು ಒಬ್ಬಳನ್ನು ಪ್ರೀತಿಸುತ್ತಾನೆ. ಮತ್ತೊಬ್ಬಳನ್ನು ಉಪೇಕ್ಷಿಸುತ್ತಾನೆ. ಇವನು ಪ್ರೀತಿಸುವ ಹೆಂಡತಿಯು ದುಶ್ಶೀಲೆಯಾಗಿ, ಸುಶೀಲೆಯಾದ ಮಡದಿಯನ್ನು ಇವನು ಪ್ರೀತಿಸದಿದ್ದರೆ ಅದಕ್ಕಿಂತ ಹೆಚ್ಚಿನ ದುಃಖವು ಯಾವದಿದೆ ?

**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ತ್ರಯೋ ವರ್ಣಾಃ ಸುಮಧ್ಯಮೇ ।**
**ಪಾಪ ಕರ್ಮರತಾ ಹ್ಯಾಸನ್ ತತೋ ದುಃಖತರಂ ನು ಕಿಂ ॥೨೩॥**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮೂರೂ ಜಾತಿಯವರೂ ಪಾಪಕೃತ್ಯಗಳನ್ನು ಸ್ವಚ್ಛಂದವಾಗಿ ಮಾಡತೊಡಗಿದರೆ ದೇಶದಲ್ಲಿ ಅದಕ್ಕಿಂತ ದುಃಖವಾವುದು ?

**ಲಬ್ಧ್ವಾತು ಮಾನುಷೀಂ ಸಂಜ್ಞಾಂ ಪಂಚಭೂತ ಸಮನ್ವಿತಾಂ ।**
**ಮಾಮೇವ ನ ಪ್ರಪದ್ಯಂತೇ ತತೋ ದುಃಖತರಂ ನು ಕಿಂ ॥ ೨೪ ॥**

ಮನುಷ್ಯರಾಗಿ ಪಾಂಚಭೌತಿಕವಾದ ಶರೀರವನ್ನು ಹೊಂದಿ ದೇವರನ್ನು ಪೂಜಿಸಿ ಸದ್ಗತಿಯನ್ನು ಪಡೆಯದಿದ್ದರೆ ಅದಕ್ಕಿಂತ ಹೆಚ್ಚಿನ ದುಃಖವು ಯಾವದಿದೆ ?

ಭೂದೇವಿಯೇ, ಸರ್ವಪ್ರಾಣಿಗಳಿಗೂ ಅಹಿತವಾದ ಪಾಪ ವಿಚಾರ ಯಾವುದೆಂಬುದನ್ನು ನಾನು ನಿನಗೆ ಹೇಳಿದೆ. ಇನ್ನು ಸುಖಸ್ವರೂಪವನ್ನು ಹೇಳುತ್ತೇನೆ ಕೇಳು.

**ಮಾಂ ಪೂಜಯಿತ್ವಾ ನೈವೇದ್ಯಂ ವಿಶಿಷ್ಟಂ ಪರಿಕಲ್ಪ್ಯ ಚ ।**
**ಶೇಷಮನ್ನಂ ಸಮಾಶ್ನಾತಿ ತತಃ ಸೌಖ್ಯತರಂ ನು ಕಿಂ ? ॥ ೨೮ ॥**

ಪ್ರತಿನಿತ್ಯವೂ ದೇವಾತಾರ್ಚನೆಯನ್ನು ಮಾಡಿ ಸಿದ್ಧವಾಗಿರುವ ಶುದ್ಧ ಅಡಿಗೆಯನ್ನು ದೇವರಿಗೆ ಸಮರ್ಪಣೆಮಾಡಿ ಆ ನೈವೇದ್ಯ ಶೇಷವನ್ನು ಭಗವಂತನ ಪ್ರಸಾದವೆಂದು ಉಣ್ಣುವದಕ್ಕಿಂತ ಹೆಚ್ಚಿನ ಸೌಖ್ಯವು ಯಾವುದಿದೆ?

**ತ್ರಿಕಾಲಂ ಯೇ ಪ್ರಪದ್ಯಂತೇ ಮಯೋಕ್ತೇನ ವಸುಂಧರೇ।**
**ಕೃತ್ವಾ ಸಾಯಾಹ್ನಿಕಂ ಕರ್ಮ ತತಸ್ಸೌಖ್ಯತರಂ ನು ಕಿಂ ॥ ೨೯ ॥**

ತ್ರಿಕಾಲದಲ್ಲಿಯೂ ಸಂಧ್ಯಾವಂದನೆಯನ್ನು ಮಾಡಿ ನಾನು ಹೇಳಿದಂತೆ ಅನೇಕ ಕರ್ಮಗಳನ್ನು ಆಚರಿಸಿ, ಆ ವಿಹಿತ ಕರ್ಮಾನುಷ್ಠಾನದಿಂದ ನನ್ನನ್ನು ಪಡೆಯುವದಕ್ಕಿಂತ ಹೆಚ್ಚಿನ ಸೌಖ್ಯವು ಯಾವದಿದೆ ?

**ದೇವತಾತಿಥಿ ಮರ್ತ್ಯಾನಾಂ ತ್ಯಕ್ತ್ವಾ ಚಾನ್ನಂ ವಸುಂಧರೇ ।**
**ಯಶ್ಚಾತ್ಮಾ ವೈ ಸಮಶ್ನಾತಿ ತತಃ ಸೌಖ್ಯತರಂ ನು ಕಿಂ ॥ ೩೦ ॥**

ದೇವತೆಗಳಿಗೂ ಅತಿಥಿಗಳಿಗೂ ಪ್ರಾಣಿಗಳಿಗೂ ಅನ್ನವನ್ನು ನೀಡಿ ಬಳಿಕ ತಾನು ಊಟ ಮಾಡುವದು ಅತ್ಯಂತ ಸುಖಕರವಾಗಿದೆ.

**ಪ್ರವಿಷ್ಟಸ್ತ್ವ ತಿಥಿರ್ಯಸ್ಯ ನಿರಾಶೋ ಯನ್ನ ಗಚ್ಛತಿ ।**
**ಯೇನ ಕೇನಚಿದ್ದತ್ತೇನ ತತಃ ಸೌಖ್ಯತರಂ ನು ಕಿಂ ॥ ೩೧ ॥**

ಮನೆಗೆ ಬಂದ ಅತಿಥಿಯು ನಿರಾಶನಾಗಿ ತಿರುಗಿ ಹೋಗದೆ ಬಯಸಿದ್ದನ್ನು ಪಡೆದು ತೃಪ್ತನಾಗಿ ಇರುವದು ಯಜಮಾನನಿಗೆ ನಿಜವಾಗಿಯೂ ಸುಖಕರವಾಗಿರುವದು.

**ಮಾಸಿ ಮಾಸ್ಯೇಕ ದಿವಸಸ್ತ್ವ ಮಾವಾಸ್ಯೇಹ ಯೋಚ್ಯತೇ ।**
**ಪಿತರೋ ಯಸ್ಯ ತುಷ್ಯಂತಿ ತತಃ ಸೌಖ್ಯತರಂ ನು ಕಿ ॥ ೩೨ ॥**

ಪ್ರತಿ ತಿಂಗಳಲ್ಲಿಯೂ ಅಮಾವಾಸ್ಯೆಯ ದಿನ ಪಿತೃಗಳನ್ನು ಸುಖಪಡಿಸುವದು ಅತ್ಯಂತ ಸುಖಕರ.

**ಭೋಜನೇಷು ಪ್ರಪನ್ನೇಷು ಯವಾನ್ನಂ ಯಃ ಪ್ರಯಚ್ಛತಿ ।**
**ಅಭಿನ್ನ ಮುಖರಾಗೇಣ ತತಃ ಸೌಖ್ಯತರಂ ನು ಕಿಂ ॥ ೩೩ ॥**

ಊಟಕ್ಕೆ ಜನರು ಬಂದಾಗ ಅನ್ನವನ್ನಾಗಲಿ, ಗಂಜಿಯನ್ನಾಗಲಿ, ಮುಖವನ್ನು ಕಹಿಮಾಡದೆ ಸಂತೋಷದಿಂದ ನೀಡಿದರೆ ಅದೇ ಸುಖ.

**ಯಸ್ಯ ಬುದ್ಧಿರ್ನನಶ್ಯೇಚ್ಚ ಉಭಯೋರಪಿ ಭಾರ್ಯಯೋಃ ।**
**ಸಮಂ ಪಶ್ಯತಿ ಯೋ ದೇವಿ ತತಃ ಸೌಖ್ಯತರಂ ನು ಕಿಂ ॥ ೩೪ ॥**

ಇಬ್ಬರು ಮಡದಿಯರಿದ್ದರೆ ಪಕ್ಷಪಾತ ಮಾಡದೆ ಇಬ್ಬರನ್ನೂ ಸಮವಾಗಿ ಪ್ರೀತಿಯಿಂದ ನೋಡುವದೇ ಸುಖಕರ.

**ಅಹಿಂಸನಂ ತು ಕುರ್ವೀತ ವಿಶುದ್ಧೇನಾಂತರಾತ್ಮನಾ ।**
**ಯೋಽಹಿಂಸಾರತಃ ಶುದ್ಧಃ ಸ ಸುಖಾಯೋಪ ಜಾಯತೇ ॥ ೩೫ ॥**

ನಿರ್ಮಲವಾದ ಅಂತಃಕರಣದಿಂದ ಯಾವದೇ ತರಹದ ಹಿಂಸೆಯನ್ನು ಮಾಡದೆ ಇರುವದು ನಿಜವಾದ ಸುಖ.

**ಪರಭಾರ್ಯಾಂ ಸುರೂಪಾಂ ತು ದೃಷ್ಟ್ವಾ ದೃಷ್ಟಿರ್ನಚಾಲ್ಯತೇ ।**
**ಯಸ್ಯ ಚಿತ್ತಂ ನಂ ಗಚ್ಛೇತ್ತು ತತಃ ಸೌಖ್ಯತರಂ ನು ಕಿಂ ॥ ೩೬ ॥**

ಹೆರವರ ಹೆಂಡತಿಯು ಎಷ್ಟೇ ಚೆಲುವೆಯಾಗಿದ್ದರೂ ಅತ್ತ ಕಣ್ಣೆತ್ತಿ ನೋಡದೆ ಎಂದೂ ಪರಸ್ತ್ರೀ ಸೌಂದರ್ಯಕ್ಕೆ ಮನಸ್ಸು ಕೊಡದೇ ಇರುವದೇ ಅತ್ಯಂತ ಸುಖಕರ.

**ಮೌಕ್ತಿಕಾದೀನಿ ರತ್ನಾನಿ ತಥೈವ ಕನಕಾನಿ ಚ ।**
**ಲೋಷ್ಠವತ್ಪಶ್ಯತೇ ಯಸ್ತು ತತಃ ಸೌಖ್ಯತರಂ ನು ಕಿಂ ॥ ೩೭ ॥**

ಮುತ್ತು, ರತ್ನ, ಬಂಗಾರ ಮುಂತಾದವುಗಳನ್ನು ಮಣ್ಣು ಹೆಂಟೆ ಎಂದು ಭಾವಿಸುವದಕ್ಕಿಂತ ಹೆಚ್ಚಿನ ಸುಖವಾವುದು ?

**ಲಬ್ಧೇನ ಚಾಪ್ಯಲಬ್ಧೇನ ಕುಚ್ಛಿತಂ ಕರ್ಮ ಗರ್ಹಯನ್ ।**
**ಯಸ್ತು ಜೀವತಿ ಸಂತುಷ್ಟಃ ಸ ಸುಖಾಯೋಪಪದ್ಯತೇ ॥ ೩೮ ॥**

ಲಾಭವಾಗಲಿ, ಹಾನಿಯಾಗಲಿ ಎಂದೂ ಕೆಟ್ಟಕೆಲಸ ಮಾಡದೆ ಯದೃಚ್ಛಾಲಾಭ ಸಂತುಷ್ಟನಾಗಿ ಬದುಕುವವನು ನಿಜವಾದ ಸುಖಕ್ಕೆ ಭಾಗಿಯಾಗುವನು.

**ಭರ್ತುಸ್ತು ವೈ ವ್ರತಂ ಸ್ತ್ರೀಣಾಮೇವ ಮೇವ ವಸುಂಧರೆ ।**
**ಯಾ ತೋಷಯತಿ ಭರ್ತಾರಂ ತತಃ ಸೌಖ್ಯತರಂ ನು ಕಿಂ ॥ ೩೯ ॥**

ಸ್ತ್ರೀಯರಿಗೆ ಪತಿಯನ್ನು ಸಂತೋಷ ಪಡಿಸುವದೇ ಒಂದು ವ್ರತವಿದ್ದಂತೆ. ಈ ವ್ರತದಿಂದ ಪತಿಯನ್ನು ಸಂತೋಷ ಪಡಿಸುವದಕ್ಕಿಂತ ಹೆಚ್ಚಿನ ಸುಖ ಯಾವದಿದೆ ?

**ವಿದ್ಯತೇ ವಿಭವೇ ವಾಪಿ ಪುರುಷೋ ಯಸ್ತು ಪಂಡಿತಃ ।**
**ನಿಗ್ರಹೀತೇಂದ್ರಿಯಃ ಪಂಚ ತತಃ ಸೌಖ್ಯತರಂ ನು ಕಿಂ ॥ ೪೦ ॥**

ಐಶ್ವರ್ಯವು ಇದ್ದು ಯಾವ ಮನುಷ್ಯನಿಗೆ ಪಾಂಡಿತ್ಯವು ಇರುದೋ ಅಂಥ ಶ್ರೀಮಂತ, ಧೀಮಂತ ವ್ಯಕ್ತಿಗೆ ತನ್ನ ಐದೂ ಇಂದ್ರಿಯಗಳ ಮೇಲೆ ನಿಯಂತ್ರಣವಿದ್ದರೆ ಅದಕ್ಕಿಂತ ಹೆಚ್ಚಿನ ಸೌಖ್ಯವು ಯಾವದಿದೆ ?

**ಸಹತೇ ಚಾಪಮಾನಂ ತು ವ್ಯಸನೇ ನ ತು ದುರ್ಮನಾಃ।**
**ಯಸ್ಯೇದಂ ವಿದಿತಂ ಸರ್ವಂ ತತಃ ಸೌಖ್ಯತರಂ ನು ಕಿಂ ॥೪೧॥**

ಅವಮಾನವನ್ನು ಸಹನ ಮಾಡುವ ಮತ್ತು ಸಂಕಟದಲ್ಲಿ ತಲೆ ಕೆಡಿಸಿಕೊಳ್ಳದಿರುವ ಬದುಕಿನ ಗೆಲವಿನ ಗುಟ್ಟನ್ನು ತಿಳಿದರೆ ಅದಕ್ಕಿಂತ ಹೆಚ್ಚಿನ ಸೌಖ್ಯವಾವುದು.

**ಮಾತರಂ ಪಿತರಂ ಚೈವ ಯಃ ಸದಾ ಪೂಜಯೇನ್ನರಃ।**
**ದೇವಂ ಚೈವ ಸದಾ ಪಶ್ಯೇತ್ ತತಃ ಸೌಖ್ಯತರಂ ನು ಕಿಂ॥೪೨॥**

ತಾಯಿ ತಂದೆಗಳನ್ನು ದೇವರೆಂದು ತಿಳಿದು ಪೂಜಿಸುವದು ಅತ್ಯಂತ ಸುಖಕರವಾಗಿರುತ್ತದೆ.

**ಋತುಕಾಲೇ ತು ಯೋ ಗಚ್ಛೇತ್ ಪತ್ನ್ಯಾಮಾಸೇ ಚ ಮೈಥುನಂ।**
**ಅನನ್ಯಮಾನಸೋ ಭೂತ್ವಾ ತತಂ ಸೌಖ್ಯ ತರಂ ನು ಕಿಂ॥೪೩॥**

ಪ್ರತಿ ತಿಂಗಳವೂ ಋತು ಕಾಲದಲ್ಲಿ ಮಾತ್ರ ಮಡದಿಯೊಡನೆ ರಮಿಸುವದು ಅತ್ಯಂತ ಸುಖಕರವಾಗಿರುತ್ತದೆ.

*ವರಾಹ ಪುರಾಣದಲ್ಲಿ ತೊಂಬತ್ತೆಂಟನೇ ಅಧ್ಯಾಯ ಮುಗಿದುದು*

—೦—

## ಮೂವತ್ತೆರಡು ಅಪರಾಧಗಳು

**ಅಧ್ಯಾಯ - ೯೯**

**ವರಾಹ :-** ಮಂಗಳಾಂಗಿಯಾದ ಭೂದೇವಿಯೇ, ಭಕ್ಷ್ಯಾಭಕ್ಷ್ಯ ನಿರ್ಣಯ ರೂಪವಾದ ಆಹಾರ ವಿಧಿಯ ವಿಚಾರವನ್ನು ಹೇಳುತ್ತೇನೆ ಕೇಳು.

ಧರ್ಮ ಮಾರ್ಗವನ್ನು ಹಿಡಿದ ಮನುಷ್ಯನು ಹವಿಷ್ಯವಾದ ಅನ್ನವನ್ನುಂಡು ನನ್ನನ್ನು ಹೊಂದುತ್ತಾನೆ. ಹೋಮಕ್ಕೆ ವಿಹಿತವಾದ ಭತ್ತ ಮುಂತಾದ ಧಾನ್ಯಗಳನ್ನು ನನಗೆ ಸಮರ್ಪಣ ಮಾಡಿ ಮನುಷ್ಯನು ತಾನೂ ಉಣ್ಣಬೇಕು. ನನಗೆ ನಿಷಿದ್ಧವಾದ ವಸ್ತುಗಳು ರುಚಿಸುವದಿಲ್ಲ. ನನಗೆ ರುಚಿಸದ ವಸ್ತುಗಳು ಕರ್ಮಾರ್ಹವಲ್ಲ ಅಂಥ ನಿಷಿದ್ಧ ಆಹಾರವನ್ನು ತಿನ್ನುವದು ಮೊದಲನೆ ಅಪರಾಧ. ಸ್ತ್ರೀ ಸಂಗವನ್ನು ಮಾಡಿ ಸ್ನಾನವನ್ನು ಮಾಡದೆ ನನ್ನನ್ನು ಮುಟ್ಟುವುದು ಮೂರನೇ ಅಪರಾಧ. ರಜಸ್ವಲೆಯಾದ ನಾರಿಯನ್ನು ನೋಡಿ ಸ್ನಾನ ಮಾಡದೆ ದೇವರ ಪೂಜೆ ಮಾಡುವದು ನಾಲ್ಕನೇ ಅಪರಾಧ. ಶವವನ್ನು ಮುಟ್ಟಿ ಸ್ನಾನ ಮಾಡದೇ ಮತ್ತು ಯಜ್ಞೋಪವೀತಧಾರಣ ಪಂಚಗವ್ಯ ಪ್ರಾಶನ ಮುಂತಾದ ಸಂಸ್ಕಾರಗಳನ್ನು ಮಾಡಿಕೊಳ್ಳದಿರುವದು ಐದನೇ ಅಪರಾಧ.

ಶವವನ್ನು ನೋಡಿ ಆಚಮನ ಮಾಡದೇ ದೇವರನ್ನು ಮುಟ್ಟುವದು ಆರನೇ ಅಪರಾಧ. ದೇವ ಪೂಜೆಯ ಕಾಲದಲ್ಲಿ ಮಲವಿಸರ್ಜನೆ ಮಾಡುವುದು ಏಳನೇ ತಪ್ಪು. ಕಪ್ಪು ಬಣ್ಣದ ಬಟ್ಟೆ ಧರಿಸಿ ದೇವರ ಪೂಜೆ ಮಾಡುವದು ಎಂಟನೇ ತಪ್ಪು. ದೇವರ ಪೂಜೆಯಲ್ಲಿ ಬೇರೆ ಹರಟೆಯನ್ನು ಹೊಡೆಯುವದು ಒಂಬತ್ತನೇ ತಪ್ಪು. ಮೈಲಿಗೆಯ ಪದಾರ್ಥಗಳನ್ನು ಸರಿಯಾಗಿ ಶುದ್ಧಗೊಳಿಸದೆ ದೇವರ ಪೂಜೆ ಮಾಡುವದು ಹತ್ತನೇ ತಪ್ಪು. ದೇವರ ಪೂಜೆ, ಯಜ್ಞ ಯಾಗಾದಿ ಪುಣ್ಯಕಾರ್ಯಗಳನ್ನು ಮಾಡುವಾಗ ಸಿಟ್ಟಿಗೇಳುವದು ಹನ್ನೊಂದನೇ ತಪ್ಪು. ನಿಷಿದ್ಧವಾದ, ವಾಸನೆಯಿಲ್ಲದ ಹೂಗಳಿಂದ ನನ್ನನ್ನು ಪೂಜಿಸುವುದು ಹನ್ನೆರಡನೇ ತಪ್ಪು. ಕೆಂಪು ಬಟ್ಟೆಯಿಂದ ದೇವರನ್ನು ಸೇವಿಸುವದು ಹದಿಮೂರನೇ ತಪ್ಪು. ಕತ್ತಲೆಯಲ್ಲಿ ದೇವರನ್ನು ಮುಟ್ಟುವದು ಹದಿನಾಲ್ಕನೇ ತಪ್ಪು. ಒಗೆದು ಹಾಕದ ಮೈಲಿಗೆ ಬಟ್ಟೆಯಿಂದ ದೇವರನ್ನು ಪೂಜಿಸುವದು ಹದಿನಾರನೇ ತಪ್ಪು. ದೇವರಿಗೆ ನೈವೇದ್ಯವಿಡದೆ ಅನ್ನವನ್ನು ಉಣ್ಣುವದು ಹದಿನೇಳನೇ ತಪ್ಪು. ಮೀನು ತಿನ್ನುವವರು ನನ್ನನ್ನು ಮುಟ್ಟುವದು ಹದಿನೆಂಟನೇ ತಪ್ಪು. ಮಾಂಸ ತಿಂದು ನನ್ನ ಧ್ಯಾನ ಮಾಡುವದು ಹತ್ತೊಂಬತ್ತನೇ ತಪ್ಪು. ದೀಪ ಹಚ್ಚಿ ಅದೇ ಎಣ್ಣೆಗೈಯಿಂದ ಕೈ ತೊಳೆದುಕೊಳ್ಳದೇ ನನ್ನನ್ನು ಮುಟ್ಟುವದು ಇಪ್ಪತ್ತನೇ ತಪ್ಪು. ಸ್ಮಶಾನಕ್ಕೆ ಹೋಗಿ ಬಂದು ಶುದ್ಧನಾಗದೆ ದೇವರ ಕೋಣೆಯಲ್ಲಿ ಪ್ರವೇಶಿಸುವದು ಇಪ್ಪತ್ತೊಂದನೇ ತಪ್ಪು.

ಏನಾದರೂ ತಿಂದು ಕುಡಿದು ದೇವರ ಪೂಜೆ ಮಾಡುವದು ಇಪ್ಪತ್ತೆರಡನೇ ತಪ್ಪು. ಮಾಂಸವನ್ನು ದೇವರಿಗೆ ನಿವೇದಿಸುವದು ಇಪ್ಪತ್ಮೂರನೇ ತಪ್ಪು. ಶೆರೆಕುಡಿಯುವವರು ದೇವರ ಸಮೀಪಕ್ಕೆ ಹೋಗುವದು ಇಪ್ಪತ್ನಾಲ್ಕನೇ ತಪ್ಪು. ಹಣ್ಣು ತರಕಾರಿ ತಿಂದು ಅಥವಾ ಯಾವದಾದರೂ ವಸ್ತುವನ್ನು ತಿಂದು ದೇವರನ್ನು ಪೂಜಿಸುವದು ಇಪ್ಪತ್ತೈದನೇ ತಪ್ಪು. ಎರಡನೇಯವರಿಂದ ಹಣ ತೆಗೆದುಕೊಂಡು ಸಂಬಳದ ಮೇಲೆ ದೇವರನ್ನು

ಪೂಜಿಸುವದು ಇಪ್ಪತ್ತಾರನೆ ತಪ್ಪು. ಹೊಸ ಧಾನ್ಯವು ಬಂದಾಗ ದೇವರಿಗೆ ಸಮರ್ಪಿಸದೆ ಉಣ್ಣುವದು ಇಪ್ಪತ್ತೇಳನೇ ತಪ್ಪು. ತೀರ್ಥ ಅಥವಾ ಕೆರೆ ಬಾವಿಗಳಿಗೆ ಪಾದರಕ್ಷೆಗಳನ್ನು ಹಾಕಿಕೊಂಡು ಹೋಗುವದು ಇಪ್ಪತ್ತೆಂಟನೇ ತಪ್ಪು. ತನ್ನ ದೇಹವನ್ನು ತುರಿಸಿಕೊಂಡು ಅಥವಾ ತಿಕ್ಕಿಕೊಂಡು ಕೈ ತೊಳೆಯದೆ ದೇವರನ್ನು ಮುಟ್ಟುವದು ಇಪ್ಪತ್ತೊಂಬತ್ತನೇ ತಪ್ಪು. ಅಜೀರ್ಣವಾದಾಗ ದೇವರ ಪೂಜೆ ಮಾಡವದು ಮೂವತ್ತನೇ ತಪ್ಪು.

ಹೂ, ಗಂಧ, ತುಳಸಿಗಳನ್ನು ಏರಿಸದೇ ಧೂಪ, ದೀಪ, ಆರತಿ ಮಾಡುವದು ಮೂವತ್ತೊಂದನೇ ತಪ್ಪು. ನಗಾರಿ ಮೊದಲಾದ ವಾದ್ಯಗಳನ್ನು ಬಾರಿಸದೇ ದೇವಾಲಯದ ಬಾಗಿಲ ತೆಗೆಯುವದು ಮೂವತ್ತೆರಡನೇ ತಪ್ಪು. ಈ ಯಾವ ತಪ್ಪುಗಳನ್ನೂ ಮಾಡದೇ ದೇವರನ್ನು ಪ್ರತಿನಿತ್ಯವೂ ಪೂಜಿಸತಕ್ಕದ್ದು ಭೂದೇವಿ, ಎಲ್ಲ ಮನುಷ್ಯರು ಮಾಡಬಹುದಾದ ದೃಢವ್ರತವನ್ನು ಹೇಳುವೆನು ಕೇಳು-

ಪ್ರತಿಯೊಬ್ಬ ಮನುಷ್ಯನು ಯಥಾಶಕ್ತಿ ಶಾಸ್ತ್ರದಲ್ಲಿ ಹೇಳಿದ ವಿಷಯಗಳನ್ನು ತಿಳಿದು ಕೊಳ್ಳಬೇಕು. ಮತ್ತೂ ತನ್ನ ಜಾತಿ ಆಶ್ರಮಕ್ಕೆ ವಿಹಿತವಾದ ಕರ್ಮಗಳನ್ನು ಮಾಡಬೇಕು. ಎಲ್ಲ ಪ್ರಾಣಿಗಳಲ್ಲಿಯೂ ದಯಾಪರನಾಗಿ ಅಹಿಂಸೆಯು ಮುಖ್ಯ ಧರ್ಮವೆಂದು ಪಾಲಿಸಬೇಕು. ಇಂದ್ರಿಯಗಳನ್ನು ಬಿಗಿಬಿಡಿಯಬೇಕು. ಧರ್ಮ ದೃಷ್ಟಿಯಲ್ಲಿ ಪ್ರಮಾದವನ್ನು ಮಾಡಬಾರದು. ಕೈ ಸಡಿಲು ಬಿಟ್ಟು ದಾನ ಮಾಡಬೇಕು. ತನ್ನ ಹೆಂಡತಿಯಲ್ಲಿ ಮಾತ್ರ ಪ್ರೇಮ ಮಾಡಬೇಕು. ಚಾತುರ್ವರ್ಣ್ಯದವರಿಗೆ ನಾನು ಹೇಳಿದಂತೆ ಸ್ವಧರ್ಮದಲ್ಲಿ ಆಸಕ್ತನಾಗಿ ಸ್ವಕರ್ಮಗಳ ಅನುಷ್ಠಾನವನ್ನು ತಪ್ಪದೇ ಮಾಡಬೇಕು. ಇದೇ ದೃಢವ್ರತವೆನಿಸುವದು. ಇದರಂತೆ ಸ್ತ್ರೀಯರೂ ದೃಢವ್ರತವನ್ನು ಮಾಡಬೇಕು. ಸ್ತ್ರೀಯರಿಗೆ ಮೂರು ಭಕ್ತಿಗಳು ಅತ್ಯಾವಶ್ಯಕವಾಗಿವೆ. ದೇವರಲ್ಲಿ ಭಕ್ತಿ, ಗುರುಗಳಲ್ಲಿ ಶ್ರದ್ಧೆ, ಗಂಡನಲ್ಲಿ ಪ್ರೀತಿ. ಇವು ಮೂರನ್ನು ಸರಿಯಾಗಿ ಮಾಡುತ್ತಲಿರುವ ಪತಿವ್ರತೆಯು ಸಂಸಾರದಲ್ಲಿದ್ದರೂ ಮೋಕ್ಷದ ಮಾರ್ಗದಲ್ಲಿಯೇ ಇದ್ದಂತೆ.

ಹರಿ, ಗುರು, ಪತಿ, ಭಕ್ತಳಾದ ಇಂಥ ನಾರಿಯು ಗಂಡನಿಗಿಂತ ಮೊದಲು ಸತ್ತರೆ ನನ್ನ ಅರ್ಥಾತ್ ವಿಷ್ಣುವಿನಲೋಕದಲ್ಲಿ ಇದ್ದು ಪತಿಯ ದಾರೀ ಕಾಯುತ್ತಾಳೆ. ನನ್ನ ಭಕ್ತನಾದ ಪುರುಷನೇ ಮೊದಲು ಸತ್ತರೆ ಅವನು ವಿಷ್ಣು ಲೋಕದಲ್ಲಿದ್ದು ಅಂಥ ಪತಿವ್ರತೆಯ ಮಾರ್ಗವನ್ನು ನಿರೀಕ್ಷಿಸುತ್ತಾನೆ. ನನ್ನನ್ನು ಬಿಟ್ಟು ಬೇರೆ ದೇವತೆಗಳಲ್ಲಿ ಭಕ್ತಿಮಾಡುವ ಋಷಿಗಳು ನನ್ನನ್ನು ಕಾಣಲಾರರು. ಅಂದ ಬಳಿಕ ಮನುಷ್ಯರ ಪಾಡೇನು? ಅನ್ಯತ್ರ ಭಕ್ತಿ ಮಾಡುವವರು ಮತ್ತಿಷ್ಟೂ ಮೂಢರಾಗಿ ನನ್ನನ್ನು ಎಂದಿಗೂ ಹೊಂದಲಾರರು. ಮೋಕ್ಷವನ್ನು ಬಯಸಿ ನನ್ನನ್ನೇ ಆಶ್ರಯಿಸಿದವರಿಗೆ ಭಾವಸಿದ್ಧಿ ಅದರಂತೆ ಅವರ ಭಕ್ತಿ ಸಿದ್ಧಿಯನ್ನು ನೋಡಿ ನಾನು ಅವರನ್ನು ಉದ್ಧರಿಸುತ್ತೇನೆ.

*ವರಾಹ ಪುರಾಣದಲ್ಲಿ ತೊಂಬತ್ತೊಂಬನೇ ಅಧ್ಯಾಯ ಮುಗಿದುದು.*

—o—

ಪ್ರಾತಃಕಾಲದಲ್ಲಿ, ಬ್ರಾಹ್ಮ ಮುಹೂರ್ತದಲ್ಲಿ ಪ್ರತಿದಿನವೂ ಎದ್ದು ಮುಖ ಪಾದ ತೊಳೆದುಕೊಂಡು ದೇವರ ಎದುರು ದೀಪವನ್ನು ಹಚ್ಚಿ ದೇವರಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಬೇಕು. ಅನಂತರ ತಾನು ವಿಧಿಪೂರ್ವಕವಾಗಿ ಪ್ರಾತರ್ವಿಧಿ ದಂತ ಧಾವನ ಸ್ನಾನಾದಿಗಳನ್ನು ಮುಗಿಸಿ ದೇವರ ತಲೆಯ ಮೇಲಿನ ನಿರ್ಮಾಲ್ಯ ಹೂ ತುಳಸಿ ಗಂಧಾದಿಗಳನ್ನು ತೆಗೆದು ತನ್ನ ತಲೆಯ ಮೇಲೆ ಧರಿಸಬೇಕು.

ಅನಂತರ ದೇವರ ಮುಖ ಮಾರ್ಜನಾದಿ ಕಾರ್ಯಗಳನ್ನು ಮಂತ್ರೋಚ್ಚಾರಣ ಪೂರ್ವಕವಾಗಿ ಮಾಡಿ ಧೂಪ, ದೀಪ, ನೈವೇದ್ಯಗಳನ್ನು ಸಮರ್ಪಿಸಬೇಕು. ಅನಂತರ "ಭಗವನ್, ಭಕ್ತವತ್ಸಲ, ನಮೋ ನಾರಾಯಣಾಯ ತೇ" ಎಂಬ ಮಂತ್ರವನ್ನು ಹೇಳಿ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು. ಹೀಗೆ ಶಾಸ್ತ್ರೋಕ್ತವಾಗಿ ದೇವರ ಪೂಜೆಯನ್ನು ಮಾಡಿ ಸಾಷ್ಟಾಂಗ ನಮಸ್ಕಾರವನ್ನು ಹಾಕಬೇಕು. ದೇವರ ಪೂಜೆಯ ಕಾಲದಲ್ಲಿ ಪಂಚಾಮೃತ ಅಭಿಷೇಕವನ್ನು ಮಾಡಿ ಹೆಸರಿಟ್ಟು ಮೊದಲಾದ ಚೂರ್ಣಗಳಿಂದ ದೇವರ ಶರೀರವನ್ನು ಉಜ್ಜಿ ಸ್ನಾನ ಮಾಡಿಸಿ ಅನಂತರ ಶುದ್ಧೋದಕದಿಂದ ಅಭಿಷೇಕ ಮಾಡಬೇಕು. ಅನಂತರ "ಸರ್ವಗಂಧಾಃ ಸೌಮನಸ್ಯಾಃ" ಎಂಬ ಮಂತ್ರದಿಂದ ಗಂಧವನ್ನು ಏರಿಸಬೇಕು. ಅನಂತರ ಹೂಮಾಲೆಗಳನ್ನು ಹಾಕಿ ಬೊಗಸೆ ತುಂಬ ಬಿಡಿ ಹೂಗಳನ್ನು ನನ್ನ ತಲೆಯ ಮೇಲೆ ಮಂತ್ರೋಚ್ಚಾರಪೂರ್ವಕವಾಗಿ ಹಾಕಬೇಕು. ಅನಂತರ ಧೂಪಾರತಿ ಯನ್ನು ಮಾಡಬೇಕು. ವಸ್ತ್ರವನ್ನು ಸಮರ್ಪಿಸಬೇಕು. ಬಳಿಕ ಪೀಠ ಪೂಜಾದಿಗಳನ್ನು ಮಾಡಿ ನೈವೇದ್ಯಗಳನ್ನು ಸಮರ್ಪಿಸಬೇಕು. ಅನಂತರ ದೇವರಿಗೆ ಆಪೋಶನ ಆಚಮನಾದಿಗಳಿಗೆ ನೀರನ್ನು ಕೊಟ್ಟು ತಾಂಬೂಲವನ್ನು ಸಮರ್ಪಿಸಬೇಕು. ಈ ಎಲ್ಲ ಪೂಜಾ ವಿಧಾನವನ್ನು ಪಂಚರಾತ್ರಾಗಮದಲ್ಲಿ ಹೇಳಿದ ಮಂತ್ರ ತಂತ್ರಾನುಸಾರವಾಗಿ ಮಾಡಬೇಕು.

## ದೇವರಿಗೆ ನೈವೇದ್ಯ ಸಮರ್ಪಣೆ

**ಧರಣಿದೇವಿ :-** "ಮಾಧವ, ನಿನಗೆ ಅರ್ಪಿಸುವ ನೈವೇದ್ಯವು ಯಾವ ಯಾವ ಪದಾರ್ಥಗಳಿಂದ ಒಡಗೂಡಿರಬೇಕು ಅದನ್ನು ತಿಳಿಸು."

ಭೂದೇವಿಯ ಈ ಪ್ರಾರ್ಥನೆಯನ್ನು ಮನ್ನಿಸಿ ವರಾಹಸ್ವಾಮಿಯು ತನಗೆ ಸಮರ್ಪಿಸುವ ನೈವೇದ್ಯ ವಿಷಯವನ್ನು ತಿಳಿಸುತ್ತ ಇಂತು ನುಡಿದನು-

"ಮಾಧವಿ, ಏಳುಬಗೆಯ ಭತ್ತ, ಜೇನುತುಪ್ಪ ಮತ್ತು ಔದುಂಬರ ಹಾಗೂ ಬಗೆ ಬಗೆಯ ಕಾಯಿಪಲ್ಲೆಗಳು ಕರ್ಮಾರ್ಹ ಎಂದು ಹೇಳಿದ್ದರಿಂದ ಅಂಥ ವಸ್ತುಗಳನ್ನು ನನ್ನ ನೈವೇದ್ಯಕ್ಕೆ ಇಡಬೇಕು. ಭತ್ತಗಳಲ್ಲಿ ಧರ್ಮಚಿಲ್ಲಕ, ಶಾಕ ಸುಗಂಧ, ರಕ್ತ ಸಾಲಿಕ, ಮಹಾಶಾಲಿ, ಕುಂಕುಮ, ಮಾಕ್ಷಿಕ, ಆಮೋದ, ಶಿವಸುಂದರಿ, ಶಿರೀಕ, ಕುಲಶಾಲಿ ಮುಂತಾದ ಬೇರೆಬೇರೆ ಭತ್ತಗಳಿಂದ ಮಾಡಿದ ಅಕ್ಕಿಯ ಅನ್ನವು ನನಗೆ ನೈವೇದ್ಯವಿಡಲು ತಕ್ಕದ್ದಾಗಿದೆ. ಇದರಂತೆ ಹೆಸರು, ಉದ್ದು, ಎಳ್ಳು, ನವಣೆ, ಹುರಳಿ, ಗೋಧಿ, ಶಾವಿ ಮುಂತಾದ ಧಾನ್ಯಗಳು ಕರ್ಮಣ್ಯವಾದುದರಿಂದ ನನಗೆ ನಿವೇದಿಸಲು ಯೋಗ್ಯವಾಗಿವೆ.

ಜಿಂಕೆಯ ಮಾಂಸ, ಗಂಡು ಆಡು ಹಾಗೂ ಮೊಲದ ಮಾಂಸವನ್ನು ದೇವರ ನೈವೇದ್ಯಕ್ಕೆ ಉಪಯೋಗಿಸಬಾರದು. ವೇದ ಪಾರಂಗತರಾದ ಬ್ರಾಹ್ಮಣರು ಯಜ್ಞದಲ್ಲಿ ಉಪಯೋಗಿಸುವ ಪಶುಗಳಲ್ಲಿಯ ವಿಶಿಷ್ಟ ಭಾಗವನ್ನು ನನಗೆ ಪಿಷ್ಟರೂಪದಲ್ಲಿ ಮಾಂಸವನ್ನು ಕೂಡ ಮಾಡಬಾರದು. ಸಮರ್ಪಿಸುವದೂ ಉಂಟು. ಪಕ್ಷಿಗಳಲ್ಲಿ ಲಾವಕ, ವಾರ್ತಿಕ, ಕಪಿಂಜಲ ಮುಂತಾದ ಬೇರೇಬೇರೆ ಹಕ್ಕಿಗಳ ದೇವರಿಗೆ ಸರ್ವಥಾ ಸಮರ್ಪಣ ಮಾಡಬಾರದು. ಎಮ್ಮೆಹಾಲು, ಮೊಸರು, ತುಪ್ಪಗಳನ್ನು ನನಗೆ ಸಮರ್ಪಿಸಬಾರದು. ಒಳ್ಳೇ ಸಿದ್ಧಿಯನ್ನು ಬಯಸುವವರು ಶಾಸ್ತ್ರದಲ್ಲಿ ಅನಿಷಿದ್ಧವಾದ ಮತ್ತು ಮಂಗಳಕರವಾದ ಮತ್ತು ಭಕ್ತರಿಗೆ ಸುಖವನ್ನುಂಟು ಮಾಡುವ ಒಳ್ಳೇ ಪದಾರ್ಥಗಳನ್ನು ಮಾತ್ರ ನನಗೆ ನಿವೇದನ ಮಾಡಿ ನನ್ನ ಪೂಜೆಯನ್ನು ಮಾಡಬೇಕು. ಅಂಥವರು ಪರಮ ಸಿದ್ಧಿಯನ್ನು ಪಡೆಯುವರು. ಕೆಲವು ಪುರಾಣ ಸ್ಮೃತಿ ಗ್ರಂಥಗಳಲ್ಲಿ ದೇವರಿಗೆ ಕೆಲವೊಂದು ಮೃಗ ಪಕ್ಷಿಗಳ ಮಾಂಸವನ್ನು ಸಮರ್ಪಿಸಬಹುದೆಂದು ಹೇಳಿದೆ. ಅದು ಧರ್ಮ ವಿರುದ್ಧವಾದುದರಿಂದ ಪ್ರಕ್ಷಿಪ್ತವಿರಬಹುದು. ಅಥವಾ ಯುಗಾಂತರ ಕಲ್ಪಾಂತರ ವಿಷಯವಿರಬಹುದು. ಅಥವಾ ಅಜ್ಞ ಜನರ ಮೋಹನಾರ್ಥವಾಗಿ ಹೇಳಿದ ತಾಮಸ ಭಾಗವಾದರೂ ಆಗಿರಬಹುದು. ವಸ್ತುತಸ್ತು ಈ ಅಧ್ಯಾಯದ ಉಪಾಂತ್ಯ ಶ್ಲೋಕದಲ್ಲಿ ಹೇಳಿದಂತೆ ದೇವರಿಗೆ ಶಾಸ್ತ್ರದಲ್ಲಿ ನಿಷಿದ್ಧವಾಗದ ಸಾತ್ವಿಕ ದ್ರವ್ಯಗಳನ್ನು ಮಾತ್ರ ನೈವೇದ್ಯ ಸಮರ್ಪಿಸಬೇಕು. ಎಮ್ಮೆಯ ಹಾಲು ಮೊಸರುಗಳನ್ನು ಕೂಡ ಸಮರ್ಪಿಸಬಾರದು. ಹೇಳುವ ಶಾಸ್ತ್ರಕಾರರು ಮಾಂಸವನ್ನು ಭಗವಂತನಿಗೆ ನಿವೇದಿಸಬೇಕೆಂದು ಹೇಗೆ ಹೇಳುವರು ?)

## ದೇವವಂದನೆ ಮತ್ತು ಸಂಧ್ಯಾವಂದನೆ

ಭೂದೇವಿಯೇ, ಸಂಸಾರದಿಂದ ಮಾನವರನ್ನು ಪಾರು ಮಾಡುವ ಪರಮ ರಹಸ್ಯವಾದ ಧರ್ಮ ವಿಚಾರಗಳನ್ನು ನಿನಗೆ ತಿಳಿಸುತ್ತೇನೆ ಕೇಳು. ಕರ್ಮ ನಿಷ್ಠರಾದ ಆಸ್ತಿಕರು ಕದನ್ನಕ್ಕೆ ಆಶೆ ಮಾಡದೆ ಜಿತೇಂದ್ರಿಯರಾಗಿ ಪ್ರತಿ ನಿತ್ಯವೂ ಸ್ನಾನ ಮಾಡಿ ನನ್ನನ್ನು ಪೂಜಿಸುವರು. ಭದ್ರೇ, ನನ್ನ ರೂಪವು ಸತ್ಯ ಸನಾತನವಾಗಿದೆ. ಈ ಜಗತ್ತಿನ ಕೆಳಗೆ ಮೇಲೆ ಅಕ್ಕಪಕ್ಕ ದಿಕ್ಕುದಿಕ್ಕು ಎಲ್ಲ ಕಡೆಯಲ್ಲಿಯೂ ನಾನೇ ವ್ಯಾಪಿಸಿಕೊಂಡು ಇರುತ್ತೇನೆ. ಆದುದರಿಂದ ನನ್ನ ಭಕ್ತರಾದವರು ಆ ಎಲ್ಲ ದಶದಿಕ್ಕುಗಳನ್ನೂ ಆ ದಿಕ್ಕಿನಲ್ಲಿರುವ ಭಗವದ್ರೂಪಗಳನ್ನೂ ವಂದನೆ ಮಾಡಬೇಕು. ಮತ್ತು ನನ್ನ ಭಕ್ತರಾದ ಮಹಾ ಪುರುಷರನ್ನೂ ಕೂಡ ವಂದಿಸಬೇಕು. ಪೂರ್ವಕ್ಕೆ ಮುಖ ಮಾಡಿ ಕುಳಿತು ಆಚಮನ ಪ್ರಾಣಾಯಾಮಾದಿಗಳನ್ನು ಮಾಡಿ ಬೊಗಸೆತುಂಬ ನೀರನ್ನು ಹಿಡಿದುಕೊಂಡು 'ಓಂ ನಮೋ ನಾರಾಯಣಾಯ' ಎಂದು ಉಚ್ಚರಿಸಿ

''ಯಜಾಮಹೇ ಧರ್ಮ ಪರಾಯಣೋದ್ಭವಂ ।
ನಾರಾಯಣಂ ಸರ್ವಲೋಕ ಪ್ರಧಾನಂ ॥
ಈಶಾನಮಾದ್ಯಂ ಪುರುಷಂ ಪುರಾಣಂ ।
ಸಂಸಾರ ಮೋಕ್ಷಾಯ ಕೃಪಾಕರಂ ತಂ ॥''

ಎಂಬ ಮಂತ್ರದಿಂದ ಶ್ರೀ ಹರಿಗೆ ಅರ್ಘ್ಯವನ್ನು ಕೊಡಬೇಕು. ಬಳಿಕ ಪಶ್ಚಿಮಾಭಿಮುಖನಾಗಿ "ಓಂ ನಮೋ ಭಗವತೇ ವಾಸುದೇವಾಯ" ಎಂಬ ಮಂತ್ರವನ್ನು ಹೇಳಿ ಅರ್ಘ್ಯವನ್ನು ಕೊಡಬೇಕು. ಅನಂತರ ಉತ್ತರಕ್ಕೆ ಮುಖ ಮಾಡಿ ' ಓಂ ನಮೋ ನಾರಾಯಣಾಯ' ಎಂದು ಹೇಳಿ ಒಂದು ಬೊಗಸೆ ನೀರನ್ನು ಅರ್ಘ್ಯ ಕೊಡಬೇಕು. ಕೊನೆಗೆ ದಕ್ಷಿಣಕ್ಕೆ ತಿರುಗಿ "ಓಂ ನಮಃ ಪುರುಷೋತ್ತಮಾಯ" ಎಂದು ಹೇಳಿ ಅರ್ಘ್ಯವನ್ನು ನೀಡಬೇಕು. ಹೀಗೆ ಅರ್ಘ್ಯಪ್ರದಾನ ಹಾಗೂ ದಿಗುಪಸ್ಥಾನಗಳನ್ನು ಮಾಡಿ ಮುಗಿಸಿ ಜಿತೇಂದ್ರಿಯನಾಗಿ ದೇವರನ್ನು ಏಕಚಿತ್ತದಿಂದ ಧ್ಯಾನಿಸುತ್ತ

"ಯಜಾಮಹೇ ಸೋಮಪಂ ಭವಂತಂ ತೇ ।
ಸೋಮಾರ್ಕನೇತ್ರಂ ಶತಪತ್ರನೇತ್ರಂ ॥

ಜಗತ್ಪ್ರಧಾನಂ ನನು ಲೋಕನಾಥಂ ।
ಮೃತ್ಯುತ್ರಿಸಂಸಾರ ವಿಮೋಕ್ಷಣಂ ಚ ।"

ಎಂಬ ಮಂತ್ರದಿಂದ ನನ್ನನ್ನು ಸ್ತೋತ್ರ ಮಾಡಬೇಕು.

ಹೀಗೆ ಪ್ರತಿ ದಿನ ಮೂರೂ ಸಂಧಿಕಾಲ- ಪ್ರಾತಃಕಾಲ, ಮಧ್ಯಾಹ್ನಕಾಲ ಹಾಗೂ ಸಾಯಂಕಾಲ ಮೂರು ಹೊತ್ತು ಈ ಸಂಧ್ಯಾವಂದನ ಕಾರ್ಯವನ್ನು ವಿಧಿಪೂರ್ವಕವಾಗಿ ಮಾಡಬೇಕು. ಇದರಿಂದ ವಿಷ್ಣುಲೋಕ ಪ್ರಾಪ್ತಿಯಾಗುವದು.

*ವರಾಹ ಪುರಾಣದಲ್ಲಿ ನೂರನೇ ಅಧ್ಯಾಯ ಮುಗಿದುದು.*

—o—

## ಅಧ್ಯಾಯ - ೧೦೧

ವರಾಹ :- ವಸುಂಧರೆ, ನಿನಗೆ ಈಗ ಸರ್ವಧರ್ಮಗಳ ನಿಶ್ಚಿತ ಸ್ವರೂಪವನ್ನು ತಿಳಿಸುತ್ತೇನೆ. ಮಾನವರು ನಾನು ಹೇಳಿದಂತೆ ಆಚರಿಸಿದರೆ ತಾಯಿಯ ಗರ್ಭದ ಕೋಣೆಯನ್ನು ಮತ್ತೆ ಕಾಣುವ ಪ್ರಸಂಗವೇ ಬರುವದಿಲ್ಲ. ಇಂಥ ಸರ್ವ ಧರ್ಮ ನಿರ್ಣಯವನ್ನು ಆಲಿಸು. ಶಾಸ್ತ್ರ ವಿಹಿತವಾದ ಬಗೆ ಬಗೆಯ ಧರ್ಮಕರ್ಮಗಳನ್ನು ಪರಿಶುದ್ಧವಾದ ಅಂತಃಕರಣದಿಂದ ತಪ್ಪದೇ ಆಚರಿಸಬೇಕು. ಇಷ್ಟು ಧರ್ಮಾಚರಣೆಯನ್ನು ಮಾಡಿದರೂ ಆತ್ಮ ಪ್ರಶಂಸೆಯನ್ನು ಮಾತ್ರ ಎಂದೂ ಮಾಡಿಕೊಳ್ಳಬಾರದು. ಬಿಸಿಲು, ಚಳಿ, ಮಳೆ, ಗಾಳಿ, ಹಸಿವೆ, ಬಾಯಾರಿಕೆ, ಸುಖ, ದುಃಖ, ಎಲ್ಲವನ್ನೂ ಸಹನೆ ಮಾಡಿಕೊಂಡು ದೇವನನ್ನು ಪೂಜಿಸುವಲ್ಲಿ ಆಸಕ್ತಿಯನ್ನು ತಳೆಯಬೇಕು. ಬಡತನವಿದ್ದರೂ ಆಲಸ್ಯವಿರಬಾರದು. ಸತ್ಯವನ್ನೂ ನುಡಿದರೂ ಅಸೂಯೆ ಇರಬಾರದು. ಪರಸ್ತ್ರೀಯರನ್ನು ತೊರೆಯಬೇಕು. ತನ್ನ ಮಡದಿಯೊಡನೆ ಬೆರೆಯಬೇಕು. ಸತ್ಯವನ್ನು ನುಡಿಯಬೇಕು. ಶುದ್ಧವಾಗಿ ನಡೆಯಬೇಕು. ಭಗವದ್ ಭಕ್ತರನ್ನು ಪ್ರೀತಿಸಬೇಕು. ಬ್ರಾಹ್ಮಣರನ್ನು ಸೇವಿಸಬೇಕು. ಯಾವಾಗಲೂ ಸವಿಮಾತನ್ನು ಆಡಬೇಕು. ಹರಿ ಪ್ರೀತಿ ಕರವಾದ ಕಾರ್ಯಗಳನ್ನೇ ಮಾಡಬೇಕು. ಈ ಎಲ್ಲ ನನ್ನ ಆದೇಶವನ್ನು ಪಾಲಿಸುವ ಮನುಷ್ಯನು ತಾಯಿಯ ಹೊಟ್ಟೆಯಿಂದ ಮತ್ತೊಮ್ಮೆ ಹುಟ್ಟುವದಿಲ್ಲ. ಕೆಟ್ಟ ಜನ್ಮವನ್ನು ಹೊಂದುವುದಿಲ್ಲ. ಬೇಗನೇ ವಿಷ್ಣುಲೋಕವನ್ನು ಮುಟ್ಟಿ ಮೆರೆಯುವನು. ವಸುಂಧರೆಯೇ, ಹೀನ ಜನ್ಮಗಳಲ್ಲಿ ಹುಟ್ಟುವ ಕೆಟ್ಟ ಪ್ರಸಂಗವು ಬಾರದಂತಿರಬೇಕಾದರೆ ನಾನು ಹೇಳಿದಂತೆ ನಿತ್ಯ ಕರ್ಮಾನುಷ್ಠಾನವನ್ನು ಮಾಡಬೇಕು. ಅದರ ರೀತಿಯನ್ನು ನಿನಗೆ ತಿಳಿಸುತ್ತೇನೆ ಕೇಳು -

ಕೀಳು ಜನ್ಮ, ಹಾಳುಜಾತಿಗಳಲ್ಲಿ ಮುಂದೆಂದೂ ತಾನು ಹುಟ್ಟಬಾರದೆಂದಿದ್ದರೆ ಮಾನವನು ಮೊಟ್ಟ ಮೊದಲು ಪ್ರಾಣಿ ಹಿಂಸೆಯನ್ನು ಸಂಪೂರ್ಣವಾಗಿ ಬಿಟ್ಟುಬಿಡಬೇಕು. ಪರೋಪಕಾರ ಹಾಗೂ ಸಮದೃಷ್ಟಿ, ಶುಚಿರ್ಭೂತತನ ಇವು ಅವನ ಸ್ವಭಾವ ಧರ್ಮಗಳಾಗಬೇಕು. ಹೊನ್ನು ಮಣ್ಣು ಸಮ ಎಂದು ತಿಳಿಯಬೇಕು. ಕಲ್ಲು ಮತ್ತು ಕಾಂಚನ ಎರಡೂ ಒಂದು ಎಂದು ಬಗೆಯಬೇಕು. ಬಾಲ್ಯದಿಂದಲೇ ಶಾಂತಿ ದಾಂತಿ ಕ್ಷಾಂತಿ ಎಂಬ ಗುಣಗಳನ್ನು ಬೆಳಸಿಕೊಳ್ಳಬೇಕು.

ಸಜ್ಜನರು ಮುಖ್ಯವಾಗಿ ಎರಡು ಮಾತುಗಳನ್ನು ಲಕ್ಷ್ಯದಲ್ಲಿಡಬೇಕು. ತಾನು ಮಾಡಿದ ಉಪಕಾರವನ್ನೂ ಪರರು ತನಗೆ ಮಾಡಿದ ಅಪಕಾರವನ್ನೂ ಎಂದಿಗೂ ನೆನೆಯಬಾರದು. ಅವರು ನೆನೆಯಬೇಕಾದದ್ದು ತನ್ನ ಕರ್ತವ್ಯ ಕರ್ಮ ಮಾತ್ರ. ಹುಸಿ ನುಡಿಯಬಾರದು. ಸತ್ಯವನ್ನು ಬಿಡಬಾರದು. ಯಾರನ್ನೂ ಅವರ ಪರೋಕ್ಷದಲ್ಲಿ ನಿಂದಿಸಬಾರದು. ತನ್ನ ಉದ್ಯೋಗವನ್ನು ಬಿಡಬಾರದು. ಋತು ಕಾಲದಲ್ಲಿ ಮಕ್ಕಳ ಸಲುವಾಗಿ ತನ್ನ ಮಡದಿಯೊಡನೆ ಕೂಡಬೇಕು. ನನ್ನ ಆಜ್ಞಾರೂಪವಾದ ಶೃತಿ ಸ್ಮೃತಿಗಳಲ್ಲಿ ಹೇಳಿದ ಕರ್ಮಾನುಷ್ಠಾನವನ್ನು ತಪ್ಪದೇ ಮಾಡಬೇಕು.

ಇಂಥ ಮನುಷ್ಯರು ಹೀನ ಜನ್ಮ ಜಾತಿಗಳಲ್ಲಿ ಎಂದೂ ಹುಟ್ಟದೆ ನನ್ನ ಲೋಕವನ್ನು ಹೊಂದುವರು. ಭೂದೇವಿ, ನಿನಗೆ ಇನ್ನೊಂದು ವಿಚಾರವನ್ನು ತಿಳಿಸುತ್ತೇನೆ ಆಲಿಸು

ಮಾನವರ ಧರ್ಮ ಆಚಾರ ವಿಚಾರಗಳನ್ನು ತಿದ್ದುವದಕ್ಕಾಗಿ ಮನುಸ್ಮೃತಿ ಮೊದಲಾದ ಅನೇಕ ಗ್ರಂಥಗಳನ್ನು ವೈವಸ್ವತಮನುವೇ ಮೊದಲಾದ ಅನೇಕ ಋಷಿಪುಂಗವರು ಬರೆದು ಇಟ್ಟಿದ್ದಾರೆ. ಬೃಹಸ್ಪತಿ, ಶುಕ್ರ, ಗೌತಮ, ಸೋಮ, ರುದ್ರ, ಶಂಖ, ಲಿಖಿತ, ಕಶ್ಯಪ, ಧರ್ಮ, ಅಗ್ನಿ, ವಾಯು, ಯಮ, ಇಂದ್ರ, ವರುಣ, ಕುಬೇರ, ಶಾಂಡಿಲ್ಯ, ಪುಲಸ್ತ್ಯ, ಆದಿತ್ಯ ಮುಂತಾದವರು ಧರ್ಮದ ರಹಸ್ಯವನ್ನು ಬಗೆಬಗೆಯ ರೀತಿಗಳಲ್ಲಿ ಅರಿತುಕೊಂಡಿದ್ದಾರೆ. ಆಪಾತತಃ ನೋಡಲು ಈ ಎಲ್ಲ ಮಹಾಮುನಿಗಳು ರಚಿಸಿದ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಬೇರೆ ಬೇರೆ ಅಭಿಪ್ರಾಯಗಳೇ ಕಂಡು ಬರುತ್ತವೆ. ಆದರೆ ನಿಜವಾದ ಧರ್ಮಜ್ಞಾನಿಯು ಅವೆಲ್ಲವುಗಳನ್ನು ಪರಾಮರ್ಶ ಮಾಡಿ ಮೀಮಾಂಸಾ ಕ್ರಮದಿಂದ ಸರಿಯಾಗಿ ಧರ್ಮ ನಿರ್ಣಯವನ್ನು ಮಾಡಿಕೊಂಡು ಸ್ವೋಚಿತವಾದ ಕರ್ಮಾನುಷ್ಠಾನವನ್ನು ತಪ್ಪದೇ ಮಾಡಬೇಕು.

ಧರ್ಮ ಮಾರ್ಗದಲ್ಲಿದ್ದ ಮನುಷ್ಯನು ಬೇರೆಯವರ ಯಾವುದೇ ಧರ್ಮ ಕಾರ್ಯವನ್ನು ನಿಂದಿಸಬಾರದು. ದೇವತಾಕಾರ್ಯಗಳನ್ನು ಯಾವಾಗಲೂ ಮಾಡುತ್ತಲೇ ಇರಬೇಕು. ಅದರಿಂದ ಮಾನವನು ಯಾವದೇ ನಿಂದ್ಯ ಯೋನಿಯಲ್ಲಿ ಹುಟ್ಟದೆ ವಂದ್ಯವಾದ ವಿಷ್ಣು ಲೋಕವನ್ನು ಕುರಿತು ಪ್ರಯಾಣ ಮಾಡುತ್ತಾನೆ. ಸಂಸಾರ ಸಾಗರವನ್ನು ದಾಟುವ ಮತ್ತೊಂದು ವಿಧಾನವನ್ನು ಹೇಳುತ್ತೇನೆ ಕೇಳು.

ಮನುಷ್ಯರು ಮೊದಲು ಇಂದ್ರಿಯಗಳನ್ನು ಗೆಲ್ಲಬೇಕು. ಕೋಪವನ್ನು ನಿಯಂತ್ರಿಸಬೇಕು. ಲೋಭ ಮೋಹಗಳನ್ನು ವರ್ಜಿಸಬೇಕು. ಪರೋಪಕಾರವನ್ನು ಮಾಡಬೇಕು. ದೇವತಾ, ಅತಿಥಿ ಗುರು ಹಾಗೂ ಹಿರಿಯರನ್ನು ಸೇವಿಸಬೇಕು. ಯಾರನ್ನೂ ಹಿಂಸಿಸಬಾರದು. ಶೆರೆಯನ್ನು ಕುಡಿಯಬಾರದು. ಮಾಂಸವನ್ನು ಮುಟ್ಟಬಾರದು. ಪರಸ್ತ್ರೀಯರನ್ನು ಮನಸ್ಸಿನಿಂದ ಕೂಡ ನೆನೆಯಬಾರದು. ಮುದುಕರನ್ನು ಪ್ರೀತಿಯಿಂದ ಸಂಬಾಳಿಸಬೇಕು.

ಬ್ರಾಹ್ಮಣರಿಗೆ ಕಪಿಲಾಧೇನುವನ್ನು ದಾನಕೊಡಬೇಕು. ಕಿರಿಯರೆಲ್ಲರನ್ನೂ ಮಕ್ಕಳಂತೆ ಪ್ರೀತಿಯಿಂದ ನೋಡಬೇಕು. ಸಿಟ್ಟಿಗೆದ್ದವರನ್ನು ಮತ್ತಿಷ್ಟು ರೇಗಿಸದೇ ರಂಬಿಸಬೇಕು. ಸೇವೆಯನ್ನು ಮಾಡಬೇಕು. ಮದುವೆಯಾಗದ ಹೆಣ್ಣು ಮಕ್ಕಳನ್ನು ನಿಂದಿಸಕೂಡದು. ಮಕ್ಕಳೊಡನೆ ಕಲಹವನ್ನು ಮಾಡಕೂಡದು. ಬೆಂಕಿಯನ್ನು ಕಾಲಿನಿಂದ ಒದೆಯ ಕೂಡದು. ನದೀ ಸರೋವರಗಳ ನೀರಿನಲ್ಲಿ ಮಲ ಮೂತ್ರ ವಿಸರ್ಜನೆಯನ್ನು ಮಾಡಬಾರದು. ಗುರುಗಳನ್ನು ನಿಂದಿಸಕೂಡದು. ವ್ಯರ್ಥ ಮಾತುಗಳನ್ನು ಆಡಕೂಡದು. ಹೀಗೆ ಧರ್ಮಮಾರ್ಗದಲ್ಲಿದ್ದು ನಿತ್ಯವೂ ನನ್ನನ್ನು ಧ್ಯಾನಮಾಡುತ್ತಲಿದ್ದರೆ ಆ ಮನುಷ್ಯನು ಎಂದೂ ಕುಚ್ಛಿತ ಜನ್ಮವನ್ನು ಹೊಂದದೇ ಉಚ್ಚಸ್ಥಾನವಾದ ವಿಷ್ಣುಲೋಕವನ್ನು ಹೊಂದುವನು.

*ವರಾಹ ಪುರಾಣದಲ್ಲಿ ನೂರ ಒಂದನೇ ಅಧ್ಯಾಯ ಮುಗಿದುದು.*

—o—

ವರಾಹ :- ಧರಾದೇವಿ, ಕೋಕಾಮುಖ ಕ್ಷೇತ್ರವು ಪರಮ ಪುಣ್ಯಕರವಾಗಿದೆ. ಆ ಕೋಕಾ ಮುಖ ಕ್ಷೇತ್ರದಲ್ಲಿ ದೇಹತ್ಯಾಗವನ್ನು ಮಾಡಿದ ಮಾನವರೂ ಪಶು ಪಕ್ಷಿಗಳೂ ಕ್ರಿಮಿ ಕೀಟಗಳೂ ನನ್ನ ವಿಶೇಷ ಅನುಗ್ರಹವನ್ನು ಪಡೆಯುವರು.

ವರಾಹ ದೇವರ ಈ ಮಾತನ್ನು ಕೇಳಿ ಭೂತಧಾತ್ರಿಯು ವಿನಯದಿಂದ ನುಡಿದಳು. -

''ಭಗವನ್, ನೀನು ಕಾಶೀ, ಕೇದಾರ, ಜಾಲೇಶ್ವರ, ಗೋಕರ್ಣ ಮುಂತಾದ ಭರತ ಖಂಡದಲ್ಲಿಯ ಅನೇಕ ಸುಪ್ರಸಿದ್ಧ ಕ್ಷೇತ್ರಗಳನ್ನು ಬಿಟ್ಟು ಈ ಕೋಕಾಮುಖ ಕ್ಷೇತ್ರವನ್ನು ಮಾತ್ರ ಅಷ್ಟೇಕೆ ಪ್ರಶಂಸಿಸುವೆ ? ಅದರಲ್ಲಿ ಅಂತಹದೇನು ವೈಶಿಷ್ಟ್ಯವಿದೆ ? ದೇವಾ, ಚಕ್ರಕ್ಷೇತ್ರ, ಭದ್ರಕರ್ಣಹ್ರದ, ನೈಮಿಷ, ದ್ವಿರುಂಡ ನಗರ, ಮುಕುಟಿ ಮಂಡಲೇಶ್ವರ, ದೇವದಾರು ವನ, ಮಹಾಬಲದುರ್ಗ, ಜಾಲ್ಮೇಶ್ವರ ಕ್ಷೇತ್ರ ಮುಂತಾದ ಯಾವ ಪ್ರಸಿದ್ಧ ಕ್ಷೇತ್ರವನ್ನೂ ನೀನು ಬಣ್ಣಿಸದೇ ಈ ಕೋಕಾಮುಖ ಕ್ಷೇತ್ರವನ್ನೇ ನೀನು ಏಕೆ ವರ್ಣಿಸಿರುವೆ ?''

ಭೂಮೀ ದೇವಿಯ ಈ ಪ್ರಶ್ನೆಯನ್ನು ಕೇಳಿ ವರಾಹ ಸ್ವಾಮಿಯು ನಕ್ಕು ನುಡಿದನು.

''ಸುಂದರಿ, ನೀನು ಹೇಳಿದ ಕಾಶಿ, ಕೇದಾರ, ಗೋಕರ್ಣ ಮುಂತಾದ ಕ್ಷೇತ್ರಗಳೆಲ್ಲ ಶೈವ ಕ್ಷೇತ್ರಗಳಾಗಿದ್ದು ಪುಣ್ಯಕ್ಷೇತ್ರಗಳೆಂದು ಪ್ರಸಿದ್ಧವಾಗಿವೆ. ಆ ಎಲ್ಲ ಪಾಶುಪತ ಕ್ಷೇತ್ರಗಳಿಗಿಂತ ಸಾಕ್ಷಾತ್ ಭಗವತ್ ಕ್ಷೇತ್ರವೆನಿಸಿದ ಈ ಕೋಕಾಮುಖ ಕ್ಷೇತ್ರವು ವೈಶಿಷ್ಟ್ಯಪೂರ್ಣವಾಗಿರುತ್ತದೆ. ನನ್ನ ಕ್ಷೇತ್ರವಾದ ಈ ಕೋಕಾಮುಖದಲ್ಲಿ ನಡೆದ ವೈಶಿಷ್ಟ್ಯಪೂರ್ಣವಾದ ಘಟನೆಯನ್ನು ಹೇಳುತ್ತೇನೆ ಕೇಳು. -

''ರಮಣೀಯವಾದ ಆ ಕೋಕ ಮಂಡಲದಲ್ಲಿ ಒಂದು ತಿಳಿನೀರಿನ ಕೊಳವು ಹೊಳೆಯುತ್ತಿದೆ. ಆ ಪುಷ್ಕರಣಿಯಲ್ಲಿ ನೀರು ಆಳವಿರದಿದ್ದರೂ ಮೀನುಗಳು ಮಾತ್ರ ಹೇರಳವಾಗಿರುತ್ತವೆ. ಆ ಕೊಳದ ಸ್ಫಟಿಕ ನಿರ್ಮಲವಾದ ಜಲದಲ್ಲಿ ಓಲಾಡಿ ತೇಲಾಡುವ ಮೀನಗಳನ್ನು ಕಂಡು ಹಿಂದೊಮ್ಮೆ ಓರ್ವ ಬೇಡನು ಜಾಲವನ್ನು ತೆಗೆದುಕೊಂಡು ಬಂದನು. ಗಾಳ ಹಾಕಿ ಅವನು ಒಂದು ಮೀನವನ್ನು ಹಿಡಿದುಕೊಂಡನು. ಆದರೆ ಚಪಲವಾದ ಆ ಮೀನು ಆ ಬೇಡನ ಕೈಯಿಂದ ನುಣುಚಿಕೊಂಡು ಕೆಳಗೆ ಬಿದ್ದಿತು.

ಇದನ್ನು ಮುಗಿಲ ಮೇಲೆ ಹಾರಾಡುತ್ತಿದ್ದ ಒಂದು ಗಿಡಗವು ಕಂಡು ನೆಲಕ್ಕೆ ಎರಗಿತು. ಬೇಡನ ಕೈಯಿಂದ ನುಣುಚಿಕೊಂಡು ಕೆಳಗೆ ಬಿದ್ದ ಆ ಮೀನನ್ನು ಕಚ್ಚಿಕೊಂಡು ಬಾಯಲ್ಲಿ ಹಿಡಿದು ಗಕ್ಕನೆ ಗಗನಕ್ಕೆ ಹಾರಿತು. ಆದರೆ ಭಾರವಾದ ಆ ಮೀನನ್ನು ದೂರ ಹೊತ್ತುಹೋಗಲು ಆಗದೆ ಆ ಗಿಡಗದ ಬಾಯಿಂದ ಅದು ಕೆಳಗೆ ಬಿದ್ದಿತು. ಸುದೈವದಿಂದ ಆ ಮೀನು ಬಿದ್ದ ಸ್ಥಳವು ಕೋಕಾಮುಖ ಕ್ಷೇತ್ರವೇ ಆಗಿದ್ದಿತು. ಆಕಸ್ಮಾತ್ತಾಗಿ ಗಿಡಗದ ಬಾಯಿಂದ ಬಿದ್ದು ಕೋಕಾಮುಖ ಕ್ಷೇತ್ರದಲ್ಲಿ ಪ್ರಾಣಬಿಟ್ಟ ಆ ಮೀನು ಆ ಕ್ಷೇತ್ರದ ಪ್ರಭಾವದಿಂದ ಶ್ರೀಹರಿಯ ಅನುಗ್ರಹದಿಂದ ದೊಡ್ಡ ರಾಜಕುಮಾರನಾಗಿ ಜನಿಸಿತು. ರೂಪ, ಗುಣ, ವಿದ್ಯೆ, ಕುಲ, ಎಲ್ಲದರಲ್ಲಿಯೂ ಆ ರಾಜಕುಮಾರನು ಆದರ್ಶನಾಗಿದ್ದನು.

ಆ ರಾಜಕುಮಾರನು ಪ್ರಾಯಪ್ರಬುದ್ಧನಾದಾಗ ಮೀನವನ್ನು ಹಿಡಿದಿದ್ದ ಅದೇ ಬೇಡನು ಹೆಂಡತಿಯೊಡನೆ ಅಲ್ಲಿಗೆ ಬಂದನು. ಆ ಬೇಡತಿಯು ಮಾರಾಟಕ್ಕಾಗಿ ಮಾಂಸವನ್ನು ಹೊತ್ತುಕೊಂಡು ನಡೆದಿದ್ದಳು. ಇದನ್ನು ಕಂಡು ಮುಗಿಲಿನಲ್ಲಿ ಹಾರುವ ಭರತ ಎಂಬ ಹೆಣ್ಣು ಹಕ್ಕಿಯು ಆಶೆಯಿಂದ ಬೇಡತಿಯ ಕೈಯಲ್ಲಿಯ ಮಾಂಸವನ್ನು ಕಿತ್ತುಕೊಳ್ಳಬೇಕೆಂದು ಧಾವಿಸಿ ಬರಹತ್ತಿತು. ಅವಳು ಅದನ್ನು ಕೈಮಾಡಿ, ಕಲ್ಲು ಬೀಸಿ, ಹೆದರಿಸಿ, ಹಾರಿಸಿದರೂ ಮಾಂಸ ಲುಬ್ಧವಾದ ಆ ಪಕ್ಷಿಯು ಮತ್ತೆ ಮತ್ತೆ ಆ ಮಾಂಸದ ತುಣುಕಿನ ಮೇಲೆ ಎರಗಹತ್ತಿತು. ಕೊನೆಗೆ ಒಂದು ಮಾಂಸದ ಕರಣೆಯನ್ನು ಕಚ್ಚಿಕೊಂಡು ನಡೆದಿತು.

ಇದನ್ನು ಕಂಡು ಅವಳ ಹಿಂದಿನಿಂದ ಬರುವ ಬೇಡನು ಗುರಿಇಟ್ಟು ಒಂದು ಬಾಣಬಿಟ್ಟು ಆ ಹಕ್ಕಿಯನ್ನು ಹೊಡೆದನು. ತಕ್ಷಣವೇ ಆ ಹಕ್ಕಿಯು ಕೋಕಾಮುಖ ಕ್ಷೇತ್ರದಲ್ಲಿ ದೇವರ ಬಳಿಯಲ್ಲಿ ಬಿದ್ದು ಪ್ರಾಣ ಬಿಟ್ಟಿತು. ಭಗವಂತನ ಪಾದ ಸನ್ನಿಧಿಯಲ್ಲಿ ಇಂಥ ದಿವ್ಯ ಕ್ಷೇತ್ರದಲ್ಲಿ ಪ್ರಾಣಾರ್ಪಣೆಯನ್ನು ಮಾಡಿದ ಬಳಿಕ ಕೇಳುವದೇನು!

ಆ ಪಕ್ಷಿಯು ಮನೋಹರವಾದ ಚಂದ್ರಪುರದಲ್ಲಿ ಭಾಗ್ಯವನ್ನು ಬೆನ್ನಿಗೆ ಹಾಕಿಕೊಂಡು ಓರ್ವ ರಾಜಕುಮಾರಿಯಾಗಿ ಜನಿಸಿತು. ಸೌಂದರ್ಯ, ಸದ್ಗುಣ, ಕಲೆ, ಕಳೆ, ಕಾಂತಿ, ವಿದ್ಯೆ, ಚಾತುರ್ಯ ಮುಂತಾದ ಗುಣಗಳೆಲ್ಲವೂ ಅವಳಲ್ಲಿ ಮೇಳವಿಸಿದ್ದವು. ಅರವತ್ನಾಲ್ಕು ಕಲೆಗಳಲ್ಲಿಯೂ ಅವಳು ಪಾರಂಗತಳಾಗಿದ್ದಳು. ಪ್ರಾಯದ ಚೈತ್ರ ಚುಂಬನಕ್ಕೆ ಅವಳ ದೇಹದಲ್ಲಿ ಸೌಂದರ್ಯದ ಮಂದಾರವು ದಳದಳವಾಗಿ ಅರಳಿ ಸೌಗಂಧವನ್ನು ಸೂಸುತ್ತಿತ್ತು. ಇಷ್ಟೆಲ್ಲ ಅಪರೂಪ ರೂಪ ಗುಣ ಮಂಡಿತಳಾಗಿದ್ದರೂ ಆ ರಾಜಕುಮಾರಿಯು ಗಂಡಸರನ್ನು ಕಂಡರೆ ಜುಗುಪ್ಸೆ ಪಡುತ್ತಿದ್ದಳು.

ಈ ಪ್ರಪಂಚದಲ್ಲಿಯ ಯಾವ ಗಂಡಸರಲ್ಲಿಯೂ ತನ್ನ ರೂಪಕ್ಕೆ ಅನುರೂಪವಾದ ಸೌಂದರ್ಯವಿಲ್ಲ. ತನ್ನ ಗುಣಕ್ಕೆ ಅನುಗುಣವಾದ ಸದ್ಗುಣಗಳಿಲ್ಲ. ತನ್ನಂತೆ ಕಲಾಕೌಶಲ್ಯಗಳಿಲ್ಲ. ವಿದ್ಯಾಬುದ್ಧಿಗಳಿಲ್ಲ. ತಾನು ಅಪೇಕ್ಷಿಸಿದಷ್ಟು ಶೌರ್ಯವಿಲ್ಲ. ಬಯಸಿದಷ್ಟು ಧೈರ್ಯವಿಲ್ಲ. ಹೀಗೆ ಎಲ್ಲ ದೃಷ್ಟಿಯಿಂದಲೂ ತನಗಿಂತ ನಿಕೃಷ್ಟವಾದ ಈ ಗಂಡು ಜಾತಿಯಲ್ಲಿ ಯಾರನ್ನು ತನ್ನ ಗಂಡನೆಂದು ವರಿಸುವದು ? ಪತಿಯೆಂದು ಆರಿಸುವದು ? ಅವಳ ತಂದೆಯ ಬಳಿಗೆ ತನ್ನನ್ನು ಬೇಡಿ ಬಯಸಿ ಬಂದ ವರಗಳೆಲ್ಲವೂ ಗುಣ ಹೀನ, ರೂಪ ಹೀನ, ಶೌರ್ಯ ಹೀನ, ವರಹೀನ ಎಂದು ಹೇಳಿ ಯಾರನ್ನೂ ಅವಳು ವರಿಸಲಿಲ್ಲ. ಹೀಗೆ ಕೆಲವು ವರ್ಷಗಳು ಕಳೆದ ಬಳಿಕ ಚಂದ್ರಪುರದ ಆ ರಾಜಕುಮಾರಿಯು ಈ ಆನಂದಪೂರಕ ಎಂಬ ಶಕರಾಜಕುಮಾರನನ್ನು ನೋಡಿದಳು. ಅವಳು ಈವರೆಗೆ ನೋಡಿದ ಯಾವ ರಾಜಕುಮಾರನಲ್ಲಿಯೂ ಇಲ್ಲದ ಕಳೆಕಾಂತಿಗಳು ಈ ಶಕರಾಜಕುಮಾರನ ಮುಖದಲ್ಲಿ ತಳ ಊರಿದ್ದವು. ಅಪೂರ್ವವಾದ ಪೌರುಷ ಪರಾಕ್ರಮಗಳು ಅವನ ಪ್ರಾಯ ಪ್ರಗಲ್ಭವಾದ ಕಾಯದಲ್ಲಿ ಪ್ರತಿಷ್ಠಿತವಾಗಿದ್ದವು. ಹದಿನಾಲ್ಕು ವಿದ್ಯೆಗಳು ಅವನಿಗೆ ಅಂಗೈಯಲ್ಲಿಯ ನೆಲ್ಲೀಕಾಯಿ ಆಗಿದ್ದವು.

ಆ ಶಕರಾಜಕುಮಾರನ ಧೀರೋದಾತ್ತವಾದ ವ್ಯಕ್ತಿತ್ವವನ್ನು ಕಂಡು ಚಂದ್ರಪುರದ ರಾಜನಂದಿನಿಯ ಮನಸ್ಸು ಮಾರು ಹೋಯಿತು. ಅವಳು ಅವನನ್ನು ವರಿಸಲು

ಕಾತರಿಸಿದಳು. ಅವಳ ರೂಪ, ಸಿರಿ, ಸೊಬಗುಗಳನ್ನು ಕಂಡ ಆ ರಾಜಕುಮಾರನೂ ಅವಳನ್ನು ಮದುವೆ ಆಗಲು ಆತುರಸಿದನು. ಅವರಿಬ್ಬರ ಮದುವೆಯ ಮಹೋತ್ಸವವು ಅತ್ಯಂತ ವೈಭವದಿಂದ ನೆರವೇರಿತು. ಶಾಸ್ತ್ರೋಕ್ತವಾಗಿ ವಿದ್ವಾಂಸರಾದ ಬ್ರಾಹ್ಮಣರ ಪೌರೋಹಿತ್ಯದಲ್ಲಿ ವಿವಾಹ ಕಾರ್ಯವು ಯಥಾಸಾಂಗವಾಗಿ ನೆರವೇರಿದ ಬಳಿಕ ಅವರಿಬ್ಬರೂ ನವದಂಪತಿಗಳಾಗಿ ದಾಂಪತ್ಯ ಜೀವನದ ಸುಖವನ್ನು ಅನುಭವಿಸ ತೊಡಗಿದರು. ಒಬ್ಬರನ್ನೊಬ್ಬರು ಅವರು ಎಂದೂ ಅಗಲಿ ಇರುತ್ತಿದ್ದಿಲ್ಲ.

ಎಷ್ಟೋ ವರ್ಷಗಳವರೆಗೆ ವಿವಿಧ ವಿಲಾಸ ಭೋಗಗಳನ್ನು ಅನುಭವಿಸಿದರೂ ಅವರ ಪ್ರೇಮದಲ್ಲಿ ಕೊರತೆಯಾಗಿರಲಿಲ್ಲ. ಉತ್ಸಾಹವು ಕಡಿಮೆಯಾಗಿರಲಿಲ್ಲ. ಆ ರಾಜಕುಮಾರಿಯು ದಿನಗಳೆದಂತೆ ಅಕ್ಷೀಣವಾದ ಪ್ರೇಮದಿಂದ ಹೃದಯ ತುಂಬಿ ತನ್ನ ಪತಿಯ ಸೇವೆಯನ್ನು ಮಾಡುತ್ತಲಿದ್ದಳು. ಅವರ ಅನ್ಯೋನ್ಯ ಪ್ರೀತಿ ರಸವು ಉಕ್ಕೇರುತ್ತಲೇ ಇದ್ದಿತು. ಹೀಗೆ ವಿಲಾಸ ಲಾಲಸರಾದ ಅವರು ವಿವಿಧ ಕಾಮ ಭೋಗಾನುಭೋಗದಲ್ಲಿ ಅಸಕ್ತರಾಗಿ ಇರುವಾಗ ಒಂದು ದಿನ ಮಧ್ಯಾನ್ಹದಲ್ಲಿ ಆ ಶಕರಾಜಕುವರನಿಗೆ ತಲೆಶೂಲೆಯು ಪ್ರಾರಂಭವಾಯಿತು. ಆ ತಲೆನೋವಿನ ವೇದನೆಯನ್ನು ತಾಳಲಾರದೆ ಅರಸುಮಗನು ಸಂಕಟಪಡತೊಡಗಿದನು.

ಅವನ ರಾಜ್ಯದಲ್ಲಿದ್ದ ಅನೇಕ ಕುಶಲರಾದ ವೈದ್ಯರು ಉತ್ತಮವಾದ ಔಷಧವನ್ನು ಕೊಟ್ಟರು. ಏನಾದರೂ ರಾಜಪುತ್ರನ ತಲೆನೋವು ಕಡಿಮೆಯಾಗಲಿಲ್ಲ. ಹೀಗೆ ಎಷ್ಟೋ ದಿನಗಳು ಕಳೆದು ಹೋದವು. ಯುವರಾಜನ ಈ ಶಿರೋವೇದನೆಯ ವೃತ್ತಾಂತವು ರಾಜ್ಯದ ತುಂಬ ಹರಡಿತು. ಧನ್ವಂತರಿಯಂಥ ಅನೇಕ ವೈದ್ಯರು ಬಂದು ಚಿಕಿತ್ಸೆ ಮಾಡಿದರೂ ಕಡಿಮೆಯಾಗದ ರಾಜಕುಮಾರನ ತಲೆಬೇನೆಯು ಅಂದಿನ ವೈದ್ಯ ಪ್ರಪಂಚಕ್ಕೆಲ್ಲ ಒಂದು ಸಮಸ್ಯೆಯಾಯಿತು.

ಶಕರಾಜಕುಮಾರನು ಇಷ್ಟು ಅತ್ಯುಗ್ರವಾದ ತಲೆಶೂಲೆಯಿಂದ ಬಳಲಿ ಬೆಂಡಾಗಿದ್ದರೂ ರಾಜಕುಮಾರಿಯು ಮಾತ್ರ ಆ ಮಹಾರಾಜನನ್ನು ಬಿಟ್ಟು ಒಂದು ಕ್ಷಣ ಕಾಲವೂ ಅಗಲುತ್ತಿದ್ದಿಲ್ಲ. ರಾಜಕುಮಾರನಿಗಾದರೂ ತಲೆ ಸಿಡಿಯುವ ಅಂಥ ಭಯಂಕರವಾದ ಬೇನೆಯಿಂದ ಬಳಲಿ ಬಸವಳಿದಾಗ, ತೊಳಲಿ ತಾಪ ಪಡುವಾಗ ಮಡದಿಯು ಬಂದು ಮುಂದೆ ನಿಂತರೆ ಏನೋ ಒಂದು ಆನಂದವು ಎನಿಸುತ್ತಿತ್ತು. ಅವಳ ಮುಖವನ್ನು ನೋಡಿದಾಗ ತಾಳಲಾರದ ಸಂಕಟದಲ್ಲಿಯೇ ತುಸು ಸಮಾಧಾನದ ತುಣುಕು ತೂರಿ ಬಂದಂತಾಗುತ್ತಿತ್ತು.

ಒಂದು ದಿನ ಸರ್ವಾಂಗ ಸುಂದರಿಯಾದ ಆ ರಾಜನಂದಿನಿಯು ಮಂದಹಾಸ ಮಾಡಿ ಹಂಸದುಪ್ಪಳದ ಹಾಸಿಗೆಯಮೇಲೆ ಪವಡಿಸಿದ ಪತಿಯ ಬಳಿಗೆ ಬಂದು ನಲುಮೆಯಿಂದ ಕೇಳಿದಳು. -'' ನಾಥ, ನಿಮಗೆ ಮಂಗಳವಾಗಲಿ. ನಿಮ್ಮ ತಲೆನೋವು ಎಂಥ ಸಿದ್ಧ ಹಸ್ತದ ವೈದ್ಯರು ಚಿಕಿತ್ಸೆ ಮಾಡಿದರೂ ಕಡಿಮೆ ಆಗಲಿಲ್ಲ. ಇದರ ಕಾರಣವು ಏನು? ನಾನು ನಿಮ್ಮ ನಿಜವಾದ ಪ್ರೀತಿ ಪಾತ್ರಳಾಗಿದ್ದರೆ ನನಗೆ ನಿಮ್ಮ ತಲೆಬೇನೆಯ ಗೂಢ ಕಾರಣವನ್ನು ತಿಳಿಸಿರಿ'' ಎಂದು ಕೇಳಿದಳು.

ಪ್ರೇಯಸಿಯ ಈ ಪ್ರಶ್ನೆಯನ್ನು ಕೇಳಿ ರಾಜಕುಮಾರನು ಹೀಗೆ ಉತ್ತರವಿತ್ತನು "ಪ್ರಿಯೆ, ಈ ಮನುಷ್ಯ ಜನ್ಮವೇ ಸುಖ ದುಃಖಗಳಿಂದ ಒಡಗೂಡಿರುತ್ತದೆ. ಸರ್ವರೋಗಗಳಿಗೂ ನೆಲೆಬೀಡು ಎಂದರೆ ಈ ಮಾನವ ದೇಹ ಎನ್ನುವದನ್ನು ಮರೆತು ಬಿಟ್ಟೆಯಾ ! ಸಂಸಾರವೆಂಬ ಸಮುದ್ರದ ತೆರೆಗಳ ಮೇಲೆ ತೂಗಾಡುವ ನನ್ನನ್ನು ಹೆಚ್ಚಿಗೆ ಏನು ಕೇಳುವೆ." ಅವನ ಈ ಮಾತನ್ನು ಕೇಳಿ ಆ ಕಾಂತೆಗೆ ನಿರಾಶೆಯಾಯಿತು. ಮತ್ತೆ ಎಷ್ಟೋ ದಿನಗಳು ಉರುಳಿದವು. ತಲೆಶೂಲೆಯ ತೊಳಲಾಟದಲ್ಲಿ ಅದೆಷ್ಟೋ ವರ್ಷಗಳು ಕಳೆದವು.

## ತಲೆಶೂಲೆಯ ಕಾರಣ, ಜನ್ಮಾಂತರದ ಪ್ರೇರಣ

ಮತ್ತೆ ಕೆಲವು ದಿನಗಳ ಬಳಿಕ ಒಂದು ದಿನ ಸರಿರಾತ್ರಿಯಲ್ಲಿ ಮಂಚದ ಮೇಲೆ ಮೆತ್ತಗಿನ ಸುಪ್ಪತ್ತಿಗೆಯಲ್ಲಿ ಅವರಿಬ್ಬರು ದಂಪತಿಗಳು ಮಲಗಿದಾಗ ರಾಜಕುಮಾರಿಯು ಆ ರಾಜಕುಮಾರನಿಗೆ ಮತ್ತೆ ಅದೇ ಪ್ರಶ್ನೆಯನ್ನು ಕೇಳಿದಳು.-

"ಕಾಂತ, ನಾನು ಹಿಂದೆ ಕೇಳಿದ ಪ್ರಶ್ನೆಗೆ ಉತ್ತರ ಹೇಳಿರಿ. ಈ ವಿಷಯದಲ್ಲಿ ನೀವು ಏಕೆ ಮೈ ಛಳಿ ಬಿಟ್ಟು ಮಾತನಾಡುವದಿಲ್ಲ? ಆಡಿದ ನಿಮ್ಮ ಮಾತಿನಲ್ಲಿಯೂ ಏನೋ ಗೂಢವಿದ್ದಂತೆ ತೋರುವದು. ಮನೋಭಾವವನ್ನು ಬಚ್ಚಿಟ್ಟು ಮಾತನಾಡುತ್ತೀರಿ. ನನ್ನೆದುರು ಏಕೆ ಬಚ್ಚಿಡುತ್ತೀರಿ ? ಏನು ಮುಚ್ಚಿಡುತ್ತೀರಿ ? ನನಗೂ ಹೇಳಲಾರದಂಥ ಈ ಗುಟ್ಟು ಯಾವದಿದೆ ? ನಾನು ನಿಜವಾಗಿಯೂ ನಿಮ್ಮ ಪ್ರೀತಿಯ ಮಡದಿಯಾಗಿದ್ದರೆ ನನ್ನೆದುರು ಸ್ಪಷ್ಟವಾಗಿ ಹೇಳಿರಿ." ಹೀಗೆ ನಲುಮೆಯ ಒಲುಮೆಯಿಂದ ಕೇಳುತ್ತಲಿರುವ ಆ ಪ್ರೇಯಸಿಯನ್ನು ಕುರಿತು ಆನಂದಪೂರಕ ರಾಜಪುತ್ರನು ಪ್ರೀತಿ ತುಂಬಿ ಮಾತನಾಡಿದನು.- "ಪ್ರಿಯೇ ಈ ಮಾನವತೆಯ ಪರದೆಯನ್ನು ಎತ್ತಿ ತುಸು ಆಚೆಗೆ ಕಣ್ಣಾಡಿಸಿ ನೋಡು. ಜನ್ಮಾಂತರದ ನೆನಪಿನ ನಿಧಿಯಲ್ಲಿ ತುಸು ಆಳವಾಗಿ ಹಣಕಿ ಹಾಕು. ನನ್ನ ಪೂರ್ವ ಜನ್ಮದ ಸಂಗತಿಯನ್ನು ಅರಿಯಲು ನಿನಗೆ ಕುತೂಹಲವಿದ್ದರೆ ನಿನ್ನ ಅತ್ತೆ ಮಾವಂದಿರ ಬಳಿಗೆ ಹೋಗು. ಅವರ ಅಡಿದಾವರೆಗಳಿಗೆ ಪೊಡೆಮಟ್ಟು ಕೋಕಾಮುಖ ಕ್ಷೇತ್ರಕ್ಕೆ ಹೋಗಲು ಅನುಮತಿಯನ್ನು ಸಂಪಾದಿಸು. ನನ್ನನ್ನು ಹೊಟ್ಟೆಯಲ್ಲಿ ಹೊತ್ತು ಹೆತ್ತು ಸಾಕಿ ಸಲುಹಿದ ಆ ತಾಯಿತಂದೆಗಳ ಅಪ್ಪಣೆ ಇಲ್ಲದೇ ನಾನು ಎಲ್ಲಿಯೂ ಬರಲಾರೆ. ನೀನು ಹೋಗಿ ನನ್ನ ಮಾತಾಪಿತೃಗಳ ಸಮ್ಮತಿಯನ್ನು ಪಡೆದು ಬಂದರೆ ಇಬ್ಬರೂ ಕೂಡಿ ಕೋಕಾಮುಖ ಕ್ಷೇತ್ರಕ್ಕೆ ಹೋಗೋಣ. ಅಲ್ಲಿ ನಾನು ನಿನಗೆ ನನ್ನ ಜನ್ಮಾಂತರ ವೃತ್ತಾಂತವೆಲ್ಲವನ್ನೂ ತಿಳಿಸುತ್ತೇನೆ."

ಪತಿದೇವನ ಈ ಮಾತುಗಳನ್ನು ಕೇಳಿ ಆ ರಾಜ ಕುಮಾರಿಯು ತಟ್ಟನೆ ತನ್ನ ಅತ್ತೆಮಾವಂದಿರ ಬಳಿಗೆ ಹೋದಳು. ಗಟ್ಟಿಯಾಗಿ ಅವರ ಕಾಲುಗಳನ್ನು ಹಿಡಿದು ದೈನ್ಯದಿಂದ ಅವರನ್ನು ಪ್ರಾರ್ಥಿಸಿದಳು- "ಪೂಜ್ಯರೇ, ನಾನು ಈ ವರೆಗೆ ತಮ್ಮನ್ನು ಎಂದೂ 'ಇಂಥ ವಸ್ತು ಬೇಕು ಕೊಡಿರಿ' ಎಂದು ಕೇಳಿಲ್ಲ. ಮುಂದೆಯೂ ಕೇಳುವದಿಲ್ಲ. ಆದರೆ ಇಂದು ಮಾತ್ರ ನಾನು ತಮ್ಮಲ್ಲಿ ಒಂದು ಯಾಚನೆಯನ್ನು ಮಾಡಲು ಬಂದಿದ್ದೇನೆ. ತಾವು ದಯವಿಟ್ಟು 'ಇಲ್ಲ' ಎನ್ನ ಕೂಡದು. ನನ್ನ ಪ್ರಾಣದರಸರಾದ ನಿಮ್ಮ ಪ್ರಿಯ ಪುತ್ರರಿಗೆ ಪ್ರತಿದಿನವೂ ಮಿದುಳೆಲ್ಲ ಸಿಡಿದು ಹೋಗುವಂಥ ತಲೆಶೂಲೆ ಏಳುತ್ತದೆ. ಅದು

ಮಧ್ಯಾನ್ಹದಲ್ಲಿ ಬಿಸಿಲು ಏರಿದಂತೆ ಉಲ್ಬಣಿಸಿ ಅವರು ಸತ್ತಂತೆ ಶವಪ್ರಾಯರಾಗಿ ಬಿದ್ದು ಬಿಡುತ್ತಾರೆ. ನಮ್ಮ ರಾಜ್ಯದ ಯಾವ ವೈದ್ಯರ ಚಿಕಿತ್ಸೆಯೂ ಉಪಯೋಗಕ್ಕೆ ಬಾರದಂತಾಗಿದೆ. ಕೋಕಾಮುಖ ಕ್ಷೇತ್ರಸ್ವಾಮಿಯ ಅನುಗ್ರಹದ ಹೊರತಾಗಿ ಈ ರೋಗವು ಯಾವ ಔಷಧ ಉಪಚಾರದಿಂದಲೂ ಕಡಿಮೆಯಾಗಲಾರದು ಎಂದು ಎನಿಸುತ್ತದೆ. ಆದಕ್ಕಾಗಿ ನಾವಿಬ್ಬರೂ ದಂಪತಿಗಳು ನಮ್ಮ ರಾಜೈಶ್ವರ್ಯ, ಸುಖ, ಸೌಭಾಗ್ಯಗಳನ್ನೆಲ್ಲ ತೊರೆದು ಶ್ರೀ ಹರಿಯ ಸೇವೆಯನ್ನು ಮಾಡಬೇಕೆಂದು ಸಂಕಲ್ಪಿಸಿ ಕೋಕಾಮುಖ ಕ್ಷೇತ್ರಕ್ಕೆ ಹೊರಟಿದ್ದೇವೆ. ಇದು ನನ್ನ ಪತಿಯ ಜನನ ಮರಣದ ಸಮಸ್ಯೆಯಾದುದರಿಂದ ಈ ವಿಷಯದಲ್ಲಿ ತಾವು ನಿಷೇಧ ಮಾಡದೇ ಅನುಮತಿಯನ್ನಿತ್ತು ಆಶೀರ್ವದಿಸಬೇಕು.'' ಸೊಸೆಯ ಈ ಮಾತನ್ನು ಕೇಳಿ ಆ ಶಕ ಸಾರ್ವಭೌಮನು ತನ್ನ ಮಗನನ್ನು ಕರೆದು ಕೈಹಿಡಿದು ಸ್ನೇಹದಿಂದ ಕೇಳಿದನು-

''ಮಗು, ಇದೇನು ವಿಚಾರ ಮಾಡಿರುವಿರಿ ? ಮನೆಯಲ್ಲಿ ನಿನಗೆ ಯಾವುದರ ಕೊರತೆ ಇದೆ ? ಆನೆ, ಕುದುರೆ, ಸಾಮ್ರಾಜ್ಯ, ಸರ್ವ ಸಂಪತ್ತು, ಅಪ್ಸರೆಯರಂತಿರುವ ಅಂಗನೆಯರು ಇದೆಲ್ಲವನ್ನು ಬಿಟ್ಟು ಎಲ್ಲಿಗೆ ಹೊರಟೆ ? ನನಗೆ ವಯಸ್ಸಾಗಿದೆ. ಈ ಸಿಂಹಾಸನವನ್ನು ನೀನೇ ಆರೋಹಣ ಮಾಡು. ನನ್ನ ಪಂಚ ಪ್ರಾಣಗಳು ಮುಂದಿನ ವಂಶಾಭಿವೃದ್ಧಿಯೂ ನಿನ್ನನ್ನೇ ಅವಲಂಬಿಸಿವೆ.''

ತಂದೆಯ ಈ ನುಡಿಯನ್ನು ಕೇಳಿ ಆನಂದಪೂರಕ ರಾಜಕುಮಾರನು ಅವನ ಚರಣಗಳಿಗೆ ಹಣೆ ಹಚ್ಚಿ ವಿನಯದಿಂದ ಬೆಸಗೊಂಡನು.- ''ಅಪ್ಪ, ನನಗೆ ಈ ರಾಜ್ಯ, ಕೋಶ, ಸೈನ್ಯ, ಅಧಿಕಾರ ಎಲ್ಲವೂ ಸಾಕು. ಬೇಗನೇ ನನಗೆ ಕೋಕಾಮುಖ ಕ್ಷೇತ್ರಕ್ಕೆ ಹೋಗಬೇಕಾಗಿದೆ. ಈ ತಲೆಬೇನೆಯಿಂದ ನಾನು ಬದುಕಿ ಉಳಿದರೆ ಮಾತ್ರ ಈ ರಾಜ್ಯ, ಐಶ್ವರ್ಯ, ಸಿಂಹಾಸನಗಳು ನನ್ನವಾಗುವವು. ಈ ನನ್ನ ಶಿರೋವೇದನೆಯು ಕೋಕಾಮುಖಕ್ಕೆ ಹೋಗುವದರಿಂದಲೇ ಕಡಿಮೆಯಾಗುವದು.'' ಮಗನ ಈ ಮಾತನ್ನು ಕೇಳಿ ಅವನ ತಂದೆಯಾದ ಶಕರಾಜನು ಅನುಮತಿಯನ್ನು ಇತ್ತು ''ನಿನಗೆ ಕಲ್ಯಾಣವಾಗಲಿ, ನೀನು ಕೋಕಾಮುಖ ಕ್ಷೇತ್ರಕ್ಕೆ ಹೋಗು'' ಎಂದು ಅಪ್ಪಣೆ ಇತ್ತನು. ಊರಲ್ಲಿಯ ನಾಗರಿಕರೂ, ವ್ಯಾಪಾರಿಗಳೂ, ವೈಶ್ಯರೂ, ಹೆಣ್ಣು ಮಕ್ಕಳ ಕೋಕಾಮುಖ ಕ್ಷೇತ್ರಕ್ಕೆ ಹೊರಟು ನಿಂತ ರಾಜಕುಮಾರನನ್ನು ಬೆಂಬತ್ತಿ ಅನುಸರಿಸಿ ತಾವೂ ಆ ಕ್ಷೇತ್ರಕ್ಕೆ ನಡೆದರು. ಕೆಲವು ಕಾಲದ ಬಳಿಕ ಅವರಿಬ್ಬರೂ ರಾಜದಂಪತಿಗಳು ಕೋಕಾಮುಖ ಕ್ಷೇತ್ರಕ್ಕೆ ಐತಂದರು. ಅಲ್ಲಿ ಆ ರಾಜಾಂಗನೆಯು ತನ್ನ ಪತಿಗೆ ಮತ್ತೆ ಅದೇ ಪ್ರಶ್ನೆಯನ್ನು ಮಾಡಿದಳು.-

''ಕೋಕಾ ಕ್ಷೇತ್ರಕ್ಕೆ ಹೋದ ಬಳಿಕ ನನ್ನ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ ಎಂದು ನುಡಿದಿದ್ದಿರಿ. ಈಗ ಮನೆ ಮಾರುಗಳನ್ನೆಲ್ಲ ತೊರೆದು ಈ ಕ್ಷೇತ್ರಕ್ಕೆ ಬಂದದ್ದಾಯಿತು. ಇನ್ನಾದರೂ ನಿಮ್ಮ ತಲೆನೋವಿನ ಕಾರಣವನ್ನು ತಿಳಿಸಿರಿ.'' ಆಗ ಆ ಅರಸುಕುಮಾರನು ತನ್ನ ಮನದನ್ನೆಯನ್ನು ಆಲಿಂಗಿಸಿ, ಸ್ನೇಹದಿಂದ ಮುಂಗುರುಳು ನೇವರಿಸಿ, ನಲುಮೆಯಿಂದ ನಸುನಕ್ಕು ನುಡಿದನು.-

"ಪ್ರಿಯೇ ಈಗ ರಾತ್ರಿಯಾಗಿದೆ. ಸುಖವಾಗಿ ಮಲಗಿ ನಿದ್ರೆಮಾಡು. ನಾಳೆ ಬೆಳಗಾದ ಬಳಿಕ ನಿನ್ನ ಎಲ್ಲ ಪ್ರಶ್ನೆಗಳಿಗೂ ಉತ್ತರ ಕೊಡುತ್ತೇನೆ." ಮರುದಿನ ಬೆಳಗಾದ ಬಳಿಕ ಆ ರಾಜದಂಪತಿಗಳು ಸ್ನಾನ ಮಾಡಿ ರೇಶಿಮೆಯ ಬಟ್ಟೆಗಳನ್ನು ಧರಿಸಿ ಕ್ಷೇತ್ರಸ್ವಾಮಿಯಾದ ಶ್ರೀ ವಿಷ್ಣುವನ್ನು ಭಕ್ತಿಯಿಂದ ವಂದಿಸಿದರು. ಆನಂತರ ಆ ರಾಜಕುಮಾರನು ತನ್ನ ಮೆಚ್ಚಿನ ಮಡದಿಯನ್ನು ಪ್ರೀತಿಯಿಂದ ಕೈಹಿಡಿದು ಆ ದೇವಸ್ಥಾನದ ಈಶಾನ್ಯ ದಿಕ್ಕಿಗೆ ಕರೆದುಕೊಂಡು ಹೋದನು. ಆ ನಿಟ್ಟಿನಲ್ಲಿ ಹಿಂದಿನ ಘಟನೆಗಳ ನೆನಪನ್ನು ಮೆಲಕು ಹಾಕುತ್ತ ಸ್ಥಳವನ್ನು ಗುರುತಿಸುತ್ತ ಮುಂದೆ ನಡೆದನು. ಆ ಕ್ಷೇತ್ರದ ಈಶಾನ್ಯ ನಿಟ್ಟಿನಲ್ಲಿ ಕೆಲವು ಎಲುಬಿನ ತುಣುಕುಗಳು ಬಿದ್ದಿದ್ದವು. ರಾಜಕುಮಾರನು ತನ್ನ ಹೃದಯದರಸಿಯನ್ನು ಅಲ್ಲಿಗೆ ಕರೆದೊಯ್ದು ಅವುಗಳನ್ನು ಅವಳಿಗೆ ತೋರಿಸಿ ನುಡಿದನು.-

"ಸುಂದರಿ, ಇವು ನನ್ನ ಹಿಂದಿನ ಜನ್ಮದ ದೇಹದ ಎಲುಬುಗಳು. ನಾನು ಕಳೆದ ಜನ್ಮದಲ್ಲಿ ಈ ಕೋಕಾಮುಖ ಕ್ಷೇತ್ರದ ಮಡುವಿನ ನೀರಿನಲ್ಲಿ ಆಡುವ ಒಂದು ಮೀನನಾಗಿದ್ದೆ. ಒಂದು ದಿನ ಈ ಮಡುವಿನ ನೀರಿನ ಒಡಲಿನಲ್ಲಿ ಹಿಂದೆ ನಾನು ಓಡಾಡುತ್ತಿರುವಾಗ ಒಬ್ಬ ಬೇಡನು ಬಂದು ಗಾಳ ಹಾಕಿ ನನ್ನನ್ನು ಹಿಡಿದನು. ಆಗ ನಾನು ಜೋರು ಮಾಡಿ ಅವನ ಕೈಯಿಂದ ಕೊಸರಿಕೊಂಡು ನುಣುಚಿ ನೆಲದ ಮೇಲೆ ಬಿದ್ದೆನು. ಅದನ್ನು ಕಂಡು ಆಗಸದಲ್ಲಿ ಹಾರಾಡುವ ಒಂದು ಗಿಡಗವು ಮಾಂಸದ ಆಶೆಯಿಂದ ನನ್ನ ಮೇಲೆ ಎರಗಿ ಉಗುರಿನಿಂದ ಹೊಡೆಯಿತು. ಕೊಕ್ಕಿನಿಂದ ಕುಕ್ಕಿತು. ಮತ್ತು ನನ್ನನ್ನು ತನ್ನ ಬಾಯಲ್ಲಿ ಕಚ್ಚಿ ಹಿಡಿದು ಮುಗಿಲಿಗೆ ನೆಗೆಯಿತು. ಕೊನೆಗೆ ನಾನು ಅದಕ್ಕೆ ಭಾರವೆನಿಸಿದ್ದರಿಂದ ಅದರ ಬಾಯಿಂದ ಜಾರಿ ಈ ಕೋಕಾಮುಖ ಕ್ಷೇತ್ರದಲ್ಲಿ ಬಿದ್ದೆನು. ಮತ್ತು ಆಗಲೇ ಈ ಕ್ಷೇತ್ರದಲ್ಲಿ ಪ್ರಾಣನೀಗಿ ಶ್ರೀ ಹರಿಯ ದಯೆಯಿಂದ ರಾಜಪುತ್ರನಾಗಿ ಜನಿಸಿದೆನು. ಆ ಗಿಡಗವು ನನ್ನ ನೆತ್ತಿಗೆ ಉಗುರಿನಿಂದ ಹೊಡೆದದ್ದರಿಂದ ಈ ಜನ್ಮದಲ್ಲಿಯೂ ಆ ಪ್ರಹಾರವು ತಲೆನೋವಾಗಿ ಹೊಡೆಯುತ್ತದೆ. ಈ ವಿಚಾರವನ್ನು ನನ್ನ ಹೊರತು ಯಾರೂ ಅರಿಯರು.

ಭದ್ರೆ, ನೀನು ಬಲವಂತ ಪಡಿಸಿದ್ದರಿಂದ ನಿನಗೆ ಇದನ್ನೆಲ್ಲ ತಿಳಿಸಿದೆನು. ನನ್ನ ಆ ಮೀನು ದೇಹದ ಅಳಿದುಳಿದ ಸಣ್ಣಪುಟ್ಟ ಅಸ್ಥಿ ಅವಶೇಷಗಳನ್ನೂ ಇಲ್ಲಿ ನಿನಗೆ ತೋರಿಸಿದೆ. ಇನ್ನು ಮೇಲೆ ನೀನು ಬೇಕಾದಲ್ಲಿ ಹೋಗು. ನಿನಗೆ ಮಂಗಳವಾಗಲಿ." ರಾಜಕುಮಾರನ ಈ ಮಾತುಗಳನ್ನು ಕೇಳಿ ಕೆಂದಾವರೆಯಂತೆ ಸುಂದರ ಮುಖವುಳ್ಳ ಆ ರಾಜನಂದಿನಿಯು ದೀನ ದನಿಯಿಂದ ಪತಿಯನ್ನು ಕುರಿತು ಮಾತನಾಡಿದಳು.

"ಪ್ರಿಯಕರ, ನಿನ್ನಂತೆಯೇ ನನ್ನದೂ, ಪೂರ್ವಜನ್ಮದ ಕತೆ ಕೌತುಕಪೂರ್ಣವಾಗಿದೆ. ನಿನ್ನಂತೆ ನಾನೂ ನನ್ನ ಜನ್ಮ ರಹಸ್ಯವನ್ನು ಈ ವರೆಗೆ ಬಾಯಿ ಬಿಟ್ಟಿರಲಿಲ್ಲ. ಈಗ ನೀನು ನಿನ್ನ ಜನ್ಮಾಂತರದ ಕತೆಯನ್ನು ಹೇಳಿದ್ದರಿಂದ ನಾನೂ ನನ್ನ ಕಳೆದ ಜನ್ಮದ ಕೌತುಕದ ಕತೆಯನ್ನು ಹೇಳುತ್ತೇನೆ ಆಲಿಸಿರಿ.-

ನಾನು ಜನ್ಮಾಂತರದಲ್ಲಿ ಚಿಲ್ಲಿಕೀ ಎಂಬ ಒಂದು ಹೆಣ್ಣುಹಕ್ಕಿ ಆಗಿ ಆಕಾಶದಲ್ಲಿ ಅಲೆದಾಡುತ್ತಿದ್ದೆ. ಹಸಿವೆ ಬಾಯಾರಿಕೆಗಳಿಂದ ತೊಳಲಾಡುತ್ತಿದ್ದೆ. ಒಂದು ದಿನ

ಹಸಿವೆಯಿಂದ ಕಂಗೆಟ್ಟು, ತಿಂಡಿಯನ್ನು ಹುಡುಕಾಡಿ, ನಿರಾಶಳಾಗಿ ಒಂದು ಮರದ ಮೇಲೆ ಕುಳಿತಿದ್ದೆ. ಆಗ ಒಬ್ಬ ಬೇಟೆಗಾರನು ಹಲವು ಕಾಡುಮೃಗಗಳನ್ನು ಕೊಂದು ಮಾಂಸವನ್ನು ಸೇರಿಸಿ ಹೊತ್ತುಕೊಂಡು ಆ ದಾರಿಯಲ್ಲಿ ಬಂದನು. ಅವನು ತನ್ನ ಮಡದಿಯ ಬಳಿಯಲ್ಲಿ ಆ ಮಾಂಸದ ಕರಣೆಗಳನ್ನು ಇಟ್ಟು ತಾನು ಕಾಡಿನಲ್ಲಿ ಹೋಗಿ ಸೌದೆಯನ್ನು ಕಡೆದು ತಂದು ಹೊತ್ತಿಸಿ ಬೆಂಕಿಯನ್ನು ಪುಟ ಮಾಡಿ ಆ ಮಾಂಸವನ್ನು ಬೇಯಿಸತೊಡಗಿದನು.

ಆಗ ನಾನು ಅವನ ಹೆಂಡತಿಯ ಕೈಯಲ್ಲಿಯ ಒಂದು ಮಾಂಸದ ಉಂಡೆಯನ್ನು ಅವಳು ಬೆದರಿಸಿದರೂ ಕೇಳದೆ ಉಗುರುಗಳಿಂದ ಹೊಡೆದು ಎತ್ತಿಕೊಂಡೆನು. ಅಷ್ಟರಲ್ಲಿ ಬೇಯಿಸಿದ ಮಾಂಸವನ್ನು ತಿಂದು ಸಂತೋಷದಿಂದ ಬರುತ್ತಿದ್ದ ಬೇಡನು ಮಡದಿಯ ಕೈಯಲ್ಲಿಯ ಮಾಂಸವನ್ನು ಕಿತ್ತುಕೊಳ್ಳುವ ನನ್ನನ್ನು ಕಂಡು ಕುಪಿತನಾಗಿ ಬಾಣಬಿಟ್ಟು ಹೊಡೆದು ಬೀಳಿಸಿದನು. ಇದೇ ಕೋಕಾಮುಖ ಕ್ಷೇತ್ರದಲ್ಲಿ ನಾನು ಪ್ರಾಣನೀಗಿದೆ. ಈ ಕ್ಷೇತ್ರದ ಮಹಿಮೆಯಿಂದ ಅನಿರೀಕ್ಷಿತವಾಗಿ ಚಂದ್ರಪುರದ ರಾಜಕುಮಾರಿಯಾಗಿ ಜನಿಸಿದೆ. ನನಗೆ ರಾಜಕುಮಾರಿಯಾಗಿದ್ದಾಗ ಆ ಜನ್ಮದ ನೆನಪು ಶ್ರೀ ಹರಿಯ ದಯೆಯಿಂದ ಅಚ್ಚಳಿಯದೇ ಉಳಿದಿತ್ತು. ಆದುದರಿಂದಲೇ ನಾನು ಬೇರಾವ ಪುರುಷರನ್ನೂ ಮೆಚ್ಚದೆ ಗಂಡಸರನ್ನು ಕಂಡರೆ ಜಿಗುಪ್ಸೆಗೊಳ್ಳುತ್ತಿದ್ದೆ. ಆದರೆ ನಿನ್ನನ್ನು ನೋಡಿದ ಕೂಡಲೇ ನನಗೆ ನೀನು ಕೋಕಾಮುಖ ಕ್ಷೇತ್ರದ ಶ್ರೀ ಹರಿಯ ಅನುಗ್ರಹದಿಂದಲೇ ಶಕರಾಜನ ಅರಸು ಪುತ್ರನಾಗಿ ಜನಿಸಿರುವದು ತಿಳಿಯಿತು. ಅದಕ್ಕಾಗಿಯೇ ನಾನು ನಿನ್ನನ್ನು ಆನಂದದಿಂದ ಮದುವೆಯಾದೆ. ನಿನ್ನ ತಲೆ ನೋವಿನ ಕಾರಣವನ್ನು ಹೇಳಿರೆಂದು ಒತ್ತಾಯ ಪಡಿಸಿದೆ.

ನಾಥಾ, ಇತ್ತ ನೋಡಿರಿ. ಬಹುಕಾಲದಿಂದ ಇಲ್ಲಿಯ ಮಣ್ಣಿನಲ್ಲಿ ಗಳಿತ ಮಿಳಿತವಾಗಿ ಸವೆದು ಸಣ್ಣಾಗಿರುವ ನನ್ನ ಹಿಂದಿನ ಜನ್ಮದ ಹಕ್ಕಿ ದೇಹದ ಚಿಕ್ಕ ಎಲುಬಿನ ಕೆಲವು ತುಣುಕುಗಳು ಬಿದ್ದಿವೆ ನೋಡಿರಿ ಎಂದು ಹೇಳಿ ತನ್ನ ಮೊಳೆಗಳನ್ನು ತೋರಿಸಿ ಮತ್ತೆ ನುಡಿದಳು.

''ಪ್ರಿಯಕರ, ನನಗೆ ಇದೆಲ್ಲವೂ ನೆನಪು ಉಳಿದದ್ದರಿಂದ ನಾನು ನಿಮ್ಮನ್ನು ಒತ್ತಾಯದಿಂದ ಇಲ್ಲಿಗೆ ಕರೆದುಕೊಂಡು ಬಂದೆ. ನನಗೂ ನಿಮಗೂ ಈ ಜನ್ಮಾಂತರದ ನೆನಪು ಉಳಿದದ್ದು ಈ ಕ್ಷೇತ್ರದ ಮಹಿಮೆಯಿಂದಲೇ. ಮತ್ತು ಹಕ್ಕಿ ಮೀನಗಳಾಗಿದ್ದ ನಾವು ಇಬ್ಬರೂ ರಾಜರಾಣಿಯರಾಗಿ ಈ ಜನ್ಮದಲ್ಲಿ ಹುಟ್ಟಿದ್ದು ಈ ಕೋಕಾಮುಖ ಕ್ಷೇತ್ರದ ಪ್ರಭಾವ. ಮತ್ತೂ ಈ ಕ್ಷೇತ್ರದ ಸ್ವಾಮಿಯಾದ ಶ್ರೀ ವಿಷ್ಣುವಿನ ಪರಮಾನುಗ್ರಹವೇ ಸರಿ. ಕ್ಷುದ್ರ ಜಾತಿಯಲ್ಲಿದ್ದ ನಮ್ಮಿಬ್ಬರಿಗೂ ಇಂಥ ದಿವ್ಯ ಜನ್ಮವನ್ನು ಕರುಣಿಸಿದ ಆ ಶ್ರೀ ವಿಷ್ಣುವನ್ನು ನಾವು ಇದೇ ಕ್ಷೇತ್ರದಲ್ಲಿ ನಿಂತು ಸೇವೆ ಮಾಡೋಣ. ಆ ಭಗವಂತನು ಕೊಟ್ಟ ಈ ಮನುಷ್ಯ ದೇಹವನ್ನು ಇದೇ ಕ್ಷೇತ್ರದಲ್ಲಿ ಶ್ರೀ ಹರಿಯ ಸೇವೆಯಿಂದ ಸವೆಯಿಸಿ ಸಾರ್ಥಕಮಾಡಿಕೊಳ್ಳೋಣ. ಶ್ರೀ ಹರಿಯು ಹೇಳಿದ ಯಾವಯಾವ ಧರ್ಮವನ್ನು ಮಾಡಲು ನೀನು ಅಪ್ಪಣೆ ಮಾಡುವಿಯೋ ನಾನು ಅದನ್ನು ಮಾಡಲು ಸಿದ್ಧಳಿದ್ದೇನೆ. ಅದರಿಂದಲೇ ಮುಂದೆ ನಮಗೆ ವಿಷ್ಣುಲೋಕ ಪ್ರಾಪ್ತಿಯಾಗಿ ಸರ್ವಸುಖಗಳೂ ನಮ್ಮ ಪಾಲಿನದಾಗವವು.''

ಕಾಂತೆಯ ಈ ರಹಸ್ಯ ಪೂರ್ಣವಾದ ಮಾತನ್ನು ಕೇಳಿ ಆ ರಾಜಕುಮಾರನಿಗೆ ಜನ್ಮಾಂತರದ ಘಟನೆಗಳೆಲ್ಲವೂ ನಿಚ್ಚಳವಾಗಿ ಸ್ಮರಣಕ್ಕೆ ಬಂದವು. ತನ್ನ ಪ್ರೇಯಸಿಯ ಜನ್ಮಾಂತರದ ವೃತ್ತಾಂತವನ್ನು ಕೇಳಿ ಅವನಿಗೆ ಒಳ್ಳೇ ಕೌತುಕವೆನಿಸಿತು. 'ಸಾಧು ಸಾಧು' ಎಂದು ಅವಳನ್ನು ಬಾಯಿ ತುಂಬ ಹೊಗಳಿದನು. ಮತ್ತು ಅವಳಿಗೆ ಆ ಕ್ಷೇತ್ರದಲ್ಲಿ ಅವಶ್ಯ ಮಾಡಬೇಕಾದ ಅನೇಕ ಧರ್ಮಕರ್ಮಗಳನ್ನು ತಿಳಿಸಿ ಹೇಳಿದನು. ಪತಿಯ ಆಜ್ಞೆಯಂತೆ ಆ ಸತೀ ಶಿರೋಮಣಿಯು ಬಗೆಬಗೆಯ ಧರ್ಮ ಕಾರ್ಯಗಳನ್ನು ಆ ಕೋಕಾಮುಖ ಕ್ಷೇತ್ರದಲ್ಲಿ ಮಾಡಿದಳು.

ಈ ರಾಜದಂಪತಿಗಳ ಜೊತೆಗೆ ಬಂದ ಉಳಿದ ನಾಗರಿಕರೂ, ವೈಶ್ಯ ವ್ಯಾಪಾರಿಗಳೂ ಶಾಸ್ತ್ರೋಕ್ತವಾದ ಅನೇಕ ಧರ್ಮಕಾರ್ಯಗಳನ್ನು ಮಾಡಿ ಪುಣ್ಯ ಸಾಧನೆಯನ್ನು ಮಾಡಿಕೊಂಡರು. ಆ ರಾಜದಂಪತಿಗಳು ಯೋಗ್ಯರಾದ ಪಂಡಿತರಿಗೆ ವಿಶೇಷ ದ್ರವ್ಯವನ್ನೂ, ವಿಪುಲ ಅನ್ನವನ್ನೂ, ಪುಷ್ಕಳ ರತ್ನವನ್ನೂ ಆದರದಿಂದ ದಾನವಿತ್ತರು. ಅಲ್ಲಿ ಬಂದ ಯಾತ್ರಿಕರಿಗೆಲ್ಲಾ ವಿಶೇಷವಾಗಿ ಅನ್ನ ಧನಧಾನ್ಯಗಳನ್ನು ದಾನವಿತ್ತರು. ಇದರಿಂದ ಅವರ ಜೊತೆಗೆ ಬಂದ ಎಲ್ಲ ಜನರೂ ಶ್ರೀ ಹರಿ ಸೇವೆಯಿಂದ ಮುಕ್ತರಾದರು. ಆ ರಾಜದಂಪತಿಗಳು ನಿರಂತರ ದಾನ ಧರ್ಮ ಮತ್ತು ಶ್ರೀ ಹರಿಯ ಧ್ಯಾನ ಉಪಸನೆಗಳನ್ನು ಮಾಡಿ ಮನುಷ್ಯ ಜನ್ಮವನ್ನು ನೀಗಿದರು. ಮುಂದೆ ಶ್ರೀ ಹರಿಯ ಶ್ವೇತದ್ವೀಪಕ್ಕೆ ಪ್ರಯಾಣ ಮಾಡಿದರು. ದೇವಿ, ಮೀನು ಹಾಗೂ ಹೆಣ್ಣು ಹಕ್ಕಿಗಳು ಈ ಕೋಕಾಮುಖ ಕ್ಷೇತ್ರದ ಪ್ರಭಾವದಿಂದ ರಾಜದಂಪತಿಗಳಾಗಿ ಮುಂದೆ ವೈಕುಂಠ ಲೋಕವನ್ನು ಪಡೆದ ಸಮಾಚಾರವನ್ನು ನಿನಗೆ ತಿಳಿಸಿದ್ದೇನೆ. ಹೀಗೆ ಪರಮ ಪವಿತ್ರವಾದ ಆ ಕೋಕಾಮುಖ ಕ್ಷೇತ್ರಕ್ಕೆ ಹೋಗಿ ಅಲ್ಲಿ ಶ್ರೀ ವಿಷ್ಣುವಿನ ಸೇವೆಯನ್ನು ಮಾಡಿದವರು ಚಿಲ್ಲಿ ಪಕ್ಷಿ ಮತ್ತು ಮೀನಗಳಂತೆ ಪರಮ ಸಿದ್ಧಿಯನ್ನು ಪಡೆಯುವರು.

*ವರಾಹ ಪುರಾಣದಲ್ಲಿ ನೂರಎರಡನೇ ಅಧ್ಯಾಯ ಮುಗಿದುದು.*

—o—

**ಭೂದೇವಿ :-** ಹೀನ ಯೋನಿಯಲ್ಲಿ ಹುಟ್ಟಿದ್ದರೂ ರಾಜೈಶ್ವರ್ಯವನ್ನು ಪಡೆದು ಕೊನೆಗೆ ಪರಮ ಪದವನ್ನು ಆ ಮೀನ ಮತ್ತು ಹೆಣ್ಣು ಹಕ್ಕಿಗಳು ಹೊಂದಿದ್ದು ಅತ್ಯಂತ ಆಶ್ಚರ್ಯಕರ ಸಂಗತಿಯಾಗಿದೆ. ಇದರ ಮೇಲಿಂದ ಕೋಕಾಮುಖ ಕ್ಷೇತ್ರದ ಮಹಾ ಪ್ರಭಾವವೂ ವರಾಹಮೂರ್ತಿಯಾದ ನಿನ್ನ ಮಹಾಮಹಿಮೆಯೂ ಸ್ಪಷ್ಟವಾಗಿ ತಿಳಿದು ಬರುತ್ತದೆ.

ವರಾಹ ಪ್ರಭುವೇ, ನಾನು ಈ ಮೊದಲೇ ನಿನ್ನನ್ನು ಪ್ರಶ್ನೆ ಮಾಡಿದ್ದೆ. ಮನುಷ್ಯರು ನಿನ್ನನ್ನು ಯಾವ ಧರ್ಮದಿಂದ ಕಾಣುವರು. ತಪಸ್ಸಿನಿಂದಲೋ? ಅಥವಾ ಕರ್ಮದಿಂದಲೋ? ಇದನ್ನು ದಯವಿಟ್ಟು ನೀನು ನನ್ನ ಮೇಲೆ ಸುಪ್ರಸನ್ನನಾಗಿ ಅರುಹಬೇಕು.

ಭೂಮಿತಾಯಿಯ ಈ ಪ್ರಶ್ನೆಯನ್ನು ಕೇಳಿ ವರಾಹ ಪ್ರಭುವು ನಸುನಕ್ಕು ಹೇಳತೊಡಗಿದನು. - ಭಾಗ್ಯವತಿ, ಭವ ಬಂಧನದಿಂದ ಬಿಡುಗಡೆ ಮಾಡುವ ಧರ್ಮ ರಹಸ್ಯವನ್ನು ಹೇಳುತ್ತೇನೆ ಕೇಳು. ಮಳೆಗಾಲವು ಕಳೆದ ಬಳಿಕ ಪ್ರಕೃತಿ ದೃಶ್ಯವೇ ಬದಲಾಗುತ್ತದೆ. ಎಲ್ಲೆಡೆಗೂ ತಿಳಿಯಾದ ಶರತ್‌ಕಾಲವು ಅವತರಿಸುತ್ತದೆ. ಮುಗಿಲು ಮೋಡಗಳೆಲ್ಲ ತಿಳಿನೀಲಿ ಬಣ್ಣದಿಂದ ತೊಳಗುತ್ತದೆ. ಚಂದ್ರಮಂಡಲವು ಕಾಂತಿಪೂರದಿಂದ ಕಂಗೊಳಿಸುತ್ತದೆ. ಈ ಶರತ್‌ಕಾಲ ವೆಂದರೆ ಬಹಳ ಸುಖಕರವಾದ ಕಾಲ. ಬೇಸಿಗೆಯಂತೆ ಬಿಸಿಲೂ ಇಲ್ಲ. ಚಳಿಗಾಲದಂತೆ ಚಳಿಯೂ ಇಲ್ಲ. ಸಮಶೀತೋಷ್ಣ ವಾತಾವರಣದಿಂದ ಶರತ್‌ಕಾಲವು ಸರ್ವ ಮನೋಹರ ವಾಗುತ್ತದೆ. ಸರೋವರಗಳಲ್ಲಿ ಸ್ಫಟಿಕದಂತಹ ನೀರು, ಪಕಳೆದೆರದ ತಾವರೆಗಳು, ಅರಳಿದ ನೈದಿಲೆಗಳು, ಕಳಿಕಳಿಸುವ ಅನೇಕ ಸುಗಂಧಿ ಹೂಗಳು. ಈ ನಿಸರ್ಗದ ಸೊಬಗನ್ನು ಕಂಡು ಹಂಸಗಳು ಕೇಂಕರಿಸುತ್ತವೆ. ದುಂಬಿಗಳು ಗುಂಜಾರವವನ್ನು ಮಾಡುತ್ತವೆ. ಇಂಥ ಮಧುರ ಮಾಸವಾದ ಕಾರ್ತಿಕದಲ್ಲಿ ಶುಕ್ಲ ಪಕ್ಷದ ಉತ್ಥಾನ ದ್ವಾದಶಿಯ ದಿನ ನನ್ನನ್ನು ಭಕ್ತಿಯಿಂದ ಪೂಜಿಸುವ ಪುಣ್ಯಾತ್ಮರು ನಿಜವಾಗಿಯೂ ಭಾಗ್ಯಶಾಲಿಗಳು. ಅವರನ್ನು ನಾನು ನನ್ನ ಏಕಾಂತ ಭಕ್ತರೆಂದು ಪರಿಗಣಿಸುತ್ತೇನೆ. ಆ ಉತ್ಥಾನ ದ್ವಾದಶಿಯಂದು ಉಷಃಕಾಲದಲ್ಲಿ ಎದ್ದು ನನ್ನ ಪೂಜಾ ಕಾರ್ಯವನ್ನು ಮಾಡಿ ನನ್ನನ್ನು ಸಂತೋಷ ಪಡಿಸಲಿಕ್ಕಾಗಿ ಈ ಕೆಳಗಿನ ಮಂತ್ರವನ್ನು ಹೇಳಿ ಪ್ರಬೋಧೋತ್ಸವ ಕರ್ಮವನ್ನು ಆಚರಿಸಬೇಕು.-

"ಬ್ರಹ್ಮಣಾ ಚ ರುದ್ರೇಣ ಸ್ತೂಯಮಾನೋ ಭವಾನ್ನಪಿ ವಂದಿತೋ
ವಂದನೀಯಶ್ಚ । ಪ್ರಾಪ್ತಾ ದ್ವಾದಶೀಯಂ ತೇ ಪ್ರಬುದ್ಧ್ಯಸ್ವ ಜಾಗೃಹಿ ।
ಮೇಘಾ ಗತಾಃ ಪೂರ್ಣಶ್ಚಂದ್ರಃ, ಶಾರದಾನಿ ಪುಷ್ಪಾಣಿ ಲೋಕನಾಥ
ತುಭ್ಯಮಹಂ ದದಾನೀತಿ ಧರ್ಮಹೇತೋಸ್ತವ ಪ್ರೀತಯೆ ಪ್ರಬುದ್ಧ
ಜಾಗೃತ ಲೋಕನಾಥ ತ್ವಾಂ ಭಜಮಾನಾ ಯಜ್ಞೇನ ಯಜಂತೆ ।
ಸತ್ರೇಣ ಸತ್ರಿಣೋ ವೇದ್ಯೈಃ ಪಠಂತಿ ಭಗವತಃ ಶುದ್ಧಾಃ ಪ್ರಬುದ್ಧಾ
ಜಾಗ್ರತೋ ಲೋಕನಾಥ ॥

ಭಗವನ್ ನಾರಾಯಣ, ಇಂದು ಈ ಉತ್ಥಾನ ದ್ವಾದಶಿ. ಪ್ರಾತಃಕಾಲ ಬ್ರಹ್ಮನೂ ಶಿವನೂ ನಿನ್ನನ್ನು ಹೊಗಳಿ ಹಾಡುತ್ತಿದ್ದಾರೆ. ಋಷಿವಂದಿತನಾದ ನಿನ್ನನ್ನು ಮುನಿಗಳು ವಂದಿಸುತ್ತಿದ್ದಾರೆ. ನೀನು ಈಗ ದಯವಿಟ್ಟು ಎದ್ದೇಳು. ಮುಗಿಲಿನಲ್ಲಿಯ ಮೋಡಗಳು ಅಡಗಿ ಹೋಗಿವೆ. ಪೂರ್ಣ ಚಂದ್ರನು ತೊಳಗುತ್ತಲಿದ್ದಾನೆ. ಈ ಶರದೃತುವಿನಲ್ಲಿ ಅರಳಿದ ಹೂಗಳನ್ನು ಜಗದೊಡೆಯನಾದ ನಿನಗೆ ನಾನು ನೀಡುತ್ತಲಿದ್ದೇನೆ. ಆದ್ದರಿಂದ ನಿನಗೆ ಪ್ರೀತಿಯಾಗಲಿ, ನನಗೆ ಪುಣ್ಯ ಬರಲಿ. ಸ್ವಾಮಿ, ನಿತ್ಯವೂ ಪ್ರಬುದ್ಧನಾಗಿ ಲೋಕರಕ್ಷಣೆಗಾಗಿ ಯಾವಾಗಲೂ ಜಾಗರೂಕನಾಗಿರುವ ನಿನ್ನನ್ನು ನಾವೀಗ ಎಚ್ಚರಿಸುವದು ಒಂದು ಧಾರ್ಮಿಕ ಸಾಂಪ್ರದಾಯವೇ ಸರಿ. ಇಂಥ ಧರ್ಮಾಚಾರಗಳನ್ನು ಆಚರಿಸುವದು ನಿನ್ನ ಪ್ರೀತಿಗೆ ಕಾರಣವಾಗುವದು. ಲೋಕನಾಥನಾದ ನಿನ್ನನ್ನು ಪ್ರೀತಿಗೊಳಿಸಲಿಕ್ಕಾಗಿ ಯಜಮಾನರು ಯಜ್ಞ ಮಾಡುತ್ತಾರೆ. ಭಾವಿಕರು ಪೂಜಿಸುತ್ತಾರೆ. ಭಗವದ್ ಭಕ್ತರು ವೇದಮಂತ್ರಗಳಿಂದ ನಿನ್ನನ್ನು ಸ್ತೋತ್ರ ಮಾಡುತ್ತಾರೆ. ಹೀಗೆ ನಿನ್ನನ್ನು ಎಚ್ಚರಿಸುವ ಪ್ರಬೋಧೋತ್ಸವವನ್ನು ಆಚರಿಸುವ ಶುದ್ಧಾತ್ಮರು ನಿಜವಾಗಿಯೂ ಪ್ರಬುದ್ಧರು. ಧರ್ಮಕಾರ್ಯ ಜಾಗರೂಕರೂ ಆಗುತ್ತಾರೆ.''

ಹೀಗೆ ಮಂತ್ರವನ್ನು ಹೇಳಿ ದ್ವಾದಶಿ ದಿನ ಶ್ರೀ ಹರಿಯ ವಿಶೇಷವಾದ ಪೂಜಾ ವ್ರತ ಉತ್ಸವಾದಿಗಳನ್ನು ಆಚರಿಸುವವರು ಸದ್ಗತಿಯನ್ನು ಹೊಂದುತ್ತಾರೆ. ಇದರಂತೆ ಚಳಿಗಾಲದಲ್ಲಿ ಎಷ್ಟೇ ತಣ್ಣಗಿನ ಗಾಳಿ ಬೀಸುತ್ತಿದ್ದರೂ, ಚುರುಕಾದ ಚಳಿ ಮೈ ಕೊರೆಯುತ್ತಿದ್ದರೂ ಯಾವದನ್ನೂ ಲಕ್ಷಿಸದೆ ಆ ಕಾಲದಲ್ಲಿ ಗಿಡಬಳ್ಳಿಗಳಲ್ಲಿ ದೊರಕುವ ಪೂಜಾರ್ಹವಾದ ಪುಷ್ಪಗಳನ್ನು ತಂದು ದೇವರನ್ನು ಪೂಜಿಸಬೇಕು. ಬೊಗಸೆತುಂಬ ಚಳಿಗಾಲದಲ್ಲಿ ಅರಳುವ ಹೂಗಳನ್ನು ಹಿಡಿದುಕೊಂಡು -

**ಕಾಲೋ ಭವಾನ್ ಧಾತರಿಮಂ ಲೋಕನಾಥ ಹಿಮಂ**
**ದುಸ್ತರಂ ದುಷ್ಪ್ರವೇಶಂ । ಕಾಲಂ ಸಂಸಾರಾನ್ಮಾಂ**
**ತಾರಯೇಮಂ ಧರ್ತಾ ತ್ರಿಲೋಕನಾಥ ॥**

ಎಂಬ ಮಂತ್ರದಿಂದ ದೇವರಿಗೆ ಹೂಗಳನ್ನು ಸಮರ್ಪಿಸಬೇಕು.

''ಇದರಂತೆ ಮಾರ್ಗಶಿರ, ವೈಶಾಖ, ಕಾರ್ತೀಕ ಮುಂತಾದ ಮಾಸಗಳಲ್ಲಿ ಸುಗಂಧವಾದ ಶಾಲಪುಷ್ಪಗಳಿಂದಲೂ ಹಾಗೂ ಚಂದನ ಕುಸುಮಗಳಿಂದಲೂ ಕನ್ನೈದಲೆಯ ಹೂಗಳಿಂದಲೂ ಹಾಗೂ ಹೂವಿನ ಸರಗಳಿಂದಲೂ, ಎಲೆ ಚಿಗರು ಕೂಡಿದ ಪುಷ್ಪಗುಚ್ಛ ಗಳಿಂದಲೂ ನನ್ನನ್ನು ಪೂಜಿಸಿದರೆ ಹನ್ನೆರಡುವರ್ಷ ಪೂಜೆ ಮಾಡಿದ ಪುಣ್ಯ ಬರುವದು.'' ವರಾಹ ದೇವರ ಈ ಮಾತುಗಳನ್ನು ಕೇಳಿ ಧರಣೀದೇವಿಯು ನಸುನಕ್ಕು ನಲುಮೆಯಿಂದ ನುಡಿದಳು. - ''ಪ್ರಭುವೇ, ಒಂದು ವರ್ಷದಲ್ಲಿ ತಿಂಗಳು ಹನ್ನೆರಡು. ದಿನಗಳು ಮುನ್ನೂರಾ ಅರವತ್ತು. ಆದರೆ ನೀನು ಕಾರ್ತೀಕ, ವೈಶಾಖ ಎರಡು ಮಾಸಗಳನ್ನೇ ಹೆಚ್ಚಾಗಿ ಬಣ್ಣಿಸುವೆ ಮತ್ತು ದಿನಗಳಲ್ಲಿಯೂ ದ್ವಾದಶಿ ತಿಥಿ ಮಾತ್ರ ಶ್ರೇಷ್ಠವೆಂದು ಹೊಗಳುವೆ. ಇದು ಏನು? ಏಕೆ?'' ಮಹಾದೇವಿಯು ಈ ಕೌತುಕದ ಪ್ರಶ್ನೆಯನ್ನು ಕೇಳಿ ಆ ವರಾಹಮೂರ್ತಿಯು ಮೆಲುನಗೆಯನ್ನು ಸೂಸಿ ಮತ್ತೆ

ಮಾತನಾಡಿದನು. - "ದೇವಿ, ಎಲ್ಲ ತಿಂಗಳುಗಳಲ್ಲಿ ಕಾರ್ತೀಕ ಮತ್ತು ವೈಶಾಖ ಮಾಸಗಳು, ಎಲ್ಲ ತಿಥಿಗಳಲ್ಲಿ ದ್ವಾದಶೀತಿಥಿಯು ನನಗೆ ಅತ್ಯಂತ ಪ್ರೀತ್ಯಾಸ್ಪದವಾದದ್ದರ ಕಾರಣವನ್ನು ಕಥಿಸುತ್ತೇನೆ ಕೇಳು.- "ಸಾವಿರ ಜನ ಯೋಗ್ಯ ಬ್ರಾಹ್ಮಣರಿಗೆ ಭೂದಾನ ಮಾಡುವದರಿಂದ ಬರುವ ಫಲವು ದ್ವಾದಶಿಯ ದಿನ ನನಗೆ ಸುವಾಸನೆಯ ಒಂದು ಹೂವನ್ನು ಸಮರ್ಪಿಸಿ ನನ್ನ ಪೂಜೆ ಮಾಡುವದರಿಂದಲೇ ಬರುತ್ತದೆ. ಆದುದರಿಂದ ದ್ವಾದಶೀ ತಿಥಿಯು ಶ್ರೇಷ್ಠವಾದುದು. ಕಾರ್ತೀಕ ಮಾಸದಲ್ಲಿ ನಾನು ಶೇಷ ಪರ್ಯಂಕದಿಂದ ಯೋಗ ನಿದ್ರೆಯಿಂದ ಎಚ್ಚರಾಗುತ್ತೇನೆ. ವೈಶಾಖ ಮಾಸದಲ್ಲಿ ಭಕ್ತರನ್ನೆಲ್ಲ ಅಲ್ಪ ಪುಣ್ಯ ಕಾರ್ಯಾಚರಣೆ ಯಿಂದಲೇ ಉದ್ಧರಿಸುವ ಸಂಕಲ್ಪ ಮಾಡಿದ್ದೇನೆ. ಆದುದರಿಂದ ಈ ಎರಡು ಮಾಸಗಳು ನನಗೆ ಅತ್ಯಂತ ಪ್ರೀತಿಯ ಮಾಸಗಳಾಗಿರುತ್ತವೆ. ಈ ಕಾರಣದಿಂದ ಕಾರ್ತೀಕ ಮತ್ತು ವೈಶಾಖ ಮಾಸಗಳ ದ್ವಾದಶೀ ದಿನಗಳಂದು ಸುಗಂಧ ಎಲೆಯನ್ನು ಕೈಯಲ್ಲಿ ಹಿಡಿದು -

**"ಇಮಂ ಬಹುತರಂ ನಿತ್ಯಂ ವೈಶಾಖಂ ಚೈವ ಕಾರ್ತಿಕಂ ।**
**ಗೃಹಾಣ ಗಂಧ-ಪತ್ರಾಣಿ ಧರ್ಮಮೇವಂ ಪ್ರವರ್ಧಯ ॥**

ಎಂಬ ಮಂತ್ರವನ್ನು ಉಚ್ಚರಿಸಿ "ಓಂ ನಮೋ ನಾರಾಯಣಾಯ" ಎಂದು ಹೇಳಿ ದೇವರಿಗೆ ಸಮರ್ಪಿಸಬೇಕು. ಅನಂತರ ಸುಗಂಧ ಹೂವನ್ನು ಕೈಯಲ್ಲಿ ಇರಿಸಿಕೊಂಡು "ಓಂ ನಮೋ ವಾಸುದೇವಾಯ " ಎಂದು ಹೇಳಿ

**ಸುಮನಾಂಸೀಮಾನಿ ಅರ್ಚಯಿತುಂ ಮಾಂ ಸುಮನಸಂ ಕುರು ।**
**ಗೃಹ್ಣೀಷ್ವ ಸುಮನಸ್ಕಂ ದೇವ ಸುಗಂಧೇನ ತೇ ನಮಃ ।**

ಎಂಬ ಮಂತ್ರದಿಂದ ಆ ಪುಷ್ಪಾಂಜಲಿಯನ್ನು ನನಗೆ (ಶ್ರೀ ವಿಷ್ಣುವಿಗೆ) ಸಮರ್ಪಿಸಬೇಕು. ಹೀಗೆ ಆ ಆ ಕಾಲೋದ್ಭವವಾದ ಹೂಗಳಿಂದ ನನ್ನನ್ನು ಭಕ್ತಿ ಪುರಸ್ಸರವಾಗಿ ಪೂಜಿಸುವವರು ಆಧಿ-ವ್ಯಾಧಿ-ಕ್ಷುತ್-ಪಿಪಾಸಾದಿ ಬಾಧೆಗಳನ್ನು ಮೀರಿ ಪರಮಪದವಾದ ಮುಕ್ತಿಯನ್ನು ಹೊಂದುವರು.

## ವೈಶಾಖ ಮಾಸದಲ್ಲಿ ಹೂಗಳಿಂದ ಹರಿಯ ಪೂಜೆ

**ವರಾಹ :-** ವೈಶಾಖ ಶುಕ್ಲ ದ್ವಾದಶಿಯ ದಿನ ಅಂದ ಚಂದವಾದ ಸುಗಂಧಭರಿತ ಇರುವಂತಿಗೆ ಹೂಗಳಿಂದ ನನ್ನನ್ನು ಪೂಜಿಸಬೇಕು. ಮೊದಲು ವಿಧಿಪೂರ್ವಕವಾಗಿ ದೇವರ ಪೂಜೆಯನ್ನು ಮುಗಿಸಿ ಅನಂತರ ' ಓಂ ನಮೋ ನಾರಾಯಣಾಯ ' ಎಂದಂದು ಭಗವಂತನಿಗೆ ನಮಸ್ಕರಿಸಿ

**"ನಮೋಸ್ತು ದೇವದೇವೇಶ ಶಂಖ ಚಕ್ರ ಗದಾ ಧರ ।**
**"ನಮೋಽಸ್ತುತೇ ಲೋಕನಾಥ ಪ್ರವೀರಾಯ ನಮೋಸ್ತುತೇ ॥**
**ಸಂಪುಷ್ಪಿತಸ್ಯೇಹ ವಸಂತಕಾಲೇ ವನಸ್ಪತೇರ್ಗಂಧರಸ ಪ್ರಯುಕ್ತಂ ॥**
**ಗೃಹಾಣಸಂ ಪುಷ್ಪಿತ ಪಾದಪೇಂದ್ರಂ ವಸಂತಕಾಲೇ ಸಮುಪಾಗತೇ ಚ ॥**

ಎಂದು ಮುಂತಾದ ಮಂತ್ರಗಳನ್ನು ಉಚ್ಚರಿಸಿ ದೇವರಿಗೆ ಆ ಹೂಗಳನ್ನು ಏರಿಸಬೇಕು. ಹೀಗೆ ಎಲ್ಲ ದೇವಾಧಿದೇವತೆಗಳೂ, ಗಂಧರ್ವರೂ, ಅಪ್ಸರೆಯರೂ,

ಆದಿತ್ಯರೂ, ವಸುಗಳೂ, ರುದ್ರರೂ, ಅಶ್ವಿನೀದೇವತೆಗಳೂ ನನ್ನನ್ನು ವೈಶಾಖ ಶುದ್ಧ ದ್ವಾದಶಿಯ ದಿನ ಹೂಗಳಿಂದ ಅರ್ಚಿಸಿ ಅರ್ಪಿಸಿ ಸಂತೋಷಪಡಿಸುತ್ತಾರೆ. ಅಂದು ನನ್ನ ಪುಷ್ಪಾರ್ಚನೆ ಮಾಡುವವರನ್ನು ನಾನು ಉದ್ಧರಿಸುತ್ತೇನೆ. ಮಾಸಗಳಲ್ಲೆಲ್ಲ ಮುಖ್ಯವಾದ ವೈಶಾಖ ಮಾಸಕ್ಕೆ ಮಾಧವರೂಪಿಯಾದ ನಾನೇ ಮುಖ್ಯಾಭಿಮಾನಿಯಾದುದರಿಂದ ಶಾಸ್ತ್ರೋಕ್ತವಾದ ಮಂತ್ರಗಳಿಂದ ನನ್ನನ್ನು ಪೂಜಿಸಿದರೆ ಮತ್ತು ಪುಣ್ಯ ಕರ್ಮಗಳನ್ನು ಮಾಡಿದರೆ ಅವರಿಗೆ ವಿಷ್ಣುಲೋಕ ಪ್ರಾಪ್ತಿಯಾಗುವದು. ಇದರಂತೆ ವರ್ಷ ಋತುವಿನಲ್ಲಿ ಕದಂಬ ವೃಕ್ಷದ ಮೊಗ್ಗೆಗಳಿಂದಲೂ ದೇವದಾರು ಹೂಗಳಿಂದಲೂ ವಿಧಿ ಪೂರ್ವಕವಾಗಿ ನನ್ನ ಆವಾಹನ ಪೀಠಪೂಜೆ ಆವರಣ ಪೂಜೆ ಪ್ರತಿಮಾರ್ಚನಾದಿಗಳನ್ನು ಮಾಡಿ ಮಂತ್ರ ಪೂರ್ವಕವಾಗಿ ಪುಷ್ಪಾರ್ಚನೆಯನ್ನು ಮಾಡಬೇಕು. ಇದೇ ರೀತಿಯಾಗಿ ಆಷಾಢ ಶುದ್ಧ ದ್ವಾದಶೀದಿನ ಪರಮ ಮಂಗಳಕರವಾದ ಭಗವತ್ಪೂಜೆಯನ್ನು ಮಾಡಬೇಕು. ಹೀಗೆಯೇ ಎಲ್ಲ ಋತುಗಳಲ್ಲಿಯೂ ಆ ಮಾಸಾಭಿಮಾನಿಯಾದ ಭಗವನ್ ಮೂರ್ತಿಗಳನ್ನು ಆ ಆ ತಿಂಗಳುಗಳಲ್ಲಿ ಅರಳುವ ಹೂಗಳಿಂದ ಭಕ್ತಿ ಭಾವಭರಿತರಾಗಿ ಪೂಜೆ ಮಾಡಬೇಕು. ಅದರಿಂದ ವೈಷ್ಣವ ಲೋಕ ಪ್ರಾಪ್ತಿಯು ನಿಶ್ಚಿತವಾಗಿಯೂ ಆಗುತ್ತದೆ.

*ವರಾಹ ಪುರಾಣದಲ್ಲಿ ನೂರ ಮೂರನೇ ಅಧ್ಯಾಯ ಮುಗಿದುದು.*



**ಭೂದೇವಿ :-** ಮಾಧವ, ನೀನು ಅನೇಕ ಸಲ ನನ್ನ ಜೊತೆಗೆ ಮಾತನಾಡುವಾಗ "ನನ್ನ ಮಾಯೆ ನನ್ನ ಮಾಯೆ ?" ಎಂದು ಹೇಳುತ್ತಿ. ಆ ನಿನ್ನ ಮಾಯೆಯ ಸ್ವರೂಪವೇನು ? ಆ ವಿಷ್ಣು ಮಾಯೆಯ ಶಕ್ತಿ ಏನು ? ನಿನ್ನ ಆ ಭಗವನ್ಮಾಯಾ ರಹಸ್ಯವನ್ನು ತಿಳಿಯಲು ಬಯಸುತ್ತೇನೆ. ನನಗೆ ನಿನ್ನ ಮಾಯೆಯ ಅರ್ಥವನ್ನು ತಿಳಿಸು." ಭೂದೇವಿಯ ಈ ಕೌತುಕ ಪೂರ್ಣವಾದ ಪ್ರಶ್ನೆಯನ್ನು ಕೇಳಿ ವರಾಹ ದೇವರಿಗೆ ನಗೆ ಬಂದಿತು. ಆ ನಂತರ ಮಾಯಾಕರಂಡಕದಂತಿದ್ದ ಆ ಭಗವಂತನು ಮೃದುಮಂದ ಹಾಸವನ್ನು ಮಾಡಿ ಮುಂದಿನ ಮಾತನಾಡಿದನು-

"ಭೂದೇವಿ, ಬ್ರಹ್ಮರುದ್ರಾದಿ ದೇವತೆಗಳಿಗೂ ಕೂಡ ತಿಳಿಯದ ನನ್ನ ಮಾಯೆಯನ್ನು ನೀನೆಂತು ಅರಿಯಬಲ್ಲೆ ? ಆ ವಿಷ್ಣು ಮಾಯೆಯನ್ನು ತಿಳಿಯುವ ಹವ್ಯಾಸಕ್ಕೆ ಇಳಿದರೆ ಬರೀ ಶ್ರಮ ಮಾತ್ರ ನಿಜ. ಆದರೂ ನೀನು ಅಪೇಕ್ಷಿಸಿದ್ದರಿಂದ ನಿನ್ನ ಯೋಗ್ಯತಾನುಸಾರವಾಗಿ ನಿನಗೆ ತಿಳಿಯಪಡಿಸುತ್ತೇನೆ. ಕೇಳು.-

"ಧರಿಣೀದೇವಿ, ವಿಷ್ಣುಮಾಯೆ ಎಂದರೆ ವಿಷ್ಣುವಿನ ಇಚ್ಛೆ, ಅವನ ಗೈಮೆ, ಅವನ ಪ್ರಭಾವ, ಎಂದು ಮುಂತಾಗಿ ಅರ್ಥವಾಗುತ್ತದೆ. ಈ ಜಗತ್ತಿನಲ್ಲಿ ನಡೆಯುವ ಅದ್ಭುತ ಘಟನೆಗಳಿಗೆಲ್ಲ ಆ ಭಗನ್ಮಾಯೆಯೇ ಮೂಲಕಾರಣವಾಗಿರುತ್ತದೆ. ಚಂದ್ರನು ಹದಿನೈದು ದಿನಕ್ಕೊಮ್ಮೆ ಕ್ಷೀಣನಾಗಿ ಅಮಾವಾಸ್ಯೆಯ ದಿನ ಅದೃಶ್ಯನಾಗುತ್ತಾನೆ. ಮುಂದೆ ಶುಕ್ಲ ಪಕ್ಷದಲ್ಲಿ ಬೆಳೆಯುತ್ತ ಬೆಳೆಯುತ್ತ ಹುಣ್ಣಿಮೆಯ ದಿನ ಪೂರ್ಣ ಚಂದ್ರನಾಗುತ್ತಾನೆ. ಇದು ನನ್ನ ಮಾಯೆಯು. ಕೆಲವು ದೇಶದಲ್ಲಿ ಮೋಡ ಗುಡುಗುತ್ತದೆ ಮಿಂಚು ಮಿಂಚುತ್ತದೆ. ಮಳೆ ಸುರಿಯುತ್ತದೆ. ದೇಶವೆಲ್ಲವೂ ಮಳೆ ಬೆಳೆಗಳಿಂದ ತುಂಬಿ ತುಳಕಾಡುತ್ತದೆ. ಮತ್ತೊಂದು ದೇಶದಲ್ಲಿ ಮೋಡವಿಲ್ಲ, ಮಳೆಯೇ ಇಲ್ಲ, ಕುಡಿಯಲು ನೀರಿಲ್ಲ, ಉಣ್ಣಲು ಅನ್ನವಿಲ್ಲ ಇದು ನನ್ನ ಮಾಯೆ. ಭಾವಿಯ ನೀರು ಚಳಿಗಾಲದಲ್ಲಿ ಬೆಚ್ಚಗಿರುತ್ತದೆ. ಬೇಸಿಗೆಯಲ್ಲಿ ತಣ್ಣಗಿರುತ್ತದೆ. ಇದು ನನ್ನ ಮಾಯೆ.

ಪ್ರತಿದಿನವೂ ಸೂರ್ಯನು ಪಶ್ಚಿಮದಿಕ್ಕಿನಲ್ಲಿ ಮುಳುಗುತ್ತಾನೆ. ಮತ್ತೆ ಪ್ರಾತಃ ಕಾಲದಲ್ಲಿ ಪೂರ್ವ ದಿಕ್ಕಿನಲ್ಲಿ ಉದಯಿಸುತ್ತಾನೆ. ನಿರ್ದಿಷ್ಟಕಾಲದ ಈ ಸೂರ್ಯೋದಯ, ಸೂರ್ಯಾಸ್ತಗಳು ನನ್ನ ಮಾಯೆ. ಗಂಡು ಪ್ರಾಣಿಯ ದೇಹದಲ್ಲಿರುವ ರೇತಸ್ಸು, ಹೆಣ್ಣು ಪ್ರಾಣಿಯ ದೇಹದಲ್ಲಿರುವ ರಕ್ತ ಇವೆರಡೂ ಕೂಡಿ ಒಂದು ಜೀವದ ಗರ್ಭದಲ್ಲಿ ಮತ್ತೊಂದು ಜೀವವಾಗಿ ಹುಟ್ಟಿ ಬರುವದು. ಇದು ನನ್ನ ಮಾಯೆ. ಹುಟ್ಟಿದ ಪ್ರಾಣಿಗಳಿಗೆ ಬೇಕಾದ ಹಾಗೆ ತಿಂದು ಉಂಡು ಬೆಳೆದು ಸುಖದಿಂದ ಬಾಳಿ ಬದುಕಲು ಅನುಕೂಲವಾಗುವಂಥ ಕೈಕಾಲು, ಬೆರಳು, ಹೆಗಲು, ತಲೆ, ನಡು, ಪೃಷ್ಠ, ಹೊಟ್ಟೆ, ಹಲ್ಲು, ತುಟಿ, ಮೂಗು, ಕಣ್ಣು, ಕಿವಿ ಮುಂತಾದವುಗಳು ಜೀವಿಯ ಶರೀರಕ್ಕೆ ತಾವಾಗಿ ಮೂಡಿ ಬರುವದು ನನ್ನ ಮಾಯೆ.

ನಾಲಿಗೆಯ ಸವಿಯಿಂದ ಏನೇ ಪ್ರಾಣಿಗಳೂ ತಿಂದರೂ ಹಾಗೂ ಕುಡಿದರೂ ಜಠರಾಗ್ನಿಯಿಂದ ಜೀರ್ಣವಾಗಿ ದೇಹಕ್ಕೆ ಪೌಷ್ಟಿಕ ರಸವಾಗಿ ಆ ಪ್ರಾಣಿಯ ಬೆಳವಣಿಗೆ

ಯಾಗುವದು ನನ್ನ ಮಾಯೆ. ಜೀವನು ತಾಯಿಯ ಗರ್ಭದಲ್ಲಿ ಬಹುವಿಧವಾದ ಸುಖ ದುಃಖಗಳನ್ನು ಅನುಭವಿಸುತ್ತಾನೆ. ಆದರೆ ಹೊರಗೆ ಬಂದು ನೆಲದ ಮೇಲೆ ಬಿದ್ದ ಕೂಡಲೇ ಅದೆಲ್ಲವನ್ನೂ ಮರೆತುಬಿಡುವುದು ದೇವರ ಮಾಯೆ. ಒಂದೇ ನೆಲದಲ್ಲಿ ಹುಟ್ಟಿದ ಗಿಡಗಳಿಗೆ ಬೇರೆ ಬೇರೆ ಋತುಗಳಲ್ಲಿ ಬೇರೇ ಬೇರೆ ಫಲಗಳು ಬೇರೆ ಬೇರೆ ಹೂಗಳು ಆಗುತ್ತದೆ. ಇದು ನನ್ನ ಮಾಯೆ. ಮೋಡಗಳು ಸಮುದ್ರದ ಉಪ್ಪು ನೀರನ್ನು ತೆಗೆದುಕೊಂಡು ಲೋಕಕ್ಕೆ ಸಿಹಿ ನೀರನ್ನು ಸುರಿಸುವದು ನನ್ನ ಮಾಯೆ. ಕಾಡಿನಲ್ಲಿ ಬೆಳೆದ ಗಿಡ ಮೂಲಿಕೆಗಳಿಗೆ ಮಾನವ ದೇಹದ ರೋಗ ಪರಿಹಾರಕ ಶಕ್ತಿ ಇದ್ದುದು ವಿಷ್ಣು ಮಾಯೆ. ಎಂಥೆಂಥ ರಾಮ ಬಾಣ ಔಷಧಿಗಳು ಕೆಲವರಿಗೆ ಆರೋಗ್ಯ ವರ್ಧಕವಾದರೂ ಹಲವರಿಗೆ ಅದೇ ಔಷಧಿಗಳು ಮಾರಕವಾಗುವವು. ಮತ್ತುಳಿದವರಿಗೆ ಸಾಧಕವೂ ಆಗುವದಿಲ್ಲ. ಬಾಧಕವೂ ಆಗುವದಿಲ್ಲ. ಇದು ನನ್ನ ಮಾಯೆ.

ಮಣ್ಣಿನಲ್ಲಿ ಒಗೆದ ಬೀಜವು ಮೊಳೆತು ಗಿಡಬಳ್ಳಿಯಾಗುವುದು ನನ್ನ ಮಾಯೆ. ಒಂದು ಬೀಜದಿಂದ ಅನೇಕ ಧಾನ್ಯದ ಕಾಳುಗಳು ಉತ್ಪನ್ನವಾಗುವದು ವಿಷ್ಣು ಮಾಯೆ. ಆಗಸದಲ್ಲಿರುವ ಗರುಡನು ವಿಷ್ಣುವನ್ನೂ ಅವನ ಹದಿನಾಲ್ಕು ಲೋಕಗಳನ್ನೂ ಲೀಲೆಯಿಂದ ಹೊರುತ್ತಾನೆ. ಆದರೆ ವಸ್ತುಸ್ಥಿತಿಯೆಂದರೆ ಗರುಡನಲ್ಲಿ ನಾನೇ ಹೊಕ್ಕು ನನ್ನನ್ನು ನಾನೇ ಹೊರುತ್ತೇನೆ. ಆದರೂ ಗರುಡನು ಹರಿಯನ್ನು ಹೊರುತ್ತಾನೆ. ಎಂದು ಲೋಕ ಪ್ರಸಿದ್ಧಿಯಾದದ್ದು ನನ್ನ ಮಾಯೆ. ಹಸುಗಳು ಹುಲ್ಲು ದಂಟುಗಳನ್ನು ತಿಂದರೂ ಅವೆಲ್ಲವೂ ಹಾಲಾಗಿ ಬರುವದು ನನ್ನ ಮಾಯೆ. ಸ್ತ್ರೀ ಪುರುಷರು ಒಂದೇ ತರಹದ ಆಹಾರವನ್ನು ತಿಂದರೂ ಸ್ತ್ರೀದೇಹದಲ್ಲಿ ಮಾತ್ರ- ಅದೂ ಕೂಡ ಮಗು ಇದ್ದರೆ ಮಾತ್ರ ತಿಂದದ್ದೆಲ್ಲ ಹಾಲಾಗಿ ಜೀವರಸವಾಗಿ ಮಗುವಿನ ಬಾಯಿಗೆ ಹರಿದು ಬರುವದು ನನ್ನ ಮಾಯೆ. ಭೂದೇವಿ, ಹೀಗೆ ಜಗತ್ತಿನಲ್ಲಿ ನಡೆಯುವ ವಿಶೇಷ ವ್ಯಾಪಾರಗಳೆಲ್ಲವೂ ನನ್ನ ಮಾಯೆ ಅಥವಾ ನನ್ನ ಇಚ್ಛೆಯಿಂದಲೇ ನಡೆಯುತ್ತವೆ. ನಾನು ನನ್ನ ಮಾಯೆಯಿಂದಲೇ ಯಜ್ಞ ಸೃಷ್ಟಿಯವನ್ನು ಮಾಡಿ ಯಜ್ಞಭೋಗಿಗಳಾದ ದೇವತೆಗಳನ್ನು ಸಂತೋಷಪಡಿಸುತ್ತೇನೆ.

ಸಾಗರದ ನೀರು ಎಂದೂ ಕಡಿಮೆಯಾಗದೆ ಜಗತ್ತಿಗೆಲ್ಲ ಮೋಡದ ಮುಖಾಂತರ ನೀರನ್ನು ಒದಗಿಸುತ್ತಿರುವದು ನನ್ನ ಮಾಯೆ. ಎಷ್ಟೇ ಮಳೆಯಾಗಿ ಎಲ್ಲ ನದಿಗಳಿಗೂ ಮಹಾಪೂರ ಬಂದರೂ ಸಮುದ್ರದ ನೀರು ಮಾತ್ರ ಎಂದೂ ಉಕ್ಕೇರಿ ದಂಡೆಯ ಮೇಲಿನ ನಗರದೇಶಗಳು ಹಾಳಾಗದಂತೆ ನೀರೆಲ್ಲ ನಿರ್ದಿಷ್ಟಮಿತಿ ಮೇರೆಯಲ್ಲಿ ಇರುವದೂ ನನ್ನ ಮಾಯೆ. ನನ್ನ ಇಚ್ಛಾರೂಪವಾದ ಆ ವಿಷ್ಣುಮಾಯೆಯ ಪ್ರಭಾವದಿಂದಲೇ ಇಂದ್ರನು ವೃತ್ರಾಸುರನನ್ನು ಕೊಂದನು. ಕುಬೇರನು ಐಶ್ವರ್ಯದ ನಿಧಿಗೆಲ್ಲ ಒಡೆಯನಾದನು. ಸೂರ್ಯನು ಬೆಳಕಿನ ಭಾಂಡಾರವಾಗಿ ಬೆಳಗುವನು. ಒಡವಾಗ್ನಿಯು ಸಮುದ್ರದ ನೀರು ಹೆಚ್ಚಾಗಿ ಹೊರಚೆಲ್ಲದಂತೆ ಜಲಗರ್ಭದಲ್ಲಿಯೇ ಅಡಗಿ ಸಾಗರದ ಜಲರಾಶಿಯನ್ನೆಲ್ಲ ಕುಡಿದು ಕಡಿಮೆ ಮಾಡಿ ಬಿಡುವದು. ಗಾಳಿಯು ಮುಗಿಲಿನ ಮೂಲೆಯಲ್ಲಿ ಕೂಡಿಬಿದ್ದ ಮೋಡಪಡೆಗಳನ್ನು ಅತ್ತಿತ್ತ ಚದುರಿಸಿ ಬೆಟ್ಟ ಬಯಲು, ತಗ್ಗು-ತೆವರು, ನೆಲ, ಹೊಲ, ಎಲ್ಲ ಕಡೆಗೂ ಸಮವಾಗಿ ಮಳೆ ಬೀಳುವಂತೆ ಮಾಡುವದು. ಸೂರ್ಯನ ಕಿರಣವು ಜನರನ್ನು ಸುಡದೆ, ಚಂದ್ರನ ಕಿರಣವು ಜಗತ್ತನ್ನು

ಮಂಜುಗಟ್ಟಿಸದೆ, ಇಳೆಗೂ ಬೆಳೆಗೂ ಜೀವರಾಶಿಗೂ ಹಿತಮಿತವಾಗಿ ಬೆಳವಣಿಗೆಗೆ ಕಾರಣವಾಗುತ್ತದೆ. ಇದೆಲ್ಲವೂ ನನ್ನ ಮಾಯೆ ಎಂದು ತಿಳಿ.

ಪ್ರಳಯ ಕಾಲದಲ್ಲಿ ನನ್ನ ಮಾಯೆಯಿಂದ ಹನ್ನೆರಡು ಜನ ಸೂರ್ಯರು ಉದಿಸಿ ಪ್ರಪಂಚವನ್ನೆಲ್ಲ ಸುಡುವರು. ಅನಂತರ ಮೋಡಗಳು ಒನಕೆಯ ಗಡುತರ ನೀರಿನ ಧಾರೆಗಳಿಂದ ಮಳೆಸುರಿಸಿ ಪೊಡವಿಯ ಒಡಲಿನಲ್ಲಿ ಕಡಲು ಭೋರ್ಗರೆಯುವಂತೆ ಮಾಡುವವು. ಅದು ನನ್ನ ಮಾಯೆಯೇ. ಆ ಪ್ರಳಯ ಜಲಧಿಯಲ್ಲಿ ಹಾವು ಹಾಸಿಗೆಯಾಗುವದು ನನ್ನ ಮಾಯೆ. ಹಾವಿನ ಮೇಲೆ ನಾನು ಮಲಗುವದು, ಜೀವರಾಶಿಗಳೆಲ್ಲ ನನ್ನ ಉದರದಲ್ಲಿ ಲೀನವಾಗುವದು ನನ್ನ ಮಾಯೆ. ಭೂದೇವಿ ಆ ಜಲರಾಶಿಯಲ್ಲಿ ಮುಳುಗಿ ರಸಾತಲಕ್ಕೆ ಇಳಿದ ನಿನ್ನನ್ನು ಶರಧಿ ಶೈಲ ಸಹಿತವಾಗಿ ಕೋರೆದಾಡೆಯ ಮೇಲೆ ಹದಿನೇಳು ಬಾರಿ ಎತ್ತಿ ಹಿಡಿದದ್ದು ಅದೇ ವೈಷ್ಣವೀಯ ಮಾಯೆ.

ಬ್ರಹ್ಮ ರುದ್ರಾದಿ ದೇವತೆಗಳು ನನ್ನ ಈ ಮಾಯೆಯನ್ನು ತಿಳಿಯದಿರುವದೂ ನನ್ನ ಮಾಯೆ. ಧರಣಿ, ನನ್ನ ಈ ಮಾಯೆಯ ಮಹಿಮೆ ಮಿಂಚಿನಂತೆ ರೋಮಾಂಚಕಾರಿ ಯಾಗಿರುತ್ತದೆ. ಅನೇಕ ಬಗೆಯಾದ ಆ ವಿಷ್ಣು ಮಾಯೆಯ ರೋಮಹರ್ಷಣ ಚರಿತ್ರೆಗಳಲ್ಲಿ ಒಂದು ಸನ್ನಿವೇಶವನ್ನು ಹೇಳುತ್ತೇನೆ ಕೇಳು. ಸೋಮಶರ್ಮನೆಂಬ ಒಬ್ಬ ಬ್ರಾಹ್ಮಣ ಯತಿಯು ನನ್ನನ್ನು ಕುರಿತು ಉಗ್ರವಾದ ತಪಸ್ಸು ಮಾಡಿದನು. ಸದಾಚಾರ ಸಂಪನ್ನನೂ, ಹರಿಭಕ್ತನೂ ಆದ ಆ ಸೋಮಶರ್ಮನ ನಿರಂತರ ಧ್ಯಾನೋಪಾಸನಾ ರೂಪವಾದ ತಪೋನುಷ್ಠಾನದಿಂದ ಒಲಿದು ಪ್ರತ್ಯಕ್ಷನಾಗಿ ನಾನು ಅವನಿಗೆ ಸಂದರ್ಶನವನ್ನಿತ್ತೆನು. ಮತ್ತು ಆ ನನ್ನ ಭಕ್ತನನ್ನು ಕುರಿತು ಪ್ರೀತಿಯಿಂದ ಹೇಳಿದೆನು.-

''ಬ್ರಾಹ್ಮಣಾ, ನಿನಗೆ ಮಂಗಳವಾಗಲಿ. ನಿನ್ನ ತಪಸ್ಸಿನಿಂದ ನಾನು ತೃಪ್ತನಾಗಿದ್ದೇನೆ ನಿನಗೆ ಬೇಕಾದ ವರವನ್ನು ಬೇಡು. ಬಯಸಿದ್ದನ್ನು ಕೊಡುತ್ತೇನೆ ಮುತ್ತು, ರತ್ನ, ಬೆಳ್ಳಿ, ಬಂಗಾರ, ಹಸು, ಶಿಶು, ಮೇರೆ ಇಲ್ಲದ ರಾಜ್ಯ ಯಾವದು ಬೇಕು ? ಬದುಕಿದ್ದಾಗಲೇ ಸ್ವರ್ಗ ಸುಖವನ್ನು ಅನುಭವಿಸಬೇಕೆಂದಿದ್ದರೆ ಹೇಳು. ಆ ಸೌಖ್ಯವನ್ನು ನಿನಗೆ ಒದಗಿಸುತ್ತೇನೆ. ಅಥವಾ ರಂಭೆ ಊರ್ವಶಿಯರಂಥ ಸುರಸುಂದರಿಯರ ಸಂಭೋಗ ಬೇಕೇ ? ಹೊನ್ನಿನ ಹಂಡೆ, ರಂಜಣಿಗೆಗಳಲ್ಲಿ ಹಣ ಹಾಗೂ ರತ್ನಗಳಿಂದ ತುಂಬಿ ತುಳುಕುತ್ತಲಿರುವ ದೊಡ್ಡ ನಿಧಿ ನಿನ್ನ ಕೈವಶವಾಗಬೇಕೆಂದಿದಿಯೋ ? ಸ್ವರ್ಗದ ಬೆಲೆವೆಣ್ಣುಗಳು ಬೇಡವಾದರೆ ಮನೆಯ ಮಡದಿಯರ ಮುಖದಲ್ಲಿಯೇ ಅಪ್ಸರೆಯರ ಚೆಲುವು ಸೊಬಗು ಕಳೆಕಾಂತಿಗಳು ಸೂಸುವಂತೆ ಮಾಡಲೆ ? ಹೇಳು. ನಿನಗೇನು ಬೇಕು ?''. ಭಗವಂತನ ಈ ಪ್ರಸನ್ನ ವಚನವನ್ನು ಕೇಳಿ ಆ ಬ್ರಾಹ್ಮಣನು ದೇವರೆದುರು ಭೂಮಿಯ ಮೇಲೆ ಅಡ್ಡಬಿದ್ದು ಕೈ ಜೋಡಿಸಿ ಮಾತನಾಡಿದನು.-

''ಸ್ವಾಮಿ, ನನಗೆ ನಿನ್ನ ಭೂಮಿ ಬೇಡ, ಬಂಗಾರ ಬೇಡ, ಸ್ವರ್ಗ ಲೋಕದ ಆ ಬಿಂಕದ ಸಿಂಗಾರಿಯರೂ ಬೇಡ. ಭೂಲೋಕದ ಐಶ್ವರ್ಯವೂ ಬೇಡ. ಆದರೆ ನೀನು ಕೋಪಿಸದಿದ್ದರೆ ಒಂದು ವರವನ್ನು ಮಾತ್ರ ಕೇಳುತ್ತೇನೆ. ನನಗೆ ಬಹು ದಿನದಿಂದ ಒಂದು ಆಶೆ. ವಿಷ್ಣುವಿನ ಮಾಯೆಯನ್ನು ತಿಳಿಯಬೇಕು ಎಂದು. ಅದಕ್ಕಾಗಿಯೇ ನಾನು ಈ ತಪಸ್ಸನ್ನು ಕೈಕೊಂಡಿದ್ದು. ನನಗೆ ಬೇರೆ ಏನೂ ಬೇಡ ಅದನ್ನೇ ಕರುಣಿಸು.

ಸೋಮ ಶರ್ಮನ ಈ ವಿಚಿತ್ರ ಹಂಬಲವನ್ನು ಕಂಡು ನನಗೆ ನಗೆ ಬಂದಿತು. ನಾನು ಅವನಿಗೆ ''ಬ್ರಾಹ್ಮಣ, ನನ್ನ ಮಾಯೆಯಿಂದ ನಿನಗೇನು ? ದೇವತೆಗಳಿಗೂ ತಿಳಿಯದ ಆ ವಿಷ್ಣು ಮಾಯೆಯನ್ನು ನೀನೆಂತು ಅರಿಯಬಲ್ಲೆ ?'' ಎಂದು ಕೇಳಿದೆ. ಆದರೆ ಆ ಥಂಡಿ ಬ್ರಾಹ್ಮಣನು ತನ್ನ ಮೊಂಡತನವನ್ನು ಹೂಡಿದ.. ''ದೇವಾ, ನೀನು ನನ್ನ ತಪಸ್ಸಿನಿಂದ ಪ್ರೀತನಾಗಿದ್ದರೆ, ನನಗೆ ಈ ವರವನ್ನೇ ದಯಪಾಲಿಸು.'' ಸೋಮಶರ್ಮನ ಆ ನಿರ್ಧಾರದ ನುಡಿಯನ್ನು ಆಲಿಸಿ ನಾನು ಅವನಿಗೆ ತಥಾಸ್ತು' ಎಂದು ಹೇಳಿದೆ.

''ವಿಪ್ರ ಕುಬ್ಜಾಮ್ರಕ ಕ್ಷೇತ್ರಕ್ಕೆ ಹೋಗು. ಅಲ್ಲಿಯ ಗಂಗೆಯಲ್ಲಿ ಸ್ನಾನಮಾಡು. ಅನಂತರ ನಿನಗೆ ನನ್ನ ಮಾಯೆಯ ಪರಿಚಯವಾಗವದು'' ಎಂದು ತಿಳಿಸಿದೆನು.

ನನ್ನ ಆದೇಶದಂತೆ ವಿಷ್ಣುಮಾಯೆಯನ್ನು ಅರಿಯಲು ಕುತೂಹಲಭರಿತನಾದ ಆ ಬ್ರಾಹ್ಮಣನು ಕುಬ್ಜಾಮ್ರಕ ಕ್ಷೇತ್ರಕ್ಕೆ ಹೋದನು. ಅಲ್ಲಿರುವ ನನ್ನ ಕ್ಷೇತ್ರಸ್ವಾಮಿಯಾದ ದೇವತಾಮೂರ್ತಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿದನು. ಅನಂತರ ಗಂಗಾ ತಟಾಕಕ್ಕೆ ಹೋಗಿ ತನ್ನ ಕೈಯಲ್ಲಿರುವ ಗಿಂಡಿ, ಕಮಂಡಲು, ಪಂಜೆ ಮುಂತಾದ ಪದಾರ್ಥ ಗಳನ್ನೂ, ತನ್ನ ಬಟ್ಟೆ ಬರೆಗಳನ್ನು ಹಾಕಿದ ಒಂದು ಚೀಲದಂತಿರುವ ಹಸಿಬೆಯನ್ನೂ ಅದೇ ನದಿಯ ದಂಡೆಯ ಮೇಲೆ ವ್ಯವಸ್ಥಿತವಾಗಿ ಗುರುತು ಮಾಡಿಕೊಂಡು ಓರಣದಿಂದ ಇಟ್ಟನು. ಅನಂತರ ವಿಧಿಪೂರ್ವಕವಾಗಿ ಸ್ನಾನಾಂಗ ಸಂಕಲ್ಪವನ್ನು ಮಾಡಿ, ತೀರ್ಥ ಪ್ರಾರ್ಥನೆಯನ್ನು ಸಲ್ಲಿಸಿ, ಗಂಗಾನದಿಯ ನೀರಿನಲ್ಲಿ ಇಳಿದನು. ಗಂಗೆಯನ್ನು ಸ್ತೋತ್ರ ಮಾಡುತ್ತ ಅವನು ನೀರಿನಲ್ಲಿ ಮುಳುಗಿದಾಗ ಒಮ್ಮೆಲೇ ಒಂದು ಚಮತ್ಕಾರವು ನಡೆಯಿತು.

ನೀರಿನಲ್ಲಿ ಮುಳುಗಿದ ಆ ಸೋಮಶರ್ಮನಿಗೆ ಒಮ್ಮೆಲೇ ಅತ್ಯಂತ ಸೂಕ್ಷ್ಮರೂಪ ಬಂದು ನೀರಿನಲ್ಲಿ ತೇಲ ತೊಡಗಿದನು. ಅವನ ಜೀವವು ಅಣುರೂಪದಿಂದ ಅದೇ ಗಂಗೆಯ ನೀರಿನಲ್ಲಿ ಅಲ್ಲಿಯೇ ತೀರದ ಬಳಿಯಲ್ಲಿ ತೇಲುತ್ತಲಿರುವಾಗ ಒರ್ವ ಬೇಡರ ಹೆಂಗಸು ನೀರಿಗೆಂದು ನದಿಗೆ ಬಂದಳು. ನದಿಯ ನೀರಿನಲ್ಲಿ ತನ್ನ ಬಿಂದಿಗೆಯನ್ನು ಮುಳುಗಿಸಿದಳು. ಸೋಮಶರ್ಮ ಮುನಿಯು ನೀರಿನೊಂದಿಗೆ ಆ ಬೇಡತಿಯ ಕೊಡದಲ್ಲಿ ಒಳಹೊಕ್ಕನು. ಮನೆಗೆ ಹೋದ ಬಳಿಕ ಆ ಭಿಲ್ಲ ಭಾಮಿನಿಯು ನೀರಡಿಸಿ ಆ ಬಿಂದಿಗೆಯಲ್ಲಿಯ ನೀರನ್ನು ಗಟಗಟ ಕುಡಿದಳು. ಆ ನೀರಿನ ಜೊತೆಗೆ ಈ ಮುನಿಯ ಅಣು ಜೀವವೂ ಅವಳ ಹೊಟ್ಟೆಯಲ್ಲಿ ಹೋಯಿತು. ಗರ್ಭಾಶಯವನ್ನು ಸೇರಿತು. ಬ್ರಾಹ್ಮಣ ಜೀವ ಬೇಡತಿಯ ಗರ್ಭಪಿಂಡವಾಗಿ ಬೆಳೆಯತೊಡಗಿತು.

ಎಷ್ಟಾದರೂ ಅವನು ಸದ್ಬ್ರಾಹ್ಮಣನಲ್ಲವೇ ? ಅವನಿಗೆ ಆ ಭಿಲ್ಲನಾರಿಯ ಗರ್ಭದಲ್ಲಿದ್ದರೂ ತನ್ನ ಜಾತಿಯ ನೆನಪು ಅಚ್ಚಳಿಯದೇ ಜಾಗರೂಕವಾಗಿತ್ತು. ಗರ್ಭವಾಸದ ದುಃಖದಿಂದ ಪೀಡಿತನಾದ ಅವನು ಭ್ರೂಣವಾಗಿ ಬಿದ್ದಲ್ಲೇ ಯೋಚಿಸುತ್ತಿದ್ದ.

''ಅಯ್ಯೋ, ಇದೇನು ನನ್ನ ಪ್ರಾರಬ್ಧ! ಸದಾಚಾರ ಸಂಪನ್ನ ಬ್ರಾಹ್ಮಣನಾಗಿ ಯಾರಿಗೂ ಬೇಡವಾದ ಈ ಬೇಡರ ಕುಲದ ನಾರಿಯ ಗರ್ಭದಲ್ಲಿ ನವೆಯಬೇಕಾಗಿ ಬಂದಿದೆ. ಈ ಗರ್ಭವಾಸವೆಂದರೆ ನರಕಕ್ಕಿಂತ ಕಡೆ. ಜನ್ಮಾಂತರದಲ್ಲಿ ಏನು ದುಷ್ಕರ್ಮ ಮಾಡಿದ್ದೆನೋ ಏನೋ? ಮಲಮೂತ್ರಗಳಿಂದ ತುಂಬಿದ ಈ ಬೇಡತಿಯ ಬಸಿರಿನಲ್ಲಿ,

ಮಾಂಸ ರಕ್ತಗಳ ಕೆಸರಿನಲ್ಲಿ, ನರಕದಲ್ಲಿಯ ನೊರಜಿನಂತೆ ನರಳಾಡುತ್ತಿದ್ದೇನೆ. ಬಹುಶಃ ಇದೆಲ್ಲವೂ ಶ್ರೀವಿಷ್ಣುವಿನ ಮಾಯೆಯ ಮಾಟವೇ ಸರಿ. ಭಗವಂತ ಬೇಡವೆಂದರೂ ನಾನು ಮೊಂಡಾಟಮಾಡಿ ಅವನ ಮಾಯೆಯ ಆಳವನ್ನು ಅಳೆಯಲು ಬಯಸಿದೆ. ಆ ವಿಷ್ಣುವೆಲ್ಲಿ? ಕ್ಷುದ್ರನಾದ ನಾನೆಲ್ಲಿ? ಗಂಗೆಯ ತೀರ್ಥವೆಲ್ಲಿ? ಈ ಬೇಡತಿಯ ಗರ್ಭಾಶಯದ ನರಕವಾಸವೆಲ್ಲಿ? ಇರಲಿ ಈ ಕಿರಾತ ಕಾಮಿನಿಯ ಬಸಿರಿನಿಂದ ಹೊರಬಿದ್ದ ಕೂಡಲೇ ಭಗವಂತನಲ್ಲಿ ಕ್ಷಮೆ ಕೇಳಿಕೊಳ್ಳುತ್ತೇನೆ''. ಆದರೆ ವಿಷ್ಣುವಿನ ಮಾಯೆಯು ಗಹನವಿದ್ದಷ್ಟೇ ಗಂಭೀರವೂ ಇರುವವದಷ್ಟೇಯು ?

ಆ ವ್ಯಾಧವನಿತೆಯ ಹೊಟ್ಟೆಯಿಂದ ಆ ಮುನಿಯು ಮಗುವಾಗಿ ಹುಟ್ಟಿದ ಕೂಡಲೇ ಅವನಿಗೆ ತನ್ನ ಜಾತಿಯ ಸ್ಮರಣವು ಮರೆತು ಹೋಯಿತು. ಅವನಿಗೆ ತಾನು ಬ್ರಾಹ್ಮಣನಾಗಿ ಇದ್ದೆ ಎಂಬುದರ ಅರಿವೇ ಉಳಿಯಲಿಲ್ಲ. ಎಲ್ಲ ಶಿಶುಗಳಂತೆ ಅವನೂ ಆ ಬೇಡರ ಹೆಣ್ಣುಮಗಳ ಹೆಣ್ಣು ಕೂಸಾಗಿ ಬೆಳೆಯತೊಡಗಿದನು. ಮನೆಯ ಒಡೆಯನಾದ ಆ ಬೇಡನು ಸಿರಿವಂತನಾದುದರಿಂದ ಈ ಕಿರಾತಕುಮಾರಿಗೆ ಬಾಲ್ಯದಲ್ಲಿ ಯಾವದೂ ಕೊರತೆ ಇರಲಿಲ್ಲ. ದೊಡ್ಡ ಮನೆ, ಭಕ್ಷ್ಯ ಭೋಜ್ಯದ ಊಟ, ತೊಡಲು ಬೇಕಾದಷ್ಟು ಆಭರಣ, ಉಡಲು ಪಟ್ಟೆ ಪೀತಾಂಬರಗಳು, ಸಮೃದ್ಧ ಜೀವನ, ಶ್ರೀಮಂತಿಕೆಯ ಬದುಕು. ಭಾಗ್ಯದ ಕೈಕೂಸಾಗಿಯೇ ಆ ವ್ಯಾಧ ಬಾಲೆಯು ಬೆಳೆದು ಪ್ರೌಢಕುಮಾರಿಯಾದಳು.

ಶ್ರೀಮಂತನಾದ ಅವಳ ತಂದೆಯು ಮತ್ತೊಬ್ಬ ಐಶ್ವರ್ಯವಂತರ ಮನೆಗೆ ಅವಳನ್ನು ಮದುವೆ ಮಾಡಿ ಕೊಟ್ಟನು. ಅಲ್ಲಿಯೂ ವಿಲಾಸದ ಜೀವನ, ಸ್ವಚ್ಛಂದವಿಹಾರ. ಕಂಡದ್ದನ್ನೆಲ್ಲ ತಿನ್ನುವದು, ಸಿಕ್ಕದ್ದನ್ನೆಲ್ಲ ಕುಡಿಯುವದು. ಶೆರೆ ಕುಡಿದು ಪ್ರಾಣಿಗಳನ್ನು ಕೊಲ್ಲುವದು. ಅಂತೂ ಬಾಳಿನತುಂಬ ಕುಡಿತ ಕುಣಿತ ಕಾಮದ ಮಣಿತ ಜೂಜು ಮೋಜು. ಅವಳಿಗೆ ಏಳು ಜನ ಮಕ್ಕಳಾದರು. ಹೀಗೆ ಐವತ್ತು ವರ್ಷಗಳು ಕಳೆದವು. ಒಂದು ದಿನ ಮಾಯೆಯಿಂದ ಪ್ರೇರಿತಳಾದ ಆ ಕಿರಾತಾಂಗನೆಯು ಹೊಲಸಾದ ತನ್ನ ಬಟ್ಟೆಯನ್ನು ತೊಳೆಯಲು ಆ ಗಂಗಾ ನದಿಗೆ ಬಂದಳು. ಬಿಸಿಲಿನಿಂದ ಬೆವತು ಬಸವಳಿದ ಅವಳ ದೇಹವು ಬೇಸಿಗೆಯ ದಾಹದಿಂದ ಉರಿಯ ತೊಡಗಿತ್ತು. ಅದಕ್ಕಾಗಿ ಅವಳು ತಾನು ತಂದ ಬಟ್ಟೆ ಹಾಗೂ ಬಿಂದಿಗೆಗಳನ್ನು ಗಂಗೆಯ ದಂಡೆಯಮೇಲೆ ಇಟ್ಟು ತಣ್ಣೀರಿನಲ್ಲಿ ಮೀಯುವದಕ್ಕಾಗಿ ನದಿಯಲ್ಲಿ ಇಳಿದಳು. ಬಿಸಿಲಿನ ಬೇಗೆಗೆ ಕಾದು ಹೋದ ತಲೆಗೂ ತುಸು ತಂಪಾಗಲಿ ಎಂದು ನೀರಿನಲ್ಲಿ ಮುಳುಗು ಹಾಕಿದಳು. ಆ ಕಿರಾತ ಕಾಮಿನಿಯು ನೀರಿನಲ್ಲಿ ಮುಳುಗಿದ ಕೂಡಲೇ ಅವಳು ದಂಡಕಮಂಡಲವನ್ನು ಧರಿಸಿದ ಋಷಿಯಾಗಿ ಬಿಟ್ಟಳು. ಆ ಋಷಿಗೆ ಮೊದಲಿನ ತನ್ನದೆಲ್ಲದರ ನೆನಪು ಮರುಕಳಿಸಿತು. ತಾನು ಹಿಂದೆ ಸೋಮಶರ್ಮ ಎಂಬ ಋಷಿಯಾಗಿದ್ದು ಗಂಗಾ ಸ್ನಾನಕ್ಕೆಂದು ಬಂದು ನೀರಿನಲ್ಲಿ ಮುಳುಗು ಹಾಕಿದ್ದು ನೆನಪಾಯಿತು. ತಾನು ಸ್ನಾನ ಮಾಡುವ ಮುನ್ನ ದಂಡೆಯ ಮೇಲೆ ವ್ಯವಸ್ಥಿತವಾಗಿ ಇರಿಸಿದ ಗಿಂಡಿ, ಪಂಜೆ, ಕಮಂಡಲು, ಎಲ್ಲವೂ ಅದೇ ಸ್ಥಳದಲ್ಲಿ ಸುರಕ್ಷಿತವಾಗಿ ಇದ್ದವು. ಅನಂತರ ವಿಷ್ಣುವಿನ ಮಾಯೆಯನ್ನು ತಿಳಿಯ ಬಯಸಿದ ಆ ಸೋಮಶರ್ಮ ಬ್ರಾಹ್ಮಣನು ಗಂಗೆಯ ತಟಾಕದಲ್ಲಿದ್ದ ತನ್ನ ಬಟ್ಟೆ ಬರೆಗಳನ್ನು ತೆಗೆದುಕೊಂಡನು. ಇಷ್ಟು ಹೊತ್ತು ಶೆರೆಗುಡುಕ, ಬೇಡರ ಹೆಣ್ಣಾಗಿದ್ದ ಅವನಿಗೆ ತಾನು

ಮೊದಲು ದಂಡೆಯ ಮೇಲಿಟ್ಟ ಪವಿತ್ರವಾದ ಋಷಿ ವಸ್ತ್ರಗಳನ್ನು ಮುಟ್ಟಲಿಕ್ಕೂ ನಾಚಿಕೆ ಎನಿಸಿತು. ಈ ಯೋಗಾಯೋಗದ ಬಗ್ಗೆ ವಿಚಾರಿಸುತ್ತ ಅವನು ಗಂಗೆಯ ಮರುಳು ದಿನ್ನೆಯ ಮೇಲೆ ಕುಳಿತುಕೊಂಡು ಮರಳನಂತಾಗಿ ಚಿಂತಿಸ ತೊಡಗಿದನು.

''ಪಾಪಿಯಾದ ನಾನು ಎಂಥ ದುಷ್ಕರ್ಮವನ್ನು ಮಾಡಿರಬಹುದು! ಶುಚಿರ್ಭೂತ ಬ್ರಾಹ್ಮಣನಾಗಿ ಹುಟ್ಟಿದ ನಾನು ಬಹುಕಾಲ ಜಪೋಪವಾಸ, ತಪೋವ್ರತಗಳಿಂದ ಪವಿತ್ರ ಯತಿಯಾಗಿ ಕೊನೆಗೆ ಬೇಡರ ಕುಲದಲ್ಲಿ ಹೆಣ್ಣಾಗಿ ಹುಟ್ಟುವ ಪ್ರಸಂಗವು ಬಂದಿತು. ಅಲ್ಲಿ ನಾನು ನಿಷಿದ್ಧ ವಸ್ತುಗಳನ್ನೆಲ್ಲ ತಿನ್ನಬೇಕಾಯಿತು. ಆ ಕುಲದಲ್ಲಿ ಕ್ರೂರ ರಕ್ಕಸಿಯಂತಾದ ನಾನು ಎಷ್ಟೋ ಹಾರುವ ಹಕ್ಕಿಗಳನ್ನು ಕೊಂದೆ. ನೀರಿನಲ್ಲಿ ಈಸುವ ಮೀನ ಮೊಸಳೆಗಳನ್ನು ಕೊಂದೆ. ನೆಲದಲ್ಲಿ ನಡೆದಾಡುವ ಎಷ್ಟೋ ಪ್ರಾಣಿಗಳನ್ನು ಕೈಮುಟ್ಟಿ ಹೊಡೆದು ಕೊಂದೆ. ಅವುಗಳ ಮಾಂಸವನ್ನೂ ತಿಂದೆ. ಕುಡಿಯಬಾರದ್ದನ್ನು ಕುಡಿದೆ. ಮಾಡಬಾರದ್ದನ್ನು ಮಾಡಿದೆ.ಹರೆಯದ ಮಬ್ಬು, ಕಾಮದ ಉಬ್ಬು, ಯೌವನದ ಕೊಬ್ಬು ಮೂರೂ ಮೇಳವಿಸಿದಾಗ ಕಂಡ ಗಂಡಸರೊಡನೆ ಕಾಮ ಕೇಳಿಯಾಡಿದೆ. ಕೈಹಿಡಿದ ಬೇಡನಿಂದಲೂ ಮೂರೂ ಗಂಡು ನಾಲ್ಕು ಹೆಣ್ಣು ಎರಡನ್ನೂ ಪಡೆದೆ. ಪಾಪ ಕಾರ್ಯದಲ್ಲಿಯೇ ಮೈಯನ್ನೂ ಮುಪ್ಪು ಮಾಡಿದೆ. ಒಳ್ಳೇ ಬ್ರಾಹ್ಮಣನಾದ ನನಗೆ ಇಂಥ ಕೀಳು ಜನ್ಮ ಹಾಗೂ ಕುಚ್ಛಿತ ಕ್ರೂರ ಕರ್ಮಾಚರಣೆಗಳನ್ನು ಮಾಡುವ ಪ್ರಸಂಗವು ಏಕೆ ಬಂದಿತು ? ಹೇಗೆ ಬಂದಿತು ?''

ಅತ್ತ ಆ ಬೇಡನ ಮನೆಯಲ್ಲಿ ನದಿಗೆ ಹೋದ ಮಡದಿಯು ಎಷ್ಟು ಹೊತ್ತಾದರೂ ಬಾರದಿದ್ದಾಗ ಅವಳ ಗಂಡನು ಗಂಗೆಯ ತಡಿಗೆ ಓಡಿಬಂದನು. ತನ್ನ ನೆಚ್ಚಿನ ನಲ್ಲೆಯನ್ನು ಅಲ್ಲಿ ಎಲ್ಲ ಕಡೆಗೂ ಹುಡುಕಾಡಿದನು. ಅಲ್ಲಿ ಯಾರೂ ಇರಲಿಲ್ಲ. ಒಬ್ಬ ಋಷಿಯು ಮಾತ್ರ ತಪಸ್ಸು ಮಾಡುತ್ತ ಕುಳಿತಿದ್ದನು. ಕಾತರನಾದ ಆ ಕಿರಾತನೂ ಅವನ ಮನೆಯವರೂ ನದಿಯ ಬಳಿಗೆ ಬಂದು ದೈನ್ಯ ತುಂಬಿ ಹುಡುಕಿದರು. ಅವನ ಹೆಂಡತಿಯು ನದಿಗೆ ಬರುವಾಗ ತಂದ ನೀರಿನಕೊಡ ಹಾಗೂ ಮಲಿನವಾದ ಬಟ್ಟೆಗಳು ಅವಳು ಇಟ್ಟಂತೆಯೇ ದಂಡೆಯ ಮೇಲೆ ಇದ್ದವು. ಅವುಗಳನ್ನು ನೋಡಿ ಬೇಡನ ಮನೆಯ ಜನರಿಗೆಲ್ಲ ತಮ್ಮ ಬೇಡತಿಯು ಗಂಗೆಯ ನೀರಿನಲ್ಲಿ ಮುಳುಗಿ ಸತ್ತಿದ್ದಾಳೆ ಎಂದು ಖಾತ್ರಿಯಾಯಿತು. ಆ ಬೇಡರ ಯಜಮಾನನಿಗೆ ದುಃಖವು ತುಂಬಿ ಬಂದಿತು. ಅವಳು ಅಲ್ಲಿ ಇಟ್ಟು ಹೋದ ಬಟ್ಟೆ ಹಾಗೂ ಬಿಂದಿಗೆಗಳನ್ನು ಮುಟ್ಟಿ ಮುಟ್ಟಿ ದುಃಖ ಉಕ್ಕಿ ಅವನು ಶೋಕ ಮಾಡತೊಡಗಿದನು.

''ಈ ಬಟ್ಟೆ ಹಾಗು ಬಿಂದಿಗೆಯು ಇಲ್ಲಿಯೇ ಭಾಗೀರಥಿಯ ದಂಡೆಯಲ್ಲಿರುತ್ತವೆ. ಆದರೆ ಇವುಗಳನ್ನು ಇಲ್ಲಿ ತಂದು ಇರಿಸಿದ ಆ ನನ್ನ ಹೆಂಡತಿಯು ಮಾತ್ರ ಕಾಣುವದಿಲ್ಲ. ಯಾವದೋ ಒಂದು ಮೀನ ಮೊಸಳೆ ಮುಂತಾದ ಜಲಚರವು ಅವಳನ್ನು ಸ್ನಾನಮಾಡುವಾಗ ಒಳಗೆ ಸೆಳೆದು ಕೊಂಡು ಹೋಗಿ ಕೊಂದುತಿಂದಿರಬಹುದು. ಅಥವಾ ಗಂಗಾತೀರಕ್ಕೆ ಬಂದ ಅವಳನ್ನು ಯಾವದಾದರೊಂದು ಬ್ರಹ್ಮರಾಕ್ಷಸವಾಗಲೀ ಭೂತಪ್ರೇತ ಪಿಶಾಚಿಗಳಾಗಲೀ ಸೆಳೆದಿರಬಹುದೇ? ಅಥವಾ ನೀರಿನಲ್ಲಿಳಿದಾಗ ಯಾವ ದಾದರೊಂದು ರೋಗ ಬಂದು ಮುಳುಗಿರಬಹುದೇ ?

"ಪ್ರಿಯೇ, ನೀನು ನನ್ನನ್ನು ಬಿಟ್ಟು ಒಬ್ಬಳೇ ಏಕೆ ತೆರಳಿದೆ ! ನಾನು ಜನ್ಮದಿಂದ ಬೇಡನಾದರೂ ಕೃತಿಯಿಂದ ಮಾತ್ರ ನಿನಗೆ ಬೇಡವಾದುದನ್ನು ಎಂದೂ ಮಾಡಿಲ್ಲ. ನಿನ್ನನ್ನು ಕುರಿತು ಕಹಿಮಾತುಗಳನ್ನು ಎಂದೂ ಆಡಿಲ್ಲ. ನಾನು ಜನ್ಮಾಂತರದಲ್ಲಿ ಯಾವ ಪಾಪಮಾಡಿದೆನೆಂದು ನನಗೆ ಈಗ ಹೆಂಡತಿಯ ವಿಯೋಗವಾಯಿತು ? ಪ್ರೇಯಸಿಯೇ, ಬಾ. ನನ್ನ ಚಿತ್ತವನ್ನು ಅನುಸರಿಸಿ ನಡೆಯುವ ಮನದನ್ನೇ ಬಾ ತಾಯಿಯನ್ನು ಕಳೆದು ಕೊಂಡು ದುಃಖಿಸುತ್ತಿರುವ ಈ ತಬ್ಬಲಿಯ ಮಕ್ಕಳನ್ನು ನೋಡಿಯಾದರೂ ಬಾ. ನಿನ್ನ ಮಕ್ಕಳಲ್ಲಿ ಬಹಳ ಚಿಕ್ಕವರಾದ ಮೂರು ಗಂಡು ನಾಲ್ಕು ಹೆಣ್ಣು ಕೂಸುಗಳು ನೀನಿಲ್ಲದೇ ಬದುಕಲಾರವು. ಅವೆಲ್ಲವೂ ಕರುಳು ಕೊರೆಯುವಂತೆ ಅಳುತ್ತಲಿವೆ. ಆ ಮಕ್ಕಳ ಮೇಲಿನ ಮಮತೆಯಿಂದಾದರೂ ಬಾ ಗಂಡನ ಮೇಲಿನ ಮೋಹದಿಂದಾದರೂ ಬಾ." ಹೀಗೆ ಪರಿ ಪರಿಯಿಂದ ಅತ್ತು ಗೋಗರೆದು ಹೆಂಡತಿಯ ಗುಣಗಳನ್ನು ಹಾಡಿ ಹೊಗಳಿ ದುಃಖ ಪಡುತ್ತಿರುವ ಆ ಬೇಡನನ್ನು ಕಂಡು ಅಲ್ಲಿಯೇ ದಂಡೆಯ ಮೇಲೆ ಕುಳಿತ ಋಷಿಯ ಕರುಳು ಕರಗಿತು. ತುಸು ನಾಚಿಕೆಯೂ ಆಯಿತು. ಆದರೂ ಅವನು ತನ್ನಲ್ಲಿ ಮತ್ತೆ ಮತ್ತೆ ಮೂಡುತ್ತಲಿದ್ದ ಲಜ್ಜೆಯನ್ನು ಆಚೆಗೆ ದೂಡಿ ಆ ಬೇಡನನ್ನು ಕುರಿತು ನುಡಿದನು.

"ಬೇಡನೇ, ಇನ್ನು ನಿನ್ನ ಮಡದಿ ಇಲ್ಲ. ನಿನ್ನ ಸುಖ ಶಾಂತಿಗಳನ್ನೆಲ್ಲ ಅವಳು ತೆಗೆದುಕೊಂಡೇ ಹೋಗಿದ್ದಾಳೆ. ಇನ್ನು ಮೇಲೆ ಎಂದೂ ತಿರುಗಿಬಾರದ ಸ್ಥಳಕ್ಕೆ ಅವಳು ಹೋಗಿದ್ದಾಳೆ. ನಿನಗೆ ಅವಳ ಮೇಲೆ ನಿಜವಾಗಿ ಪ್ರೀತಿ ಇದ್ದರೆ ಅವಳು ನಿನಗೆ ಕೊಟ್ಟು ಹೋದ ಈ ಮಕ್ಕಳನ್ನು ಕಾಪಾಡು. ಈ ಕೂಸುಗಳನ್ನು ನೀನು ಕೈಬಿಟ್ಟರೆ ಇದ್ದಲ್ಲೇ ಅವಳ ಆತ್ಮವು ಚಡಪಡಿಸುವದು. " ಆ ಮುನಿಯ ಮಾತನ್ನು ಕೇಳಿ ಬೇಡನು ಮತ್ತಿಷ್ಟು ಶೋಕಾಕುಲನಾಗಿ " ಸ್ವಾಮಿ, ಇಷ್ಟು ದಿನ ಬಾಳುವೆ ಮಾಡಿದ ನಾನು ಅವಳನ್ನು ಹೇಗೆ ಮರೆಯಲಿ ? ಅವಳನ್ನು ಬಿಟ್ಟು ನಾನು ಹೇಗೆ ಬದುಕಲಿ ! ಎಂದು ಮತ್ತೆ ದುಃಖಿಸ ತೊಡಗಿದನು. ಅವನ ಕರುಣಾಜನಕವಾದ ಈ ವಿಲಾಪ ಪ್ರಲಾಪಗಳನ್ನು ಕೇಳಿ ಋಷಿಯ ಹೃದಯವು ತುಂಬಿ ಬಂದಿತು. ಹೆಚ್ಚು ಹೊತ್ತು ಸತ್ಯ ಸಂಗತಿಯನ್ನು ಬಚ್ಚಿಡಲಿಕ್ಕೆ ಅವನಿಂದಾಗಲಿಲ್ಲ. "ವ್ಯಾಧ, ವ್ಯರ್ಥ ಶೋಕಮಾಡಬೇಡ. ನಿನಗೆ ನಾನು ಒಳ್ಳೇದನ್ನೇ ಹೇಳುತ್ತೇನೆ. ನಾನೇ ಇಷ್ಟು ದಿನ ಆ ನಿನ್ನ ಮಡದಿ ಆಗಿದ್ದೆ. ಗಂಗಾತೀರಕ್ಕೆ ಬಂದು ಈ ದೇವ ನದಿಯಲ್ಲಿ ಮಿಂದಕೂಡಲೇ ನನಗೆ ಮತ್ತೆ ನನ್ನ ಮೊದಲಿನ ಋಷಿತ್ವವು ಬಂದಿತು" ಎಂದು ನಿಜ ಸಂಗತಿಯನ್ನು ತಿಳಿಸಿದನು. ಆ ಋಷಿಯ ಮಾತನ್ನು ಕೇಳಿ ಆ ಬೇಡನ ದುಃಖವು ಎಷ್ಟೋ ಕಡಿಮೆ ಆದಂತಾಯಿತು. ಮೆತ್ತಗಿನ ದನಿಯಲ್ಲಿ ಆ ವ್ಯಾಧನು ಋಷಿಯನ್ನು ಕುರಿತು ಮತ್ತೆ ಮಾತನಾಡಿದನು. - "ಬ್ರಾಹ್ಮಣೋತ್ತಮಾ, ಇದೇನು ಅಸಂಭವ ಮಾತನ್ನು ನುಡಿಯುತ್ತಲಿರುವೆ ? ಹೆಂಗಸು ಎಂದೂ ಗಂಡಸಾಗುವದಿಲ್ಲ. ಅಂದ ಬಳಿಕ ನನ್ನ ಮಡದಿ ಮಾತ್ರ ಒಮ್ಮೆಲೇ ಹೇಗೆ ಋಷಿಯಾಗಿ ಕುಳಿತಳು. ?"

ಬೇಡನ ಈ ಮಾತುಗಳನ್ನು ಕೇಳಿ ಬ್ರಾಹ್ಮಣನಿಗೆ ಮತ್ತೆ ದುಃಖವು ಆವರಿಸಿತು. ಮೈಮೇಲಿನ ಎಚ್ಚರ ತಪ್ಪಿದಂತಾಯಿತು. ಧನಿ ಕುಗ್ಗಿತು. ಗಂಗೆಯ ದಡದಲ್ಲಿ ನಿಂತ ಆ ಪುಲಿಂದನನ್ನು ಕುರಿತು ಆ ಬ್ರಾಹ್ಮಣನು ಸವಿಗೊರಲಿನಲ್ಲಿ ನುಡಿದನು.-

''ಈ ಎಲ್ಲ ಮಕ್ಕಳನ್ನು ಕರೆದುಕೊಂಡು ಇಲ್ಲಿಂದ ನಿನ್ನ ಮನೆಗೆ ಹೋಗು. ಎಲ್ಲರ ಮೇಲೆ ಪ್ರೀತಿಮಾಡುವದು ಗೃಹಸ್ಥಾಶ್ರಮದ ಕರ್ತವ್ಯವೇ ಆಗಿರುತ್ತದೆ.'' ಆದರೆ ಆ ಗೂಢ ಗೌಪ್ಯದ ರಹಸ್ಯವನ್ನು ಅರಿಯದೆ ಆ ಬೇಡನು ಮತ್ತೆ ಕಾತರತೆಯಿಂದ ಕಂಗಾಲಾಗಿ ಆ ಮುನಿಗೆ ಕೇಳಿದನು. - ''ವಿಪ್ರೇಂದ್ರಾ, ನೀನಾವ ಅಂಥ ಘೋರ ಪಾತಕವನ್ನು ಮಾಡಿದ್ದೆ ? ಮೊದಲು ಗಟ್ಟಿ ಮುಟ್ಟದ ಗಂಡಾದ ನೀನು ಒಮ್ಮೆಲೇ ಹೆಣ್ಣಾಗಿ ಮಾರ್ಪಡಲು ಕಾರಣವೇನು ? ಹೆಣ್ಣಾದ ಬಳಿಕವು'' ಮರಳಿ ಮತ್ತೆ ಗಂಡು ಹೇಗೆ ಆದೆ ? ಇದೆಲ್ಲವನ್ನು ನನಗೆ ತಿಳಿಸಿ ಕೊಡು.'' ಬೇಡನ ಈ ಮಾತುಗಳನ್ನು ಕೇಳಿ ಬ್ರಾಹ್ಮಣನು ತನ್ನ ಕಥೆಯನ್ನು ತಿಳಿಸಿದನು.

''ವಿಷ್ಣುವಿನ ಮಾಯೆಯನ್ನು ಅರಿಯುವ ಹಂಬಲವು ಹೊಕ್ಕ ನನ್ನ ಪಾಡು ಹೀಗಾಯಿತು. ನನ್ನ ತಪಸ್ಸಿಗೆ ಮೆಚ್ಚಿದ ಭಗವಂತನು ಬೇಡವೆಂದು ಹೇಳಿದರೂ ನಾನು ಕೇಳದೆ ಅವನ ಮಾಯೆಯನ್ನು ಕಾಣುವ ಹಟ ಹಿಡಿದೆ. ಅವನ ಆದೇಶದಂತೆ ಕುಬ್ಜಾಮ್ರಕ ಕ್ಷೇತ್ರದ ಬಳಿಯ ಗಂಗೆಯ ದಂಡೆಯ ಮೇಲೆ ನನ್ನ ದಂಡ ಕಮಂಡಲ ಬಟ್ಟೆ - ಬರೆಗಳನ್ನು ಇಟ್ಟು ನದಿಯಲ್ಲಿ ಮುಳುಗಿದ ಕೂಡಲೇ ಅಣುರೂಪಿಯಾಗಿ ಬೇಡತಿಯ ಹೊಟ್ಟೆಯಿಂದ ಹೆಣ್ಣಾಗಿ ಹುಟ್ಟಿಬಂದೆ. ಅನಂತರ ನಿನ್ನ ಮಡದಿಯಾದೆ. ನಿನ್ನ ಮಕ್ಕಳ ತಾಯಿಯಾದೆ. ಮುಂದೆ ಯಾವುದೋ ಕಾರಣದಿಂದ ನಾನು ಗಂಗೆಯ ತಟಾಕಕ್ಕೆ ಬಂದು ಬಟ್ಟೆ ಬಿಂದಿಗೆ ಗಳನ್ನು ದಂಡೆಯ ಮೇಲಿಟ್ಟು ಭಾಗೀರಥಿಯ ಸ್ನಾನ ಮಾಡಿದ ಕೂಡಲೇ ಮತ್ತೆ ನಾನು ಮೊದಲಿನಂತೆ ಋಷಿಯಾದೆ. ಆಗ ನಾನು ಗಂಗೆಯಲ್ಲಿ ಸ್ನಾನ ಮಾಡುವಮುನ್ನ ದಂಡೆಯ ಮೇಲಿಟ್ಟ ಕಮಂಡಲು, ವಸ್ತ್ರ, ಪಾತ್ರೆಗಳು ಹಿಂದಿನಂತೆಯೇ ಇರುತ್ತವೆ. ನಾನು ನಿನ್ನ ಮಡದಿಯಾಗಿ ನಿನ್ನ ಮನೆಯಲ್ಲಿ ೫೦ ವರ್ಷ ಸಂಸಾರ ಮಾಡಿದೆನು. ನಾನು ಇಷ್ಟು ವರ್ಷಗಳ ಬಳಿಕ ಋಷಿಯಾಗಿ ಮತ್ತೆ ಈ ಗಂಗೆಯ ದಂಡೆಗೆ ಬಂದರೂ ನನ್ನ ಅಂದಿನ ದಂಡಕ ಮಂಡಲು ಬಟ್ಟೆ ಪಾತ್ರೆಗಳು ಹಳೆಯವಾಗಿ ಕೆಟ್ಟು ಹೋಗಿಲ್ಲ. ಗಂಗೆಯ ಪ್ರವಾಹದಿಂದ ಕೊಚ್ಚಿಯೂ ಹೋಗಿಲ್ಲ. ಇಗೋ ಇಲ್ಲಿ ನೋಡು, ಇವೇ ಆ ನನ್ನ ದಂಡಕಮಂಡಲುಗಳು ಇದೀಗ ಇಟ್ಟಂತಿವೆ. ನನಗೆ ಇದೇ ಅತ್ಯಂತ ಆಶ್ಚರ್ಯವಾಗಿದೆ.'' ಋಷಿಯು ಈ ರೀತಿಯಾಗಿ ಮಾತನಾಡಿ ತನ್ನ ಜನ್ಮಾಂತರ ಪತಿಯಾದ ಬೇಡನನ್ನು ಸಂತೈಸಬೇಕೆಂದು ಕಣ್ಣೆತ್ತಿ ನೋಡುವಷ್ಟರಲ್ಲಿ ಅವನು ಅದೃಶ್ಯನಾಗಿ ಬಿಟ್ಟಿದ್ದನು. ಆ ವ್ಯಾಧ, ಅವನ ಮಕ್ಕಳು, ಎಲ್ಲರೂ ಮಟಾಮಾಯವಾಗಿದ್ದರು. ಅದನ್ನು ಕಂಡು ವಿಸ್ಮಿತನಾದ ಆ ಸೋಮಶರ್ಮ ಋಷಿಯು ಮತ್ತೆ ಗಂಗೆಯಲ್ಲಿ ಸ್ನಾನ ಮಾಡಿ ತನ್ನ ಆಹ್ನಿಕ ಮತ್ತು ದೇವತಾರ್ಚನೆ ಯನ್ನು ಮುಗಿಸಿ ತಪಸ್ಸನ್ನು ಪ್ರಾರಂಭ ಮಾಡಿದನು. ಅಷ್ಟರಲ್ಲಿ ಮಧ್ಯಾಹ್ನವಾದುದರಿಂದ ಅನೇಕ ಬ್ರಾಹ್ಮಣರು ಗಂಗಾ ಸ್ನಾನಕ್ಕೆಂದು ಅಲ್ಲಿಗೆ ಬಂದು ದಂಡೆಯ ಮೇಲೆ ತಪಸ್ಸನ್ನು ಮಾಡುತ್ತಲಿರುವ ಸೋಮಶರ್ಮನಿಗೆ'' ''ಬ್ರಾಹ್ಮೋತ್ತಮ, ಇಂದು ಮುಂಜಾವು ನೀನು ದಂಡ ಕಮಂಡಲ ಪಾತ್ರೆ ವಸ್ತ್ರಗಳನ್ನು ಇಲ್ಲಿಯೇ ದಂಡೆಯ ಮೇಲಿಟ್ಟು ಬೇಡರ ಮನೆಗೆ ಹೋಗಿದ್ದೆ. ತಿರಿಗಿ ಬರಲು ಇಷ್ಟು ಹೊತ್ತು ಏಕಾಯಿತು. ಈ ಮಧ್ಯಾಹ್ನದವರೆಗೆ ಎಲ್ಲಿ ಇದ್ದೆ ? ನೀನು ದಂಡ ಗಿಂಡಿ ಇಟ್ಟ ಸ್ಥಳವೆ ಮರೆತು ಹೋಯಿತೇ?'' ಎಂದು ಕೇಳಿದರು.

ಇದನ್ನು ಕೇಳಿ ಸೋಮಶರ್ಮನಿಗೆ ತನ್ನ ತಲೆಯೇ ಭ್ರಾಂತಿಷ್ಟವಾದಂತಾಯಿತು. ''ಈ ನನ್ನ ಪರಿಚಿತರಾದ ಬ್ರಾಹ್ಮಣರೆಲ್ಲ ನಾನು ಇಂದೇ ಮುಂಜಾನೆ ಗಂಗೆಯ ದಂಡೆಯಲ್ಲಿ ಬಟ್ಟೆ ಬರೆಗಳನ್ನಿಟ್ಟು ಬೇಡನ ಮನೆಗೆ ಹೋಗಿದ್ದೆನೆಂದು ಹೇಳುತ್ತಾರೆ. ಆದರೆ ನನಗೋ

ಆ ಬೇಡನ ಮನೆಯ ಐವತ್ತು ವರುಷ ಹೆಣ್ಣಾಗಿ ಇದ್ದು ಬಂದುದರ ಅನುಭವ ಇರುತ್ತದೆ. ಇದರಲ್ಲಿ ಯಾವುದು ನಿಜ ? ಅಂದು ಐವತ್ತು ವರ್ಷದ ಹಿಂದೆ ಅಮಾವಾಸ್ಯೆಯ ದಿನ ನನ್ನ ಜೊತೆಗೆ ನದಿಯ ಸ್ನಾನಕ್ಕೆ ಬಂದ ಈ ಬ್ರಾಹ್ಮಣರು ಸ್ನಾನ ಮಾಡಿಕೊಂಡು ಮನೆಗೆ ಹೋಗಿ ಈಗ ಮಧ್ಯಾಹ್ನ ಸ್ನಾನಕ್ಕಾಗಿ ಮತ್ತೆ ನದಿಗೆ ಬಂದಿದ್ದೇವೆಂದು ಹೇಳುತ್ತಾರೆ. ಮತ್ತು ಇಂದೂ ಕೂಡ ಅವರು ಐವತ್ತು ವರ್ಷದ ಹಿಂದಿನ ಅದೇ ಸಂವತ್ಸರದ ಅದೇ ಅಮಾವಾಸ್ಯೆ ತಿಥಿಯ ಸಂಕಲ್ಪವನ್ನು ಮಾಡಿ ಸ್ನಾನ ತರ್ಪಣಾದಿಗಳನ್ನು ಮಾಡುತ್ತಲಿದ್ದಾರೆ. ಇದರ ಮೇಲಿಂದ ನಾನು ಬೆಳಿಗ್ಗೆ ಗಂಗೆಯ ದಂಡೆಗೆ ಸ್ನಾನಕ್ಕೆ ಬಂದದ್ದು ಇಂದೇ. ಬೇಡನ ಮನೆಯಲ್ಲಿ ಬೇಡತಿಯಾಗಿ ಬಾಳುವೆ ಮಾಡಿ ಮರಳಿ ಬಂದು ಋಷಿಯಾಗಿ ಕುಳಿತದ್ದೂ ಇಂದೇ. ಅದು ಮುಂಜಾನೆ. ಇದು ಮಧ್ಯಾಹ್ನ ಎಂಬುವದು ಖಚಿತವಾಗುವದು. ಆದರೆ ಆ ಬೇಡನ ಮನೆಯಲ್ಲಿ ನಾನು ಸಂಸಾರ ಮಾಡಿದ ಆ ಐವತ್ತು ವರುಷಗಳು ಎಲ್ಲಿ ಹಾರಿ ಹೋದವು! ಆ ವ್ಯಾಧನ ಮನೆಯಲ್ಲಿ ಹೆಣ್ಣಾಗಿ ಹುಟ್ಟಿ, ಮತ್ತೊಬ್ಬ ಬೇಡ ಯುವಕನನ್ನು ಮದುವೆಯಾಗಿ, ಅವನಿಂದ ಮೂರು ಗಂಡು ನಾಲ್ಕು ಹೆಣ್ಣು ಹಡೆದು, ತಿನ್ನಬಾರದ್ದೆಲ್ಲ ತಿಂದು, ಕುಡಿಯಬಾರದ್ದನ್ನೆಲ್ಲ ಕುಡಿದು, ಮಾಡಬಾರದ್ದೆಲ್ಲ ಮಾಡಿ, ಕುಲಗೆಟ್ಟು, ಧರ್ಮ ಬಿಟ್ಟು, ನೀತಿಗೆಟ್ಟು, ಸ್ವೈರ ಜೀವನವನ್ನು ಸಾಗಿಸಿ, ಮತ್ತೆ ಗಂಗೆಯಲ್ಲಿ ಸ್ನಾನ ಮಾಡಿ, ಮೇಲೆ ಬರುವಷ್ಟರಲ್ಲಿ ಇನ್ನೂ ಅದೇ ದಿನ. ಅದೇ ಪ್ರಾತಃಕಾಲ. ಇಲ್ಲಿಗೆ ಬಂದು ಮತ್ತೆ ಸ್ನಾನ ಪೂಜೆ ಆನ್ಹಿಕ ಮುಗಿಸಿ ತಪಸ್ಸಿಗೆ ಕುಳಿತುಕೊಳ್ಳುವಷ್ಟರಲ್ಲಿ ಇಲ್ಲಿಯೇ ಮಧ್ಯಾಹ್ನವಾಯಿತು. ಬೆಳಿಗ್ಗೆ ನನ್ನ ಜೊತೆಗೆ ಬಂದ ಋಷಿಗಳು ಮತ್ತೆ ಮಧ್ಯಾಹ್ನ ಸ್ನಾನಕ್ಕೆ ಬಂದು ಅದೇ ದಿನದ ಸಂಕಲ್ಪ ಮಾಡುತ್ತಾರೆ. ಇದೂ ಸುಳ್ಳಲ್ಲ. ನಾನು ಬೇಡತಿಯಾಗಿ ಐವತ್ತು ವರುಷ ಬಾಳುವೆ ಮಾಡಿದ್ದೂ ಸುಳ್ಳಲ್ಲ. ನಾನು ಏಳು ಮಕ್ಕಳನ್ನು ಮೂರು ನಾಲ್ಕು ವರ್ಷಕ್ಕೆ ಒಂದರಂತೆ ಹಡೆದ ಇಪ್ಪತ್ತು ನಾಲ್ಕು ವರ್ಷಗಳಂತೂ ಉರುಳಲೇಬೇಕಲ್ಲವೇ ! ಆ ಮಕ್ಕಳೂ ಕೂಡ ನನಗೆ ಹುಟ್ಟಿದ ಕೂಡಲೇ ಜನಿಸಲಿಲ್ಲವಷ್ಟೇ! ನಾನು ಹದಿನಾರು ವರ್ಷದವಳಾದ ಬಳಿಕ ಮದುವೆ ಮಾಡಿಕೊಂಡು ಗಂಡನ ಮನೆಗೆ ಹೋದೆ. ಅನಂತರ ಇಷ್ಟು ಮಕ್ಕಳು. ಅವರೆಲ್ಲರೂ ದೊಡ್ಡವರಾದ ಬಳಿಕ ನಾನು ಗಂಗೆಯ ತಡಿಗೆ ಸ್ನಾನಕ್ಕೆ ಬಂದೆ. ಇಷ್ಟೆಲ್ಲವೂ ಇಂದೇ ಈ ಅಮಾವಾಸ್ಯೆಯ ದಿನವೇ ಇಂದಿನ ಪ್ರಾತಃ ಕಾಲದಲ್ಲಿಯೇ ಹೇಗೆ ನಡೆಯಿತು ! ನನಗೇನಾದರೂ ಹುಚ್ಚು ಹಿಡಿದಿದೆಯೇ ? ಇಥವಾ ಏನಾದರೂ ಮಾಯ ಮಾಟವೋ ! '' ಎಂದು ಮನಸ್ಸಿನಲ್ಲಿಯೇ ಯೋಚಿಸುತ್ತ ಆ ಬ್ರಾಹ್ಮಣನು ಕಣ್ಣು ಮುಚ್ಚಿ ತಣ್ಣಗೆ ಕುಳಿತನು. ಕೊನೆಗೆ ಏನೂ ತಿಳಿಯದೇ ಶ್ರೀ ಹರಿಯನ್ನೇ ಧ್ಯಾನ ಮಾಡತೊಡಗಿದನು.

ಉಳಿದ ಬ್ರಾಹ್ಮಣರು ಈ ಮುನಿಗೆ ತಪಸ್ಸಮಾಧಿ ಹತ್ತಿದೆ ಎಂದು ಭಾವಿಸಿ ಅವನಿಗೆ ಹೆಚ್ಚಿಗೆ ಪ್ರಶ್ನೆಗಳನ್ನು ಕೇಳದೇ ತಮ್ಮ ಆಶ್ರಮಗಳಿಗೆ ಮರಳಿ ಹೋದರು. ಇತ್ತ ಆ ಬ್ರಾಹ್ಮಣನ ನಿರಂತರ ತಪೋಧ್ಯಾನದಿಂದ ನಾನು ವಿಷ್ಣುರೂಪದಿಂದ ಪ್ರಸನ್ನನಾಗಿ ಅವನಿಗೆ ದರ್ಶನವಿತ್ತೆನು. ಆಗ ಆ ಸೋಮಶರ್ಮನು ನನ್ನ ಮುಂದೆ ಅಡ್ಡಬಿದ್ದು ಕೈ ಜೋಡಿಸಿ ಕಣ್ಣೀರು ಉದುರಿಸುತ್ತ ಕೇಳಿದನು. - ''ಸ್ವಾಮಿ, ಇದೇನು ನನ್ನ ದುರವಸ್ಥೆ ! ನಾನು ಏನು ಪಾಪಮಾಡಿದ್ದೆ ? ಪವಿತ್ರವಾದ ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ನಾನು ಕಾಡು ಬೇಡತಿಯಾಗಿ, ಅನೇಕ ಅನ್ಯಾಯದ ಕೃತ್ಯಗಳನ್ನು ಮಾಡಿ, ಘೋರ ಜೀವನದ ನೀಚ

ನರಕದಲ್ಲಿ ತೊಳಲುವ ಪ್ರಸಂಗವು ನನಗೆ ಏಕೆ ಬಂದಿತು ? ನನ್ನ ಯಾವ ಪಾಪಕ್ಕಾಗಿ ಇಂಥ ಶಿಕ್ಷೆಯನ್ನು ವಿಧಿಸಿದೆ ?'' ಅವನ ಮಾತನ್ನು ಕೇಳಿ ನಾನು ನಕ್ಕು ಹೇಳಿದೆ. '' ಬ್ರಾಹ್ಮಣ, ಇದರಲ್ಲಿ ನಿನ್ನದೇನು ತಪ್ಪಿಲ್ಲ. ನೀನಾವ ಘೋರ ಪಾಪವನ್ನು ಮಾಡಲಿಲ್ಲ. ಈ ಮೊದಲು ನೀನು ತಪಸ್ಸು ಮಾಡಿ ನನ್ನ ಮಾಯೆಯನ್ನು ಕಾಣಬೇಕೆಂದು ವರ ಬೇಡಿದ್ದೆಯಲ್ಲವೇ ? ನಿನ್ನ ಬಯಕೆಯಂತೆ ನನ್ನ ಮಾಯೆಯನ್ನು ನಿನಗೆ ತುಸು ತೋರಿಸಿದೆ. ಆ ಬೇಡ ಮತ್ತು ಅವನೊಡನೆ ನಿನ್ನ ವಿವಾಹ ಮಕ್ಕಳು, ಮತ್ತು ಅಲ್ಲಿ ನೀನು ಮಾಡಿದ ನಿಷಿದ್ಧ ಆಚರಣೆ ಎಲ್ಲವೂ ನನ್ನ ಮಾಯಾ ಕಲ್ಪಿತವಾದದ್ದೇ. ನೀನು ಈ ಹಿಂದೆ ಭಗವದ್ಭಕ್ತರನ್ನು ಸರಿಯಾಗಿ ಗೌರವಿಸುತ್ತಿದ್ದಿಲ್ಲ. ಅಹಂಕಾರದಿಂದ ಆಗಾಗ ಅವರನ್ನು ಅವಮಾನಿಸುತ್ತಿದ್ದೆ. ಅದಕ್ಕಾಗಿ ನಿನಗೆ ಆ ಬೇಡನೊಡನೆ ಬಾಳುವೆ ಮಾಡಿದ ಅನುಭವವನ್ನು ತಂದುಕೊಟ್ಟು ಆ ನಿನ್ನ ಪಾಪವನ್ನು ಪರಿಹಾರ ಮಾಡಿದೆ. ಮತ್ತು ನಿನಗೆ ನಿನ್ನ ಅಪೇಕ್ಷೆಯಂತೆ ನನ್ನ ಮಾಯೆಯನ್ನು ತೋರಿಸಿದೆ. ಈಗ ನಿನಗೆ ಯಾವ ಪಾಪ ಲೇಪವೂ ಇಲ್ಲ. ಇನ್ನು ಮೇಲೆ ನೀನು ನನ್ನ ಭಕ್ತರನ್ನು ಸರಿಯಾಗಿ ಗೌರವಿಸಿ ಅವರಿಗೆ ನಮಸ್ಕಾರ ಮಾಡು. ನನ್ನ ಭಕ್ತರನ್ನು ಪೂಜಿಸಿದವರು ನನ್ನನ್ನು ಪೂಜಿಸಿದಂತೆಯೇ ಸರಿ.

''ಮಮ ಭಕ್ತಾ ದ್ವಿಜಾಃ ಶುದ್ಧಾ ಯತ್ತ್ವಯಾ ನಾಭಿವಾದಿತಾಃ ।
ತತ್‌ಪಾಪಾದೀದೃಶೋ ಭೋಗಸ್ತವ ಜಾತೋ ಹಿ ದುಃಖದಃ ॥

ಯೇ ಚ ಭಾಗವತಾಃ ಶುದ್ಧಾಃ ತೇ ನೂನಂ ಮಮ ಮೂರ್ತಯಃ ।
ತಾನ್ವಿಪ್ರಾನ್‌ಯೇ ನಮಸ್ಯಂತಿ ತೇ ಮಾಮೇವ ನಮಸ್ಯತೇ ॥

ಶುದ್ಧಾ ಭಾಗವತಾಃ ಪೂಜ್ಯಾ ದ್ರಷ್ಟವ್ಯಾಸ್ಸರ್ವದಾ ನೃಭಿಃ ।
ವಿಶೇಷೇಣ ತಥಾ ಬ್ರಹ್ಮನ್ ದ್ವಿಜರೂಪೋಽಸ್ಮಿ ಸಂಸ್ಥಿತಃ ।
ತಸ್ಮಾದ್ ಬ್ರಾಹ್ಮಣ ಭಕ್ತಾ ಯೇ ತೇ ಮೇ ಭಕ್ತಾ ನ ಸಂಶಯಃ '' ॥

ಈ ಕಲಿಯುಗದಲ್ಲಿ ನಾನು ಬ್ರಾಹ್ಮಣ ರೂಪದಿಂದ ಇರುತ್ತೇನೆ. ಆ ಬ್ರಾಹ್ಮಣರಲ್ಲಿ ನನ್ನನ್ನು ಆರಾಧಿಸುವವರು ನಿಜವಾದ ನನ್ನ ಭಕ್ತರು. ಯೋಗ್ಯರಾದ ಹರಿ ಭಕ್ತರೆಂದರೆ ನನ್ನ ಮೂರ್ತಿಗಳೆಂದೇ ತಿಳಿದು ಅವರ ದರ್ಶನ ಮಾಡಿಕೊಂಡು ಪೂಜಿಸುವವರಿಗೆ ನಾನು ಒಲಿಯುತ್ತೇನೆ. ಆದುದರಿಂದ ನೀನು ಹರಿಯಂತೆಯೇ ಹರಿಭಕ್ತರನ್ನೂ ಪೂಜಿಸಿ ಗೌರವಿಸಿ ನನ್ನ ಆರಾಧನೆ ಮಾಡು. ಅದರಿಂದ ನೀನು ಸಿದ್ಧಿ ಪಡೆಯುವೆ. ಮುಂದೆ ನನ್ನ ಸ್ಥಾನವಾದ ಶ್ವೇತದ್ವೀಪಕ್ಕೆ ಬರುವೆ. ಇದರಲ್ಲಿ ಸಂಶಯವಿಲ್ಲ. ಹೀಗೆ ಹೇಳಿ ನಾನು ಅಲ್ಲಿಂದ ಅದೃಶ್ಯನಾದೆ. ಮುಂದೆ ಆ ಸೋಮಶರ್ಮ ಬ್ರಾಹ್ಮಣನು ದೇವ ಬ್ರಾಹ್ಮಣರ ಆರಾಧನೆ ಮಾಡಿ ನನ್ನ ಲೋಕಕ್ಕೆ ಬಂದಿದ್ದಾನೆ. ಈಗಅವನಿಗೆ ನಾನು ನಿತ್ಯದರ್ಶನವೀಯುತ್ತೇನೆ. ಭೂದೇವಿ, ಈ ನನ್ನ ಮಾಯೆಯಿಂದ ನಿನಗೇನು ? ಆದರೂ ನೀನು ಅಪೇಕ್ಷೆ ಪಟ್ಟದ್ದರಿಂದ ನನ್ನ ಈ ಮಾಯಾ ಚಕ್ರದ ವೃತ್ತಾಂತವನ್ನು ತಿಳಿಸಿದ್ದೇನೆ. ಇದನ್ನು ಹೇಳಿದವರಿಗೂ ಕೇಳಿದವರಿಗೂ ಮಹಾಪುಣ್ಯವುಂಟು.

ವರಾಹ ಪುರಾಣದಲ್ಲಿ ನೂರ ನಾಲ್ಕನೇ ಅಧ್ಯಾಯ ಮುಗಿದುದು.

—o—

## ಅಧ್ಯಾಯ - ೧೦೫

ವರಾಹದೇವರ ಮುಖದಿಂದ ವಿಷ್ಣುಮಾಯೆಯ ಮಹಿಮೆಯನ್ನು ಕೇಳಿ ಭೂದೇವಿ ಇಂತು ನುಡಿದಳು. - "ದೇವ, ಕುಬ್ಜಾಮ್ರಕ ಕ್ಷೇತ್ರದಲ್ಲಿ ನಡೆದ ಮಾಯೆಯ ಪ್ರಭಾವವನ್ನು ನೀನು ನನಗೆ ತಿಳಿಸಿದೆ. ಆದರೆ ಆ ಕ್ಷೇತ್ರದ ವಿಷಯದಲ್ಲಿ ನನಗೇನೂ ಗೊತ್ತಿಲ್ಲ, ಈ ಕುಬ್ಜಾಮ್ರಕ ಕ್ಷೇತ್ರದ ಮಹಿಮೆಯೇನು ? ಅದರ ಪುಣ್ಯ ಪ್ರಭಾವವೇನು ? ಇದೆಲ್ಲ ರಹಸ್ಯವನ್ನು ದಯಮಾಡಿ ನೀನು ನನಗೆ ತಿಳಿಸು. - ಧರಾದೇವಿಯ ಈ ಪ್ರಾರ್ಥನೆಗೆ ಓ ಗೊಟ್ಟು ವರಾಹ ಮೂರ್ತಿಯ ಕುಬ್ಜಾಮ್ರಕ ಕ್ಷೇತ್ರದ ಮಹಿಮೆಯನ್ನು ಹೇಳತೊಡಗಿದನು. "ಭೂದೇವಿ, ಈ ಕುಬ್ಜಾಮ್ರಕ ಸ್ಥಳವು ಇಂಥ ಒಂದು ಪವಿತ್ರ ತೀರ್ಥ ಕ್ಷೇತ್ರವಾದದ್ದೆ ಒಂದು ಕೌತುಕದ ಕತೆಯಾಗಿದೆ. ಅದನ್ನು ನಿನಗೆ ವಿವರಿಸುತ್ತೇನೆ ಕೇಳು.

**ವರಾಹ :-** ಹದಿನೇಳನೇ ಯುಗದಲ್ಲಿ ನಾನು ಮಧು ಕೈಟಭ ಎಂಬ ದೈತ್ಯರನ್ನು ಕೊಂದು ಭೂಮಿಯನ್ನು ಉದ್ಧರಿಸಿ ನೀರನ್ನೆಲ್ಲ ಕಡಿಮೆಮಾಡಿ ನನ್ನ ನೆಲೆಗೆ ಬಂದೆನು. ಅಲ್ಲಿ ರೈಭ್ಯ ಎಂಬ ಮುನಿಯು ನನಗೆ ಸಾಷ್ಟಾಂಗ ವಂದನೆಯನ್ನು ಮಾಡಿದನು. ಯಾವಾಗಲೂ ನನ್ನ ಆರಾಧನಾ ರೂಪ ಸತ್ಕಾರ್ಯ ನಿರತನಾದ ಆ ರೈಭ್ಯ ಮುನಿಯು ಹತ್ತು ಸಾವಿರ ವರುಷ ಕೇವಲ ನೀರು ಕುಡಿದು ಇದ್ದು ಎರಡೂ ತೋಳುಗಳನ್ನು ಮೇಲೆತ್ತಿ ನನ್ನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದನು. ಅವನ ಅತ್ಯುಗ್ರವಾದ ತಪಸ್ಸಿನಿಂದ ನನಗೆ ಬಹಳ ಪ್ರೀತಿಯಾಯಿತು. ಆಗ ನಾನು ಪ್ರಸನ್ನನಾಗಿ ಅಲ್ಲಿ ತಪಸ್ಸು ಮಾಡುತ್ತಲಿದ್ದ ಆ ರೈಭ್ಯ ಋಷಿಯ ಮೇಲೆ ಅನುಗ್ರಹ ಮಾಡಬೇಕೆಂದು ಅಲ್ಲಿಗೆ ಬಂದೆ. ಆ ಗಂಗಾ ತಟಾಕದಲ್ಲಿರುವ ಒಂದು ಮಾವಿನ ಮರದ ಮೇಲೆ ನಿಂತುಕೊಂಡು ತಪಂಗೈಯುತ್ತಿದ್ದ ಆ ರೈಭ್ಯಮುನಿಯೆಡೆಗೆ ನೋಡಿದೆ. ಅವನೂ ಮಾಮರದಲ್ಲಿಯೇ ನನ್ನ ದರುಶನ ಮಾಡಿಕೊಂಡನು. ನಾನು ಬಂದು ನಿಂತ ಭಾರದಿಂದ ಆ ಮಾವಿನ ಮರವು ನೆಲೆದಡಿಯಲ್ಲಿ ಕುಸಿದು ಕುಳ್ಳಾಯಿತು. ಅಂದಿನಿಂದಲೇ ಆ ಸ್ಥಳಕ್ಕೆ ಕುಬ್ಜಾಮ್ರಕ (ಕುಳ್ಳು ಮಾವಿನ ಮರ ಉಳ್ಳ) ಕ್ಷೇತ್ರ ಎಂದು ಹೆಸರಾಯಿತು. ಆ ಮಾಮರದಲ್ಲಿ ನನ್ನನ್ನು ಕಂಡ ಆ ರೈಭ್ಯನು ಮೊಳಕಾಲುಗಳನ್ನು ಊರಿ ನೆಲದ ಮೇಲೆ ನಿಂತು ನನ್ನನ್ನು ಸ್ತೋತ್ರ ಮಾಡಿದನು. ಸಾಷ್ಟಾಂಗ ನಮಸ್ಕಾರವನ್ನು ಹಾಕಿದನು. ಪ್ರಸನ್ನನಾದ ನಾನು ಅವನಿಗೇ "ಬೇಕಾದ ವರ ಬೇಡು " ಎಂದು ಹೇಳಿದೆ. ಅದಕ್ಕೆ ಆ ರೈಭ್ಯ ಋಷಿಯು ಕೈಮುಗಿದು ಕೇಳಿಕೊಂಡನು - "ಜಗದೊಡೆಯ, ಜನಾರ್ದನ, ನೀನು ನನಗೆ ಪ್ರಸನ್ನನಾಗಿದ್ದರೆ ನೀನು ಇಲ್ಲಿಯೇ ನಿರಂತರ ನೆಲಿಸಬೇಕು. ನಿನ್ನಲ್ಲಿ ನನ್ನ ಬಕ್ತಿಗೆ ಎಂದೂ ಚ್ಯುತಿಯುಂಟಾಗಬಾರದು " ಹೀಗೆ ನನ್ನಿಂದ ಎರಡು ವರಗಳನ್ನು ಕೇಳಿಕೊಂಡ ಆ ರೈಭ್ಯ ಮುನಿಯು ಆ ಕುಬ್ಜಾಮ್ರಕ ಕ್ಷೇತ್ರದ ಮಹಿಮೆಯನ್ನೂ ಆ ಕ್ಷೇತ್ರದಲ್ಲಿರುವ ಬೇರೆ ಬೇರೆ ತೀರ್ಥಗಳ ಮಹಿಮೆಯನ್ನೂ ಹೇಳಬೇಕೆಂದು ಬಿನ್ನಹ ಮಾಡಿಕೊಂಡನು.

ಅವನ ಅಪೇಕ್ಷೆಯಂತೆ ಅಂದು ನಾನು ಆ ರೈಭ್ಯ ಮುನಿಗೆ ಹೇಳಿದ ಕ್ಷೇತ್ರ ಮಹಾತ್ಮೆಯನ್ನೇ ಭೂದೇವಿಯೆ, ಈಗ ನಿನಗೆ ಹೇಳುತ್ತೇನೆ ಕೇಳು - ಧರಿಣಿ, ಈ

ಕುಬ್ಜಾಮ್ರಕ ಕ್ಷೇತ್ರದಲ್ಲಿ ಕುಮುದಾಕಾರ ಎಂಬ ಒಂದು ತೀರ್ಥವು ಕಣ್ಗೆಸೆಯುತ್ತದೆ. ಅದರಲ್ಲಿ ಸ್ನಾನ ಮಾಡಿದ ಮಾತ್ರದಿಂದಲೇ ಮನುಷ್ಯರಿಗೆ ಸ್ವರ್ಗ ಪ್ರಾಪ್ತಿಯಾಗುವದು. ಅದರಲ್ಲಿಯೂ ಕಾರ್ತಿಕ, ಮಾರ್ಗಶೀರ್ಷ, ವೈಶಾಖ ಮಾಸಗಳಲ್ಲಿ ಪುಣ್ಯ ಕರ್ಮಗಳನ್ನು ಆಚರಿಸಿ ಈ ಕುಬ್ಜಾಮ್ರಕ ಕ್ಷೇತ್ರದಲ್ಲಿ ದೇಹತ್ಯಾಗ ಮಾಡುವ ಸಜ್ಜೀವರಿಗೆಲ್ಲ ನನ್ನ ಲೋಕವು ದೊರಕುವದು. ಆ ಕ್ಷೇತ್ರದಲ್ಲಿರುವ ಮಾನಸ ತೀರ್ಥದಲ್ಲಿ ಸ್ನಾನ ಮಾಡಿದವರು ನಂದನವನವನ್ನು ಹೊಂದುವರು. ಮಾಯಾ ತೀರ್ಥದಲ್ಲಿ ಸ್ನಾನ ಮಾಡುವ ನನ್ನ ಭಕ್ತನಿಗೆ ಕುಬೇರನ ಐಶ್ವರ್ಯವು ದೊರಕುವದು. ಸರ್ವಾತ್ಮಕ ತೀರ್ಥದಲ್ಲಿ ವೈಶಾಖ ಶುದ್ಧ ದ್ವಾದಶಿಯ ದಿನ ಸ್ನಾನಮಾಡುವವರಿಗೆ ಹತ್ತುಸಾವಿರದಾ ಐನೂರು ವರ್ಷ ಸ್ವರ್ಗ ಭೋಗವು ಸಿಗುವದು. ಸಾರ್ಷಪಕ ತೀರ್ಥದಲ್ಲಿ ಪ್ರಾಣ ಬಿಟ್ಟವರಿಗೆ ವಿಷ್ಣು ಲೋಕಾವ್ಯಾಪ್ತಿ ನಿಶ್ಚಿತ. ಪೂರ್ಣಮುಖ ಎಂಬ ಅಲ್ಲಿಯ ಒಂದು ತೀರ್ಥದಲ್ಲಿ ಗಂಗೆಯ ನೀರು ಯಾವಾಗಲೂ ಬಿಸಿಯಾಗಿರುತ್ತದೆ. ಅಲ್ಲಿ ಮಾರ್ಗಶೀರ್ಷ ಶುದ್ಧ ದ್ವಾದಶಿಯ ದಿನ ಸ್ನಾನ ಮಾಡಿದವರಿಗೆ ವಿಷ್ಣುಲೋಕ. ಉಳಿದ ದಿನ ಮೈತೊಳೆದವರಿಗೆ ಚಂದ್ರಲೋಕ. ಕರವೀರ ತೀರ್ಥದಲ್ಲಿ ಮಾಘ ಶುಕ್ಲ ದ್ವಾದಶಿ ದಿನ ಸ್ನಾನ ಮಾಡಿದವರಿಗೆ ಸ್ವರ್ಗಲೋಕ. ಪ್ರಾಣ ತ್ಯಾಗ ಮಾಡಿದವರಿಗೆ ಹರಿ, ಹರ, ಬ್ರಹ್ಮಾದಿ ತ್ರಿಮೂರ್ತಿಗಳ ದರುಶನವಾಗುವದು. ಭದ್ರೆ, ಆ ಕುಬ್ಜಾಮ್ರಕ ಕ್ಷೇತ್ರದಲ್ಲಿರುವ ಪುಂಡರೀಕ ತೀರ್ಥದಲ್ಲಿ ದ್ವಾದಶಿ ಮಧ್ಯಾಹ್ನದಲ್ಲಿ ರಥಚಕ್ರದಷ್ಟು ದೊಡ್ಡದಾದ ಒಂದು ಆಮೆಯು ಸಂಚರಿಸುತ್ತದೆ. ಆ ಪುಂಡರೀಕ ತೀರ್ಥದಲ್ಲಿ ಸ್ನಾನ ಮಾಡುವದರಿಂದ ಪುಂಡರೀಕ ಎಂಬ ಯಜ್ಞ ಮಾಡಿದ ಫಲವೂ ಅಲ್ಲಿ ಮೃತನಾದರೆ ಹತ್ತು ಪುಂಡರೀಕ ಯಾಗಗಳ ಫಲವೂ ದೊರೆತು ಕೊನೆಗೆ ಅವನು ನನ್ನ ಲೋಕವನ್ನು ಸೇರುವನು.

ಅಲ್ಲಿಯ ಇನ್ನೊಂದು ತೀರ್ಥವಾದ ಅಗ್ನಿ ತೀರ್ಥವು ಅತ್ಯಂತ ಕಾಂತಿಯುಕ್ತವಾಗಿದ್ದು ಅದರಲ್ಲಿ ಸ್ನಾನ ಮಾಡುವದರಿಂದ ಏಳು ಸಲ ಅಗ್ನಿಮೇಧ ಎಂಬ ಯಜ್ಞಮಾಡಿದ ಫಲವೂ ದೊರೆಯುತ್ತದೆ. ಕುಬ್ಜಾಮ್ರಕ ಕ್ಷೇತ್ರದ ಉತ್ತರದಲ್ಲಿರುವ ಈ ಅಗ್ನಿ ತೀರ್ಥದ ನೀರು ಚಳಿಗಾಲದಲ್ಲಿ ಬಿಸಿಯಾಗಿಯೂ ಬೇಸಗೆ ಕಾಲದಲ್ಲಿ ತಣ್ಣಗಾಗಿಯೂ ಇರುತ್ತದೆ. ಆ ಕ್ಷೇತ್ರದಲ್ಲಿರುವ ವಾಯುವ್ಯ ಕ್ಷೇತ್ರದಲ್ಲಿ ಸ್ನಾನ ಮಾಡಿದರೆ ವಾಜಿಸನೇಯ ಯಜ್ಞ ಮಾಡಿದ ಫಲವೂ ಅಲ್ಲಿ ಮಡಿದರೆ ಮೋಕ್ಷ ಪ್ರಾಪ್ತಿಯೂ ಆಗುವದು. ಅಲ್ಲಿ ಸಂಸಾರ ವಿಮೋಚಕವಾದ ಶಕ್ರತೀರ್ಥದಲ್ಲಿ ಇಂದ್ರನು ಯಾವಾಗಲೂ ವಾಸಮಾಡುತ್ತಿದ್ದು ಅಲ್ಲಿ ಹತ್ತು ರಾತ್ರಿ ಉಪವಾಸ ಮಾಡಿ ಮರಣ ಹೊಂದಿದವರು ನನ್ನ ಲೋಕಕ್ಕೆ ಬರುವರು.

ಅಲ್ಲಿಯ ಇನ್ನೊಂದು ಉತ್ತಮ ತೀರ್ಥದಲ್ಲಿ ಹಿಂದೆ ವರುಣನು ಹದಿನೇಳುಸಾರೆ ತಪಸ್ಸು ಮಾಡಿದ್ದನು. ಆ ವರುಣ ತೀರ್ಥದಲ್ಲಿ ಸ್ನಾನ ಮಾಡುವ ಅಥವಾ ಮರಣ ಹೊಂದುವ ಮನುಷ್ಯನು ವರುಣ ಲೋಕವನ್ನು ಸೇರುತ್ತಾನೆ. ಈ ತೀರ್ಥದಲ್ಲಿ ಬೇಸಿಗೆ ಮಳೆಗಾಲದಲ್ಲಿ ಒಂದೇ ಸವನೆ ಒಂದು ಜಲಧಾರೆಯು ಬೀಳುತ್ತಲಿರುವದು ಇದರ ವೈಶಿಷ್ಟ್ಯವಾಗಿದೆ. ಸಪ್ತ ಸಾಮುದ್ರಿಕ ತೀರ್ಥದಲ್ಲಿ ಸ್ನಾನಮಾಡುವವರಿಗೆ ನೂರು ಅಶ್ವಮೇಧಯಾಗ ಮಾಡಿದ ಪುಣ್ಯವು ಪ್ರಾಪ್ತವಾಗುವದು. ಅಲ್ಲಿಂದ ಮುಂದೆ ಅವನು ಸ್ವರ್ಗ ಸೇರಿ ಹತ್ತುಸಾವಿರದ ಐದುನೂರುವರ್ಷಕಾಲವಿದ್ದು ಅನಂತರ ಮತ್ತೆ ಭೂಮಿಗೆ

ಬಂದು ವೇದ ಪಂಡಿತನಾಗಿ ಸೋಮಪಾನ ಮಾಡುವನು. ಜಿತೇಂದ್ರಿಯನಾಗಿ ಈ ತೀರ್ಥದಲ್ಲಿ ಏಳುರಾತ್ರಿ ವಾಸಮಾಡಿ ಪ್ರಾಣ ತ್ಯಾಗ ಮಾಡುವವನು ನನ್ನ ಲೋಕ ಸೇರುವನು. ವೈಶಾಖ ಶುದ್ಧ ದ್ವಾದಶಿಯ ದಿನ ದೇವಗಂಗೆಯು ಈ ತೀರ್ಥದ ನೀರಿನಲ್ಲಿ ಬೆರೆತು ಹೋಗುವಳು. ಅದರಿಂದ ಈ ಸಪ್ತ ಸಾಮುದ್ರಿಕ ತೀರ್ಥವೆಲ್ಲವೂ ಒಮ್ಮೆ ಹಾಲಿನ ಬಣ್ಣವುಳ್ಳದ್ದಾಗುವದು. ಅನಂತರ ಹಳದಿ, ಕೆಂಪು, ಹಸಿರು ಮುಂತಾದ ಬಗೆ ಬಗೆಯ ಬಣ್ಣದ ಧಾತುವರ್ಣ ವೈವಿಧ್ಯದಿಂದ ರಂಜಿಸಿ ಕೊನೆಗೆ ತನ್ನ ಸ್ವಾಭಾವಿಕವಾದ ಮುತ್ತಿನ ಬಣ್ಣದಿಂದ ಸ್ಫಟಿಕಧವಲವಾಗಿ ಶೋಭಿಸುವದು. ಇದರಿಂದಲೇ ಜ್ಞಾನಿಗಳು ಈ ತೀರ್ಥವನ್ನು ಗುರುತಿಸುವರು. ಈ ಕ್ಷೇತ್ರದಲ್ಲಿಯ ಮಾನಸರ ತೀರ್ಥದಲ್ಲಿ ಸ್ನಾನ ಮಾಡಿದವನು ಕೈಲಾಸ ಮಾನಸ ಸರೋವರಗಳಿಗೆ ಪ್ರಯಾಣ ಮಾಡಿ ರುದ್ರಾದಿ ದೇವತೆಗಳನ್ನು ಕಾಣುವನು. ಈ ತೀರ್ಥದಲ್ಲಿ ಮೂವತ್ತು ರಾತ್ರಿ ಇದ್ದು ಮರಣ ಹೊಂದಿದವನು ವಿಷ್ಣು ಲೋಕವನ್ನು ಸೇರುವನು. ಐವತ್ತು ಹರದಾರಿ ವಿಸ್ತಾರವಾಗಿರುವದೇ ಅದರ ವೈಶಿಷ್ಟ್ಯವಾಗಿದೆ.

ಭಾಗ್ಯವತಿಯಾದ ಭೂದೇವಿಯೇ, ರೈಭ್ಯ ಮುನಿಗೆ ನಾನು ಕುಬ್ಜಾಮ್ರಕ ಕ್ಷೇತ್ರದಲ್ಲಿರುವ ತೀರ್ಥಗಳ ಮಹಿಮೆಯನ್ನು ಹೇಳಿದೆ. ಅದೇ ಕ್ಷೇತ್ರದಲ್ಲಿ ಪೂರ್ವ ಕಾಲದಲ್ಲಿ ನಡೆದ ಅತ್ಯಾಶ್ಚರ್ಯಕರವಾದ ವೃತ್ತಾಂತವನ್ನು ತಿಳಿಸುತ್ತೇನೆ ಕೇಳು-

ಈ ಕುಬ್ಜಾಮ್ರಕ ಕ್ಷೇತ್ರದಲ್ಲಿ ಹಿಂದೆ ಒಂದು ಹೆಣ್ಣು ಹಾವು ಇದ್ದಿತು. ಅದು ನನ್ನ ನಿರ್ಮಾಲ್ಯದ ಗಂಧ ಮಾಲ್ಯೋಪಹಾರಗಳನ್ನು ತಿಂದು ನಿರ್ಭಯದಿಂದ ಅಲ್ಲಿಯೇ ವಾಸ ಮಾಡುತ್ತಿದ್ದಿತು. ಕೆಲವು ಕಾಲದ ಮೇಲೆ ಆಕಸ್ಮಿಕವಾಗಿ ಅಲ್ಲಿಗೆ ಒಂದು ಗಂಡು ಮುಂಗಸಿಯು ಬಂದಿತು. ಆ ಹಾವು ಮುಂಗಲಿಗಳು ಒಂದನ್ನೊಂದು ನೋಡಿದವು. ಕೂಡಲೇ ಎರಡೂ ಕದನಕ್ಕೆ ಮೊದಲಿಟ್ಟವು. ಮಾಘಮಾಸದ ದ್ವಾದಶಿಯ ದಿನ ಮಧ್ಯಾಹ್ನ ಕಾಲದಲ್ಲಿ ಆ ನನ್ನ ದೇವಮಂದಿರದಲ್ಲಿಯೇ ಅಹಿ ನಕುಲಗಳ ಘನ ಘೋರವಾದ ಹೋರಾಟ ನಡೆದು ಕೊನೆಗೆ ಹಾವು ಮುಂಗಲಿಯನ್ನು ಸಾಯುವಂತೆ ಕಚ್ಚಿತು. ಸಾಯುವ ಮುನ್ನ ಒಮ್ಮೆಲೇ ರೊಚ್ಚಿಗೆದ್ದ ಮುಂಗಲಿಯು ಹಾವನ್ನು ರೊಚ್ಚಿನಿಂದ ಕಚ್ಚಿ ಹಾಕಿತು. ಹೀಗೆ ಆ ಸರ್ಪ ಹಾಗೂ ಮುಂಗಲಿ ಎರಡೂ ಪರಸ್ಪರ ರೊಚ್ಚು ರೋಷಗಳಿಂದ ಕಚ್ಚಿ ಕಾದಾಡಿ ಸತ್ತು ಬಿದ್ದವು. ಮುಂದೆ ಆ ಹೆಣ್ಣು ಹಾವು ಪ್ರಾಗ್ಜ್ಯೋತಿಷನಗರದಲ್ಲಿ ರಾಜಪುತ್ರಿಯಾಗಿ ಹುಟ್ಟಿ ಬಂದಿತು. ಮುಂಗಸಿಯು ಕೋಸಲದೇಶದ ರಾಜಕುಮಾರನಾಗಿ ಉದಯಿಸಿದನು. ಅವಳು ರೂಪವತಿಯೂ ಗುಣವತಿಯೂ ಆದರೆ ಇವನು ಧೀಮಂತನೂ ಶ್ರೀಮಂತನೂ ಹಣವಂತನೂ ಗುಣವಂತನೂ ಆದನು.

ಹೀಗೆ ಬೇರೆ ಬೇರೆ ನಗರಗಳಲ್ಲಿ ಶುಕ್ಲಪಕ್ಷದ ಚಂದ್ರನಂತೆ ಮೈತುಂಬಿ ಮನ ತುಂಬಿ ಕಾಂತಿಯ ಕೈವಾರಿಗಳಾಗಿ ಬೆಳೆಯುತ್ತಲಿರುವ ಆ ರಾಜಕುಮಾರಿ ಈ ರಾಜಕುಮಾರ ಇಬ್ಬರೂ ಬೆಳೆದು ದೊಡ್ಡವರಾದರೂ ಅವರ ಪೂರ್ವಜನ್ಮದ ವೈರವು ಇನ್ನೂ ಹೋಗಿರಲಿಲ್ಲ. ರಾಜಕುಮಾರಿಯು ಎಲ್ಲಿಯಾದರೂ ಮುಂಗಸಿಯನ್ನು ಕಂಡ ಕೂಡಲೇ ಕೋಪದಿಂದ ಕೆಂಡದ ಉಂಡೆಯಂತಾಗಿ ಅದನ್ನು ಕೊಲ್ಲಲು ಬಯಸುತ್ತಿದ್ದಳು.

ಇದರಂತೆ ರಾಜಕುಮಾರನಾದರೂ ಹಾವನ್ನು ಕಂಡಕೂಡಲೇ ಹೊಡೆದು ಹೆಣ ಹಾಕಬೇಕೆಂದು ಹುರುಡುಗಟ್ಟಿ ಹುಮ್ಮಸಿನಿಂದ ಪ್ರವೃತ್ತನಾಗುತ್ತಿದ್ದನು.

ಹೀಗೆ ಕೆಲವು ಕಾಲ ಕಳೆದ ಬಳಿಕ ಕರ್ಮ ಧರ್ಮ ಸಂಯೋಗದಿಂದ ಆ ಕೋಸಲ ರಾಜಕುಮಾರನಿಗೂ ಈ ಪ್ರಾಗ್ಜ್ಯೋತಿಷ ರಾಜಕುಮಾರಿಗೂ ಶಾಸ್ತ್ರೋಕ್ತವಾಗಿ ಮದುವೆ ಆಯಿತು. ವಿಹಾಹಿತರಾದ ಆ ನವದಂಪತಿಗಳಲ್ಲಿ ಶಚಿ ಮತ್ತು ಇಂದ್ರರಂತೆ ಪರಸ್ಪರ ಪ್ರೀತಿ ಇದ್ದಿತು. ಅನ್ಯೋನ್ಯ ಒಲವಿನ ಬಂಧನದಿಂದ ಮೆಚ್ಚಿ ಮಮತೆಯಿಂದ ಒಂದುಗೂಡಿದ ಆ ದಂಪತಿಗಳು ಎಂದೂ ಅಗಲದೆ, ವಿರಸಕ್ಕೆ ಎಡೆ ಇಲ್ಲದೆ, ಸರಸ ಸಿಂಗಾರ ಸಂಭ್ರಮದಿಂದ ಸಂತಸದುಂಭಿ ಒಲಿದು ನಲಿದಾಡುತ್ತಿದ್ದರು. ವನೋಪ ವನಗಳ ಮಂಜು ಲತಾ ಕುಂಜಗಳಲ್ಲಿಯೂ, ನಿಸರ್ಗ ಸುಂದರವಾದ ರಮಣೀಯ ಪ್ರದೇಶಗಳಲ್ಲಿಯೂ ಮಧು ಚಂದ್ರ ವಿಹಾರ, ಸ್ವೈರ ಸಂಚಾರ, ಸ್ವಚ್ಛಂದ ವಿಲಾಸಗಳಲ್ಲಿ ಲಂಪಟ ಲೋಲುಪರಾದ ಆ ದಂಪತಿಗಳು ನನ್ನ ಮಾಯೆಯಿಂದ ಮೋಹಿತರಾಗಿ ತಾವು ಯಾರು ಎಂಬುದನ್ನು ಅರಿಯದೆ ಎಪ್ಪತ್ತೇಳು ವರ್ಷಗಳ ಮೈತ್ರೀಮೋಹಮಯವಾದ ಮಧುರ ಜೀವನವನ್ನು ಕಳೆದರು.

ಒಂದು ದಿನ ಉಪವನದಲ್ಲಿ ಅವರಿಬ್ಬರೂ ದಂಪತಿಗಳು ಸರಸ ಸಲ್ಲಾಪ ವಿನೋದ ವಿಲಾಸಗಳಲ್ಲಿ ಆಸಕ್ತರಾದಾಗ ಅಲ್ಲಿ ಒಂದು ಹೆಣ್ಣು ಹಾವು ಹರಿದಾಡಿದ್ದು ಕಂಡು ಬಂದಿತು. ಹಾವನ್ನು ಕಂಡಕೂಡಲೇ ರಾಜಕುಮಾರನಿಗೆ ದ್ವೇಷವು ಉಕ್ಕಿ ಬಂದಂತಾಗಿ ಒಮ್ಮೆಲೇ ಅವನು ಅದನ್ನು ಕೊಲ್ಲಲಿಕ್ಕೆ ಹೋದನು. ಅವನ ಮಡದಿಯು ಆ ಹಾವನ್ನು ಕೊಲ್ಲಬೇಡವೆಂದು ಬಗೆಬಗೆಯಾಗಿ ದೈನ್ಯ ತುಂಬಿ ಬೇಡಿಕೊಂಡಳು. ಆದರೆ ಹಾವನ್ನು ಕಂಡಕೂಡಲೇ ಗರುಡನಂತೆ ಹುರುಡುಗೂಡಿದ ಆ ರಾಜಕುಮಾರನು ಆ ಹಾವನ್ನು ಸೆಳೆದು ಹೊಡೆದು ಕೊಂದೇ ಬಿಟ್ಟನು. ಇದರಿಂದ ಮಹಾರಾಣಿಗೆ ಬಹಳ ಕೋಪವು ಬಂದಿತು. ಕ್ರೋಧಾಂಧಳಾದ ಅವಳು ಅಂದಿನಿಂದ ಪತಿಯೊಡನೆ ಮಾತನ್ನೇ ಬಿಟ್ಟು ಬಿಟ್ಟಳು. ಅದೇ ವೇಳೆಯಲ್ಲಿ ಆ ವನದಲ್ಲಿ ಒಂದು ಹೊದರಿನಿಂದ ಮುಂಗಲಿಯೊಂದು ಹೊರಬಿದ್ದು ಹಸಿವೆಯಿಂದ ಹಾವು, ಹುಳ-ಹುಪ್ಪಡಿಗಳನ್ನು ಹುಡುಕುತ್ತ ಹೊರಬಂದಿತು. ಅದನ್ನು ಕಂಡಕೂಡಲೇ ಮಹಾರಾಣಿಗೆ ಮೈಯೆಲ್ಲವೂ ಉರಿದೆದ್ದಿತು. ಪತಿಯು ಬೇಡವೆಂದರೂ ಕೇಳದೇ ಅವಳು ಧಾವಿಸಿ ಬಂದು ಆ ಮುಂಗಸಿಯನ್ನು ಹೊಡೆದು ಕೊಂದು ಹಾಕಿದಳು. ಇದರಿಂದ ಮಹಾರಾಜನಿಗೆ ಭಯಂಕರವಾದ ಸಿಟ್ಟು ಬಂದಿತು. ಕೋಪಾಟೋಪದಿಂದ ಅವನು ಕಣ್ಣು ಕೆಂಪಗೆ ಮಾಡಿ ನುಡಿದನು-

''ಪ್ರಿಯೇ, ಸ್ತ್ರೀಯರಿಗೆ ನಲ್ಲನು ಎಲ್ಲ ಕಾಲದಲ್ಲಿಯೂ ಪ್ರಿಯನೂ ಪೂಜ್ಯನೂ ಆಗಿರುತ್ತಾನೆ. ನೀನು ನನ್ನ ಧರ್ಮಪತ್ನಿಯಾಗಿದ್ದರೂ ನನ್ನ ಮಾತನ್ನು ಮೀರಿದೆ.

ಈ ಮುಂಗಸಿಯ ಮೇಲೆ ಕ್ರೌರ್ಯವನ್ನು ತೋರಿದೆ. ನಿರ್ದಯಳಾಗಿ ಅದನ್ನು ಕೊಂದು ಹಾಕಿದೆ. ಮುಂಗಸಿಯು ಮಂಗಳಕರವಾದದ್ದೆಂದು ಶಾಸ್ತ್ರಗಳು ಸಾರುತ್ತಲಿವೆ. ಅದರಲ್ಲಿಯೂ ರಾಜರಿಗೆ ಮುಂಗಲಿಯ ಮೋರೆಯನ್ನು ನೋಡುವದರಿಂದ ಗೆಲವು ನಲಿವುಗಳು ಉಂಟಾಗುವದು ಅನುಭವ ಸಿದ್ಧವಾಗಿದೆ. ಇಂಥ ಮಂಗಲಕರವಾದ ಈ ಮುಂಗಸಿಯನ್ನು ನೀನೇಕೆ ಕೊಂದೆ ?

ಅದಕ್ಕೆ ಮಹಾರಾಣಿಯು ಅಷ್ಟೇ ಸಿಟ್ಟಿನಿಂದ ''ನಾನು ಬೇಡವೆಂದರೂ ಆ ಹೆಣ್ಣು ಹಾವನ್ನು ನೀನೇಕೆ ಕೊಂದೆ ? ಅದಕ್ಕಾಗಿಯೇ ನಾನೂ ಈ ಮುಂಗಸಿಯನ್ನು ಹೊಡೆದು ಹಾಕಿದೆ'' ಎಂದು ಉತ್ತರಿಸಿದಳು. ಅವಳ ಈ ಬಿರುನುಡಿಯನ್ನು ಕೇಳಿ ಕೆರಳಿ ಕೆಂಜಗದಂತಾದ ಮಹಾರಾಜನು ನುಡಿಕಿಡಿಗಳನ್ನು ತೂರಿದನು-

''ಭದ್ರೆ, ಹಾವು ಕ್ರೂರವಾದ ಪ್ರಾಣಿ. ಅದು ತನ್ನ ಘೋರವಾದ ವಿಷದ ಹಲ್ಲುಗಳನ್ನು ಚುಚ್ಚಿ ನಿರಪರಾಧಿಗಳಾದ ಮಾನವರನ್ನು ಕಚ್ಚಿ ಕೊಂದುಬಿಡುವದು. ಆದುದರಿಂದ ಹಾವು, ಹುಲಿ ಮುಂತಾದ ಘಾತಕ ಪ್ರಾಣಿಗಳನ್ನು ಮಾನವರು ಕಂಡಲ್ಲೆಲ್ಲ ಕೊಂದು ಹಾಕುತ್ತಾರೆ. ಲೋಕೋಪದ್ರವ ಕಾರಿಗಳಾದ ಇಂಥ ದುಷ್ಟ ಜೀವಗಳನ್ನು ಕೊಲ್ಲುವದು ರಾಜನಾದ ನನ್ನ ಕರ್ತವ್ಯವೇ ಆಗಿರುತ್ತದೆ. ಆದ್ದರಿಂದ ನಾನು ಈ ಹಾವನ್ನು ಕೊಂದದ್ದು ನ್ಯಾಯವೂ ಧರ್ಮವೂ ಆಗಿದೆ. ಆದರೆ ನೀನು ಮುಂಗಸಿಯನ್ನು ಕೊಂದದ್ದು ಯಾವ ನ್ಯಾಯ ? ಅದು ಯಾವ ಮನುಷ್ಯರನ್ನೂ ಕೊಲ್ಲುವದಿಲ್ಲ. ಪ್ರತ್ಯುತ ಮನುಷ್ಯರನ್ನು ಕೊಲ್ಲುವ ಹಾವುಗಳನ್ನು ಕಂಡಲ್ಲಿ ತುಂಡರಿಸಿ ಹಾಕಿ ಈ ಮುಂಗಸಿಯು ಪ್ರಾಣಿವರ್ಗಕ್ಕೆಲ್ಲ ಉಪಕಾರಕವೇ ಆಗಿದೆ. ಮೇಲಾಗಿ ಅದರ ಮುಖದರ್ಶನವೇ ಮಂಗಳಕರವೆಂದು ಶಾಸ್ತ್ರಗಳು ಸಾರುತ್ತವೆ. ಇಂಥ ನಿರುಪದ್ರವಿಯೂ, ಶುಭಕಾರಕವೂ, ಸುಂದರವೂ, ಲೋಕೋಪಕಾರಕವೂ ಮಂಗಳಕರವೂ ಆದ ಈ ಸಾಧು ಪ್ರಾಣಿ ಮುಂಗಸಿಯನ್ನು ನಾನು ಬೇಡವೆಂದು ತಡೆದರೂ ಕೇಳದೆ ಅನ್ಯಾಯವಾಗಿ ನೀನೇಕೆ ಕೊಂದೆ ? ನನ್ನ ಆಜ್ಞೆಯನ್ನು ಉಲ್ಲಂಘಿಸಿದ ಮತ್ತೂ ರಕ್ಕಸಿಯಂತೆ ಕ್ರೂರ ಹತ್ಯಾಕೃತ್ಯವನ್ನು ಮಾಡಿದ ನೀನು ಇಂದಿನಿಂದ ನನ್ನ ಹೆಂಡತಿಯಲ್ಲ, ನಾನು ನಿನ್ನ ಗಂಡನೂ ಅಲ್ಲ. ಸ್ತ್ರೀಯರನ್ನು ಕೊಲ್ಲಬಾರದೆಂದು ಶಾಸ್ತ್ರವಚನವಿದ್ದುದರಿಂದ ನಾನು ನಿನ್ನನ್ನು ಕೊಲ್ಲದೇ ಬಿಟ್ಟಿದ್ದೇನೆ.''

ಹೀಗೆ ಸಿಟ್ಟಿನಿಂದ ನುಡಿದು ಗರಬಡಿದವರಂತೆ ಆ ರಾಜಕುಮಾರನು ಆ ವನದಿಂದ ಎದ್ದು ಮನೆಗೆ ಬಂದನು. ಅವನ ಮಡದಿಯೂ ಕೂಡ ಅವನಿಗಿಂತ ಹೆಚ್ಚು ಸಿಡಿದುಕೊಂಡು ಅರಮನೆಗೆ ಬಂದು ತನ್ನ ಅಂತಃಪುರವನ್ನು ಸೇರಿದಳು. ಆ ದಂಪತಿಗಳಲ್ಲಿ ವಿರಸವು ಬೆಳೆಯುತ್ತ ಹೋಯಿತು. ಅರಮನೆ ಅಂತಃಪುರಗಳ ಮಧುರ ವಾತಾವರಣವೆಲ್ಲವೂ ಕೆಟ್ಟು ಹೋಯಿತು. ಮೊದಲಿನ ನಗೆ, ನಲುಮೆ, ಒಲುಮೆ, ಒಗೆತನ, ಉತ್ಸಾಹ, ಉಲ್ಲಾಸ, ವಿನೋದ ವಿಲಾಸ, ಎಲ್ಲವೂ ಒಮ್ಮೆಲೇ ನಿಂತುಹೋದವು. ಅರಮನೆ ಮೂಕವಾಯಿತು. ಅಂತಃಪುರವು ಶೋಕವ್ಯಾಕುಲವಾಯಿತು. ಈ ಸಮಾಚಾರವು ರಾಜಕುಮಾರನ ವೃದ್ಧ ತಂದೆತಾಯಿಗಳಿಗೆ ತಿಳಿಯಿತು. ಹಾವು ಮುಂಗಸಿಯ ಹಗರಣದಿಂದ ರಾಜಕುಟುಂಬದ ವಾತಾವರಣವೆಲ್ಲವೂ ವಿಷಮಯವಾದದ್ದನ್ನು ಕಂಡು ಅವರಿಗೆ ಬಹಳ ವ್ಯಸನವಾಯಿತು. ಅವರು ತಮ್ಮ ಮಂತ್ರಿಮಹಾಜನರನ್ನೂ ಸೇನಾಪತಿ ಸರದಾರರನ್ನೂ ಕಳುಹಿಸಿ ಮಗನನ್ನೂ ಸೊಸೆಯನ್ನೂ ತಾವಿದ್ದಲ್ಲಿ ಬರಮಾಡಿಕೊಂಡರು.''ಇಷ್ಟು ದಿನ ಏಕಜೀವನ್ಯಾಯದಂತೆ ಅನ್ಯೋನ್ಯ ಪ್ರೀತಿಯಿಂದ ಒಂದಾಗಿ ಬಾಳಿದ ನೀವು ಈಗೇಕೆ ಇಷ್ಟು ನಿಷ್ಠುರರಾಗಿ ಸಿಡಿದು ನಿಂತಿದ್ದೀರಿ ?

ನಿಮ್ಮ ಮಧುರ ದಾಂಪತ್ಯದ ಭದ್ರವಾದ ಆ ಸ್ನೇಹ ಸಂಪುಟವು ಒಡೆದು ಹೋಗಲು ಕಾರಣವೇನು ?'' ಎಂದು ಕೇಳಿದರು.

ಅದಕ್ಕೆ ರಾಜಕುಮಾರನು ''ನಾನು ಬೇಡವೆಂದರೂ ಕೇಳದೇ ಮುಂಗಸಿಯನ್ನು ನನ್ನ ಮಡದಿಯು ಹೊಡೆದದ್ದರಿಂದ ನಾನು ಅವಳ ಮೇಲಿನ ಮನಸ್ಸನ್ನು ತೆಗೆದಿದ್ದೇನೆ.'' ಅದರಂತೆ ರಾಜಕುಮಾರಿಯಾದರೂ ''ನಾನು ಬೇಡವೆಂದರೂ ಕೇಳದೆ ಹಾವನ್ನು ಹೊಡೆದದ್ದಕ್ಕೆ ಪ್ರತಿಯಾಗಿ ಹಾವನ್ನು ಕೊಲ್ಲುವ ಆ ಮುಂಗಸಿಯನ್ನು ನಾನೂ ಹೊಡೆದು ಕೊಂದೆ. ಇದರಲ್ಲಿ ನನ್ನ ತಪ್ಪೇನು ? ಎಂದು ಕೇಳಿದಳು.'' ವೃದ್ಧನಾದ ಮಹಾರಾಜನಿಗೆ ''ಈ ವಿರಸ ವೈಮನಸ್ಯಗಳಿಗೆ ಇವರು ಬಾಯಿಂದ ಹೇಳುವದಷ್ಟೇ ಕಾರಣವಿರದೇ ಏನೋ ಒಂದು ಗೂಢ ಕಾರಣವಿದೆ ಇವರ ಈ ಸ್ನೇಹವಿಘಟನೆಗೆ'' ಎಂದು ಖಾತ್ರಿಯಾಯಿತು.

ಆದುದರಿಂದ ಅವನು ತನ್ನ ಮಗನನ್ನು ಹತ್ತಿರ ಕರೆದು ಪ್ರೀತಿಯಿಂದ ಅವನ ತಲೆಯನ್ನು ನೇವರಿಸಿ ಪ್ರಶ್ನೆ ಕೇಳಿದನು-

''ಮಗು, ನಿಮ್ಮೀರ್ವರ ಪ್ರೀತಿವಿಚ್ಛೇದಕ್ಕೆ ನಿಜವಾದ ಕಾರಣವೇನು ಹೇಳು ? ಬರಿ ನೀನು ಹಾವು ಕೊಂದು ಅವಳು ಮುಂಗಲಿಯನ್ನು ಕೊಂದ ಮಾತ್ರಕ್ಕೆ ನಿಮ್ಮ ನಿಮ್ಮಲ್ಲಿ ಇಷ್ಟು ವೈರಸ್ಯವು ಹುಟ್ಟಲು ಕಾರಣವಿಲ್ಲ. ಒಂದೆರಡು ದಿನ ಏನೋ ವಿರಸವಾದರೂ ಇಷ್ಟು ವಿಕೋಪಕ್ಕೆ ಇಷ್ಟೇ ಕಾರಣದಿಂದ ಹೋಗಲಾರದು. ನಿನ್ನ ಮಡದಿಯೋ ಮಹಾ ಪತಿವ್ರತೆ. ನೆರಳಿನಂತೆ ನಿನ್ನನ್ನು ಸ್ನೇಹದಿಂದ ನಲುಮೆಯಿಂದ ಅನುಸರಣ ಮಾಡುವ ಆದರ್ಶ ಮಹಿಳೆ. ಅವಳು ನೀನು ಹೇಳಿದ ಮಾತನ್ನು ಎಂದೂ ಮೀರಿಲ್ಲ. ಹಾಕಿದ ಉಗಳನ್ನು ದಾಟಿಲ್ಲ. ಯಾರಿಗೂ ಕಹಿಯಾದ ಮಾತನ್ನು ಆಡಿಲ್ಲ. ನಿನ್ನ ಅಭಿರುಚಿ ಒಲವುಗಳನ್ನು ನೋಡಿಕೊಂಡು ನಿನ್ನ ಇಚ್ಛಾನುಸಾರವಾಗಿಯೇ ತನ್ನ ಮೈಯನ್ನೂ ತೆಯ್ಯುವ ಈ ಸಾಧ್ವೀಮಣಿಯನ್ನು ನೀನು ಎಂದಿಗೂ ಬಿಡಕೂಡದು. ನಿನಗೂ ಇವಳ ಮೇಲೆ ತುಂಬ ಪ್ರೀತಿ ಇದ್ದಿತು. ನಿನ್ನ ಪ್ರಾಣಕ್ಕಿಂತ ಹೆಚ್ಚಾಗಿ ಅವಳನ್ನೂ ಪ್ರೀತಿಸುತ್ತಿದ್ದೆ. ಅಂಥ ಆ ನಿನ್ನ ಅವ್ಯಾಜ ಪ್ರೇಮವು ಒಂದು ದಿನ ನಿನ್ನ ಮಾತನ್ನು ಮೀರಿ ಮುಂಗಸಿಯನ್ನು ಕೊಂದ ಮಾತ್ರಕ್ಕೆ ಒಮ್ಮೆಲೇ ಏಕೆ ಕರಗಿ ಹೋಗಬೇಕು ? ಇಂಥ ಕ್ಷುದ್ರಕಾರಣಕ್ಕಾಗಿ ಅಂಥ ಸ್ವಾಭಾವಿಕ ದಾಂಪತ್ಯ ಪ್ರೇಮವು ಎಂದೂ ಒಡೆದು ಸಿಡಿದು ಹೋಗಲಾರದು. ಇದಕ್ಕೆ ಏನೋ ಬಲವತ್ತರವಾದ ಬೇರೆ ಕಾರಣವಿದೆ. ಅದನ್ನು ನೀನು ನನ್ನೆದುರು ಬಿಚ್ಚಿ ಹೇಳದೆ ಮುಚ್ಚಿ ಇಡುತ್ತಲಿರುವೆ ತಂದೆ-ತಾಯಿಗಳ ಎದುರು ಗುಟ್ಟನ್ನು ಹೇಳದಿದ್ದರೆ ಅವರಿಗೆ ರೌರವ ನರಕವಾಗುವದು ಎಂದು ಶಾಸ್ತ್ರದಲ್ಲಿ ಹೇಳಿದೆ. ಆದುದರಿಂದ ಒಳ್ಳೇದೆ ಆಗಲಿ, ಕೆಟ್ಟದ್ದೇ ಆಗಲಿ ಇದ್ದುದನ್ನು ಇದ್ದಂತೆ ನನ್ನೆದುರು ಹೇಳು. ನಿಜವಾದ ಸದ್ಗುಣಗಳ ಖಣಿಯೂ ಸಾಧ್ವೀಶಿಖಾಮಣಿಯೂ ಆದ ಈ ನನ್ನ ಸೊಸೆಯಲ್ಲಿ ನಿನಗೆ ದ್ವೇಷ ಹುಟ್ಟಲು ನಿಜವಾದ ಕಾರಣವಾವುದೆಂಬುದನ್ನು ಸ್ಪಷ್ಟವಾಗಿ ತಿಳಿಸು.''

ತಂದೆಯ ಈ ಆಗ್ರಹವನ್ನು ನೋಡಿ ರಾಜಕುಮಾರನು '' ಅಪ್ಪಾ ! ಇಷ್ಟು ನೆರೆದ ಜನರೆದುರು ನನಗೆ ಆ ಗುಟ್ಟನ್ನು ರಟ್ಟು ಮಾಡುವ ಇಚ್ಛೆ ಇಲ್ಲ. ಇವರೆಲ್ಲರೂ ಈಗ ಮನೆಗೆ ಹೋಗಲಿ. ನಾಳೆ ನಾನು ಏಕಾಂತದಲ್ಲಿ ನಿನ್ನ ಹತ್ತಿರ ಬಂದು ಇದರ ಕಾರಣವನ್ನು ಹೇಳುತ್ತೇನೆ '' ಎಂದು ಆಶ್ವಾಸನೆಯನ್ನಿತ್ತನು. ಅಂದಿನ ರಾತ್ರಿಯು ಕಳೆದಂತಾಯಿತು. ನಗಾರಿ ನೌಬತ್ತು ಹಾಗೂ ಸೂತ ಮಾಗಧರ ಉದಯರಾಗದಿಂದ ಕೋಸಲರಾಜನು

ಎದ್ದು ಕೂಡುವಷ್ಟರಲ್ಲಿ ತಾವರೆ ಗಣ್ಣಿನ ರಾಜಕುಮಾರನು ಸ್ನಾನಮಾಡಿ ಅಲಂಕೃತನಾಗಿ ತಂದೆಯ ಮನೆಗೆ ಬಂದನು. ತನ್ನ ಪಾದಾರವಿಂದಗಳಿಗೆ ನಮಿಸಿ ನಿಂದ ಆ ಮೆಚ್ಚಿನ ಮಗನನ್ನು ಮೈದಡವಿ ಮಹಾರಾಜನು ''ಮಗು ನಿಮ್ಮಿಬ್ಬರ ಪ್ರಣಯಭಂಗದ ಕಾರಣದ ರಹಸ್ಯವು ಏನೆಂಬುದನ್ನು ತಿಳಿಸು'' ಎಂದು ಕೇಳಿದನು. ಆಗ ಆ ರಾಜಕುಮಾರನು ವಿನಯದಿಂದ ತಂದೆಗೆ ವಂದಿಸಿ '' ಪೂಜ್ಯರೇ, ಆ ಮಹತ್ವದ ರಹಸ್ಯವನ್ನು ತಿಳಿಯಬೇಕೆಂದಿದ್ದರೆ ನೀವು ನನ್ನ ಜೊತೆಗೆ ಕುಬ್ಜಾಮ್ರಕ ಕ್ಷೇತ್ರಕ್ಕೆ ಬನ್ನಿರಿ, ಅಲ್ಲಿಯೇ ನಾನು ನಿಮಗೆ ನಮ್ಮ ಪ್ರೇಮದ ಕಟ್ಟೆಯು ಒಡೆದುದರ ಗುಟ್ಟನ್ನು ವಿವರಿಸುತ್ತೇನೆ '' ಎಂದು ಹೇಳಿದನು. ಚಿರಂಜೀವನ ಈ ಮಾತನ್ನು ಕೇಳಿ ಮಹಾರಾಜನು ಹಾಗೇ ಆಗಲಿ ಎಂದು ಹೇಳಿ ತನ್ನ ಆನೆ, ಕುದುರೆ, ಹಸುಗಳ ಹಿಂಡು ಆಹಾರ ಪದಾರ್ಥ, ಧನಧಾನ್ಯ, ರತ್ನಾಭರಣ ವಸ್ತ್ರವಾಹನ ಮುಂತಾದ ರಾಜ ವೈಭವದೊಂದಿದೆ ಕುಬ್ಜಾಮ್ರಕ ಕ್ಷೇತ್ರಕ್ಕೆ ಹೊರಟನು. ಹೊರಡುವ ಮುನ್ನ ತನ್ನ ಹಿರಿಯ ಮಗನನ್ನು ಕರೆದು '' ನಾವಿಬ್ಬರೂ ಹೊರಟು ಹೋದ ಬಳಿಕ ಈ ರಾಜ್ಯಭಾರವನ್ನು ಯಾರಿಗೆ ಒಪ್ಪಿಸುವದು ? '' ಎಂದು ಕೇಳಿದನು. ಅದನ್ನು ಕೇಳಿ ರಾಜಕುಮಾರನು ತನ್ನ ತಂದೆಯ ತಾವರೆಯಡಿಯ ಎಡೆಯಲ್ಲಿ ತನ್ನ ತಲೆಯನ್ನು ತಾಕಿಸಿ ಬಿನ್ನವಿಸಿದನು. ''ತಾತ ಈ ರಾಜ್ಯವನ್ನೆಲ್ಲ ನನ್ನ ತಮ್ಮನಿಗೇ ಒಪ್ಪಿಸಿಬಿಡಿರಿ. ಕುಬ್ಜಾಮ್ರಕ ಕ್ಷೇತ್ರಕ್ಕೆ ಹೋದ ಬಳಿಕ ನಾನೆಂದಿಗೂ ತಿರುಗಿ ಬರಲಾರೆ. ನನಗೆ ಈ ರಾಜ್ಯ ಐಶ್ವರ್ಯಗಳ ಮೇಲೆ ಸ್ವಲ್ಪವೂ ಆಶೆಯಿಲ್ಲ. ನನ್ನ ಅಧಿಕಾರವನ್ನೆಲ್ಲ ನನ್ನ ಸಹೋದರನಿಗೇ ಸ್ವ-ಸಂತೋಷದಿಂದ ಬಿಟ್ಟುಕೊಟ್ಟಿದ್ದೇನೆ. ಅವನನ್ನೇ ನಮ್ಮ ಈ ರಾಜ್ಯ ಸಿಂಹಾಸನದ ಮೇಲೆ ಕೂಡ್ರಿಸಿ ನೀವು ಆ ಕ್ಷೇತ್ರಕ್ಕೆ ಬನ್ನಿರಿ. ''

ಜ್ಯೇಷ್ಠ ಪುತ್ರನ ಈ ಸಲಹೆಯಂತೆ ಕೋಸಲ ದೇಶದ ಸಾಮ್ರಾಜ್ಯಸಿಂಹಾಸನದ ಮೇಲೆ ತನ್ನ ಎರಡನೇ ಮಗನನ್ನು ಕೂಡಿಸಿ ಪಟ್ಟಾಭಿಷೇಕವನ್ನು ಮಾಡಿ ಹಿರಿಯ ಮಗನೊಡನೆ ತಾನು ಆತ್ಮ ಪುರ ಪರಿವಾರದೊಡನೆ ಕುಬ್ಜಾಮ್ರಕ ಕ್ಷೇತ್ರಕ್ಕೆ ಬಂದನು. ಆ ಕ್ಷೇತ್ರದಲ್ಲಿ ಮಾಡಬೇಕಾದ ತೀರ್ಥವಿಧಿಯನ್ನು ಮಾಡಿಕೊಂಡು ಅನ್ನದಾನ, ಸುವರ್ಣದಾನ, ವಸ್ತ್ರದಾನ, ಭೂದಾನ, ಗೋದಾನ, ಗ್ರಹದಾನ, ಮುಂತಾದ ಬಗೆಬಗೆಯ ದಾನ ಧರ್ಮಗಳನ್ನು ಮಾಡಿ ತನ್ನ ಸರ್ವೈಶ್ವರ್ಯವನ್ನೆಲ್ಲ ದಕ್ಷಿಣಾ ರೂಪವಾಗಿ ಸತ್ಪಾತ್ರದಲ್ಲಿ ಕೊಟ್ಟು ಕೃತಕೃತ್ಯನಾದನು. ಕೆಲವು ದಿನ ಕಳೆದ ಬಳಿಕ ಕೋಸಲ ದೇಶದ ದೊರೆಯು ತನ್ನ ಮಗನನ್ನು ಹತ್ತಿರ ಕರೆದು ದಂಪತಿಗಳ ಪ್ರೀತಿ ವಿಚ್ಛೇದನದ ಕಾರಣವನ್ನು ಕೇಳಿದನು.

ಅದಕ್ಕೆ ರಾಜಕುಮಾರನು '' ಈಗ ರಾತ್ರಿಯಾಗಿದೆ. ಮಲಗಿ ನಿದ್ರೆ ಮಾಡಿರಿ. ನಾಳೆ ಬೆಳಿಗ್ಗೆ ಅದೆಲ್ಲವನ್ನೂ ನಿಮಗೆ ಹೇಳುತ್ತೇನೆ.'' ಎಂದು ತಿಳಿಯಪಡಿಸಿದನು. ಅಂದಿನ ರಾತ್ರಿಯು ಕಳೆದು ಸೂರ್ಯೋದಯವಾದ ಬಳಿಕ ಆ ರಾಜಕುಮಾರನು ಗಂಗೆಯಲ್ಲಿ ಮಿಂದು ಶ್ರೀ ಹರಿಯನ್ನು ವಂದಿಸಿ ತಂದೆಯ ಬಳಿಗೆ ಬಂದು ನಮಸ್ಕರಿಸಿ ''ಅಪ್ಪಾ, ನೀವು ಕೇಳುತ್ತಿರುವ ರಹಸ್ಯವನ್ನು ತಿಳಿಸಿಕೊಡುತ್ತೇನೆ ಬನ್ನಿರಿ'' ಎಂದು ಹೇಳಿದನು. ಕೋಸಲ ರಾಜನೂ ಅವನ ಸೊಸೆಯಾದ ಆ ರಾಜಕುಮಾರಿಯೂ ಆ ರಾಜಕುಮಾರನ ಬೆನ್ನು ಹತ್ತಿದರು. ರಾಜಕುಮಾರನು ಅವರೆಲ್ಲರನ್ನೂ ಕರೆದುಕೊಂಡು ಕುಬ್ಜಾಮ್ರಕ ಕ್ಷೇತ್ರದ

ಹತ್ತಿರ ರಾಶಿಹಾಕಿದ ನಿರ್ಮಾಲ್ಯದ ಬಳಿಗೆ ಕರೆದುಕೊಂಡು ಹೋಗಿ ತಂದೆಯ ಎರಡೂ ಚರಣಗಳನ್ನು ಮುಟ್ಟಿ ಹೇಳಿದನು.- ''ಮಹಾರಾಜ, ನಾನು ಕಳೆದ ಜನ್ಮದಲ್ಲಿ ಮುಂಗಸಿಯಾಗಿದ್ದೆ. ಆ ಬಾಳೆಯಮರದ ಬುಡದಲ್ಲಿಯೇ ವಾಸಮಾಡುತ್ತಿದ್ದೆ. ಒಂದು ದಿನ ಆಹಾರವನ್ನು ಹುಡುಕುವದಕ್ಕಾಗಿ ಈ ನಿರ್ಮಾಲ್ಯ ರಾಶಿ ಇದ್ದಲ್ಲಿಯೇ ಸುಗಂಧ ಹೂಗಳನ್ನು ಮೂಸಿಸುತ್ತ ಒಂದು ಭಯಂಕರವಾದ ಹೆಣ್ಣು ಹಾವು ಹರಿದಾಡುತ್ತಿತ್ತು. ಅದನ್ನು ಕಂಡಕೂಡಲೇ ಮುಂಗಸಿಯ ಜಾತಿಗನುಗುಣವಾಗಿ ನನ್ನ ಮೈಯಲ್ಲಿ ಹುರುಪು ತುಂಬಿತು. ಕೋಪದಿಂದ ಕೆಂಪೇರಿದ ಕಣ್ಣುಳ್ಳ ನಾನು ಕೂಡಲೇ ಆ ಹಾವಿನ ಮೇಲೆ ಎರಗಿದೆ. ನನಗೂ ಆ ಹಾವಿಗೂ ಘೋರ ಯುದ್ಧವಾಯಿತು. ಮಾಘ ದ್ವಾದಶಿಯ ದಿನ ಆ ಹಾವಿನೊಡನೆ ಹೋರಾಡುತ್ತ ನನ್ನ ಮೈಯನ್ನು ಕಡಿಸಿಕೊಳ್ಳದಂತೆ ನುಣುಚಿಕೊಳ್ಳುತ್ತ ಅದಕ್ಕೆ ಏಟು ಹಾಕುವ ನನ್ನ ಮೂಗನ್ನು ಆ ಸರ್ಪವು ಕಚ್ಚಿಬಿಟ್ಟಿತು. ಆ ವಿಷವು ನನ್ನ ದೇಹದಲ್ಲಿ ಭೇದಿಸುವಷ್ಟರಲ್ಲಿಯೇ ಸಿಟ್ಟಿನಿಂದ ತಲೆ ಕೆಟ್ಟು ಹೋದ ನಾನು ಆ ಹಾವನ್ನು ಹಿಡಿದು ಹೊಡೆದು ಕೊಂದು ಹಾಕಿದೆ. ನಾವಿಬ್ಬರೂ ಸತ್ತು ಹೋದೆವು.

ಅನಂತರ ಈ ಕ್ಷೇತ್ರದ ಮಹಿಮೆಯಿಂದ ನಾವಿಬ್ಬರೂ ರಾಜಮನೆತನದಲ್ಲಿಯೇ ಹುಟ್ಟಿ ಒಬ್ಬರನ್ನೊಬ್ಬರು ಮದುವೆಯಾದೆವು. ನಿನ್ನ ಮಗನಾಗಿ ಹುಟ್ಟಿದ ನನಗೆ ಜನ್ಮಾಂತರದ ಸಂಸ್ಕಾರದಿಂದ ಯಾವದೋ ಒಂದು ಹಾವನ್ನು ಕಂಡಕೂಡಲೇ ಜಾತಿ ದ್ವೇಷವು ಮರುಕಳಿಸಿ ಅದನ್ನು ಕೊಂದುಹಾಕಿದೆ. ಮತ್ತು ನನ್ನ ಜಾತಿ ಬಂಧುವಾದ ಒಂದು ಮುಂಗಸಿಯನ್ನು ನಾನು ಬೇಡವೆಂದು ಹೇಳಿದರೂ ಕೇಳದೇ ಈ ನಿನ್ನ ಸೊಸೆಯು ಕೊಂದದ್ದರಿಂದ ನನಗೆ ಅವಳ ಮೇಲೆ ಸಿಟ್ಟು ಬಂದು ನಾನು ಅವಳನ್ನು ಬಿಟ್ಟುಬಿಟ್ಟೆ.'' ರಾಜಕುಮಾರನ ಈ ಮಾತನ್ನು ಕೇಳಿ ಅವನ ಹೆಂಡತಿಯಾದರೂ ಮಾವನ ಮುಂದೆ ಬಂದು ಕೈ ಜೋಡಿಸಿಕೊಂಡು ಸಂಕ್ಷೇಪದಲ್ಲಿ ತನ್ನ ಕತೆಯನ್ನು ಹೇಳಿದಳು.-

''ಹಿರಿಯರೇ, ಹಿಂದೆ ಈ ನಿರ್ಮಾಲ್ಯ ರಾಶಿಯಲ್ಲಿ ನಾನು ಹೆಣ್ಣು ಹಾವಾಗಿ ಹರಿದಾಡುತ್ತಿರುವಾಗ ಈ ಮುಂಗಸಿಯು ತಾನಾಗಿಯೇ ಬಂದು ನನ್ನ ಜೊತೆಗೆ ಕಾದಾಡಿ ನನ್ನನ್ನು ಕೊಂದಿತು. ಈ ಪವಿತ್ರ ಕ್ಷೇತ್ರದಲ್ಲಿ ಸತ್ತುದರಿಂದ ನಾನು ಈ ಜನ್ಮದಲ್ಲಿ ಪ್ರಾಗ್ಜ್ಯೋತಿಷಪುರದ ರಾಜನಂದಿನಿಯಾಗಿ ಜನಿಸಿ ನಿಮ್ಮ ಸೊಸೆಯಾದೆನು. ಹಿಂದಿನ ಸಿಟ್ಟಿನಿಂದ ಮೈಮರೆತ ನಾನು ವನ ವಿಹಾರ ಸಮಯದಲ್ಲಿ ಮುಂಗಸಿಯನ್ನು ಕಂಡು ಹೊಡೆದು ಸಾಯಿಸಿದೆನು. ಇದು ನನ್ನ ಕತೆ. '' ಮಗ ಮತ್ತು ಸೊಸೆಯ ಮಾತುಗಳನ್ನು ಕೇಳಿ ಆ ಕೋಸಲ ದೇಶದ ದೊರೆಯು ಮಾಯಾ ತೀರ್ಥಕ್ಕೆ ಹೋಗಿ ತನ್ನ ದೇಹ ತ್ಯಾಗವನ್ನು ಮಾಡಿದನು. ರಾಜಕುಮಾರನೂ ಹಾಗೂ ಅವನ ಮಡದಿಯೂ ವಿರಕ್ತರಾಗಿ ಪುಂಡರೀಕ ತೀರ್ಥದಲ್ಲಿ ಪ್ರಾಣ ನೀಗಿದರು. ಮುಂದೆ ಕೋಸಲದ ರಾಜನೂ ಅವನ ಮಗನೂ ಸೊಸೆಯೂ ತಮ್ಮ ತಪೋ ಬಲದಿಂದಲೂ ನನ್ನ ಅನುಗ್ರಹ ವಿಶೇಷದಿಂದಲೂ ನಾನಿರುವ ಪರಮ ಸ್ಥಾನವಾದ ಶ್ವೇತದ್ವೀಪಕ್ಕೆ ಬಂದರು. ಇದರಂತೆ ಈ ಕುಬ್ಜಾಮ್ರಕ ಕ್ಷೇತ್ರದಲ್ಲಿ ಪುಣ್ಯ ಕಾರ್ಯಗಳನ್ನು ಮಾಡಿದ ಹರಿ ಜನರೂ, ಗಿರಿಜನರೂ ಸರ್ವವರ್ಣದವರೂ ಪರಮ ಸಿದ್ಧಿಯನ್ನು ಪಡೆದರು.

ಈ ಕುಬ್ಜಾಮ್ರಕ ಕ್ಷೇತ್ರದ ಮಹಾ ಮಹಿಮೆಯನ್ನು ನಾನು ಹಿಂದೊಮ್ಮೆ ರೈಭ್ಯ ಋಷಿಗಳಿಗೂ ಭೂದೇವಿಯಾದ ನಿನಗೂ ತಿಳಿಸಿದ್ದೇನೆ. ಇದನ್ನು ಪ್ರಾತಃಕಾಲದಲ್ಲಿ ಎದ್ದು ಹೇಳಿ ಶ್ರವಣ ಮಾಡುವವನೂ ಪಠಣ ಮಾಡುವವನೂ ತಮ್ಮ ಹಿಂದು ಮುಂದಿನ ಹತ್ತು ತಲೆ ಮಾರಿನ ಜನರನ್ನು ಉತ್ತಾರಣ ಮಾಡುವರು.

*ವರಾಹ ಪುರಾಣದಲ್ಲಿ ನೂರ ಐದನೇ ಅಧ್ಯಾಯ ಮುಗಿದುದು.*



## ವಿಷ್ಣು ದೀಕ್ಷೆಯ ಕ್ರಮ

**ಅಧ್ಯಾಯ - ೧೦೬**

ಸೂತಮುನಿ :- ಭೂದೇವಿಯು ಭಗವಂತನಾದ ವರಾಹಸ್ವಾಮಿಯಿಂದ ಅನೇಕ ಧರ್ಮರಹಸ್ಯಗಳನ್ನು ಕೇಳಿಕೊಂಡು ಮತ್ತೆ ಮಾತನಾಡಿದಳು.

''ಮಾಧವಾ, ಈ ಕುಬ್ಜಾಮ್ರಕ ಕ್ಷೇತ್ರದ ಮಹಿಮೆಯು ಅತ್ಯಾಶ್ಚರ್ಯಕರವಾಗಿದೆ. ಅನೇಕ ಗಿಡ, ಗುಡ್ಡ, ಜನ, ದನ ಮುಂತಾದ ಅಸಂಖ್ಯ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವನ್ನೆಲ್ಲ ಹೊತ್ತುನಿಂತ ನನ್ನ ಮೈಮೇಲಿನ ಭಾರವೆಲ್ಲವೂ ನಿನ್ನ ಈ ಧರ್ಮ ಪ್ರವಚನವನ್ನು ಕೇಳಿ ಇಳಿದಂತಾಗಿದೆ. ಈಗ ನನ್ನ ದೇಹವೆಲ್ಲವೂ ಅತ್ಯಂತ ಹಗುರಾದಂತಾಗಿ ಉಲ್ಲಾಸಗೊಂಡಿದೆ. ನನ್ನ ಅಜ್ಞಾನವೆಲ್ಲವೂ ದೂರವಾಗಿದೆ. ನೀನು ನಿನ್ನ ಮುಖದಿಂದ ನನ್ನನ್ನು ಎತ್ತಿ ಹಿಂದೆ ಉದ್ಧಾರ ಮಾಡಿದ್ದಿ. ಈಗಲೂ ನಿನ್ನ ಅದೇ ಮುಖದಿಂದ ಧರ್ಮೋಪದೇಶ ಮಾಡಿ ನನ್ನ ಜನ್ಮೋದ್ಧಾರವನ್ನೇ ಮಾಡುತ್ತಲಿರುವೆ.

ದೇವ, ಈಗ ನನಗೆ ವಿಷ್ಣು ದೀಕ್ಷೆಯನ್ನು ಹೊಂದುವ ಬಗೆಯನ್ನು ಕೇಳಬೇಕೆಂದು ಕುತೂಹಲವಾಗಿದೆ. ಅದನ್ನು ನೀನು ತಿಳಿಸಿ ಹೇಳು. '' ಭೂದೇವಿಯ ಈ ಬಿನ್ನಹವನ್ನು ಮನ್ನಿಸಿ ಭಗವಂತನು ಮೇಘ ಗಂಭೀರವಾದ ಧ್ವನಿಯಿಂದ ಆ ಭಾಗವತ ದೀಕ್ಷಾ ಕ್ರಮವನ್ನು ಹೇಳತೊಡಗಿದನು. - ''ಭದ್ರೆ, ಈ ಭಾಗವತ ದೀಕ್ಷೆಯನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದ ನಾಲ್ಕು ವರ್ಣದವರಲ್ಲದೇ ಯಾರಾದರೂ ನಿಜವಾದ ಭಗವದ್ ಭಕ್ತಿ ಇದ್ದಲ್ಲಿ ಪಡೆಯಬಹುದು.

ಈ ದೀಕ್ಷೆಯನ್ನು ಪಡೆಯ ಬಯಸುವವರು ಮೊದಲು ಯೋಗ್ಯವಾದ ಗುರುವನ್ನು ಆರಿಸಿಕೊಂಡು ಅವನ ಬಳಿಗೆ ಹೋಗಿ ಸಾಷ್ಟಾಂಗ ನಮಸ್ಕಾರ ಮಾಡಿ ''ಶಾಧಿ ಶಿಷ್ಯೋಽಸ್ಮಿತೇ ಗುರೋ'' ಗುರುವೇ ನಾನು ನಿನಗೆ ಶಿಷ್ಯನಾಗಿ ಬಂದಿದ್ದೇನೆ. ನನಗೆ ಉಪದೇಶವನ್ನು ಕೊಡು'' ಎಂದು ಪ್ರಾರ್ಥನೆಯನ್ನು ಮಾಡಬೇಕು. ಮತ್ತೂ ದೀಕ್ಷಾ ಕರ್ಮಕ್ಕೆ ಬೇಕಾದ ಭತ್ತ, ಅಳು, ತುಪ್ಪ, ಜೇನುತುಪ್ಪ, ದರ್ಭೆ, ಗಂಧ, ಹೂವು, ಧೂಪ, ದೀಪ, ನೈವೇದ್ಯಗಳನ್ನೂ, ಕೃಷ್ಣಾಜಿನ, ಪಾಲಾಶದಂಡ (ಮುತ್ತುಗದಕೋಲು) ವಸ್ತ್ರ, ಪಾದುಕೆ, ಬೆಳ್ಳಗಿರುವ ಯಜ್ಞೋಪವೀತ, ಆಜ್ಯಪಾತ್ರೆ, ಹೋಮ ಮಾಡಲಿಕ್ಕೆ ಬೇಕಾದ ಅನ್ನದ ಪಾತ್ರೆ, ಸೌಟು, ಎಳ್ಳು, ಭತ್ತ, ಬಗೆಬಗೆಯ ಹಣ್ಣುಕಾಯಿಗಳನ್ನೂ ಪುರೋಹಿತರಿಗೆ ಮತ್ತೂ ದೀಕ್ಷಿತರಿಗೆ ಭೋಜನಕ್ಕೆ ಬೇಕಾಗುವ ಭಕ್ಷ ಭೋಜ್ಯ ಅನ್ನಪಾನಗಳನ್ನೂ ಬಗೆಬಗೆಯ ರತ್ನ, ಕಾಜನಕನ್ನಡಿ ಮುಂತಾದವುಗಳನ್ನೂ

ಸಜ್ಜುಗೊಳಿಸಿ ತಂದು ಗುರುವಿನ ಸನ್ನಿಧಿಗೆ ಒಪ್ಪಿಸಬೇಕು. ಗುರುವು ತನ್ನ ಶಿಷ್ಯನಿಗೆ ದೀಕ್ಷೆ ಕೊಡುವ ಮುನ್ನ ಸ್ಪಷ್ಟ ಶಬ್ದಗಳಲ್ಲಿ ಅನುಶಾಸನಗೈಯಬೇಕು -

''ನೀನು ಎಂದೂ ಮಾಂಸವನ್ನು ತಿನ್ನಬಾರದು. ಮೀನಗಳನ್ನು ಭಕ್ಷಿಸಬಾರದು. ಮದ್ಯವನ್ನು ಕುಡಿಯಬಾರದು. ಪರರನ್ನು ನಿಂದಿಸಬಾರದು. ಯಾರನ್ನೂ ಹಿಂಸಿಸಬಾರದು. ಕ್ರೂರತನ, ಕಳ್ಳತನ, ಚಾಡಿಕೋರತನವನ್ನು ಎಂದೂ ಮಾಡಬಾರದು. ಗುರುಪತ್ನಿ, ರಾಜಪತ್ನಿ, ಅಥವಾ ಯಾವದೇ ಪರಪತ್ನಿ ಮತ್ತು ಪರಸ್ತ್ರೀಯರನ್ನು ಎಂದೂ ಕಾಮಿಸಬಾರದು. ಇನ್ನೊಬ್ಬರ ಭಾಗ್ಯವನ್ನು ನೋಡಿ ಅಸೂಯೆ ಪಡಬಾರದು. ಅತಿಥಿಗಳನ್ನು ಎಂದೂ ನಿರಾಶೆಮಾಡಿ ಕಳಿಸಬಾರದು. ಭಗವದ್ಭಕ್ತರನ್ನು ಅತ್ಯಂತ ಆದರದಿಂದ ಸತ್ಕರಿಸಬೇಕು. ಕನ್ಯೆಯನ್ನು ಕೊಡುತ್ತೇನೆಂದು ವಾಗ್ದಾನ ಮಾಡಿದ ಬಳಿಕ ಮದುವೆ ಮಾಡಿಕೊಡದೇ ಇರಬಾರದು. ಹಾಗೆ ಮಾಡಿದರೆ ಪಿತೃ ಹಿಂಸಾ ಪಾಪವು ಬರುವದು. ಪತಿವ್ರತೆಯೂ, ಪ್ರಿಯ ಸಖಿಯೂ ಆದ ಹೆಂಡತಿಯನ್ನು ಎಂದೂ ಹಿಂಸಿಸಬಾರದು.

ಭಾರ್ಯಾದ್ರೋಹಿಯೂ, ಬ್ರಹ್ಮಹತ್ಯ ಮಾಡಿದವರೂ, ಮಾಡಿದ ಉಪಕಾರವನ್ನು ನೆನೆಯದ ಕೃತಘ್ನರೂ, ತಲೆಗಡುಕರೂ, ವ್ಯಭಿಚಾರದಿಂದ ಹುಟ್ಟಿದವರೂ, ಗೋಹತ್ಯ ಮಾಡಿದವರೂ, ಭಾಗವತ ದೀಕ್ಷೆಯನ್ನು ಪಡೆಯಲು ಅರ್ಹರಲ್ಲ. ಅಂಥವರಿಗೆ ಎಂದೂ ವಿಷ್ಣು ದೀಕ್ಷೆಯನ್ನು ಕೊಡಕೂಡದು. ಈ ದೀಕ್ಷೆಯನ್ನು ಪಡೆದ ಬಳಿಕ ನಿಷಿದ್ಧ ಪದಾರ್ಥಗಳನ್ನು ತಿನ್ನಕೂಡದು. ಜನರಿಗೆ ಉಪಯೋಗಕ್ಕೆ ಬರುವ ಮರಗಳನ್ನು ಎಂದಿಗೂ ಕಡೆಯಕೂಡದು.'' ಈ ಎಲ್ಲ ನಿಯಮ ನಿಬಂಧನಗಳನ್ನು ಒಪ್ಪುವ ಶಿಷ್ಯನಿಗೆ ವಿಧಿಪೂರ್ವಕವಾಗಿ ವಿಷ್ಣು ದೀಕ್ಷೆಯನ್ನು ಕೊಡಬೇಕು.

ಗುರುಗಳಿಂದ ದೀಕ್ಷೆ ಪಡೆಯಬಯಸುವ ಬ್ರಾಹ್ಮಣನು ಸ್ನಾನಮಾಡಿ, ಗುರುವಿನ ಪಾದ ಮುಟ್ಟಿ ನಮಸ್ಕಾರಮಾಡಿ, ಗುರುವಿನ ಅಪ್ಪಣೆಯಂತೆ ಹದಿನಾರು ಮೊಳದಳತೆಯುಳ್ಳ ದೊಡ್ಡದಾದ ಚಚ್ಚೌಕ ದೀಕ್ಷಾ ವೇದಿಕೆಯನ್ನು ರಚಿಸಬೇಕು. ಆ ಜಗಲಿಯ ಮೇಲೆ ಕಲಶವನ್ನು ಇರಿಸಬೇಕು. ಧಾನ್ಯದ ಮೇಲಿಟ್ಟ ಆ ಕಲಶಗಳಲ್ಲಿ ನೀರು ತುಂಬಿ ಹೂ ಮತ್ತು ಚಿಗರುಗಳಿಂದ ಅದನ್ನು ಅಲಂಕರಿಸಿ ಅದರ ಮೇಲೆ ಎಳ್ಳು ತುಂಬಿದ ಪಾತ್ರೆಗಳನ್ನು ಇಡಬೇಕು. ಅನಂತರ ಗುರುವು ಶಿಷ್ಯನು ತಂದ ಪೂಜಾ ದ್ರವ್ಯಗಳಿಂದ ನನ್ನನ್ನು ಪೂಜಿಸಬೇಕು. ದೇವರ ಪೂಜೆಯಾದ ಬಳಿಕ ನಾನು ಮೇಲೆ ಹೇಳಿದ ಎಲ್ಲಾ ದ್ರವ್ಯಗಳನ್ನು ಆ ದೀಕ್ಷಾ ವೇದಿಕೆಯ ನಟ್ಟನಡುವೆ ತರಿಸಿ ಇಟ್ಟುಕೊಳ್ಳಬೇಕು. ವೇದಿಕೆಯ ನಾಲ್ಕೂ ಕಡೆ ನಾಲ್ಕು ಕಲಶಗಳನ್ನು ಇಟ್ಟು ಅವುಗಳ ಸುತ್ತಲೂ ಬಿಳಿಯ ನೂಲನ್ನು ಸುತ್ತಬೇಕು. ನಾಲ್ಕೂ ಕಡೆಗೂ ನಾಲ್ಕು ಪೂರ್ಣಪಾತ್ರೆಗಳನ್ನು ಇರಿಸಬೇಕು. ಅನಂತರ ಗುರು ಶಿಷ್ಯನಿಗೆ ಮೇಲೆ ಹೇಳಿದ ಎಲ್ಲ ಮಾತುಗಳನ್ನು ಮತ್ತೊಮ್ಮೆ ಹೇಳಿ ಅವುಗಳನ್ನೆಲ್ಲ ಸರಿಯಾಗಿ ಪಾಲಿಸುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿಸಬೇಕು.

ಆನಂತರ ಆ ಜಗುಲಿಯ ನಡುವೆ ಎರಡು ಔದುಂಬರ ಮರದ ಎಲೆಗಳನ್ನೂ, ಕ್ಷೌರ ಮಾಡುವ ಕತ್ತಿಯನ್ನೂ, ನೀರು ತುಂಬಿದ ಪಾತ್ರೆಯನ್ನೂ ಇಟ್ಟು ಅವುಗಳಲ್ಲಿ ಶ್ರೀ ಹರಿಯನ್ನು ಆವಾಹನ ಮಾಡಿ '' ಓಂ ಸಪ್ತಸಾಗರಾಶ್ಚ ಸಪ್ತದ್ವೀಪಾನಿ... ಎಂಬ ಮಂತ್ರವನ್ನೂ ' ಓಂ ಭಗವನ್ ವಾಸುದೇವ... ' ಇತ್ಯಾದಿ ಮಂತ್ರಗಳನ್ನೂ ಹೇಳಿ ಕೊನೆಗೆ-

''ಭಗವನ್ನಾಗಚ್ಛ ದೀಕ್ಷಾಕಾಮೋ ವಿಪ್ರಸ್ತ್ವತ್ಪ್ರಸಾದಾತ್ತು ದೀಕ್ಷತಿ''

ಭಗವಂತನೇ ನೀನು ಇಲ್ಲಿ ದಯಮಾಡಿಸು. ದೀಕ್ಷೆಯನ್ನು ಬಯಸುತ್ತಿರುವ ಈ ಬ್ರಾಹ್ಮಣನು ನಿನ್ನ ಅನುಗ್ರಹದಿಂದ ಭಾಗವತ ದೀಕ್ಷೆಯನ್ನು ವಹಿಸುತ್ತಾನೆ ಎಂದು ಪ್ರಾರ್ಥಿಸಬೇಕು. ಈ ಪ್ರಾರ್ಥನೆಯನ್ನು ಕೇಳಿ ಪರಮಾತ್ಮನು ಬಂದು ಆ ಕತ್ತಿಯಲ್ಲಿ ಸನ್ನಿಹಿತನಾಗಿದ್ದಾನೆಂದು ಭಾವಿಸಿ ಗುರುವು '' ಓಂ ಸ್ವಾಗತಂ '' ಎಂಬ ಮಂತ್ರದಿಂದ ಮೊಳಕಾಲನ್ನು ನೆಲದ ಮೇಲೆ ಊರಿ, ತಲೆಯನ್ನು ನೆಲಕ್ಕೆ ಹಚ್ಚಿ ನಮಸ್ಕಾರ ಮಾಡಬೇಕು. ಅನಂತರ ಆ ಕತ್ತಿಯಲ್ಲಿ ಸನ್ನಿಹಿತನಾದ ಪರಮಾತ್ಮನನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಕ್ಷೌರದ ಕತ್ತಿಯನ್ನು ಕೈಯಲ್ಲಿ ಹಿಡಿದುಕೊಂಡು ಈ ಮಂತ್ರವನ್ನು ಹೇಳಬೇಕು.

''ಏವಂ ವರುಣಃ ಪಾತು ಶಿಷ್ಯ ತೇ ವಪತಃ ಶಿವಃ।
ಜಲೇನ ವಿಷ್ಣುಯುಕ್ತೇನ ದೀಕ್ಷಾ ಸಂಸಾರ ಮೋಕ್ಷಣಮ್'' ॥

''ಶಿಷ್ಯನೇ, ಶ್ರೀಹರಿಯ ಸನ್ನಿಧಾನಯುಕ್ತವಾದ ಈ ನೀರಿನಿಂದ ಕ್ಷೌರ ಮಾಡಿಸಿಕೊಂಡ ನಿನ್ನ ತಲೆಯನ್ನು ವರುಣನು ರಕ್ಷಿಸಲಿ '' ಎಂಬ ಈ ಮಂತ್ರವನ್ನು ಹೇಳಿ ಕ್ಷೌರಿಕನಿಗೆ ಕಲಶವನ್ನು, ಕತ್ತಿಯನ್ನೂ ಕೊಡಬೇಕು. ಅನಂತರ ಶಿಷ್ಯನು ಆ ಕ್ಷೌರಿಕನಿಂದ ಶಿಖಾದ ಹೊರತು ತಲೆಯ ಮೇಲೆ ಕೂದಲು ಉಳಿಯದಂತೆ ಸ್ವಚ್ಛವಾಗಿ ಕ್ಷೌರ ಮಾಡಿಸಿಕೊಂಡು ಬೇಗನೇ ಸ್ನಾನ ಮಾಡಬೇಕು. ಅನಂತರ ಗುರುವು ತಾನು ಸಿದ್ಧಿ ಪಡೆದ ಮತ್ತು ತನ್ನ ಶಿಷ್ಯನಿಗೆ ಯೋಗ್ಯವೆನಿಸಿದ ವಿಷ್ಣು ಮಂತ್ರವನ್ನು ಉಪದೇಶಕೊಡಬೇಕು. ಇದೇ ಭಾಗವತ ದೀಕ್ಷೆ. ಹೀಗೆ ದೀಕ್ಷೆ ಹೊಂದಿದ ಶಿಷ್ಯನು ನೆಲದ ಮೇಲೆ ಮೊಳಕಾಲು ಮಂಡೆ ಊರಿ ಜ್ಞಾನಿಗಳೂ ಸದಾಚಾರ ಸಂಪನ್ನರೂ ಆದ ಬ್ರಾಹ್ಮಣರನ್ನು

''ಓಂ ವೇದಾಮ್ಯಹಂ ಭಾಗವತಾಂಶ್ಚ ಸರ್ವಾನ್
ಸುದೀಕ್ಷಿತಾ ಯೇ ಗುರವಶ್ಚ ಸರ್ವೇ ॥
ವಿಷ್ಣು ಪ್ರಸಾದೇನ ಚ ಲಬ್ಧದೀಕ್ಷಾ
ಮಮ ಪ್ರಸೀದಂತು ನಮಾಮಿ ಸರ್ವಾನ್॥

ಎಂಬ ಮಂತ್ರದಿಂದ ವಂದಿಸಬೇಕು. ಅನಂತರ ಅಗ್ನಿ ಪ್ರತಿಷ್ಠೆಯನ್ನು ಮಾಡಿ ಜೇನು ತುಪ್ಪಕೂಡಿದ ತುಪ್ಪದಿಂದಲೂ ಭತ್ತರಳು ಕರಿ ಎಳ್ಳುಗಳಿಂದಲೂ ಏಳು ಸಲ ಹೋಮ ಮಾಡಬೇಕು. ಅನಂತರ ಇಪ್ಪತ್ತು ಸಲ ಎಳ್ಳು ಅನ್ನದಿಂದ ಹೋಮ ಮಾಡಿ ಮೊಣಕಾಲು ಊರಿ- '' ಅಶ್ವಿನೌ ದಿಶಃ ಸೋಮಸೂರ್ಯೌ ಸಾಕ್ಷಿ ಮಾತ್ರಂ.......'' ಎಂಬ ಮಂತ್ರದಿಂದ ಪ್ರಾರ್ಥನೆಯನ್ನು ಮಾಡಬೇಕು. ಹಾಗೂ ''ನಾನೆಂದಿಗೂ ಅಸತ್ಯವನ್ನು ಮಾತನಾಡುವದಿಲ್ಲ. ಯಾವಾಗಲೂ ಸತ್ಯವಾಕ್ಯವನ್ನೇ ನುಡಿಯುತ್ತೇನೆ.'' ಎಂದು ಪ್ರತಿಜ್ಞೆ ಮಾಡಿ ಗುರುವನ್ನು ಸಂತೋಷಪಡಿಸಬೇಕು. ಅನಂತರ ವಿಧಿ ಪೂರ್ವಕವಾಗಿ ದೇವರನ್ನು ಪೂಜಿಸಿ ಬಳಿಕ ಗುರುವಿಗೆ ಮೂರು ಪ್ರದಕ್ಷಿಣೆ ಹಾಕಿ ಅವರ ಪಾದಗಳನ್ನು ಗಟ್ಟಿಯಾಗಿ ಹಿಡಿದು ''ತಮ್ಮ ಅನುಗ್ರಹದಿಂದಲೇ ನನಗೆ ಈ ವಿಷ್ಣು ದೀಕ್ಷೆಯು ದೊರೆತಿದೆ. ನನ್ನಿಂದ ಏನಾದರೂ ಅಪಚಾರವಾಗಿದ್ದರೆ ಕ್ಷಮಿಸಿರಿ'' ಎಂದು ಅರ್ಥವುಳ್ಳ ''ಗುರುದೇವ ಪ್ರಸಾದೇನ ಲಬ್ಧಾ ದೀಕ್ಷಾ ಯದೃಚ್ಛಯಾ! ಯಚ್ಚೈವಾಪಕೃತಂ ಕಿಂಚಿದ್ಗುರು

ರ್ಮರ್ಷಯತಾಂ ಮಮ॥ ಎಂಬ ಮಂತ್ರದಿಂದ ಪ್ರಾರ್ಥಿಸಿಕೊಳ್ಳಬೇಕು. ಹೀಗೆ ಪ್ರಾರ್ಥನಾ ಮಂತ್ರದಿಂದ ಸಂತುಷ್ಟನಾದ ಗುರುವನ್ನು ವೇದಿಕೆಯ ನಟ್ಟನಡುವೆ ನಿಲ್ಲಿಸಬೇಕು. ಗುರುವು ಪೂರ್ವಕ್ಕೆ ಮುಖಮಾಡಿ ನಿಂತುಕೊಂಡು ಕಮಂಡಲವನ್ನು ಬಿಳಿಯ ಜನಿವಾರವನ್ನು ಕೈಯಲ್ಲಿ ಹಿಡಿದು-

ವಿಷ್ಣು ಪ್ರಸಾದೇನ ಗತೋಸಿ ಸಿದ್ಧಿಂ ।
ಪ್ರಾಪ್ತಾ ಚ ದೀಕ್ಷಾ ಸಕಮಂಡಲುಶ್ಚ ॥
ಗೃಹೀತ್ವಾ ತು ಕರಾಭ್ಯಾಂ ಯುಕ್ತೋಽಸಿ ।
ಕರ್ಮಣಾ ಕ್ರಿಯಯಾ ಚೈವ ॥

ಶ್ರೀಹರಿಯ ಪ್ರಸಾದದಿಂದ ಸಿದ್ಧಿಯನ್ನು ಪಡೆದಿರುವೆ. ದೀಕ್ಷೆಯನ್ನು ಹೊಂದಿರುವೆ. ಕಮಂಡಲುವನ್ನು ತೆಗೆದುಕೊಂಡಿರುವೆ. ಇನ್ನು ಮೇಲೆ ನೀನು ನಿನ್ನ ಎರಡೂ ಕೈಗಳಿಂದ ಎಲ್ಲ ಸದ್ವೈಷ್ಣವರಿಗೆ ವಿಹಿತವಾದ ಕರ್ಮಗಳನ್ನು ವಿಷ್ಣು ವೈಷ್ಣವರ ಸೇವೆಯನ್ನು ಮಾಡಿ ಜನರಿಗೆಲ್ಲ ಉಪಯುಕ್ತನಾದ ಮನುಷ್ಯನಾಗು'' ಎಂದು ಹರಸಬೇಕು. ಆ ಮೇಲೆ ಶಿಷ್ಯನು ಶ್ರೀ ಹರಿಗುರುಗಳ ಚರಣಗಳ ಮೇಲೆ ತನ್ನ ಶಿರವನ್ನಿಟ್ಟು ನಮಸ್ಕಾರ ಮಾಡಿ ಆ ಗುರುವಿನಿಂದ ಮಂತ್ರಪೂತಜಲಪ್ರೋಕ್ಷಣ ಪೂರ್ವಕವಾಗಿ ವಸ್ತ್ರ ಕಮಂಡಲು ಯಜ್ಞೋಪವೀತಾದಿಗಳನ್ನು ಪರಿಗ್ರಹಿಸಬೇಕು. ನಂತರ ಶಿಷ್ಯನು ಕೈಯಲ್ಲಿ ಗಂಧ, ಹೂ, ಎಲೆಚಿಗುರುಗಳನ್ನು ಹಿಡಿದುಕೊಂಡು ''ಗೃಹ್ಣೀಷ್ವ ಗಂಧ ಪುಷ್ಪಾಣಿ ಸರ್ವ ಗಂಧ ಸುಶೋಚಿತಂ'' ಎಂಬ ಮಂತ್ರದಿಂದ ಹರಿಗೂ, ನಂತರ ಹೂ, ಗಂಧ, ಎಲೆ ಚಿಗುರುಗಳನ್ನು ಗುರುವಿಗೂ ಅರ್ಪಿಸಬೇಕು. ''ಗೃಹಾಣ ಮಧುಪರ್ಕಂಚ ಪ್ರಾರ್ಥಕಾಯ ವಿಶೋಧಕಂ'' ಎಂಬ ಮಂತ್ರದಿಂದ ಮಧುಪರ್ಕವನ್ನು ನೀಡಬೇಕು. ಕೊನೆಗೆ ಗುರುವಿನ ಚರಣಗಳನ್ನು ಹಿಡಿದು ನಮಸ್ಕರಿಸಿ ಗುರುವನ್ನು ಸಂತೋಷಪಡಿಸಿ ಅವರಿಂದ ಜ್ಞಾನೋಪದೇಶವನ್ನು ಪಡೆಯಬೇಕು. ಗುರುಗಳಿಂದ ದಿವ್ಯ ಜ್ಞಾನವನ್ನು ಪಡೆದ ಶಿಷ್ಯನು ಭಾಗವತರು ಭಗವದ್ಭಕ್ತರು ಕೂಡಿದ ಸಭೆಯಲ್ಲಿ ''ನಾನು ಇವರ ಶಿಷ್ಯ. ಇವರು ನನ್ನ ಗುರು. ನಾನು ಸೇವಕ, ಅವರು ಸ್ವಾಮಿ, ನನಗೆ ಈ ಗುರು ದೇವಸಮ'' ಎಂಬ ಅರ್ಥವುಳ್ಳ

''ಶೃಣ್ವಂತು ಮೇ ಭಾಗವತಾಸ್ತು ಸರ್ವೇ
ಗುರುಶ್ಚ ಮೇ ಸರ್ವಕಾಮ ಕ್ಷಯಂ ಚಕಾರ ॥
ಅಹಂ ಶಿಷ್ಯೋ ದಾಸಭೂತಸ್ತಥೈವ
ದೇವಸಮೊ ಗುರುಶ್ಚ ಮೇ ತಥೋಪಪನ್ನಂ ॥

ಎಂಬ ಮಂತ್ರದಿಂದ ತನ್ನ ಶಿಷ್ಯತ್ವವನ್ನು ಒಪ್ಪಿಗೊಂಡು ಅವನ ಗುರುತ್ವವನ್ನು ಘೋಷಿಸಬೇಕು. ಇದು ಬ್ರಾಹ್ಮಣರು ಭಾಗವತದೀಕ್ಷಾ ಅರ್ಥಾತ್ ವೈಷ್ಣವ ದೀಕ್ಷೆಯನ್ನು ಪಡೆಯುವ ಕ್ರಮ. ಇದರಂತೆ ಉಳಿದ ಮೂರೂ ವರ್ಣದವರಿಗೂ ಭಾಗವತ ದೀಕ್ಷೆಯನ್ನು ಪಡೆಯುವ ಬೇರೆ ಬೇರೆ ವಿಧಾನಗಳಿವೆ. ಅವುಗಳನ್ನು ಮುಂದೆ ಹೇಳುತ್ತೇನೆ.

*ವರಾಹ ಪುರಾಣದಲ್ಲಿ ನೂರ ಆರನೇ ಅಧ್ಯಾಯ ಮುಗಿದುದು.*

—o—

## ಕ್ಷತ್ರಿಯ ವೈಶ್ಯ ಶೂದ್ರರಿಗೆ ವಿಷ್ಣು ದೀಕ್ಷೆ | ಅಧ್ಯಾಯ - ೧೦೭

ವರಾಹ :- ವಸುಂಧರೆ, ಕ್ಷತ್ರಿಯರ ದೀಕ್ಷಾಕ್ರಮವನ್ನು ಹೇಳುತ್ತೇನೆ ಕೇಳು- ಕ್ಷತ್ರಿಯನಾದವನು ಭಾಗವತ ದೀಕ್ಷೆಯನ್ನು ಪಡೆಯುವ ಮೊದಲು ಶಸ್ತ್ರಸನ್ಯಾಸವನ್ನು ಮಾಡಬೇಕು. ತಾನು ಹಿಂದೆ ಕಲಿತ ಯುದ್ಧ ವಿದ್ಯೆಯನ್ನೆಲ್ಲ ಸಂಪೂರ್ಣ ಮರೆತು ಯಾರ ಜೊತೆಗೂ ಯುದ್ಧ ಮಾಡುವದಿಲ್ಲ ಎಂದು ಸಂಕಲ್ಪ ಮಾಡಿ ವಿಷ್ಣು ದೀಕ್ಷೆಯನ್ನು ಪಡೆಯಬೇಕು. ಹೀಗೆ ಅಹಿಂಸೆಯ ವ್ರತವನ್ನು ತೊಟ್ಟು ವಿಷ್ಣು ಭಕ್ತಿಯ ನಿಯಮವನ್ನು ಪಾಲನ ಮಾಡುವ ಸಿದ್ಧನಾದ ಕ್ಷತ್ರಿಯನಿಗೆ ವಿಷ್ಣು ದೀಕ್ಷೆಯನ್ನು ಬ್ರಾಹ್ಮಣರಿಗೆ ಹೇಳುವ ಮಂತ್ರದಿಂದಲೇ ಮಾಡಿಸಬೇಕು. ಕೃಷ್ಣಾಜಿನ ಮತ್ತು ಪಾಲಾಶದಂಡ ಇವೆರಡರ ಬದಲಾಗಿ ಕ್ಷತ್ರಿಯನಿಗೆ ಕರಿಯ ಹೋತಿನ ಚರ್ಮ ಹಾಗೂ ಅಶ್ವತ್ಥ ದಂಡಗಳನ್ನು ಉಪಯೋಗಿಸಬೇಕು. ಉಳಿದೆಲ್ಲ ಬ್ರಾಹ್ಮಣ ದೀಕ್ಷೆಗೆ ಹೇಳಿದ ದ್ರವ್ಯವನ್ನು ತಂದು ಹನ್ನೆರಡು ಮೊಳದ ಅಳತೆಯ ಚಚ್ಚೌಕ ವೇದಿಕೆಯನ್ನು ರಚಿಸಿ ಸಾರಿಸಿ ಹಿಂದೆ ಬ್ರಾಹ್ಮಣ ದೀಕ್ಷೆಯಲ್ಲಿ ಹೇಳಿದ ವಿಧಿ ವಿಧಾನಗಳನ್ನು ಮಾಡಬೇಕು. ಈ ದೀಕ್ಷೆಯನ್ನು ಪಡೆಯುವ ಕ್ಷತ್ರಿಯನು ದೇವರ ಪಾದಗಳನ್ನು ಮುಟ್ಟಿ ''ವಿಷ್ಣುವೇ, ನಾನು ಎಲ್ಲ ಶಸ್ತ್ರಾಸ್ತ್ರಗಳನ್ನು ತ್ಯಜಿಸಿದ್ದೇನೆ. ಕ್ಷಾತ್ರ ಕರ್ಮಗಳನ್ನೆಲ್ಲ ಬಿಟ್ಟಿದ್ದೇನೆ. ಸರ್ವ ಸಂಗ ಪರಿತ್ಯಾಗ ಮಾಡಿ ನಿನ್ನನ್ನೇ ಮೊರೆ ಹೊಕ್ಕಿದ್ದೇನೆ. ನೀನೇ ನನ್ನನ್ನು ಈ ಸಂಸಾರದಿಂದ ಪಾರು ಮಾಡು'' ಎಂದು ಬೇಡಿಕೊಳ್ಳಬೇಕು. ಈ ಅರ್ಥ ಉಳ್ಳ-

ತ್ಯಕ್ತಾನಿ ವಿಷ್ಣೋ ಶಸ್ತ್ರಾಣಿ। ತ್ಯಕ್ತಂ ಸರ್ವಂ ಕ್ಷತ್ರಿಯ ಕರ್ಮ।
ಸರ್ವಂ ತ್ಯಕ್ತ್ವಾ ದೇವಂ ವಿಷ್ಣುಂ ಪ್ರಪನ್ನೋಥ ಸಂಸಾರಾದ್ ವೈ ಜನ್ಮ ನಾಂ ತಾರಯಸ್ವ ॥

ಮಂತ್ರವನ್ನು ಹೇಳಿ ದೇವರ ಪಕ್ಕದಲ್ಲಿ ನಿಂತು ''ನಾನಿನ್ನು ಮೇಲೆ ಶಸ್ತ್ರಾಸ್ತ್ರಗಳನ್ನು ಮುಟ್ಟುವುದಿಲ್ಲ. ಪರನಿಂದೆಯನ್ನು ಮಾಡುವುದಿಲ್ಲ. ವರಾಹ ರೂಪಿಯಾದ ನಿನ್ನ ಆಜ್ಞೆಯಂತೆ ಎಲ್ಲ ಧರ್ಮಕರ್ಮಗಳನ್ನು ಆಚರಿಸುತ್ತೇನೆ.'' ಎಂದು ಬಿನ್ನವಿಸಿಗೊಳ್ಳಬೇಕು. ಅನಂತರ ಹಿಂದೆ ಹೇಳಿದಂತೆ ದೇವರ ಪೂಜೆ ಮಾಡಿ ಭಗವದ್ಭಕ್ತರಿಗೆ ಭೋಜನ ಮಾಡಿಸಬೇಕು. ಇದರಂತೆ ವೈಶ್ಯನು ಹತ್ತು ಮೊಳದ ಚೌಕಕಟ್ಟೆಯನ್ನು ವಿರಚಿಸಿ ಹಿಂದೆ ಹೇಳಿದ ಪದಾರ್ಥಗಳನ್ನೆಲ್ಲ ತರಿಸಿ ಪೂಜಾದಿಗಳನ್ನು ಮಾಡಿ ಭಾಗವತ ದೀಕ್ಷೆ ಪಡೆಯಬೇಕು. ಗಂಡು ಆಡಿನ ಚರ್ಮವನ್ನು ಹೊದ್ದು ಅತ್ತಿಮರದ ಕೋಲನ್ನು ಕೈಯಲ್ಲಿ ಹಿಡಿದುಕೊಂಡು ದೇವರನ್ನೂ ಭಗವದ್ಭಕ್ತರನ್ನೂ ಮೂರುಬಾರಿ ಪ್ರದಕ್ಷಿಣೆ ಮಾಡಿ, ನೆಲದ ಮೇಲೆ ಮೊಣಕಾಲನ್ನು ಊರಿ, ಈ ಮಂತ್ರವನ್ನು ಹೇಳಬೇಕು-

''ಅಹಂ ಹಿ ವೈಶ್ಯೋ ಭವಂತಮುಪಾಗತಃ ॥
ಪ್ರಮುಚ್ಯ ಕರ್ಮಾಣಿ ಚ ವೈಶ್ಯಯೋಗಂ ॥
ದೀಕ್ಷಾ ಚ ಲಬ್ಧಾ ಭಗವತ್ಪ್ರಸಾದಾತ್
ಪ್ರಸೀದತಾಂ ಮೇ ಭವಬಂಧ ಮೋಕ್ಷಣಂ ॥

''ವೈಶ್ಯನಾದ ನಾನು ವೈಶ್ಯ ಕರ್ಮಗಳನ್ನೂ ಲಾಭದಾಯಕವಾದ ಉದ್ಯೋಗ ವ್ಯವಸಾಯಗಳನ್ನೂ ತೊರೆದು ನಿನ್ನನ್ನೇ ಶರಣು ಹೊಂದಿದ್ದೇನೆ. ನಿನ್ನ ಅನುಗ್ರಹದಿಂದ ನಾನು ಈಗ ವೈಷ್ಣವ ದೀಕ್ಷೆಯನ್ನು ಪಡೆದಿದ್ದೇನೆ. ನನ್ನನ್ನು ಈ ಸಂಸಾರ ಬಂಧನದಿಂದ ಪಾರು ಮಾಡುವದು ನಿನ್ನ ಪ್ರಸಾದವನ್ನೆ ಅವಲಂಬಿಸಿದೆ ಆದುದರಿಂದ ಭಗವಂತನಾದ ನೀನು ನನ್ನ ಮೇಲೆ ಪ್ರಸನ್ನನಾಗು.'' ಎಂದು ಹೇಳಿ ಭಗವಂತನನ್ನು ವಂದಿಸಿ ಅನಂತರ ಗುರುವಿನ ಪಾದ ಹಿಡಿದು ''ನಿಮ್ಮ ದಯೆಯಿಂದ ವಿಷ್ಣು ದೀಕ್ಷೆ ಪಡೆದು ನಾನು ಧನ್ಯನಾದೆ. ಇನ್ನು ನಾನು ಯಾವುದೇ ವ್ಯಾಪಾರ ಉದ್ಯೋಗ ಮುಂತಾದವುಗಳನ್ನು ಮಾಡುವುದಿಲ್ಲ'' ಎಂದು ಹೇಳಿ ಅವರ ಅನುಗ್ರಹವನ್ನು ಪಡೆಯಬೇಕು. ಆ ಮೇಲೆ ಎಲ್ಲ ಭಗವದ್ಭಕ್ತರಿಗೂ ನಮಸ್ಕಾರ ಮಾಡಿ ಎಲ್ಲರಿಗೂ ದಿವ್ಯ ಭೋಜನವನ್ನು ಮಾಡಿಸಬೇಕು. ಹೀಗೆ ವಿಷ್ಣು ದೀಕ್ಷೆ ಪಡೆದ ವೈಶ್ಯರೂ ಸಂಸಾರ ಸಾಗರದಿಂದ ಪಾರಾಗುವರು. ಶೂದ್ರನು ಭಾಗವತ ದೀಕ್ಷೆಯನ್ನು ಪಡೆಯುವದಾದರೆ ಎಂಟು ಮೊಳದ ಚೌಕವೇದಿಕೆಯನ್ನು ರಚಿಸಿ ದೀಕ್ಷಾ ಸಂಸ್ಕಾರ ಸಾಮಗ್ರಿಗಳನ್ನೆಲ್ಲ ತರಿಸಿ ಹಿಂದಿನಂತೆ ದೀಕ್ಷಾವಿಧಿಯನ್ನು ಆಚರಿಸಬೇಕು. ನೀಲಿಯ ಬಣ್ಣದ ಹೋತಿನ ಚರ್ಮವನ್ನು ಹೊದ್ದು ಬಿದಿರಿನ ಕೋಲು ಹಿಡಿದು ಭಗವಂತನನ್ನು ಮೊರೆಹೊಕ್ಕು-

**''ಶುದ್ರೋಽಹಂ ಶೂದ್ರ ಕರ್ಮಾಣಿ ಮುಕ್ತ್ವಾಽ ಭಕ್ಷ್ಯಂಚ ಸರ್ವಶಃ ।**
**ಭಕ್ಷ್ಯಾಭಕ್ಷ್ಯಂ ತತಸ್ತ್ಯಕ್ತ್ವಾ ತ್ಯಕ್ತ್ವಾವೈ ಶೂದ್ರಕರ್ಮ ಚ ॥ ''**

''ಶೂದ್ರನಾದ ನಾನು ಶೂದ್ರ ಕರ್ಮಗಳನ್ನು ಬಿಟ್ಟು ನಿಷಿದ್ಧ ವಸ್ತುಗಳನ್ನು ಎಂದಿಗೂ ತಿನ್ನದೇ ಹರಿಭಕ್ತನಾಗಿ ಬಂದಿದ್ದೇನೆ'' ಎಂದು ಪ್ರಾರ್ಥಿಸಬೇಕು. ಅನಂತರ ಗುರುವಿನ ಎರಡೂ ಕಾಲುಗಳನ್ನು ಹಿಡಿದು ''ವಿಷ್ಣುವಿನ ಪ್ರಸಾದವಾಗಬೇಕಾದರೆ ಮೊದಲು ನಿಮ್ಮ ಪ್ರಸಾದವು ಅತ್ಯಾವಶ್ಯಕ. ಆದುದರಿಂದ ನೀವು ಪ್ರಸನ್ನರಾಗಿ ನನಗೆ ವಿಷ್ಣುವಿನ ಮಾರ್ಗವನ್ನು ತೋರಿಸಿರಿ'' ಎಂದು ಬಿನ್ನವಿಸಬೇಕು.

ಅನಂತರ ಗುರುವಿಗೆ ನಾಲ್ಕು ಸಲ ಪ್ರದಕ್ಷಿಣೆ ಹಾಕಿ ಮತ್ತೆ ನಮಸ್ಕರಿಸಿ ಗಂಧ ಪುಷ್ಪಗಳಿಂದ ಅವನನ್ನು ಪೂಜಿಸಿ ವಿಧಿಪೂರ್ವಕವಾಗಿ ಗುರು ಹಾಗೂ ಬ್ರಾಹ್ಮಣರ ಭೋಜನವನ್ನು ಮಾಡಿಸಬೇಕು. ಹೀಗೆ ನಾಲ್ಕು ವರ್ಣದವರಿಗೂ ದೀಕ್ಷೆ ಕೊಟ್ಟ ಗುರುವು ಅವರವರಿಗೆ ಬೇರೆ ಬೇರೆ ಬಣ್ಣದ ಛತ್ರಿಗಳನ್ನು ಕೊಡಬೇಕು. ಬ್ರಾಹ್ಮಣನಿಗೆ ಬಿಳಿಯ ಕೊಡೆ, ಕ್ಷತ್ರಿಯನಿಗೆ ಕೆಂಪು ಕೊಡೆ, ವೈಶ್ಯನಿಗೆ ಹಳದಿ ಕೊಡೆ, ಶೂದ್ರನಿಗೆ ನೀಲಿಯ ಕೊಡೆಯನ್ನೂ ಕೊಡಬೇಕು. ಈ ದೀಕ್ಷೆಯನ್ನು ಪಡೆದ ನಾಲ್ಕು ವರ್ಣದವರೂ ಲೌಕಿಕ ವ್ಯಾಪಾರವನ್ನು ಬಿಟ್ಟು ಕೇವಲ ದೇವಭಕ್ತರಾಗಿ ಭಗವತ್ಸೇವೆಯನ್ನು ಮಾಡುತ್ತಲಿದ್ದರೆ ಅವರು ಸಂಸಾರ ಬಂಧನದಿಂದ ಪಾರಾಗುವರು.

ಇದರಂತೆ ಗುರುವು ದೀಕ್ಷೆ ತೊಟ್ಟ ತನ್ನ ಶಿಷ್ಯರಿಗೆಲ್ಲ ವಿಧಿಪೂರ್ವಕವಾಗಿ ನನ್ನ ಜಪವನ್ನು ಮಾಡಲಿಕ್ಕಾಗಿ ಜಪಮಾಲೆಗಳನ್ನು ಕೊಡಬೇಕು. ಆ ಜಪಮಾಲೆಯನ್ನು ವಿಧಿ ಇಲ್ಲದೆ, ಮಂತ್ರ ಇಲ್ಲದೆ, ಕೊಡಬಾರದು. ಮತ್ತು ಅದನ್ನು ಕಂಡ ಕಂಡ ಜನರನ್ನು ಮುಟ್ಟಿ ಸ್ಪರ್ಶಾಸ್ಪರ್ಶ ವಿವೇಕವಿಲ್ಲದೆ ಧರಿಸಿದರೆ ಅದು ಆಸುರೀ ದೀಕ್ಷೆಯೆನಿಸುವದು.

ಆದುದರಿಂದ ಮಂತ್ರ ಪೂರ್ವಕವಾಗಿ ವಿಧಿಬದ್ಧವಾಗಿಯೇ ಆ ದೀಕ್ಷಾ ಮಾಲೆಯನ್ನು ಧರಿಸಬೇಕು. ಕಾರ್ತಿಕ, ಮಾರ್ಗಶಿರ, ಅಥವಾ ವೈಶಾಖ ಮಾಸದ ಶುಕ್ಲಪಕ್ಷದ ದ್ವಾದಶಿಯ ದಿನ ಮಾಂಸಾದಿ ನಿಷಿದ್ಧ ಆಹಾರಗಳನ್ನು ದಿನ ವರ್ಜಿಸಿ, ಧರ್ಮದಲ್ಲಿ ಶ್ರದ್ಧೆಯುಳ್ಳವನಾಗಿ, ಗುರುವಿನಿಂದ ಈ ಜಪಮಾಲೆಯನ್ನು ದೇವರೆದುರು ಅಗ್ನಿ ಪ್ರತಿಷ್ಠೆ ಮಾಡಿ, ಅಗ್ನಿ ಸಾಕ್ಷಿಯಾಗಿಯೇ ಸ್ವೀಕರಿಸಬೇಕು. ಗುರು-ಶಿಷ್ಯರಿಬ್ಬರೂ ''ಓಂ ನಮೋ ನಾರಾಯಣಾಯ'' ಎಂಬ ಮಂತ್ರವನ್ನು ಉಚ್ಚರಿಸಬೇಕು. ನಂತರ ಗುರುವು-

ಯಾ ಧಾರಿತಾ ಪೂರ್ವ ಪಿತಾಮಹೇನ।
ಬ್ರಹ್ಮಣ್ಯದೇವೇನ ಭವೋದ್ಭವೇನ ॥
ನಾರಾಯಣಾದ್ದಕ್ಷಿಣ ಗಾತ್ರಜಾತಾಂ ।
ಸ್ವಶಿಷ್ಯ ಗೃಹ್ಣೀಷ್ವ ಸ ವೈ ತ್ವಮೇವ॥

ಎಂಬ ಮಂತ್ರದಿಂದ ಆ ಜಪಮಾಲೆಯನ್ನು ಶಿಷ್ಯನಿಗೆ ಕೊಡಬೇಕು.

ಈ ವಿಧಾನದಿಂದ ಮಹಾತ್ಮನಾದ ಗುರುವಿನಿಂದ ಜಪಮಾಲೆಯನ್ನು ಪಡೆದು, ಹರಿಪ್ರೀತಿಕಾರಕವಾದ ಕರ್ಮಗಳಲ್ಲಿ ದೀಕ್ಷೆ ತೊಟ್ಟು, ನಿರಂತರ ವಿಷ್ಣು ಧ್ಯಾನವನ್ನು ಮಾಡಿದರೆ ಅವನು ವೈಕುಂಠಲೋಕವನ್ನು ಪಡೆಯುತ್ತಾನೆ. ಈ ಜಪ ಮಾಲೆಯಲ್ಲಿಯ ಮಣಿಗಳು ೧೦೮ ಇದ್ದರೆ ಉತ್ತಮ. ೫೪ ಇದ್ದರೆ ಮಧ್ಯಮ. ೨೭ ಇದ್ದರೆ ಕನಿಷ್ಠ. ಈ ಜಪ ಮಾಲೆಗೆ ರುದ್ರಾಕ್ಷಿಮಣಿಗಳು ಇದ್ದರೆ ಉತ್ತಮ. ಪುತ್ರಜೀವ ಮಣಿಗಳು ಮಧ್ಯಮ. ಕಮಲಾಕ್ಷಮಣಿಗಳು ಕನಿಷ್ಠ. ಈ ಜಪ ಮಾಲೆಯನ್ನು ಮೈಲಿಗೆಯವರು ಮುಟ್ಟಬಾರದು. ಎಂಜಲು ಮುಸುರೆ ಅದಕ್ಕೆ ತಾಕಬಾರದು. ಹೆಂಗಸರ ಕೈಯಲ್ಲಿ ಕೊಡಬಾರದು. ನೆಲದ ಮೇಲೆ ಇಡಬಾರದು ಎಡಗೈಯಿಂದ ಮುಟ್ಟಬಾರದು. ಧರಿಸದೇ ಇರುವಾಗ ನೆಲಕ್ಕೆ ತಾಕದಂತೆ ಮೊಳೆ ಅಥವಾ ಗೂಟಕ್ಕೆ ತೂಗು ಹಾಕಬೇಕು. ಜಪ ಮಾಡುವಾಗ ಜನರಿಗೆ ಕಾಣದಂತೆ ಏಕಾಂತದಲ್ಲಿ, ಜನರಿದ್ದಾಗ ಮುಸುಕು ಹಾಕಿ ಅದನ್ನು ಜಪಿಸಬೇಕು.''

ಪರಮಾತ್ಮನ ಈ ಮಾತನ್ನು ಕೇಳಿದ ಬಳಿಕ ಭೂದೇವಿಯು '' ಸ್ನಾನಾನಂತರ ದೇವರನ್ನು ಅಲಂಕಾರ ಮಾಡುವ ಬಗೆ ಯಾವುದು'' ಎಂದು ಕೇಳಿದ್ದಕ್ಕೆ ವರಾಹ ಸ್ವಾಮಿಯು ಇಂತು ಉತ್ತರಿಸಿದನು.-

''ದೇವತಾ ಮೂರ್ತಿಗೆ ಅರ್ಘ್ಯಪಾದ್ಯ ಮುಂತಾದ ಜಲೋಪಚಾರವೆಲ್ಲ ಮುಗಿದ ಬಳಿಕ ಲಕ್ಷ್ಮೀಸಹಿತನಾದ ಆ ನಾರಾಯಣನಿಗೆ ಬಾಚಣಿಕೆ ಕಾಡಿಗೆ ಹಾಗೂ ಕನ್ನಡಿಯನ್ನೂ ಮಂತ್ರಪೂರ್ವಕವಾಗಿ ಸಮರ್ಪಿಸಿ ಪೂಜೆಯನ್ನು ಮಾಡಬೇಕು. ಹೀಗೆ ದೇವರಿಗೆ ಅಲಂಕಾರ ಪೂಜೆಯನ್ನು ಮಾಡುವದರಿಂದ ಮನುಷ್ಯರು ಸಂಸಾರ ಸಾಗರದಿಂದ ಪಾರಾಗುವರು.

*ವರಾಹ ಪುರಾಣದಲ್ಲಿ ನೂರವಿಳನೇ ಅಧ್ಯಾಯ ಮುಗಿದುದು.*

—o—

## ದೇವತಾ ಕಾರ್ಯಕ್ಕೆ ತಾಮ್ರ ಪಾತ್ರೆಯೇ ಏಕೆ ? | ಅಧ್ಯಾಯ - ೧೦೮

ವರಾಹ :- ಭೂದೇವಿ, ನನ್ನ ಪೂಜೆಯಲ್ಲಿ ತೊಡಗಿದವನು ನನಗೆ ಸ್ನಾನ ಮಾಡಿಸಿದ ಬಳಿಕ ಒಂಬತ್ತು ಎಳೆಗಳಿಂದ ಕೂಡಿದ ಬೆಳ್ಳಗಿನ ಯಜ್ಞೋಪವೀತವನ್ನು (ಜನಿವಾರ) ನನಗೆ ಅರ್ಪಿಸಬೇಕು. ಗಂಧದಿಂದ ನನ್ನ ಹಣೆಗೆ ತಿಲಕವನ್ನು ಹಚ್ಚಬೇಕು. ಅನಂತರ ಹೂಗಳನ್ನು ಅರ್ಪಿಸಿ; ಧೂಪವನ್ನೂ ದೀಪವನ್ನು ಪೂಜಾವಿಧಿಯಲ್ಲಿ ಹೇಳಿದ ಮಂತ್ರಗಳಿಂದ ಸಮರ್ಪಿಸಿ ಬಳಿಕ ನೈವೇದ್ಯವನ್ನು ದೇವರಿಗೆ ಸಮರ್ಪಿಸಬೇಕು. ನೈವೇದ್ಯವನ್ನು ತಾಮ್ರದ ಪಾತ್ರೆಯಲ್ಲಿಯೇ ಇಡಬೇಕು. ಬೆಳ್ಳಿ, ಬಂಗಾರ, ಕಂಚಿನ ಪಾತ್ರೆಯಲ್ಲಿ ಅರ್ಪಿಸಿದ ನೈವೇದ್ಯಕ್ಕಿಂತ ತಾಮ್ರದ ಪಾತ್ರೆಯಲ್ಲಿ ಇಟ್ಟ ನೈವೇದ್ಯವೇ ನನಗೆ ರುಚಿಸುತ್ತದೆ.''

**ಭೂದೇವಿ** :- ದೇವಾ, ಬೆಳ್ಳಿ ಭಂಗಾರಕ್ಕಿಂತ ತಾಮ್ರವೇ ನಿನಗೆ ಇಷ್ಟು ಇಷ್ಟತಮವಾದ ಧಾತುವಾಗಲು ಏನು ಕಾರಣ ?

**ವರಾಹಸ್ವಾಮಿ** :- ತಾಮ್ರವು ನನಗೆ ಅತ್ಯಂತ ಪ್ರಿಯವಾಗಲು ಒಂದು ಕಾರಣವಿದೆ. ಹೇಳುತ್ತೇನೆ ಕೇಳು- ''ತಾವರೆಗಣ್ಣಿನ ಮೇದಿನೀ ದೇವಿಯೇ, ಪೂರ್ವಕಾಲದಲ್ಲಿ ಗುಡಾಕೇಶನೆಂಬ ದೈತ್ಯನು ತಾಮ್ರರೂಪವನ್ನು ಪಡೆದು ನನ್ನ ಆರಾಧನೆಯಲ್ಲಿಯೇ ಆಸಕ್ತನಾಗಿದ್ದನು. ಆ ದೈತ್ಯನು ದೃಢ ಸಂಕಲ್ಪದಿಂದ ಹದಿನಾಲ್ಕು ಸಾವಿರ ವರ್ಷಗಳವರೆಗೆ ನನ್ನನ್ನು ಕುರಿತು ತಪಸ್ಸನ್ನು ಮಾಡಿದನು. ಅವನ ಈ ಉಗ್ರವಾದ ಜಪ-ತಪ-ಆರಾಧನೆಗಳಿಂದ ಪ್ರಸನ್ನನಾದ ನಾನು ಅವನಿದ್ದಲ್ಲಿಗೇ ಹೋದೆನು. ಅವನ ಆಶ್ರಮವು ತಾಮ್ರದ ಉಗಮಸ್ಥಾನವಾಗಿದ್ದಿತು. ಅವನ ಆ ಪರ್ಣ ಕುಟೀರದ ಸುತ್ತ ಮುತ್ತಲಿನ ಪ್ರದೇಶವೆಲ್ಲವೂ ತಾಮ್ರಮಯ ವಾದುದರಿಂದ ಹೊಂಬೆಳಕಿನ ಹೊಳಪಿನಿಂದ ಅತ್ಯಂತ ರಮಣೀಯವಾಗಿ ಶೋಭಿಸುತ್ತಿತ್ತು. ನಾನು ಬಂದ ಸದ್ದಾದಕೂಡಲೇ ಆ ತಪೋನಿರತನಾದ ಗುಡಾಕೇಶನು ಮೊಳಕಾಲು ಮೊಂಡೆಯೂರಿ, ತಲೆಯನ್ನು ನೆಲಕ್ಕೆ ಹಚ್ಚಿ, ನಮಸ್ಕಾರ ಮಾಡಿ, ಕೈಮುಗಿದು ನನ್ನ ಪ್ರಾರ್ಥನೆಯನ್ನು ಮಾಡಿದನು. ''ಬಯಸಿದ ವರವನ್ನು ಬೇಡು ಎಂದು ನಾನು ಅವನಿಗೆ ಹೇಳಿದೆ. ಆಗ ಆ ದೈತ್ಯ ತಪಸ್ವಿಯು ಕೈಮುಗಿದು ನನಗೆ ನಮಿಸಿ ವರವನ್ನು ಕೇಳಿದನು.-

''ದೇವಾ, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ 'ನನಗೆ ನಿನ್ನಲ್ಲಿ ಸಾವಿರ ಜನ್ಮಗಳಲ್ಲಿ ಸ್ಥಿರಭಕ್ತಿಯು ಧೃಡವಾಗಿರಲಿ' ಎಂಬ ಒಂದು ವರವನ್ನು ಕೊಡು. ಎರಡನೇ ವರದಿಂದ ನನಗೆ ನಿನ್ನ ಸುದರ್ಶನ ಚಕ್ರದಿಂದಲೇ ಮರಣವಾಗಬೇಕು. ನಿನ್ನ ಚಕ್ರದಿಂದ ಕಡಿದೊಗೆದ ಈ ನನ್ನ ದೇಹದ ಮಾಂಸ ನೆಣಗಳೆಲ್ಲವೂ ಪರಿಶುದ್ಧವಾದ ತಾಮ್ರ ಎಂಬ ಲೋಹವಾಗಲಿ. ಶುಭ ಧರ್ಮಗಳನ್ನು ಆಚರಿಸುವವರೆಲ್ಲರೂ ಆ ತಾಮ್ರಧಾತು ವಿನಿಂದಲೇ ಪಾತ್ರೆಗಳನ್ನು ಮಾಡಿಸಿ ಅದರಲ್ಲಿಯೇ ನಿನಗೆ ನೈವೇದ್ಯಗಳನ್ನು ನೀಡಲಿ. ಅಂಥ ತಾಮ್ರ ಪಾತ್ರೆಗಳಲ್ಲಿ ಇಟ್ಟ ನೈವೇದ್ಯ ಪದಾರ್ಥಗಳೇ ನಿನಗೆ ಪ್ರೀತಿಕರವಾಗಲಿ. ''

ಆ ದೈತ್ಯ ಭಕ್ತನ ಬಿನ್ನಹಕ್ಕೆ 'ಅಸ್ತು' ಎಂದು ಹೇಳಿ ಭಗವಂತನು ತಾಮ್ರ ಧಾತುವಿನಲ್ಲಿ ವಿಶೇಷ ರೂಪದಿಂದ ವಾಸವಾಗಿದ್ದಾನೆ. ಆದುದರಿಂದ ತಾಮ್ರದ

ಭಾಂಡಿಯಲ್ಲಿ ನನಗೆ ನೈವೇದ್ಯವನ್ನು ಬಡಿಸಿ ಸಮರ್ಪಣವನ್ನು ಮಾಡಿದರೆ ನನಗೆ ಬಹಳ ಪ್ರೀತಿಯಾಗುತ್ತದೆ.'' ಹೀಗೆ ನನ್ನನ್ನು ಕುರಿತು ತಾಮ್ರಾವಾಸದ ವರ ಕೇಳಿದ ಆ ದೈತ್ಯನಿಗೆ '' ವೈಶಾಖ ಶುಕ್ಲ ದ್ವಾದಶಿ ಮಧ್ಯಾಹ್ನ ಸೂರ್ಯನು ನಡುನೆತ್ತಿಗೆ ಏರಿದಾಗ ನನ್ನ ಸುದರ್ಶನ ಚಕ್ರವು ಬಂದು ನಿನ್ನನ್ನು ಸಂಹರಿಸುವದು. ಅನಂತರ ನೀನು ನನ್ನ ಲೋಕವನ್ನು ಸೇರುವೆ.'' ಎಂದು ಹೇಳಿ ಹರಿಯು ತಾನು ಅಲ್ಲಿಯೇ ಅದೃಶನಾದನು.

ವಿಷ್ಣುವಿನ ಸುದರ್ಶನ ಚಕ್ರದಿಂದ ಮರಣ ಹೊಂದಲು ಕಾತರಿಸಿದ ಆ ಗುಡಾ ಕೇಶನು ಕೆಲವು ದಿನ ತಪಸ್ಸು ಮಾಡುತ್ತಲಿರುವಾಗಲೇ ವೈಶಾಖ ಶುದ್ಧ ದ್ವಾದಶಿಯೂ ಬಂದಿತು. ಆಗ ಆ ಗುಡಾ ಕೇಶನು ಶ್ರೀ ಹರಿಯನ್ನು ಪೂಜಿಸಿ '' ಪ್ರಭೋ, ಬೆಂಕಿಯಂತೆ ಹೊಳೆಯುವ ಈ ನಿನ್ನ ಚಕ್ರವನ್ನು ಬಿಡು. ಅದು ಬೇಗನೆ ನನ್ನ ಅಂಗಾಂಗಳನ್ನು ಕತ್ತರಿಸಿ ನನ್ನ ಆತ್ಮವು ನಿನ್ನ ಚರಣದಡಿಯ ಹುಡಿಯಲ್ಲಿ ಸೇರುವಂತೆ ಮಾಡಲಿ '' ಎಂದು ಬಿನ್ನವಿಸಿದನು. ಅದನ್ನು ಕೇಳಿ ನಾನು ಸುದರ್ಶನವನ್ನು ಬಿಟ್ಟೆ.

ಕೂಡಲೇ ನನ್ನ ಚಕ್ರವು ಆ ದೈತ್ಯನನ್ನು ಕಡಿದು ಹಾಕಿತು. ಆ ಭಕ್ತನ ಆತ್ಮವು ನನ್ನ ಚರಣದ ಬಳಿ ಸಾರಿತು. ಅವನ ದೇಹದ ಮಾಂಸವು ತಾಮ್ರವಾಗಿ, ರಕ್ತವು ಚಿನ್ನವಾಗಿ, ಎಲುಬುಗಳು ಬೆಳ್ಳಿಯಾಗಿ, ಮೇದಸ್ಸೇ ಮೊದಲಾದ ಉಳಿದ ದೇಹ ಘಟಕಗಳು ತವರು, ಸೀಸ, ಕಂಚು ಮುಂತಾದ ಧಾತುಗಳಾದವು. ದೇಹಾಂಗಗಳಲ್ಲಿದ್ದ ಕಶ್ಮಲವು ಕಬ್ಬಿಣದ ಅದಿರಾಯಿತು. ಹೀಗೆ ನನ್ನ ಭಕ್ತನ ಪವಿತ್ರ ದೇಹ ಘಟಕದಿಂದ ಪರಿಣತವಾದ ತಾಮ್ರದ ಪಾತ್ರೆಯಲ್ಲಿ ಅರ್ಪಿಸುವ ನೈವೇದ್ಯದಲ್ಲಿಯ ಒಂದೊಂದು ಅಗಳಿಗೂ ಅನಂತ ಫಲವಿರುತ್ತದೆ. ಆದುದರಿಂದಲೇ ದೀಕ್ಷಿತರಾದ ಭಾಗವತರು ದೇವತಾಕಾರ್ಯಗಳನ್ನು ತಾಮ್ರದ ಪಾತ್ರದಲ್ಲಿಯೇ ಮಾಡಿ ಅರ್ಘ್ಯ ಪಾದ್ಯಾದಿಗಳನ್ನು ಕೂಡ ತಾಮ್ರಪಾತ್ರೆಯಲ್ಲಿಯೇ ಕೊಡುತ್ತಾರೆ. ನನ್ನ ಭಕ್ತನಾದವನು ಪ್ರಾತಃಕಾಲ ಹಾಗೂ ಸಂಧ್ಯಾಕಾಲದಲ್ಲಿ ತಪ್ಪದೇ ಸಂಧ್ಯಾ ವಂದನೆಯನ್ನು ಮಾಡಬೇಕು. ಸೂರ್ಯಾಂತರ್ಗತ ನಾದ ನನಗೆ ಮಂತ್ರೋಚ್ಚಾರಣೆ ಪೂರ್ವಕವಾಗಿ ಅರ್ಘ್ಯಪ್ರದಾನವನ್ನು ಮಾಡಬೇಕು. ಹೀಗೆ ಸಂಧ್ಯಾ ವಂದನೆಯನ್ನು ಮಾಡಿ ದೇವರನ್ನು ಪೂಜಿಸಬೇಕು.

*ವರಾಹ ಪುರಾಣದಲ್ಲಿ ನೂರ ಎಂಟನೇ ಅಧ್ಯಾಯ ಮುಗಿದುದು.*



ವರಾಹ :- ಭೂದೇವಿ, ನನ್ನ ಪೂಜೆಯಲ್ಲಿ ತೊಡಗಿದವನು ನನಗೆ ಸ್ನಾನ ಮಾಡಿಸಿದ ಬಳಿಕ ಒಂಬತ್ತು ಎಳೆಗಳಿಂದ ಕೂಡಿದ ಬೆಳ್ಳಗಿನ ಯಜ್ಞೋಪವೀತವನ್ನು (ಜನಿವಾರ) ನನಗೆ ಅರ್ಪಿಸಬೇಕು. ಗಂಧದಿಂದ ನನ್ನ ಹಣೆಗೆ ತಿಲಕವನ್ನು ಹಚ್ಚಬೇಕು. ಅನಂತರ ಹೂಗಳನ್ನು ಅರ್ಪಿಸಿ; ಧೂಪವನ್ನೂ ದೀಪವನ್ನು ಪೂಜಾವಿಧಿಯಲ್ಲಿ ಹೇಳಿದ ಮಂತ್ರಗಳಿಂದ ಸಮರ್ಪಿಸಿ ಬಳಿಕ ನೈವೇದ್ಯವನ್ನು ದೇವರಿಗೆ ಸಮರ್ಪಿಸಬೇಕು. ನೈವೇದ್ಯವನ್ನು ತಾಮ್ರದ ಪಾತ್ರೆಯಲ್ಲಿಯೇ ಇಡಬೇಕು. ಬೆಳ್ಳಿ, ಬಂಗಾರ, ಕಂಚಿನ ಪಾತ್ರೆಯಲ್ಲಿ ಅರ್ಪಿಸಿದ ನೈವೇದ್ಯಕ್ಕಿಂತ ತಾಮ್ರದ ಪಾತ್ರೆಯಲ್ಲಿ ಇಟ್ಟ ನೈವೇದ್ಯವೇ ನನಗೆ ರುಚಿಸುತ್ತದೆ.''

**ಭೂದೇವಿ** :- ದೇವಾ, ಬೆಳ್ಳಿ ಭಂಗಾರಕ್ಕಿಂತ ತಾಮ್ರವೇ ನಿನಗೆ ಇಷ್ಟು ಇಷ್ಟತಮವಾದ ಧಾತುವಾಗಲು ಏನು ಕಾರಣ ?

**ವರಾಹಸ್ವಾಮಿ** :- ತಾಮ್ರವು ನನಗೆ ಅತ್ಯಂತ ಪ್ರಿಯವಾಗಲು ಒಂದು ಕಾರಣವಿದೆ. ಹೇಳುತ್ತೇನೆ ಕೇಳು- ''ತಾವರೆಗಣ್ಣಿನ ಮೇದಿನೀ ದೇವಿಯೇ, ಪೂರ್ವಕಾಲದಲ್ಲಿ ಗುಡಾಕೇಶನೆಂಬ ದೈತ್ಯನು ತಾಮ್ರರೂಪವನ್ನು ಪಡೆದು ನನ್ನ ಆರಾಧನೆಯಲ್ಲಿಯೇ ಆಸಕ್ತನಾಗಿದ್ದನು. ಆ ದೈತ್ಯನು ದೃಢ ಸಂಕಲ್ಪದಿಂದ ಹದಿನಾಲ್ಕು ಸಾವಿರ ವರ್ಷಗಳವರೆಗೆ ನನ್ನನ್ನು ಕುರಿತು ತಪಸ್ಸನ್ನು ಮಾಡಿದನು. ಅವನ ಈ ಉಗ್ರವಾದ ಜಪ-ತಪ-ಆರಾಧನೆಗಳಿಂದ ಪ್ರಸನ್ನನಾದ ನಾನು ಅವನಿದ್ದಲ್ಲಿಗೇ ಹೋದೆನು. ಅವನ ಆಶ್ರಮವು ತಾಮ್ರದ ಉಗಮಸ್ಥಾನವಾಗಿದ್ದಿತು. ಅವನ ಆ ಪರ್ಣ ಕುಟೀರದ ಸುತ್ತ ಮುತ್ತಲಿನ ಪ್ರದೇಶವೆಲ್ಲವೂ ತಾಮ್ರಮಯ ವಾದುದರಿಂದ ಹೊಂಬೆಳಕಿನ ಹೊಳಪಿನಿಂದ ಅತ್ಯಂತ ರಮಣೀಯವಾಗಿ ಶೋಭಿಸುತ್ತಿತ್ತು. ನಾನು ಬಂದ ಸದ್ದಾದಕೂಡಲೇ ಆ ತಪೋನಿರತನಾದ ಗುಡಾಕೇಶನು ಮೊಳಕಾಲು ಮೊಂಡೆಯೂರಿ, ತಲೆಯನ್ನು ನೆಲಕ್ಕೆ ಹಚ್ಚಿ, ನಮಸ್ಕಾರ ಮಾಡಿ, ಕೈಮುಗಿದು ನನ್ನ ಪ್ರಾರ್ಥನೆಯನ್ನು ಮಾಡಿದನು. ''ಬಯಸಿದ ವರವನ್ನು ಬೇಡು ಎಂದು ನಾನು ಅವನಿಗೆ ಹೇಳಿದೆ. ಆಗ ಆ ದೈತ್ಯ ತಪಸ್ವಿಯು ಕೈಮುಗಿದು ನನಗೆ ನಮಿಸಿ ವರವನ್ನು ಕೇಳಿದನು.-

''ದೇವಾ, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ 'ನನಗೆ ನಿನ್ನಲ್ಲಿ ಸಾವಿರ ಜನ್ಮಗಳಲ್ಲಿ ಸ್ಥಿರಭಕ್ತಿಯು ಧೃಡವಾಗಿರಲಿ' ಎಂಬ ಒಂದು ವರವನ್ನು ಕೊಡು. ಎರಡನೇ ವರದಿಂದ ನನಗೆ ನಿನ್ನ ಸುದರ್ಶನ ಚಕ್ರದಿಂದಲೇ ಮರಣವಾಗಬೇಕು. ನಿನ್ನ ಚಕ್ರದಿಂದ ಕಡಿದೊಗೆದ ಈ ನನ್ನ ದೇಹದ ಮಾಂಸ ನೆಣಗಳೆಲ್ಲವೂ ಪರಿಶುದ್ಧವಾದ ತಾಮ್ರ ಎಂಬ ಲೋಹವಾಗಲಿ. ಶುಭ ಧರ್ಮಗಳನ್ನು ಆಚರಿಸುವವರೆಲ್ಲರೂ ಆ ತಾಮ್ರಧಾತು ವಿನಿಂದಲೇ ಪಾತ್ರೆಗಳನ್ನು ಮಾಡಿಸಿ ಅದರಲ್ಲಿಯೇ ನಿನಗೆ ನೈವೇದ್ಯಗಳನ್ನು ನೀಡಲಿ. ಅಂಥ ತಾಮ್ರ ಪಾತ್ರೆಗಳಲ್ಲಿ ಇಟ್ಟ ನೈವೇದ್ಯ ಪದಾರ್ಥಗಳೇ ನಿನಗೆ ಪ್ರೀತಿಕರವಾಗಲಿ. ''

ಆ ದೈತ್ಯ ಭಕ್ತನ ಬಿನ್ನಹಕ್ಕೆ 'ಅಸ್ತು' ಎಂದು ಹೇಳಿ ಭಗವಂತನು ತಾಮ್ರ ಧಾತುವಿನಲ್ಲಿ ವಿಶೇಷ ರೂಪದಿಂದ ವಾಸವಾಗಿದ್ದಾನೆ. ಆದುದರಿಂದ ತಾಮ್ರದ

ಭಾಂಡಿಯಲ್ಲಿ ನನಗೆ ನೈವೇದ್ಯವನ್ನು ಬಡಿಸಿ ಸಮರ್ಪಣವನ್ನು ಮಾಡಿದರೆ ನನಗೆ ಬಹಳ ಪ್ರೀತಿಯಾಗುತ್ತದೆ. '' ಹೀಗೆ ನನ್ನನ್ನುಕುರಿತು ತಾಮ್ರಾವಾಸದ ವರ ಕೇಳಿದ ಆ ದೈತ್ಯನಿಗೆ '' ವೈಶಾಖ ಶುಕ್ಲ ದ್ವಾದಶಿ ಮಧ್ಯಾನ್ಹ ಸೂರ್ಯನು ನಡುನೆತ್ತಿಗೆ ಏರಿದಾಗ ನನ್ನ ಸುದರ್ಶನ ಚಕ್ರವು ಬಂದು ನಿನ್ನನ್ನು ಸಂಹರಿಸುವದು. ಅನಂತರ ನೀನು ನನ್ನ ಲೋಕವನ್ನು ಸೇರುವೆ.'' ಎಂದು ಹೇಳಿ ಹರಿಯು ತಾನು ಅಲ್ಲಿಯೇ ಅದೃಶನಾದನು.

ವಿಷ್ಣುವಿನ ಸುದರ್ಶನ ಚಕ್ರದಿಂದ ಮರಣ ಹೊಂದಲು ಕಾತರಿಸಿದ ಆ ಗುಡಾ ಕೇಶನು ಕೆಲವು ದಿನ ತಪಸ್ಸು ಮಾಡುತ್ತಲಿರುವಾಗಲೇ ವೈಶಾಖ ಶುದ್ಧ ದ್ವಾದಶಿಯೂ ಬಂದಿತು. ಆಗ ಆ ಗುಡಾ ಕೇಶನು ಶ್ರೀ ಹರಿಯನ್ನು ಪೂಜಿಸಿ '' ಪ್ರಭೋ, ಬೆಂಕಿಯಂತೆ ಹೊಳೆಯುವ ಈ ನಿನ್ನ ಚಕ್ರವನ್ನು ಬಿಡು. ಅದು ಬೇಗನೆ ನನ್ನ ಅಂಗಾಂಗಳನ್ನು ಕತ್ತರಿಸಿ ನನ್ನ ಆತ್ಮವು ನಿನ್ನ ಚರಣದಡಿಯ ಹುಡಿಯಲ್ಲಿ ಸೇರುವಂತೆ ಮಾಡಲಿ '' ಎಂದು ಬಿನ್ನವಿಸಿದನು. ಅದನ್ನು ಕೇಳಿ ನಾನು ಸುದರ್ಶನವನ್ನು ಬಿಟ್ಟೆ.

ಕೂಡಲೇ ನನ್ನ ಚಕ್ರವು ಆ ದೈತ್ಯನನ್ನು ಕಡಿದು ಹಾಕಿತು. ಆ ಭಕ್ತನ ಆತ್ಮವು ನನ್ನ ಚರಣದ ಬಳಿ ಸಾರಿತು. ಅವನ ದೇಹದ ಮಾಂಸವು ತಾಮ್ರವಾಗಿ, ರಕ್ತವು ಚಿನ್ನವಾಗಿ, ಎಲುಬುಗಳು ಬೆಳ್ಳಿಯಾಗಿ, ಮೇದಸ್ಸೇ ಮೊದಲಾದ ಉಳಿದ ದೇಹ ಘಟಕಗಳು ತವರು, ಸೀಸ, ಕಂಚು ಮುಂತಾದ ಧಾತುಗಳಾದವು. ದೇಹಾಂಗಗಳಲ್ಲಿದ್ದ ಕಶ್ಮಲವು ಕಬ್ಬಿಣದ ಅದಿರಾಯಿತು. ಹೀಗೆ ನನ್ನ ಭಕ್ತನ ಪವಿತ್ರ ದೇಹ ಘಟಕದಿಂದ ಪರಿಣತವಾದ ತಾಮ್ರದ ಪಾತ್ರೆಯಲ್ಲಿ ಅರ್ಪಿಸುವ ನೈವೇದ್ಯದಲ್ಲಿಯ ಒಂದೊಂದು ಅಗಳಿಗೂ ಅನಂತ ಫಲವಿರುತ್ತದೆ. ಆದುದರಿಂದಲೇ ದೀಕ್ಷಿತರಾದ ಭಾಗವತರು ದೇವತಾಕಾರ್ಯಗಳನ್ನು ತಾಮ್ರದ ಪಾತ್ರದಲ್ಲಿಯೇ ಮಾಡಿ ಅರ್ಘ್ಯ ಪಾದ್ಯಾದಿಗಳನ್ನು ಕೂಡ ತಾಮ್ರಪಾತ್ರೆಯಲ್ಲಿಯೇ ಕೊಡುತ್ತಾರೆ. ನನ್ನ ಭಕ್ತನಾದವನು ಪ್ರಾತಃಕಾಲ ಹಾಗೂ ಸಂಧ್ಯಾಕಾಲದಲ್ಲಿ ತಪ್ಪದೇ ಸಂಧ್ಯಾ ವಂದನೆಯನ್ನು ಮಾಡಬೇಕು. ಸೂರ್ಯಾಂತರ್ಗತ ನಾದ ನನಗೆ ಮಂತ್ರೋಚ್ಚಾರಣೆ ಪೂರ್ವಕವಾಗಿ ಅರ್ಘ್ಯಪ್ರದಾನವನ್ನು ಮಾಡಬೇಕು. ಹೀಗೆ ಸಂಧ್ಯಾ ವಂದನೆಯನ್ನು ಮಾಡಿ ದೇವರನ್ನು ಪೂಜಿಸಬೇಕು.

*ವರಾಹ ಪುರಾಣದಲ್ಲಿ ನೂರ ಎಂಟನೇ ಅಧ್ಯಾಯ ಮುಗಿದುದು.*

—o—

**ಸೂತ** :- ಶ್ರೀ ಹರಿಯ ಮುಖದಿಂದ ದೀಕ್ಷಾವಿಧಿಯ ವಿಧಾನವನ್ನು ತಿಳಿದ ಪೃಥ್ವೀದೇವಿಯ ಮನಸ್ಸು ತೊಳೆದಿಟ್ಟಂತೆ ನಿರ್ಮಲವಾಗಿತ್ತು. ಅವಳು ನಾರಾಯಣನನ್ನು ಕುರಿತು ಮತ್ತೆ ಮಾತನಾಡಿದಳು - ''ದೇವಾ, ನೀನು ಹಿಂದೆ ಮನುಷ್ಯರು ಮಾಡುವ ಮೂವತ್ತೆರಡು ಅಪರಾಧಗಳನ್ನು ಹೇಳಿದಿಯಷ್ಟೇ ! ಮಾಧವಾ, ಮಂದಮತಿಗಳಾದ ಮಾನವರು ಮಾಡುವ ಆ ತಪ್ಪುಗಳಿಗೆ ಪ್ರಾಯಶ್ಚಿತ್ತವೇನು ? ಅವರು ಶುದ್ಧರಾಗುವ ಬಗೆ ಯಾವದು ?'' ಭೂದೇವಿಯ ಈ ಮಾತುಗಳನ್ನು ಆಲಿಸಿ ವರಾಹ ದೇವನು ಲೋಕಕ್ಷೇಮಕ್ಕಾಗಿ ಕೆಲವು ಮಾತುಗಳನ್ನು ಅವಳಿಗೆ ಹೇಳಿದನು. - ''ವಸುಂಧರೇ, ಶುದ್ಧ ಭಾಗವತರಾದ ನನ್ನ ಭಕ್ತರು ರಾಜರ ಅನ್ನವನ್ನು ಉಣ್ಣಬಾರದು. ಯಾಕಂದರೆ ರಾಜರು ಎಷ್ಟೇ ಧಾರ್ಮಿಕರಾಗಿದ್ದರೂ ಅವರು ಅನೇಕ ಘೋರವಾದ ರಾಜಸ ತಾಮಸ ಕರ್ಮಗಳನ್ನು ಸ್ವಾರ್ಥಪ್ರೇರಿತರಾಗಿ, ಒಮ್ಮೊಮ್ಮೆ ಗರ್ವಾಂಧರಾಗಿ ಪ್ರಾಯಃ ಮಾಡುತ್ತಲೇ ಇರುತ್ತಾರೆ. ಆದುದರಿಂದ ರಾಜಾನ್ನವು ನಿಂದ್ಯವಾದುದು ಎಂದು ನನ್ನ ಮತ. ರಾಜಾನ್ನದ ದೋಷವು ತಟ್ಟದಿರುವಂತೆ ಅದನ್ನು ಉಣ್ಣುವ ಒಂದು ಶುದ್ಧ ಮಾರ್ಗವಿದೆ. ಅದನ್ನು ಹೇಳುತ್ತೇನೆ ಕೇಳು. - ''ರಾಜರ ಸಹಾಯದಿಂದ ವಿಧಿಪೂರ್ವಕವಾಗಿ ನನ್ನ ಮೂರ್ತಿಯ ಪ್ರತಿಷ್ಠಾಪನೆ ಮಾಡಿ ದೇವಾಲಯವನ್ನು ನಿರ್ಮಿಸಿ, ರಾಜರು ಕೊಡುವ ಧನಧಾನ್ಯಗಳಿಂದ ಭಗವದ್ಭಕ್ತರೇ ಅಡಿಗೆಯನ್ನು ಸಿದ್ಧಮಾಡಿ, ಅವರೇ ನನಗೆ ನೈವೇದ್ಯಗಳನ್ನಿಟ್ಟು, ಬಳಿಕ ಅದನ್ನು ಭಗವತ್ ಪ್ರಸಾದವೆಂದು ಊಟವನ್ನು ಮಾಡಿದರೆ ಯಾವ ದೋಷವೂ ಬರಲಾರದು. ಇನ್ನು ಅಕಸ್ಮಾತ್ತಾಗಿ ಅಥವಾ ಅನಿವಾರ್ಯವಾಗಿ ರಾಜಾನ್ನವನ್ನು ಉಣ್ಣುವ ಪ್ರಸಂಗ ಬಂದರೆ ಪ್ರಾಯಶ್ಚಿತ್ತ ರೂಪವಾಗಿ ಒಂದು ಚಾಂದ್ರಾಯಣ ಅಥವಾ ಏಳು ಕೃಚ್ಛ್ರ ಅಥವಾ ಒಂದು ಸಾಂತಪನ ವ್ರತವನ್ನು ಮಾಡಿದರೆ ಶುದ್ಧಿಯಾಗಿ ಅವನ ಪಾಪಗಳೆಲ್ಲವೂ ಪರಿಹಾರವಾಗುವವು.

## ಹಲ್ಲುಜ್ಜಿಕೊಳ್ಳದೆ ಹರಿಪೂಜೆ ಮಾಡಿದರೆ

ವರಾಹ :- ವಿಧಿಯಲ್ಲಿ ಹೇಳಿದಂತೆ ದಂತ ಕಾಷ್ಠದಿಂದ ಹಲ್ಲನ್ನು ಉಜ್ಜಿ ಮುಖ ಶುದ್ಧಿಯನ್ನು ಮಾಡಿಕೊಳ್ಳದೇ ದೇವರ ಪೂಜೆಯನ್ನು ಮಾಡಿದರೆ ಅದು ಒಂದು ಅಪರಾಧ ಎನಿಸುವದು. ಮನುಷ್ಯ ದೇಹವು ಮೊದಲೇ ಕಫ ಪಿತ್ತಗಳಿಂದ ಕಲುಷಿತವಾಗಿರುತ್ತದೆ. ಅವನ ಮುಖವು ಗೀಜ ರಕ್ತಗಳಿಂದ ಕೂಡಿ ದುರ್ನಾತವನ್ನು ಬೀರುವದು. ಅದಕ್ಕಾಗಿ ದಂತ ಕಾಷ್ಠದಿಂದ ಹಲ್ಲುಜ್ಜಿ ಶಾಸ್ತ್ರೋಕ್ತವಾಗಿ ಬಾಯಿ ಮುಕ್ಕಳಿಸುವದರಿಂದ ಮುಖ ಶುದ್ಧಿಯು ಆಗುವದು. ದೇಹ ಶುದ್ಧಿಯು ಆಚಾರ ಸಿದ್ಧಿಯ ಮುಖ್ಯ ಹೇತುವಾಗಿದೆ. ಅದನ್ನು ಬಿಟ್ಟು ಇದು ಇಲ್ಲ. ಇದನ್ನು ಬಿಟ್ಟು ಅದು ಇಲ್ಲ. ಹಲ್ಲನ್ನು ಉಜ್ಜಿಕೊಳ್ಳದೇ ದೇವಪೂಜಾದಿಗಳನ್ನು ಮಾಡುವವರು ಏಳು ದಿನ ಬಟ್ಟ ಬಯಲಿನಲ್ಲಿ ಹಾಸಿಗೆ ಹೊದಿಕೆಗಳಿಲ್ಲದೆ ಮೇಲುಮುಖವಾಗಿ ಮಲಗಿಕೊಂಡು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

## ಕೆಲವು ಪಾಪ ಹಲವು ಪ್ರಾಯಶ್ಚಿತ್ತ

**ವರಾಹ :-** ಸ್ತ್ರೀ ಸಂಗವನ್ನು ಮಾಡಿ ಸ್ನಾನಮಾಡದೆ ಭಗವನ್ ಮೂರ್ತಿಯನ್ನು ಮುಟ್ಟುವ ಪಾಪಿಗಳು ಹದಿನಾಲ್ಕು ಸಾವಿರ ವರ್ಷಕಾಲ ರೇತಸ್ಸನ್ನು ಪಾನ ಮಾಡಬೇಕಾಗುವದು. ಅಂಥ ಮಹಾಪಾತಕವನ್ನು ಇಲ್ಲಿಯೇ ಪರಿಹಾರ ಮಾಡಿಕೊಳ್ಳ ಬೇಕಾದರೆ ಮೂರು ದಿನ ಬರೆ ಹಿಂಡಿಯನ್ನು ತಿಂದಿದ್ದು ಒಂದು ದಿನ ಉಪವಾಸ ಬಿದ್ದು ದೇವರನ್ನು ಧ್ಯಾನ ಮಾಡಿದರೆ ಅವನ ಆ ದೋಷವು ಪರಿಹಾರವಾಗುವದು. ಹೆಣವನ್ನು ಮುಟ್ಟಿ ಸ್ಮಶಾನಕ್ಕೆ ಹೋಗಿ ವಿಧ್ಯುಕ್ತವಾಗಿ ಶುದ್ಧನಾಗದೆ ದೇವತಾ ಕಾರ್ಯವನ್ನು ಮಾಡಿದ್ದರೆ ಅದು ಮಹಾಪಾಪ. ಅದಕ್ಕೆ ಒಂದು ದಿನ ಒಪ್ಪತ್ತು ಊಟ, ಮೂರು ದಿನ ಪೂರ್ಣ ಉಪವಾಸ ಮಾಡಿ ಅನಂತರ ಪಂಚಗವ್ಯವನ್ನು ಸೇವಿಸಬೇಕು. ರಾಗ ಮೋಹಗಳಿಂದ ಕಾಮಾಂಧನಾಗಿ ರಜಸ್ವಲೆಯನ್ನು ಮುಟ್ಟಿದ ಪಾಪಿಯು ದೇವರನ್ನು ಕುರಿತು ತಪಸ್ಸು ಮಾಡಿ ಮರು ರಾತ್ರಿ ಬಯಲಿನಲ್ಲಿ ಹಾಸಿಗೆ ಹೊದಿಕೆಗಳಿಲ್ಲದೆ ಮಲಗಿದರೆ ಶುದ್ಧನಾಗುತ್ತಾನೆ. ಶವವನ್ನು ಮುಟ್ಟಿ ಶುದ್ಧನಾಗದೆ ಸ್ನಾನಮಾಡದೆ ದೇವರ ಗುಡಿ ಮತ್ತು ತೀರ್ಥಕ್ಷೇತ್ರಗಳಲ್ಲಿ ಪ್ರವೇಶ ಮಾಡುವವನು ಭಯಂಕರ ಪಾಪವನ್ನು ಮಾಡಿದಂತಾಗಿ ಘೋರ ನರಕವನ್ನು ಹೊಂದುವನು. ಅದಕ್ಕೆ ಇಲ್ಲಿಯೇ ಪರಿಹಾರವೆಂದರೆ ಹದಿನೈದು ದಿನ ಒಪ್ಪತ್ತು ಊಟ ಮಾಡಿ ನನ್ನ ಧ್ಯಾನ ಮಾಡಬೇಕು.

## ಪೂಜೆಯ ಕಾಲದಲ್ಲಿ ಆಗಬಾರದ್ದು ಆದರೆ ?

**ವರಾಹ** :- ದೇವರ ಪೂಜೆ ಮಾಡುವಾಗ ದೇವರನ್ನು ಮುಟ್ಟಿದಾಗಲೇ ಅಪಾನ ವಾಯುವನ್ನು ಬಿಟ್ಟರೆ ಮಹಾ ಪಾಪ. ಅಂಥ ಮನುಷ್ಯನು ಮೂರು ಹಗಲು ಮೂರು ರಾತ್ರಿ ಬೆಂಕಿಯ ಜಳದ ಬಳಿಯಲ್ಲಿಯೆ ಕುಳಿತು ದೇವರನ್ನು ಧ್ಯಾನ ಮಾಡಿದರೆ ಶುದ್ಧನಾಗುತ್ತಾನೆ. ದೇವರ ಪೂಜೆಯ ಕಾಲದಲ್ಲಿ ಪಕ್ಕನೇ ಮಲ ವಿಸರ್ಜನೆಯಾದರೆ ರೌರವ ನರಕ ಎಂದು ಹೇಳಿದ್ದಾರೆ. ಅಂಥ ಪಾಪಿಯು ಪಶ್ಚಾತ್ತಾಪದಿಂದ ತಪ್ತನಾಗಿ ಒಂದು ದಿನ ಇಡೀ ರಾತ್ರಿ ಕುತ್ತಿಗೆ ಮಟ್ಟ ನೀರಲ್ಲಿಕುಳಿತು ಮತ್ತೊಂದು ರಾತ್ರಿ ಬಟಾ ಬಯಲಿನಲ್ಲಿ ಹಾಸಿಗೆ ಹೊದಿಕೆಗಳಿಲ್ಲದೆ ಮಲಗಿದರೆ ಅವನ ದೋಷವು ಪರಿಹಾರವಾಗುವದು.

## ದೇವ ಪೂಜೆಯ ಮೊದಲು ದೇಹಶುದ್ಧಿ

**ವರಾಹ :-** ದೇವಿ, ದೇವರ ಪೂಜೆಗೆ ಕೂತಾಗ ದೇವರಿಗೂ, ಧರ್ಮಕ್ಕೂ ಸಂಬಂಧವಿಲ್ಲದ ಹಾಳು ಹರಟೆ ಹೊಡೆಯುವದರಿಂದ ಬಂದ ಪಾಪವು ಹದಿನೈದು ದಿನ ಬಯಲಿನಲ್ಲಿ ಹಾಸಿಗೆ ಹೊದಿಕೆಗಳಿಲ್ಲದೇ ಮಲಗುವದರಿಂದ ಪರಿಹಾರವಾಗುವದು. ನೀಲಿಬಣ್ಣದ ಬಟ್ಟೆ ಧರಿಸಿ ದೇವಪೂಜೆಯನ್ನು ಮಾಡಿದ್ದಕ್ಕೆ ಬಂದ ಪಾಪವು ಚಾಂದ್ರಾಯಣ ವ್ರತದಿಂದ ಪರಿಹೃತವಾಗುತ್ತದೆ. ಭೂದೇವಿ, ದೇವರನ್ನು ಮುಟ್ಟಲಿಕ್ಕೆ ಮಾನವರು ಮೊದಲು ಸರಿಯಾಗಿ ತಮ್ಮ ದೇಹವನ್ನು ಶುದ್ಧಮಾಡಿಕೊಳ್ಳಬೇಕು.

ಸ್ನಾನಕ್ಕಿಂತ ಮೊದಲು ಪೂರ್ವಕ್ಕೆ ಮುಖಮಾಡಿ ನೀರಿನಿಂದ ಕಾಲು ತೊಳೆದು ಕೊಂಡು ಮತ್ತೆ ಮೂರು ಸಾರೆ ಮಣ್ಣು ಹಚ್ಚಿಕೊಂಡು ತೊಳೆದುಕೊಳ್ಳಬೇಕು. ಕೈಗಳನ್ನು

ಏಳು ಸಾರೆ ಮಣ್ಣು ಹಚ್ಚಿ ತಿಕ್ಕಿಕೊಳ್ಳಬೇಕು. ಅನಂತರ ಪ್ರತಿಯೊಂದು ಕೈಕಾಲುಗಳನ್ನು ಬರೀ ನೀರಿನಿಂದ ಐದ್ಯೆದು ಸಾರೆ ತೊಳೆದುಕೊಳ್ಳಬೇಕು. ಅನಂತರ ಸ್ನಾನವನ್ನು ವಿಧಿಪೂರ್ವಕವಾಗಿ ಮಾಡಿ ನಂತರ ಆಚಮನ, ಪ್ರಾಣಾಯಾಮ, ಸಂಧ್ಯಾ ವಂದನೆ, ಪಾಪಪುರುಷ ವಿಸರ್ಜನೆ, ಗುರುಮಂತ್ರ, ತತ್ವನ್ಯಾಸ, ಮಾತೃಕಾನ್ಯಾಸ ಮುಂತಾದವುಗಳನ್ನು ಮಾಡಿಕೊಂಡ ಬಳಿಕ ನನ್ನನ್ನು ಮುಟ್ಟಿ ಪೂಜೆ ಮಾಡಬೇಕು. ಹಾಗೆ ಮಾಡದೇ ನನ್ನನ್ನು ಮುಟ್ಟಿ ಪೂಜಿಸಿದರೆ ಮಹಾಪರಾಧವೇ ಸರಿ. ಇಂಥ ಅಪರಾಧ ಮಾಡಿದವರು ಹನ್ನೊಂದು ಸಾವಿರವರ್ಷ ಕ್ರಿಮಿಯಾಗಿ ತೊಳಲುವನು. ಅದಕ್ಕೆ ಮಹಾ ಸಾಂತಪನ ಎಂಬ ತಪ್ತಕೃಚ್ಛ್ರ ವ್ರತವನ್ನು ಮಾಡಿದರೆ ಆ ಪಾಪ ಪರಿಹಾರವಾಗುವದು. ದೇವರ ಪೂಜೆಯ ಕಾಲದಲ್ಲಿ ಇಂದ್ರಿಯಗಳ ಮೇಲಿನ ಅಂಕೆ ತಪ್ಪಿ ಸಿಟ್ಟಿಗೆದ್ದರೆ ಶಾಸ್ತ್ರದಲ್ಲಿ ಮಹಾ ಪಾಪವನ್ನು ಹೇಳಿದ್ದಾರೆ. ಅದಕ್ಕೆ ಪ್ರಾಯಶ್ಚಿತ್ತವೆಂದರೆ ಎಂಟು ಭಗವದ್ ಭಕ್ತರ ಮನೆಗಳಲ್ಲಿ ಭಿಕ್ಷೆ ಬೇಡಿ ತಂದು ರಾತ್ರಿಕಾಲದವರೆಗೆ ದೇವರ ಧ್ಯಾನ ಮಾಡಿ ಆ ಮೇಲೆ ಊಟ ಮಾಡಬೇಕು. ಇದರಿಂದ ಅವನ ದೋಷವು ಪರಿಹಾರವಾಗುವದು. ನಿಷಿದ್ಧವಾದ ಹೂಗಳಿಂದ ನನ್ನನ್ನು ಪೂಜೆ ಮಾಡಿದ ಪಾಪಕ್ಕೆ ಒಂದು ತಿಂಗಳು ತುಪ್ಪವಿಲ್ಲದೆ ಪಾಯಸವನ್ನು ಮಾತ್ರ ಒಂದೇ ಹೊತ್ತು ತಿಂದು ಇರಬೇಕು. ಆ ಮೇಲೆ ಮೂರು ದಿನ ಜವೆಗೋದಿಯ ಸಜ್ಜಿಗೆಯನ್ನು ತಿಂದು ಮತ್ತೆ ಮೂರು ದಿನ ಪೂರ್ಣ ನಿಶ್ಚಕ್ರ ನಿರಾಹಾರ ಮಾಡಬೇಕು. ಇದರಿಂದ ಅವನ ಪಾಪಗಳೆಲ್ಲವೂ ಕಳೆದು ಹೋಗುವವು.

## ಇತರ ಪಾಪಗಳಿಗೆ ಪ್ರಾಯಶ್ಚಿತ್ತ

**ವರಾಹ :-** ಕೆಂಪು ಬಟ್ಟೆಯನ್ನು ಉಟ್ಟು ಅಥವಾ ಹೊದೆದು ಪೂಜೆ ಮಾಡುವದರಿಂದ ಬಂದ ಮಹಾಪಾಪಕ್ಕೆ ಹದಿನೇಳು ದಿನ ಒಪ್ಪತ್ತು ಊಟ, ಮೂರುದಿನ ಪೂರ್ಣ ಉಪವಾಸ, ಅನಂತರ ಒಂದು ದಿನ ಬರೇ ನೀರು ಕುಡಿದು ಇದ್ದು, ದೇವರ ಧ್ಯಾನ ಮಾಡಿದರೆ ಪ್ರಾಯಶ್ಚಿತ್ತವಾಗುವದು. ಕತ್ತಲೆಯಲ್ಲಿ ದೀಪವಿಲ್ಲದೆ ದೇವರ ಪೂಜೆಯನ್ನು ಮಾಡಿ ಮುಗಿಸಿದ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಹದಿನ್ಯೆದು ದಿನ ಕಣ್ಣು ಕಟ್ಟಿಕೊಂಡು ದೇವರನ್ನು ಧ್ಯಾನಿಸಬೇಕು. ಅನಂತರ ಇಪ್ಪತ್ತು ದಿನ ಒಪ್ಪತ್ತೇ ಊಟ ಮಾಡಿ ಆ ಮೇಲೆ ಗೋಮೂತ್ರದಲ್ಲಿ ಬೇಯಿಸಿದ ಅನ್ನವನ್ನು ಉಣ್ಣಬೇಕು. ಕಪ್ಪು ಬಟ್ಟೆಯುಟ್ಟು ಪೂಜೆ ಮಾಡಿದ ಪಾಪಕ್ಕೆ ಏಳು ದಿನ ಜವೆಗೋದಿಯ ಆಹಾರವನ್ನು ತಿಂದು ಆ ನಂತರ ಮೂರು ರಾತ್ರಿ ಹುರಿದ ಕಣಕದ ಒಂದೊಂದು ಉಂಡೆಯನ್ನು ಭಕ್ಷಿಸಿ ದೇವರ ಪ್ರಾರ್ಥನೆಯನ್ನು ಮಾಡಬೇಕು. ಮ್ಯೆಲಿಗೆ ಬಟ್ಟೆಯಿಂದ ನನ್ನ ಪೂಜೆ ಮಾಡಿದ ಮನುಷ್ಯನು ಪ್ರಾಯಶ್ಚಿತ್ತ ರೂಪವಾಗಿ ಮೂರು ದಿನ ಸಜ್ಜಿಗೆ, ಮೂರು ದಿನ ಹಿಂಡಿ, ಮೂರು ದಿನ ಬರಿ ಎಲೆ, ಮೂರು ದಿನ ಹಾಲು, ಮೂರು ದಿನ ಪಾಯಸ, ತಿಂದಿದ್ದ ಕೊನೆಗೆ ಮೂರು ದಿನ ಪೂರ್ಣ ಉಪವಾಸ ಮಾಡಿ ದೇವರ ಧ್ಯಾನ ಮಾಡಿದರೆ ಆ ದೋಷವು ಪರಿಹಾರವಾಗುವದು.

ನಾಯಿ ಮುಟ್ಟಿದ ಅಥವಾ ಎಂಜಲಾದ ಆಹಾರ ಪದಾರ್ಥಗಳನ್ನು ನನಗೆ ನ್ಯೆವೇದ್ಯ ತೋರಿಸುವದರಿಂದ ಬಂದ ಪಾಪವು ಅಪರಾಧಿಯು ಮೂರು ದಿನ ಗೆಣಸನ್ನು, ಮೂರು ದಿನ ಹಣ್ಣು ಕಾಯಿಗಳನ್ನು, ಮೂರು ದಿನ ಕಾಯಿಪಲ್ಲೆ, ಮತ್ತೆ ಮೂರು ದಿನ ಹಾಲು, ಮುಂದೆ

ಮೂರು ದಿನ ಮೊಸರು, ಬಳಿಕ ಮೂರು ದಿನ ಪಾಯಸ, ಅನಂತರ ಕೊನೆಗೆ ಮೂರು ದಿನ ಉಪವಾಸ ಮಾಡಿ ದೃಢವಾದ ಮನಸ್ಸಿನಿಂದ ದೇವರನ್ನು ಧ್ಯಾನ ಮಾಡಿದರೆ ಶುದ್ಧನಾಗುವನು. ಹಂದೀ ಮಾಂಸ ಮೊದಲಾದ ನಿಷಿದ್ಧ ಆಹಾರವನ್ನು ತಿಂದು ದೇವರ ಪೂಜೆ ಮಾಡಿದರೆ ಮಹಾ ಅನರ್ಥ ಉಂಟು. ಅದನ್ನು ತಪ್ಪಿಸಲು ಪ್ರಾಯಶ್ಚಿತ್ತವೆಂದರೆ ಐದು ದಿನ ಗೋಮಯ, (ಹಸುವಿನ ಶಗಣಿ) ಏಳು ದಿನ ನುಚ್ಚು, ಏಳು ದಿನ ನೀರು, ಏಳು ದಿನ ಉಪ್ಪು ಕಾರ ಇಲ್ಲದ ಆಹಾರ, ಮೂರು ದಿನ ಹುರಿದ ಹಿಟ್ಟು, ಏಳು ದಿನ ಎಳ್ಳು, ಆರು ದಿನ ಕಲ್ಲುಸಕ್ಕರೆ ತಿಂದು ಕೊನೆಗೆ ಏಳು ದಿನ ಬರೇ ಹಾಲನ್ನು ಕುಡಿದು ಒಟ್ಟು ನಲವತ್ತೊಂಬತ್ತು ದಿನ ನೇಮದಿಂದ ಇಂದ್ರಿಯಗಳನ್ನೆಲ್ಲ ಬಿಗಿ ಹಿಡಿದು ದೇವರ ಧ್ಯಾನ ಮಾಡಬೇಕು. ನೀರಗೋಳಿ ಮುಂತಾದ ಜಲ ಚರ ಪ್ರಾಣಿಗಳನ್ನು ಕೊಂದು ತಿಂದು ನನ್ನ ಪೂಜೆ ಮಾಡಿದ ಪಾಪವನ್ನು ತೊಳೆದುಕೊಳ್ಳಬೇಕಾದರೆ ಮೂರು ದಿನ ಜವೆಗೋದಿಯ ಉಸುಳೆಯನ್ನು ತಿಂದು ಮತ್ತೆ ಮೂರು ದಿನ ಉಪವಾಸ, ಮತ್ತೆ ಮೂರು ದಿನ ಉಪಹಾರ, ಮೂರು ದಿನ ಬರೆ ಎಳ್ಳು, ಮತ್ತೆ ಮೂರು ದಿನ ಉಪ್ಪುಕಾರ ಇಲ್ಲದ ಅನ್ನವನ್ನು ಉಂಡು ಹದಿನೈದು ದಿನ ಭಗವದ್ಧ್ಯಾನ ಮಾಡಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.

*ವರಾಹ ಪುರಾಣದಲ್ಲಿ ನೂರ ಒಂಬತ್ತನೇ ಅಧ್ಯಾಯ ಮುಗಿದುದು.*



## ರುದ್ರದೇವರು ಮತ್ತು ಸ್ಮಶಾನ

**ಅಧ್ಯಾಯ - ೧೧೦**

**ವರಾಹ :-** ದೀಪವನ್ನು ಮುಟ್ಟಿ ಅದೇ ಎಣ್ಣೆ ಕಾಡಿಗೆ ಕೈಯಿಂದ ನನ್ನ ಪೂಜೆ ಮಾಡಿದರೆ ಪಾಪ ಉಂಟು. ಅದನ್ನು ಹೋಗಲಾಡಿಸಲಿಕ್ಕಾಗಿ ಯಾವದಾದರೊಂದು ಶುಕ್ಲ ದ್ವಾದಶಿಯ ದಿನ ಅಲ್ಪಾಹಾರವನ್ನು ತೆಗೆದುಕೊಂಡು ಬಯಲಿನಲ್ಲಿ ಹಾಸಿಗೆ ಹೊದಿಕೆ ಇಲ್ಲದೇ ಮಲಗಬೇಕು. ಸ್ಮಶಾನಕ್ಕೆ ಹೋಗಿ ಸ್ನಾನ ಮಾಡದೆ ನನ್ನನ್ನು ಮುಟ್ಟಿದರೆ ಮಹಾ ಪಾಪ ಉಂಟು. ಅದಕ್ಕೆ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ ಕೇಳು.

**ಭೂದೇವಿ :-** ದೇವಾ, ಸ್ಮಶಾನದಲ್ಲಿ ಹೋಗಿ ಬಂದರೆ ಪಾಪವೇಕೆ? ಮಹಾ ದೇವನು ಸ್ಮಶಾನವನ್ನು ಹೊಗಳಿ ಪವಿತ್ರವೆಂದು ಹೇಳಿದ್ದಾನೆ. ಕೈಯಲ್ಲಿ ಹೊಳೆಯುವ ತಲೆಬುರುಡೆಯನ್ನು ಹಿಡಿದುಕೊಂಡು ಆ ಸ್ಮಶಾನದಲ್ಲಿಯೇ ವಾಸಮಾಡುತ್ತಾನೆ. ಅದಕ್ಕೆ ರುದ್ರಭೂಮಿ ಎಂದೇ ಹೆಸರು. ಇಂಥ ಮಹಾದೇವರ ನಿವಾಸದಿಂದ ಪವಿತ್ರವಾದ ಆ ಸ್ಮಶಾನವನ್ನು ನೀನೇಕೆ ತೆಗಳುತ್ತೀ? ಅಲ್ಲಿ ಹೋಗಿಬಂದ ಮಾತ್ರಕ್ಕೆ ಪಾಪವೇಕೆ? ಅದಕ್ಕೆ ಪ್ರಾಯಶ್ಚಿತ್ತವೇಕೆ?

**ವರಾಹ -** ಭೂದೇವಿ, ಎಲ್ಲ ಪ್ರಾಣಿಗಳಿಗೂ ಒಡೆಯನಾದ ಮಹಾದೇವನ ಗೈಮೆ ಅತ್ಯದ್ಭುತವಾಗಿದೆ. ಅವನು ಮಾಡಿದ ಕಾರ್ಯವನ್ನು ಯಾರೂ ಮಾಡಲಾರರು. ಆ ಶಿವನ ಮಹಾತ್ಮೆಯನ್ನು ಹೇಳುತ್ತೇನೆ ಕೇಳು. - ''ಹಿಂದೆ ಮಹಾದೇವನು ತ್ರಿಪುರಾಸುರನನ್ನು ಕೊಲ್ಲುವಾಗ ಸಿಟ್ಟಿನಿಂದ ಅವನ ಪಟ್ಟಣದಲ್ಲಿಯ ಅನೇಕ ಬಾಲಕರನ್ನೂ, ಮುದುಕರನ್ನೂ, ಚಲುವಿನ ಹೆಣ್ಣುಗಳನ್ನೂ ಕೊಂದು ಹಾಕಿದನು.

ಆದರಿಂದ ಆ ಶಿವನಿಗೆ ಶಿಶುಹತ್ಯಾ, ಸ್ತ್ರೀಹತ್ಯಾ, ವೃದ್ಧಹತ್ಯಾ, ಪಾಪಗಳು ಅವನಿಗೆ ತಗಲಿ ಅವನ ತೇಜೋವಧೆಯನ್ನು ಮಾಡಿದವು. ಅವನ ಶಕ್ತಿಯು ಅಡಗಿತು. ಪ್ರಭಾವವು ಉಡುಗಿ ಹೋಯಿತು. ಐಶ್ವರ್ಯವು ಕಳೆದು ಹೋಯಿತು. ಮುಖವು ಬಣ್ಣಗೆಟ್ಟಿತು. ಅವನ ಮಾಯಾಬಲವು ಕಳೆಗುಂದಿತು. ಹೀಗೆ ಸರ್ವಭೂತ ಮಹೇಶ್ವರನಾದ ಆ ಮುಕ್ಕಣ್ಣನ ಮಹಾಮಹಿಮೆ ಎಲ್ಲವೂ ಮಲಿನವಾದುದನ್ನು ಒಳಗಣ್ಣಿನಿಂದ ತಿಳಿದ ನಾನು ಅವನಿದ್ದಲ್ಲಿಗೆ ಹೋದೆನು. ಖಿನ್ನನಾದ ಅವನನ್ನು ಸಂತೈಸುತ್ತ ಇಂತು ನುಡಿದೆನು.-

''ರುದ್ರಾ, ಇದೇನು ನೀನು ಇಷ್ಟು ವಿಷಣ್ಣನಾಗಿ ಕುಳಿತಿರುವೆ ? ಬೇಕಾದುದನ್ನು ಮಾಡಬಲ್ಲ ನೀನು ಜಗತ್‌ಸಂಹಾರಕನಾಗಿರುವೆ. ನಿನಗೆ ಉಗ್ರದೇವ ಎಂದು ಹೆಸರು. ಶರಣು ಬಂದವರನ್ನು ರಕ್ಷಣ ಮಾಡುವ ನಿನಗೆ ನಿನ್ನ ಶಕ್ತಿಯ ಅರಿವು ಇಲ್ಲದಂತಾಯಿತಲ್ಲ ! ಮಹಾದೇವನಾದ ನೀನು ಪ್ರಮಥಗಣ ಸಹಿತನಾಗಿ ಹೀಗೇಕೆ ಕಳೆಗೆಟ್ಟು ನಿಂತುಕೊಂಡಿರುವೆ ? ನಿನ್ನ ಸ್ವರೂಪವನ್ನು ನೆನೆದುಕೋ. ನಿನ್ನ ಯೋಗ ಮಾಯೆಯನ್ನು ಅವಲಂಬಿಸು. 'ಮಹಾತ್ಮಾ' 'ಪರಮಾತ್ಮಾ' ಎಂದು ಹೆಸರಾದ ಸಾಕ್ಷಾತ್ ವಿಷ್ಣು ನಾನೇ. ನಿನಗೆ ಒಳ್ಳೇದನ್ನು ಮಾಡಲಿಕ್ಕಾಗಿ ನಿನ್ನ ಕಣ್ಣೆದುರು ಬಂದು ನಿಂತಿದ್ದೇನೆ.'' ಶ್ರೀ ವಿಷ್ಣುವಿನ ಈ ಮಧುರ ಮಾತುಗಳನ್ನು ಕೇಳಿ ಮಹಾದೇವರು ಸಂತೋಷ ಭರಿತರಾಗಿ ಮಾತನಾಡಿದರು.

ಮಹಾದೇವ :- ನನ್ನ ಒಡೆಯನಾದ ದೇವಾ, ನಾನು ಸತ್ಯವನ್ನೇ ನುಡಿಯುತ್ತೇನೆ ಕೇಳು. ಪ್ರಭು ನಾರಾಯಣನ ಹೊರತಾಗಿ ಹೀಗೆ ಉಪಕಾರ ಮಾಡುವವರು ಯಾರು ? ಎಲ್ಲ ಲೋಕಗಳಲ್ಲಿಯು ನಿಜವಾದ ಮಹೇಶ್ವರನೆಂದರೆ ನೀನೇ.

**''ಹೇ ವಿಷ್ಣೋ ತ್ವತ್ಪ್ರಸಾದೇನ ದೇವ ತ್ವಾಂ ಚೈವ ಮಾಧವ ।**
**ಲಬ್ಧೋ ಯೋಗಶ್ಚ ಸಾಂಖ್ಯಂ ಚ ಜಾತೋಸ್ಮಿ ವಿಗತಜ್ವರಃ ॥**
**ತ್ವತ್ಪ್ರಸಾದೇನ ಜಾತೋಽಸ್ಮಿ ಪೂರ್ಣಾಂಬುರಿವ ಸಾಗರಃ ।**
**ಅಹಂ ತ್ವಾಂ ತು ವಿಜಾನಾಮಿ ಮಾಂ ತ್ವಂ ಜಾನಾಸಿ ಮಾಧವ ।**
**ಆವಯೋರಂತರಂ ಕೋಽಪಿ ನ ಪಶ್ಯತಿ ಜನಾರ್ದನ**
**ಬ್ರಹ್ಮಾಣಂ ತು ವಿಜಾನಾತಿ ನಾವಯೋರಂತರೇಣ ಹಿ ॥**

ಭಗವನ್, ವಿಷ್ಣೋ, ನಾನು ನಿನ್ನನ್ನು ಅರಿತದ್ದು, ಈಗ ಕಣ್ಣಿನಿಂದ ಕಂಡದ್ದು ನಿನ್ನ ಪ್ರಸಾದದಿಂದಲೆ. ಮತ್ತು ನಿನ್ನ ದಯೆಯಿಂದ ತಾಪತ್ರಯಂದರೆಗಳೆಲ್ಲ ದೂರಾಗಿವೆ. ನಿನ್ನ ದಯೆಯಿಂದಲೇ ನಾನು ದಿವ್ಯ ಜ್ಞಾನವನ್ನು ಕಾರ್ಯಕೌಶಲ್ಯಗಳನ್ನು ಪಡೆದನು. ನಾನು ದೇವತ್ವನ್ನು ಪಡೆದದ್ದು ನಿನ್ನ ಪ್ರಸಾದ ಬಲದಿಂದ. ನಿನ್ನ ಅನುಗ್ರಹದಿಂದ ನಾನು ಸಮುದ್ರನಂತೆ ಪೂರ್ಣನಾಗಿದ್ದೇನೆ. ಆದುದರಿಂದ ಜನರು ನಮ್ಮಲ್ಲಿಯ ಅಂತರವನ್ನೇ ಗುರುತಿಸುವದಿಲ್ಲ. ನಮ್ಮಿಬ್ಬರನ್ನು ಪರಬ್ರಹ್ಮವೆಂದೇ ತಿಳಿಯುತ್ತಾರೆ. 'ಮಾಧವ ನಿನ್ನ ಅನುಗ್ರಹದಿಂದ ನಾನು ತ್ರಿಪುರ ಸಂಹಾರವನ್ನು ಮಾಡಿದೆನು. ಆ ತ್ರಿಪುರ ಸಂಹಾರ ಗೈಯುವಾಗ ಅನೇಕ ನಿರಪರಾಧಿಗಳಾದ ರಾಕ್ಷಸರನ್ನೂ, ದಿನ ತುಂಬಿದ ಬಸುರಿನ ಹೆಣ್ಣು ಮಕ್ಕಳನ್ನೂ, ಹೆದರಿ ದಿಕ್ಕು ದಿಕ್ಕಿಗೆ ಓಡುವ ಚಿಕ್ಕ ಮಕ್ಕಳನ್ನೂ, ಸಾಯಲಾದ ಮುದಕರನ್ನೂ ಕೊಂದು ಹಾಕಿದೆ. ಆ ಪಾಪದಿಂದ ನನ್ನ ತಪಸ್ಸು, ಶಕ್ತಿ, ಮಾಯೆ,

ಮಹಿಮೆ, ಐಶ್ವರ್ಯ, ಎಲ್ಲವೂ ಹಾಳಾಗಿ ಹೋಗಿದೆ. ಈಗ ನಾನು ಏನು ಮಾಡಬೇಕು ? ನನ್ನ ಪಾಪವು ಪರಿಹಾರವಾಗಲು ಉಪಾಯವೇನು ? ವಿಷ್ಣು ಭಗವಂತನೇ, ನನ್ನ ಪಾಪ ಪರಿಹಾರಕವಾದ ಯಾವುದಾರೂ ಒಂದು ದಾರಿಯನ್ನು ತೋರಿಸು.'' ಹೀಗೆ ಚಿಂತ್ರಾಕ್ರಾಂತನಾಗಿ ನಿಂತ ಆ ಚಂದ್ರ ಮೌಳಿಗೆ ನಾನು ಹೇಳಿದೆ-

''ಶಂಕರಾ, ನೀನು ಕಪಾಲ ಮಾಲೆಯನ್ನು ಧರಿಸಿ ಸ್ಮಶಾನದಲ್ಲಿ ವಾಸಮಾಡು. ಯಾವ ಆಶೆ ಇಲ್ಲದವರಿಗೆ ಮತ್ತು ನಿಜವಾದ ವಿರಕ್ತರಾದ ಭಗವದ್‌ಭಕ್ತರಿಗೆ ಸ್ಮಶಾನವೇನು? ಮನೆಯೇನು? ಎಲ್ಲವೂ ಅಷ್ಟೇ. ಆ ಪಿತೃಭೂಮಿಯಲ್ಲಿ ತಲೆ ಬುರಡಿಯನ್ನು ಹಿಡಿದುಕೊಂಡು ವ್ರತ ಬದ್ಧನಾಗಿ ಒಂದು ಸಾವಿರ ವರ್ಷ ನೀನು ವಾಸ ಮಾಡಿ ಅನಂತರ ಗೌತಮ ಋಷಿಗಳ ಆಶ್ರಮಕ್ಕೆ ಹೋಗು. ಗೌತಮನ ಆಶ್ರಮದಲ್ಲಿ ಕೆಲವು ದಿನ ಇದ್ದ ಬಳಿಕ ಆ ಮಹಾಮುನಿಯ ಅನುಗ್ರಹದಿಂದ ನಿನ್ನ ಪಾಪವೆಲ್ಲವೂ ತೊಳೆದು ಹೋಗುತ್ತದೆ. ಆ ಮಹಾಮುನಿಯ ಪ್ರಸಾದದಿಂದ ನಿನಗೆ ದಿವ್ಯವಾದ ಆತ್ಮಜ್ಞಾನವು ಉಂಟಾಗುತ್ತದೆ. ನಿನ್ನ ತಲೆಯ ಮೇಲಿರುವ ಆ ಕಪಾಲವನ್ನು ಕೆಳಗೆ ಬೀಳಿಸಲು ಆ ಗೌತಮ ಮುನಿಯು ಸಮರ್ಥನಾಗಿದ್ದಾನೆ. ಆ ಗೌತಮನಿಗೆ ಇಷ್ಟೆಲ್ಲ ಸಿದ್ಧಿ ಸಾಮರ್ಥ್ಯಗಳು ಬಂದಿದ್ದು ನಿನ್ನ ಪರಮಾನುಗ್ರಹದ ಫಲವೇ ಸರಿ.''

ಮಹಾದೇವನಿಗೆ ಹೀಗೆ ವರವನ್ನು ಕೊಟ್ಟು ನಾನು ಅಲ್ಲಿಯೇ ಅದೃಶ್ಯನಾದೆನು. ರುದ್ರನು ಮಾತ್ರ ಆ ಸ್ಮಶಾನದಲ್ಲಿಯೇ ಅಲೆಯುತ್ತಿದ್ದಾನೆ. ಸಮರ್ಥನಾದ ಅವನಿಗೆ ಆ ಮಂಗಳವಾದ ಸ್ಮಶಾನ ವಾಸವು ಯಾವದೇ ಅಶುದ್ಧಿ ಅಪಕರ್ಷಗಳನ್ನು ತರುವದಿಲ್ಲ. ಆದರೆ ಅತ್ಯಂತ ಜುಗುಪ್ಸಿತವೂ ಅಪವಿತ್ರವೂ ಆದ ಆ ಸ್ಮಶಾನಕ್ಕೆ ಬೇರೆ ಜನರು ಹೋದರೆ ಅವರಿಗೆ ಮೈಲಿಗೆಯಾಗುವದು ಖಂಡಿತ. ಅಲ್ಲಿಗೆ ಹೋಗಿ ಬಂದು ವಿಧಿ ಪೂರ್ವಕವಾಗಿ ಸ್ನಾನ, ಪಂಚಗವ್ಯ, ಯಜ್ಞೋಪವೀತಧಾರಣಾದಿಗಳಿಂದ ಪರಿಶುದ್ಧರಾಗದೆ ದೇವತಾ ಕಾರ್ಯಗಳನ್ನು ಮಾಡಿದರೆ ಮಹಾಪಾಪವು ಉಂಟು. ಆ ಘೋರಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ ಕೇಳು- ಹದಿನೈದು ದಿನ ಕಾಲಭಾಗ ಆಹಾರವನ್ನು ಮಾತ್ರ ಸ್ವೀಕರಿಸುತ್ತ ಒಂದೇ ಬಟ್ಟೆಯನ್ನು ಧರಿಸಿ ದರ್ಭೆಯ ಹಾಸಿಗೆಯಲ್ಲಿ ಹೊದ್ದುಕೊಳ್ಳದೇ ಮಲಗಬೇಕು. ಹದಿನಾರನೇ ದಿನ ಪಂಚಗವ್ಯ ಪ್ರಾಶನ ಮಾಡಿ ದೇವರನ್ನು ಧ್ಯಾನ ಮಾಡಬೇಕು. ಇದರಿಂದ ಆತನ ಪಾಪ ಪರಿಹಾರವಾಗುವದು.

ಭೂದೇವಿ, ತಿಂಡಿ ತೀರ್ಥ ಹಿಂಡಿ, ಉಂಡಿ, ಏನನ್ನಾದರೂ ತಿಂದು ದೇವರ ಪೂಜೆ ಮಾಡಿದವನಿಗೆ ಮಹಾ ಪಾಪ ಬರುವದು. ಅದರ ಪರಿಹಾರಕ್ಕಾಗಿ ಒಂದು ದಿನ ಜವೆ ಗೋದಿಯ ಹಿಟ್ಟನ್ನು ತಿಂದು, ಗೋಮೂತ್ರವನ್ನು ಕುಡಿದು, ಇಡೀ ರಾತ್ರಿ ಬಟ್ಟ ಬಯಲಿನಲ್ಲಿ ಬಟ್ಟೆಯನ್ನು ಹೊದ್ದುಕೊಳ್ಳದೆ ಮಲಗದೆ ಕುಳಿತು ದೇವರ ಧ್ಯಾನ ಮಾಡಬೇಕು. ಹಂದಿಯ ಮಾಂಸವನ್ನು ದೇವರಿಗೆ ನೈವೇದ್ಯ ತೋರಿಸಿದರೆ ಮಹಾ ಅನರ್ಥವೆಂದು ಶಾಸ್ತ್ರದಲ್ಲಿ ಹೇಳಿದ್ದಾರೆ. ಪಾಪ ಪರಿಹಾರಕ್ಕಾಗಿ ಏಳು ದಿನ ಹಣ್ಣು ಕಾಯಿಗಳನ್ನು, ಮತ್ತೆ ಏಳು ದಿನ ಗಡ್ಡೆ ಗೆಣಸುಗಳನ್ನು, ಮತ್ತೊಂದು ವಾರ ಪಾಯಸವನ್ನು, ಮುಂದೆ ಒಂದು ವಾರ ಮಜ್ಜಿಗೆಯನ್ನು, ಕೊನೆಗೆ ಒಂದು ವಾರ ಗೋದಿಯ ಸಜ್ಜಗಿಯನ್ನೂ ತಿಂದು

ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಶೆರೆಯನ್ನು ಕುಡಿದು ನನ್ನ ಪೂಜೆ ಮಾಡಿದರೆ ಹತ್ತು ಸಾವಿರ ವರ್ಷ ಪಶುವಾಗಿ ಜೀವಿಸಬೇಕಾಗುವದು. ಅದಕ್ಕೆ ಪ್ರಾಯಶ್ಚಿತ್ತವೆಂದರೆ ಮಾಘ ಶುಕ್ಲ ದ್ವಾದಶಿ ದಿನ ತನ್ನ ಆಹಾರದ ಎಂಟನೇ ಒಂದು ಅಂಶದಷ್ಟು ಮಾತ್ರ ಊಟ ಮಾಡಿ ಜಲಾಶಯಕ್ಕೆ ಹೋಗಿ ಬೆಳಗಾಗುವವರೆಗೂ ದೇವರ ಧ್ಯಾನ ಮಾಡುತ್ತ ಕುಳಿತುಕೊಳ್ಳಬೇಕು. ಪ್ರಾತಃಕಾಲದಲ್ಲಿ ಸುರ್ಯೋದಯವಾದ ಬಳಿಕ ಪಂಚಗವ್ಯ ಪ್ರಾಶನ ಮಾಡಿದ ನಂತರ ಧರ್ಮಕಾರ್ಯಗಳಿಗೆ ಶುದ್ಧಿಯುಂಟಾಗುವದು.

ದೇವರಿಗೆ ಸಮರ್ಪಣ ಮಾಡದೆ ಅನ್ನವನ್ನು ಊಟ ಮಾಡಿದರೆ ಅವನಿಗೆ ತನ್ನ ಪಿತೃಗಳನ್ನು ಹದಿನೈದು ವರ್ಷ ಉಪವಾಸ ಹಾಕಿದ ಪಾಪವು ಬರುವದು. ಆ ಪಾಪ ಪರಿಹಾರಕ್ಕಾಗಿ ಮೂರು ದಿನ ಉಪವಾಸ ಮಾಡಿ, ಮತ್ತೆ ಮೂರು ದಿನ ರಾತ್ರಿ ಬಟಾ ಬಯಲಿನಲ್ಲಿ ಹಾಸಿಗೆ ಹೊದಿಕೆಗಳಿಲ್ಲದೆ ಮಲಗಬೇಕು. ನಾಲ್ಕನೇ ದಿನ ಬೆಳಿಗ್ಗೆ ಸ್ನಾನ ಮಾಡಿ ಪಂಚಗವ್ಯವನ್ನು ತೆಗೆದುಕೊಳ್ಳಬೇಕು. ನನಗೆ ಗಂಧ ಪುಷ್ಪಗಳನ್ನು ಅರ್ಪಿಸದೆ ತಾವೇ ಅವುಗಳನ್ನು ಉಪಯೋಗ ಮಾಡಿಕೊಂಡರೆ ಆ ಮನುಷ್ಯನು ಮುಂದಿನ ಜನ್ಮದಲ್ಲಿ ರಾಕ್ಷಸನಾಗಿ ಜನಿಸುವನು. ಅನಂತರ ಮಾನವನಾಗಿ ಕಮ್ಮಾರರ ಮನೆಯಲ್ಲಿ ಕಬ್ಬಿಣದ ಕೆಲಸ ಮಾಡುವ ಕೂಲಿಯ ಆಳಾಗಿ ದುಡಿಯಬೇಕಾಗುವದು.

ಈ ಪಾಪಕ್ಕೆ ಮೂರು ತಿಂಗಳು ದಶಮಿ ಏಕಾದಶಿ ಉಪವಾಸ ಮಾಡಿ ದ್ವಾದಶಿ ದಿನ ತನ್ನ ಆಹಾರದ ಎಂಟನೆಯ ಒಂದು ಭಾಗದಷ್ಟು ಮಾತ್ರ ಊಟ ಮಾಡಿ ಮರುದಿನ ಪಂಚಗವ್ಯ ಪ್ರಾಶನಮಾಡಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಪಾದರಕ್ಷೆಗಳನ್ನು ಹಾಕಿಕೊಂಡು ದೇವಾಲಯದಲ್ಲಿ ಪ್ರವೇಶ ಮಾಡುವವನು ಮೂವತ್ತು ವರ್ಷ ಸಮಗಾರನಾಗಿ ಮುಂದೆ ಹಂದಿ, ನಾಯಿಯಾಗಿ ಹುಟ್ಟುವನು. ಈ ಪಾಪ ಪರಿಹಾರಕ್ಕಾಗಿ ಏಳುದಿನ ಜವೆಗೋದಿಯ ಆಹಾರ, ಏಳು ದಿನ ಕಂದಮೂಲ ಫಲಗಳನ್ನು ತಿಂದಿದ್ದು ದೇವರನ್ನು ಪ್ರಾರ್ಥಿಸಬೇಕು. ಗಂಟೆ, ಜಾಗಟೆ, ನಗಾರಿ ಮುಂತಾದ ಶಬ್ದಗಳಿಲ್ಲದೇ ದೇವರ ಪೂಜೆ ಮಾಡುವವನು ಮುಂದಿನ ಜನ್ಮದಲ್ಲಿ ಮೂಕನಾಗಿ ಹುಟ್ಟುವನು. ಈ ಪಾಪ ಪರಿಹಾರಕ್ಕಾಗಿ ಯಾವದಾದರೂ ಒಂದು ಮಾಸದ ಶುಕ್ಲಪಕ್ಷದ ದ್ವಾದಶಿಯ ದಿನ ರಾತ್ರಿ ಕಾಲದಲ್ಲಿ ಭೂಮಿಯನ್ನು ಹಾಸಿಕೊಂಡು ಆಕಾಶವನ್ನೇ ಹೊದ್ದುಕೊಂಡು ಮಲಗಿ ದೇವರ ಧ್ಯಾನ ಮಾಡಿದರೆ ಆ ಪಾಪವು ಪರಿಹಾರವಾಗುವದು.

ಸ್ನಾನಮಾಡಿ ದೇವರ ಪೂಜೆಗೆ ಕುಳಿತಾಗ ಅಜೀರ್ಣದಿಂದ ತೇಗ, ಓಕರಿಕೆ, ಹುಳಿ ಸುಡುವದು ಮುಂತಾದವುಗಳು ಆದರೆ ಮತ್ತೆ ಸ್ನಾನಮಾಡಿ ಪೂಜೆಮಾಡಬೇಕು. ಹಾಗೇ ಅಜೀರ್ಣದ ವಿಕಾರದಲ್ಲಿಯೇ ಪೂಜೆ ಮಾಡಿದರೆ ಮುಂದಿನ ಜನ್ಮಗಳಲ್ಲಿ ನಾಯಿ, ಕೋತಿ, ಹೋತು, ನರಿ, ಕುರುಡ, ಇಲಿ, ಮುಂತಾದವುಗಳಾಗಿ ಹುಟ್ಟುವನು. ಈ ಪಾಪಕ್ಕೆ ಮೂರು ದಿನ ಜವೆಗೋದಿ, ಗಡ್ಡೆ ಗೆಣಸು,ಪಾಯಸ ಭಕ್ಷಣ ಮಾಡಿ, ಇದ್ದು ಅನಂತರ ಮೂರು ದಿನ ಬರೇ ಹುರಿದ ಹಿಟ್ಟನ್ನು ತಿಂದು, ತದನಂತರ ಮೂರು ದಿನ ಪೂರ್ಣ ಉಪವಾಸಮಾಡಿ, ಮೂರು ರಾತ್ರಿ ಬಟಾ ಬಯಲಿನಲ್ಲಿ ಮಲಗಿ, ಕೊನೆಯ ದಿನ ಸ್ನಾನ ಮಾಡಿ ಪಂಚಗವ್ಯ ಪ್ರಾಶನ ಮಾಡಬೇಕು. ಹೀಗೆ ಅಪರಾಧಗಳಿಗೆಲ್ಲ

ಸರಿಯಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೆ ಮುಂದೆ ಆ ಮನುಷ್ಯನು ದೇವರ ನಿರಂತರ ಧ್ಯಾನ ಮಾಡಿದರೆ ಅವನಿಗೆ ವೈಕುಂಠ ಲೋಕಪ್ರಾಪ್ತಿ ಯಾಗುವದು. ಅವನ ಹಿಂದುಮುಂದಿನ ಹತ್ತು ತಲೆಮಾರಿನವರೆಲ್ಲರೂ ಉದ್ಧಾರವಾಗುವರು.

ವರಾಹ ಪುರಾಣದಲ್ಲಿ ನೂರ ಹತ್ತನೇ ಅಧ್ಯಾಯ ಮುಗಿದುದು



## ವರಾಹ ಕ್ಷೇತ್ರದ ಆಶ್ಚರ್ಯಕರ ಮಹಿಮೆ ಅಧ್ಯಾಯ - ೧೧೧

**ಸೂತ :-** ಭೂದೇವಿಗೆ ವರಾಹದೇವರಿಂದ ಸರ್ವಪಾಪಗಳ ಪ್ರಾಯಶ್ಚಿತ್ತ ವಿಧಾನವನ್ನು ಕೇಳಿ ಸಂತೋಷವಾಯಿತು. '' ಕುಬ್ಜಾಮ್ರಕ ಕ್ಷೇತ್ರದಲ್ಲಿ ಮಾಡಬೇಕಾದ ವ್ರತವು ಯಾವದು ? ಭಕ್ತರಿಗೆ ಸುಖಕರವಾದ ಕ್ಷೇತ್ರವು ಯಾವುದು ? '' ಎಂದು ಅವಳು ಮತ್ತೆ ಆ ವರಾಹಸ್ವಾಮಿಗೆ ಪ್ರಶ್ನೆ ಮಾಡಿದಳು. ಆಗ ವರಾಹ ದೇವರು ಇಂತು ನುಡಿದರು-

''ಬದರೀ ಕ್ಷೇತ್ರ ಮತ್ತು ಕುಬ್ಜಾಮ್ರಕ ಕ್ಷೇತ್ರ ಹಾಗೂ ವರಾಹ ಕ್ಷೇತ್ರ ಇವು ಮೂರೂ ಮಹಾಕ್ಷೇತ್ರಗಳೆನಿಸುತ್ತವೆ. ಇವುಗಳಲ್ಲಿ ನನ್ನ ಹೆಸರಿನ ಈ ವರಾಹ ಕ್ಷೇತ್ರಕ್ಕೆ ಬಂದು ವರಾಹ ರೂಪಿಯಾದ ನನ್ನ ಮುಖದರ್ಶನವನ್ನು ಮಾಡಿಕೊಂಡರೆ ಅವನು ಮುಂದಿನ ಏಳು ಜನ್ಮಗಳಲ್ಲಿ ಧನಧಾನ್ಯ ಸಮೃದ್ಧಿಯುಳ್ಳ ದೊಡ್ಡ ವಂಶದಲ್ಲಿ ಹುಟ್ಟುತ್ತಾನೆ. ಈ ಕ್ಷೇತ್ರದಲ್ಲಿ ದೇಹತ್ಯಾಗ ಮಾಡಿದವರ ಹಿಂದುಮುಂದಿನ ಹತ್ತು ತಲೆ ಮಾರಿನವರು ಉದ್ಧಾರ ಹೊಂದುವರು.

ಈ ವರಾಹ ಕ್ಷೇತ್ರದಲ್ಲಿದ್ದ ಚಕ್ರತೀರ್ಥದಲ್ಲಿ ವೈಶಾಖ ಶುದ್ಧ ಏಕಾದಶಿಯ ದಿನ ಉಪವಾಸ ಮಾಡಿ ದ್ವಾದಶಿ ದಿನ ಸ್ನಾನಮಾಡಿ ನನ್ನ ದರ್ಶನವನ್ನು ತೆಗೆದುಕೊಂಡ ಮನುಷ್ಯನು ಮುಂದಿನ ಹತ್ತು ಸಹಸ್ರ ವರ್ಷ ಅನೇಕ ಜನ್ಮಗಳಲ್ಲಿ ಸಿರಿವಂತನಾಗಿ ಧನಧಾನ್ಯ ಸಮೃದ್ಧಿಯಿಂದ ಯಜ್ಞಯಾಗದ ಪುಣ್ಯಕರ್ಮಗಳನ್ನು ಆಚರಿಸುತ್ತ ನನ್ನ ಭಕ್ತನಾಗಿ ಸುಖದಿಂದ ಬಾಳುವನು. ಈ ಚಕ್ರತೀರ್ಥದಲ್ಲಿ ಪ್ರಾಣ ಪರಿತ್ಯಾಗ ಮಾಡಿದ ಪುಣ್ಯ ಪುರುಷನು ಸಾರೂಪ್ಯ ಮೋಕ್ಷವನ್ನು ಹೊಂದುತ್ತಾನೆ.

ಅದೇ ಸೌಕರ(ವರಾಹ) ಕ್ಷೇತ್ರದಲ್ಲಿಯ ಸೋಮತೀರ್ಥದಲ್ಲಿ ಹಿಂದೆ ಚಂದ್ರನು ನನ್ನನ್ನು ಕುರಿತು ತಪಸ್ಸನ್ನು ಆಚರಿಸಿದನು. ಅವನ ತಪಕ್ಕೆ ಮೆಚ್ಚಿ ನಾನು ಪ್ರತ್ಯಕ್ಷನಾಗಿ ಅವನ ಎದುರು ಬಂದು ನಿಂತಾಗ ನನ್ನ ಶರೀರದ ಕಿರಣ ಕಾಂತಿಗಳಿಂದ ಅವನ ಕಣ್ಣು ಕುಕ್ಕಿ ಹೋದವು. ನನ್ನ ಚೆಲುವಿಕೆಯನ್ನು ಕಂಡು ಆ ಚಂದ್ರಾಮನ ಮನಸ್ಸು ಮಾರುಹೋಯಿತು. ನನ್ನ ತೇಜೋದೀಪ್ತಿಯಿಂದ ಚಕಿತ ಚಮಚತ್ಕೃತನಾಗಿ ಚಂದ್ರನು ತನ್ನ ಚಕ್ಷುಸ್ಸಿನಿಂದ ನೋಡಲಿಕ್ಕಾಗದೆ ಕಣ್ಣು ಮುಚ್ಚಿ ಕೈ ಮುಗಿದು ಮೂಕಮುಗ್ಧನಾಗಿ ನಿಂತುಕೊಂಡನು. ಆಗ ಪ್ರಸನ್ನನಾದ ನಾನು ಅವನಿಗೆ ಬೇಕಾದ ವರಬೇಡು ಎಂದು ಹೇಳಿದೆ. ಅದನ್ನು ಕೇಳಿ ಚಂದ್ರನು ಸಂತಸ ದುಂಬಿ ಮಧುರ ಧ್ವನಿಯಲ್ಲಿ ನನ್ನನ್ನು ಬಿನ್ನವಿಸಿದನು-

"ಪ್ರಭೋ, ನೀನು ನನಗೆ ನಿಜವಾಗಿಯೂ ಪ್ರಸನ್ನನಾಗಿದ್ದರೆ ನನಗೆ ಕೆಲವು ವರಗಳನ್ನು ದಯಪಾಲಿಸು. ಮೊದಲನೆಯದಾಗಿ ಈ ಪ್ರಪಂಚವು ಇರುವವರೆಗೂ ನನಗೆ ನಿನ್ನಲ್ಲಿ ವಿಶ್ವಾಸವು ಉಳಿಯಲಿ ಭಕ್ತಿಯು ಬೆಳೆಯಲಿ. ಎರಡನೆಯದಾಗಿ ನೀನು ನನಗೆ ದಯಪಾಲಿಸಿರುವ ಕಾಂತಿ ಕಮನೀಯವಾದ ಶಾಂತ ತೇಜೋ ರೂಪವು ಸಪ್ತ ದ್ವೀಪಗಳಲ್ಲಿಯೂ ತನ್ನ ಹೊಂಬೆಳಗನ್ನು ಹರಡಿ ಬೆಳಗುವಂತಾಗಲಿ. ಬ್ರಾಹ್ಮಣರು ಯಜ್ಞಯಾಗಗಳಲ್ಲಿ ಪಾನ ಪಾಡುವ ಅಮೃತ ಲತೆಯ ರಸಕ್ಕೆ ಸೋಮ ಎಂಬ ನನ್ನ ಹೆಸರು ಬರಲಿ. ಅಮಾವಾಸ್ಯೆಯದಿನ ನಾನು ಕ್ಷೀಣನಾದಾಗ ಪಿತೃಗಳ ಪಿಂಡ ಪ್ರದಾನ ಕಾರ್ಯವು ವಿಧಿಪೂರ್ವಕವಾಗಿ ನೆರವೇರಲಿ. ನನಗೆ ಎಂದೂ ಅಧರ್ಮದಲ್ಲಿ ಆಸಕ್ತಿಯು ಹುಟ್ಟದಿರಲಿ ಮತ್ತು ಎಲ್ಲ ಔಷಧಿ ವನಸ್ಪತಿಗಳಿಗೂ ನಾನೇ ಅಧಿಪತಿಯಾಗುವಂತೆ ಮಾಡು. ನಾನು ಜನರಿಗೆಲ್ಲ ಶಾಂತ ಸೌಮ್ಯ ಸ್ವರೂಪದಿಂದ ಅಂದವಾಗಿ ಕಾಣುವಂತೆ ಮಾಡು"

ಚಂದ್ರನ ಈ ಬಿನ್ನಪವನ್ನು ಆಲಿಸಿದ ನಾನು ಅವನಿಗೆ ಅವನ ಕಾಮಿತಾರ್ಥವನ್ನೆಲ್ಲ ಕರುಣಿಸಿಕೊಟ್ಟು ಕೂಡಲೇ ಅಲ್ಲಿಂದ ಕಣ್ಮರೆಯಾದೆನು. ಮುಂದೆ ಚಂದ್ರನು ತಪಸ್ಸಿದ್ಧಿಯನ್ನು ಪಡೆದು ತನ್ನ ತಾಣಕ್ಕೆ ತೆರಳಿದನು. ಈ ಪವಿತ್ರವಾದ ಸೋಮತೀರ್ಥದಲ್ಲಿ ಸ್ನಾನ ಮಾಡಿ ತನ್ನ ಆಹಾರದ ಅಷ್ಟಮಾಂಶ ಊಟವನ್ನು ಮಾಡುತ್ತ ನನ್ನ ಸೇವೆಯನ್ನು ಮಾಡುವ ಮನುಷ್ಯನು ಮೂವತ್ತು ಮೂರು ಸಾವಿರ ವರ್ಷ ಕಾಲದಷ್ಟು ಸುದೀರ್ಘ ಅವಧಿಯಲ್ಲಿ ವೇದವೇದಾಂತ ವಿದ್ವಾಂಸನಾದ ಬ್ರಾಹ್ಮಣನಾಗಿ ಹುಟ್ಟಿ ಭಗವದ್ಭಕ್ತನಾಗಿ ಬಾಳುವೆ ಮಾಡುವನು. ಈ ಸೋಮ ತೀರ್ಥದ ವೈಶಿಷ್ಟ್ಯವೆಂದರೆ ವೈಶಾಖ ಶುದ್ಧ ದ್ವಾದಶಿಯ ರಾತ್ರಿ ಕತ್ತಲೆಯಾದಾಗ ಚಂದ್ರನಿಗೆ ಸಮಾನವಾದ ಕಾಂತಿಯಿಂದ ಭೂಮಿಯು ಕಾಣಿಸುತ್ತದೆ. ತಿಂಗಳಿನ ಬೆಳಕು ತೂರಿ ಬರುತ್ತದೆ. ಆದರೆ ಚಂದ್ರನು ಮಾತ್ರ ಅಲ್ಲಿ ಕಾಣಿಸುವದಿಲ್ಲ. ಇದೇ ಆ ಸೋಮ ತೀರ್ಥದ ಗುರುತು.

ಆ ಸೋಮತೀರ್ಥದ ಮಹಾಮಹಿಮೆಯನ್ನು ಹೇಳುತ್ತೇನೆ ಕೇಳು- ಹಿಂದೆ ಕೃತಯುಗವು ಕಳೆದು ತ್ರೇತಾಯುಗ ಪ್ರಾರಂಭವಾದಾಗ ಕಾಂಪಿಲ್ಯ ದೇಶದಲ್ಲಿ ಬ್ರಹ್ಮದತ್ತ ಎಂಬ ರಾಜನು ರಾಜ್ಯವಾಳುತ್ತಿದ್ದನು. ಸ್ವಧರ್ಮನಿಷ್ಠನಾದ ಆ ಬ್ರಹ್ಮದತ್ತನಿಗೆ ಸೋಮದತ್ತ ಎಂಬ ಶೂರ ಸುಂದರನಾದ ಮಗನಿದ್ದನು.

ಅವನು ಒಂದು ದಿನ ತಂದೆಯ ಆಜ್ಞೆಯಂತೆ ಮೃಗಯಾ ವಿಹಾರಕ್ಕಾಗಿ ಅರಣ್ಯಕ್ಕೆ ಹೋಗಿದ್ದನು. ಹುಲಿ, ಸಿಂಹ, ಮುಂತಾದ ಕ್ರೂರ ಪ್ರಾಣಿಗಳಿಂದ ತುಂಬಿದ ಆ ಅರಣ್ಯದಲ್ಲಿ ಸೋಮದತ್ತನಿಗೆ ಪಿತೃಕಾರ್ಯಕ್ಕೆ ಯೋಗ್ಯವಾದ ಮೃಗಗಳೇ ದೊರಕಲಿಲ್ಲ. ಹಾಗೇ ಮೃಗವನ್ನು ಅರಸುತ್ತ ಅರಣ್ಯದಲ್ಲಿ ಸುತ್ತಾಡುತ್ತಿದ್ದ ಆ ಕಾಂಪಿಲ್ಯ ರಾಜಕುಮಾರನ ಕಣ್ಣಿಗೆ ಒಂದು ಹೆಣ್ಣು ನರಿಯು ಕಾಣಿಸಿಕೊಂಡಿತು. ಕೂಡಲೇ ಸೋಮದತ್ತನು ಗುರಿಯಿಟ್ಟು ಆ ನರಿಯ ನಡುನೆತ್ತಿಯ ಮೇಲೆ ಬಾಣದಿಂದ ಹೊಡೆದನು. ಬಾಣ ಪ್ರಹಾರದಿಂದ ಕುಸಿದು ಕಳವಳಗೊಂಡ ಆ ನರಿಯು ಆ ಭಯಂಕರವಾದ ನೋವನ್ನು ತಾಳಲಾರದೇ ಅತ್ತಿತ್ತ ಹರಿದಾಡುತ್ತ ಸೋಮ ತೀರ್ಥದ ಬಳಿಗೆ ಬಂದಿತು. ಸಾಯುವ ಸಂಕಟದಿಂದ ಬಾಯಿಬಿಡುತ್ತಿರುವ ಆ ನರಿಯು ಬಾಯಾರಿ ಬಸವಳಿದು ಸೋಮ

ತೀರ್ಥದಲ್ಲಿಯ ನೀರನ್ನು ಬಂದು ಕುಡಿದು ಬಿಸಿಲಿನ ಬೇಗೆಯನ್ನು ತಾಳಲಾರದೇ ಆ ಸೋಮ ತೀರ್ಥದ ದಂಡೆಯ ಮೇಲಿರುವ ತಾರೆಯ ಮರದಡಿಯಲ್ಲಿ ಬಂದು ಬಿದ್ದಿತು. ಅಲ್ಲಿಯೇ ಅದರ ಪ್ರಾಣಹೋಯಿತು. ಅನಂತರ ರಾಜಕುಮಾರನಾದ ಸೋಮದತ್ತನು ಹಸಿವೆಯಿಂದ ಕಸಿವಿಸಿಗೊಂಡು ಗೃಧ್ರವಟ ಎಂಬ ತೀರ್ಥಕ್ಕೆ ಹೋಗಿ ಅಲ್ಲಿ ವಿಶ್ರಮಿಸಿಗೊಂಡನು. ಅವನು ವಿಶ್ರಾಂತಿ ಹೊಂದುತ್ತಲಿದ್ದಾಗ ಆ ಆಲದ ಮರದ ಟೊಂಗೆಯ ಮೇಲೆ ಒಂದು ಹದ್ದು ಕುಳಿತದ್ದು ಅವನಿಗೆ ಕಂಡಿತು. ಕೂಡಲೇ ಸೋಮದತ್ತನು ಬಾಣ ಹೊಡೆದು ಆ ಹದ್ದನ್ನು ಕೆಳಗೆ ಬೀಳಿಸಿದನು. ಅವನ ಬಾಣ ಪ್ರಹಾರದಿಂದ ಆ ಹದ್ದಿನ ಎದೆ ಸೀಳಿ ಅದು ನೆಲಕ್ಕೆ ಬಿದ್ದು ಪ್ರಾಣನೀಗಿತು. ವಟ ವೃಕ್ಷದ ಕೆಳಗೆ ಬಿದ್ದ ಆ ಪಕ್ಷಿಯನ್ನು ಕಂಡು ರಾಜಕುಮಾರನಿಗೆ ಸಂತೋಷ ವಾಯಿತು. ಅವನು ಆ ಹಕ್ಕಿಯ ರೆಕ್ಕೆಗಳನ್ನು ಕಿತ್ತಿ ತನ್ನ ಬಾಣಗಳಿಗೆ ಗರಿಗಳಾಗಿ ಹಚ್ಚಲು ಉಪಯೋಗವಾಗುತ್ತದೆ ಎಂದು ತನ್ನೊಡನೆ ಮನೆಗೆ ತೆಗೆದುಕೊಂಡು ನಡೆದನು.

ಹೀಗೆ ಆ ಗೃಧ್ರವಟ ತೀರ್ಥದ ದಂಡೆಯ ಮೇಲೆ ಆಲದ ಗಿಡದಡಿಯಲ್ಲಿ ಮಡಿದು ಬಿದ್ದ ಆ ಹದ್ದು ಆ ಕ್ಷೇತ್ರ ಮಹಿಮೆಯಿಂದ ಮರು ಜನ್ಮ ಪಡೆದು ಕಲಿಂಗ ದೇಶದ ಅರಸನ ಮಗನಾಗಿ ಹುಟ್ಟಿತು. ಆ ರಾಜಕುಮಾರನು ರೂಪದಿಂದ ಸುಂದರನೂ ವಿದ್ಯೆಯಿಂದ ಪಂಡಿತನೂ ತನ್ನ ಸ್ವಭಾವದಿಂದ ಪ್ರಜರಿಗೆ ಆನಂದದಾಯಕನೂ ಆಗಿದ್ದನು. ಅವನು ಕಳಿಂಗದೇಶದ ದೊರೆ ಯಾಗಿ ರಾಜ್ಯವಾಳುತ್ತಿರುವಾಗ ಎಲ್ಲ ಪ್ರಜೆಗಳ ದುಗುಡದುಮ್ಮಾನ ಗಳೆಲ್ಲ ಕಳೆದು ಎಲ್ಲರೂ ನೆಮ್ಮದಿ ನೆಚ್ಚಿಕೆಯಿಂದ ಸಂತಸದ ಬದುಕನ್ನು ಬಾಳುವಂತಾಗಿತ್ತು.

ಕಾಂಪಿಲ್ಯ ದೇಶದ ನೃಪನಂದನನಾದ ಸೋಮದತ್ತನು ಸೋಮತೀರ್ಥದ ದಂಡೆಯ ಮೇಲೆ ಹನನ ಮಾಡಿದ ಹೆಣ್ಣು ನರಿಯು ಆ ಕ್ಷೇತ್ರದ ಪ್ರಭಾವದಿಂದ ಕಂಚೀ ರಾಜ್ಯದ ಮಹಾರಾಜನ ಮಗಳಾಗಿ ಹುಟ್ಟಿ ಬಂದಿತು. ಈ ಕಂಚೀ ನರೇಶನ ಕನ್ನಿಕೆಯು ರೂಪವತಿ ಇದ್ದಂತೆ ಗುಣವತಿಯೂ ಆಗಿದ್ದಳು. ಸರ್ವಾಂಗ ಸುಂದರಿಯಾದ ಅವಳಿಗೆ ಅರವತ್ತನಾಲ್ಕು ಕಲೆಗಳೂ ಚೆನ್ನಾಗಿ ಅವಗತವಾಗಿದ್ದವು. ಅವಳ ಕೊರಳದನಿ ಕೋಗಿಲೆಯಂತೆ ಇಂಪಾಗಿದ್ದಿತು. ಕಂಚೀ ಮತ್ತು ಕಳಿಂಗ ಎರಡೂ ದೇಶಗಳ ರಾಜ ಮನೆತನಗಳ ನಡುವೆ ಎಂದಿನಿಂದಲೂ ಮಧುರಸ್ನೇಹ ಸಂಬಂಧವು ಬೆಳೆದು ಬಂದಿದ್ದಿತು. ಅವರಿಬ್ಬರೂ ಸಹೋದರರಂತೆ ಒಬ್ಬರನ್ನೊಬ್ಬರು ಹೃದಯದಿಂದ ಪ್ರೀತಿಸುತ್ತಿದ್ದರು. ಅವರಿಬ್ಬರ ಮಧುರ ಮೈತ್ರಿಯು ಈಗ ವೈವಾಹಿಕ ಸಂಬಂಧದಲ್ಲಿ ಪರಿಣತಿಗೊಂಡು, ಹೊಸನೇಹ ನೆಚ್ಚಿಗೆಯ ನಂಟುತನವುಂಟಾಯಿತು.

ಕಂಚೀ ದೇಶದ ದೊರೆಯು ತನ್ನ ಮಿಂಚಿನ ಮೂರುತಿಯಂತಿದ್ದ ಮಗಳನ್ನು ಕಳಿಂಗ ದೇಶದ ರಾಜಕುಮಾರನಿಗೆ ಕೊಟ್ಟು ವಿಧಿಪೂರ್ವಕವಾಗಿ ವಿವಾಹವನ್ನು ನೆರವೇರಿಸಿದನು. ಅಳಿಯ ಮಗಳಿಗೆ ಬಗೆ ಬಗೆಯ ಮುತ್ತು ರತ್ನಗಳನ್ನೂ, ವಸ್ತ್ರ ಆಭರಣಗಳನ್ನೂ ಕೊಟ್ಟು ಆನೆ, ಕುದುರೆ ಹಾಗೂ ಹಿಂಡುವ ಎಮ್ಮೆ ಮತ್ತು ದಾಸದಾಸಿಯರುಗಳನ್ನು ಕಳಿಸಿಕೊಟ್ಟನು. ಆ ನವದಂಪತಿಗಳಿಬ್ಬರೂ ರೋಹಿಣೀ ಚಂದ್ರರಂತೆ ಅನ್ಯೋನ್ಯ ಪ್ರೀತಿಯಿಂದ ಅನೇಕ ವನೋಪವನಗಳಲ್ಲಿಯೂ, ಮಂಜುಳ ಲತಾಕುಂಜ ನಿಕುಂಜಗಳಲ್ಲಿಯೂ

ವಿಹಾರಗೈದರು. ವಿವಿಧ ವಿಲಾಸ ವಿನೋದಗಳಿಂದ ಆನಂದಿಸಿದರು. ಆವರಿಬ್ಬರು ದಂಪತಿಗಳು ಕ್ಷಣಕಾಲವೂ ಪರಸ್ಪರ ಅಗಲಿ ಇರುತ್ತಿದ್ದಿಲ್ಲ. ಒಂದು ದಿನ ಅನಿಂದ್ಯ ಸುಂದರಿಯಾದ ಆ ರಾಜ ವಧುವು ತನ್ನ ನಲುಮೆಯ ನಲ್ಲನೊಡನೆ ಸರಸ ಸಲ್ಲಾಪ ಗೈಯುತ್ತ ಬಿನ್ನವಿಸಿದಳು.- ''ಪ್ರಿಯಕರ, ನಾನು ನಿಮ್ಮನ್ನು ಒಂದು ವಿಷಯವನ್ನು ಕೇಳಲು ಬಯಸುತ್ತೇನೆ. ನನ್ನ ಮೇಲಿನ ಪ್ರೀತಿಯಿಂದ ನೀವು ನನಗೆ ಅದನ್ನು ಹೇಳಬೇಕು.''. ಆಗ ತಾವರೆಗಣ್ಣನ ಆ ತರುಣ ರಾಜ ಪುತ್ರನು ತನ್ನ ಮೆಚ್ಚಿನ ಮನದನ್ನೆಯ ಮಧುರ ನುಡಿಯನ್ನು ಕೇಳಿ ಹರುಷದುಂಬಿ ಹೇಳಿದನು.-

''ಸುಂದರಿ, ನಿನ್ನ ಮನಸ್ಸಿಗೆ ಇಷ್ಟವಾದುದನ್ನು ಕೇಳು. ನೀನು ಬೇಡಿದ್ದನ್ನು ಕೊಡುತ್ತೇನೆಂದು ನಾನು ಆಣೆ ಮಾಡಿ ಹೇಳುತ್ತೇನೆ. ನಾನೆಂದಿಗೂ ಸುಳ್ಳು ಹೇಳಿಲ್ಲ. ಬ್ರಾಹ್ಮಣರಿಗೆ ಸತ್ಯವೇ ಮೂಲ. ನಮ್ಮ ಸಾಮ್ರಾಜ್ಯದ ಸುಖ ಸಂಪದಗಳೆಲ್ಲ ಸತ್ಯದ ಮೇಲೆಯೇ ನಿಂತಿವೆ. ನಾನೆಂದಿಗೂ ಅನೃತವನ್ನು ನುಡಿದಿಲ್ಲ. ನಿನಗೆ ನಾನು ಏನು ಮಾಡಬೇಕು ಹೇಳು. ನಿನಗೆ ಆನೆ ಕುದುರೆಗಳು ಬೇಕೆ ? ರಥ ವಾಹನಗಳನ್ನು ಬಯಸುವಿಯಾ ? ಮುತ್ತು ರತ್ನಗಳನ್ನು ಬೇಡುವಿಯಾ ? ಧನ ಕನಕಗಳನ್ನು ನಿನ್ನ ಅಡಿ ಎಡೆಯಲ್ಲಿ ತಂದು ಒಟ್ಟಲೇ ! ಅಥವಾ ಶ್ರೇಷ್ಠವಾದ ರಾಜ್ಯ ಪಟ್ಟವನ್ನೇ ನಿನಗೆ ಕಟ್ಟಲೇ ?

ಕಂಚೀಶ್ವರ ಕುಮಾರಿಯು ತನ್ನ ಪತಿಯ ನುಡಿಗಳನ್ನು ಕೇಳಿ ಅವನ ಎರಡೂ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಮೆಲ್ಲುಲಿಯಿಂದ ಮಾತನಾಡಿದಳು.-

''ಪ್ರಭು, ನನಗೆ ಆನೆ, ಕುದುರೆಗಳಾಗಲಿ ರಥ ರತ್ನಗಳಾಗಲಿ ಕಡಗ ಕಂಕಣಗಳಾಗಲಿ ಬೇಕಿಲ್ಲ. ನನ್ನ ಎದೆಯರಸರಾದ ನೀವು ಸಿಂಹಾಸನದಲ್ಲಿರುವಾಗ ನನಗೇಕೆ ಬೇರೆ ಸಿಂಹಾಸನ ! ಅದಾವುದೂ ನನಗೆ ಬೇಡ. ನಿಮ್ಮ ಪೂರ್ಣ ಪ್ರೇಮದ ಸೌಭಾಗ್ಯವನ್ನು ಪಡೆದ ನನಗೆ ಯಾವ ಕೊರತೆಯೂ ಇಲ್ಲ. ಯಾವ ಅಪೇಕ್ಷೆಯೂ ಇಲ್ಲ. ಆದರೂ ತಮ್ಮಲ್ಲಿ ನನ್ನದು ಒಂದೇ ಬೇಡಿಕೆ ಇದೆ.-

''ಪ್ರತಿದಿನ ಮಧ್ಯಾಹ್ನದಲ್ಲಿ ಯಾರೂ ಕಾಣದಂತೆ ನಾನು ಒಂದು ಸ್ಥಳದಲ್ಲಿ ಮಲಗಿಕೊಳ್ಳಬೇಕು ಎಂದು ನನಗೆ ಇಚ್ಛೆ ಇದೆ. ಆಗ ನನ್ನನ್ನು ಯಾರೂ ನೋಡಕೂಡದು. ಈ ಏಕಾಂತ ಶಯನವು ಅತ್ಯಂತ ಅಲ್ಪ ಕಾಲದವರೆಗೆ ಮಾತ್ರ. ಆ ಮುಹೂರ್ತ ಕಾಲದಲ್ಲಿ ನನ್ನ ಅತ್ತೆಯಾಗಲಿ ಮಾವನಾಗಲಿ ಯಾರೂ ನೋಡಬಾರದು. ಅತಿಗಾಢವಾದ ನಿದ್ದೆಯಲ್ಲಿ ಮೈಮರೆತು ಬಿದ್ದುಕೊಂಡಿರುವ ನನ್ನನ್ನು ನೋಡಿ ಯಾರಾದರೂ ಮರಣ ಹೊಂದಿರುವಳೋ ಏನೋ ಎಂದು ಸಂಶಯ ಪಟ್ಟುಕೊಂಡಾರು. ಆದುದರಿಂದ ಯಾರಿಗೂ ಕಾಣದಂತೆ ಮಧ್ಯಾಹ್ನ ಒಂದು ಮುಹೂರ್ತಕಾಲ ಏಕಾಂತದಲ್ಲಿ ನಿದ್ರಿಸಬೇಕೆಂಬುದೇ ನನ್ನ ಹೆಬ್ಬಯಕೆಯಾಗಿದೆ.'' ತನ್ನ ಪ್ರೀತಿಯ ಪತ್ನಿಯ ಈ ಬಿನ್ನಪವನ್ನು ಕೇಳಿ ಆ ಕಳಿಂಗ ರಾಜಪುತ್ರನು ನಲುಮೆ ದುಂಬಿ ನುಡಿದನು.-

''ಅವಶ್ಯವಾಗಿ ಆಗಲಿ. ಅದಕ್ಕಾರು ಬೇಡವೆನ್ನುವರು ! ನೀನು ಸುಖವಾಗಿ ಮಲಗಿಕೋ. ನಿಶ್ಚಿಂತಳಾಗಿ ನೀನು ಮಧ್ಯಾಹ್ನ ವಿಶ್ರಾಂತಿ ಸುಖವನ್ನು ಇಂದಿನಿಂದಲೇ ಹೊಂದಬಹುದು. ಆ ಕಾಲದಲ್ಲಿ ನಿನ್ನನ್ನು ಯಾರೂ ಬಂದು ನೋಡದಂತೆ ನಾನು ವ್ಯವಸ್ಥೆ

ಮಾಡುತ್ತೇನೆ. ಹಾಸಿಗೆಯ ಮೇಲೆ ಯಾರಿಗೂ ಕಾಣದಂತೆ ಮಧ್ಯಾಹ್ನದಲ್ಲಿ ಮಲಗುವ ನಿನ್ನ ಮಹಾವ್ರತವು ನಿರ್ವಿಘ್ನವಾಗಿ ನಡೆಯುವಂತೆ ನೋಡಿಕೊಳ್ಳುವ ಭಾರವು ನನ್ನ ಮೇಲೆ ಇರಲಿ'' ಎಂದು ಆಶ್ವಾಸನೆಯನ್ನಿತ್ತು ಅದರಂತೆ ಅವಳಿಗೆ ನಡಿಸಿಕೊಟ್ಟನು.

ಹೀಗೆ ಕೆಲವು ಕಾಲ ಕಳೆದ ಬಳಿಕ ಆ ರಾಜಕುಮಾರನ ತಂದೆಯಾದ ಕಳಿಂಗ ದೇಶದ ಹಿರಿಯ ದೊರೆಯು ತನ್ನ ಮಗನಿಗೆ ರಾಜ್ಯಭಾರವನ್ನೆಲ್ಲ ವಹಿಸಿಕೊಟ್ಟು ಸಾಮ್ರಾಜ್ಯ ಸಿಂಹಾಸನದ ಮೇಲೆ ಪಟ್ಟಾಭಿಷೇಕ ಮಾಡಿ ತಾನು ಕಾಲ ಪ್ರಾಪ್ತವಾದ ಮರಣವನ್ನು ಹೊಂದಿದನು. ತಂದೆಯ ನಂತರ ಕಳಿಂಗ ಸಿಂಹಾಸನಾರೂಢನಾದ ಈ ನೃಪನಂದನನು ಪ್ರಜೆಗಳಿಗೆಲ್ಲ ಆನಂದವನ್ನು ಉಂಟುಮಾಡುತ್ತ ರಾಜ್ಯವನ್ನು ಚೆನ್ನಾಗಿ ಆಳತೊಡಗಿದನು. ಮಹಾರಾಣಿಯು ತಾನು ಗಂಡನಲ್ಲಿ ಹೇಳಿಕೊಂಡಂತೆ ಅನುದಿನವೂ ಏಕಾಂತದಲ್ಲಿ ಮಲಗಿ ನಿದ್ರೆ ಮಾಡುತ್ತಿದ್ದಳು. ಮುಂದೆ ಆ ರಾಜ ದಂಪತಿಗಳಿಗೆ ಕಲಿಂಗ ಕುಲವರ್ಧನರಾದ ಇಬ್ಬರು ಗಂಡು ಮಕ್ಕಳು ಜನಿಸಿದರು. ಅವರೆಲ್ಲರೂ ಸೂರ್ಯನಂತೆ ತೇಜಸ್ವಿಗಳಾಗಿದ್ದರು. ಹೀಗೆ ಎಪ್ಪತ್ತೆಂಟು ವರ್ಷಗಳು ಕಳೆದ ಬಳಿಕ ಒಂದು ದಿನ ವೈಶಾಖ ಶುಕ್ಲ ದ್ವಾದಶಿ ಮಧ್ಯಾಹ್ನ ಕಾಲದಲ್ಲಿ ಸೂರ್ಯನು ಮುಗಿಲಿನ ಮಧ್ಯಭಾಗದಲ್ಲಿ ಬೆಳಗುತ್ತಲಿದ್ದನು. ಮಹಾರಾಣಿಯು ಆಗ ತನ್ನ ಏಕಾಂತಶಯನದ ಸಮಯವು ಬಂದಿತೆಂದು ಯಾರಿಗೂ ಕಾಣದಂತೆ ಗುಟ್ಟಾಗಿ ಒಂದು ಕೋಣೆಯಲ್ಲಿ ಹೋಗಿ ಮಲಗಿಕೊಂಡಳು. ಮಹಾರಾಜನಿಗೆ ತನ್ನೆದುರು ಮಾತನಾಡುತ್ತಿದ್ದಂತೆಯೇ ತನ್ನ ಮಡದಿಯು ಎದ್ದು ಹೋಗಿ ರಹಸ್ಯ ಕೋಣೆಯಲ್ಲಿ ಒರಗಿದ್ದನು ಕಂಡು ಎಂದೂ ಇಲ್ಲದ ಕುತೂಹಲವು ಒಮ್ಮೆಲೇ ಜಾಗ್ರತವಾಯಿತು.

''ಎಷ್ಟು ಕೆಲಸ ವಿದ್ದರೂ ಎಂಥ ಪ್ರಸಂಗದಲ್ಲಿಯೂ ತಪ್ಪದೇ ಪ್ರತಿನಿತ್ಯವೂ ಮಧ್ಯಾಹ್ನ ಕಾಲದಲ್ಲಿ ಮಹಾರಾಣಿಯು ಏಕಾಂತ ಕೋಣೆಯಲ್ಲಿ ಮಲಗುವದರ ರಹಸ್ಯವು ಏನಿರಬಹುದು ? ಜೀವನದುದ್ದಕ್ಕೂ ಮಹಾರಾಣಿಯು ಪಾಲಿಸಿಕೊಂಡು ಬಂದಿರುವ ಈ ಮಧ್ಯಾಹ್ನ ನಿದ್ರೆಯ ಗುಟ್ಟನ್ನು ಇಂದು ತಿಳಿದುಕೊಂಡು ಬಿಡಬೇಕು. ಇವಳು ಆ ಏಕಾಂತ ಕೋಣೆಯಲ್ಲಿ ಯಾರನ್ನು ಪೂಜಿಸುತ್ತಿರಬಹುದು ? ಇವಳು ಏಕಾಂತದಲ್ಲಿ ಏಕೆ ಮಲಗುತ್ತಾಳೆ ? ಮಲಗುವದಂತೂ ಧರ್ಮವಲ್ಲ. ಮಲಗಿದಾಗ ಯಾವ ವ್ರತವನ್ನೂ ಆಚರಿಸಲಿಕ್ಕಾಗುವದಿಲ್ಲ. ನಿರ್ಜನ ಸ್ಥಳದಲ್ಲಿ ಶಯನ ಮಾಡಬೇಕೆಂದು ಶ್ರೀ ಹರಿಯ ಆಜ್ಞೆ ಇಲ್ಲ. ಮಹಾದೇವರ ವಚನವಿಲ್ಲ. ಮನುಸ್ಮೃತಿಯ ಅನುಶಾಸನವೂ ಇಲ್ಲ. ಏಕಾಂತ ಸ್ಥಳದಲ್ಲಿ ಮಲಗಿ ನಿದ್ದೆ ಮಾಡುವದೂ ಒಂದು ವ್ರತವೆಂದು ಯಾವ ಸ್ಮೃತಿಕಾರರೂ ಧರ್ಮಶಾಸ್ತ್ರ ಗ್ರಂಥದಲ್ಲಿ ಹೇಳಿದ್ದನ್ನು ನಾನು ಈ ವರೆಗೆ ಕಂಡಿದ್ದಿಲ್ಲ ಅಂದ ಬಳಿಕ ನನ್ನ ಈ ಪಟ್ಟದರಸಿಯು ತನಗೆ ಬೇಕಾದ ಕಾಮ ಭೋಗಗಳನ್ನು ಉಪಭೋಗಿಸಿ, ರುಚಿಕರ ಮಾಂಸ ಮೃಷ್ಟಾನ್ನವನ್ನು ಭೋಜನ ಮಾಡಿ, ತಾಂಬೂಲವನ್ನು ಮೆಲ್ಲುತ್ತ ಪಟ್ಟೆ ಪೀತಾಂಬರಗಳನ್ನು ಉಟ್ಟುಕೊಂಡು, ಮೈಗೆ ಚಂದನವನ್ನು ಬಳಿದು ಕೊಂಡು, ಹಾರ ಆಭರಣಗಳಿಂದ ಅಲಂಕೃತಳಾಗಿ ಒನಪಿನಿಂದ ಆ ಏಕಾಂತ ಕೋಣೆಯಲ್ಲಿ ಪ್ರವೇಶಿಸಿ ಸುಖವಾಗಿ ಮಲಗಿ ನಿದ್ರೆಗೈಯುತ್ತ ಮಾಡುವ ಮಹಾವ್ರತವು ಯಾವುದಾಗಿರಬಹುದು ? ಅವಳು ಏಕಾಂತದಲ್ಲಿ ಯಾರಾದರೂ ಕಿನ್ನರರಿಂದ ವಶೀಕರಣ

ವಿದ್ಯೆಯನ್ನು ಅಭ್ಯಾಸ ಮಾಡಿತ್ತಿರಬಹುದೇ ? ಅಥವಾ ಯೋಗ ಶಕ್ತಿಯಿಂದ ಮನಬಂದತ್ತ ಹೋಗುತ್ತಿರಬಹುದೇ ? ಇಲ್ಲವೇ ಕಾಮರೋಗದಿಂದ ಪೀಡಿತಳಾಗಿ ಒರಗಿ ಬಿಡುವಳೇ ? '' ಎಂದು ಹಲವಾರು ಬಗೆಯಿಂದ ರಾಜನು ಯೋಚಿಸಿ ''ಇಂದಾಗದಿದ್ದರೂ ನಾಳೆ ಮಧ್ಯಾಹ್ನ ವಾದರೂ ಇದರ ಇತ್ಯರ್ಥವನ್ನು ಮಾಡಿ ಬಿಡಬೇಕು.'' ಎಂದು ನಿರ್ಧರಿಸಿದನು.

ಈ ವಿಚಾರದಿಂದ ಅಂದು ರಾತ್ರಿ ಅವನಿಗೆ ನಿದ್ರೆಯೇ ಬರಲಿಲ್ಲ. ಮರುದಿನ ಅವನು ತನ್ನ ಸ್ನಾನ, ಪಾನ, ಭೋಜನಾದಿ ನಿತ್ಯ ವಿಧಿಗಳನ್ನೆಲ್ಲ ಮಾಡಿ ಮುಗಿಸಿ ತನ್ನ ರಾಣೀವಾಸದ ಪರಿವಾರದವರಿಗೆಲ್ಲ ಗುಟ್ಟಾಗಿ ಹೇಳಿಟ್ಟು ಮಹಾರಾಜನು ಮಧ್ಯಾಹ್ನದಲ್ಲಿ ತನ್ನ ರಾಣಿಯ ಮಲಗುವ ಏಕಾಂತ ಕೋಣೆಗೆ ಹೋದನು. ಅಲ್ಲಿ ಆ ಅರಸಿಯು ಪವಡಿಸುವ ಮಂಚದ ಕೆಳಗೆ ಅವಿತುಕೊಂಡು ಕುಳಿತುಕೊಂಡನು.

ಅಂದು ಮಧ್ಯಾಹ್ನದ ಹೊತ್ತಿನಲ್ಲಿ ನೇಸರನು ನಭೋಮಂಡಲದ ನಡುನೆತ್ತಿಗೆ ಏರಿದಾಗ ಮಹಾರಾಣಿಯು ಬಂದು ಆ ಮಂಚದ ಮೇಲೆ ತನ್ನ ಬಳ್ಳಿ ಮೈಯನ್ನು ಚೆಲ್ಲಿದಳು. ಅವಳ ತಲೆ ಹೊಡೆಯುತ್ತಿತ್ತು. ಅದರ ನೋವಿನಿಂದ ಶಿರಃಪಿಂಡದ ನರನರಗಳೂ ಸಿಡಿಯುತ್ತಿದ್ದವು. ಆ ತಲೆನೋವಿನ ಹೊಡೆತ ಬಡಿತಗಳನ್ನೂ, ಶೂಲ ಸಿಡಿತಗಳನ್ನೂ ತಾಳಲಾರದೆ ಮಹಾರಾಣಿಯು ದುಃಖಿಸಿ ಬಿಕ್ಕಿಬಿಕ್ಕಿ ಅಳತೊಡಗಿದಳು. ಕಮಲದಳದಂತಿರುವ ಅವಳ ಕಣ್ಣಾಲೆಗಳಿಂದ ದಳದಳವಾಗಿ ನೀರು ಇಳಿಯುತ್ತಿತ್ತು. ಅವಳು ತನ್ನಲ್ಲಿಯೇ ದುಃಖದಿಂದ ಉದ್ಗಾರ ತೆಗೆದಳು.-

ಓಹ ! ಎಂಥ ಬೇನೆ ! ಏನು ನೋವು ? ಹಿಂದೆ ನಾನಾವ ದುಷ್ಕರ್ಮವನ್ನು ಮಾಡಿದ್ದಿರಬಹುದು ! ನಾನು ಹಿಂದೆ ಮಾಡಿದ ಪುಣ್ಯವೆಲ್ಲವೂ ಸವೆದು ಹೋಗಿ ಪಾಪವು ಮಾತ್ರ ಒದಗಿ ಬಂದಿದೆ. ಘೋರವಾದ ಈ ಶಿರೋವೇದನೆಯಿಂದ ನಾನು ಅನಾಥಳಂತೆ ನರಳಿ ನವೆಯುತ್ತಿದ್ದೇನೆ. ನನ್ನ ಪತಿಗೆ ನನ್ನ ಈ ಸಂಕಟವು ತಿಳಿಯದು. ಆ ನನ್ನ ಹೃದಯವಲ್ಲಭನೂ ಮತ್ತು ಉಳಿದ ಆಪ್ತ ಇಷ್ಟರೂ ನನ್ನ ಬಗ್ಗೆ ಏನು ತಿಳಿದುಕೊಂಡಿರುವರೋ ಏನೋ ? ಈ ಹಾಸಿಗೆಯ ಮೇಲೆ ಹೊರಳಾಡುತ್ತ ನನ್ನ ಸಖಿಯರಿಗಾದರೂ ಈ ಅಂತರವೇದನೆಯನ್ನು ಏನೆಂದು ತಿಳಿಸಲಿ ! ತಿಳಿಸದೇ ಹೇಗೆ ಇರಲಿ ! ಈ ತಲೆಶೂಲೆಯ ವೇದನೆಯನ್ನು ಯಾರಿಗೂ ತಿಳಿಸಬಾರದೆಂದು ನನ್ನ ಪತಿಯಿಂದ ಕೇಳಿಕೊಂಡು ಏಕಾಂತಶಯನದ ವ್ರತವನ್ನು ಮಾಡಿಕೊಂಡು ಒಬ್ಬಳೇ ಇಲ್ಲಿ ಮಲಗಿ ಈ ದುಃಖವನ್ನು ಅನುಭವಿಸುತ್ತಿದ್ದೇನೆ. ನನ್ನ ಪ್ರಾಣೇಶ್ವರನಿಗೆ ಈ ವಿಷಯವು ತಿಳಿದರೆ ದುಃಖವಾಗಬಹುದೆಂದು ಯೋಚಿಸಿ ಅವರಿಗೆ ಹೇಳದೆ ನಾನೇ ನವೆಯುತ್ತಿದ್ದೇನೆ. ಇದು ಅವರಿಗೆ ಗೊತ್ತಾದರೆ ಏನೆನ್ನುವರೋ ಏನೋ ? ಇವರು ಆ ಸೌಕರ ಕ್ಷೇತ್ರಕ್ಕೆ ಬಂದರೆ ನನ್ನ ಮನಸ್ಸಿನಲ್ಲಿದ್ದುದನ್ನೆಲ್ಲ ಪತಿಯ ಬಳಿಯಲ್ಲಿ ನಿವೇದಿಸುವೆನು. ಆದರೆ ಇದನ್ನು ಅವರ ಮುಂದೆ ಹೇಳುವದಾದರೂ ಹೇಗೆ ! ಹೇಳದಿದ್ದರೆ ಪ್ರತಿನಿತ್ಯವೂ ಈ ಪ್ರಾಣಾಂತಿಕವಾದ ವೇದನೆಯನ್ನು ತಾಳುವದಾದರೂ ಹೇಗೆ ? '' ಎಂದು ಮುಂತಾಗಿ ತನ್ನಷ್ಟಕ್ಕೆ ತಾನೇ ಅವಳು ನುಡಿದು ಅತ್ತು ಗೋಗರೆದು ಗೋಳಿಡುತ್ತಿದ್ದಳು. -

ಅವಳ ಈ ಅಂತಃಸಂತಾಪವನ್ನೂ ತಲೆನೋವಿನ ತ್ರಾಸ ತೊಳಲಾಟವನ್ನೂ ಕಂಡು ಕೇಳಿದ ಮಹಾರಾಜನು ಮಂಚದ ಬಾಡದಿಂದ ಮೇಲೆದ್ದು ಬಂದು ಆ ಪ್ರೇಯಸಿಯನ್ನು ಪ್ರೀತಿಯಿಂದ ಬರಸೆಳೆದು ಬಿಗಿದಪ್ಪಿದನು. ಸ್ನೇಹದಿಂದ ಅವಳ ಮುಂದಲೆಯನ್ನು ನೇವರಿಸಿ ನಲುಮೆ ದುಂಬಿದ ತನ್ನ ತೋಳತೆಕ್ಕೆಯಲ್ಲಿ ಅವಳನ್ನು ತಕ್ಕೈಸಿ ಕಂಬನಿ ಒರಿಸಿ ಮಾತನಾಡಿದನು. -

'' ಭದ್ರೆ ನನ್ನ ಹೃದಯದರಸಿಯಾದ ನೀನು ಈ ವರೆಗೆ ನಿನ್ನ ಮನಸ್ಸಿನ ಕೊರಗನ್ನು ನನಗೆ ತಿಳಿಸದೆ ಏಕೆ ದುಃಖ ಪಟ್ಟೆ ? ನಮ್ಮ ರಾಜ್ಯದಲ್ಲಿ ಧನ್ವಂತರಿಯಂಥ ಬೇಕಾದಷ್ಟು ಜನ ವೈದ್ಯರಿಲ್ಲವೆ ! ಅವರಿಗೆ ತೋರಿಸಿದ್ದರೆ ನಿನ್ನ ಈ ರೋಗವು ಎಂದೋ ವಾಸಿಯಾಗುತ್ತಿತು. ಆದರೆ ನೀನು ನಿನ್ನ ಈ ಬೇನೆಯನ್ನು ಯಾರಿಗೂ ಹೇಳದೆ ಏಕಾಂತ ಶಯನದ ವ್ರತದ ನೆಪದಿಂದ ನೋವನ್ನು ಮರೆ ಮಾಚಿದೆ. ವ್ಯರ್ಥವಾಗಿ ದುಃಖ ಪಟ್ಟೆ.

ಪ್ರಿಯೆ, ಈಗಲಾದರೂ ಹೇಳು. ಈ ನಿನ್ನ ತಲೆಶೂಲೆಯ ಕಾರಣವೇನು ? ವಾತವೇ? ಪಿತ್ತವೇ ? ಕಫವೇ ? ಅಥವಾ ಸನ್ನಿಪಾತದೋಷವೇ ? ಅಥವಾ ಹೊತ್ತುವೇಳೆಯನ್ನದೇ ನೀನು ತಿನ್ನುವ ಆಮಿಷ ಆಹಾರವು ನಿನ್ನ ಈ ಪಿತ್ತೋದ್ರೇಕಕ್ಕೆ ನಿಮಿತ್ತವಾಗಿರಬಹುದೇ ? ಇಂಥ ಶಿರೋವೇದನೆಯನ್ನು ಹೋಗಲಾಡಿಸಲಿಕ್ಕಾಗಿ ತಜ್ಞರಾದ ವೈದ್ಯರು ನರಗಳಲ್ಲಿ ರಂಧ್ರವನ್ನು ಮಾಡಿ ಶುದ್ಧ ರಕ್ತವನ್ನು ಒಳಗೆ ತೂರಿಸಿ ಉಪಚಾರ ಮಾಡುವರು. ಅಥವಾ ತಲೆಗೆ ಸರಿಯಾಗಿ ಅಭ್ಯಂಗಸ್ನಾನ ಮಾಡಿಸಿ ಒಳ್ಳೇ ತೈಲಗಳನ್ನು ಲೇಪಿಸಿ ಎಂಥ ತಲೆಬೇನೆಯನ್ನೂ ಕಳೆಯ ಬಲ್ಲ ಬಲ್ಲಿದರಾದ ವೈದ್ಯರು ನಮ್ಮ ರಾಜ್ಯದಲ್ಲಿ ಇರುವರು. ಅಂದ ಬಳಿಕ ನೀನೇಕೆ ಇಷ್ಟು ದಿನ ಈ ತಲೆಯ ಬೇನೆಯನ್ನು ಬಲಿಸಿ ಕೊಂಡೆ ? ಮಂಗಳಾಂಗಿಯೇ, ವ್ರತದ ನೆವದಿಂದ ನನ್ನಿಂದ ಈ ವಿಷಯವನ್ನು ಮುಚ್ಚಿಡಲು ಕಾರಣವಾದರೂ ಏನು? ಇದರ ಕಾರಣವನ್ನು ನನಗೆ ತಿಳಿಸಲು ನಾವು ಸೂಕರ ಕ್ಷೇತ್ರಕ್ಕೆ ಏಕೆ ಹೋಗಬೇಕು? ''

ಮಹಾರಾಜನ ಈ ಮಾತುಗಳನ್ನು ಕೇಳಿ ರಾಣಿಯು ಒಮ್ಮೆಲೆ ಎದ್ದು ಅವನ ಚರಣಗಳಿಗೆ ತನ್ನ ಹಣೆ ಹಚ್ಚಿ ದೈನ್ಯದಿಂದ ಬಿನ್ನವಿಸಿಕೊಂಡಳು. '' ನಾಥಾ, ನನ್ನ ಮೇಲೆ ಪ್ರಸನ್ನನಾಗು. ನನ್ನ ಪ್ರಾಚೀನ ದುಷ್ಕರ್ಮದ ಕಟು ಫಲವನ್ನು ಅನುಭವಿಸುತ್ತಿರುವ ನನ್ನ ಹಿಂದಿನ ಕತೆಯನ್ನು ನೀವು ಕೇಳಬಾರದು. ನಾನು ಹೇಳಬಾರದು. '' ಮಡದಿಯ ಈ ನಿರ್ಧಾರದ ನುಡಿಯನ್ನು ಕೇಳಿ ಮಹಾರಾಜನು ಬೆರಗುಗೊಂಡನು. ''ಪ್ರಿಯೆ, ನಾನಿಷ್ಟು ರೀತಿಯಿಂದ ಅಲ್ಪರಿದು ಕೇಳುತ್ತಿಲಿದ್ದರೂ ನೀನೇಕೆ ಈ ವಿಷಯವನ್ನು ನನ್ನಿಂದ ಬಚ್ಚಿಡುತ್ತಲಿರುವೆ ?'' ಆಗ ಖಿನ್ನ ವಿಷಣ್ಣಳಾದ ಆ ಅರಸಿಯು ಅಚ್ಚರಿಯಿಂದ ಕಂಗಳನ್ನು ಅರಳಿಸಿ ತನ್ನ ಕಾಂತನಾದ ಕಳಿಂಗೇಶ್ವರನನ್ನು ಕುರಿತು ಮಧುರವಾಗಿ ನುಡಿದಳು. -

'' ಸ್ವಾಮಿ, ನನಗೆ ಪ್ರೀತಿಯ ಪತಿಯಾದ ನೀವೇ ನನ್ನ ಧರ್ಮ, ನೀವೇ ನನ್ನ ತಪಸ್ಸು. ನನ್ನ ಅತ್ಯಂತ ಪ್ರೀತಿಯ ವಸ್ತು ಎಂದರೆ ನೀವು. ನೀವು ಕೇಳಿದುದನ್ನು ಹೇಳುವದು ನನಗೆ ಅವಶ್ಯ ಕರ್ತವ್ಯವೂ ಆಗಿದೆ. ಮುಖ್ಯ ಧರ್ಮವೂ ಆಗಿದೆ. ಆದರೆ ಇದೊಂದು ವಿಷಯವನ್ನು ಮಾತ್ರ ನನಗೆ ದಯಮಾಡಿ ಕೇಳಬೇಡಿರಿ. ಈ ದುಃಖವೆಲ್ಲವೂ ನನ್ನ ಪಾಲಿಗೆ ಇರಲಿ. ಇದರಿಂದ ನಿಮಗಾವ ತೊಂದರೆಯೂ ಇಲ್ಲ. ನಿಮಗೆ ಅಂತಃಪುರದಲ್ಲಿ ನನಗಿಂತ ಚೆಲುವೆಯರಾದ ಅನೇಕ ಜನ ಹೆಂಡಂದಿರು ಇರುವರು. ಬೇಕಾದ ಭೋಗಭಾಗ್ಯ ಸುಖ

ಸಾಮಗ್ರಿ ಎಲ್ಲವೂ ನಿಮ್ಮ ದೃಷ್ಟಿ ಕ್ಷೇಪಕ್ಕಾಗಿ ಕಾದು ಕುಳಿತಿದೆ. ಹೀಗೆ ಎಲ್ಲ ರೀತಿಯಿಂದಲೂ ಸುಖವಾಗಿ ಇರುವ ನಿಮಗೆ ನನ್ನದುಃಖದ ಕರುಣ ಕತೆಯನ್ನು ಬಿಚ್ಚಿ ಹೇಳಿ ನಿಮ್ಮ ಹೃದಯಕ್ಕೆ ನೋವನ್ನುಂಟು ಮಾಡುವ ಇಚ್ಛೆಯು ನನಗೆ ಇಲ್ಲ. ದಯಮಾಡಿ ತಾವು ಈ ವಿಷಯದಲ್ಲಿ ಆಗ್ರಹವನ್ನು ಹಿಡಿಯಬಾರದು. '' ತನ್ನ ನಲ್ಲೆಯ ಈ ನುಡಿಯನ್ನು ಕೇಳಿ ಆ ನರನಾಥನಿಗೆ ಮತ್ತಿಷ್ಟು ಮನಸ್ಸಿಗೆ ವ್ಯಥೆ ಎನಿಸಿತು. ಮನದಲ್ಲಿಯೇ ನೊಂದುಕೊಂಡ ಅವನು ತನ್ನ ನಲುಮೆಯ ನಾರೀ ಮಣಿಗೆ ತುಸು ನಿಷ್ಠುರವಾಗಿಯೇ ನುಡಿದನು. - '' ಪ್ರಿಯೇ, ಪತಿ ಕೇಳಿದಾಗ ಒಳ್ಳೇದೇ ಇರಲಿ, ಕೆಟ್ಟದೇ ಇರಲಿ ಪತ್ನಿಯಾದವಳು ಹೇಳಲೇಬೇಕು. ಧರ್ಮ ಮಾರ್ಗದಲ್ಲಿರುವ ಸ್ತ್ರೀಯರು ಪತಿಯ ಹತ್ತಿರ ಎಂದೂ ಮುಚ್ಚುಮರೆ ಮಾಡುವದಿಲ್ಲ. ರಾಗಲೋಭಗಳಿಂದ ಮೋಹಿತಳಾಗಿ ಪತಿಯ ಮುಂದೆ ರಹಸ್ಯ ವಿಚಾರವನ್ನು ಹೇಳದೆ ಮರೆಮಾಚುವ ಮಹಿಳೆಯನ್ನು ಯಾವ ಪಂಡಿತನೂ ಪತಿವ್ರತೆಯೆಂದು ಕರೆಯಲಾರ. ಇದೆಲ್ಲವನ್ನು ಯೋಚಿಸಿ ನೀನು ನನ್ನೆದುರು ಇದ್ದ ವಸ್ತುಸ್ಥಿತಿಯನ್ನೆಲ್ಲ ತಿಳಿಸಿ ಹೇಳು. '' ಮಹಾರಾಜನ ಈ ನಿರ್ವಾಣದ ನುಡಿಯನ್ನು ಕೇಳಿ ಮಹಾರಾಣಿಯು ಸ್ಪಷ್ಟವಾಗಿ ಹೇಳಿದಳು. -

'' ಪ್ರಭು, ನೀವೇ ನನಗೆ ದೇವರು, ಎದೆಯ ಅರಸ, ಮನಸ್ಸಿನ ಗುರು. ನಿಮ್ಮೆದುರು ಎಲ್ಲ ವಿಷಯವನ್ನು ಹೇಳುವದೇ ನನ್ನ ಧರ್ಮ. ಈ ರಹಸ್ಯ ವಿಷಯವನ್ನು ನಿಮಗೆ ನಿಜವಾಗಿಯೂ ತಿಳಿಯಬೇಕಿದ್ದರೆ ಪ್ರಬುದ್ಧನಾದ ನಿಮ್ಮ ಮಗನನ್ನು ಈ ಕಳಿಂಗದೇಶದ ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡಿರಿ. ನೀವು ನನ್ನ ಜೊತೆಗೆ ಆ ಸೂಕರ ಕ್ಷೇತ್ರಕ್ಕೆ ನಡೆಯಿರಿ. ಅಲ್ಲಿ ನಾನು ನಿಮಗೆ ಈ ಎಲ್ಲ ಗುಟ್ಟಿನ ವಿಷಯವನ್ನು ತಿಳಿಸುತ್ತೇನೆ.''

ಪಟ್ಟದರಸಿಯ ಈ ಮಾತುಗಳನ್ನು ಕೇಳಿ ಮಹಾರಾಜನು 'ಹಾಗೇ ಆಗಲಿ ' ಎಂದು ಹೇಳಿ ಮಂತ್ರಿಗಳನ್ನು ಕರೆಯಿಸಿ ತನ್ನ ಜ್ಯೇಷ್ಠಪುತ್ರನ ರಾಜ್ಯಾಭಿಷೇಕದ ಸಿದ್ಧತೆಯನ್ನು ಮಾಡಲು ತಿಳಿಸಿದನು. ಬೇಗನೇ ಒಂದು ಸುಮುಹೂರ್ತದಲ್ಲಿ ಗುಣವಂತನಾದ ಮಗನಿಗೆ ಉತ್ಸಾಹಿತರಾದ ಪ್ರಜಾಪರಿವಾರ ಮತ್ತು ಸಚಿವ ಸೇನಾಪತಿಗಳಿಂದ ಒಡಗೂಡಿ ಸಂತಸ ಸಂಭ್ರಮದಿಂದ ಮನದುಂಬಿ ಪಟ್ಟಾಭಿಷೇಕ ಸಮಾರಂಭವನ್ನು ಮಾಡಿದನು. ಪ್ರೀತಿಯಿಂದ ಪುತ್ರನನ್ನು ಸಿಂಹಾಸನದ ಮೇಲೆ ಕೂಡಿಸಿ ಅವನಿಗೆ ರಾಜಕೀಯ ತತ್ವವನ್ನು ತಿಳಿಸಿ, ನೀತಿಮಾರ್ಗವನ್ನು ಉಪದೇಶಿಸಿದನು. - ''ಸುಪುತ್ರ, ಧರ್ಮದ ರಹಸ್ಯವನ್ನು ಹೇಳುತ್ತೇನೆ ಕೇಳು. ರಾಜರ ಕರ್ತವ್ಯವನ್ನು ತಿಳಿಸುತ್ತೇನೆ ಚಿತ್ತವಿಟ್ಟು ಆಲಿಸು.

ರಾಜರಾದವರು ದಾನ ಮಾಡುವದನ್ನು ಎಂದೂ ನಿಲ್ಲಿಸಬಾರದು. ಯಾರ ಹಿಂಸೆಯನ್ನು ಮಾಡಬಾರದು. ವ್ಯಭಿಚಾರಾದಿ ಪಾಪ ಮಾಡುವವರನ್ನು ಹಿಂಸಿಸದೇ ಬಿಡಬಾರದು. ಶಿಶುಹಂತಕರನ್ನು ಕೊಲ್ಲದೇ ಇರಬಾರದು. ಸ್ತ್ರೀಹತ್ಯ ಮಾಡಿದವರನ್ನು ತಕ್ಷಣ ಕೊಂದು ಬಿಡಬೇಕು. ಪರಸ್ತ್ರೀಯರನ್ನು ಕಣ್ಣೆತ್ತಿಕೂಡ ನೋಡ ತಕ್ಕದ್ದಲ್ಲ. ಸುಂದರಿಯರಾದ ಪರಸತಿಯರನ್ನು ಕಂಡರೆ ಕೂಡಲೇ ಮುಖ ತಿರುಗಿಸಬೇಕು.

ಅನ್ಯಾಯದ ಸಂಪಾದನೆ ಹಾಗೂ ಹೆರವರ ಸೊತ್ತುಗಳಿಗೆ ಎಂದೂ ಆಶೆ ಮಾಡಬಾರದು. ಬಹುಕಾಲ ಒಂದೆಡೆ ನಿಲ್ಲಬಾರದು. ರಾಷ್ಟ್ರವನ್ನು ಧರ್ಮಕ್ಕೆ

ಅನುಗುಣವಾಗಿ ಕ್ಷೇಮದಿಂದ ರಕ್ಷಿಸಬೇಕು. ಯಾವಾಗಲೂ ಉದ್ಯೋಗ ಶೀಲನಾಗಿರಬೇಕು. ಮಂತ್ರಿ ಹಾಗೂ ಪ್ರಜೆಗಳಿಗೆ ಸಂತೋಷವಾಗುವಂತೆ ಶಾಸನ ಕಾರ್ಯವನ್ನು ನಿರ್ವಹಿಸಬೇಕು. ಮದಿರೆ, ಮಾನಿನಿ, ಮುಂತಾದ ಏಳು ವ್ಯಸನಗಳಿಂದ ದೂರವಾಗಿರಬೇಕು. ಹಾನಿಕರವಾದ ಕಾರ್ಯವನ್ನು ಎಂದೂ ಮಾಡಬಾರದು. ಪ್ರಜಾಮಂಡಲ ಹಾಗೂ ಸಚಿವ ಸಂಪುಟದ ವಿರೋಧವನ್ನು ಎಂದೂ ಕಟ್ಟಿಕೊಳ್ಳಬಾರದು. ''ಮಗು, ನೀನು ಬಹಳ ಕಾಲ ಎಲ್ಲಿಯೂ ನಿಲ್ಲಬೇಡ. ನಿಲ್ಲುವ ಪ್ರಸಂಗ ಬಂದರೆ ಎಲ್ಲವನ್ನೂ ವಿಶೇಷವಾಗಿ ಪರೀಕ್ಷಿಸದಿರಬೇಡ. ಪ್ರಯಾಣಕ್ಕೆ ಸಿದ್ಧನಾಗಿ ನಿಂತ ನನ್ನನ್ನು ತಡೆಯಬೇಡ. ನನಗೆ ಹಿತವನ್ನು ಬಯಸುವಿಯಾದರೆ ನಾನು ಹೇಳಿದ್ದನ್ನು ಬೇಗನೆ ಮಾಡು.'' ಈ ರೀತಿಯಾಗಿ ಉಪದೇಶ ಮಾಡಿದ ತಂದೆಯ ನುಡಿಗಳನ್ನು ಕೇಳಿ ರಾಜ ಪುತ್ರನು ಅವರ ಕಾಲನ್ನು ಹಿಡಿದು '' ಅಪ್ಪ, ನೀವೇ ಇಲ್ಲದ ಬಳಿಕ ನನಗೆ ಈ ರಾಜ್ಯ ಕೋಶಗಳಿಂದ ಏನು ಪ್ರಯೋಜನ ? ನೀವು ಇಲ್ಲಿಯೇ ಇದ್ದು ರಾಜ್ಯ ಹಾಗೂ ನಮ್ಮನ್ನು ಪಾಲನೆ ಮಾಡಬೇಕು. ನಾನು ಇನ್ನೂ ಮಕ್ಕಳಂತೆ ನಿಮ್ಮ ವಾತ್ಸಲ್ಯದ ರಕ್ಷೆಯಲ್ಲಿ ಹುಡುಗಾಟ ದಲ್ಲಿಯೇ ಇರುವೆ '' ಎಂದು ನಿಷೇಧಿಸುವ ಮಗನನ್ನು ಸಂತೈಸಿ ಆ ಕಳಿಂಗ ದೇಶದ ದೊರೆಯು ಸೌಕರ ಕ್ಷೇತ್ರಕ್ಕೆ ನಡೆದು ಬಿಟ್ಟನು. ಅವನನ್ನು ಬೆಂಬಲಿಸಿ ದೇಶದ ಅನೇಕ ಭಾವುಕ ಭಕ್ತರು ಆ ದಿವ್ಯ ಕ್ಷೇತ್ರಕ್ಕೆ ಹೆಂಡಿರು ಮಕ್ಕಳು ಸಹಿತ ಪ್ರಯಾಣ ಮಾಡಿದರು. ಆ ಕ್ಷೇತ್ರಕ್ಕೆ ಹೋದ ನಂತರ ಆ ರಾಜ ರಾಣಿಯರು ಹೇರಳವಾಗಿ ಧನ ಧಾನ್ಯಗಳನ್ನು ದಾನ ಮಾಡಿದರು. ಕೆಲವು ದಿನ ಧರ್ಮ, ಕರ್ಮ, ಹಾಗೂ ಜಪ, ತಪ, ವ್ರತೋಪಾವಾಸಗಳನ್ನು ಮಾಡಿ ಪರಿಶುದ್ಧರಾಗಿ ಇದ್ದ ಬಳಿಕ ಆ ಕಳಿಂಗ ನರೇಶನು ತನ್ನ ಮಡದಿಯನ್ನು ಕುರಿತು ''ಪ್ರಿಯೇ, ನನಗೆ ಈಗ ಸಾವಿರ ವರ್ಷಗಳಾದವು. ಹಿಂದೆ ನಾನು ಕೇಳಿದ ಪ್ರಶ್ನೆಗೆ ಸೌಕರ ಕ್ಷೇತ್ರದಲ್ಲಿ (ವರಾಹ ಕ್ಷೇತ್ರದಲ್ಲಿ) ಉತ್ತರಿಸುತ್ತೇನೆಂದು ಹೇಳಿದ್ದಿ. ಈಗಲಾದರೂ ನನಗೆ ಆ ರಹಸ್ಯವಾದ ವಿಚಾರವನ್ನು ತಿಳಿಸು '' ಎಂದು ಕೇಳಿದನು. ಪತಿಯ ಮಾತು ಕೇಳಿ ಆ ಕಮಲಗಣ್ಣಿನ ಕಾಮಿನಿಯು ನಕ್ಕು ಪತಿಯ ಪಾದ ವಂದನೆ ಮಾಡಿ - ''ಭಾಗ್ಯಶಾಲಿಯಾದ ಮನೋರಮಣನೇ, ನಿನ್ನ ಪ್ರಶ್ನೆಗೆ ಉತ್ತರವನ್ನು ನೀನು ಮೂರು ರಾತ್ರಿ ಉಪವಾಸ ಮಾಡಿದ ಬಳಿಕ ನಾನು ಹೇಳುತ್ತೇನೆ '' ಎಂದು ತಿಳಿಸಿದಳು. ದೊರೆಯು ಪ್ರಾಣಕಾಂತೆಯ ಮಾತಿನಂತೆ ಮೂರು ರಾತ್ರಿ ಮಡದಿಯೊಡನೆ ಉಪವಾಸ ಮಾಡಿದನು. ಅನಂತರ ವಿಧಿಪೂರ್ವಕವಾಗಿ ಸ್ನಾನ ಮಾಡಿ ರೇಶಿಮೆಯ ಬಟ್ಟೆ ಉಟ್ಟು ದಂಪತಿಗಳಿಬ್ಬರೂ ಶ್ರೀ ಹರಿಗೆ ನಮಸ್ಕಾರ ಮಾಡಿದರು. ಅನಂತರ ಚಲುವೆಯಾದ ಆ ಅರಸಿಯು ಮದುವೆಯ ಮುಹೂರ್ತದಲ್ಲಿ ಹಿಡಿದಂತೆ ನಲ್ಲನ ಕೈಯನ್ನು ಮಮತೆಯಿಂದ ಹಿಡಿದು ಮಧುರ ಧ್ವನಿಯಲ್ಲಿ ಮಾತನಾಡಿದಳು -

''ನಾಥ, ನಾನು ಕಳೆದ ಜನ್ಮದಲ್ಲಿ ತಿರ್ಯಗ್ಜಂತುವಾದ ಹೆಣ್ಣುನರಿಯಾಗಿದ್ದೆ. ಬೇಟೆಯಾಡ ಬಂದ ಕಾಂಪಿಲ್ಯ ರಾಜಕುಮಾರನಾದ ಸೋಮದತ್ತನು ನನಗೆ ಬಾಣದಿಂದ ನಡುನೆತ್ತಿಗೆ ಹೊಡೆದನು. ಅವನ ಹದನವಾದ ಆ ಬಾಣವು ನನಗೆ ನೆತ್ತಿಯಲ್ಲಿ ನೆಟ್ಟ ಗಾಯದ ಕಚ್ಚು ಇನ್ನೂ ಇದೆ ನೋಡು. ಅದರಿಂದಲೇ ನನಗೆ ಈ

ಜನ್ಮದಲ್ಲಿಯೂ ಭಯಂಕರವಾದ ತಲೆ ಬೇನೆಯು ಬರುತ್ತಲಿದೆ. ಹಿಂದೆ ನರಿಯಾಗಿದ್ದ ನಾನು ಆ ಬಾಣ ಪ್ರಹಾರದಿಂದ ಮರಣಿಸಿದ ಬಳಿಕ ಕಾಂಚೀ ರಾಜನ ಮನೆಯಲ್ಲಿ ನೃಪನಂದಿನಿಯಾಗಿ ಜನಿಸಿದೆನು. ನನ್ನ ತಂದೆಯು ನನ್ನನ್ನು ನಿನಗೆ ಧಾರೆ ಎರೆದು ಕೊಟ್ಟ ಬಳಿಕ ನಾನು ನಿಮ್ಮ ಪ್ರೇಯಸಿಯಾದೆ. ಪಟ್ಟದರಸಿಯಾದೆ. ಪ್ರೀತಿಯ ಪ್ರಾಣ ಪದಕಳೂ ಆದೆ. ನನಗೆ ನರಿಯ ಜನ್ಮದಿಂದ ನಾರಿಯ ಜನ್ಮವು ಬಂದು ರಾಜಮಹಿಷಿಯ ಸುಖ ಸೌಭಾಗ್ಯಗಳೂ ಸಿದ್ಧಿ ಸಂಪದಗಳೂ ದೊರೆತದ್ದು ಸಿದ್ಧಿ ಕ್ಷೇತ್ರವಾದ ಈ ವರಾಹ ಕ್ಷೇತ್ರದ ಪುಣ್ಯ. ಪ್ರಾಣದರಸರಾದ ನಿಮಗೆ ಅನಂತ ವಂದನೆಗಳು ಇರಲಿ. '' ತನ್ನ ಕಾಂತಾ ಮಣಿಯ ಈ ಮಧುರ ಮಾತುಗಳನ್ನು ಕೇಳಿ ಮಹಾರಾಜನಿಗಾದರೂ ತನ್ನ ಹಿಂದಿನ ಪೂರ್ವ ಜನ್ಮದ ನೆನಪು ಮರುಕಳಿಸಿತು. ಕೂಡಲೇ ಅವನಾದರೂ ತನ್ನ ಹಿಂದಿನ ವೃತ್ತಾಂತವನ್ನು ಹೇಳಿದನು.-

'' ಭಾಗ್ಯವತಿ, ನೀನು ಹಿಂದೆ ನರಿಯಾಗಿದ್ದರೆ ನಾನು ಹದ್ದಾಗಿದ್ದೆ. ಕಾಡಿನಲ್ಲಿ ನಿನ್ನನ್ನು ಕೊಂದ ಆ ಕಾಂಪಿಲ್ಯ ರಾಜಕುಮಾರನೇ ನನ್ನನ್ನಾದರೂ ಒಂದು ಬಾಣದಿಂದ ಹೊಡೆದು ಕೆಡವಿದನು. ಅನಂತರ ನಾನು ಕಳಿಂಗ ರಾಜಕುಮಾರನಾಗಿ ಜನಿಸಿದೆನು. ನಿನ್ನಂಥ ಭೂಲೋಕದ ಅಪ್ಸರೆಯನ್ನು ಮದುವೆಯಾದೆನು. ವಿಶಾಲ ಸಾಮ್ರಾಜ್ಯ ಸಾರ್ವಭೌಮಾಧಿಪತ್ಯವನ್ನು ಪಡೆದೆನು. ಎಲ್ಲ ವಿಧವಾದ ಅಧಿಕಾರ ಐಶ್ವರ್ಯ ಸುಖಸೌಭಾಗ್ಯಗಳನ್ನು ಹೊಂದಿದೆನು. ಇದೆಲ್ಲವೂ ಬರಿ ಒಂದು ಹಾರುವ ಹದ್ದಾಗಿದ್ದ ನನಗೆ ಪ್ರಾಪ್ತವಾದದ್ದು ಈ ವರಾಹ ಕ್ಷೇತ್ರದಲ್ಲಿ ಬಿದ್ದು ಮರಣ ಹೊಂದಿದ್ದರ ಫಲವೇ ಸರಿ. ಪ್ರಿಯೆ, ಈ ಕ್ಷೇತ್ರದ ಪ್ರಭಾವವನ್ನು ಕಂಡೆಯಾ ? ಆ ರಾಜ ರಾಣಿಯರನ್ನು ಅನುಸರಿಸಿ ಆ ಕ್ಷೇತ್ರಕ್ಕೆ ಬಂದ ನಾಡಿನ ಜನರೆಲ್ಲರೂ ರಾಜ ದಂಪತಿಗಳ ಈ ವೃತ್ತಾಂತವನ್ನು ಕೇಳಿ ಭಕ್ತಿ ಭರಿತರಾದರು. ಸರ್ವ ಸಂಗ ಪರಿತ್ಯಾಗಮಾಡಿ ಅವರೆಲ್ಲರೂ ಆ ವರಾಹ ಕ್ಷೇತ್ರದಲ್ಲಿ ನಿರಂತರ ಶ್ರೀ ಹರಿಯ ಧ್ಯಾನ ಮಾಡುತ್ತ ದೇಹತ್ಯಾಗವನ್ನು ಮಾಡಿದರು. ಆ ಪುಣ್ಯದಿಂದ ಆ ಎಲ್ಲ ಸ್ತ್ರೀ ಪುರುಷರು ಭಗವಂತನ ಪರಮಾನುಗ್ರಹವನ್ನು ಪಡೆದು ಶ್ವೇತ ದ್ವೀಪಕ್ಕೆ ಪ್ರಯಾಣ ಮಾಡಿದರು. ಈ ಸೌಕರ ಕ್ಷೇತ್ರದಲ್ಲಿರುವ ಆಖೇಟಕ ತೀರ್ಥದಲ್ಲಿ ಸ್ನಾನಮಾಡಿದವನು ಹನ್ನೊಂದು ಸಾವಿರ ವರ್ಷ ಸ್ವರ್ಗದಲ್ಲಿದ್ದು ಮುಂದೆ ಸದ್ಭಕ್ತನಾಗಿ ಹುಟ್ಟುವನು. ಗೃಧ್ರವಟ ತೀರ್ಥದಲ್ಲಿ ಸ್ನಾನ ಮಾಡಿದವನು ಒಂಭತ್ತು ಸಾವಿರದ ಒಂಬೈನೂರು ವರ್ಷ ಇಂದ್ರಲೋಕದಲ್ಲಿದ್ದು ಪುನಃ ಭೂಲೋಕದಲ್ಲಿ ಜನಿಸಿ ನನ್ನ ಭಕ್ತನಾಗುವನು.

ಜನ್ಮಾಂತರದಲ್ಲಿ ಧರ್ಮ ಕರ್ಮವನ್ನು ಮಾಡಿದ ಜನರು ತಮ್ಮ ಯಾವದೋ ಹಿಂದಿನ ಕರ್ಮದೋಷದಿಂದ ಪಶುಪಕ್ಷಿಯಾಗಿ ಹುಟ್ಟಿ ಈ ಸೌಕರ ಕ್ಷೇತ್ರದಲ್ಲಿ ಮರಣ ಹೊಂದಿ ಸದ್ಗತಿ ಪಡೆಯುವರು. ಸೂರ್ಯನು ತಪಸ್ಸು ಮಾಡಿದ ಸೌರ ತೀರ್ಥದಲ್ಲಿ ಸೂರ್ಯನು ಸಂತಾನದ ಅಪೇಕ್ಷೆಯಿಂದ ಹಿಂದೆ ಹತ್ತು ಸಾವಿರ ವರ್ಷ ತಪಸ್ಸು ಮಾಡಿದನು. ಅನಂತರ ಚಾಂದ್ರಾಯಣ ವ್ರತವನ್ನು, ಬಳಿಕ ಏಳು ಸಾವಿರ ವರ್ಷ ನಿರಾಹಾರನಾಗಿ ನಿಂತು ನನ್ನ ಧ್ಯಾನವನ್ನು ಮಾಡಿದನು. ಅವನ ಆ ತಪೋಯೋಗದಿಂದ ಸುಪ್ರಸನ್ನನಾದ ನಾನು ಅವನಿಗೆ ಸಂತಾನ ವರವನ್ನು ಕರುಣಿಸಿದೆನು. ಆ ವರದಿಂದ

ಸೂರ್ಯನಿಗೆ ಯಮಧರ್ಮ ಎಂಬ ಒಬ್ಬ ಗಂಡು ಮಗನೂ, ಯಮುನಾ ಎಂಬ ಒಬ್ಬ ಹೆಣ್ಣು ಮಗಳೂ ಹುಟ್ಟಿದರು. ಈ ಸೌಕರ ಕ್ಷೇತ್ರದಲ್ಲಿ ಧರ್ಮಾಚರಣೆಯನ್ನು ಅನುಷ್ಠಾನ ಮಾಡುತ್ತ ಎಂಟನೆ ಒಂದು ಭಾಗ ಆಹಾರವನ್ನು ಮಾತ್ರ ಮಾತ್ರ ಸೇವಿಸುತ್ತ ಸೌರ ತೀರ್ಥದಲ್ಲಿ ಸ್ನಾನ ಮಾಡುವವನು ಹತ್ತು ಸಾವಿರ ವರ್ಷ ಸೂರ್ಯ ಲೋಕದಲ್ಲಿ ವಾಸ ಮಾಡುವನು. ಅಲ್ಲಿ ಮರಣ ಹೊಂದಿದವನು ಆ ತೀರ್ಥದ ಪ್ರಭಾವದಿಂದ ಯಮಲೋಕಕ್ಕೆ ಹೋಗದೇ ಉತ್ತಮ ಲೋಕಕ್ಕೆ ಹೋಗುವನು.

*ವರಾಹ ಪುರಾಣದಲ್ಲಿ ನೂರಹನ್ನೊಂದನೇ ಅಧ್ಯಾಯ ಮುಗಿದುದು.*



## ಚಾಂಡಾಲನ ಪ್ರಾಮಾಣಿಕತೆ

**ಅಧ್ಯಾಯ - ೧೧೨**

**ಸೂತಮುನಿ :-** ಆ ಸೌರಕ ಕ್ಷೇತ್ರದಲ್ಲಿ ಶ್ರೀ ಹರಿಯ ಧ್ಯಾನ, ಗಾನ, ಭಜನೆ, ದಾನ, ಪೂಜೆ, ಜಪ, ಯಜ್ಞ, ಮುಂತಾದ ಪುಣ್ಯಕರ್ಮಗಳನ್ನು ಮಾಡಿದವರಿಗೆ ಯಾವ ಗತಿಯು ಉಂಟಾಗುವದು ಎಂದು ಭೂದೇವಿಯು ಪ್ರಶ್ನೆ ಮಾಡಿದ್ದಕ್ಕೆ ಶ್ರೀ ವರಾಹ ಸ್ವಾಮಿಯು ಹೇಳತೊಡಗಿದನು.

**ವರಾಹ :-** ಸುಂದರಿ, ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ ಕೇಳು- ''ಆ ಸೌಕರ ಕ್ಷೇತ್ರದಲ್ಲಿ ಒಂದು ಖಂಜರೀಟ ಪಕ್ಷಿ(ಗೀಜಗ)ಯು ಆಶೆಯಿಂದ ಅತಿಯಾಗಿ ಹುಳ ಹುಪ್ಪಡಿಗಳನ್ನು ತಿಂದಿತು. ಅಜೀರ್ಣದಿಂದ ಅದರ ಹೊಟ್ಟೆ ಕೆಟ್ಟು ಉಬ್ಬಸ ಪಡುತ್ತ ಅದು ಅಲ್ಲಿಯೇ ಸಾಯುವ ಸಂಕಟದಿಂದ ಹೊರಳಾಡ ತೊಡಗಿತು. ಅಷ್ಟರಲ್ಲಿ ಕೆಲ ಹುಡುಗರು ಆಟವಾಡುತ್ತ ಅಲ್ಲಿಗೆ ಬಂದು ಅದನ್ನು ತಮ್ಮ ಆಟಕ್ಕಾಗಿ ತೆಗೆದುಕೊಳ್ಳಬೇಕೆಂದು ''ನನಗೆ ಬೇಕು ನನಗೆ ಬೇಕು'' ಎಂದು ಬಡೆದಾಡ ತೊಡಗಿದರು. ಆಗ ಅವರಲ್ಲಿ ಒಬ್ಬನು '' ಇದು ನಿಮ್ಮದೇ ಆದರೆ ಇದರಿಂದ ನಮಗೇನು ಪ್ರಯೋಜನ '' ಎಂದಂದು ಆ ಹಕ್ಕಿಯನ್ನು ಎತ್ತಿ ಮುಂದೆ ಹರಿಯುತ್ತಿದ್ದ ಗಂಗೆಯ ನೀರಿನಲ್ಲಿ ಬಿಸುಟು ಒಗೆದನು. ಆ ಹಕ್ಕಿಯು ಗಂಗಾನದಿಯ ಒಂದು ತೀರ್ಥ ವಿಶೇಷವಾದ ಆದಿತ್ಯ ತೀರ್ಥದಲ್ಲಿ ಬಿದ್ದು ಆ ನೀರಿನಲ್ಲಿ ಮುಳುಗಿ ಸತ್ತಿತು. ಬಳಿಕ ಆ ತೀರ್ಥ ಮಹಿಮೆಯಿಂದ ಅದು ಅನೇಕ ಯಜ್ಞಯಾಗಗಳನ್ನು ಮಾಡಿದ ಒಬ್ಬ ಸಿರಿವಂತ ವೈಶ್ಯನ ಮಗನಾಗಿ ಹುಟ್ಟಿತು. ಆ ವೈಶ್ಯಕುಮಾರನಿಗೆ ಹನ್ನೆರಡು ವರ್ಷಗಳಾದ ಬಳಿಕ ಅವನು ತನ್ನ ಪಿತೃಗಳಿಗೆ ವಂದಿಸಿ ಕೈ ಮುಗಿದು ಹೇಳಿದನು.-

''ನೀವು ನನಗೆ ಹಿತವನ್ನು ಬಯಸುತ್ತಿದ್ದರೆ ಒಂದು ವರ ಕೊಡಬೇಕು. ನಾನು ಏನೇ ಮಾಡಿದರೂ ನೀವು ನನ್ನನ್ನು ತಡೆಯ ಕೂಡದು. ನಾನು ನಿಜವಾಗಿಯೇ ಹೇಳುತ್ತಲಿದ್ದೇನೆ.'' ಮಗನ ಈ ಮಾತು ಕೇಳಿ ಆ ತಾಯಿತಂದೆಗಳು ಸಂತಸದಿಂದ ಹೇಳಿದರು. '' ಮಗು, ನಿನ್ನ ಮನಸ್ಸಿನಲ್ಲಿ ಏನಿದ್ದರೂ ಹೇಳು. ನೀನು ಹೇಳಿದ್ದನ್ನು ನಾವು ಮಾಡುವೆವು. ನಮ್ಮಲ್ಲಿ ಮೂವತ್ತು ಸಾವಿರ ಒಳ್ಳೇ ಹಾಲು ಹಿಂಡುವ ಹಸುಗಳಿವೆ. ಬೇಕಾದರೆ ನೀನು ಅವುಗಳನ್ನು

ದಾನ ಮಾಡು. ಇಲ್ಲವೆ ವ್ಯಾಪಾರ, ಉದ್ಯೋಗ ಮಾಡು. ನಿನ್ನ ಸ್ನೇಹಿತರಿಗೆ ನಿನ್ನ ಮನಸ್ಸಿಗೆ ಬಂದಷ್ಟು ಧನ ಧಾನ್ಯ ರತ್ನಗಳನ್ನು ಕೊಡು. ಮಿತ್ರರಿಗೆ ಬೇಕಾದರೆ ದುಡ್ಡನ್ನು ಕೊಡು. ಮದುವೆ ಬೇಕೆಂದಿದ್ದರೆ ಒಳ್ಳೇ ಚೆಲುವೆಯಾದ ಹೆಣ್ಣನ್ನು ತಂದು ಮದುವೆ ಮಾಡುತ್ತೇವೆ. ಬೇಕಾದರೆ ಬ್ರಾಹ್ಮಣ ಭೋಜನ ಮಾಡಿಸು. ಇಲ್ಲವೆ ಯಜ್ಞಯಾಗಾದಿಗಳನ್ನು ಮಾಡಿಸು. ಒಟ್ಟಾರೆ ನಿನ್ನ ಅಪೇಕ್ಷೆ ಏನಿರುವದು ಅದೆಲ್ಲವನ್ನೂ ನಾವು ನಡಿಸಿ ಕೊಡುತ್ತೇವೆ.''

ತಾಯಿತಂದೆಗಳ ಈ ಮಾತನ್ನು ಕೇಳಿ ಆ ಬಾಲಕನು ಅವರ ಪಾದ ಮುಟ್ಟಿ ಬಾಗಿ ಬಿನ್ನವಿಸಿದನು- ''ಅಪ್ಪ, ನನಗೆ ಬೇರಾವ ಇಚ್ಛೆಯೂ ಇಲ್ಲ. ಸೌಕರ ಕ್ಷೇತ್ರ ಎಂದು ಹೆಸರಾದ ನಾರಾಯಣ ಕ್ಷೇತ್ರಕ್ಕೆ ಹೋಗಿ ತಪಸ್ಸನ್ನು ಮಾಡಬೇಕು ಎಂದು ಉತ್ಕಟವಾದ ಇಚ್ಛೆ ನನ್ನಲ್ಲಿ ಹುಟ್ಟಿದೆ. ಅದಕ್ಕೆ ನೀವು ನನಗೆ ಅಪ್ಪಣೆ ಕೊಡಿರಿ.'' ಅವನ ಈ ಮಾತುಗಳನ್ನು ಕೇಳಿ ದುಃಖಾಕ್ರಾಂತರಾದ ತಾಯಿತಂದೆಗಳು ಕರುಣೆ ದುಂಬಿ ಕೇಳಿದರು.-

''ಮಗು ನಿನಗಿನ್ನೂ ಹನ್ನೆರಡು ವರ್ಷ. ಈಗಲೇ ಏಕೆ ನಾರಾಯಣಾಶ್ರಮಕ್ಕೆ ಪ್ರಯಾಣ? ನೀನಿನ್ನೂ ನನಗೆ ಚಿಕ್ಕ ಮಗುವಾಗಿಯೇ ಇರುವೆ. ನಿನ್ನ ಮೇಲಿನ ಪ್ರೇಮದಿಂದ ನನ್ನ ಎದೆಹಾಲು ಈಗಲೂ ಸ್ರವಿಸುತ್ತದೆ. ನಿನಗೆ ಯಾರೂ ಬೈದಿಲ್ಲ, ಅಂದಿಲ್ಲ, ಆಡಿಲ್ಲ. ಈಗೇಕೆ ಮುಪ್ಪಿನ ಮುದುಕರಂತೆ ಕ್ಷೇತ್ರಯಾತ್ರೆಯ ಹುಚ್ಚು ?'' ಆಗ ಆ ಹನ್ನೆರಡು ವರ್ಷದ ಆ ಬಾಲಕನು ದಿಟ್ಟತನದಿಂದ ನುಡಿದನು.-

'' ಅಮ್ಮಾ, ನಾನು ನಿನ್ನ ಗರ್ಭದಲ್ಲಿ ಜನಿಸಿ ನಿನ್ನ ಮಗ ಎನಿಸಿದ್ದೇನೋ ನಿಜ. ಆದರೆ ವಾಸ್ತವವಾಗಿ ವಿಚಾರಿಸಿದರೆ ಎಲ್ಲಿಯ ಮಗ ? ಏನು ಸಂಬಂಧ ? ಯಾರಿಗೆ ಯಾರು ತಾಯಿತಂದೆ ? ಸಂಸಾರ ಸಾಗರದಲ್ಲಿ ಅನೇಕ ಜನ್ಮಗಳನ್ನು ಪಡೆಯುವ ಜೀವಿಗೆ ನೂರಾರು ಜನ ಹೆಂಡಿರುಮಕ್ಕಳು, ಸಾವಿರಾರು ಜನ ತಾಯಿ ತಂದೆಗಳೂ, ಜನ್ಮ ಜನ್ಮಾಂತರದಲ್ಲಿ ಆಗಿಹೋಗುತ್ತಾರೆ. ಅಂದ ಬಳಿಕ ಯಾರಿಗೆ ಯಾರು ಮಕ್ಕಳು ! ಯಾರಿಗೆ ಯಾರು ತಾಯಿತಂದೆ ! ವಿಚಾರಿಸಿ ನೋಡಿರಿ.'' ಆ ಚಿಕ್ಕ ಮಗುವಿನ ಈ ಮಾತುಗಳನ್ನು ಕೇಳಿ ಆ ಮಾತಾಪಿತೃಗಳು ಆಶ್ಚರ್ಯದಿಂದ ''ಮಗು, ನೀನು ಏನೋ ಗೂಢಾರ್ಥಉಳ್ಳ ಮಾತಾನಾಡುತ್ತಿರುವೆ. ಇದರ ರಹಸ್ಯವೇನು ಹೇಳು'' ಎಂದು ಕೇಳಿದರು.

ಆ ವೈಶ್ಯ ಬಾಲಕನು ತಾಯಿತಂದೆಗಳ ಆ ಪ್ರಶ್ನೆಗೆ '' ನಿಮಗೆ ನನ್ನ ಮಾತಿನ ನಿಜವಾದ ಮರ್ಮವನ್ನು ಅರಿಯಬೇಕೆಂದಿದ್ದರೆ ಸೌಕರ ಕ್ಷೇತ್ರಕ್ಕೆ ಹೋಗೋಣ ನಡೆಯಿರಿ. ಈ ಮಹಾ ರಹಸ್ಯದ ಒಳಗುಟ್ಟನ್ನು ಆ ಸೌಕರ ಕ್ಷೇತ್ರದಲ್ಲಿ ಇರುವ ಸೂರ್ಯ ತೀರ್ಥಕ್ಕೆ ಹೋದ ಬಳಿಕ ತಿಳಿಸುತ್ತೇನೆ'' ಎಂದು ನುಡಿದನು. ಆ ದಂಪತಿಗಳು ಮಗನ ಮಾತಿಗೆ ಹಾಗೇ ಆಗಲಿ ಎಂದು ಹೇಳಿ ತಮ್ಮಲ್ಲಿಯ ಸರ್ವ ದ್ರವ್ಯವನ್ನು ಮತ್ತೂ ಇಪ್ಪತ್ತು ಸಾವಿರ ಹಸುಗಳನ್ನೂ ತಮ್ಮ ಸಂಗಡ ತೆಗೆದುಕೊಂಡು ಆ ಸೌಕರ ಕ್ಷೇತ್ರಕ್ಕೆ ನಡೆದರು. ಮಾಘಶುದ್ಧ ತ್ರಯೋದಶಿಯಂದು ತಮ್ಮ ಊರುಬಿಟ್ಟು ಹೊರಟ ಅವರೆಲ್ಲರೂ ವೈಶಾಖ ಶುದ್ಧ ದ್ವಾದಶಿಯ ದಿನ ಸೌಕರ ಕ್ಷೇತ್ರ ಬಂದು ಸೇರಿದರು. ಅಲ್ಲಿ ಸ್ನಾನ ಪೂಜೆಗಳನ್ನು ಮಾಡಿ ಆ ವೈಶ್ಯ ದಂಪತಿಗಳು ಭಂಗುರಸ ಎಂಬ ಬ್ರಾಹ್ಮಣನಿಗೆ ತಮ್ಮ ಇಪ್ಪತ್ತು ಸಾವಿರ ಹಸುಗಳನ್ನು ದಾನ ಕೊಟ್ಟರು. ಮತ್ತು ಬೇರೆ ಬೇರೆ ಅನೇಕ ಧನಧಾನ್ಯ ವಸ್ತ್ರ ರತ್ನಾದಿ ವಸ್ತುಗಳನ್ನು

ದಾನ ಮಾಡಿದರು. ಮುಂದೆ ಮಳೆಗಾಲ ಬಂದು ಮುಗಿದು ಶರತ್ಕಾಲವು ಪ್ರಾಪ್ತವಾದ ಬಳಿಕ ಆ ವೈಶ್ಯ ದಂಪತಿಗಳು ಕಾರ್ತೀಕ ಶುದ್ಧ ಏಕಾದಶೀ ಸ್ನಾನ ಮಾಡಿ, ಪೂಜೆ ಮುಗಿಸಿ, '' ಮಗು, ನಾವು ಈ ಕ್ಷೇತ್ರಕ್ಕೆ ಬಂದು ಆರು ತಿಂಗಳಾಯಿತು. ನಾಳೆ ದ್ವಾದಶಿಯ ದಿನ ನೀನು ಇಲ್ಲಿ ತಿಳಿಸುತ್ತೇನೆಂದು ಹೇಳಿದ ಮಹಾ ರಹಸ್ಯವನ್ನು ತಿಳಿಸು ''ಎಂದು ಕೇಳಿದರು.

ಅವರ ಪ್ರಶ್ನೆಗೆ ''ನಾಳೆ ಉತ್ತರವನ್ನು ಕೊಡುತ್ತೇನೆ. '' ಎಂದು ಹೇಳಿದ ಆ ಬಾಲಕನು ಮರುದಿನ ದ್ವಾದಶೀ ಸ್ನಾನ ಆನ್ಹಿಕ ಮುಗಿಸಿ ಶ್ರೀಮನ್ನಾರಾಯಣನ ಅಡಿದಾವರೆಗಳಿಗೆ ವಂದಿಸಿ ತನ್ನ ತಾಯಿತಂದೆಗಳಿಗೆ ಹೇಳಿದನು.- ''ಅಪ್ಪ, ನಾನು ಕಳೆದಜನ್ಮದಲ್ಲಿ ಒಂದು ಗೀಜಗ ಹಕ್ಕಿ ಯಾಗಿದ್ದೆ. ಆಗ ಕೆಲವು ಹುಡುಗರು ಹುಡುಗಾಟಿಕೆಯಲ್ಲಿ (ನನ್ನನ್ನು) ಆ ಹಕ್ಕಿಯನ್ನು ಎತ್ತಿ ಗಂಗೆಯಲ್ಲಿ ಒಗೆದರು. ಆ ತೀರ್ಥದ ಪ್ರಭಾವದಿಂದ ನಾನು ನಿಮ್ಮ ಮಗನಾಗಿ ಹುಟ್ಟಿ ಬಂದೆ. ಈಗ ನಿಮಗೆ ನನ್ನ ಹಿಂದಿನ ಸಮಾಚಾರವನ್ನು ತಿಳಿಸಿದೆ. ಇನ್ನು ನೀವು ನಿಮ್ಮ ಸ್ವಸ್ಥಾನಕ್ಕೆ ತೆರಳಬರುದು.''

ಮಗನ ಈ ನುಡಿಗಳಿಂದ ಆ ವೈಶ್ಯ ತಾಯಿತಂದೆಗಳಲ್ಲಿ ಆ ಸೂಕರ ಕ್ಷೇತ್ರದ ವಿಷಯದಲ್ಲಿ ಅತ್ಯಂತ ಭಕ್ತಿಯು ಉತ್ಪನ್ನವಾಗಿ ಅವರೂ ಅಲ್ಲಿಯೇ ವಿಷ್ಣು ಪ್ರೋಕ್ತವಾದ ಪುಣ್ಯ ಕರ್ಮಗಳನ್ನು ಮಗನ ಸಲಹೆ ಸೂಚನೆಗಳಂತೆ ಮಾಡುತ್ತ ಅಲ್ಲಿಯೇ ವಾಸ ಮಾಡಿದರು. ಬಹು ದಿನ ಆ ಕ್ಷೇತ್ರದಲ್ಲಿ ಅವರು ಭಗವತ್ ಸೇವೆಯನ್ನು ಮಾಡಿದ ಬಳಿಕ ಅವರು ಮೂವರೂ ಅಲ್ಲಿಯೇ ಮರಣ ಹೊಂದಿದರು. ಶ್ವೇತದ್ವೀಪಕ್ಕೆ ಪ್ರಯಾಣ ಮಾಡಿದರು. ಆ ವೈಶ್ಯ ಪರಿವಾರದ ಅನೇಕ ಭಕ್ತರೂ ಆ ಕ್ಷೇತ್ರದಲ್ಲಿ ನೆಲೆಸಿ ಸತ್ಕರ್ಮಾನುಷ್ಠಾನವನ್ನು ಮಾಡಿ ಉದ್ಧೃತರಾದರು.

*ವರಾಹ ಪುರಾಣದಲ್ಲಿ ನೂರಹನ್ನೆರಡನೇ ಅಧ್ಯಾಯ ಮುಗಿದುದು.*



**ಶ್ರೀವರಾಹ :-** ಭೂದೇವಿ, ಆಕಳ ಶಗಣಿಯಿಂದ ನನ್ನ ವಾಸಸ್ಥಳವಾದ ದೇವರ ಮನೆಯನ್ನು ಸಾರಿಸಬೇಕು. ಅದರಿಂದ ಅವರು ಸಾವಿರಾರು ವರ್ಷ ಸ್ವರ್ಗದಲ್ಲಿದ್ದು ಸುಖವನ್ನು ಅನುಭವಿಸುವರು. ಹನ್ನೆರಡು ವರ್ಷ ದೇವರ ಮನೆಯನ್ನು ಗುಡಿಸುವದು ಸಾರಿಸುವದು, ದೇವರಪೂಜೆ ಮಾಡುವದು ಮೊದಲಾದ ಪುಣ್ಯಕಾರ್ಯಗಳನ್ನು ಭಕ್ತಿಯಿಂದ ಮಾಡಿದರೆ ಶುದ್ಧ ಶ್ರೀಮಂತ ವಂಶದಲ್ಲಿ ಹುಟ್ಟಿ, ಅನಂತರ ಕುಶದ್ವೀಪದಲ್ಲಿ ಹತ್ತು ಸಾವಿರ ವರ್ಷ ಜೀವಿಸಿ, ಅನಂತರ ರಾಜರಾಗಿ ನನ್ನಲ್ಲಿ ಭಕ್ತಿಯಿಂದ ಸರ್ವಶಾಸ್ತ್ರ ಅಭ್ಯಾಸವನ್ನು ಮಾಡುವರು. ಬಳಿಕ ದೇವ ಮಂದಿರಗಳನ್ನು ನಿರ್ಮಿಸಿ ಇಂಥ ಬೇರೆಬೇರೆ ಪುಣ್ಯ ಕರ್ಮಗಳನ್ನು ಮಾಡಿ ಕೊನೆಗೆ ನನ್ನ ಲೋಕವನ್ನು ಸೇರುವರು. ಭೂದೇವಿ, ಗೋಮಯದ ಮಹಿಮೆಯು ಅಗಾಧವಾಗಿದೆ. ಹೇಳುತ್ತೇನೆ ಕೇಳು ದೇವಾಲಯಕ್ಕೆ ಹತ್ತಿರದಲ್ಲಿಯಾಗಲೀ ದೂರದಲ್ಲಿಯಾಗಲೀ ಹೋಗಿ ಗೋಮಯವನ್ನು ಪಡೆದು ತಂದು ಗುಡಿಯನ್ನು ಸಾರಿಸುವವರು ಸಾವಿರವರ್ಷ ಸ್ವರ್ಗಲೋಕದಲ್ಲಿಯೂ ಹನ್ನೆರಡು ಸಾವಿರದ ಒಂದು ನೂರು ವರ್ಷ ಶಾಲ್ಮಲೀ ದ್ವೀಪದಲ್ಲಿಯೂ ಇದ್ದು ಸುಖೋಪಭೋಗ ಮಾಡುವರು. ಹನ್ನೆರಡು ವರ್ಷಕಾಲ ದೇವರಲ್ಲಿ ಭಕ್ತಿಯಿಂದ ನನ್ನ ದೇವಾಲಯವನ್ನು ಗೋಮಯದಿಂದ ಸಾರಿಸುವವರು ವಿಷ್ಣು ಲೋಕವನ್ನು ಹೊಂದುವರು.

ಧರಣೀದೇವಿ, ಸೂಕರ ಕ್ಷೇತ್ರದಲ್ಲಿ ಇರುವ ನನ್ನ ಮೂರ್ತಿಗೆ ಪವಿತ್ರ ಗಂಗೆಯ ಜಲದಿಂದ ಅಭಿಷೇಕ ಮಾಡುವವರು ಆ ನೀರಿನ ಹನಿಗಳಷ್ಟು ದಿನ ಸ್ವರ್ಗದಲ್ಲಿ ಸುಖಿಸಿ, ಅನಂತರ ಕೆಲವು ಕಾಲ ಕ್ರೌಂಚ ದ್ವೀಪದಲ್ಲಿದ್ದು, ಆ ಬಳಿಕ ಧಾರ್ಮಿಕರಾದ ರಾಜರಾಗಿ ಕೊನೆಗೆ ವೈಕುಂಠಲೋಕಕ್ಕೆ ಪ್ರಯಾಣ ಮಾಡುವರು. ನನ್ನ ಕ್ಷೇತ್ರವನ್ನು ಗಂಡಸರಾಗಲಿ, ಹೆಂಗಸರಾಗಲೀ ಪೊರಕೆಯಿಂದ ಕಸ ಉಡಗಿದರೆ ಆ ಕಸದಲ್ಲಿಯ ಧೂಳಿನ ಕಣಗಳಷ್ಟು ನೂರು ವರ್ಷ ಸ್ವರ್ಗ ಲೋಕದಲ್ಲಿ ಅನಂತರ ಶಾಕ ದ್ವೀಪದಲ್ಲಿ ವಾಸಮಾಡಿ, ಕೊನೆಗೆ ಧಾರ್ಮಿಕ ರಾಜರಾಗಿ ಭಗವದ್‌ಭಕ್ತರಾಗಿ ಮುಂದೆ ಪರಮಾತ್ಮನ ಅತ್ಯಂತ ಪ್ರಸಾದದಿಂದ ವೈಕುಂಠಗಾಮಿಗಳಾಗುತ್ತಾರೆ. ಈ ವರಾಹ ದೇವರ ಮುಂದೆ ಹಾಡನ್ನು ಹಾಡುವವರು ಆ ಹಾಡಿನಲ್ಲಿಯ ಪಂಕ್ತಿಗಳಲ್ಲಿರುವಷ್ಟು ಸಾವಿರ ವರ್ಷ ಸ್ವರ್ಗದಲ್ಲಿ ವಾಸ ಮಾಡುವರು. ಹೀಗೆ ಸ್ವರ್ಗಲೋಕದಲ್ಲಿ ಸರ್ವವೇದ ವಿಜ್ಞರಾದ ಸಿದ್ಧ ಪುರುಷರಾಗಿ ಇದ್ದು ನಂದ ನೋಪವನಗಳಲ್ಲಿ ದೇವತಾಮಿತ್ರರೊಂದಿಗೆ ವಿಹಾರ ಮಾಡಿ, ಅನಂತರ ಭೂಮಿಯಲ್ಲಿ ಜನಿಸಿ ವೈಷ್ಣವರ ಸಹವಾಸದಿಂದ ಪರಮ ಭಕ್ತಿಯುಳ್ಳವರಾಗಿ ನಿತ್ಯವೂ ಗಾಯನದಿಂದ ಶ್ರೀ ಹರಿಯ ಸೇವೆ ಮಾಡಿ ನನ್ನ ಅನುಗ್ರಹವನ್ನು ಪಡೆದು ನನ್ನ ಲೋಕವನ್ನು ಸೇರುತ್ತಾರೆ. ನನ್ನ ಮುಂದೆ ಸಂಗೀತ ಸೇವೆಯನ್ನು ಮಾಡುವವರು ಅತ್ಯುತ್ತಮವಾದ ಗತಿಯನ್ನು ಪಡೆಯುವರೆಂಬ ವಿಷಯದಲ್ಲಿ ನಿನಗೊಂದು ಆಖ್ಯಾಯಿಕೆ ಹೇಳುತ್ತೇನೆ ಕೇಳು-

"ಭದ್ರೆ, ಹಿಂದೆ ಪೂರ್ವಕಾಲದಲ್ಲಿ ನನ್ನಲ್ಲಿ ಏಕಾಂತ ಭಕ್ತಿಯನ್ನು ಮಾಡುವ ಓರ್ವ ಚಂಡಾಲನಿದ್ದನು. ಅವನು ಪ್ರತಿನಿತ್ಯವೂ ಈ ಸೂಕರ ಕ್ಷೇತ್ರಕ್ಕೆ ದೂರದ ತನ್ನ ಗ್ರಾಮದಿಂದ ಬಂದು ರಾತ್ರಿ ನನ್ನ ಗುಣಗಾನ ರೂಪವಾದ ಸಂಗೀತ ಸೇವೆಯನ್ನು

ಮಾಡುತ್ತಲಿದ್ದನು. ಬೆಳಗಾಗುವವರೆಗೆ ಇಡೀ ರಾತ್ರಿಯೆಲ್ಲ ಹಾಡುಗಳನ್ನು ಹೇಳುತ್ತಿದ್ದನು. ಒಂದು ದಿನ ಕಾರ್ತೀಕ ಶುದ್ಧ ದ್ವಾದಶಿಯಂದು ಎಲ್ಲ ಜನರು ಮಲಗಿದ ಬಳಿಕ ಆ ಚಂಡಾಲನು ಕೈಯಲ್ಲಿ ತಂಬೂರಿಯನ್ನು ಹಿಡಿದುಕೊಂಡು ಶ್ರೀ ಹರಿಯ ಸಂಗೀತ ಸೇವೆಯನ್ನು ಮಾಡಬೇಕೆಂಬ ಉದ್ದೇಶದಿಂದ ಸೌಕರಕ್ಷೇತ್ರಕ್ಕೆ ಹೊರಟನು. ದಾರಿಯಲ್ಲಿ ಅವನು ಅವಸರದಿಂದ ದೇವರ ಧ್ಯಾನಗಾನರೂಪ, ಸೇವೆಗಾಗಿ ನಡೆದಾಗ ಒಂದು ಬ್ರಹ್ಮ ರಾಕ್ಷಸವು ಬಂದು ಅವನನ್ನು ಹಿಡಿದುಕೊಂಡಿತು. ದುರ್ಬಲನಾದ ಆ ಹೊಲೆಯನು ಬಹಾಬಲಿಷ್ಠವಾದ ಆ ಬ್ರಹ್ಮರಾಕ್ಷಸದ ಅಕರಾಳವಿಕರಾಳ ರೂಪವನ್ನು ಕಂಡೇ ಹೆದರಿ ಹೋದನು. ಆ ಭೀಕರ ಬ್ರಹ್ಮರಾಕ್ಷಸನ ಉಕ್ಕಿನ ಹಿಡಿತದಲ್ಲಿ ಸಿಕ್ಕು ಹೊಲೆಯನಿಗೆ ಆಚೀಚೆ ಮಿಸುಕಾಡಲೂ ಕೂಡ ಬಾರದಂತಾಯಿತು. ದೇವರ ಸೇವೆಯು ತನಗೆ ತಪ್ಪಿತಲ್ಲ ಎಂದು ಆ ಅಸ್ಪೃಶ್ಯನಿಗೆ ದುಃಖವು ಉಕ್ಕಿಬಂದಿತು. ರಕ್ಕಸನ ಕೈಯಲ್ಲಿ ಸಿಕ್ಕು ಒದ್ದಾಡುವ ಆ ಹೊಲೆಯನಿಗೆ ಹೆದರಿಕೆಗಿಂತ ಹೆಚ್ಚಾಗಿ ನನ್ನ ಹರಿಸೇವೆಗೆ ವಿಘ್ನವನ್ನು ಮಾಡಿದನಲ್ಲ ಎಂದು ಮನಸ್ಸಿನಲ್ಲಿ ತಾಪ ರಾಕ್ಷಸನ ಮೇಲೆ ಕೋಪ ಉಂಟಾಗಿ ಅವನ ಸಂತಾಪದಿಂದ ಸಿಡಿದೆದ್ದು '' ಓಡುತ್ತ ಹೋಗುತ್ತಲಿರುವ ನನ್ನನ್ನು ಧಾವಿಸಿ ಬಂದು ನೀನೇಕೆ ಹಿಡಿದೆ ?'' ಎಂದು ಕೇಳಿದನು. ಅದಕ್ಕೆ ಮನುಷ್ಯರ ಮಾಂಸದ ರುಚಿ ಹತ್ತಿದ ಆ ರಾಕ್ಷಸನು ಲಘು ನಕ್ಕು ನುಡಿದನು.

''ನನಗೆ ಈಗ ಹತ್ತು ದಿನಗಳಿಂದ ಎಷ್ಟು ಹುಡುಕಾಡಿದರೂ ಯಾವ ಪ್ರಾಣಿಯೂ ದೊರಕದೆ ಉಪವಾಸವಾಗಿರುವದು. ಇಂದು ಅನಾಯಾಸವಾಗಿ ಸರಿಯಾಗಿ ಪಾರಣೆ ಹೊತ್ತಿಗೆ ಬ್ರಹ್ಮದೇವರು ನಿನ್ನನ್ನು ಇಲ್ಲಿಗೆ ಕಳಿಸಿರುವನು. ಹೊಸ ರಕ್ತ, ಬಿಸಿ ಮಾಂಸ ಗಳಿಂದ ಕೂಡಿದ ನಿನ್ನ ಮಾನವ ದೇಹವನ್ನು ತಿಂದು ನನ್ನ ಉಪೋಷಣೆಯ ಪಾರಣೆಯನ್ನು ಮಾಡುವೆನು. ನೀನು ಇಂದಿನ ನನ್ನ ಆಹಾರಕ್ಕಾಗಿಯೇ ವಿಧಾತನು ಕಳಿಸಿ ಕೊಟ್ಟ ಪಾರಣೆಯ ಪದಾರ್ಥವಾಗಿರುವೆ. ಆ ದೇವರನ್ನು ನೆನೆದು ನಾನು ನಿನ್ನನ್ನು ಇಂದು ಕೊಂದು ತಿಂದು ಪರಮ ತೃಪ್ತಿಯನ್ನು ಪಡೆಯುತ್ತೇನೆ. ''

ಅದನ್ನು ಕೇಳಿ ನನ್ನ ಗಾನಯೋಗಿಯೂ ಮತು ಭಾವಿಕನೂ ಆದ ಆ ಚಂಡಾಲನು ಆ ಬ್ರಹ್ಮ ರಾಕ್ಷಸಕ್ಕೆ ವಿನಯದಿಂದ ಬಾಗಿ ಬಿನ್ನವಿಸಿದನು.-

''ಭಾಗ್ಯವಂತನೇ, ನಿನ್ನ ಉಪವಾಸದ ಪಾರಣೆಯ ಹೊತ್ತಿಗೆ ನಾನು ಬಂದು ಒದಗಿದ್ದೇನೋ ನಿಜ. ಬ್ರಹ್ಮದೇವರು ಒದಗಿಸಿದ ನನ್ನನ್ನು ನೀನು ಮುರಿದು ತಿನ್ನುವದೂ ನಿನ್ನ ಜಾತಿಗೆ ಉಚಿತವೇ ಆಗಿರುತ್ತದೆ. ಆದರೆ ನನ್ನದೊಂದು ಪ್ರಾರ್ಥನೆಯನ್ನು ಆಲಿಸು. ನಾನು ಈಗ ಸೂಕರ ಕ್ಷೇತ್ರಕ್ಕೆ ಸ್ವಾಮಿಯ ಸಂಗೀತ ಸೇವೆಗಾಗಿ ಹೊರಟಿದ್ದೇನೆ. ಪ್ರತಿನಿತ್ಯವೂ ನಾನು ಜನರೆಲ್ಲರೂ ಮಲಗಿದ ಬಳಿಕ ಆ ವರಾಹ ದೇವರ ಮುಂದೆ ಕುಳಿತು ದೇವರ ಗುಣಗಾಯನ ರೂಪವಾದ ಹಾಡುಗಳನ್ನು ಹಾಡಿ ಯಥಾಶಕ್ತಿ ಗಾನಸೇವೆಯನ್ನು ಮಾಡುತ್ತೇನೆ. ಇಲ್ಲಿ ನಾನು ಬದುಕಿ ಇರುವವರೆಗೂ ಪರಮಾತ್ಮನ ಎದುರಿಗೆ ಜಾಗರಣೆ ಮಾಡಿ ಸಂಗೀತೋತ್ಸವವನ್ನು ತಪ್ಪದೇ ಮಾಡಬೇಕೆಂದು ಒಂದು ವ್ರತ ಹಿಡಿದಿದ್ದೇನೆ. ಆದುದರಿಂದ ಇಂದು ಈಗ ನನಗೆ ವರಾಹ ದೇವಾಲಯಕ್ಕೆ ಹೋಗಿ ಹಾಡು ಹಾಡಿ ಬರಲು

ಅವಕಾಶವನ್ನು ಕೊಡು. ನಾನು ಈ ಸಂಗೀತ ಜಾಗರಣೆಯ ಉತ್ಸವವನ್ನು ದೇವರ ಮುಂದೆ ಮಾಡಿ ಮುಗಿಸಿಕೊಂಡು ಮರಳಿ ಬರುವಾಗ ನೀನು ನನ್ನನ್ನು ತಿನ್ನಬಹುದು. ಇದರಿಂದ ನನ್ನ ದೇವರ ಸೇವಾರೂಪವಾದ ಸಂಗೀತ ವ್ರತವೂ ಸಾಂಗವಾಗಿ ನೆರವೇರಿದಂತಾಗುವದು. ಬ್ರಹ್ಮದೇವರು ನಿನಗಾಗಿ ವಿಧಿಸಿದ ಮಾಂಸ ಪಾರಣೆಯೂ ಜರುಗಿದಂತಾಗುವದು. ನಿನ್ನ ಹಸಿವೆಯೂ ಹಿಂಗಿದಂತಾಗುವದು.''

ಚಂಡಾಲನ ಈ ವಿಚಿತ್ರವಾದ ನುಡಿಗಳನ್ನು ಆಲಿಸಿ ಆ ಬ್ರಹ್ಮರಾಕ್ಷಸಕ್ಕೆ ಕೋಪ ಬಂದು ಅದು ಗರ್ಜಿಸಿತು- ''ಮೂರ್ಖಾ, ನಾನು ನಿನ್ನ ಮಾತನ್ನು ನಂಬುವಷ್ಟು ಮೂಢನೆಂದು ತಿಳಿಯಬೇಡ. ಮತ್ತೆ ಬರುತ್ತೇನೆಂದು ನನ್ನನ್ನು ವಂಚಿಸಲಿಕ್ಕಾಗಿಯೇ ನೀನು ಹೇಳುತ್ತಲಿರುವೆ. ಮೃತ್ಯುವಿನ ಮುಖದಿಂದ ಒಮ್ಮೆ ನುಣುಚಿಕೊಂಡು ಪಾರಾಗಿ ಹೋದ ಬಳಿಕ ಮತ್ತೆ ಯಾರು ಆ ಸಾವನ್ನು ಅಪ್ಪಿಕೊಳ್ಳಲು ಬರುವರು !ನೀನು ನನ್ನ ಕೈಯಿಂದ ಪಾರಾಗಿ ಬದುಕಿ ಉಳಿಯಬೇಕೆಂದು ಹಂಚಿಕೆ ಹಾಕಿ ಸುಳ್ಳು ಹೇಳಿ ಪಾರಾಗಲು ಪ್ರಯತ್ನಿಸುತ್ತಿರುವಿ. ಏನಾದರೂ ನಾನು ನಿನ್ನನ್ನು ಬಿಡಲಾರೆ.'' ಅದನ್ನು ಕೇಳಿ ಆ ಹೊಲೆಯನು ಆ ಬ್ರಹ್ಮರಾಕ್ಷಸಕ್ಕೆ ಅಂಗಲಾಚಿದನು.-

''ರಾಕ್ಷಸನೇ, ನನ್ನ ಪೂರ್ವ ಕರ್ಮದ ದೋಷದಿಂದ ನಾನು ಹೊಲೆಯನಾಗಿ ಹುಟ್ಟಿದ್ದೇನೋ ನಿಜ. ಆದರೆ ನನ್ನ ಈ ಜನ್ಮದಲ್ಲಿ ನಾನು ಹುಸಿಯಾಡಿಲ್ಲ. ನಾನು ಈಗ ಹೃತ್ಪೂರ್ವಕವಾಗಿ ಮಾಡುವ ನನ್ನ ಪ್ರತಿಜ್ಞೆಯನ್ನು ಕೇಳು- ''ನಾನು ಬಹುದೂರದ ಊರಿಂದ ಯಾವ ಕಾರ್ಯಕ್ಕಾಗಿ ಹೊರಟಿರುವೆನೋ ಆ ಸಂಗೀತ ಸೇವೆಯನ್ನು ವರಾಹ ದೇವರ ಮುಂದೆ ಮಾಡಿ ಮುಗಿಸಿ ಸತ್ಯವಾಗಿಯೂ ಮರಳಿ ನಿನ್ನ ಬಳಿಗೆ ಬರುತ್ತೇನೆ. ನನ್ನ ಮಾತು ಸತ್ಯ ಎಂದು ನಿನಗೆ ಎನಿಸಿದರೆ ನನ್ನನ್ನು ಈ ದೇವರ ಸೇವೆಗಾಗಿ ಹೋಗಗೊಡು. ಈ ಜಗತ್ತೆಲ್ಲವೂ ಸತ್ಯಮೂಲವಾಗಿದೆ. ಸತ್ಯದ ಮಹಿಮೆಯನ್ನು ಕೇಳು.

''ಸತ್ಯಮೂಲಂ ಜಗತ್ಸರ್ವಂ ಲೋಕಾಃ ಸತ್ಯೇ ಪ್ರತಿಷ್ಠಿತಾಃ
ಸತ್ಯೇನ ಸಿದ್ಧಿಂ ಪ್ರಾಪ್ತಾ ಹಿ ಋಷಯೋ ಬ್ರಹ್ಮವಾದಿನಃ ॥
ಸತ್ಯೇನ ದೀಯತೇ ಕನ್ಯಾ ಸತ್ಯಂ ಜಲ್ಪಂತಿ ಬ್ರಾಹ್ಮಣಾಃ ॥
ಸತ್ಯಂ ಜಯಂತಿ ರಾಜಾನಃ ಸ್ತ್ರೀಣ್ಯೇತಾನ್ಯಜಾವನ್ ಋತಂ
ಸತ್ಯೇನ ಗಮ್ಯತೇ ಸ್ವರ್ಗೋ ಮೋಕ್ಷಃ ಸತ್ಯೇನ ಚಾಪ್ಯತೇ ।
ಸತ್ಯೇನ ತಪತೇ ಸೂರ್ಯಃ ಸೋಮಃ ಸತ್ಯೇನ ರಾಜತೇ ॥

ಎಲ್ಲ ಲೋಕಗಳೂ ಸತ್ಯದಲ್ಲಿ ನೆಲೆಸಿವೆ. ಬ್ರಹ್ಮಾಜ್ಞಾನಿಗಳಾದ ಋಷಿಗಳು ಸತ್ಯದಿಂದಲೇ ಸಿದ್ಧಿಯನ್ನು ಪಡೆದಿದ್ದಾರೆ. ಸತ್ಯದಿಂದಲೇ ಕನ್ಯಾದಾನವು ಮಾಡಲ್ಪಡುವದು. ಸತ್ಯವನ್ನು ನುಡಿಯುವವರೇ ಬ್ರಾಹ್ಮಣರೂ ಎನಿಸುವರು. ರಾಜರು ಸತ್ಯದಿಂದಲೇ ಈ ಲೋಕದಲ್ಲಿ ಗೆಲವು ಪಡೆಯುವರು. ಸತ್ಯದಿಂದಲೇ ಎಲ್ಲ ಜನರು ಇಹಲೋಕಪರಲೋಕಗಳಲ್ಲಿ ನಲಿವು ಉಲಿವುಗಳನ್ನು ಹೊಂದುವರು. ಸತ್ಯದಿಂದಲೇ ಸ್ವರ್ಗವು ದೊರಕುವದು. ಮೋಕ್ಷವನ್ನು ಕೂಡ ಸತ್ಯದಿಂದ ಹೊಂದಬಹುದು. ಸೂರ್ಯಚಂದ್ರರು ಸತ್ಯದಿಂದಲೇ ಬೆಳಗುವರು.

ರಾಕ್ಷಸ, ನಾನು ಸತ್ಯವಾಗಿಯೂ ದೇವರ ಮುಂದೆ ಹಾಡುಹಾಡಿ ನಿನ್ನ ಬಳಿಗೆ ಬರುವದು ನಿಜವೆಂದು ನಂಬು. ನಾನು ಬಾರದಿದ್ದರೆ ನನಗೆ ಗುರುವಿನ ಮಡದಿಯೊಡನೆ ಸರಸಕ್ಕೆ ಇಳಿದ ಪಾಪವು ಬರಲಿ. ಯಜ್ಞ ಮಾಡಲು ಕುಳಿತಾಗ ಅಗ್ನಿಸಾಕ್ಷಿಯಾಗಿ ಸುಳ್ಳು ಮಾತನ್ನು ಆಡಿದ ಪುರೋಹಿತನಿಗೆ ಬರುವ ಪಾಪವು ನನಗೆ ತಟ್ಟಲಿ.

ನಾನು ಪುನಃ ಇಲ್ಲಿಗೆ ಬಾರದಿದ್ದರೆ ಶೆರೆಕುಡುಕನಿಗೂ ತಲೆಗಡುಕನಿಗೂ ಕಳವು ಸುಲಿಗೆ ಮಾಡುವವನಿಗೂ ಆಗುವ ದುರ್ಗತಿಯು ನನಗೆ ಆಗಲಿ.'' ಚಂಡಾಲನ ಈ ಮಾತನ್ನು ಕೇಳಿ ಬ್ರಹ್ಮರಾಕ್ಷಸಕ್ಕೆ ಅವನಲ್ಲಿ ನಂಬಿಗೆ ಉಂಟಾಯಿತು. ಅದು ಮಿದುವಾಗಿ ''ಮಹಾನುಭಾವ, ಹೀಗಿದ್ದರೆ ನಿನಗೆ ನನ್ನ ನಮಸ್ಕಾರವಿರಲಿ. ಆದರೂ ನಾನು ಈ ಹಸಿವೆಯ ಕಸಿವಿಸಿಯನ್ನು ತಾಳಲಾರೆ. ನೀನು ಬೇಗನೆ ಹೋಗಿ ನಿನ್ನ ಗಾನೋಪಾಸನೆಯನ್ನು ಮಾಡಿಕೊಂಡು ಬೇಗನೇ ಮರಳಿ ಬಾ'' ಎಂದು ನುಡಿಯಿತು.

ಅನಂತರ ನನ್ನ ಭಕ್ತನಾದ ಆ ಅಸ್ಪೃಶ್ಯನು ಮರಳಿ ಬರುವದಾಗಿ ಆ ಬ್ರಹ್ಮರಾಕ್ಷಸಕ್ಕೆ ಆಶ್ವಾಸನೆಯನ್ನಿತ್ತು ನನ್ನ ಕ್ಷೇತ್ರಕ್ಕೆ ಬಂದು ಬೆಳಗಾಗುವವರೆಗೂ ನನ್ನ ಎದುರು ಕುಳಿತು ತಂಬೂರಿಯನ್ನು ಮೀಟುತ್ತ ಭಕ್ತಿ ಪರವಶನಾಗಿ ಹಾಡುಗಳನ್ನು ಹಾಡಿದನು. ನಡುನಡುವೆ ದೇವಭಜನೆ ಮಾಡುತ್ತ ಕುಣಿದನು. ಹೀಗೆ ಬೆಳಗಾಗುವವರೆಗೆ ಧ್ಯಾನ ಗಾನಗಳಿಂದ ಜಾಗರಣೆ ಮಾಡಿ ಬೆಳಗಾದ ಬಳಿಕ ಎದ್ದು ನಿಂತು '' ನಮೋ ನಾರಾಯಣಾಯ'' ಎಂದು ಹೇಳಿ ವರಾಹ ದೇವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಅಲ್ಲಿಂದ ಹೊರಟನು. ರಾಕ್ಷಸನಿಗೆ ತಾನು ಮಾತು ಕೊಟ್ಟಂತೆ ತಾನು ಅಲ್ಲಿಗೆ ಹೋಗಿ ಹಸಿದು ಕುಳಿತ ಆ ಬ್ರಹ್ಮರಾಕ್ಷಸನ ಪಾರಣೆಯ ಹೊತ್ತಿಗೆ ಒದಗಬೇಕೆಂದು ಹೊಲೆಯನು ಆ ಕಡೆ ಗಡಿಬಿಡಿಯಿಂದ ನಡೆದಾಗ ಅವನ ಎದುರು ಒಬ್ಬ ಮನುಷ್ಯನು ಬಂದು ನಿಂತುಕೊಂಡನು. ಆ ಪುರುಷನು ಈ ಹೊಲೆಯನನ್ನು ತಡೆದು '' ಒಳ್ಳೆಯವನಾದ ಚಂಡಾಲನೇ, ಸಾಯಲಿಕ್ಕೆ ಇಷ್ಟೇಕೆ ಗಡಿಬಿಡಿ ? ಇಲ್ಲಿಗೆ ಬರುವಾಗ ನಿನ್ನನ್ನು ತಡೆದವನು ರಾಕ್ಷಸನೆಂಬುದು ನಿನಗೆ ತಿಳಿದಿಲ್ಲವೇ ? ತಿಳಿದು ತಿಳಿದೂ ಆ ಮೃತ್ಯುವಿನ ಬಳಿಗೆ ನೀನೇಕೆ ಧಾವಿಸುವೆ ? ಈಗ ನೀನು ರಾಕ್ಷಸನ ಬಳಿಯಲ್ಲಿ ಹೋಗುವದೂ ಬೇಡ, ಪ್ರಾಣ ನೀಗುವದೂ ಬೇಡ '' ಎಂದು ಹೇಳಿದನು. ಆ ಮನುಷ್ಯನ ಮಾತನ್ನು ಕೇಳಿ ಹೊಲೆಯನು ''ಅಯ್ಯಾ, ನಾನು ಆ ರಾಕ್ಷಸನಿಗೆ ಮರಳಿ ಬರುತ್ತೇನೆಂದು ವಚನ ಕೊಟ್ಟಿದ್ದೇನೆ. ಸತ್ಯವನ್ನು ಪರಿಪಾಲಿಸುವದು ನನ್ನ ಕರ್ತವ್ಯವಾಗಿದೆ. ಸಾವಿನ ಭಯದಿಂದ ನಾನು ಸತ್ಯವನ್ನು ಎಂದೂ ಬಿಡಲಾರೆ.'' ಎಂದು ಹೇಳಿದನು.

ಇದನ್ನು ಕೇಳಿ ತಾವರೆ ದಳದಂತೆ ತುಂಬುಗಣ್ಣಿನ ಆ ಸತ್ಪುರುಷನು ''ಪುಣ್ಯವಂತನಾದ ಪಂಚಮನೇ, ನಿನ್ನನ್ನು ಕೊಂದು ತಿಂದುಹಾಕುವ ಮೃತ್ಯುರೂಪಿಯಾದ ಆ ದೈತ್ಯನ ಬಳಿಗೆ ನೀನು ಖಂಡಿತವಾಗಿಯೂ ಹೋಗಬೇಡ. ಈಗ '' ವೃತ್ತ್ಯರ್ಥೇ ಪ್ರಾಣಸಂಕಟೇ '' ಎಂಬ ವಚನದಂತೆ ಸಾಯುವ ಸಂಕಟ ಬಂದಾಗ ಸುಳ್ಳು ಹೇಳಿದರೂ ಪಾಪವಿಲ್ಲ. ಆದುದರಿಂದ ದುಷ್ಟನಾದ ಆ ದೈತ್ಯನೆದುರು ಅಸತ್ಯವನ್ನು ಹೇಳಿ ನೀನು ಬದುಕಿ ಉಳಿದು, ದೇವರ ಸೇವೆ ಮಾಡು. ಜನ್ಮವನ್ನು ಸಾರ್ಥಕಮಾಡಿಕೊ'' ಎಂದು ಬೋಧಿಸಿದನು.

ಅದಕ್ಕೆ ಆ ಪಂಚಮನು ಇಂತು ನುಡಿದನು. ''ಮಹಾತ್ಮಾ, ನೀನು ಹೇಳಿದ್ದೇನೋ ನಿಜ. ಆದರೆ ಸುಳ್ಳು ಮಾತನಾಡದಿರುವದೇ ನನ್ನ ವ್ರತವಾಗಿದೆ. ಹಸಿವೆಯಿಂದ ನನ್ನನ್ನು ತಿನ್ನಬಂದ ಆ ರಾಕ್ಷಸನು ನನ್ನ ಮಾತನ್ನು ನಂಬಿ ನನ್ನನ್ನು ಬಿಟ್ಟು ಇಂದಿನ ದೇವರ ಸೇವೆಗೆ ನನಗೆ ಅನುಕೂಲ ಮಾಡಿಕೊಟ್ಟಿದ್ದಾನೆ. ಹರಿ ಸೇವೆಗೆ ಅವಕಾಶ ಒದಗಿಸಿದ ಆ ದೈತ್ಯನಿಗೆ ನಾನು ಹೇಗೆ ಮೋಸ ಮಾಡಲಿ ? ಎಂದೂ ಇಂದಿನವರೆಗೆ ಹುಸಿ ನುಡಿಯದ ನಾನು ಜೀವಗಳ್ಳನಾಗಿ ನನ್ನ ಸತ್ಯವ್ರತವನ್ನು ಹೇಗೆ ತೊರೆಯಲಿ ! ನಾನೆಂದೂ ಸುಳ್ಳು ಮಾತನಾಡಲಾರೆ. ನನ್ನನ್ನು ನಂಬಿದವರಿಗೆ ಮೋಸ ಮಾಡಲಾರೆ. ನನ್ನ ಮೇಲೆ ಇಷ್ಟು ಪ್ರೀತಿ ತೋರಿದ ನಿಮಗೆ ನನ್ನ '' ನಮಸ್ಕಾರ. ''

ಹೀಗೆ ಹೇಳಿ ಆ ಚಾಂಡಾಲನು ಲಗುಬಗೆಯಿಂದ ಅಲ್ಲಿಂದ ಹೊರಟು ರಾಕ್ಷಸನ ಬಳಿಗೆ ಬಂದನು. ಮತ್ತು ಆ ಬ್ರಹ್ಮರಾಕ್ಷಸನನ್ನು ಬೇಡಿಕೊಂಡನು.-

''ಭಾಗ್ಯವಂತ, ಇಕೋ ನಾನು ಬಂದಿದ್ದೇನೆ. ಇನ್ನು ತಡಮಾಡಬೇಡ. ನನ್ನನ್ನು ಕೊಂದು ತಿಂದು ಬಿಡು. ನಿನ್ನ ದಯದಿಂದ ನಾನು ವರಾಹ ಕ್ಷೇತ್ರಕ್ಕೆ ಹೋಗಿ ಬಂದೆ ದೇವನನ್ನು ಕಂಡೆ. ಬಾಯಿತುಂಬ ಕೊಂಡಾಡಿದೆ. ಅವನನ್ನು ಕುರಿತು ಹಾಡಿದೆ. ಭಜನೆ ಮಾಡುತ್ತ ಕುಣಿದೆ. ಇಂಥ ಭಗವತ್ಸೇವೆಗೆ ನನಗೆ ಅವಕಾಶ ಮಾಡಿ ಕೊಟ್ಟಿದ್ದಕ್ಕಾಗಿ ನಿನಗೆ ನಾನು ವಂದಿಸುತ್ತೇನೆ. ಇನ್ನು ನಿನ್ನ ಮನ ಬಂದಂತೆ ನನ್ನ ಮೈಕೈಗಳನ್ನು ಹರಿದು ತಿನ್ನು. ಬಿಸಿ ಬಿಸಿಯಾದ ನನ್ನ ನೆತ್ತರವನ್ನು ಹೀರು. ನನ್ನ ತಾಜಾ ಮೈಮಾಂಸವನ್ನು ಉಣ್ಣು. ಮೊದಲೇ ಹಸಿದಿದ್ದ ನಿನಗೆ ನಾನು ಸೂಕರ ಕ್ಷೇತ್ರಕ್ಕೆ ಹೋಗಿ ಬರುವವರೆಗೆ ಬಹಳ ತಡವಾಯಿತು. ಅದರಿಂದ ಬಹಳ ಹಸಿದಿದ್ದೀಯ. ಬೇಗಬೇಗ ನನ್ನನ್ನು ಭಕ್ಷಿಸು. ನಿನ್ನ ಆತ್ಮವನ್ನು ತೃಪ್ತಿಪಡಿಸು. ಒಬ್ಬರನ್ನು ಆನಂದಪಡಿಸಿದ ನನಗೂ ಪುಣ್ಯವುಂಟು.''

ಪಂಚಮನ ಈ ಮಾತುಗಳನ್ನು ಕೇಳಿ ಆ ಬ್ರಹ್ಮರಾಕ್ಷಸಕ್ಕೆ ಆನಂದವೂ ಆಯಿತು. ಆಶ್ಚರ್ಯವೂ ಆಯಿತು. ಆಗ ಅದು ಸಂತಸದಿಂದ ಒಡಗೂಡಿ ನುಡಿಯಿತು.-

'ಭಲೇ ! ಚಂಡಾಲಾ, ನೀನು ವಿಧಿ ನಿಷೇಧಗಳನ್ನು ತಿಳಿಯದ ಚಂಡಾಲನಾಗಿದ್ದರೂ ಸತ್ಯವನ್ನೇ ನುಡಿದೆ. ಅದರಂತೆಯೇ ನಡೆದೆ. ನಿನಗೆ ಇಂಥ ಸದ್ಬುದ್ಧಿಯು ಹುಟ್ಟಿದ್ದನ್ನು ಕಂಡು ನನಗೆ ಬಹಳ ಸಂತೋಷವಾಗಿದೆ. ಸತ್ಯಧರ್ಮಗಳನ್ನು ನೀನು ಕಾಪಾಡಿದೆ. ನೀನು ನಿನ್ನೆ ರಾತ್ರಿ ಬೆಳಗಾಗುವವರೆಗೆ ಜಾಗರಣೆ ಮಾಡಿ ಶ್ರೀ ಹರಿಯನ್ನು ಹಾಡಿ, ಪಾಡಿ. ಕುಣಿದು, ಕೊಂಡಾಡಿ ಸೇವೆ ಮಾಡಿದೆ. ನಿನ್ನೆ ರಾತ್ರಿಕಾಲದ ಆ ಭಗವಂತನ ಸೇವೆಯ ಪುಣ್ಯವನ್ನು ನನಗೆ ಕೊಟ್ಟರೆ ನಾನು ನಿನ್ನನ್ನು ಕೊಲ್ಲದೆ ಬಿಟ್ಟು ಬಿಡುತ್ತೇನೆ. ನಿನಗೆ ಬದುಕುವ ಅಪೇಕ್ಷೆ ಇದ್ದರೆ ನಿನ್ನ ನಿನ್ನಿನ ಹಾಡಿನ ಫಲವನ್ನು ನನಗೆ ಕೊಟ್ಟು ಬಿಡು ಅಂದರೆ ನನಗೆ ಪುಣ್ಯ ಬರುವದು. ನಿನಗೆ ಪ್ರಾಣ ಉಳಿವುದು.''

ಬ್ರಹ್ಮರಾಕ್ಷಸನ ಈ ಮಾತನ್ನು ಕೇಳಿ ಆ ಹೊಲೆಯನು ಹೀಗೆ ಹೇಳಿದನು. '' ನೀನು ನನ್ನ ಮನಸ್ಸನ್ನು ಪರೀಕ್ಷಿಸಬೇಕೆಂದು ಮಾತನಾಡುತ್ತೀಯಾ ? ಬದುಕುವ ಆಶೆಯಿಂದ ನಾನು ದೇವರ ಧ್ಯಾನ ಮಾಡಿದ ಪುಣ್ಯವನ್ನು ಬಿಟ್ಟುಕೊಡಲಾರೆ. ನಿನಗೆ ಬೇಕಾದುದು ನನ್ನ ದೇಹದ ರಕ್ತಮಾಂಸ. ಅದನ್ನು ನೀನು ನನ್ನನ್ನು ಕೊಂದು, ಪಡೆದು, ತಿಂದು, ತೃಪ್ತಿಪಡು.

ನನ್ನ ದೇಹದ ಮೌಲ್ಯವು ಶ್ರೀ ಹರಿಯ ಮುಂದೆ ಹಾಡಿದ ಗೀತದ ಫಲಕ್ಕೆ ಎಂದಿಗೂ ಸಮಾನವಾಗಲಾರದು. ನಾನು ಅಂಥ ಅಮೂಲ್ಯವಾದ ಹರಿಗೀತದ ಪುಣ್ಯವನ್ನು ಕೊಟ್ಟು ಅತ್ಯಂತ ಕ್ಷುಲ್ಲಕವಾದ ಈ ನನ್ನ ಮೈಯನ್ನು ಉಳಿಸಿಕೊಳ್ಳಲಾರೆ. ನಿನ್ನನ್ನು ಉಪವಾಸ ಬೀಳಿಸಲಾರೆ. ನನ್ನನ್ನು ತಿಂದು ನಿನ್ನ ಹಸಿವನ್ನು ಹಿಂಗಿಸಿಕೊ. '' ಅಸ್ಪಶ್ಯನ ಈ ಮಾತನ್ನು ಕೇಳಿ ಆ ರಾಕ್ಷಸನು ನಿರಾಶನಾಗಿ ಮತ್ತೆ ಬಿನ್ನವಿಸಿದನು.-

''ಪುಣ್ಯಾತ್ಮ, ನಿನಗೆ ಇಡೀ ಒಂದು ರಾತ್ರಿ ದೇವರ ಹಾಡು ಹಾಡಿ ಭಜನೆಗೈದು ಮಾಡಿದ ಸಂಪೂರ್ಣ ಜಾಗರಣೋತ್ಸವದ ಫಲವನ್ನು ಪೂರ್ತಿಯಾಗಿ ನನಗೆ ಕೊಡಲು ಇಷ್ಟವಿಲ್ಲದಿದ್ದರೆ ಬಿಡು. ಕೊನೆಗೆ ನೀನು ಆ ದೇವರ ಮುಂದೆ ಭಕ್ತಿಯಿಂದ ಹಾಡಿದ ಒಂದು ಹಾಡಿನ ಪುಣ್ಯವನ್ನಾದರೂ ನನಗೆ ದಯಮಾಡಿ ಕೊಡು. ಆದರಿಂದ ನಾನೂ ಈ ಸಂಸಾರದಿಂದ ದಾಟಿ ಪಾರಾಗುವೆನು.'' ಈ ರೀತಿಯಾಗಿ ಅಂಗಲಾಚುತ್ತಿರುವ ಬ್ರಹ್ಮರಾಕ್ಷಸನ ಬಿನ್ನಹವನ್ನು ಕೇಳಿ ಆ ಹೊಲೆಯನಿಗೆ ಆಶ್ಚರ್ಯವಾಯಿತು. ಸೌಮ್ಯ ಮಾತಿನಿಂದ ಅವನು ಆ ರಾಕ್ಷಸನಿಗೆ ಕೇಳಿದನು.-

''ರಾಕ್ಷಸನೇ, ನೀನು ಯಾವ ದುಷ್ಕರ್ಮವನ್ನು ಹಿಂದೆ ಮಾಡಿದೆ ? ಯಾವ ಘೋರಪಾತಕದಿಂದ ನಿನಗೆ ಇಂಥ ರಾಕ್ಷಸ ಜನ್ಮವು ಬಂದಿತು ?'' ಆತ್ಮೀಯತೆಯಿಂದ ತನ್ನ ಸುಖ ದುಃಖವನ್ನು ವಿಚಾರಿಸುವ ಆ ಪಂಚಮನ ಮಾತುಗಳನ್ನು ಕೇಳಿ ಆ ಬ್ರಹ್ಮರಾಕ್ಷಸಕ್ಕೆ ಕೊಂಚ ಸಮಾಧಾನವೆನಿಸಿತು. ಅದು ತನ್ನ ಹಿಂದಿನ ಕರುಣ ಕತೆಯನ್ನು ಹೇಳತೊಡಗಿತು.-

''ನಾನು ಹಿಂದೆ ಸೋಮಶರ್ಮನೆಂಬ ಬ್ರಾಹ್ಮಣನಾಗಿದ್ದೆ. ಶಾಸ್ತ್ರ, ವೇದಾಂತ, ಸೂತ್ರ, ಮಂತ್ರಗಳ ಅರ್ಥವನ್ನು ತಿಳಿಯದ ನಾನು ಯಾಜ್ಞಿಕನಾಗಿದ್ದೆ. ಅಜ್ಞಜನರಿಂದ ಹೇಗೋ ಯಜ್ಞಯಾಗಗಳನ್ನು ಮಾಡಿಸುತ್ತ ಹೊಟ್ಟೆಯನ್ನು ಹೊರೆಯುತ್ತಿದ್ದೆ. ವೈದಿಕ ವಿದ್ಯೆಯನ್ನು ಒಂದು ಕಸಬನ್ನಾಗಿ ಮಾಡಿಕೊಂಡು ಹಣ ಗಳಿಸುತ್ತಿದ್ದೆ. ಒಂದು ಸಮಯದಲ್ಲಿ ನಾನು ಯಜ್ಞ ಮಾಡಿಸುತ್ತಲಿರುವಾಗಲೇ ನನಗೆ ಹೊಟ್ಟೆ ಕಡಿತವು ಪ್ರಾರಂಭವಾಯಿತು. ಐದು ರಾತ್ರಿಗಳಲ್ಲಿ ನಡೆಯಬೇಕಾದ ಆ ಯಜ್ಞವನ್ನು ಪೂರ್ತಿಗೊಳಿಸಲಾಗದೆ ಮಧ್ಯದಲ್ಲಿಯೇ ಹೊಟ್ಟೆನೋವು ಉಲ್ಬಣಿಸಿ ನಾನು ಮರಣ ಹೊಂದಿದೆ. ಆ ಯಜ್ಞದಲ್ಲಿ ನಾನು ಅಜ್ಞಾನದಿಂದಲೂ ಅವಸರದಿಂದಲೂ ಅನೇಕ ಮಂತ್ರಗಳನ್ನೂ ಲೋಪ ಮಾಡಿದೆ. ಹೇಳಿದ ಮಂತ್ರಗಳಲ್ಲಿಯೂ ಕೂಡ ಸ್ವರ ತಪ್ಪಿ ಹೇಳಿದೆ. ಅಪದ್ಧವಾಗಿ ಮಂತ್ರವನ್ನು ಪಠಿಸಿದೆ. ವಿಧಿಯಲ್ಲಿ ತಪ್ಪಿದೆನು. ಜನರ ಕಣ್ಣಿಗೆ ತೋರುವ ಯಜ್ಞದ ತಂತ್ರಗಳನ್ನೆಲ್ಲ ಸರಿಯಾಗಿ ಮಾಡಿಸಿ ಮಂತ್ರದಲ್ಲಿ ಸಂಕೋಚ ಮಾಡಿ ಎಷ್ಟೋ ಕಡೆಗೆ ವಿಧಿಲೋಪವನ್ನೇ ಮಾಡಿಸಿಬಿಟ್ಟೆನು. ಆ ಕರ್ಮದೋಷದಿಂದ ಆ ಯಜ್ಞ ನಡೆದ ಕಾಲದಲ್ಲಿಯೇ ಮರಣ ಹೊಂದಿದ ನನಗೆ ಬ್ರಹ್ಮ ರಾಕ್ಷಸ ಜನ್ಮ ಬಂದಿದೆ. ಆದುದರಿಂದ ದಯಮಾಡಿ ನೀನು ದೇವರೆದುರು ಹಾಡಿದ ಒಂದು ವಿಷ್ಣುಗೀತದ ಪುಣ್ಯವನ್ನು ನನಗೆ ಕೊಟ್ಟು ಈ ಘೋರ ರಾಕ್ಷಸ ಜನ್ಮದಿಂದ ನನ್ನನ್ನು ಉದ್ಧಾರ ಮಾಡು.''

ಬ್ರಹ್ಮರಾಕ್ಷಸನ ಈ ಕಳವಳದ ಮಾತನ್ನೂ, ಅಂತರಂಗದ ತಳಮಳವನ್ನೂ, ಕಂಡು ಆ ಪಂಚಮನಿಗೆ ಕರುಣೆಯು ಬಂದಿತು. ಆ ದುರ್ಯೋನಿಯಿಂದ ಅವನನ್ನು

ಪಾರುಮಾಡಲಿಕ್ಕಾಗಿ ತನ್ನ ಒಂದು ಗೀತದ ಫಲವನ್ನು ಅವನಿಗೆ ಕೊಡಲು ಸಿದ್ಧನಾಗಿ ಇಂತು ನುಡಿದನು - '' ರಾಕ್ಷಸ, ನಿನ್ನ ಜನ್ಮವು ಉದ್ಧಾರವಾಗುವದಾದರೆ ನನ್ನ ಒಂದು ವಿಷ್ಣು ಗೀತದ ಫಲವನ್ನು ನಾನು ಸಂತೋಷದಿಂದ ನಿನಗೆ ಕೊಡುತ್ತೇನೆ. ಶ್ರೀ ಹರಿಯ ಸನ್ನಿಧಿಯಲ್ಲಿ ಭಕ್ತಿಪೂರ್ವಕವಾಗಿ ದೇವರ ಹಾಡನ್ನು ಹಾಡಿದವರು ಸರ್ವ ಪಾಪಗಳನ್ನು ಕಳೆದುಕೊಂಡು ಸರ್ವ ಸಂಕಟದಿಂದ ಪಾರಾಗಿ ಸದ್ಗತಿಯನ್ನು ಹೊಂದುತ್ತಾರೆ. ನಾನು ಕೊಟ್ಟ ಈ ಗೀತ ಪುಣ್ಯದಿಂದ ನೀನಾದರೂ ಈ ರಕ್ಕಸ ಜನ್ಮದಿಂದ ಪಾರಾಗಿ ಸದ್ಗತಿಯನ್ನು ಹೊಂದು. ನಾನು ನಿನಗೆ ಒಂದು ಹಾಡಿನ ಪುಣ್ಯವನ್ನು ಕೊಟ್ಟಿದ್ದೇನೆ.''

ಹೀಗೆ ಆ ಚಂಡಾಲನು ತನ್ನ ಒಂದು ಹರಿಗೀತದ ಫಲವನ್ನು ಕೊಟ್ಟ ಕೂಡಲೇ ಆ ಬ್ರಹ್ಮರಾಕ್ಷಸದ ಪಾಪವೆಲ್ಲವೂ ತೊಳೆದು, ಆ ನೀಚ ಜನ್ಮವು ಅಳಿದು ಮತ್ತೆ ಅವನು ಶರತ್ಕಾಲದ ಚಂದ್ರನಂತೆ ತನ್ನ ಮೊದಲಿನ ಬ್ರಾಹ್ಮಣರೂಪವನಾಂತು ಬೆಳಗಿದನು. ಆ ಹೊಲೆಯನೂ ತಾನಿರುವವರೆಗೆ ನಿತ್ಯವೂ ರಾತ್ರಿ ಶ್ರೀಹರಿಯ ಎದುರು ಸಂಗೀತ ಸೇವೆಯನ್ನು ಮಾಡುತ್ತ ಮರು ಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟಿ ಬ್ರಹ್ಮಜ್ಞಾನವನ್ನು ಪಡೆದನು. ಹೀಗೆ ನನ್ನನ್ನು ಯಾವಾಗಲೂ ವಿಶೇಷವಾಗಿ ಕಾರ್ತೀಕ ಶುದ್ಧ ಏಕಾದಶಿ ದ್ವಾದಶಿ ದಿನಗಳಲ್ಲಿ ರಾತ್ರಿ ಜಾಗರಣೆ ಮಾಡಿ ಧ್ಯಾನ, ಗಾನಗಳಿಂದ ಭಜನೆಗೈದರೆ ಬ್ರಾಹ್ಮಣನಾಗಲಿ ಹೊಲೆಯನಾಗಲಿ ರಾಕ್ಷಸನಾಗಲಿ ಯಾರೇ ಇದ್ದರೂ ಈ ಗಾನ ಯೋಗದಿಂದ ಉದ್ಧಾರವನ್ನು ಹೊಂದುವರು. ವಸುಂಧರೆ, ಈ ವರಾಹ ಕ್ಷೇತ್ರದಲ್ಲಿ ನನ್ನ ಸೇವಾರೂಪವಾಗಿ ತಾಳ ವಾದ್ಯಗಳನ್ನು ಬಾರಿಸುವದರಿಂದ ಮಾನವರಿಗೆ ದೈವ ಭಾವವು ಪ್ರಾಪ್ತವಾಗುತ್ತದೆ. ಶಂಪಾತಾಳವನ್ನಾಗಲಿ ತಾಳಮೇಳ ಸಹಿತವಾಗಿ ವಿವಿಧ ವಾದ್ಯಗಳನ್ನಾಗಲಿ ದೇವರ ಎದುರು ಊದಿ, ಬಾರಿಸಿ, ನುಡಿಸಿದರೆ ಒಂಭತ್ತು ಸಾವಿರದಾ ಒಂಬೈನೂರು ವರ್ಷ ಕುಬೇರನ ಐಶ್ವರ್ಯವನ್ನು ಅನುಭವಿಸಿ ಅನಂತರ ಕೆಲವು ಕಾಲ ಕೈಲಾಸದಲ್ಲಿ ವಾಸಮಾಡಿ ಕೊನೆಗೆ ವಿಷ್ಣುಲೋಕಕ್ಕೆ ಬರುವರು.

ದೇವರ ಎದುರು ಹಾಡು ಹಾಡಿ ನರ್ತನ ಸೇವೆಯನ್ನು ಮಾಡುವವನು ಮೂವತ್ತು ಮೂರು ಸಾವಿರ ವರ್ಷ ಪುಷ್ಕರ ದ್ವೀಪದಲ್ಲಿದ್ದು ನನ್ನ ಭಕ್ತನಾಗಿ ಸಂಸಾರದಿಂದ ಮುಕ್ತನಾಗುವನು. ನಿತ್ಯವೂ ಗೀತವಾದ್ಯಗಳೊಡನೆ ನರ್ತನ ಮಾಡುತ್ತ ನನ್ನಕ್ಷೇತ್ರದಲ್ಲಿ ಜಾಗರಣೆ ಮಾಡುವವನು ಜಂಬೂದ್ವೀಪದಲ್ಲಿ ಚಕ್ರವರ್ತಿಯಾಗಿ ನನ್ನ ಸೇವೆಯನ್ನು ಮಾಡುವನು. ನನ್ನ ಬಗೆಬಗೆಯ ದೇವತಾಮೂರ್ತಿಗಳಿಗೆ ಹೂಗಳನ್ನಾಗಲಿ ಹೂವಿನ ಮಾಲೆಗಳನ್ನಾಗಲಿ ಏರಿಸಿ ಪೂಜಿಸಿ ಆ ನಿರ್ಮಾಲ್ಯವನ್ನು ತನ್ನ ತಲೆಯಲ್ಲಿ ಧರಿಸುವವನು ಆ ಹೂಗಳಷ್ಟು ವರ್ಷಕಾಲ ಸ್ವರ್ಗದಲ್ಲಿ ಸುಖಸಂಪದಗಳನ್ನು ಅನುಭವಿಸಿ ಅಲ್ಲಿ ಮತ್ತೆ ಸತ್ಕರ್ಮಾನುಷ್ಠಾನ ಮಾಡಿ ನನ್ನ ಲೋಕವನ್ನು ಹೊಂದುತ್ತಾನೆ.

*ವರಾಹ ಪುರಾಣದಲ್ಲಿ ನೂರ ಹದಿಮೂರನೇ ಅಧ್ಯಾಯ ಮುಗಿದುದು.*

—o—

**ಭೂದೇವಿ :-** 'ದೇವಾ, ನೀವು ಹೇಳಿದ ಪುಣ್ಯಸ್ಥಳ ಮಹಿಮೆಯನ್ನು ನಾನು ಕೇಳಿದುದಾಯಿತು. ಆದರೆ ನೀನು ನಿತ್ಯವೂ ಸನ್ನಿಹಿತನಾಗಿ ಎಲ್ಲಿ ನಿಲ್ಲುವೆ ? ನೀನು ಸಾಕ್ಷಾತ್ತಾಗಿ ಮೂರ್ತೀಭವಿಸಿ ನಿಂತ ಪುಣ್ಯ ಸ್ಥಳವು ಯಾವದು ? ಯಾವ ಪುಣ್ಯ ಕ್ಷೇತ್ರದಲ್ಲಿ ಮಾಡಿದ ಸತ್ಕರ್ಮದಿಂದ ಸದ್ಗತಿಯಾಗುವದು ? ತಿಳಿಸು.'' ಭೂದೇವಿಯ ಆ ಪ್ರಾರ್ಥನೆಯನ್ನು ಕೇಳಿ ವರಾಹಸ್ವಾಮಿಯು ಹೇಳಲು ಉಪಕ್ರಮಿಸಿದನು -

'' ಧರಾದೇವಿ, ನಾನು ಭೂಮಂಡಲದಲ್ಲಿ ಮುಖ್ಯವಾಗಿ ನಿರಂತರವಾಗಿ ನೆಲೆನಿಲ್ಲುವ ಸ್ಥಾನಗಳು ಮೂರು. ನಾನು ಮೊದಲು ಹೇಳಿದ 'ಕೋಕಾಮುಖಕ್ಷೇತ್ರ' ಮತ್ತು ಪರ್ವತಗಳ ಅರಸನೆನೆಸಿದ ಹಿಮಾಚಲದ ತಪ್ಪಲಿನಲ್ಲಿರುವ 'ಬದರೀಕ್ಷೇತ್ರ' ಹಾಗೂ ಮ್ಲೇಂಛರಾಜರಿಗೆ ಆಶ್ರಯವಾಗಿರುವ 'ಲೋಹಾರ್ಗಲ ಕ್ಷೇತ್ರ'.. ಈ ಮೂರು ಕ್ಷೇತ್ರಗಳನ್ನು ನಾನು ಒಂದು ಕ್ಷಣವೂ ಬಿಟ್ಟು ಇರುವದಿಲ್ಲ. ಈ ಕ್ಷೇತ್ರಗಳ ಮಹಿಮೆಯನ್ನು ಹೇಳುತ್ತೇನೆ ಕೇಳು - ಕೋಕಾಮುಖ ಕ್ಷೇತ್ರದ ಮಹಿಮೆಯನ್ನು ಈ ಮೊದಲೇ ನೀನು ಕೇಳಿರುವೆ. ಈಗ ಆ ಕ್ಷೇತ್ರದಲ್ಲಿಯ ಅನೇಕ ತೀರ್ಥಗಳ ಮಹಿಮೆಯನ್ನೂ ಹೇಳುತ್ತೇನೆ ಕೇಳು -

ಆ ಕೋಕಮಂಡಲದಲ್ಲಿ ಜಲಬಿಂದು ಪರ್ವತದಿಂದ 'ವಿಷ್ಣುಧಾರಾ' ಎಂಬ ಹೆಸರಿನ ಜಲಪಾತ ಒಂದು ಧುಮ್ಮಿಕ್ಕಿ ಹರಿಯುತ್ತದೆ. ಆ ವಿಷ್ಣುಧಾರೆಯಲ್ಲಿ ಒಂದು ದಿನ ವಾಸ ಮಾಡಿ, ಸ್ನಾನಮಾಡಿ, ದೇವರ ಧ್ಯಾನ ಮಾಡುವವನಿಗೆ ಸಾವಿರ ಅಗ್ನಿಷ್ಟೋಮ ಮಾಡಿದ ಫಲವು ಪ್ರಾಪ್ತವಾಗುವದು. ಮುಂದೆ ಅವನು ಸರ್ವಸಂಗ ಪರಿತ್ಯಾಗಮಾಡಿ ವಿಷ್ಣುಲೋಕವನ್ನು ಸೇರುವನು. ಅದೇ ಕೋಕಾಮುಖ ಕ್ಷೇತ್ರದಲ್ಲಿಯ 'ವಿಷ್ಣುಪದ' ಎಂಬ ತೀರ್ಥದಲ್ಲಿ ರಾತ್ರಿ ಉಪವಾಸ ಮಾಡಿ ಮರುದಿನ ಸ್ನಾನ ಮಾಡಿದರೆ ಕ್ರೌಂಚ ದ್ವೀಪದಲ್ಲಿ ಹುಟ್ಟುವನು. ಆ ತೀರ್ಥದಲ್ಲಿ ಪ್ರಾಣತ್ಯಾಗ ಮಾಡಿದರೆ ನನ್ನ ಲೋಕವನ್ನೇ ಆ ಮಾನವನು ಸೇರುವನು. ವಸುಂಧರೇ, ನಾನು ವರಾಹ ರೂಪದಲ್ಲಿ ನನ್ನ ಕೋರೆದಾಡೆಯಿಂದ ಹೊಡೆದು ನಿರ್ಮಿಸಿದ ವಿಷ್ಣು ಸರೋವರದಲ್ಲಿ ಸ್ನಾನ ಮಾಡುವವನು ನನ್ನ ಲೋಕವನ್ನು ಸೇರುವನು. ಈ ಕೋಕಾಮಂಡಲದಲ್ಲಿ 'ಸೋಮತೀರ್ಥ'ದಲ್ಲಿ ಭೂಮಿಯ ಐದು ಕಲ್ಲುಗಳಿಇಂದ ಕೂಡಿ ವಿಷ್ಣು ಎಂಬ ಹೆಸರನ್ನು ಬರೆದಂತಿದೆ. ಅಲ್ಲಿ ಐದು ರಾತ್ರಿ ವಾಸಮಾಡಿ ಸ್ನಾನ ಮಾಡುವವನು ಗೋಮೇದ ದ್ವೀಪದಲ್ಲಿ ಜನಿಸುವನು. ಅಲ್ಲಿ ಪ್ರಾಣತ್ಯಾಗ ಮಾಡಿದರೆ ನನ್ನ ಸಾಕ್ಷಾತ್ಕಾರವನ್ನು ಪಡೆಯುವನು. ಉತ್ತರ ಬೆಟ್ಟದಿಂದ ನಾಲ್ಕು ಜಲಧಾರೆಗಳು ಹರಿದು ಬಂದು ಮಡುವುಗಟ್ಟಿದ ತುಂಗಕೂಟ ತೀರ್ಥದಲ್ಲಿ ಒಂದು ರಾತ್ರಿ ವಾಸಮಾಡಿ ಸ್ನಾನ-ಧ್ಯಾನ ಪೂಜಾದಿಗಳನ್ನು ಆಚರಿಸಿದವನು ಕುಶದ್ವೀಪದಲ್ಲಿ ಕೆಲವು ದಿನ ವಾಸ ಮಾಡಿ ಕೊನೆಗೆ ನನ್ನ ಲೋಕವನ್ನು ಸೇರುವನು. 'ಅನಿತ್ಯಾಶ್ರಮ' ತೀರ್ಥದಲ್ಲಿ ಒಂದು ದಿನವಿದ್ದು ದೇವರ ಸೇವೆ ಮಾಡುವವನು ಪುಷ್ಕರ ದ್ವೀಪದಲ್ಲಿ ಜನಿಸುವನು. ಅಲ್ಲಿ ಮೃತನಾದವನು

ವೈಕುಂಠಕ್ಕೆ ತೆರಳುವನು. ಬೆಟ್ಟದ ಮೇಲಿನ ಕಾಡು ಕುಂಜಗಳಿಂದ ಐದು ಜಲಧಾರೆಗಳು ಧುಮ್ಮಿಕ್ಕಿ ನಿರ್ಮಿತಿಗೊಂಡ ಅಗ್ನಿಸರೋವರದಲ್ಲಿ ಸ್ನಾನ ಮಾಡುವವನು ಕುಶದ್ವೀಪದಲ್ಲಿ ಜನಿಸಿ ಸಾಧನಾನುಷ್ಠಾನ ಮಾಡಿಕೊಳ್ಳುವನು.

ಇದರಂತೆ 'ಬ್ರಹ್ಮಸರೋವರ'ದಲ್ಲಿ ಐದು ರಾತ್ರಿ ವಾಸಮಾಡಿ, ಸ್ನಾನ ಮಾಡುವವನು ಸೂರ್ಯಲೋಕದಲ್ಲಿ ಇದ್ದು ನನ್ನ ಮಾರ್ಗವನ್ನು ಅನುಸರಿಸುವನು. 'ಧೇನು ವಟತೀರ್ಥ'ದಲ್ಲಿ ಏಳು ರಾತ್ರಿ ವಾಸ ಮಾಡಿ ಪ್ರತಿನಿತ್ಯ ಸ್ನಾನ ಮಾಡಿದರೆ ಸಪ್ತಸಮುದ್ರಗಳಲ್ಲಿ ಸ್ನಾನ ಮಾಡಿದ ಫಲವೂ ಸಪ್ತದ್ವೀಪಗಳಲ್ಲಿ ವಿಹರಿಸುವ ಭಾಗ್ಯವೂ ದೊರಕುವದು. ಬೆಟ್ಟದ ಪೊದೆಯಿಂದ ಜಲಧಾರೆಯು ಬೀಳುವ 'ಧರ್ಮೋದ್ಭವತೀರ್ಥ'ದಲ್ಲಿ ಒಂದು ರಾತ್ರಿ ವಾಸ ಮಾಡಿ ಸ್ನಾನ ಮಾಡುವ ಶೂದ್ರನು ಒಳ್ಳೇ ಧಾರ್ಮಿಕನಾದ ವೈಶ್ಯನಾಗಿ ಜನಿಸುವನು. ಆಲದಮರದ ಬುಡದಿಂದ ನೀರು ಸೋರಿ ನಿರ್ಮಿತವಾದ 'ಕೋಟಿವಟ ಎಂಬ ತೀರ್ಥ'ದಲ್ಲಿ ಒಂದು ರಾತ್ರಿ ಉಪವಾಸವಿದ್ದು ಸ್ನಾನ ಮಾಡುವವನು ಆ ಆಲದಮರದಲ್ಲಿ ಎಷ್ಟು ಎಲೆಗಳಿರುವವೋ ಅಷ್ಟು ವರ್ಷ ಐಶ್ವರ್ಯ, ಸೌಂದರ್ಯ, ಸೌಭಾಗ್ಯ, ಸಂಪನ್ನನಾಗಿ ಬಾಳುತ್ತಾನೆ. ಭಕ್ತಿ ಮಾರ್ಗದಲ್ಲಿ ನಡೆಯುತ್ತಾನೆ. ಒಂದು ಕೊಡದ ಆಕಾರವಾಗಿ ನೀರಿನ ಧಾರೆಯು ಸೋರುವ ಪಾಪಪ್ರಮೋಚನ ತೀರ್ಥದಲ್ಲಿ ಒಂದು ಹಗಲಿರುಳು ಉಪವಾಸ ಮಾಡಿ ಸ್ನಾನ ಮಾಡುವವನು ಮುಂದೆ ಹರಿಕರ್ಮಗಳಲ್ಲಿ ನಿರತನಾಗಿ ನಾಲ್ಕು ವೇದಗಳಲ್ಲಿಯೂ ವಿದ್ವಾಂಸನಾಗುವನು.

'ಕೌಶಿಕೀ' ನದಿಯಲ್ಲಿ ಐದು ರಾತ್ರಿ ಇದ್ದು ಸ್ನಾನ ಮಾಡುವವನು ಇಂದ್ರಲೋಕವನ್ನು ಸೇರಿ ಭೋಗಭಾಗ್ಯವನ್ನು ಪಡೆಯುವನು. ಆ ಕೌಶಿಕೀ ನದಿಯ ಉಪಧಾರೆಯಾದ ಯಮ ಶಾಸನಕ ಎಂಬ ಗುಪ್ತ ತೀರ್ಥದಲ್ಲಿ ಒಂದು ರಾತ್ರಿ ಇದ್ದು ಸ್ನಾನ ಮಾಡವವನಿಗೆ ಯಮಬಾಧೆಯೇ ಇಲ್ಲ. ಆ ಕೋಕಾಮುಖ ಕ್ಷೇತ್ರದ 'ಮಾತಂಗ ತೀರ್ಥ'ದಲ್ಲಿ ಒಂದು ರಾತ್ರಿ ಇದ್ದು ಸ್ನಾನಮಾಡುವವನು ಕಿಂಪುರುಷನಾಗಿ ಜನಿಸಿ ಮಹಾಜ್ಞಾನಿಯೂ ಕರ್ಮ ಯೋಗಿಯೂ ಆಗುವನು. ಕೌಶಿಕೆಯ ಉಪಪ್ರವಾಹವಾದ ವಜ್ರಭವ ತೀರ್ಥದಲ್ಲಿ ಸ್ನಾನಮಾಡುವದರಿಂದ ಇಂದ್ರಲೋಕಪ್ರಾಪ್ತಿ ಇಂದ್ರ ರೂಪಪ್ರಾಪ್ತಿ ಎರಡೂ ಉಂಟು. ಆ ವಜ್ರತೀರ್ಥದಿಂದ ಮೂರು ಹರಿದಾರಿಯಲ್ಲಿರುವ ಶಕ್ರರುದ್ರ ತೀರ್ಥದಲ್ಲಿ ಮೂರು ರಾತ್ರಿ ವಾಸ ಮಾಡಿ ಸ್ನಾನ ಮಾಡುವವನು ಜಂಬೂದ್ವೀಪದಲ್ಲಿ ಜನಿಸಿ ಮುಂದೆ ನನ್ನ ಲೋಕವನ್ನು ಹೊಂದುವನು. ಅಲ್ಲಿಯ ಕೋಕೆಯ ಉದ್ಭವ ಸ್ಥಾನವಾದ 'ದಂಷ್ಟ್ರಾಂಕುರ' ತೀರ್ಥದಲ್ಲಿ ಒಂದು ಹಗಲು ರಾತ್ರಿ ಇದ್ದು ಸ್ನಾನ ದೇವತಾರ್ಚನೆ ಮುಂತಾದವುಗಳನ್ನು ಮಾಡುವವನು ಶಾಲ್ಮಲೀದ್ವೀಪದಲ್ಲಿ ಜನಿಸಿ ಸತ್ಕರ್ಮಾನುಷ್ಠಾನ ಮಾಡುವನು. ಪರ್ವತದ ಮಧ್ಯದಿಂದ ಹೊರಟು ಮೂರು ಶಾಖೆಯಾಗಿ ಧೀಂಕಿಡುವ ವಿಷ್ಣು ತೀರ್ಥದಲ್ಲಿ ಸ್ನಾನ ಪೂಜೆ ಮಾಡುವವನು ಸಂಸಾರ ಬಂಧನದ ಪಾಶವನ್ನು ಹರಿದು ವಾಯು ಲೋಕದಲ್ಲಿ ವಾಸ ಮಾಡಿ ಪುಣ್ಯ ಕರ್ಮಗಳನ್ನು ಆಚರಿಸಿ ನನ್ನ ಲೋಕಗಳನ್ನು ಸೇರುವನು. ಆ ಕೋಕಾ ಕ್ಷೇತ್ರದಲ್ಲಿ ಕೌಶಿಕೀ ಹಾಗೂ ಕೋಕಾನದಿಗಳ ಸಂಗಮದ ರಂಗಸ್ಥಳದಲ್ಲಿ 'ಸರ್ವಕಾಮಿಕ' ಎಂಬ ಒಂದು ಬಂಡೆಗಲ್ಲು

ನಿಂತಿರುತ್ತದೆ. ಆ ಶಿಲೆಯ ಮೇಲೆ ಒಂದು ಹಗಲಿರುಳು ವಾಸಮಾಡಿ ಆ ಸಂಗಮದಲ್ಲಿ ಸ್ನಾನ ಮಾಡುವವರು ಸ್ವರ್ಗಲೋಕ ಭೂಲೋಕಗಳಲ್ಲಿ ಬಯಸಿದ್ದನ್ನೆಲ್ಲ ಪಡೆಯುವರು. ಆ ಕೋಕಾಮುಖದಲ್ಲಿ 'ಮಚ್ಛ್ಯಶಿಲಾ' ಎಂಬ ಹೆಬ್ಬಂಡೆಯೊಂದರ ಮೇಲೆ ಕೌಶಿಕೀ ನದಿಯ ಮೂರು ಜಲಧಾರೆಗಳು ಸಂಗಮಿಸಿ ಧುಮುಕುತ್ತವೆ. ಅಲ್ಲಿ ಸ್ನಾನ ಮಾಡುವಾಗ ಮೀನನ್ನು ಕಂಡರೆ ಅದರಲ್ಲಿ ಮಚ್ಛ್ಯಾವತಾರಿಯಾದ ನನ್ನ ಸನ್ನಿಧಾನವಿದೆ ಎಂದು ತಿಳಿದು ಅದಕ್ಕೆ ಜೇನು ಭತ್ತರಳುಗಳಿಂದ ಕೂಡಿದ ಅರ್ಘ್ಯವನ್ನು ಸಮರ್ಪಿಸಬೇಕು. ಆ ತೀರ್ಥದಲ್ಲಿ ಸ್ನಾನಮಾಡುವವನು ಮೇರು ಪರ್ವತವನ್ನು ದಾಟಿ ನನ್ನ ಲೋಕವನ್ನು ಸೇರುವನು. ಭೂದೇವಿ, ಈ ಕೋಕಾಮುಖ ಕ್ಷೇತ್ರವು ಐದು ಯೋಜನ ವಿಸ್ತಾರವಾಗಿದೆ. ಈ ಕ್ಷೇತ್ರದಲ್ಲಿ ನಾನು ಚಂದನದ ಬಣ್ಣ ಉಳ್ಳ ಒಂದು ಶಿಲೆಯಲ್ಲಿ ವರಾಹರೂಪವನ್ನು ಧರಿಸಿ ದಕ್ಷಿಣಾಭಿಮುಖನಾಗಿ ನೆಲಸಿರುವೆನು. ನನ್ನ ಎಡದಾಡೆಯ ಮೇಲೆ ಎಡಗಡೆಗೆ ತಿರುಗಿ ಪೂರ್ವದ ಕಡೆಗೆ ಮುಖವನ್ನು ಎತ್ತಿ ಹಿಡಿದು ಈ ಕೋಕಾಮುಖ ಕ್ಷೇತ್ರದಲ್ಲಿ ನಿಂತು ಸರ್ವಜಗತ್ತನ್ನೂ ನಾನು ನೋಡುತ್ತಿರುವೆನು. ನನ್ನ ಭಕ್ತರು ಈ ನನ್ನ ಕ್ಷೇತ್ರದಲ್ಲಿ ನನ್ನನ್ನು ಸ್ಮರಣೆಮಾಡುತ್ತ ಸತ್ಕರ್ಮಗಳನ್ನು ಆಚರಿಸಿ ಪಾಪಗಳನ್ನೆಲ್ಲ ಕಳೆದುಕೊಂಡು ಭವ ಬಂಧನದಿಂದ ಬಿಡುಗಡೆಯನ್ನು ಹೊಂದಲು ಅರ್ಹತೆಯನ್ನು ಪಡೆಯುವರು. ಈ ಕ್ಷೇತ್ರದಲ್ಲಿ ನೆಲೆ ನಿಂತು ಭಕ್ತಿಯಿಂದ ಭಗವಂತನನ್ನು ಭಜಿಸಿ, ಅಲ್ಲಿಯ ತೀರ್ಥಗಳಲ್ಲಿ ಸ್ನಾನಮಾಡಿ ನಿರಂತರ ಶ್ರೀ ಹರಿಯ ಧ್ಯಾನೋಪಾಸನೆಯನ್ನು ಮಾಡುವವರು ನನ್ನ ಸಾರೂಪ್ಯವನ್ನು ಕೊನೆಗೆ ಹೊಂದುವರು.

*ವರಾಹ ಪುರಾಣದಲ್ಲಿ ನೂರಹದಿನಾಲ್ಕನೇ ಅಧ್ಯಾಯ ಮುಗಿದುದು.*



**ವರಾಹ :-** ಭೂದೇವಿ, ಆ ಹಿಮವತ್ಪರ್ವತದ ತಪ್ಪಲಿನಲ್ಲಿ ಸರ್ವ ಶ್ರೇಷ್ಠವೂ ದೇವ ದುರ್ಲಭವೂ ಪರಮ ಗುಹ್ಯವೂ ಆದ ಬದರೀ ಎಂಬ ಒಂದು ದೊಡ್ಡ ಕ್ಷೇತ್ರವು ಇರುತ್ತದೆ. ಈ ಪ್ರಪಂಚವನ್ನೆಲ್ಲ ಪುನೀತಗೊಳಿಸುವ ಆ ಬದರೀಯಾತ್ರೆಯು ಸಾಮಾನ್ಯ ಜನರಿಗೆ ಸಾಧ್ಯವಿಲ್ಲ. ಹಿಮಾಲಯದ ಶೈಲ ಶ್ರೇಣಿಯಲ್ಲಿ ಗೂಢವಾಗಿರುವ ಈ ಕ್ಷೇತ್ರವನ್ನು ತಲುಪಿದ ಮನುಷ್ಯನು ನಿಜವಾಗಿಯೂ ಧನ್ಯನೂ, ಕೃತಕೃತ್ಯನೂ ಆಗುತ್ತಾನೆ. ಈ ಬದರೀ ಕ್ಷೇತ್ರದ ಸಮೀಪದಲ್ಲಿರುವ ಹಿಮಕುಂಡ ತೀರ್ಥದಲ್ಲಿ ಮೂರು ರಾತ್ರಿ ಉಪವಾಸ ಮಾಡಿ ಸ್ನಾನ ಮಾಡುವವನು ಅಗ್ನಿಷ್ಟೋಮ ಯಜ್ಞವನ್ನು ಮಾಡಿದ ಫಲವನ್ನು ಪಡೆಯುತ್ತಾನೆ. ಅದೇ ಆ ವಿಶಾಲವಾದ ಬದರಿಕಾಶ್ರಮ ಕ್ಷೇತ್ರದ ಪರಿಸರದಲ್ಲಿ 'ಅಗ್ನಿ ಸತ್ಯಪದ' ಎಂಬ ಒಂದು ತೀರ್ಥವಿದೆ. ಅದರಲ್ಲಿ ಮೂರು ಬೆಟ್ಟದ ತುದಿಗಳಿಂದ ಒನಕೆಗಾತ್ರದ ನೀರಿನ ಝರಿಗಳು ಧುಮುಕುತ್ತವೆ. ಆ ತೀರ್ಥದ ದಂಡೆಯಲ್ಲಿ ಮೂರು ರಾತ್ರಿ ಉಪವಾಸದಿಂದ ಇದ್ದು ಆ ತೀರ್ಥದಲ್ಲಿ ಸ್ನಾನ ಮಾಡಿ ಭಗವದಾರಾಧನೆ ಮಾಡುವವನು ದಿವ್ಯ ಗತಿಯನ್ನು ಹೊಂದುತ್ತಾನೆ.

ಆ ಬದರಿಯಲ್ಲಿ ಇಂದ್ರನು ನನ್ನನ್ನು ಆರಾಧಿಸಿದ 'ಇಂದ್ರಲೋಕ' ಎಂಬ ನನ್ನ ಆಶ್ರಮದ ಬಳಿಯಲ್ಲಿ ಗಿರಿಶೃಂಗಗಳಿಂದ ಒಂದು ದೊಡ್ಡ ನೀರಿನ ಝರಿಯು ಒಂದು ವಿಶಾಲವಾದ ಹಾಸುಗಳಲ್ಲಿನ ಮೇಲೆ ಬೀಳುತ್ತದೆ. ಆ ತೀರ್ಥದ ತಡಿಯಲ್ಲಿ ಒಂದು ರಾತ್ರಿ ವಾಸ ಮಾಡಿ ಮರುದಿನ ಆ ತೀರ್ಥದಲ್ಲಿ ಸ್ನಾನ ಮಾಡುವವನು ಸತ್ಯಲೋಕವನ್ನು ಪಡೆಯುವನು. ಐದು ಗಿರಿಶಿಖರಗಳಿಂದ ಜಲಧಾರೆಯ ಝರಿಗಳು ಸುರಿದು ಬೀಳುವ 'ಪಂಚ ಧಾರಾಪ್ರವಾಹ' ಎಂಬ ತೀರ್ಥದಲ್ಲಿ ಸ್ನಾನಮಾಡುವವನು ಅಶ್ವಮೇಧ ಯಜ್ಞದ ಫಲವನ್ನು ಹೊಂದಿ ದೇವತೆಗಳೊಂದಿಗೆ ದೇವಭೋಗವನ್ನು ಪಡೆಯುವನು.

ನಾಲ್ಕು ದಿಕ್ಕುಗಳಿಂದ ನಾಲ್ಕು ಬೇರೆ ಬೇರೆ ಜಲಝರಿಣಿಗಳು ಹರಿದುಬಂದು ಒಂದೆಡೆ ಸಂಗಮಿಸುವ 'ಚತುಃಸ್ರೋತ' ತೀರ್ಥದ ಬಳಿಯಲ್ಲಿ ಒಂದು ರಾತ್ರಿ ಇದ್ದು ಸ್ನಾನ ಮಾಡುವ ಪುಣ್ಯಾತ್ಮನು ಸ್ವರ್ಗಲೋಕದಲ್ಲಿ ಆನಂದದಿಂದ ವಾಸ ಮಾಡಿ ನನ್ನನ್ನು ಭಕ್ತಿಯಿಂದ ಆರಾಧಿಸುತ್ತಾನೆ. ಬ್ರಹ್ಮದೇವರ ಬಾಯಿಯಿಂದ ನಾಲ್ಕು ವೇದಗಳೂ ಹೊರಬಂದಂತೆ ವೇದಧಾರಾ ತೀರ್ಥದಲ್ಲಿ ಹಿಮಾಚಲದ ಚತುಃಶೃಂಗಗಳಿಂದ ನಾಲ್ಕು ಪ್ರವಾಹಗಳು ಹರಿದು ಬಂದು ಆ ನಾಲ್ಕೂ ನೀರಿನ ಸೆಳವುಗಳು ಈ 'ವೇದಧಾರಾತೀರ್ಥ'ದಲ್ಲಿ ನಿರಂತರ ಸುರಿಯುತ್ತವೆ. ಅಲ್ಲಿ ನಾಲ್ಕು ರಾತ್ರಿವಾಸಮಾಡಿ ತೀರ್ಥಸ್ನಾನವನ್ನು ಮಾಡುವ ಮನುಷ್ಯನು ಚತುರ್ವೇದ ವಿದ್ವಾಂಸನಾಗುವನು.

ಈ ಬದರೀ ಕ್ಷೇತ್ರದಲ್ಲಿರುವ 'ದ್ವಾದಶಾದಿತ್ಯ ಕುಂಡ'ದಲ್ಲಿ ಹನ್ನೆರಡು ತೀರ್ಥ ಧಾರೆಗಳು ಬೆಟ್ಟದ ಬುಡದಲ್ಲಿರುವ ಬಂಡೆಗಲ್ಲ ಮೇಲೆ ಬೀಳುತ್ತವೆ. ದ್ವಾದಶಿಯ ದಿನ ಅಲ್ಲಿ ಸ್ನಾನಮಾಡಿದರೆ ಆದಿತ್ಯ ಲೋಕಪ್ರಾಪ್ತಾವಾಗುವದು. ಹಿಂದೆ ನಾನು ಲೋಕಪಾಲಕರನ್ನು ನೇಮಿಸಿದ ಸ್ಥಳವಾದ 'ಲೋಕಪಾಲತೀರ್ಥ'ದಲ್ಲಿಯೂ ಚಂದ್ರನ

ಉತ್ಪತ್ತಿ ಸ್ಥಾನವಾದ 'ಸ್ಥಳಕುಂಡ' ಕ್ಷೇತ್ರದಲ್ಲಿಯೂ ಜ್ಯೇಷ್ಠಮಾಸದ ದ್ವಾದಶಿಯ ದಿನ ಸ್ನಾನಮಾಡುವವನು ಲೋಕಪಾಲಕರ ಮಧ್ಯದಲ್ಲಿ ನನ್ನ ಭಕ್ತನಾಗಿ ಆನಂದಪಡುತ್ತಾನೆ. ಮೂರುಜಲಧಾರೆಗಳು ಮುಪ್ಪುರಿಗೊಂಡು ಧುಮ್ಮಿಕ್ಕಿ ಏಕಾಕಾರವಾಗಿ ಮಡುವು ಗಟ್ಟಿದ 'ಮೇರುವರ ತೀರ್ಥ'ದಲ್ಲಿ ಮೂರು ರಾತ್ರಿ ಉಪವಾಸ ಮಾಡಿ ಮರುದಿನ ಸ್ನಾನ ಮಾಡುವವನು ನನ್ನ ಭಕ್ತನಾಗಿ ಮೇರುಶೃಂಗಳಲ್ಲಿ ಮೋದಪಡುವನು.

ಅದೇ ಬದರೀಕ್ಷೇತ್ರದಲ್ಲಿ 'ಮಾನಸೋದ್ಭೇದ' ಎಂಬ ಒಂದು ತೀರ್ಥವಿದ್ದು ಅಲ್ಲಿ ನಡುವೆ ಭೂಮಿಯನ್ನು ಭೇದಿಸಿಗೊಂಡು ನೀರು ವೇಗದಿಂದ ಪುಟಿಯುತ್ತದೆ. ಅಲ್ಲಿ ಹಗಲಿರುಳೂ ವಾಸಮಾಡಿ ಸ್ನಾನಮಾಡುವ ಮನುಷ್ಯನು ನನ್ನ ಪ್ರೀತಿಯ ಭಕ್ತನಾಗುತ್ತಾನೆ. ಶಿವನು ಬ್ರಹ್ಮದೇವನ ಐದನೆಯ ತಲೆಯನ್ನು ಕತ್ತರಿಸಿದ ತಾಣದಲ್ಲಿ ಐದು ದೊಡ್ಡ ಜಲಪ್ರವಾಹಗಳು ಅನೇಕ ಚಿಕ್ಕ ಚಿಕ್ಕ ಝರಿಗಳಿಂದ ಒಡಗೂಡಿ ಈ ಪಂಚಶಿರತೀರ್ಥದಲ್ಲಿ ಬೀಳುತ್ತವೆ. ಅಲ್ಲಿ ಐದು ಕುಂಡಗಳಿದ್ದು ಅವುಗಳಲ್ಲಿ ನಡುವಿನದು ಬ್ರಹ್ಮದೇವರು ತೋಡಿದುದಾಗಿದೆ. ಅಲ್ಲಿ ಐದು ರಾತ್ರಿ ಉಪವಾಸ ಮಾಡಿ ತೀರ್ಥಸ್ನಾನ ಮಾಡುವವರು ನನ್ನ ಭಕ್ತರಾಗಿ ಜನಿಸಿ ಬ್ರಹ್ಮಲೋಕವನ್ನು ಹೊಂದುತ್ತಾರೆ.

ಮಾಧವಿ, ಅಲ್ಲಿ 'ಸೋಮಾಭಿಷೇಕ' ಎಂಬ ತೀರ್ಥದಲ್ಲಿ ಹಿಂದಕ್ಕೆ ನಾನು ಚಂದ್ರನು ಬ್ರಾಹ್ಮಣರ ಅಧಿರಾಜನೆಂದು ಪಟ್ಟಾಭಿಷೇಕಮಾಡಿದ್ದೆ. ಮುಂದೆ ಚಂದ್ರನು ಅದೇ ಕ್ಷೇತ್ರತೀರ್ಥದಲ್ಲಿ ನಿಂತು ಅನೇಕಾನೇಕ ಕೋಟ್ಯಾವಧಿ ಪುಣ್ಯ ಕರ್ಮಗಳನ್ನು ಮಾಡಿ ನನ್ನ ಅನುಗ್ರಹದಿಂದ ಪರಮ ಸಿದ್ಧಿಯನ್ನು ಪಡೆದನು. ಈ ಸೋಮಾಭಿಷೇಕ ತೀರ್ಥದಲ್ಲಿ ಮೂರು ರಾತ್ರಿ ಉಪವಾಸ ಮಾಡಿ ಆ ತೀರ್ಥದಲ್ಲಿ ಸ್ನಾನಮಾಡುವವನು ಚಂದ್ರಲೋಕದಲ್ಲಿ ಆನಂದವನ್ನು ಅನುಭವಿಸುವನು.

ಪೂರ್ವಕಾಲದಲ್ಲಿ ನನ್ನ ಬಲತೊಡೆಯಿಂದ ಊರ್ವಶಿಯು ಜನಿಸಿದ ಸ್ಥಳವಾದ 'ಊರ್ವಶಿ ಕುಂಡ'ದ ಬಳಿಯಲ್ಲಿ ನಾನು ಹಿಂದೆ ತಪಸ್ಸನ್ನು ಮಾಡುತ್ತಲಿದ್ದೆನು. ಆ ಬದರೀ ಕ್ಷೇತ್ರದಲ್ಲಿ ಒಂದೊಂದು ಬೋರೆಹಣ್ಣನ್ನು ತಿಂದು ದೀರ್ಘಕಾಲದವರೆಗೆ ತಪಸ್ಸಿನಲ್ಲಿ ನಿರತನಾದ ನನ್ನನ್ನು ಕಾಣದೆ ದೇವತೆಗಳೆಲ್ಲರೂ ದುಃಖಿತರಾಗಿ ಬ್ರಹ್ಮ ದೇವರ ಬಳಿಗೆ ಹೋದರು. ಮತ್ತೂ ಬಿನ್ನವಿಸಿದರು.- ''ಬ್ರಹ್ಮನ್, ಶ್ರೀ ವಿಷ್ಣು ಎಲ್ಲಿ ಅಡಗಿರುವನು ? ಅವನ ದರುಶನವಿಲ್ಲದ್ದರಿಂದ ನಮ್ಮ ಮನಸ್ಸಿನ ಶಾಂತಿಯು ಕದಡಿ ಹೋಗಿದೆ.'' ಆಗ ಬ್ರಹ್ಮದೇವರು ಯೋಗ ಮಾಯೆಯಿಂದ ಅದೃಶ್ಯನಾಗಿ ಈ ಊರ್ವಶಿ ಕುಂಡದ ಬಳಿಯಲ್ಲಿ ತಪಂಗೈಯುತ್ತಲಿರುವ ನನ್ನ ಸಮಾಚಾರವನ್ನು ದೇವತೆಗಳಿಗೆ ತಿಳಿಸಿದನು. ಅದನ್ನು ಕೇಳಿ ಹರ್ಷಭರಿತರಾದ ದೇವತೆಗಳೂ, ಗಂಧರ್ವರೂ, ಋಷಿಗಳೂ ಸಿದ್ಧರೂ ಆ ಬದರಿಕಾಶ್ರಮಕ್ಕೆ ಬಂದರು. ದೈನ್ಯದಿಂದ ಬಿನ್ನವಿಸಿದರು.-

''ಭಗವನ್, ನೀನು ನಮ್ಮೆಲ್ಲರನ್ನೂ ಕೈಬಿಟ್ಟು ಇಷ್ಟು ದಿನ ನಮಗೆ ದರ್ಶನವನ್ನು ಕೊಡಲೇ ಇಲ್ಲ. ಅದರಿಂದ ನಮ್ಮ ಚಿತ್ತದ ಶಾಂತಿಯು ಹೊರಟು ಹೋಗಿದೆ. ಮನಸ್ಸು ದುಃಖಿತವಾಗಿದೆ. ನಮ್ಮ ಮೇಲೆ ನೀನು ಪರಮಾನುಗ್ರಹವನ್ನು ಮಾಡು. ನಮಗೆ ನಿನ್ನ ದರುಶನವನ್ನಿತ್ತು ಕಾಪಾಡು.'' ಹೀಗೆ ಭಕ್ತಿಯಿಂದ ಬಿನ್ನವಿಸಿದ ಆ ದೇವತೆಗಳ ನತಿನುತಿ

ಗಳಿಂದ ನಾನು ಪ್ರಸನ್ನನಾದೆನು. ಮೊದಲು ಅವರಿಗೆ ನನ್ನ ದರುಶನವನ್ನಿತ್ತೆನು. ಬಳಿಕ ದಯದುಂಬಿ ಅವರೆಡೆಗೆ ನೋಡಿದೆನು. ಅದರಿಂದ ದೇವತೆಗಳೆಲ್ಲರೂ ಆನಂದಿತರಾದರು. ಇದೆಲ್ಲವೂ ನಡೆದ ಆ ಊರ್ವಶಿ ಕುಂಡದ ದಂಡೆಯಲ್ಲಿ ಒಂದು ರಾತ್ರಿ ಇದ್ದು ಮರುದಿನ ಸ್ನಾನ ಮಾಡುವವನು ಸರ್ವ ಪಾಪಗಳನ್ನೂ ಕಳೆದುಕೊಂಡು ಊರ್ವಸೀ ಲೋಕವನ್ನು ಸೇರಿ ಚಿರಕಾಲದವರೆಗೆ ಆನಂದಿಸುತ್ತಾನೆ. ಮನುಷ್ಯರು ಎಲ್ಲಿಯೇ ಇರಲಿ, ತಾವು ಇದ್ದಲ್ಲಿಯೇ ಬದರೀ ಕ್ಷೇತ್ರವನ್ನು ಸ್ಮರಣೆ ಮಾಡಿ ಕ್ಷೇತ್ರಮೂರ್ತಿಯಾದ ಶ್ರೀಮನ್ನಾರಾಯಣನನ್ನು ಧ್ಯಾನ ಮಾಡಿದರೆ ಪುನಃ ಜನ್ಮವಿಲ್ಲದೆ ವಿಷ್ಣುಲೋಕವನ್ನು ಪಡೆಯುವರು. ಭೂದೇವಿ, ನಾನು ಈ ವರೆಗೆ ಹೇಳಿದ ಕೋಕಾಮುಖ ಕ್ಷೇತ್ರದ ಮತ್ತು ಬದರೀ ಕ್ಷೇತ್ರದ ಸುತ್ತಮುತ್ತಲಿನ ತೀರ್ಥಕ್ಷೇತ್ರಗಳಲ್ಲಿ ಪ್ರಾಣತ್ಯಾಗ ಮಾಡಿದ ನನ್ನ ಏಕನಿಷ್ಠ ಭಕ್ತರಿಗೆ ವಿಷ್ಣುಲೋಕ ಪ್ರಾಪ್ತಿಯು ನಿಶ್ಚಿತವಾಗಿ ಆಗುವದೆಂದು ತಿಳಿಯಬೇಕು.

*ವರಾಹ ಪುರಾಣದಲ್ಲಿ ನೂರಹದಿನೈದನೇ ಅಧ್ಯಾಯ ಮುಗಿದುದು*



## ಹೆಣ್ಣುಮಕ್ಕಳು ಹೊರಗಾದಾಗ ಮಾಡಬೇಕಾದ ಕರ್ತವ್ಯ | ಅಧ್ಯಾಯ - ೧೧೬

**ಭೂದೇವಿ :-** ದೇವಾ, ಹೆಂಗಸರು ಅಬಲೆಯರು. ಅವರಿಗೆ ಶಕ್ತಿಯು ಅಲ್ಪ. ಸಹನ ಗುಣ ಸ್ವಲ್ಪ. ರಜಸ್ವಲೆಯರಾದಾಗ ಅವರಿಗೆ ಮೂರುದಿನ ಉಪವಾಸವಿರುವದು ಶಕ್ಯವಾಗುವದಿಲ್ಲ. ಹಸಿವೆಯ ಬಾಧೆಯನ್ನು ಕೋಮಲಾಂಗಿಯರಾದ ಅವರು ಸಹಿಸಲಾರರು. ಆ ಮುಟ್ಟಿನಕಾಲದಲ್ಲಿ ಊಟಮಾಡಿದರೂ ಅವರಿಗೆ ಯಾವ ದೋಷವೂ ತಟ್ಟದಂತೆ ಏನಾದರೂ ಒಂದು ವಿಧಾನವನ್ನು ಹೇಳು. '' ಭೂದೇವಿಯ ಈ ಮಾತನ್ನು ಕೇಳಿ ಆ ವರಾಹ ಭಗವಂತನು ನಸುನಕ್ಕು ಅವಳಿಗೆ ಇಂತು ಉತ್ತರಿಸಿದನು.-

''ಧರಾದೇವಿ, ನಿನ್ನ ಪ್ರಶ್ನೆಯು ಚನ್ನಾಗಿದೆ. ನನ್ನ ಭಕ್ತರಿಗೆ ಸುಖವನ್ನುಂಟು ಮಾಡುವ ಅತಿರಹಸ್ಯವಾದ ವಿಷಯವನ್ನೇ ನೀನು ಪ್ರಶ್ನಿಸಿರುವೆ. ಹೆಂಗಸರು ರಜಸ್ವಲೆಯರಾದಾಗ ತೀರ್ಥಕ್ಷೇತ್ರಾದಿಗಳನ್ನು ಮುಟ್ಟಬಾರದು. ಹಸಿವೆಯಾದಾಗ ಊಟಮಾಡುವ ಇಚ್ಛೆಯಾದರೆ ತಲೆಯ ಮೇಲೆ ಕೈಜೋಡಿಸಿ

**''ಅನಾದಿ ಮಧ್ಯಾಂತ ಮಜಂ ಪುರಾಣಂ**
**ರಜಸ್ವಲಾ ದೇವವರಂ ನಮಾಮಿ ''**

''ಜನನ ಮರಣರಹಿತನೂ ಸರ್ವಕಾರಣನೂ ಸರ್ವದೇವೋತ್ತಮನೂ ಆದ ಶ್ರೀಹರಿಯನ್ನು ವಂದಿಸುತ್ತೇನೆ'' ಎಂಬ ಮಂತ್ರದ ಅರ್ಥವನ್ನು ಅನುಸಂಧಾನಕ್ಕೆ ತಂದುಕೊಂಡು ಭಗವಂತನನ್ನು ವಂದಿಸಿ ಅನಂತರ ನಿಸ್ಸಂದೇಹವಾಗಿ ಊಟ ಮಾಡಬಹುದು. ಈ ಮಂತ್ರವನ್ನು ಮನಸ್ಸಿನಲ್ಲಿ ಹೇಳಿ ಉಣ್ಣುವದರಿಂದ ಯಾವ ಪಾಪವೂ ತಟ್ಟುವದಿಲ್ಲ. ರಜಸ್ವಲೆಯು ಮುಟ್ಟಿನ ನಾಲ್ಕು ದಿನಗಳಲ್ಲಿ ಯಾವ ಧರ್ಮಕಾರ್ಯವನ್ನೂ ಮಾಡದೇ ಐದನೆಯ ದಿನದಿಂದ ಮತ್ತೆ ಎಲ್ಲ

ಪುಣ್ಯಕರ್ಮಗಳನ್ನು ಪ್ರಾರಂಭಿಸಬೇಕು. ಸ್ತ್ರೀಯರಾದರೂ ಸಂಸಾರದ ಚಿಂತೆಯನ್ನು ಬಿಟ್ಟು ನನ್ನಲ್ಲಿಯೇ ಚಿತ್ತವನ್ನಿಟ್ಟು ಪತಿವ್ರತೆಯರಿಗೆ ವಿಹಿತವಾದ ಸತ್ಕರ್ಮಗಳನ್ನು ಅನುಷ್ಠಾನ ಮಾಡುತ್ತಲಿದ್ದರೆ ಅವರಿಗೂ ನನ್ನ ಅನುಗ್ರಹದಿಂದ ಮೋಕ್ಷಾದಿ ಪುರುಷಾರ್ಥಗಳು ದೊರಕುವದರಲ್ಲಿ ಸಂದೇಹವಿಲ್ಲ.

**ಧರಣೀದೇವಿ :-** ದೇವ, ಸ್ತ್ರೀಯರಾಗಲಿ ಪುರುಷರಾಗಲಿ ಸಂಸಾರದಿಂದ ಪಾರಾಗಬೇಕಾದರೆ ಅವರ ನಡೆ-ನುಡಿಗಳು ಎಂತಿರಬೇಕು. ಪಾಪ ಲೇಪವಾಗದಂತೆ ಗಂಡು ಹೆಣ್ಣುಗಳು ಹೇಗೆ ಇರಬೇಕು ? ತಿಳಿಸು.

**ವರಾಹ :-** ಭೂದೇವಿ, ಪುರುಷನಾಗಲಿ ಅಥವಾ ಸ್ತ್ರೀಯೇ ಇರಲಿ ಸದ್ಗತಿಯನ್ನು ಬಯಸುತ್ತಿದ್ದರೆ ಮೊದಲು ಇಂದ್ರಿಯಗಳನ್ನು ತನ್ನ ಅಂಕೆಯಲ್ಲಿ ಇಟ್ಟುಕೊಳ್ಳಬೇಕು. ಅನಂತರ ಮನಸ್ಸನ್ನು ಸ್ಥಿರವಾಗಿ ಮಾಡಿಕೊಂಡು ಫಲದ ಆಶೆ ಬಿಟ್ಟು ದೇವರಲ್ಲಿಯೇ ಅದನ್ನು ದೃಢವಾಗಿ ನೆಟ್ಟು ಬಿಡಬೇಕು. ದೇವರಲ್ಲಿಯೇ ನಿರಂತರ ಮನಸ್ಸನ್ನು ಇಟ್ಟು ತಪಃ ಸಮಾಧಿಯೋಗದಲ್ಲಿದ್ದವನಿಗೆ ಭಕ್ಷ್ಯಾ-ಭಕ್ಷ್ಯ ಪೇಯಾ-ಪೇಯ ವಿಚಾರ ನಿರ್ಬಂಧವಾವುದೂ ಇರುವದಿಲ್ಲ. ವಿಧಿನಿಷೇಧಗಳೂ ಇಲ್ಲ. ಅಂಥ ಪ್ರಸಂಗದಲ್ಲಿ ಅವನು ಯಾವ ಕರ್ಮವನ್ನು ಮಾಡದಿದ್ದರೂ ಪಾಪವಿಲ್ಲ. ಮನಸ್ಸನ್ನು ದೇವರಲ್ಲಿ ಹೊಯ್ದಾಡದಂತೆ ಇಟ್ಟು ಭಗವದೇಕನಿಷ್ಠ ಚಿತ್ತವುಳ್ಳ ಮನುಷ್ಯನು ಯಾವುದೇ ಕರ್ಮ ಮಾಡಿದರೂ ನೀರಿನಲ್ಲಿರುವ ಕಮಲದ ಎಲೆಯಂತೆ ಅವನಿಗೆ ಆ ಕರ್ಮವು ಅಂಟುವದಿಲ್ಲ. ಎಚ್ಚರವಿದ್ದಾಗ, ನಿದ್ದೆ ಮಾಡುವಾಗ, ಉಣ್ಣುವಾಗ, ತಿನ್ನುವಾಗ, ನೋಡುವಾಗ, ಕೂಡುವಾಗ, ಕಾರ್ಯಮಾಡುವಾಗ, ಯಾವಾಗಲೂ ಚಿತ್ತದಲ್ಲಿ ಅಚ್ಯುತನಾದ ನನ್ನನ್ನೇ ಚಿಂತಿಸುವ ಭಕ್ತನಿಗೆ ಯಾವ ಚಿಂತೆಯೂ ಇಲ್ಲ. ಭಯವೂ ಇಲ್ಲ.

ಭೂದೇವಿ, ಸ್ತ್ರೀಯರಿಗೆ ಋತುಕಾಲವನ್ನು ಸಂತಾನಾರ್ಥವಾಗಿ ನಾನೇ ಸೃಷ್ಟಿಸಿದೆನು. ಪ್ರತಿತಿಂಗಳಲ್ಲಿಯೂ ಋತುಕಾಲದಲ್ಲಿ ಪತ್ನಿಯ ಸಮಾಗಮವನ್ನು ಮಾಡಬೇಕು. ಅದರಿಂದಲೇ ನನಗೆ ಪ್ರೀತಿಯಾಗುವದು. ಋತುಕಾಲದಲ್ಲಿ ನಿಯಮದಂತೆ ಪತ್ನಿ ಸಂಗವನ್ನು ಮಾಡದಿದ್ದರೆ ಆ ಮನುಷ್ಯನಿಗೆ ಪಿತೃಹತ್ಯಾದೋಷವು ಬರುತ್ತದೆ. ಕಾಮಾತುರತೆಯಿಂದಾಗಲಿ ಮೋಹದಿಂದಾಗಲೀ ಪತ್ನೀ ಸಂಗವನ್ನು ಮಾಡದೇ ಪಿತೃಗಳ ಪ್ರೀತ್ಯರ್ಥವಾಗಿ ಋತುಸ್ನಾತಳಾದ ಮಡದಿಯೊಡನೆ ಕೂಡಬೇಕು. ರಜಸ್ವಲೆಯಾದ ನಾರಿಯನ್ನು ಲೋಭದಿಂದಾಗಲೀ, ಮೋಹದಿಂದಾಗಲಿ ಒಂದು, ಎರಡು, ಮೂರು, ನಾಲ್ಕು ದಿನವೂ ಮುಟ್ಟಬಾರದು. ಋತುಸ್ನಾತಳಾದ ಬಳಿಕ ಸ್ತ್ರೀ ಸಮಾಗಮವನ್ನು ಮಾಡಿದ ಬಳಿಕ ಮತ್ತೆ ಮತ್ತೆ ಮಡದಿ ಎಡೆಗೆ ಕಾಮುಕದೃಷ್ಟಿಯಿಂದ ನೋಡಬಾರದು. ಭೋಗ ಕಾರ್ಯವು ಮುಗಿದ ಬಳಿಕ ನೀರಿನಿಂದ ಸ್ನಾನ ಮಾಡಿ ಬೇರೆ ಶುದ್ಧ ವಸ್ತ್ರವನ್ನು ಧರಿಸಬೇಕು. ರಜಸ್ವಲೆಯ ನಾಲ್ಕು ದಿನದ ಅವಧಿಯ ಪೂರ್ಣ ಮುಗಿಯುವ ಮೊದಲು ಸ್ತ್ರೀ ಸಂಗ ಮಾಡುವವನು ಮಹಾಪಾಪಿಯು. ಕಾಮಾಂಧನಾಗಿ ಒಂದು, ಎರಡು, ಮೂರು, ನಾಲ್ಕನೇ ದಿನಗಳಲ್ಲಿ ರಜಸ್ವಲೆಯಾದವಳನ್ನು ಎಂದೂ ಮುಟ್ಟಕೂಡದು. ಭೋಗವನ್ನು ಮಾಡಕೂಡದು. ಋತುಸ್ನಾನ ಮಾಡಿದ ಬಳಿಕ ಹದಿನಾರು ದಿನಗಳವರೆಗೆ

ಗಳಿಂದ ನಾನು ಪ್ರಸನ್ನನಾದೆನು. ಮೊದಲು ಅವರಿಗೆ ನನ್ನ ದರುಶನವನ್ನಿತ್ತೆನು. ಬಳಿಕ ದಯದುಂಬಿ ಅವರೆಡೆಗೆ ನೋಡಿದೆನು. ಅದರಿಂದ ದೇವತೆಗಳೆಲ್ಲರೂ ಆನಂದಿತರಾದರು. ಇದೆಲ್ಲವೂ ನಡೆದ ಆ ಊರ್ವಶಿ ಕುಂಡದ ದಂಡೆಯಲ್ಲಿ ಒಂದು ರಾತ್ರಿ ಇದ್ದು ಮರುದಿನ ಸ್ನಾನ ಮಾಡುವವನು ಸರ್ವ ಪಾಪಗಳನ್ನೂ ಕಳೆದುಕೊಂಡು ಊರ್ವಸೀ ಲೋಕವನ್ನು ಸೇರಿ ಚಿರಕಾಲದವರೆಗೆ ಆನಂದಿಸುತ್ತಾನೆ. ಮನುಷ್ಯರು ಎಲ್ಲಿಯೇ ಇರಲಿ, ತಾವು ಇದ್ದಲ್ಲಿಯೇ ಬದರೀ ಕ್ಷೇತ್ರವನ್ನು ಸ್ಮರಣೆ ಮಾಡಿ ಕ್ಷೇತ್ರಮೂರ್ತಿಯಾದ ಶ್ರೀಮನ್ನಾರಾಯಣನನ್ನು ಧ್ಯಾನ ಮಾಡಿದರೆ ಪುನಃ ಜನ್ಮವಿಲ್ಲದೆ ವಿಷ್ಣುಲೋಕವನ್ನು ಪಡೆಯುವರು. ಭೂದೇವಿ, ನಾನು ಈ ವರೆಗೆ ಹೇಳಿದ ಕೋಕಾಮುಖ ಕ್ಷೇತ್ರದ ಮತ್ತು ಬದರೀ ಕ್ಷೇತ್ರದ ಸುತ್ತಮುತ್ತಲಿನ ತೀರ್ಥಕ್ಷೇತ್ರಗಳಲ್ಲಿ ಪ್ರಾಣತ್ಯಾಗ ಮಾಡಿದ ನನ್ನ ಏಕನಿಷ್ಠ ಭಕ್ತರಿಗೆ ವಿಷ್ಣುಲೋಕ ಪ್ರಾಪ್ತಿಯು ನಿಶ್ಚಿತವಾಗಿ ಆಗುವದೆಂದು ತಿಳಿಯಬೇಕು.

ವರಾಹ ಪುರಾಣದಲ್ಲಿ ನೂರಹದಿನೈದನೇ ಅಧ್ಯಾಯ ಮುಗಿದುದು



## ಹೆಣ್ಣುಮಕ್ಕಳು ಹೊರಗಾದಾಗ ಮಾಡಬೇಕಾದ ಕರ್ತವ್ಯ | ಅಧ್ಯಾಯ - ೧೧೬

**ಭೂದೇವಿ :-** ದೇವಾ, ಹೆಂಗಸರು ಅಬಲೆಯರು. ಅವರಿಗೆ ಶಕ್ತಿಯು ಅಲ್ಪ. ಸಹನ ಗುಣ ಸ್ವಲ್ಪ. ರಜಸ್ವಲೆಯರಾದಾಗ ಅವರಿಗೆ ಮೂರುದಿನ ಉಪವಾಸವಿರುವದು ಶಕ್ಯವಾಗುವದಿಲ್ಲ. ಹಸಿವೆಯ ಬಾಧೆಯನ್ನು ಕೋಮಲಾಂಗಿಯರಾದ ಅವರು ಸಹಿಸಲಾರರು. ಆ ಮುಟ್ಟಿನಕಾಲದಲ್ಲಿ ಊಟಮಾಡಿದರೂ ಅವರಿಗೆ ಯಾವ ದೋಷವೂ ತಟ್ಟದಂತೆ ಏನಾದರೂ ಒಂದು ವಿಧಾನವನ್ನು ಹೇಳು. '' ಭೂದೇವಿಯ ಈ ಮಾತನ್ನು ಕೇಳಿ ಆ ವರಾಹ ಭಗವಂತನು ನಸುನಕ್ಕು ಅವಳಿಗೆ ಇಂತು ಉತ್ತರಿಸಿದನು.-

''ಧರಾದೇವಿ, ನಿನ್ನ ಪ್ರಶ್ನೆಯು ಚನ್ನಾಗಿದೆ. ನನ್ನ ಭಕ್ತರಿಗೆ ಸುಖವನ್ನುಂಟು ಮಾಡುವ ಅತಿರಹಸ್ಯವಾದ ವಿಷಯವನ್ನೇ ನೀನು ಪ್ರಶ್ನಿಸಿರುವೆ. ಹೆಂಗಸರು ರಜಸ್ವಲೆಯರಾದಾಗ ತೀರ್ಥಕ್ಷೇತ್ರಾದಿಗಳನ್ನು ಮುಟ್ಟಬಾರದು. ಹಸಿವೆಯಾದಾಗ ಊಟಮಾಡುವ ಇಚ್ಛೆಯಾದರೆ ತಲೆಯ ಮೇಲೆ ಕೈಜೋಡಿಸಿ

''ಅನಾದಿ ಮಧ್ಯಾಂತ ಮಜಂ ಪುರಾಣಂ
ರಜಸ್ವಲಾ ದೇವವರಂ ನಮಾಮಿ ''

''ಜನನ ಮರಣರಹಿತನೂ ಸರ್ವಕಾರಣನೂ ಸರ್ವದೇವೋತ್ತಮನೂ ಆದ ಶ್ರೀಹರಿಯನ್ನು ವಂದಿಸುತ್ತೇನೆ'' ಎಂಬ ಮಂತ್ರದ ಅರ್ಥವನ್ನು ಅನುಸಂಧಾನಕ್ಕೆ ತಂದುಕೊಂಡು ಭಗವಂತನನ್ನು ವಂದಿಸಿ ಅನಂತರ ನಿಸ್ಸಂದೇಹವಾಗಿ ಊಟ ಮಾಡಬಹುದು. ಈ ಮಂತ್ರವನ್ನು ಮನಸ್ಸಿನಲ್ಲಿ ಹೇಳಿ ಉಣ್ಣುವದರಿಂದ ಯಾವ ಪಾಪವೂ ತಟ್ಟುವದಿಲ್ಲ. ರಜಸ್ವಲೆಯು ಮುಟ್ಟಿನ ನಾಲ್ಕು ದಿನಗಳಲ್ಲಿ ಯಾವ ಧರ್ಮಕಾರ್ಯವನ್ನೂ ಮಾಡದೇ ಐದನೆಯ ದಿನದಿಂದ ಮತ್ತೆ ಎಲ್ಲ

ಪುಣ್ಯಕರ್ಮಗಳನ್ನು ಪ್ರಾರಂಭಿಸಬೇಕು. ಸ್ತ್ರೀಯರಾದರೂ ಸಂಸಾರದ ಚಿಂತೆಯನ್ನು ಬಿಟ್ಟು ನನ್ನಲ್ಲಿಯೇ ಚಿತ್ತವನ್ನಿಟ್ಟು ಪತಿವ್ರತೆಯರಿಗೆ ವಿಹಿತವಾದ ಸತ್ಕರ್ಮಗಳನ್ನು ಅನುಷ್ಠಾನ ಮಾಡುತ್ತಲಿದ್ದರೆ ಅವರಿಗೂ ನನ್ನ ಅನುಗ್ರಹದಿಂದ ಮೋಕ್ಷಾದಿ ಪುರುಷಾರ್ಥಗಳು ದೊರಕುವದರಲ್ಲಿ ಸಂದೇಹವಿಲ್ಲ.

**ಧರಣೀದೇವಿ :-** ದೇವ, ಸ್ತ್ರೀಯರಾಗಲಿ ಪುರುಷರಾಗಲಿ ಸಂಸಾರದಿಂದ ಪಾರಾಗಬೇಕಾದರೆ ಅವರ ನಡೆ-ನುಡಿಗಳು ಎಂತಿರಬೇಕು. ಪಾಪ ಲೇಪವಾಗದಂತೆ ಗಂಡು ಹೆಣ್ಣುಗಳು ಹೇಗೆ ಇರಬೇಕು ? ತಿಳಿಸು.

**ವರಾಹ :-** ಭೂದೇವಿ, ಪುರುಷನಾಗಲಿ ಅಥವಾ ಸ್ತ್ರೀಯೇ ಇರಲಿ ಸದ್ಗತಿಯನ್ನು ಬಯಸುತ್ತಿದ್ದರೆ ಮೊದಲು ಇಂದ್ರಿಯಗಳನ್ನು ತನ್ನ ಅಂಕೆಯಲ್ಲಿ ಇಟ್ಟುಕೊಳ್ಳಬೇಕು. ಅನಂತರ ಮನಸ್ಸನ್ನು ಸ್ಥಿರವಾಗಿ ಮಾಡಿಕೊಂಡು ಫಲದ ಆಶೆ ಬಿಟ್ಟು ದೇವರಲ್ಲಿಯೇ ಅದನ್ನು ದೃಢವಾಗಿ ನೆಟ್ಟು ಬಿಡಬೇಕು. ದೇವರಲ್ಲಿಯೇ ನಿರಂತರ ಮನಸ್ಸನ್ನು ಇಟ್ಟು ತಪಃ ಸಮಾಧಿಯೋಗದಲ್ಲಿದ್ದವನಿಗೆ ಭಕ್ಷಾ-ಭಕ್ಷ್ಯ ಪೇಯಾ-ಪೇಯ ವಿಚಾರ ನಿರ್ಬಂಧವಾವುದೂ ಇರುವದಿಲ್ಲ. ವಿಧಿನಿಷೇಧಗಳೂ ಇಲ್ಲ. ಅಂಥ ಪ್ರಸಂಗದಲ್ಲಿ ಅವನು ಯಾವ ಕರ್ಮವನ್ನು ಮಾಡದಿದ್ದರೂ ಪಾಪವಿಲ್ಲ. ಮನಸ್ಸನ್ನು ದೇವರಲ್ಲಿ ಹೊಯ್ದಾಡದಂತೆ ಇಟ್ಟು ಭಗವದೇಕನಿಷ್ಠ ಚಿತ್ತವುಳ್ಳ ಮನುಷ್ಯನು ಯಾವುದೇ ಕರ್ಮ ಮಾಡಿದರೂ ನೀರಿನಲ್ಲಿರುವ ಕಮಲದ ಎಲೆಯಂತೆ ಅವನಿಗೆ ಆ ಕರ್ಮವು ಅಂಟುವದಿಲ್ಲ. ಎಚ್ಚರವಿದ್ದಾಗ, ನಿದ್ದೆ ಮಾಡುವಾಗ, ಉಣ್ಣುವಾಗ, ತಿನ್ನುವಾಗ, ನೋಡುವಾಗ, ಕೂಡುವಾಗ, ಕಾರ್ಯಮಾಡುವಾಗ, ಯಾವಾಗಲೂ ಚಿತ್ತದಲ್ಲಿ ಅಚ್ಯುತನಾದ ನನ್ನನ್ನೇ ಚಿಂತಿಸುವ ಭಕ್ತನಿಗೆ ಯಾವ ಚಿಂತೆಯೂ ಇಲ್ಲ. ಭಯವೂ ಇಲ್ಲ.

ಭೂದೇವಿ, ಸ್ತ್ರೀಯರಿಗೆ ಋತುಕಾಲವನ್ನು ಸಂತಾನಾರ್ಥವಾಗಿ ನಾನೇ ಸೃಷ್ಟಿಸಿದೆನು. ಪ್ರತಿತಿಂಗಳಲ್ಲಿಯೂ ಋತುಕಾಲದಲ್ಲಿ ಪತ್ನಿಯ ಸಮಾಗಮವನ್ನು ಮಾಡಬೇಕು. ಅದರಿಂದಲೇ ನನಗೆ ಪ್ರೀತಿಯಾಗುವದು. ಋತುಕಾಲದಲ್ಲಿ ನಿಯಮದಂತೆ ಪತ್ನಿ ಸಂಗವನ್ನು ಮಾಡದಿದ್ದರೆ ಆ ಮನುಷ್ಯನಿಗೆ ಪಿತೃಹತ್ಯಾದೋಷವು ಬರುತ್ತದೆ. ಕಾಮಾತುರತೆಯಿಂದಾಗಲಿ ಮೋಹದಿಂದಾಗಲೀ ಪತ್ನೀ ಸಂಗವನ್ನು ಮಾಡದೇ ಪಿತೃಗಳ ಪ್ರೀತ್ಯರ್ಥವಾಗಿ ಋತುಸ್ನಾತಳಾದ ಮಡದಿಯೊಡನೆ ಕೂಡಬೇಕು. ರಜಸ್ವಲೆಯಾದ ನಾರಿಯನ್ನು ಲೋಭದಿಂದಾಗಲೀ, ಮೋಹದಿಂದಾಗಲಿ ಒಂದು, ಎರಡು, ಮೂರು, ನಾಲ್ಕು ದಿನವೂ ಮುಟ್ಟಬಾರದು. ಋತುಸ್ನಾತಳಾದ ಬಳಿಕ ಸ್ತ್ರೀ ಸಮಾಗಮವನ್ನು ಮಾಡಿದ ಬಳಿಕ ಮತ್ತೆ ಮತ್ತೆ ಮಡದಿ ಎಡೆಗೆ ಕಾಮುಕದೃಷ್ಟಿಯಿಂದ ನೋಡಬಾರದು. ಭೋಗ ಕಾರ್ಯವು ಮುಗಿದ ಬಳಿಕ ನೀರಿನಿಂದ ಸ್ನಾನ ಮಾಡಿ ಬೇರೆ ಶುದ್ಧ ವಸ್ತ್ರವನ್ನು ಧರಿಸಬೇಕು. ರಜಸ್ವಲೆಯ ನಾಲ್ಕು ದಿನದ ಅವಧಿಯ ಪೂರ್ಣ ಮುಗಿಯುವ ಮೊದಲು ಸ್ತ್ರೀ ಸಂಗ ಮಾಡುವವನು ಮಹಾಪಾಪಿಯು. ಕಾಮಾಂಧನಾಗಿ ಒಂದು, ಎರಡು, ಮೂರು, ನಾಲ್ಕನೇ ದಿನಗಳಲ್ಲಿ ರಜಸ್ವಲೆಯಾದವಳನ್ನು ಎಂದೂ ಮುಟ್ಟಕೂಡದು. ಭೋಗವನ್ನು ಮಾಡಕೂಡದು. ಋತುಸ್ನಾನ ಮಾಡಿದ ಬಳಿಕ ಹದಿನಾರು ದಿನಗಳವರೆಗೆ

ಋತುಕಾಲ ಎನಿಸುವದು. ಈ ಋತು ಕಾಲದಲ್ಲಿ ಸ್ತ್ರೀ ಸಂಭೋಗವು ಶಾಸ್ತ್ರ ವಿಹಿತವಾಗಿದೆ. ಪಿತೃಗಳಿಗೆ ಪ್ರೀತಿಕರವಾಗಿದೆ. ಋತು ಕಾಲದಲ್ಲಿ ಮಾತ್ರ ಸ್ವ ಸ್ತ್ರೀ ಸಂಗ ಮಾಡುವವನು ಬ್ರಹ್ಮಚಾರಿಯೇ ಸರಿ. ಆರೋಗ್ಯದಿಂದಿದ್ದಾಗ, ಕೋಪದಿಂದಾಗಲಿ, ಮೋಹದಿಂದಾಗಲಿ ಭೋಗಾರ್ಹಳಾದ ತನ್ನ ಪತ್ನಿಯೊಡನೆ ಸಂಗವನ್ನು ಮಾಡದಿರುವ ಮನುಷ್ಯನು ಪುರುಷಾಧಮ ಎನಿಸುವನು. ಮತ್ತೂ ಅವನಿಗೆ ಭ್ರೂಣಹತ್ಯಾ ಪಾಪವು ಬರುವದು. ನಿಜವಾದ ಭಗವದ್ಭಕ್ತರಾದ ಮಹಿಳೆಯರು ರಜಸ್ವಲೆಯಾದಾಗ ಮೂರು ದಿನ ಉಪವಾಸವಿದ್ದು ನಾಲ್ಕನೇ ದಿನ ಸ್ನಾನ ಮಾಡಿ ಶುದ್ಧರಾಗಿದ್ದರೂ ಹೆಚ್ಚಿನ ಧರ್ಮಕಾರ್ಯಗಳನ್ನು ಮಾಡದೇ ಭೋಜನಾದಿ ಕೃತ್ಯಗಳನ್ನು ಮಾಡಬೇಕು. ಐದನೆಯ ದಿನ ತಲೆಗೆ ಸೀಗೇಕಾಯಿ ಮೊದಲಾದವುಗಳನ್ನು ಉಜ್ಜಿಕೊಂಡು ಸ್ನಾನ ಮಾಡಿ ತಲೆಯ ಕೊಳೆಯನ್ನು ಪೂರ್ಣವಾಗಿ ಹೋಗಲಾಡಿಸಬೇಕು. ಸ್ನಾನವಾದ ಮೇಲೆ ಶುದ್ಧ ಬಿಳಿ ಬಟ್ಟೆಯನ್ನು ಧರಿಸಿ ದೇವರನ್ನು ಸ್ಥಿರ ಬುದ್ಧಿಯಿಂದ ಧ್ಯಾನ ಮಾಡಿ ಅನಂತರ ಗೃಹಕೃತ್ಯಗಳನ್ನು ಮಾಡುವ ನಾರಿಯರಿಗೆ ನಾನು ಒಲಿಯುತ್ತೇನೆ. ಅಂದು ಐದನೆಯ ದಿನ ಅಡಿಗೆ ಮಾಡಿ ನನಗೆ ನೈವೇದ್ಯವನ್ನು ಇಟ್ಟು ದೇವರಿಗೆ ನಮಸ್ಕಾರ ಮಾಡಬೇಕು.

"ರಜಿಸ್ವಲಾ ದೇವ ವಯಂ ನಮಾಮಃ
ಮುಕ್ತಿ ಪ್ರದಂ ವಾಸುದೇವಂ ನಮಾಮಃ

"ರಜಸ್ವಲೆಯಾಗಿದ್ದ ನಾನು ಮುಕ್ತಿದಾಯಕನಾದ ವಾಸುದೇವನನ್ನು ವಂದಿಸುತ್ತೇನೆ" ಎಂದು ಹೇಳಿ ವಂದಿಸಬೇಕು. ಇದರಿಂದ ಅವರ ಶುದ್ಧಿ ಸ್ನಾನದಲ್ಲಿ ಪ್ರಮಾದದಿಂದ ಆದ ಅಶುದ್ಧಿ ಪಾಪವೂ ಕೂಡ ಪರಿಹಾರವಾಗುವದು. ನನ್ನ ಅಜ್ಞಾನರೂಪವಾದ ವೇದಶಾಸ್ತ್ರಗಳಲ್ಲಿ ಹೇಳಿದಂತೆ ಆಚರಣ ಮಾಡುವ ಸ್ತ್ರೀಪುರುಷರು ನನಗೆ ಅತ್ಯಂತ ಪ್ರೀತ್ಯಾಸ್ಪದರಾಗುವರು. ಪರಮಗತಿಯನ್ನು ಬಯಸುವವರು ಇಂದ್ರಿಯ ನಿಗ್ರಹ ಮಾಡಿ ತನ್ನ ಜ್ಞಾನ ಕರ್ಮಗಳನ್ನೆಲ್ಲ ಫಲಾಶೆ ಬಿಟ್ಟು ಪರಮಾತ್ಮನಿಗೆ ಸಮರ್ಪಣೆಗೈಯ್ಯಬೇಕು. ಹೀಗೆ ಜ್ಞಾನಕರ್ಮಗಳ ಫಲ ಸಮರ್ಪಣೆಯನ್ನು ಶ್ರೀ ಹರಿಯಲ್ಲಿ ಮಾಡವದೇ ಕರ್ಮ ಸನ್ಯಾಸ ಮತ್ತು ಜ್ಞಾನ ಸನ್ಯಾಸ ಎನಿಸುವದು. ಜ್ಞಾನವಿದ್ದರೂ ವಿಹಿತಕರ್ಮ ಮಾಡದವರೂ, ಕರ್ಮರತರಾಗಿದ್ದರೂ ನನ್ನಲ್ಲಿ ಸರಿಯಾಗಿ ಭಕ್ತಿ ಮಾಡದಿದ್ದವರೂ ನನ್ನನ್ನು ಸರಿಯಾಗಿ ತಿಳಿದಿರಲಾರರು. ಅನೇಕ ಜನ್ಮಗಳಲ್ಲಿ ನೂರಾರು ಮಡದಿಯರೂ, ಸಾವಿರಾರು ತಾಯ್ತಂದೆಗಳೂ ಜೀವಿಗೆ ಆಗುತ್ತ ಹೋಗುವದಕ್ಕೆ ನನ್ನ ಅಜ್ಞಾನವೇ ಮುಖ್ಯ ಕಾರಣ. ಅಜ್ಞಾನದಿಂದ ಬಿಗಿಯಲ್ಪಟ್ಟ ಈ ಪ್ರಪಂಚವು ಮೋಹಕ್ಕೆ ಸಿಕ್ಕಿಕೊಂಡು ಬಗೆಬಗೆಯಿಂದ ಬಂಧನಕ್ಕೆ ಒಳಗಾಗಿರುತ್ತದೆ.

ಮಾನವನ ತಾಯಿ ತಂದೆ ಎಲ್ಲಿಯೋ ಹೋಗುವರು. ಮಕ್ಕಳು ಸೇವಕರೂ ಬೇರೆ ಕಡೆಗೆ ಹೋಗುವರು. ಹೋದವರು ಜನ್ಮಾಂತರ ಹೊಂದಿ ತಮ್ಮ ಕರ್ಮಾನುಸಾರವಾಗಿ ಬೇರೆ ಬೇರೆ ಸ್ಥಾನಗಳಲ್ಲಿ ಹುಟ್ಟುವರು. ಮಾನವರಾಗಿ ಸಂಸಾರಮೋಹದಿಂದ ನನ್ನನ್ನು ಭಜಿಸದಿರುವವರೂ, ನನ್ನ ಮೂರ್ತಿಯನ್ನು ವರ್ಷಾರು ತಿಂಗಳವಾದರೂ ಮನಃಪೂರ್ವಕವಾಗಿ ಪೂಜಿಸದೆ ದೇವರಲ್ಲಿಯೇ ಚಿತ್ತವಿರಿಸದ ಮನುಷ್ಯರೂ ಮತ್ತೆ ಮತ್ತೆ

ಪುನರ್ಜನ್ಮವನ್ನು ಪಡೆಯುವರು. ಅವರೆಂದಿಗೂ ಮುಕ್ತರಾಗದೇ ಮತ್ತೆ ಮತ್ತೆ ಹುಟ್ಟಿಸಾಯುತ್ತಲಿರುತ್ತಾರೆ. ದಡ್ಡನಾದರೂ ನನ್ನಲ್ಲಿ ಮನಸ್ಸನ್ನಿಟ್ಟು ಧ್ಯಾನಮಾಡಿದವನು ಪುನರ್ಜನ್ಮವನ್ನು ಪಡೆಯುವದಿಲ್ಲ.

*ವರಾಹ ಪುರಾಣದಲ್ಲಿ ನೂರ ಹದಿನಾರನೇ ಅಧ್ಯಾಯ ಮುಗಿದುದು.*



## ಮಂದಾರಾದಿ ಕ್ಷೇತ್ರಗಳ ಮಹಾಮಹಿಮೆ | ಅಧ್ಯಾಯ - ೧೧೭

ವರಾಹ :- ಕ್ಷೋಣೀದೇವಿ, ವಿಂಧ್ಯಪರ್ವತದ ತಪ್ಪಲಿನಲ್ಲಿ ಗಂಗೆಯ ದಕ್ಷಿಣ ತಟಾಕದಲ್ಲಿ ಮಂದಾರ ಎಂದು ಪ್ರಸಿದ್ಧವಾದ ಒಂದು ಸ್ಥಾನವಿರುತ್ತದೆ. ನನ್ನ ಭಕ್ತರಿಗೆಲ್ಲ ಸೌಖ್ಯಕೊಡುವ ಅತ್ಯಂತ ಗುಹ್ಯವಾದ ಆ ಕ್ಷೇತ್ರವು ಎಲ್ಲ ಭಾಗವತರಿಗೂ ಅತ್ಯಂತ ಪ್ರೀತ್ಯಾಸ್ಪದವಾಗಿರುತ್ತದೆ. ತ್ರೇತಾಯುಗದಲ್ಲಿ ಜನಿಸಿದ ಕಾಂತಿವಂತನಾದ ಶ್ರೀರಾಮಚಂದ್ರನು ಆ ಮಂದಾರ ಕ್ಷೇತ್ರದಲ್ಲಿ ನನ್ನ (ವರಾಹ ಮೂರ್ತಿಯ) ಪ್ರತಿಷ್ಠೆ ಮಾಡುವನು.

ಆ ಮಂದಾರ ಕ್ಷೇತ್ರದಲ್ಲಿ ಹೂತು ನಿಂತ ಮಂದಾರ ವೃಕ್ಷದ ಮನೋಹರವಾದ ಆ ಮಂದಾರ ಕುಸುಮವನ್ನು ತೆಗೆದುಕೊಂಡು ಪ್ರೀತಿಯಿಂದ ಅದನ್ನು ಎದೆಯ ಮೇಲೆ ಇರಿಸಿಕೊಂಡು ನಾನು ಆಟವಾಡುತ್ತಿದ್ದೆ. ನಾನು ಆ ವಿಂಧ್ಯಪರ್ವತದಲ್ಲಿದ್ದಾಗ ನನ್ನ ಪ್ರಭಾವದಿಂದ ಈ ಮಂದಾರವೃಕ್ಷವು ಉದ್ಭವಿಸಿತು. ಅದರ ಜೊತೆಗೆ ಹನ್ನೊಂದು ತಣ್ಣೀರಿನ ಚಿಲುಮೆಗಳು ಆ ಶೈಲದಿಂದ ಚಿಮ್ಮಿ ಹರಿದವು. ಆ ಮಂದಾರ ಮರದ ಬುಡದಲ್ಲಿ ಮನೋಹರವಾದ ಒಂದು ಹಾಸುಗಲ್ಲನ್ನು ಆಶ್ರಯಿಸಿ ನಾನು ಇರುತ್ತೇನೆ.

ಸುಂದರೀ, ಆ ಸ್ಥಾನದಲ್ಲಿ ಒಂದು ಚಮತ್ಕಾರ ಉಂಟು. ಆ ಮಂದಾರ ವೃಕ್ಷವು ದ್ವಾದಶೀ ಹಾಗೂ ಚತುರ್ದಶಿ ದಿನ ಹೂ ಬಿಡುತ್ತದೆ. ಅಂದು ಮಧ್ಯಾನ್ಹ ಕಾಲದಲ್ಲಿ ಮಾತ್ರ ಅದು ಜನರ ಕಣ್ಣಿಗೆ ಕಾಣಿಸುತ್ತದೆ. ಬೇರೆ ದಿನಗಳಲ್ಲಿ ಅದು ಯಾರಿಗೂ ಕಾಣುವದಿಲ್ಲ. ಆ ಮಂದಾರ ಕುಂಡದಲ್ಲಿ ಒಪ್ಪತ್ತು ಊಟಮಾಡಿ ಸ್ನಾನಮಾಡಿದ ಮನುಷ್ಯನು ದಿವ್ಯ ಗತಿಯನ್ನು ಹೊಂದುತ್ತಾನೆ. ಅಲ್ಲಿ ಪ್ರಾಣತ್ಯಾಗ ಮಾಡಿದವನು ವಿಷ್ಣುಲೋಕಕ್ಕೆ ಹೋಗುತ್ತಾನೆ. ಆ ಮಂದಾರ ಕುಂಡದ ಉತ್ತರ ಭಾಗದಲ್ಲಿ 'ಪ್ರಾಪಣ' ಎಂಬ ಒಂದು ಪರ್ವತವಿದೆ. ಅದರ ದಕ್ಷಿಣ ದಿಕ್ಕಿನಲ್ಲಿ ಮೂರು ನೀರಿನ ಝರಿಗಳ ಜಲಪ್ರವಾಹವು ಮುಪ್ಪುರಿಗೊಂಡು ದಕ್ಷಿಣದಲ್ಲಿ ಸ್ರವಿಸಿ ಮುಂದೆ ಉತ್ತರಾಭಿಮುಖವಾಗಿ ಹರಿಯುತ್ತದೆ. ಆ ಸ್ಥಳದಲ್ಲಿ ಒಂದು ಇರುಳು ಇದ್ದು ಮಾರನೆಯ ದಿನ ಆ ಸ್ನಾನ ಕುಂಡದಲ್ಲಿ ಸ್ನಾನ ಮಾಡುವವರೂ ದೇಹತ್ಯಾಗ ಮಾಡುವವರೂ ನನ್ನ ಲೋಕವನ್ನು ಸೇರುವರು. ಈ ಮಂದಾರ ಕುಂಡದ ಈಶಾನ್ಯ ದಿಕ್ಕಿನಲ್ಲಿ ಅರಿಶಿಣ ಬಣ್ಣದ ಜಲಧಾರೆಯು ಬೀಳುವ 'ವೈಕುಂಠಕಾರಣ' ಎಂಬ ಒಂದು ರಹಸ್ಯ ತೀರ್ಥವಿದೆ. ಅಲ್ಲಿ ಒಂದು ರಾತ್ರಿ ಇದ್ದು ಸ್ನಾನ ಮಾಡುವವನು ಸ್ವರ್ಗವನ್ನೂ, ಸಾವನಪ್ಪುವವನು ವೈಕುಂಠವನ್ನೂ ಹೊಂದುವನು.

ಋತುಕಾಲ ಎನಿಸುವದು. ಈ ಋತು ಕಾಲದಲ್ಲಿ ಸ್ತ್ರೀ ಸಂಭೋಗವು ಶಾಸ್ತ್ರ ವಿಹಿತವಾಗಿದೆ. ಪಿತೃಗಳಿಗೆ ಪ್ರೀತಿಕರವಾಗಿದೆ. ಋತು ಕಾಲದಲ್ಲಿ ಮಾತ್ರ ಸ್ವ ಸ್ತ್ರೀ ಸಂಗ ಮಾಡುವವನು ಬ್ರಹ್ಮಚಾರಿಯೇ ಸರಿ. ಆರೋಗ್ಯದಿಂದಿದ್ದಾಗ, ಕೋಪದಿಂದಾಗಲಿ, ಮೋಹದಿಂದಾಗಲಿ ಭೋಗಾರ್ಹಳಾದ ತನ್ನ ಪತ್ನಿಯೊಡನೆ ಸಂಗವನ್ನು ಮಾಡದಿರುವ ಮನುಷ್ಯನು ಪುರುಷಾಧಮ ಎನಿಸುವನು. ಮತ್ತೂ ಅವನಿಗೆ ಭ್ರೂಣಹತ್ಯಾ ಪಾಪವು ಬರುವದು. ನಿಜವಾದ ಭಗವದ್ಭಕ್ತರಾದ ಮಹಿಳೆಯರು ರಜಸ್ವಲೆಯಾದಾಗ ಮೂರು ದಿನ ಉಪವಾಸವಿದ್ದು ನಾಲ್ಕನೇ ದಿನ ಸ್ನಾನ ಮಾಡಿ ಶುದ್ಧರಾಗಿದ್ದರೂ ಹೆಚ್ಚಿನ ಧರ್ಮಕಾರ್ಯಗಳನ್ನು ಮಾಡದೇ ಭೋಜನಾದಿ ಕೃತ್ಯಗಳನ್ನು ಮಾಡಬೇಕು. ಐದನೆಯ ದಿನ ತಲೆಗೆ ಸೀಗೇಕಾಯಿ ಮೊದಲಾದವುಗಳನ್ನು ಉಜ್ಜಿಕೊಂಡು ಸ್ನಾನ ಮಾಡಿ ತಲೆಯ ಕೊಳೆಯನ್ನು ಪೂರ್ಣವಾಗಿ ಹೋಗಲಾಡಿಸಬೇಕು. ಸ್ನಾನವಾದ ಮೇಲೆ ಶುದ್ಧ ಬಿಳಿ ಬಟ್ಟೆಯನ್ನು ಧರಿಸಿ ದೇವರನ್ನು ಸ್ಥಿರ ಬುದ್ಧಿಯಿಂದ ಧ್ಯಾನ ಮಾಡಿ ಅನಂತರ ಗೃಹಕೃತ್ಯಗಳನ್ನು ಮಾಡುವ ನಾರಿಯರಿಗೆ ನಾನು ಒಲಿಯುತ್ತೇನೆ. ಅಂದು ಐದನೆಯ ದಿನ ಅಡಿಗೆ ಮಾಡಿ ನನಗೆ ನೈವೇದ್ಯವನ್ನು ಇಟ್ಟು ದೇವರಿಗೆ ನಮಸ್ಕಾರ ಮಾಡಬೇಕು.

''ರಜಿಸ್ವಲಾ ದೇವ ವಯಂ ನಮಾಮಃ
ಮುಕ್ತಿ ಪ್ರದಂ ವಾಸುದೇವಂ ನಮಾಮಃ

''ರಜಸ್ವಲೆಯಾಗಿದ್ದ ನಾನು ಮುಕ್ತಿದಾಯಕನಾದ ವಾಸುದೇವನನ್ನು ವಂದಿಸುತ್ತೇನೆ'' ಎಂದು ಹೇಳಿ ವಂದಿಸಬೇಕು. ಇದರಿಂದ ಅವರ ಶುದ್ಧಿ ಸ್ನಾನದಲ್ಲಿ ಪ್ರಮಾದದಿಂದ ಆದ ಅಶುದ್ಧಿ ಪಾಪವೂ ಕೂಡ ಪರಿಹಾರವಾಗುವದು. ನನ್ನ ಅಜ್ಞಾನರೂಪವಾದ ವೇದಶಾಸ್ತ್ರಗಳಲ್ಲಿ ಹೇಳಿದಂತೆ ಆಚರಣ ಮಾಡುವ ಸ್ತ್ರೀಪುರುಷರು ನನಗೆ ಅತ್ಯಂತ ಪ್ರೀತ್ಯಾಸ್ಪದರಾಗುವರು. ಪರಮಗತಿಯನ್ನು ಬಯಸುವವರು ಇಂದ್ರಿಯ ನಿಗ್ರಹ ಮಾಡಿ ತನ್ನ ಜ್ಞಾನ ಕರ್ಮಗಳನ್ನೆಲ್ಲ ಫಲಾಶೆ ಬಿಟ್ಟು ಪರಮಾತ್ಮನಿಗೆ ಸಮರ್ಪಣೆಗೈಯ್ಯಬೇಕು. ಹೀಗೆ ಜ್ಞಾನಕರ್ಮಗಳ ಫಲ ಸಮರ್ಪಣೆಯನ್ನು ಶ್ರೀ ಹರಿಯಲ್ಲಿ ಮಾಡವದೇ ಕರ್ಮ ಸನ್ಯಾಸ ಮತ್ತು ಜ್ಞಾನ ಸನ್ಯಾಸ ಎನಿಸುವದು. ಜ್ಞಾನವಿದ್ದರೂ ವಿಹಿತಕರ್ಮ ಮಾಡದವರೂ, ಕರ್ಮರತರಾಗಿದ್ದರೂ ನನ್ನಲ್ಲಿ ಸರಿಯಾಗಿ ಭಕ್ತಿ ಮಾಡದಿದ್ದವರೂ ನನ್ನನ್ನು ಸರಿಯಾಗಿ ತಿಳಿದಿರಲಾರರು. ಅನೇಕ ಜನ್ಮಗಳಲ್ಲಿ ನೂರಾರು ಮಡದಿಯರೂ, ಸಾವಿರಾರು ತಾಯ್ತಂದೆಗಳೂ ಜೀವಿಗೆ ಆಗುತ್ತ ಹೋಗುವದಕ್ಕೆ ನನ್ನ ಅಜ್ಞಾನವೇ ಮುಖ್ಯ ಕಾರಣ. ಅಜ್ಞಾನದಿಂದ ಬಿಗಿಯಲ್ಪಟ್ಟ ಈ ಪ್ರಪಂಚವು ಮೋಹಕ್ಕೆ ಸಿಕ್ಕಿಕೊಂಡು ಬಗೆಬಗೆಯಿಂದ ಬಂಧನಕ್ಕೆ ಒಳಗಾಗಿರುತ್ತದೆ.

ಮಾನವನ ತಾಯಿ ತಂದೆ ಎಲ್ಲಿಯೋ ಹೋಗುವರು. ಮಕ್ಕಳು ಸೇವಕರೂ ಬೇರೆ ಕಡೆಗೆ ಹೋಗುವರು. ಹೋದವರು ಜನ್ಮಾಂತರ ಹೊಂದಿ ತಮ್ಮ ಕರ್ಮಾನುಸಾರವಾಗಿ ಬೇರೆ ಬೇರೆ ಸ್ಥಾನಗಳಲ್ಲಿ ಹುಟ್ಟುವರು. ಮಾನವರಾಗಿ ಸಂಸಾರಮೋಹದಿಂದ ನನ್ನನ್ನು ಭಜಿಸದಿರುವವರೂ, ನನ್ನ ಮೂರ್ತಿಯನ್ನು ವರ್ಷಾರು ತಿಂಗಳವಾದರೂ ಮನಃಪೂರ್ವಕವಾಗಿ ಪೂಜಿಸದೆ ದೇವರಲ್ಲಿಯೇ ಚಿತ್ತವಿರಿಸದ ಮನುಷ್ಯರೂ ಮತ್ತೆ ಮತ್ತೆ

ಪುನರ್ಜನ್ಮವನ್ನು ಪಡೆಯುವರು. ಅವರೆಂದಿಗೂ ಮುಕ್ತರಾಗದೇ ಮತ್ತೆ ಮತ್ತೆ ಹುಟ್ಟಿಸಾಯುತ್ತಲಿರುತ್ತಾರೆ. ದಡ್ಡನಾದರೂ ನನ್ನಲ್ಲಿ ಮನಸ್ಸನ್ನಿಟ್ಟು ಧ್ಯಾನಮಾಡಿದವನು ಪುನರ್ಜನ್ಮವನ್ನು ಪಡೆಯುವದಿಲ್ಲ.

*ವರಾಹ ಪುರಾಣದಲ್ಲಿ ನೂರ ಹದಿನಾರನೇ ಅಧ್ಯಾಯ ಮುಗಿದುದು.*



## ಮಂದಾರಾದಿ ಕ್ಷೇತ್ರಗಳ ಮಹಾಮಹಿಮೆ | ಅಧ್ಯಾಯ - ೧೧೭

ವರಾಹ :- ಕ್ಷೋಣೀದೇವಿ, ವಿಂಧ್ಯಪರ್ವತದ ತಪ್ಪಲಿನಲ್ಲಿ ಗಂಗೆಯ ದಕ್ಷಿಣ ತಟಾಕದಲ್ಲಿ ಮಂದಾರ ಎಂದು ಪ್ರಸಿದ್ಧವಾದ ಒಂದು ಸ್ಥಾನವಿರುತ್ತದೆ. ನನ್ನ ಭಕ್ತರಿಗೆಲ್ಲ ಸೌಖ್ಯಕೊಡುವ ಅತ್ಯಂತ ಗುಹ್ಯವಾದ ಆ ಕ್ಷೇತ್ರವು ಎಲ್ಲ ಭಾಗವತರಿಗೂ ಅತ್ಯಂತ ಪ್ರೀತ್ಯಾಸ್ಪದವಾಗಿರುತ್ತದೆ. ತ್ರೇತಾಯುಗದಲ್ಲಿ ಜನಿಸಿದ ಕಾಂತಿವಂತನಾದ ಶ್ರೀರಾಮಚಂದ್ರನು ಆ ಮಂದಾರ ಕ್ಷೇತ್ರದಲ್ಲಿ ನನ್ನ (ವರಾಹ ಮೂರ್ತಿಯ) ಪ್ರತಿಷ್ಠೆ ಮಾಡುವನು.

ಆ ಮಂದಾರ ಕ್ಷೇತ್ರದಲ್ಲಿ ಹೂತು ನಿಂತ ಮಂದಾರ ವೃಕ್ಷದ ಮನೋಹರವಾದ ಆ ಮಂದಾರ ಕುಸುಮವನ್ನು ತೆಗೆದುಕೊಂಡು ಪ್ರೀತಿಯಿಂದ ಅದನ್ನು ಎದೆಯ ಮೇಲೆ ಇರಿಸಿಕೊಂಡು ನಾನು ಆಟವಾಡುತ್ತಿದ್ದೆ. ನಾನು ಆ ವಿಂಧ್ಯಪರ್ವತದಲ್ಲಿದ್ದಾಗ ನನ್ನ ಪ್ರಭಾವದಿಂದ ಈ ಮಂದಾರವೃಕ್ಷವು ಉದ್ಭವಿಸಿತು. ಅದರ ಜೊತೆಗೆ ಹನ್ನೊಂದು ತಣ್ಣೀರಿನ ಚಿಲುಮೆಗಳು ಆ ಶೈಲದಿಂದ ಚಿಮ್ಮಿ ಹರಿದವು. ಆ ಮಂದಾರ ಮರದ ಬುಡದಲ್ಲಿ ಮನೋಹರವಾದ ಒಂದು ಹಾಸುಗಲ್ಲನ್ನು ಅಶ್ರಯಿಸಿ ನಾನು ಇರುತ್ತೇನೆ.

ಸುಂದರೀ, ಆ ಸ್ಥಾನದಲ್ಲಿ ಒಂದು ಚಮತ್ಕಾರ ಉಂಟು. ಆ ಮಂದಾರ ವೃಕ್ಷವು ದ್ವಾದಶೀ ಹಾಗೂ ಚತುರ್ದಶಿ ದಿನ ಹೂ ಬಿಡುತ್ತದೆ. ಅಂದು ಮಧ್ಯಾಹ್ನ ಕಾಲದಲ್ಲಿ ಮಾತ್ರ ಅದು ಜನರ ಕಣ್ಣಿಗೆ ಕಾಣಿಸುತ್ತದೆ. ಬೇರೆ ದಿನಗಳಲ್ಲಿ ಅದು ಯಾರಿಗೂ ಕಾಣುವದಿಲ್ಲ. ಆ ಮಂದಾರ ಕುಂಡದಲ್ಲಿ ಒಪ್ಪತ್ತು ಊಟಮಾಡಿ ಸ್ನಾನಮಾಡಿದ ಮನುಷ್ಯನು ದಿವ್ಯ ಗತಿಯನ್ನು ಹೊಂದುತ್ತಾನೆ. ಅಲ್ಲಿ ಪ್ರಾಣತ್ಯಾಗ ಮಾಡಿದವನು ವಿಷ್ಣುಲೋಕಕ್ಕೆ ಹೋಗುತ್ತಾನೆ. ಆ ಮಂದಾರ ಕುಂಡದ ಉತ್ತರ ಭಾಗದಲ್ಲಿ 'ಪ್ರಾಪಣ' ಎಂಬ ಒಂದು ಪರ್ವತವಿದೆ. ಅದರ ದಕ್ಷಿಣ ದಿಕ್ಕಿನಲ್ಲಿ ಮೂರು ನೀರಿನ ಝುರಿಗಳ ಜಲಪ್ರವಾಹವು ಮುಪ್ಪುರಿಗೊಂಡು ದಕ್ಷಿಣದಲ್ಲಿ ಸ್ರವಿಸಿ ಮುಂದೆ ಉತ್ತರಾಭಿಮುಖವಾಗಿ ಹರಿಯುತ್ತದೆ. ಆ ಸ್ಥಳದಲ್ಲಿ ಒಂದು ಇರುಳು ಇದ್ದು ಮಾರನೆಯ ದಿನ ಆ ಸ್ನಾನ ಕುಂಡದಲ್ಲಿ ಸ್ನಾನ ಮಾಡುವವರೂ ದೇಹತ್ಯಾಗ ಮಾಡುವವರೂ ನನ್ನ ಲೋಕವನ್ನು ಸೇರುವರು. ಈ ಮಂದಾರ ಕುಂಡದ ಈಶಾನ್ಯ ದಿಕ್ಕಿನಲ್ಲಿ ಅರಿಶಿಣ ಬಣ್ಣದ ಜಲಧಾರೆಯು ಬೀಳುವ 'ವೈಕುಂಠಕಾರಣ' ಎಂಬ ಒಂದು ರಹಸ್ಯ ತೀರ್ಥವಿದೆ. ಅಲ್ಲಿ ಒಂದು ರಾತ್ರಿ ಇದ್ದು ಸ್ನಾನ ಮಾಡುವವನು ಸ್ವರ್ಗವನ್ನೂ, ಸಾವನಪ್ಪುವವನು ವೈಕುಂಠವನ್ನೂ ಹೊಂದುವನು.

ಇದರ ಆಗ್ನೇಯ ದಿಕ್ಕಿನಲ್ಲಿರುವ ವಿಂಧ್ಯಶೈಲದ ಶಿಖರ ಶ್ರೇಣಿಗಳಲ್ಲಿ 'ಸಮಸ್ರೋತ' ಎಂಬ ಪ್ರಚಂಡವಾದ ಸರೋವರವೇ ವೇಗದಿಂದ ಧುಮ್ಮಿಕ್ಕಿ ಒಂದು ಅಗಾಧ ಜಲಾಶಯವಾಗಿದೆ. ಅಲ್ಲಿ ಒಂದು ಇರುಳು ಒಂದು ಹಗಲು ಇದ್ದು ಸ್ನಾನಮಾಡುವವರು ಮೇರು ಪರ್ವತದಲ್ಲಿ ಪೂರ್ವ ಭಾಗದಲ್ಲಿ ಇದ್ದು ಸಂತೋಷಪಡುವರು. ಈ ಮಂದಾರ ಕ್ಷೇತ್ರದ ಪೂರ್ವ ನಿಟ್ಟಿನಲ್ಲಿ ಒಂದು ಗುಹೆಯಲ್ಲಿ ಒನಕೆಯ ಗಡುತರ ನೀರು ಸುರಿದು ಸೋರಿ ಒಂದು ರಹಸ್ಯ ತೀರ್ಥವು ಏರ್ಪಟ್ಟಿದೆ. ಅದರ ದಡದಲ್ಲಿ ತನ್ನ ಆಹಾರದ ಐದನೆ ಭಾಗದಷ್ಟು ಮಾತ್ರ ಊಟ ಮಾಡಿ ಒಂದು ದಿನವಿದ್ದು ಸ್ನಾನ ಮಾಡುವವನು ಮೇರು ಗಿರಿಯ ಪೂರ್ವ ಭಾಗದಲ್ಲಿದ್ದು ಸಂತೋಷಪಡುವನು. ಮಂದಾರ ಕ್ಷೇತ್ರದ ದಕ್ಷಿಣದಲ್ಲಿ ಒನಕೆಯ ಆಕಾರದ ಐದು ನಿರ್ಝರಿಣಿಗಳು ಹರಿದು ಹೊಮ್ಮಿ ಧುಮ್ಮಿಕ್ಕಿ ಒಂದು ತೀರ್ಥವಾಗಿದೆ. ಅಲ್ಲಿ ಒಂದು ದಿನ ವಾಸಮಾಡಿ ಸ್ನಾನ ಮಾಡುವವರು ಮೇರುಶೈಲದ ದಕ್ಷಿಣ ಭಾಗದಲ್ಲಿ ವಾಸಮಾಡಿ ಸುಖಪಡುವರು. ಮಂದಾರ ಕ್ಷೇತ್ರದ ನೈಋತ್ಯ ದಿಶೆಯಲ್ಲಿರುವ 'ಆದಿತ್ಯ ತೀರ್ಥ'ದಲ್ಲಿ ಸ್ನಾನಮಾಡುವದರಿಂದ ಮೇರು ಪರ್ವತದ ಉತ್ತರಕ್ಕೆ ಧ್ರುವ ನಕ್ಷತ್ರವಿರುವ ಸ್ಥಳದಲ್ಲಿ ವಾಸಮಾಡಿ ಆನಂದವನ್ನು ಹೊಂದುವನು. ಮಂದಾರ ಕುಂಡದ ಪಶ್ಚಿಮ ದಿಕ್ಕಿನಲ್ಲಿರುವ 'ಚಕ್ರಾವರ್ತ' ತೀರ್ಥದಲ್ಲಿದ್ದು ಐದನೇ ಒಂದು ಭಾಗ ಆಹಾರವನ್ನು ಸೇವಿಸಿ ವಾಸಗೈದು ಸ್ನಾನ ಮಾಡುವವರು ಮೇರುಶೃಂಗಗಳಲ್ಲಿ ಸ್ವಚ್ಛಂದ ಸಂಚಾರ ಮಾಡಿ ಮನಬಂದಲ್ಲಿ ವಾಸಿಸಿ ಆನಂದ ಪಡುವರು.

ಮಂದಾರದ ವಾಯುವ್ಯ ದಿಕ್ಕಿನಲ್ಲಿ ಮೂರು ನೀರಿನ ಧಾರೆಗಳು ಬಸಿದು ಬಿದ್ದು ರೂಪಗೊಂಡ 'ಧಾರಾ ಸಂಗಮ ತೀರ್ಥ'ದಲ್ಲಿ ಸ್ನಾನ ಮಾಡಿದವನು. ಮೇರು ಗಿರಿಯ ಸಕಲ ಶಿಖರಗಳಲ್ಲಿ ಆನಂದ ಪಡುವನು. ಮಂದಾರದಿಂದ ಒಂದು ಹರದಾರಿ ದೂರದಲ್ಲಿರುವ 'ಗಭೀರ' ಎಂಬ ಹೆಸರಿನ ಬಹಳ ಆಳವಾದ ವಿಶಾಲವಾದ ದೊಡ್ಡ ಸರೋವರದ ಬಳಿಯಲ್ಲಿ ಎಂಟು ರಾತ್ರಿ ವಾಸಮಾಡಿ ಆ ತೀರ್ಥದಲ್ಲಿ ಸ್ನಾನ ಮಾಡುವವನು ಸರ್ವದ್ವೀಪಗಳಲ್ಲಿಯೂ ಸ್ವೈರ ಸಂಚಾರಗೈದು ಆನಂದಪಡುವನು. ಮಂದಾರದ ಪಶ್ಚಿಮಕ್ಕೆ ಏಳು ನೀರಿನ ಪ್ರವಾಹಗಳು ಧುಮಕಿ ಆದ ಉತ್ತಮ ತೀರ್ಥದಲ್ಲಿ ಒಂದು ದಿವಸ ವಾಸಮಾಡಿ ಸ್ನಾನ ಮಾಡುವವನು ಇಂದ್ರಲೋಕದಲ್ಲಿ ಮನಬಂದ ಕಡೆಗೆ ತಿರುಗಾಡಿ ವಾಸ ಮಾಡಿ ಆನಂದಪಡುವನು. ಈ ಮಂದಾರ ಕ್ಷೇತ್ರ ಮಂಡಲವಿರುವ ಮಂದಾರ ಗಿರಿಯಲ್ಲಿ 'ಸ್ಯಮಂತ ಪಂಚಕ' ಎಂಬ ತೀರ್ಥವು ಇರುತ್ತದೆ. ವಿಂಧ್ಯ ಪರ್ವತದ ಶೃಂಗಾಂಗಣದಲ್ಲಿ ಕಂಗೊಳಿಸುವ ಆ ಮಂದಾರ ಕ್ಷೇತ್ರದ ಎತ್ತರವಾದ ಒಂದು ಕೋಡುಗಲ್ಲಿನಲ್ಲಿ ನಾನು ಸನ್ನಿಹಿತನಾಗಿದ್ದೇನೆ. ನನ್ನ ಬಲಗೈಯಲ್ಲಿ ಚಕ್ರವೂ, ಎಡಗಡೆ ಗದೆಯೂ, ಮುಂದೆ ನೇಗಿಲ, ಒನಕೆ ಶಂಖಗಳೂ ಇರುತ್ತವೆ. ಈ ಕ್ಷೇತ್ರವು ನನಗೆ ಅತ್ಯಂತ ಆನಂದದಾಯಕವು ಆಗಿರುತ್ತದೆ. ಇಲ್ಲಿ ನನ್ನನ್ನು ಸೇವೆ ಮಾಡುವ ಭಕ್ತರಿಗೆ ಸುಖ ಸಂಪದಗಳನ್ನು ನಾನು ಕರುಣಿಸುತ್ತೇನೆ.

*ವರಾಹ ಪುರಾಣದಲ್ಲಿ ನೂರಹದಿನೇಳನೇ ಅಧ್ಯಾಯ ಮುಗಿದುದು.*

—o—

**ಭೂದೇವಿ :-** ಭಗವನ್, ನಿನ್ನ ದಯದಿಂದ ಮಂದಾರ ಕ್ಷೇತ್ರದ ಮಹಿಮೆಯನ್ನು ಕೇಳಿದೆ. ಈ ಮಂದಾರಕ್ಕಿಂತ ಶ್ರೇಷ್ಠವಾದ ಕ್ಷೇತ್ರವು ಮತ್ತೆ ಬೇರೆ ಯಾವುದಾದರೂ ಇದ್ದರೆ ದಯವಿಟ್ಟು ನನಗೆ ತಿಳಿಸಬೇಕು.

**ವರಾಹ :-** ದೇವಿ, ನಿನ್ನ ಪ್ರಶ್ನೆಗೆ ಉತ್ತರವಾಗಿ 'ಸಾಲಿಗ್ರಾಮ ಕ್ಷೇತ್ರ'ದ ರಹಸ್ಯವನ್ನು ಹೇಳುತ್ತೇನೆ ಕೇಳು. ಸಾಲಿಗ್ರಾಮ ಕ್ಷೇತ್ರವು ಮಂದಾರ ಕ್ಷೇತ್ರಕ್ಕಿಂತ ಉತ್ತಮವಾಗಿರುತ್ತದೆ. ದ್ವಾಪರಯುಗದಲ್ಲಿ ಯದು ವಂಶದಲ್ಲಿ ಶೂರ ಎಂಬ ಹೆಸರಿನವರು ಹುಟ್ಟಿ ಯಾದವ ವಂಶವನ್ನು ಅಭಿವೃದ್ಧಿಗೊಳಿಸುವನು. ಆ ಶೂರನಿಗೆ ಯದುವಂಶ ಭೂಷಣನಾದ ವಸುದೇವ ಎಂಬ ಹೆಸರಿನ ಮಹಾನುಭಾವನಾದ ಮಗನು ಜನಿಸುವನು. ಆ ವಸುದೇವನ ಮಡದಿಯಾದ ದೇವಕಿಯು ಸರ್ವಾಂಗ ಸುಂದರಿ. ಅವಳನ್ನು ನೋಡಿದ ಮಾತ್ರಕ್ಕೆ ಜನರಿಗೆ ಮಂಗಳ ಉಂಟಾಗುವದು. ಆ ದೇವಕಿಯ ಗರ್ಭದಲ್ಲಿ ವಾಸುದೇವ ಎಂಬ ಹೆಸರಿನಿಂದ ದೈತ್ಯರನ್ನು ಸಂಹರಿಸುವದಕ್ಕಾಗಿ ನಾನೇ ಅವತಾರ ಮಾಡಿ ಬರುವೆನು. ಯಾದವರ ವಂಶಕ್ಕೆ ಮುಂದಾಳು ಎನಿಸಿದ ನಾನು ಭೂಲೋಕದಲ್ಲಿ ಅವತಾರ ಮಾಡಿ ಲೋಕ ಪರಿಪಾಲನೆಯನ್ನು ಮಾಡುತ್ತಲಿರುವಾಗ **'ಸಾಲಂಕಾಯನ'** ಎಂಬ ಬ್ರಹ್ಮರ್ಷಿಯು ನನ್ನನ್ನು ಆರಾಧಿಸಬೇಕೆಂಬ ಉದ್ದೇಶದಿಂದ ದಿಕ್ಕು ದಿಕ್ಕುಗಳಲ್ಲಿ ತಿರುಗುತ್ತಾನೆ. ಮೇರುಗಿರಿಯ ಶಿಖರದಲ್ಲಿ ನಿಂತು ಸಂತಾನದ ಸಲುವಾಗಿ ನನ್ನನ್ನು ಕುರಿತು ತಪಂಗೈಯುತ್ತಾನೆ. ಬಳಿಕ ಗಯಾ ಕ್ಷೇತ್ರಕ್ಕೆ ಹೋಗಿ ತಪಸ್ಸುಮಾಡಿ ಅನಂತರ 'ಲೋಹಾರ್ಗಲ' ಕ್ಷೇತ್ರದಲ್ಲಿ ಸಾವಿರ ವರ್ಷ ತಪಸ್ಸನ್ನು ಆಚರಿಸಿ ನನ್ನನ್ನು ಆರಾಧಿಸುವನು. ಪೂರ್ವದಲ್ಲಿ ಈಶ್ವರನ (ಶಿವನ) ಜೊತೆಗೆ ಒಡಗೂಡಿ ಇದ್ದ ನನ್ನನ್ನು ಅತ್ತಿತ್ತ ಹುಡಕಾಡಿ ಕಾಣದೆ ತೊಳಲಾಡುವನು.

ಪೂರ್ವಕಾಲದಲ್ಲಿ ಸಾಲಂಕಾಯನನು ತಪಸ್ಸನ್ನು ಮಾಡುವ ಮೊದಲು ಸಾಲಿಗ್ರಾಮ ಕ್ಷೇತ್ರದಲ್ಲಿ ಮಹಾದೇವನು ನನ್ನನ್ನು ಆಶ್ರಯಿಸಿಕೊಂಡು ಶಿಲಾರೂಪದಿಂದ ನಿಂತುಕೊಂಡಿದ್ದನು. ನಾನೂ ಆ ಸಾಲಿಗ್ರಾಮ ಕ್ಷೇತ್ರದಲ್ಲಿ ಗಿರಿ ರೂಪದಿಂದ ವಾಸವಾಗಿದ್ದೇನೆ. ಅಲ್ಲಿಯ ಎಲ್ಲ ಶಿಲೆಗಳಲ್ಲಿಯೂ ನನ್ನ ಸನ್ನಿಧಾನವಿದೆ. ಒಳಗೆ ಚಕ್ರಚಿನ್ಹವುಳ್ಳ ಆ ಕಲ್ಲುಗಳು ನನ್ನ ಸ್ವರೂಪವುಳ್ಳವುಗಳಾಗಿವೆ ಎಂಬಲ್ಲಿ ಸಂದೇಹವೇ ಇಲ್ಲ. ಅವುಗಳನ್ನು ಪ್ರತಿಯೊಬ್ಬನೂ ಪೂಜಿಸಲೇಬೇಕು. ಆ ಬೆಟ್ಟದಲ್ಲಿರುವ ಸಾಲಿಗ್ರಾಮದೇವಾಲಯದಲ್ಲಿ ಮಹಾದೇವನು ಲಿಂಗರೂಪದಿಂದ ಇರುವನು.

ಅಲ್ಲಿ ಕೆಲವು ಕಲ್ಲುಗಳು 'ಶಿವನಾಭ'ವಾದರೆ ಹಲವು 'ಚಕ್ರನಾಭ'. ಸೋಮೇಶ್ವರ ನಿರುವಗಿರಿಯು 'ಶಿವಗಿರಿ' ಎನಿಸಿಕೊಳ್ಳುತ್ತದೆ.

ಹಿಂದೆ ಚಂದ್ರನು ತನ್ನ ಶಾಪವನ್ನು ಕಳೆದುಕೊಳ್ಳುವದಕ್ಕಾಗಿ ಒಂದು ಲಿಂಗವನ್ನು ಮಾಡಿದನು. ಆದುದರಿಂದ ಆ ಲಿಂಗಕ್ಕೆ ಸೋಮ ಎಂಬ ಚಂದ್ರನ ಹೆಸರು ಬಂದು 'ಸೋಮೇಶ್ವರ' ಎಂದು ಪ್ರಸಿದ್ಧಿಯಾಯಿತು. ಅನಂತರ ಆ ಚಂದ್ರನು ಶಾಪಮುಕ್ತನಾಗಿ

ತನ್ನ ಮೊದಲಿನ ಕಾಂತಿಪೂರದಿಂದ ಕಂಗೊಳಿಸಿದನು. ನಿಜ ತೇಜೋಬಲವು ಬೆಳೆದು ಬೆಳಗಿದನು. ಸಂತೋಷದಿಂದ ಆ ಗೌರೀ ಪತಿಯನ್ನು ಸ್ತೋತ್ರಮಾಡಿದನು.

''ಶಿವಂ ಸೌಮ್ಯಮುಮಾಕಾಂತಂ ಭಕ್ತಾನುಗ್ರಹಕಾತರಂ ।
ನತೋಽಸ್ಮಿ ಪಂಚವದನಂ ನೀಲಕಂಠಂ ತ್ರಿಲೋಚನಂ ॥

ಶಶಾಂಕಶೇಖರಂ ದಿವ್ಯಂ ಸರ್ವದೇವನಮಸ್ಕೃತಂ ।
ಪಿನಾಕಪಾಣಿಂ ದೇವೇಶಂ ಭಕ್ತಾನಾಮಭಯಪ್ರದಂ ॥

ತ್ರಿಶೂಲಿನಂ ಡಮರುಣಾ ಲಸದ್ಧಸ್ತಂ ವೃಷಧ್ವಜಂ ।
ನಾನಾಮುಖೈರ್ಗಣೈರ್ಯುಕ್ತಂ ನಾನಾರೂಪೈರ್ಭಯಾನಕೈಃ ॥

ತ್ರಿಪುರಘ್ನಂ ಮಹಾಕಾಲ ಮಂಧಕಾರಿನಿಷೂದನಂ ।
ಗಜಾಜಿನಾವೃತಂ ಸ್ಥಾಣುಂ ವ್ಯಾಘ್ರಚರ್ಮವಿಭೂಷಿತಂ ॥

ನಾಗಭೋಗೋಪವೀತಂ ಚ ರುದ್ರಮಾಲಾಧರಂ ಪ್ರಭುಂ ।
ಅರೂಪಮಪಿ ಸರ್ವೇಶಂ ಭಕ್ತೇಚ್ಛೋಪಾತ್ತ ವಿಗ್ರಹಂ ॥

ವಹ್ನಿ ಸೋಮಾರ್ಕನಯನಂ ಮನೋವಾಚಾಮಗೋಚರಂ ।
ಜಟಾಜೂಟಪ್ರಕಟಿತಂ ಗಂಗಾಸಮ್ಮಾರ್ಜಿತಾಂಹಸಂ ।
ಕೈಲಾಸನಿಲಯಂ ಶಂಭುಂ ಹಿಮಾಚಲ ಕೃತಾಶ್ರಮಂ ॥

ಈ ರೀತಿಯಾಗಿ ಸ್ತುತಿಸಲ್ಪಟ್ಟ ಪರಮೇಶ್ವರನು ಚಂದ್ರನನ್ನು ಕುರಿತು ಮಾತನಾಡಿದನು-

''ತೇಜೋಮೂರ್ತಿಯಾದ ಚಂದ್ರನೇ, ನಿನಗೆ ಬೇಕಾದ ವರವನ್ನು ಬೇಡು. ನಿನ್ನ ಮನಃ ಕಾಮನೆಯನ್ನು ಪೂರ್ಣಗೊಳಿಸಲು ನಾನು ಸಿದ್ಧನಾಗಿ ನಿಂತಿದ್ದೇನೆ. ದುರ್ಲಭವಾದ ನನ್ನ ದರುಶನವನ್ನು ಪಡೆದ ನಿನಗೆ ನಾನು ಕಾಮಿತಾರ್ಥವನ್ನು ಕರುಣಿಸುವೆನು.'' ಮಹಾದೇವರ ಈ ನುಡಿಗಳನ್ನು ಆಲಿಸಿ ಚಂದ್ರನು ಕೈಮುಗಿದು ಬಿನ್ನವಿಸಿದನು. - ''ಪ್ರಭು, ನೀನು ನನಗೆ ವರವನ್ನು ಕರುಣಿಸುವದಾದರೆ ನಾನು ಸ್ಥಾಪಿಸಿರುವ ಈ ಲಿಂಗದಲ್ಲಿ ನೀನು ನಿರಂತರವಾಗಿಯೂ ವಾಸಮಾಡು. ಮತ್ತು ಈ ಲಿಂಗವನ್ನು ಪೂಜಿಸುವವರ ಇಷ್ಟಾರ್ಥಗಳನ್ನೆಲ್ಲ ಸಲ್ಲಿಸಿ ಮನೋರಥಗಳನ್ನೆಲ್ಲ ಪೂರೈಸಿ ಕೃಪೆದೋರು.'' ಚಂದ್ರನ ಈ ಪ್ರಾರ್ಥನೆಯನ್ನು ಕೇಳಿ ಮಹಾದೇವರು ಇಂತು ನುಡಿದರು -

''ಮೊಲವನ್ನು ಮಡಿಲಲ್ಲಿ ಧರಿಸಿದ ಚಂದ್ರಮನೇ! ನೀನು ಬೇರೆ ಅಲ್ಲ ನಾನು ಬೇರೆ ಅಲ್ಲ. ನಿನ್ನ ಪ್ರಾರ್ಥನೆಯಂತೆ ಇಂದಿನಿಂದ ನಾನು ಈ ಲಿಂಗದಲ್ಲಿ ವಾಸಮಾಡುತ್ತೇನೆ. ಶ್ರೀಹರಿಯ ಸಾನಿಧ್ಯವೂ ಈ ಕಲ್ಲಿನಲ್ಲಿ ವಿಶೇಷವಾಗಿರುತ್ತದೆ. ಹರಿಹರ ಸನ್ನಿಧಾನೋಪೇತವಾದ ಈ ಲಿಂಗವನ್ನು ಪೂಜಿಸುವವರ ಮನೋರಥಗಳನ್ನು ನಾನು ಪೂರೈಸುತ್ತೇನೆ. ಮತ್ತು ದೇವದುರ್ಲಭವಾದ ವರಗಳನ್ನೂ ಭಕ್ತರಿಗೆ ಕೊಡುತ್ತೇನೆ. ಸಾಲಂಕಾಯನ ಎಂಬ ಹೆಸರಿನ ಮುನಿಯ ತಪಸ್ಸಿಗೆ ಮೆಚ್ಚಿ ನಾನು ಶ್ರೀ ವಿಷ್ಣುವಿನೊಡನೆ ವಿಚಾರಮಾಡಿ ಇಬ್ಬರೂ ಕೂಡಿಯೇ ಇಲ್ಲಿ ವಾಸವಾಗಿರುತ್ತೇವೆ. ಆ ಸಾಲಿಗ್ರಾಮಗಿರಿಯೇ 'ವಿಷ್ಣುಗಿರಿ'. ಸೋಮೇಶ್ವರವು 'ಶಿವಗಿರಿ'. ಸಾಲಿಗ್ರಾಮ ಪರ್ವತದಲ್ಲಿರುವ ಕಲ್ಲುಗಳು

ವಿಷ್ಣುಶಿಲೆ ಅಥವಾ ಶಾಲಿಗ್ರಾಮ ಎಂದು ಕರೆಯಲ್ಪಡುವವು. ಸೋಮೇಶ್ವರ ಗಿರಿಯಲ್ಲಿರುವ ಕಲ್ಲುಗಳು ಶೈವಶಿಲೆಗಳು ಎನಿಸುತ್ತವೆ. ಪೂರ್ವಕಾಲದಲ್ಲಿ ರೇವಾ ದೇವಿಯು ನನ್ನನ್ನು ಕುರಿತು ತಪಸ್ಸು ಮಾಡಿದಳು. ''ದೇವ, ನಿನಗೆ ಸಮಾನವಾದ ನಿನ್ನಂತೆಯೇ ಇರುವ ಒಬ್ಬ ಗಂಡು ಮಗನು ನನಗೆ ಆಗಬೇಕು '' ಎಂದು ವರವನ್ನು ಕೇಳಿಕೊಂಡಳು. ಅದು ಒಂದು ನನಗೆ ದೊಡ್ಡ ಚಿಂತೆಯೇ ಆಯಿತು. ''ನಾನು ಈ ವರೆಗೆ ಯಾರಿಗೂ ಮಗನಾಗಿ ಹುಟ್ಟಿಲ್ಲ. ಈಗ ಇವಳಿಗೆ ಏನೆಂದು ವರ ಕೊಡುವದು ???'' ಕೆಲಹೊತ್ತು ಆಲೋಚನೆಗೈದು ಒಂದು ನಿರ್ಧಾರಕ್ಕೆ ಬಂದು ನಾನು ನುಡಿದೆನು -

'' ಶಿವ ಪ್ರಿಯಳಾದ ರೇವಾದೇವಿಯೇ! ನನ್ನ ಮಗನಾದ ಗಣಪತಿಯನ್ನು ಮುಂದೆ ಮಾಡಿಕೊಂಡು ನಾನು ಲಿಂಗರೂಪದಿಂದ ನಿನ್ನ ಮಗನಾಗಿ ನಿನ್ನ ಗರ್ಭದಲ್ಲಿ ವಾಸ ಮಾಡುವೆನು. ನದೀರೂಪಳಾದ ನೀನು ನನ್ನ ಮತ್ತೊಂದು ಜಲಮಯ ಮೂರ್ತಿಯೇ ಆಗಿರುವೆ. ಶಿವ ಶಕ್ತಿಭೇದದಿಂದ ನಾವಿಬ್ಬರೂ ಒಂದು ಕಡೆ ಇರುವವರು.'' ಹೀಗೆ ಮಹಾದೇವರು ವರವನ್ನು ಕೊಟ್ಟ ಬಳಿಕ ಆ ರೇವಾ ನದಿಯು ಅಂದಿನಿಂದ ರೇವಾಖಂಡ ಎಂದು ಪ್ರಸಿದ್ಧವಾದ ಇದೇ ನನ್ನ ಸನ್ನಿಧಿಗೆ ಬಂದಳು. ಚಂದ್ರನೆ, ಪೂರ್ವ ಕಾಲದಲ್ಲಿ ಗಂಡಕೀ ನದಿಯಾದರೂ ಶ್ರೀ ವಿಷ್ಣುವನ್ನು ಕುರಿತು ಹತ್ತು ಸಾವಿರ ವರ್ಷ ತಪಸ್ಸು ಮಾಡಿದಳು. ಅನಂತರ ಒಣಗಿ ಉದರಿ ಬಿದ್ದ ಎಲೆಯ ತುಣುಕುಗಳನ್ನು ತಿಂದು ತಪಸ್ಸನ್ನು ಮಾಡಿದಳು. ಕೊನೆಗೆ ಬರೀ ಗಾಳಿ ಕುಡಿದು ನಿರಾಹಾರಳಾಗಿ ದೇವಮಾನದಿಂದ ಒಂದುನೂರು ವರ್ಷ ಶ್ರೀ ಹರಿಯನ್ನು ಕುರಿತು ತಪಂಗೈದಳು. ಆ ಗಂಡಕಿಯ ಈ ಘೋರವಾದ ತಪಸ್ಸೆಯಿಂದ ಲೋಕನಾಥನಾದ ಭಕ್ತ ಜನಪ್ರಿಯ ಪರಮಾತ್ಮನು ಪ್ರಸನ್ನನಾಗಿ ಪ್ರತ್ಯಕ್ಷ ದರ್ಶನವನ್ನು ಇತ್ತನು. ಮತ್ತೂ ಪ್ರೀತಿಯಿಂದ ಮಾತನಾಡಿಸಿದನು.- ''ತಪ್ಪುತಡೆಗಳಿಲ್ಲದೆ ಭಕ್ತಿಭಾವದಿಂದೊಪ್ಪುವ ಗಂಡಕಿಯೇ ! ನಾನು ನಿನ್ನ ತಪಸ್ಸಿನಿಂದ ಮುದಿತ ಚಕಿತನಾಗಿದ್ದೇನೆ. ನಿನ್ನ ಅಚ್ಛಿನ್ನ ಭಕ್ತಿಗೆ ಮೆಚ್ಚಿದ್ದೇನೆ. ಅದಕ್ಕಾಗಿಯೇ ಈಗ ನಿನ್ನ ಬಳಿಗೆ ಬಂದಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳು ಪ್ರೀತನಾದ ನಾನು ನಿನಗೆ ಏನನ್ನು ಕೊಡಲಿ ?'' ಗಂಡಕೀ ನದಿಯು ಕಣ್ಣುದೆರೆದು ತನ್ನೆದುರು ನಿಂತ ಭಗವನ್ ಮೂರ್ತಿಯನ್ನು ನೋಡಿದಳು. ದಿವ್ಯರೂಪ, ಶಂಖಚಕ್ರ ಗದಾ ಮುಂತಾದ ಆಯುಧಗಳು ಆ ಭಗವಂತನ ಕೈಗಳಲ್ಲಿ ಒಪ್ಪುತ್ತಿದ್ದವು. ಆಗ ಗಂಡಕಿಯು ಒಣ ಕಟ್ಟಿಗೆಯಂತೆ ಆ ಭಗವಂತನೆದುರು ಅಡ್ಡ ಬಿದ್ದು ಅವನನ್ನು ಸ್ತೋತ್ರ ಮಾಡಲಿಕ್ಕೆ ಪ್ರಾರಂಭಿಸಿದಳು. -

''ಅಹೋ ದೇವ, ಮಯಾ ದೃಷ್ಟೋ ದುರ್ದರ್ಶೋ ಯೋಗಿನಾಮಪಿ
ತ್ವಯಾ ಸರ್ವಮಿದಂ ಸೃಷ್ಟಂ ಜಗತ್ ಸ್ಥಾವರಜಂಗಮಮ್ ॥

ತದನು ತ್ವಂ ಪ್ರವಿಷ್ಟೋಽಸಿ ಪುರುಷಸ್ತೇನ ಚೋಚ್ಯಸೇ ।
ತ್ವಲ್ಲೀಲೋನ್ಮೀಲಿತೇ ವಿಶ್ವೇ ಕಃ ಸ್ವತಂತ್ರೋಽಸ್ತಿ ವೈ ಪುಮಾನ್ ॥

ಬ್ರಹ್ಮಾದಯೋಽಪಿ ಕವಯೋ ನ ವಿದಂತಿ ಯಥಾರ್ಥತಃ ।
ತಂ ಕಥಂ ವೇದ್ಮ್ಯಹಂ ಮೂಢಾ ತವ ರೂಪಂ ನಿರಂಜನಂ ॥

ಮೂಢಸ್ಯ ಜಗತೋ ಮಧ್ಯೇ ಸ್ಥಿತಾ ಕಿಂಚಿದಜಾನತೀ ।
ತ್ವಯಾ ಧೃತಾ ಕೃತಾ ಚಾಸ್ಮಿ ಯೋಗ್ಯಾಯೋಗ್ಯಮವಿಂದತೀ ॥
ತೇನ ಲೋಕೇ ಮಹತ್ವಂ ಚ ತ್ವತ್ ಪ್ರಸಾದೇನ ಚೈಷಿತಾ ।
ಯಯಾ ಚಾಜ್ಞತಯೋದಾರ ತನ್ಮೇ ದಾತುಂ ತ್ವಮರ್ಹಸಿ ॥
ದಯಾಲುರಸಿ ದೀನೇಷು ನೇತಿ ಮಾಂ ನ ವದ ಪ್ರಭೋ ॥

ದೇವ, ಯೋಗಿಗಳಿಗೂ ಕೂಡ ಗೋಚರನಾಗದ ನೀನು ಇಂದು ನನ್ನ ಸುದೈವದಿಂದಲೇ ನನಗೆ ಗೋಚರನಾಗಿರುವೆ. ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ನಿನ್ನಿಂದಲೇ ಸೃಷ್ಟಿಸಲ್ಪಟ್ಟಿದೆ. ಈ ಜಗತ್ತನ್ನು ಸೃಷ್ಟಿಮಾಡಿ ಅನಂತರ ನೀನು ಪುರುಷ ಎಂದು ಕರೆಯಲ್ಪಡುವೆ. ನಿನ್ನ ಲೀಲೆಯ ಆವಿಷ್ಕಾರರೂಪವಾದ ಈ ಪ್ರಪಂಚದಲ್ಲಿ ನಿನ್ನ ಹೊರತು ಬೇರೆ ಸ್ವತಂತ್ರ ವ್ಯಕ್ತಿಗಳು ಯಾರು ಇದ್ದಾರೆ! ಬ್ರಹ್ಮಾದಿ ದೇವತೆಗಳೂ ಕೂಡ ನಿಜವಾದ ನಿನ್ನ ಮಹಿಮೆಯನ್ನು ಪೂರ್ಣವಾಗಿ ತಿಳಿಯಲಾರರು. ಇಂಥ ನಿರ್ದುಷ್ಟವಾದ ನಿನ್ನರೂಪವನ್ನು ಅಜ್ಞಳಾದ ನಾನು ಹೇಗೆ ಅರಿಯಬಲ್ಲೆನು! ಈ ಮೂರ್ಖ ಪ್ರಪಂಚದಲ್ಲಿದ್ದು ಯೋಗ್ಯಾಯೋಗ್ಯವನ್ನು ತಿಳಿಯದಿರುವ ನನ್ನನ್ನು ಹುಟ್ಟಿಸಿದವನೂ ನೀನೇ ಧರಿಸಿದವನೂ ನೀನೇ. ನಿನ್ನ ಅನುಗ್ರಹದಿಂದಲೇ ನಾನು ಈ ಲೋಕದಲ್ಲಿ ಮಹತ್ವವನ್ನು ಹೊಂದಿದ್ದೇನೆ. ನಾನೀಗ ನಿನ್ನಲ್ಲಿ ವರವನ್ನು ಕೇಳಿಕೊಳ್ಳುತ್ತೇನೆ. ದೀನರಲ್ಲಿ ದಯಾಳುವಾದ ನೀನು ನನ್ನ ಬಿನ್ನಹಕ್ಕೆ ಇಲ್ಲ ಎನ್ನಬೇಡ. ಉದಾರದೃಷ್ಟಿಯ ನೀನು ನಾನು ಬಯಸಿದ್ದನ್ನು ಕೊಟ್ಟು ಕರುಣಿಸು.''

ಗಂಡಿಕೀ ನದಿಯ ಮಾತುಗಳನ್ನು ಕೇಳಿ ಭಗವಂತನು ವಾತ್ಸಲ್ಯ ಪೂರ್ವಕವಾಗಿ ನುಡಿದನು.- ''ದೇವಿ,ನೀನು ಬೇಕಾದ ವರವನ್ನು ಬೇಡು. ಅದು ಮಾನವರಿಗೆ ದುರ್ಲಭವಾಗಿದ್ದರೂ, ನಾನು ನಿನಗೆ ಕೊಡುತ್ತೇನೆ. ನನ್ನ ದರುಶನವಾದ ಬಳಿಕ ಯಾವ ಮನುಷ್ಯರ ಮನೋರಥವು ಪೂರ್ಣವಾಗಲಿಕ್ಕಿಲ್ಲ! ಆಗ ಜನರನ್ನೆಲ್ಲ ಸಂಸಾರದಿಂದ ತಾರಣಮಾಡುವ ಗಂಡಕೀದೇವಿಯು ಭಕ್ತಿಯಿಂದ ಕೈಮುಗಿದು ಸವಿದನಿಯಿಂದ ಮಾತನಾಡಿದಳು.- ''ಭಗವನ್, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ ನೀನು ನನ್ನ ಗರ್ಭದಲ್ಲಿದ್ದು ನನಗೆ ಪುತ್ರನಾಗಿ ಜನಿಸು. ಇದೇ ನಾನು ನಿನ್ನಲ್ಲಿ ಕೇಳಿಕೊಳ್ಳುವ ವರವಾಗಿದೆ.'' ಗಂಡಕಿಯ ಈ ವಿಚಿತ್ರವಾದ ವರವನ್ನು ಕೇಳಿ ಅಚ್ಯುತನಿಗೆ ಕೊಂಚ ಚಿಂತೆಯಾಯಿತು. ''ನದೀರೂಪಳಾದ ಈ ಗಂಡಕಿಯು ನನ್ನಲ್ಲಿ ಇದೇನು ವರವನ್ನು ಕೇಳುತ್ತಿದ್ದಾಳೆ! ಅವಳಿಗೆ ನಿತ್ಯವೂ ನನ್ನ ಸಹವಾಸವಾಗಬೇಕೆಂದು ಬಯಕೆ ಇದ್ದಂತಿದೆ. ಜನರು ಸಂಸಾರ ಬಂಧನದಿಂದ ಬಿಡುಗಡೆಯನ್ನು ಹೊಂದುವಂತೆ ಇವಳಿಗೆ ವರವನಿತ್ತು ಅನುಗ್ರಹಿಸುವೆನು.'' ಎಂದು ಆಲೋಚನೆಗೈದು ಆ ಭಗವಂತನು ಗಂಡಕೀ ದೇವಿಗೆ ಇಂತು ಉತ್ತರವಿತ್ತನು. - ''ನದೀ ಶ್ರೇಷ್ಠಳಾದ ಗಂಡಕಿಯೇ, ನಿನ್ನ ಅಪೇಕ್ಷೆಯಂತೆ ನಾನು ಸಾಲಿಗ್ರಾಮ ಶಿಲಾರೂಪದಿಂದ ಯಾವಾಗಲೂ ನಿನ್ನ ಗರ್ಭದಲ್ಲಿ ವಾಸಮಾಡುತ್ತೇನೆ. ನಿನ್ನ ಒಡಲಿನಲ್ಲಿ ಸಾಲಿಗ್ರಾಮ ಕಲ್ಲಿನ ರೂಪದಿಂದ ವಾಸಮಾಡಿದ ನಾನು ಭಕ್ತರ ಮೇಲೆ ಅನುಗ್ರಹವನ್ನು ಮಾಡುತ್ತೇನೆ.

ನನ್ನ ಸನ್ನಿಧಾನದಿಂದ ನೀನು ನದಿಗಳಲ್ಲೆಲ್ಲ ಶ್ರೇಷ್ಠಳೆಂದು ಪರಿಗಣಿಸಲ್ಪಡುವಿ. ನಿನ್ನ ನೀರಿನ ದರುಶನ ಸ್ನಾನಪಾನಗಳಿಂದಲೇ ಜನರ ಕಾಯಿಕ, ವಾಚಿಕ, ಮಾನಸಿಕ, ಪಾಪಗಳನ್ನೆಲ್ಲ ನಾನು ಪರಿಹರಿಸುತ್ತೇನೆ. ಈ ಗಂಡಕೀನದಿಯಲ್ಲಿ ಸ್ನಾನ ಮಾಡಿ ವಿಧಿಪೂರ್ವಕವಾಗಿ ದೇವತರ್ಪಣ ಋಷಿತರ್ಪಣ ಪಿತೃತರ್ಪಣವನ್ನು ಕೊಟ್ಟವರು ತಮ್ಮ ಪಿತೃಗಳನ್ನು ಉದ್ಧಾರಮಾಡುವದಲ್ಲದೆ ತಾವೂ ಕೂಡ ಬ್ರಹ್ಮಲೋಕಕ್ಕೆ ಹೋಗುವರು. ನನ್ನ ಪ್ರೀತಿಗೆ ಪಾತ್ರರೂ ಆಗುವರು. ಸುದೈವದಿಂದ ಈ ನದಿಯಲ್ಲಿಯೇ ಪ್ರಾಣೋತ್ಸ್ರಣವಾದರೆ ಅವರು ನನ್ನ ವೈಕುಂಠ ಲೋಕಕ್ಕೆ ಬರುವರು.''

ಹೀಗೆ ಗಂಡಿಕಿಗೆ ವರವಿತ್ತು ಪರಮಾತ್ಮನು ಅಲ್ಲಿಂದ ಅದೃಶ್ಯನಾದನು. ಅಂದಿನಿಂದ ಸಾಕ್ಷಾದ್ವಿಷ್ಣುರೂಪಿಯಾದ ಶ್ರೀ ಹರಿಯು ಈ ಕ್ಷೇತ್ರದಲ್ಲಿ ವಾಸಮಾಡಿದ್ದಾನೆ. ಅವನ ಇಚ್ಛೆಯಿಂದ ಭಕ್ತರ ಅಪೇಕ್ಷೆಯಂತೆ ನಾನು ಕೂಡ ಇಲ್ಲಿ ವಾಸಮಾಡಿದ್ದೇನೆ.'' ಎಂದು ಮಹಾದೇವರು ಚಂದ್ರನನ್ನು ಕುರಿತು ಆ ತೀರ್ಥಕ್ಷೇತ್ರದ ಪ್ರಭಾವವನ್ನು ತಿಳಿಸಿ ಹೇಳಿದರು. ಮತ್ತು ಆ ಮಹಾದೇವನು ನಕ್ಷತ್ರಗಳ ಒಡೆಯನಾದ ಚಂದ್ರನ ಮೈಮೇಲೆಲ್ಲ ಕೈಯಾಡಿಸಿ ಅವನ ರೋಗರುಜಿನಗಳೆಲ್ಲವೂ ಕಳೆದು ಕಳೆಕಾಂತಿಗಳಿಂದ ಅವನ ಅಂಗಾಂಗಗಳಿಂದ ದಿವ್ಯತೇಜವು ಹೊಳೆಯುವಂತೆ ಮಾಡಿದರು. ಆ ಚಂದ್ರನು ನೋಡುತ್ತಿರುವಂತೆಯೇ ಶಂಕರನು ಅಲ್ಲಿಯೇ ಅದೃಶ್ಯನಾದನು.

ಸೋಮೇಶ ಬೆಟ್ಟದ ದಕ್ಷಿಣ ಭಾಗದಲ್ಲಿ ರಾವಣನು ಬಾಣಹೊಡೆದು ನಿರ್ಮಿಸಿದ **'ಬಾಣಗಂಗಾ'** ಎಂಬ ತೀರ್ಥವಿರುತ್ತದೆ. ಅಲ್ಲಿ ಸ್ನಾನ ಮಾಡಿದ ಮಾತ್ರದಿಂದ ಎಂಥ ಪಾಪವಿದ್ದರೂ ತೊಳೆದು ಹೋಗುತ್ತದೆ. ಅದೇ ಸೋಮಗಿರಿಯ ಮೂಡಣ ನಿಟ್ಟಿನಲ್ಲಿ ರಾವಣನ ತಪೋವನವಿದೆ. ಅಲ್ಲಿ ಮೂರು ರಾತ್ರಿ ಸುಮ್ಮನೆ ವಾಸಮಾಡಿದರೂ ತಪೋನುಷ್ಠಾನ ಮಾಡಿದ ಪುಣ್ಯವು ಬರುತ್ತದೆ. ಅದರ ಬಳಿಯಲ್ಲಿರುವ 'ನರ್ತನಾಚಲ'ದಲ್ಲಿ ಹಿಂದೆ ರಾವಣನು ಕುಣಿದು ಕೊಂಡಾಡಿ ತನ್ನ ಶಿವ ತಾಂಡವ ನೃತ್ಯದಿಂದ ಮಹಾದೇವನನ್ನು ಮೆಚ್ಚಿಸಿ ವರ ಪಡೆದನು. ಆ ಬಾಣ ಗಂಗಾತೀರ್ಥದಲ್ಲಿ ಸ್ನಾನಮಾಡಿ ಬಾಣೇಶ್ವರನಾದ ಶಿವ ಪ್ರಭುವಿನ ದರುಶನವನ್ನು ಮಾಡಿಕೊಂಡವರು ಗಂಗಾ ಸ್ನಾನದ ಫಲವನ್ನು ಪಡೆದು ಸ್ವರ್ಗದಲ್ಲಿ ದೇವತೆಗಳಂತೆ ನಲಿದಾಡುವರು. ಆ ದಿವ್ಯವಾದ ಸಾಲಿಗ್ರಾಮ ಕ್ಷೇತ್ರದಲ್ಲಿ ಸಾಲಂಕಾಯನ ಮುನಿಯು ನನ್ನನ್ನು ಕುರಿತು ಅತ್ಯಂತ ಉಗ್ರವಾದ ತಪಸ್ಸನ್ನು ಮಾಡಿದನು. ಮಹಾದೇವನಿಗೆ ಸರಿಸಮಾನನಾದ ಮಗನನ್ನು ಪಡೆಯಬೇಕೆಂದು ಹೆಬ್ಬಯಕೆಯಿಂದ ಘೋರ ತಪವನ್ನು ಆಚರಿಸುತ್ತಿದ್ದ ಆ ಸಾಲಂಕಾಯನ ಮುನಿಯ ಮನೋಭಾವವನ್ನು ಅರಿತು ಶಂಕರನು ತನ್ನ ಯೋಗ ಮಾಯೆಯಿಂದ ಅವನ ಪುತ್ರನಾಗಿ ಸುಂದರವಾದ ರೂಪದಿಂದ ಅವನ ಬಲಬದಿಯಲ್ಲಿ ನಿಂತುಕೊಂಡನು. ಆದರೆ ಕಣ್ಣುಮುಚ್ಚಿ ಶಿವನನ್ನು ಕುರಿತು ಅತ್ಯಂತ ಭಕ್ತಿಯಿಂದ ತಪಸ್ಸನ್ನು ಮಾಡುತ್ತಿದ್ದ ಆ ಸಾಲಂಕಾಯನ ಋಷಿಗೆ ಸಾಕ್ಷಾತ್ ಶಂಕರನು ಶಿಶುರೂಪನಾಗಿ ಪಕ್ಕದಲ್ಲಿ ನಿಂತುಕೊಂಡಿದ್ದರೂ ಗೊತ್ತೇ ಆಗಲಿಲ್ಲ. ಆಗ ಪುರಹರನು ನಕ್ಕು ಅವನನ್ನು ಎಚ್ಚರಿಸಿ ನುಡಿದನು.-

"ಋಷಿಗಳಲ್ಲಿ ಹುಲಿಯಂತಿರುವ ಮುನಿಪುಂಗವಾ ! ಏಳು. ನಿನ್ನ ಮನೋರಥವು ಪೂರ್ಣವಾಗಿದೆ. ನಿನ್ನ ಬಲಬದಿಯ ದೇಹದಿಂದ ನಾನು ನಿನಗೆ ಮಗನಾಗಿ ಹುಟ್ಟಿ ನಿಂತಿದ್ದೇನೆ. ನೀನು ನನಗೆ ಸರಿಸಮನಾದ ಮಗನು ಹುಟ್ಟಲಿ ಎಂದು ತಪಸ್ಸನ್ನು ಮಾಡಿದ್ದಿ. ನನಗೆ ಸಮಾನರು ಬೇರೆ ಯಾರೂ ಇಲ್ಲವೆಂದು ನಾನೇ ನಿನಗೆ ತನಯನಾಗಿ ಜನಿಸಿ ಬಂದಿದ್ದೇನೆ. ನಾನು ನಿನ್ನ ಪುತ್ರನಾಗಿ ಹುಟ್ಟಿ ಬಂದಿದ್ದರ ಮುಖ್ಯ ಉದ್ದೇಶವೆಂದರೆ ನೀನು ಶಂಖ, ಚಕ್ರ, ಗದಾಧಾರಿಯಾದ ಶ್ರೀ ಹರಿಯನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದ್ದು. ನೀನೀಗ ಸಿದ್ಧಿಯನ್ನು ಪಡೆದಿರುವಿ. ನೀನು ಹರಿಭಕ್ತನಾಗಿ ಅವನನ್ನು ಒಲಿಸಿಕೊಂಡದ್ದರಿಂದ ನಾನು ನಿನ್ನ ಮಗನಾಗಿ ಉದಿಸಿ ಬಂದಿದ್ದೇನೆ. ಇನ್ನು ಮೇಲೆ ನಾನು ಮಗ, ನೀನು ತಂದೆ. ನಿನ್ನ ಅಪ್ಪಣೆ ಏನು ಹೇಳು." ನಂದಿಯ ಮುಖಾಂತರ ಚಂದ್ರಚೂಡನ ಅನುಗ್ರಹ ಪೂರ್ಣವಾದ ಈ ವಚನವನ್ನು ಕೇಳಿ ಸಾಲಂಕಾಯನ ಮುನಿಗೆ ಸಂತೋಷವೂ ಆಯಿತು. ಸಂಶಯವೂ ಬಂದಿತು. ಮಹಾದೇವರ ಅಭಿಪ್ರಾಯವನ್ನು ಅವರ ಶಬ್ದಗಳಲ್ಲಿಯೇ ತನಗೆ ತಿಳಿಸಿ ಹೇಳಿದ ಆ ನಂದಿಯನ್ನು ಕುರಿತು ಹೀಗೆ ಮಾತನಾಡಿದನು -

"ಮಗು ನಂದಿಯೇ! ನನ್ನ ತಪಸ್ಸು ಸಿದ್ಧಿಸಿದ್ದು ನಿಜವಾಗಿದ್ದರೆ ನನಗೆ ಈ ವರೆಗೆ ಶ್ರೀ ಹರಿಯು ತನ್ನ ಪ್ರತ್ಯಕ್ಷ ದರುಶನವನ್ನು ಏಕೆ ಕೊಡಲಿಲ್ಲ? ಆ ವಿಷ್ಣುವನ್ನು ನೋಡುವವರೆಗೆ ನಾನು ತಪಸ್ಸನ್ನು ಬಿಡುವದಿಲ್ಲ. ಇಲ್ಲಿಯೇ ನಿಂತು ಆ ಹರಿಯನ್ನು ಕುರಿತು ತಪಂಗೈಯುವೆನು. ನೀನು ಯೋಗಶಕ್ತಿಯಿಂದ ಬೇಗನೇ ಮಧುರಾ ಪಟ್ಟಣಕ್ಕೆ ಹೋಗು. ಆ ಮಧುರಾ ಕ್ಷೇತ್ರದಲ್ಲಿ ಇರುವ ನನ್ನ ಪುಣ್ಯಾಶ್ರಮದಲ್ಲಿ ಕಟ್ಟಿರುವ ಗೋವುಗಳ ಹಿಂಡನ್ನೆಲ್ಲ ಇಲ್ಲಿಗೆ ತೆಗೆದುಕೊಂಡು ಬರಲು ಆಮುಷ್ಯಾಯಣನಿಗೆ ತಿಳಿಸು." ಸಾಲಂಕಾಯನ ಋಷಿಯ ಈ ಅಪ್ಪಣೆಯನ್ನು ಕೇಳಿ ಶಿವನ ವಾಹನವಾದ ನಂದೀಶ್ವರನು ಬೇಗನೆ ಮಧುರಾ ಪಟ್ಟಣಕ್ಕೆ ಹೋದನು. ಅಲ್ಲಿ ಸಾಲಂಕಾಯನ ಮುನಿಯ ಆಶ್ರಮವನ್ನು ಹುಡುಕಿಕೊಂಡು ಹೋಗಿ ಅವರ ಶಿಷ್ಯನಾದ ಆಮುಷ್ಯಾಯಣನನ್ನು ಕಂಡು ಕುಶಲಪ್ರಶ್ನೆಯನ್ನು ಮಾಡಿದನು. ಆ ಶಿಷ್ಯನು ಕೂಡ ತನ್ನ ಗುರುವಿನ ಕಡೆಯಿಂದ ಬಂದ ಆ ನಂದೀಶ್ವರನನ್ನು ಸತ್ಕರಿಸಿ ತನ್ನ ಗುರುವಿನ ಯೋಗಕ್ಷೇಮವನ್ನು ವಿಚಾರಿಸಿದನು. ಆಮುಷ್ಯಾಯಣನ ಅರ್ಘ್ಯಪಾದ್ಯಾದಿ ಆತಿಥ್ಯವನ್ನು ಸ್ವೀಕರಿಸಿದ ನಂದಿಯು ಸಾಲಂಕಾಯನನ ತಪೋನುಷ್ಠಾನದ ವೃತ್ತಾಂತವನ್ನೆಲ್ಲ ತಿಳಿಸಿ ತಮ್ಮ ಗೋಧನವನ್ನೆಲ್ಲ ಗಂಡಕೀತೀರಕ್ಕೆ ತರಬೇಕೆಂಬ ಗುರುಗಳ ಆದೇಶವನ್ನು ತಿಳಿಸಿದನು. ಅದನ್ನು ಕೇಳಿ ಆಮುಷ್ಯಾಯಣನು ಗುರುಗಳ ಆ ಎಲ್ಲ ಆಕಳ ಹಿಂಡನ್ನು ಹೊಡೆದುಕೊಂಡು ಮಧುರೆಯಿಂದ ಹೊರಟು ನಂದಿಯೊಂದಿಗೆ ಕೆಲವೇ ದಿನಗಳಲ್ಲಿ ಗಂಡಕೀನದಿಯ ತೀರಕ್ಕೆ ಬಂದು ಮುಟ್ಟಿದನು. ಮೆಲ್ಲಮೆಲ್ಲನೆ ಆ ಗಂಡಿಕೀನದಿಯನ್ನು ದಾಟಿ ತ್ರಿವೇಣಿಯ ತೀರಕ್ಕೆ ಬಂದು ಎಲ್ಲರೂ ಸಂತಸಗೊಂಡರು.

**ಭೂದೇವಿ :-** ದೇವಾ, ಸೋಮೇಶ್ವರ ಮತ್ತು ವೇಣೀ ಮಾಧವಾದಿ ದೇವಸ್ಥಾನಗಳಿಂದ ಶೋಭಿಸುವ ಪ್ರಯಾಗ ಕ್ಷೇತ್ರದಲ್ಲಿ ಮಾತ್ರ ತ್ರಿವೇಣೀ ಸಂಗಮವು ಪ್ರಸಿದ್ಧವಾಗಿದೆ. ಗಂಗೆ ಯಮುನೆ ಮತ್ತು ಸರಸ್ವತೀ ನದಿಗಳು ಸಂಗಮಿಸಿದ ಆ ದಿವ್ಯ

ಕ್ಷೇತ್ರವು 'ತೀರ್ಥರಾಜ' ಎಂದು ಪ್ರಸಿದ್ಧವಾಗಿದೆ. ಆದರೆ ಗಂಡಕೀ ತಟಾಕದಲ್ಲಿ ನೀನು ಹೇಳುವ ಈ ತ್ರಿವೇಣಿ ಯಾವದು ? ಇದರ ರಹಸ್ಯವೇನು ? ಮಹಿಮೆ ಏನು ? ಹೇಳು.

**ವರಾಹ :-** ಭೂಮಿದೇವಿ, ನಿನಗೆ ಮಂಗಲವಾಗಲಿ. ತ್ರಿವೇಣಿಯ ವೃತ್ತಾಂತವನ್ನು ತಿಳಿಸುತ್ತೇನೆ ಕೇಳು. - ''ಪೂರ್ವಕಾಲದಲ್ಲಿ ಶ್ರೀ ಹರಿಯು ಲೋಕ ಕ್ಷೇಮಾಕಾಂಕ್ಷೆಯಿಂದ ತಪಸ್ಸನ್ನು ಮಾಡುತ್ತಿದ್ದನು. ರಮ್ಯವಾದ ಹಿಮಾಲಯದ ಉತ್ತುಂಗ ಶೃಂಗಾಂಗಣದಲ್ಲಿ ತಪಂಗೈಯುತ್ತಿದ್ದ ಶ್ರೀ ಹರಿಯ ಎರಡೂ ಕೆನ್ನೆಗಳಲ್ಲಿ ತಪಸ್ಸಿನ ಕಾವಿನಿಂದ ಬೆವರು ನೀರಿನ ಪ್ರವಾಹವೇ ಉಂಟಾಯಿತು. ಅದರಿಂದ ಲೋಕಗಳ ಪಾಪವನ್ನು ಪರಿಹರಿಸುವ ಗಂಡಕೀ ನದಿಯು ಜನ್ಮತಳೆಯಿತು. ಮತ್ತು ಶ್ರೀ ಹರಿಯಿಂದ ಮಹತ್ತರವಾದ ಒಂದು ತೇಜಸ್ಸು ಉತ್ಪನ್ನವಾಯಿತು. ಅದರಿಂದ ಎಲ್ಲ ಲೋಕ ಸಹಿತವಾದ ಚರಾಚರ ಪ್ರಪಂಚವೆಲ್ಲವೂ ಆಶ್ಚರ್ಯಚಕಿತ ವಾಯಿತು. ದೇವಾಧಿ ದೇವತೆಗಳಿಗೂ ಕೂಡ ಅದರ ಪ್ರಭಾವವನ್ನು ತಿಳಿಯಲಾರದೆ ಜಿಜ್ಞಾಸೆಯಿಂದ ಅದನ್ನು ಅರಿಯಬೇಕೆಂಬ ಇಚ್ಛೆಯುದಿಸಿತು. ಆಶೆಯಿಂದ ಅವರು ಆ ಬ್ರಹ್ಮದೇವರ ಬಳಿಗೆ ಹೋದರು. ಭಗವನ್ಮಾಯೆಯಿಂದ ಮೋಹಿತರಾದ ಬ್ರಹ್ಮದೇವರೂ ಕೂಡ ಅದನ್ನು ತಿಳಿಯದೆ ಎಲ್ಲ ದೇವತೆಗಳೊಂದಿಗೆ ಶಂಕರನಿದ್ದಲ್ಲಿಗೆ ಬಂದರು. ಬ್ರಹ್ಮದೇವರು ಶಿವನಿಗೆ ನಮಸ್ಕರಿಸಿ ''ಶಂಕರಾ, ಇದೇನು ಅತ್ಯದ್ಭುತವಾದ ತೇಜಸ್ಸು? ಜಗತ್ತೆಲ್ಲವೂ ಇದರ ಕಾಂತಿಯಿಂದ ಪ್ರತಿಫಲಿತವಾಗಿದೆ. ಇದು ಜಗದಂಡ ಮಂಡಲವನ್ನೆಲ್ಲ ವ್ಯಾಪಿಸಿದೆ. ಈ ವಿಲಕ್ಷಣವಾದ ತೇಜಃಪುಂಜದ ಹುಟ್ಟಿಗೆ ಕಾರಣವು ಯಾವುದು ?'' ಎಂದು ಕೇಳಿದರು. ಆಗ ಪರಮೇಶ್ವರನು ಒಂದು ಕ್ಷಣ ಆಲೋಚನೆಗೈದು ''ಈ ಮಹಾತೇಜದ ಹುಟ್ಟುನಿಟ್ಟುಗಳನ್ನು ತೋರುತ್ತೇನೆ ಬನ್ನಿರಿ'' ಎಂದು ಹೇಳಿ ಎಲ್ಲ ದೇವತೆಗಳನ್ನೂ ಕರೆದುಕೊಂಡು ತನ್ನ ಪ್ರಮಥಗಣ ಸಹಿತವಾಗಿ ಮಹಾವಿಷ್ಣು ತಪಸ್ಸನ್ನು ಮಾಡುತ್ತಲಿದ್ದ ಸ್ಥಾನಕ್ಕೆ ಬಂದನು. ಮತ್ತು ಆ ಭಗವಂತನನ್ನು ಕುರಿತು ನಸುನಗುತ್ತ ಪ್ರಶ್ನಿಸಿದನು. -

''ಜಗತ್ ಪ್ರಭು, ಸರ್ವಾಧಾರನೂ ನಿಖಿಲ ಪ್ರಪಂಚಕ್ಕೆಲ್ಲ ಅಧ್ಯಕ್ಷನೂ ಸರ್ವಕರ್ತನೂ ಆದ ನೀನು ಏಕೆ ತಪಸ್ಸನ್ನು ಮಾಡುವೆ ? ನಿನಗೆ ಯಾವುದರ ಇಚ್ಛೆ ಇದೆ? ನಿನಗೆ ದೊರಕದ ವಸ್ತು ಯಾವದು ?'' ಹೀಗೆ ನಮಿಸಿ ನಿಂದು ನಗುತ್ತ ನುಡಿದ ಶಂಕರನನ್ನು ಕುರಿತು ಜಗದೊಡೆಯನಾದ ಶ್ರೀ ಹರಿಯು ಮಾರ್ನುಡಿದನು.-

''ನಾನು ಲೋಕ ಹಿತಕ್ಕಾಗಿ ತಪಸ್ಸನ್ನು ಮಾಡಲು ಉಪಕ್ರಮಿಸಿದ್ದೇನೆ. ಲೋಕ ಶಿಕ್ಷಣಕ್ಕಾಗಿ ನಿನ್ನಿಂದ ವರ ಪಡೆಯಲು ಅಪೇಕ್ಷಿಸಿ ನಿನ್ನ ದರುಶನಕ್ಕಾಗಿ ಉತ್ಸಕಿತನಾಗಿ ನಿಂತು ಕೊಂಡಿದ್ದೇನೆ. ಈಗ ನನಗೆ ದರ್ಶನವಿತ್ತುದರಿಂದ ನಾನು ಕೃತಾರ್ಥನಾದೆ. ವಿಷ್ಣುವಿನ ಈ ಮಾತನ್ನು ಕೇಳಿ ಶಿವನು ನುಡಿದನು.-

'' ದೇವಾ, ದರ್ಶನ ಮಾತ್ರದಿಂದಲೇ ಮುಕ್ತಿಗೆ ಕಾರಣವಾಗುವ ಈ ಕ್ಷೇತ್ರವು ಮುಕ್ತಿ ಕ್ಷೇತ್ರ ಎಂದು ಇಂದಿನಿಂದ ಪ್ರಸಿದ್ಧವಾಗಲಿ. ನಿನ್ನ ಗಲ್ಲ ಗಂಡಸ್ಥಳದ ಬೆವರಿನಿಂದ ಉದ್ಭವಿಸಿದ ಈ ಗಂಡಕೀ ನದಿಯ ಗರ್ಭದಲ್ಲಿ ನೀನು ಇದ್ದುದರಿಂದ ಈ ಕ್ಷೇತ್ರವು ದರ್ಶನದಿಂದಲೇ ಮುಕ್ತಿದಾಯಕವಾಗುವದರಲ್ಲಿ ಸಂದೇಹವಿಲ್ಲ. ನಿನ್ನ ಸಾನ್ನಿಧ್ಯವು ಇಲ್ಲಿ

ಇದ್ದುದರಿಂದ ನಾನೂ ಬ್ರಹ್ಮದೇವರೂ ಇಲ್ಲಿ ವಾಸಮಾಡುವೆವು. ಮತ್ತು ಎಲ್ಲ ವೇದಗಳೂ ಸರ್ವತೀರ್ಥಗಳೂ ಸಕಲ ಋಷಿಗಳೂ ನಿನ್ನ ಸನ್ನಿಧಾನವಿದ್ದುದರಿಂದ ಈ ಗಂಡಕೀ ನದಿಯಲ್ಲಿ ಸನ್ನಿಹಿತರಾಗುವರು. ಇದು ತೀರ್ಥಗಳಲ್ಲಿ ಉತ್ತಮ ತೀರ್ಥ. ಮಂಗಲಗಳಿಗೆಲ್ಲ ಪರಮ ಮಂಗಳ. ಗಂಗಾನದಿಯ ಹೊರತು ಈ ಗಂಡಕಿಗೆ ಸಮಾನವಾದ ಬೇರೆ ನದಿಯೇ ಇಲ್ಲ. ಕಾರ್ತೀಕಮಾಸದಲ್ಲಿ ಮೂವತ್ತು ದಿನಗಳವರೆಗೆ ಈ ಗಂಡಕೀನದಿಯಲ್ಲಿ ಸ್ನಾನ ಮಾಡಿದವರು ಮುಕ್ತಿ ಹೊಂದುವದರಲ್ಲಿ ಸಂದೇಹವಿಲ್ಲ. ಈ ಗಂಡಕೀನದಿಗೆ ದೇವಕೀ ಎಂಬ ಬೇರೊಂದು ನದಿಯು ಕೂಡುವಲ್ಲಿ ಹಿಂದೆ ಪುಲಹ ಹಾಗೂ ಪುಲಸ್ತ್ಯಋಷಿಗಳು ಉಗ್ರವಾಗಿ ತಪಸ್ಸನ್ನು ಮಾಡಿ ಸೃಷ್ಟಿ ಮಾಡುವ ಸಾಮರ್ಥ್ಯವನ್ನು ಹೊಂದಿದರು. ಆದರಿಂದಲೇ ಅವರಿಗೆ ಪ್ರಜಾಪತಿ ಸ್ಥಾನವು ದೊರಕಿತು. ಆಗ ಅವರು ತಪಸ್ಸು ಮಾಡಿದ ಆ ಸ್ಥಾನದಿಂದ ಹೊರಟ ನದಿಯು ಬ್ರಹ್ಮಪುತ್ರಾ ಎಂದು ಹೆಸರಾಯಿತು.

ಅದೇ ರೀತಿಯಾಗಿ ಪುಲಹಋಷಿಗಳು ಸೃಷ್ಟಿಸಾಮರ್ಥ್ಯವನ್ನು ಪಡೆದು ಪ್ರಾಜಾಪತ್ಯ ಪದವಿಯನ್ನು ಹೊಂದಿದ ಪುಣ್ಯ ಸ್ಥಳದಿಂದ ದೇವಿಕಾ ನದಿಯು ಉಗಮ ಹೊಂದಿತು. ಈ ದೇವಿಕಾ ಮತ್ತು ಬ್ರಹ್ಮಪುತ್ರಾ ನದಿಗಳು ಹರಿದು ಬಂದು ಗಂಡಕೀ ನದಿಯನ್ನು ಸಂಧಿಸಿ ಕೂಡುವ ಸ್ಥಾನಕ್ಕೆ 'ತ್ರಿವೇಣಿ' ಎಂದು ಹೆಸರಾಯಿತು. ಈ ಮೂರು ನದಿಗಳು ಸಂಗಮಿಸುವ ಒಂದು ಯೋಜನದಳತೆಯ ಮೇಲಿನ ಸ್ಥಾನವು ಆ ಪ್ರಯಾಗದ 'ತ್ರಿವೇಣೀಸಂಗಮ'ದಂತೆಯೇ ಪರಮ ಪೂಜ್ಯವೂ ಅತ್ಯಂತ ಪವಿತ್ರವೂ ಆಗಿರುತ್ತದೆ.

ಪೂರ್ವಕಾಲದಲ್ಲಿ ವೇದಜ್ಞಾನನಿಧಿಗಳಾದ ಕರ್ದಮ ಪ್ರಜಾಪತಿಗಳಿಗೆ ಜಯ ವಿಜಯ ಎಂಬ ಇಬ್ಬರು ಮಕ್ಕಳಿದ್ದರು. ಮರುತ್ತ ರಾಜನು ಯಜ್ಞಮಾಡಿಸಲಿಕ್ಕಾಗಿ ಋಷಿಪುತ್ರರಾದ ಜಯವಿಜಯರನ್ನೂ ತನ್ನಲ್ಲಿ ಬರಬೇಕೆಂದು ಆಹ್ವಾನಿಸಿದನು. ಮಹಾರಾಜನ ಬಿನ್ನಹವನ್ನು ಮನ್ನಿಸಿ ಅವನ ಕರೆಗೆ ಓಗೊಟ್ಟು ಋಷಿಕುಮಾರರು ಮರುತ್ತ ಮಹಾರಾಜನ ಯಜ್ಞ ಮಂಟಪಕ್ಕೆ ಹೋದರು. ಮೊದಲು ದಡ್ಡರಾಗಿದ್ದ ಆ ಜಯವಿಜಯರಿಬ್ಬರೂ ತೃಣ ಬಿಂದು ಮುನಿಯ ಸೇವೆ ಶುಶ್ರೂಷೆಗಳನ್ನು ವ್ರತಬದ್ಧರಾಗಿ ಮಾಡಿ ವಿದ್ಯೆ ಪಡೆದಿದ್ದರು. ವೇದ ಕೋವಿದರಾಗಿದ್ದರು. ವೇದಾಂತಗಳಲ್ಲಿಯೂ ವಿದ್ವಾಂಸರಾಗಿದ್ದರು. ಯಜ್ಞಯಾಗಗಳನ್ನು ಮಾಡಿಸುವ ಶ್ರೌತಕಾಂಡ ಕರ್ಮಕಾಂಡಗಳಲ್ಲಿ ಅವರು ಅತ್ಯಂತ ನಿಪುಣರೆನಿಸಿದ್ದರು. ಭಗವನ್ನಿಷ್ಠರಾದ ಆ ಇಬ್ಬರೂ ಸಹೋದರರು ಶ್ರೀ ಹರಿಯನ್ನು ಭಕ್ತಿಯಿಂದ ಪೂಜಿಸುತ್ತಿದ್ದರು. ಅವರ ಶ್ರದ್ಧೋಪೇತವಾದ ಪೂಜೆಗೆ ಪ್ರಸನ್ನನಾಗಿ ಶ್ರೀ ಹರಿಯು ಪ್ರತಿನಿತ್ಯವೂ ಅವರೆದುರು ಪ್ರತ್ಯಕ್ಷವಾಗಿ ಸನ್ನಿಹಿತನಾಗಿರುತ್ತಿದ್ದನು. ಇಂಥ ಮಹಾಮಹಿಮರಾದ ಆ ಋಷಿಕುಮಾರರನ್ನು ತನ್ನ ಯಜ್ಞಕ್ಕೆ ಕರೆಯಿಸಿ ಅವರ ನೇತೃತ್ವದಲ್ಲಿ ಮರುತ್ತನು ತನ್ನ ಯಜ್ಞವನ್ನು ಪೂರ್ತಿಗೊಳಿಸಿದನು. ಮತ್ತು ಆ ಜಯ ವಿಜಯ ಮುನಿಗಳನ್ನು ತಕ್ಕ ಗೌರವದಿಂದ ಪೂಜಿಸಿ ವಿಪುಲವಾಗಿ ದಾನ ದಕ್ಷಿಣೆಗಳನ್ನು ಕೊಟ್ಟು ಪ್ರಸನ್ನಗೊಳಿಸಿ ಮನೆಗೆ ಕಳಿಸಿದನು.

ಮನೆಗೆ ಬಂದ ಬಳಿಕ ಆ ಜಯವಿಜಯ ಸಹೋದರರು ಮರುತ್ತ ಮಹಾರಾಜನಿಂದ ತಮಗೆ ದಾನವಾಗಿ ಬಂದ ದಕ್ಷಿಣಾ ದ್ರವ್ಯವನ್ನು ಸರಿಯಾಗಿ ವಿಭಾಗ ಮಾಡಿಕೊಳ್ಳ

ತೊಡಗಿದರು. ಹಣದ ಹಂಚಿಕೆಯಲ್ಲಿ ಅವರಿಬ್ಬರೂ ಅಣ್ಣತಮ್ಮಂದಿರಲ್ಲಿ ಬಿಕ್ಕಟ್ಟು ತಲೆದೋರಿತು. ಮಾತಿಗೆ ಮಾತು ಬೆಳೆದು ನುಡಿ ಕಿಡಿಯಾಗಿ ಮಸೆಯಿತು.

ಚಿಕ್ಕವನಾದ ವಿಜಯನು '' ನನ್ನ ಕೈಯಲ್ಲಿದ್ದುದು ನನ್ನದು. ನಿನ್ನ ಕೈಯಲ್ಲಿದ್ದ ಹಣ ನಿನ್ನದು '' ಎಂದು ವಾದಿಸಿದನು. ಅದಕ್ಕೆ ಅವನ ಅಣ್ಣನಾದ ಜಯನು '' ತಮ್ಮ, ಹಾಗಲ್ಲ. ಮಹಾರಾಜನು ನನ್ನ ಕೈಯಲ್ಲಿ ಕೊಟ್ಟ ಧನಕನಕಾದಿದ್ರವ್ಯವನ್ನೆಲ್ಲ ನನಗೆ ಹೊರುವದಾಗುವದಿಲ್ಲವೆಂದು ನಿನ್ನ ಕೈಯಲ್ಲಿ ನಾನು ಕೊಟ್ಟಿದ್ದೆ. ಹೊತ್ತುತಂದ ಮಾತ್ರಕ್ಕೆ ಆ ದ್ರವ್ಯವೆಲ್ಲವೂ ನಿನ್ನದು ಹೇಗಾಗುವದು ? '' ಎಂದು ಪ್ರತಿವಾದವನ್ನು ಹೂಡಿದನು. ಏನಾದರೂ ತಮ್ಮನಾದ ವಿಜಯನು ತನ್ನ ಕೈಯಲ್ಲಿ ಸಿಕ್ಕ ದ್ರವ್ಯವನ್ನು ಅಣ್ಣನಿಗೆ ಕೊಡಲೇ ಇಲ್ಲ. ಅದರಿಂದ ಹಿರಿಯನಾದ ಜಯಮುನಿಗೆ ಕೋಪಬಂದು ''ಕೈಗೆ ಬಂದುದನ್ನು ನ್ಯಾಯವಾಗಿ ಕೊಡಬೇಕಾದವರಿಗೆ ಕೊಡದಿರುವ ನೀನು ಮೊಸಳೆಯಾಗು'' ಎಂದು ಶಾಪವಿತ್ತನು.

ಅದನ್ನು ಕೇಳಿ ಚಿಕ್ಕವನಾದ ಜಯನಿಗೂ ಕ್ರೋಧವು ತಲೆಗೇರಿ '' ದುಡ್ಡಿನ ಆಶೆಯಿಂದ ನೀನು ಕುರುಡನಾಗಿರುವಿ. ದುಡ್ಡನ್ನು ತೆಗೆದುಕೊಂಡು ಏನು ಮಾಡುವದು ? ಒಡಹುಟ್ಟಿದ ತಮ್ಮನಾದ ನನ್ನನ್ನು ಮದದಿಂದ ಕೊಬ್ಬಿಹೋದ ನೀನು ಶಾಪಕೊಟ್ಟು ಹಾಳುಮಾಡಿದೆ. ಆದುದರಿಂದ ಮದಾಂಧನಾದ ನೀನು ಕೂಡ ಆನೆಯಾಗಿ ಹುಟ್ಟು '' ಎಂದು ಶಾಪದ ತಿರುಗು ಬಾಣವನ್ನು ಬಿಟ್ಟನು. ಹೀಗೆ ಅವರಿಬ್ಬರೂ ಅಣ್ಣತಮ್ಮಂದಿರು ಪರಸ್ಪರ ಶಾಪದಿಂದ ಆನೆ ಮೊಸಳೆಗಳಾಗಿ ಬೇರೆ ಬೇರೆ ಸ್ಥಳ ಜಲಗಳಲ್ಲಿ ಜನಿಸಿದರು.

ಅವರಿಬ್ಬರಲ್ಲಿ ಚಿಕ್ಕವನಾದ ವಿಜಯನು ಗಂಡಕೀನದಿಯಲ್ಲಿ ಮೊಸಳೆಯಾದನು. ಪೂರ್ವಜನ್ಮದಲ್ಲಿ ಶ್ರೀ ಹರಿಯ ಪೂಜೆಮಾಡಿದ ಪುಣ್ಯದಿಂದ ಜನ್ಮಾಂತರದ ಸ್ಮರಣೆಯು ಅಚ್ಚಳಿಯದೆ ಅವನಲ್ಲಿ ಉಳಿದಿತ್ತು. ಹಿರಿಯನಾದ ಜಯಮುನಿಯು ತ್ರಿವೇಣೀ ಕ್ಷೇತ್ರದ ಮದ್ಯದಲ್ಲಿ ದೊಡ್ಡ ಆನೆಯಾಗಿ ಹುಟ್ಟಿ ಅನೇಕ ಹೆಣ್ಣಾನೆ ಕಟ್ಟಾಣೆ ಪುಟ್ಟಾನಿಗಳಿಂದ ಕೂಡಿಕೊಂಡು ಕಾಡಿನಲ್ಲಿ ಸ್ವಚ್ಛಂದ ವಿಹಾರ ಮಾಡುತ್ತ ಅಡ್ಡಾಡುತ್ತಿದ್ದನು. ಹೀಗೆ ಶಾಪ ಮೋಹಿತರಾದ ಆ ಸಹೋದರರು ಲೀಲಾಲೋಲರಾಗಿ ತಮ್ಮ ಶಪಿತ ಜನ್ಮಗಳಲ್ಲಿ ಕಾಲಯಾಪನೆಮಾಡುತ್ತಲಿರುವಾಗ ಒಂದು ದಿನ ಆ ಗಂಡಾನೆಯು ಅನೇಕ ಹೆಣ್ಣಾನೆಗಳಿಂದ ಕೂಡಿಕೊಂಡು ಜಲವಿಹಾರಕ್ಕೆಂದು ತ್ರಿವೇಣಿಯ ಸಂಗಮ ಸ್ಥಳಕ್ಕೆ ಬಂದಿತು.

ಸಂಗಮದ ಆಳವಾದ ನೀರಿನಲ್ಲಿ ಉದ್ದಾಮ ಜಲ ಕ್ರೀಡೆಯನ್ನು ಹೆಣ್ಣಾನೆಗಳೊಂದಿಗೆ ಆಡುತ್ತಾ ಆ ಗಜೇಂದ್ರವು ತನ್ನ ಸೊಂಡೆಯಲ್ಲಿ ನೀರನ್ನು ಎತ್ತಿ ತನ್ನ ಗಜ ಕಾಮಿನಿಯರೆಡೆಗೆ ತೂರಾಡಿ ನೀರಾಟವಾಡಿತು. ಯಥೇಚ್ಛವಾಗಿ ನೀರನ್ನು ಕುಡಿದು ತನ್ನ ಕಟ್ಟಾನೆಗಳಿಗೆಲ್ಲ ಒಲುಮೆಯಿಂದ ಜಲಸ್ನಾನಪಾನ ಮಾಡಿಸಿತು. ಹೀಗೆ ಮಡದಿ ಮಕ್ಕಳೊಡನೆ ಜಲಕ್ರೀಡೆಯಾಡುವ ಆ ಮದ್ದಾನೆಯನ್ನು ನೋಡಿ ಜಾತಿ ಸ್ಮರಣೆಯುಳ್ಳ ಮೊಸಳೆಗೆ ಇವನು ನನ್ನನ್ನು ಶಪಿಸಿದ ಜನ್ಮಾಂತರದ ಸಹೋದರನು ಎಂದು ನೆನಪಾಗಿ ಸಿಟ್ಟಿನಿಂದ ಧಾವಿಸಿ ಬಂದು ಆ ಸಲಗದ ಕಾಲನ್ನು ಗಟ್ಟಿಯಾಗಿ ಹಿಡಿದುಕೊಂಡಿತು. ಆನೆಯಾದರೂ ಕೋಪದಿಂದ ತನ್ನ ಚೂಪಾದ ಕೋರೆದಾಡೆಗಳಿಂದ ಆ ಮೊಸಳೆಯನ್ನು ಚುಚ್ಚಿತು. ಇರಿಯಿತು. ತಿವಿಯಿತು. ಮೊಸಳೆಯೂ ತನ್ನ ಹದನವಾದ ಹಲ್ಲುಗಳಿಂದ

ಆನೆಯ ಕಾಲನ್ನು ಕಚ್ಚಿ ಚುಚ್ಚಿ ಅದನ್ನು ನೀರಿಗೆಳೆಯಲು ಹೋರತೊಡಗಿತ್ತು. ಹೀಗೆ ಒಂದನ್ನೊಂದು ಎಳೆದಾಡುತ್ತ ಹೊಡೆದಾಡುತ್ತ ಹೋರಾಡುತ್ತ ಅನೇಕ ವರ್ಷ ಯುದ್ಧಮಾಡಿದವು. ಆ ಕ್ರೂರ ಪ್ರಾಣಿಗಳ ಘೋರ ಕಾದಾಟದಿಂದ ಆ ತ್ರಿವೇಣಿ ಸಂಗಮದ ನೀರೆಲ್ಲವೂ ರಾಡಿಯಾಯಿತು. ಅನೇಕ ಜಲಚರ ಸ್ಥಳಚರ ಪ್ರಾಣಿಗಳು ಈ ಆನೆ ಮೊಸಳೆಗಳ ಕದನದಲ್ಲಿ ಹಿಂಸೆಗೊಳಗಾದವು. ಎಷ್ಟೋ ಪ್ರಾಣಿಗಳು ಸತ್ತೇ ಹೋದವು. ಅದನ್ನು ನೋಡಿ ಜಲೇಶ್ವರ ರಾಜನು ಶ್ರೀ ಹರಿಯನ್ನು ಪ್ರಾರ್ಥಿಸಿದನು. ಆಗ ಭಕ್ತವತ್ಸಲನಾದ ಭಗವಂತನು ಅಲ್ಲಿಗೆ ಬಂದು ತನ್ನ ಸುದರ್ಶನ ಚಕ್ರದಿಂದ ಮೊಸಳೆಯ ಮುಖವನ್ನು ಸೀಳಿದನು. ಈ ಸಂದರ್ಭದಲ್ಲಿ ಸುದರ್ಶನ ಚಕ್ರವನ್ನು ಮತ್ತೆ ಮತ್ತೆ ಎತ್ತಿ ಬಡಿಯುವಾಗ ಅಲ್ಲಿಯ ಕಲ್ಲುಗಳಿಗೆ ಅದು ತಾಕಿ ಅವುಗಳಲ್ಲಿ ಚಕ್ರದ ಚಿನ್ಹಗಳು ಮೂಡಿದವು. ಆ ನನ್ನ ಶ್ರೇಷ್ಠವಾದ ಕ್ಷೇತ್ರದಲ್ಲಿ ನನ್ನ ಸುದರ್ಶನ ಚಕ್ರದ ಸ್ಪರ್ಶದಿಂದ ಚಕ್ರಲಾಂಛಿತವಾದ ಶಿಲೆಗಳು ಬಹಳವಿರುತ್ತವೆ. ಆ ನದಿಯಲ್ಲಿರುವ ವಜ್ರಕೀಟಗಳಿಗೂ ಆ ಸುದರ್ಶನ ಚಕ್ರದ ಲಾಂಛನದ ಪರಿಚಯವಾಗಿ ಅವು ಕೂಡ ಅಲ್ಲಿಯ ಕಲ್ಲುಗಳಲ್ಲಿಯ ವದನಗಳ ಒಳಗೆ ಚಕ್ರ ಚಿನ್ಹವನ್ನು ಕೊರೆಯುತ್ತವೆ. ಭೂದೇವಿ, ಈ ತ್ರಿವೇಣಿ ಕ್ಷೇತ್ರದ ಮಹಿಮೆಯು ಅಗಾಧವಾದುದು. ಪೂರ್ವಕಾಲದಲ್ಲಿ ಋಷಭದೇವನ ಮಗನಾದ ಭರತ ರಾಜನು ಪುಲಸ್ತ್ಯಾಶ್ರಮ ದಲ್ಲಿದ್ದು ತಪೋನುಷ್ಠಾನ ಮಾಡುತ್ತಿರುವಾಗ ಶ್ರೀ ಹರಿಯನ್ನು ಸೇವಿಸಿ ಇಲ್ಲಿಯ ತ್ರಿಜಲೇಶ್ವರನನ್ನು ಪೂಜಿಸುತ್ತಿದ್ದನು.

ಆ ಜಡಭರತನು ಪೂಜಿಸಿದ್ದರಿಂದ ಆ ಈಶ್ವರನಿಗೆ ಜಡೇಶ್ವರ ಜಲೇಶ್ವರ ಎಂದು ಹೆಸರು ಬಂದಿತು. ಈ ಸಾಲಿಗ್ರಾಮದಲ್ಲಿ ನಾನು ಇದ್ದಾಗ ಈ ಜಲೇಶ್ವರನು ನಾನು ಅಲ್ಲಿರುವದನ್ನು ತಿಳಿದು ನನ್ನನ್ನು ಸ್ತೋತ್ರಮಾಡಿದನು. ಮತ್ತು ಆ ಗಜಗ್ರಾಹಗಳ ಕಾದಾಟವನ್ನು ಕೊನೆಗಾಣಿಸಬೇಕೆಂದು ಕೇಳಿಕೊಂಡನು. ಆಗ ಭಕ್ತವತ್ಸಲನಾದ ನಾನು ಸುದರ್ಶನ ಚಕ್ರವನ್ನು ಪ್ರಯೋಗಿಸಿದೆನು. ಅದು ಬಿದ್ದಲ್ಲೆಲ್ಲ ತೀರ್ಥವಾಯಿತು. ಅದು ಸುತ್ತಾಡಿದಲೆಲ್ಲ ಕಲ್ಲುಗಳು ಚಕ್ರಚಿನ್ಹಿತವಾದವು. ಆ ಚಕ್ರದ ಸಂಚಾರಕ್ಕೆ ಸಿಕ್ಕಿದ್ದೆಲ್ಲವೂ ಚಕ್ರಮಯವಾಯಿತು. ಅನಂತರ ನಂದಿಯು ಆ ತ್ರಿವೇಣೀ ತಟಾಕದಲ್ಲಿ ಐದು ದಿನವಿದ್ದು ಮಾಡಬೇಕಾದುದನ್ನೆಲ್ಲ ವಿಧಿಪೂರ್ವಕ ಮಾಡಿಮುಗಿಸಿದನು. ಶಾಲಿಗ್ರಾಮ ಕ್ಷೇತ್ರವು ಅಂದಿನಿಂದ ಹರಿಹರ, ಪ್ರಭು, ದೇವಾಸ ಎಂದು ಬಗೆಬಗೆಯ ಹೆಸರುಗಳುಳ್ಳದ್ದಾಯಿತು.

ಆ ಮಹಾದೇವನು ಆ ಸಾಲಿಗ್ರಾಮ ಕ್ಷೇತ್ರದಲ್ಲಿ ಸಾಲಂಕಾಯನ ಮುನಿಗೆ ನಂದಿಯ ರೂಪದಿಂದ ಮಗನಾಗಿ ಹುಟ್ಟಿದನು. ಯೋಗ ಸಿದ್ಧಿಯನ್ನುಂಟುಮಾಡುವ ಆ ಮಹಾದೇವನು ತಾನೇ ಮಹಾಯೋಗಿಯಾಗಿ ತ್ರಿಧಾರಕ ತೀರ್ಥದಲ್ಲಿ ಉತ್ತಮವಾದ ಯೋಗಾಸನಾರೂಢನಾದನು. ಅವನ ಮೂರು ಜಡೆಗಳಿಂದ ಗಂಗಾಯಮುನಾ ಸರಸ್ವತಿ ಎಂಬ ಮೂರು ಜಲಧಾರೆಗಳು ಹೊರಟು ಹರಿದು ಬಂದು ಇಲ್ಲಿ ತ್ರೈಧಾರಿಕ ತೀರ್ಥವಾಯಿತು. ಮಹೇಶ್ವರನಾದ ಶಂಕರನು ಸಾಕ್ಷಾತ್ ಸ್ವಯಂ ಶ್ರೀ ಹರಿಯ ದರ್ಶನದಲ್ಲಿ ತತ್ಪರನಾಗಿ ಮಹಾಯೋಗಿಯಾಗಿ ಈ ಸಾಲಿಗ್ರಾಮ ಕ್ಷೇತ್ರದಲ್ಲಿ ವಾಸವಾಗಿದ್ದಾನೆ. ಸಂಸಾರ ಬಂಧನದಿಂದ ಬಿಡುಗಡೆಮಾಡುವ ದಿವ್ಯಜ್ಞಾನವನ್ನು ಭಕ್ತರಿಗೆ ಇಲ್ಲಿದ್ದು ಕರುಣಿಸುತ್ತಾನೆ. ಈ ತ್ರಿಧಾರಕ ತೀರ್ಥದಲ್ಲಿ ಸ್ನಾನಮಾಡಿ ಪಿತೃಗಳಿಗೆ ತರ್ಪಣಕೊಟ್ಟು

ಶ್ರೀಹರಿಯ ಧ್ಯಾನಗೈಯುವ ಮಹಾಯೋಗಿಯಾದ ಗೌರೀಪತಿ ಶಂಕರನನ್ನು ಪೂಜೆಮಾಡುವವರು ಮತ್ತೆ ಭೂಲೋಕದಲ್ಲಿ ಹುಟ್ಟುವದಿಲ್ಲ.

ಈ ತ್ರಿಧಾರಕ ತೀರ್ಥದ ಪೂರ್ವಭಾಗದಲ್ಲಿ ಹಂಸತೀರ್ಥ ಎಂಬ ಪುಣ್ಯಸ್ಥಳ ವಿರುತ್ತದೆ. ಹಿಂದೊಮ್ಮೆ ಆ ಹಂಸತೀರ್ಥದಲ್ಲಿ ಅನೇಕ ಭಕ್ತರು ಶಿವರಾತ್ರಿಯ ದಿನ ಬಂದು ಭಕ್ತಿಯಿಂದ ಶಿವನನ್ನು ಪೂಜೆ ಮಾಡಿ ಬಗೆ ಬಗೆಯ ನೈವೇದ್ಯ ವಸ್ತುಗಳನ್ನು ಆ ಮಹಾಯೋಗಿಯಾದ ಚಂದ್ರಶೇಖರನಿಗೆ ಸಮರ್ಪಿಸಿದರು. ಆ ಕಾಲದಲ್ಲಿ ಮುಗಿಲಿನಲ್ಲಿ ಹಾರಾಡುವ ಎರಡು ಕಾಗೆಗಳು ಹಸಿದು ಬಂದು ಆ ನೈವೇದ್ಯದ ಅನ್ನಕ್ಕೆ ಮುಗಿಬಿದ್ದವು. ಒಂದು ಕಾಗೆಯು ಶಿವನಿಗೆ ನಿವೇದಿಸಲ್ಪಟ್ಟ ಅನ್ನವನ್ನು ತೆಗೆದುಕೊಂಡು ಹಾರಿ ಹೊರಟುಹೋಯಿತು. ಅದನ್ನು ಕಿತ್ತಿಕೊಳ್ಳಲು ಮತ್ತೊಂದು ಕಾಗೆಯು ಅದರೊಡನೆ ಅಂತರಿಕ್ಷದಲ್ಲಿಯೇ ಸೆಣಸಾಡಿತು. ಹೀಗೆ ಅನ್ನಕ್ಕಾಗಿ ಮುಗಿಲಿನಲ್ಲಿಯೇ ಬಡಿದಾಡುತ್ತ ಅವೆರಡು ಕಾಗೆಗಳು ಪರಸ್ಪರ ಕಚ್ಚಿ ಕುಕ್ಕಿ ಹೊಡೆದು ಬಡೆದು ಹೋರಾಡಿ ಗಾಯಗೊಂಡು ಕೊನೆಗೆ ಎರಡೂ ಆ ತೀರ್ಥಕುಂಡದಲ್ಲಿ ಬಿದ್ದುಬಿಟ್ಟವು. ಮರುಕ್ಷಣದಲ್ಲಿಯೇ ಆ ತೀರ್ಥಜಲದಲ್ಲಿ ಬಿದ್ದ ಕಾಗೆಗಳು ತಮ್ಮ ಕಾಗೆಯ ರೂಪವನ್ನು ಬಿಟ್ಟು ಬೆಳ್ಳಗಿನ ಹಂಸಗಳಾಗಿ ತೀರ್ಥದಿಂದ ಮೇಲಕ್ಕೆ ಎದ್ದವು. ಚಂದ್ರನಂತೆ ಧವಲ ಕಾಂತಿಯಿಂದ ಕಂಗೊಳಿಸುತ್ತ ಅರಸಂಚೆಗಳಾಗಿ ಅಲ್ಲಿಂದ ಆನಂದದಿಂದ ಹಾರಾಡುತ್ತ ಹೋದವು. ಅಲ್ಲಿ ಶಿವರಾತ್ರಿಯ ಉತ್ಸವಕ್ಕಾಗಿ ನೆರೆದ ಜನರು ಈ ಕೌತುಕವನ್ನು ಕಂಡು ಆ ತೀರ್ಥವನ್ನು 'ಹಂಸತೀರ್ಥ'ವೆಂದು ಕರೆದರು. ಆ ಮೊದಲು ಅದನ್ನು 'ಯಕ್ಷತೀರ್ಥ' ಎಂದು ಕರೆಯುತ್ತಲಿದ್ದರು. ಅದನ್ನು ಹಿಂದೆ ಓರ್ವಯಕ್ಷನು ನಿರ್ಮಿಸಿದ್ದರಿಂದಲೂ ಅಲ್ಲಿ ಸ್ನಾನಮಾಡಿದವರು. ಯಕ್ಷಲೋಕದಲ್ಲಿ ವಾಸಿಸುತ್ತಿದ್ದುದರಿಂದಲೂ ಅದಕ್ಕೆ ಯಕ್ಷತೀರ್ಥ ಎಂದು ಹಿಂದೆ ಹೆಸರು ಬಂದಿದ್ದಿತು. ಈಗ ಹಂಸತೀರ್ಥವೆಂದಾಯಿತು. ಅಲ್ಲಿ ಸ್ನಾನಮಾಡಿ ಪ್ರಾಣ ನೀಗಿದ ಶಿವಭಕ್ತರು ಕೂಡ ಯಕ್ಷಲೋಕದಿಂದ ನನ್ನ ಲೋಕಕ್ಕೆ ಬರುವರು. ಮಹಾಯೋಗಿಯಾದ ಶ್ರೀ ಶಂಕರನ ಪ್ರಭಾವದಿಂದ ಆ ತೀರ್ಥವು ಅಂಥ ಮಹಾಮಹಿಮೋಪೇತವಾಗಿರುತ್ತದೆ. ನಾನೂ ಶಂಕರನೂ ಇಲ್ಲಿ ಸನ್ನಿಹಿತರಾಗಿ ಲೋಕಾನುಗ್ರಹ ಕಾರ್ಯದಲ್ಲಿ ತತ್ಪರರಾಗಿರುತ್ತೇವೆ. ವಸುಂಧರೇ, ಸಾಲಿಗ್ರಾಮ ರೂಪದಿಂದ ನಾನು ಸ್ವಯಂ ಸನ್ನಿಹಿತನಾಗಿರುವ ಈ ಮುಕ್ತಿ ಕ್ಷೇತ್ರವು ಹನ್ನೆರಡು ಯೋಜನ ವಿಸ್ತಾರವಾಗಿದೆ.

**ಭೂದೇವಿ :-** ಭಗವಂತನೇ! ಮೋಕ್ಷವನ್ನು ಕೊಡುವ ನಿನ್ನ ಕ್ಷೇತ್ರದಲ್ಲಿ ನಿಂತು ತಪಸ್ಸನ್ನು ಮಾಡುತ್ತಿದ್ದ ಸಾಲಂಕಾಯನ ಮುನಿಯು ಮತ್ತೇನು ಮಾಡಿದನು?

**ವರಾಹ :-** ಉಗ್ರವಾದ ವ್ರತವನ್ನು ಕೈಕೊಂಡ ಆ ಸಾಲಂಕಾಯನ ಮುನಿಯು ಅಲ್ಲಿ ಬಹು ಕಾಲದವರೆಗೆ ತಪಸ್ಸನ್ನು ಮಾಡುತ್ತ ಆ ನನ್ನ ಕ್ಷೇತ್ರದಲ್ಲಿ ಇದ್ದಾಗ ಅವನ ಕಣ್ಣಿಗೆ ವಿಶಾಲವಾದ ಒಂದು ಸಾಲ ಗಿಡವು ಕಂಡು ಬಂದಿತು. ದಿವ್ಯ ಗಂಧವನ್ನು ಸೂಸುವ ಹೂಗಳ ಭಾರದಿಂದ ತೊನೆದು ತೂಗಾಡುವ ತಂಪಿನ ತಾಣವಾದ ಆ ಹೆಮ್ಮರವನ್ನು ಕಂಡು ಸಾಲಂಕಾಯನ ಮುನಿಯ ತಪದ ತಾಪವೆಲ್ಲವೂ ಇಂಗಿದಂತಾಯಿತು. ದಣಿವು

ದೂರಾಯಿತು. ಆಯಾಸದಿಂದ ಬಳಲಿದ ಅವನು ಆ ಸಾಲ ವೃಕ್ಷದ ಎಡೆಯಲ್ಲಿ ತಪಸ್ಸನ್ನು ಮಾಡುತ್ತ ಅದರ ಪೂರ್ವ ಭಾಗದಲ್ಲಿ ವೈಶಾಖ ಶುದ್ಧ ದ್ವಾದಶಿಯ ದಿನ ನನ್ನ ದರುಶನವನ್ನು ಪಡೆದನು. ಅನಂತರ ನನಗೆ ಮತ್ತೆ ಮತ್ತೆ ನಮಸ್ಕರಿಸಿ ವೇದ ಮಂತ್ರದಿಂದ ಸ್ತೋತ್ರ ಮಾಡಿದನು.

ನನ್ನ ಉಜ್ವಲವಾದ ತೇಜಸ್ಸಿನಿಂದ ಕಣ್ಣು ಕುಕ್ಕಿದಂತಾಗಿ ಎವೆಯನ್ನು ಮುಚ್ಚಿದನು. ತುಸು ಹೊತ್ತಿನ ನಂತರ ಅವನು ಮೆಲ್ಲನೆ ಕಣ್ಣಾಲೆಗಳನ್ನು ತೆರೆದು ನೋಡುವಷ್ಟರಲ್ಲಿ ನಾನು ಆ ಮರದ ದಕ್ಷಿಣ ಪಾರ್ಶ್ವಕ್ಕೆ ಹೋಗಿದ್ದೆನು. ಅದನ್ನು ಕಂಡು ಆ ಸಾಲಂಕಾಯನನು ಅಲ್ಲಿಗೆ ಹೋಗಿ ಋಗ್ವೇದ ಸೂಕ್ತಗಳಿಂದ ನನ್ನ ಎದುರು ನಿಂತು ಸ್ತೋತ್ರ ಮಾಡಿದನು. ಈ ರೀತಿಯಲ್ಲಿ ಆ ಸಾಲ ವೃಕ್ಷದ ಪಶ್ಚಿಮ ದಿಕ್ಕಿನಲ್ಲಿ ಹೋಗಿ ನಿಂತ ನನ್ನನ್ನು ಅವನು ಯಜುರ್ವೇದ ಮಂತ್ರಗಳಿಂದಲೂ, ಉತ್ತರ ದೆಶೆಯಲ್ಲಿ ಹೋಗಿ ನಿಂತ ನನ್ನನ್ನು ಸಾಮವೇದದ ಮಂತ್ರದಿಂದಲೂ ಸ್ತೋತ್ರ ಮಾಡಿದನು. ಹೀಗೆ ಆ ಹೆಮ್ಮರದ ನಾಲ್ಕೂ ನಿಟ್ಟಿನಲ್ಲಿ ನಿಂತು ನನ್ನನ್ನು ಕೊಂಡಾಡುವ ಆ ಮುನಿಯ ಸ್ತೋತ್ರದಿಂದ ಪರಿತುಷ್ಟನಾದ ನಾನು ಅವನಿಗೆ ''ಪುಣ್ಯಶಾಲಿಯಾದ ಬ್ರಾಹ್ಮಣಾ, ನಿನ್ನ ಸ್ತುತಿಯಿಂದ ನಾನು ತುಷ್ಟನಾಗಿದ್ದೇನೆ. ನಿನ್ನ ತಪಸ್ಸಿನಿಂದ ನೀನು ಸಿದ್ಧಿಯನ್ನು ಪಡೆದಿರುವೆ. ನಿನಗೆ ಬೇಕಾದ ವರವನ್ನು ಕೇಳು. ನಿನಗೆ ಮಂಗಳವಾಗಲಿ'' ಎಂದು ಹೇಳಿದನು. ಅದಕ್ಕೆ ಆ ಸಾಲಂಕಾಯನ ಮುನಿಯು ಕೈಜೋಡಿಸಿ '' ಭಗವನ್, ನೀನು ನಿಜವಾಗಿಯೂ ನನ್ನ ಮೇಲೆ ಪ್ರಸನ್ನನಾಗಿದ್ದರೆ ನನಗೆ ಮಹಾದೇವರಂಥ ಮಗನನ್ನು ಕೊಡು'' ಎಂದು ಕೇಳಿಕೊಂಡನು. ಅವನ ಮಧುರ ಮಾತನ್ನು ಕೇಳಿ ಪ್ರಸನ್ನನಾದ ನಾನು ಹೀಗೆ ಉತ್ತರಿಸಿದೆನು-

''ಮುನಿಯೇ, ನೀನು ಇಷ್ಟು ದಿನ ವ್ರತವನ್ನು ಮಾಡಿದ್ದು ಸಾರ್ಥಕವಾಯಿತು. ನೀನು ಮನಸ್ಸಿನಲ್ಲಿ ಯೋಚಿಸಿದ್ದು ಈಗ ಕೃತಿಯಲ್ಲಿ ಇಳಿದಿದೆ. ಈಶ್ವರನ ಪ್ರತಿ ಮೂರ್ತಿಯಂತಿದ್ದ ನಂದಿಕೇಶ್ವರನು ನಿನ್ನ ಬಲಭಾಗದ ಅಂಗದಿಂದ ನಿನಗೆ ಪುತ್ರನಾಗಿ ಜನಿಸಿದ್ದಾನೆ. ಇಲ್ಲಿಗೇ ನಿನ್ನ ತಪಸ್ಸನ್ನು ಕೊನೆಗಾಣಿಸು. ನಿನ್ನ ಮಗನು ಹುಟ್ಟಿ ಹದಿನಾಲ್ಕು ಕಲ್ಪಗಳಾದವು. ಅದು ನಿನಗೆ ಗೊತ್ತಿಲ್ಲ. ನಿನಗೆ ಮಗನಾಗಿ ಜನಿಸಿದ ಆ ನಂದಿಕೇಶ್ವರನು ಆಮುಷ್ಯಾಯಣ ಎಂಬ ನಿನ್ನ ಶಿಷ್ಯನನ್ನು ಕರೆದುಕೊಂಡು ಹಸುಗಳ ಹಿಂಡನ್ನು ಮಧುರೆಯಿಂದ ಇಲ್ಲಿಗೆ ತಂದಿದ್ದಾನೆ. ತಾನೂ ಬಂದಿದ್ದಾನೆ. ಶೂಲವನ್ನು ಕೈಯಲ್ಲಿ ಹಿಡಿದುಕೊಂಡು ಆ ಗೋವುಗಳ ಸಮೀಪದಲ್ಲಿಯೇ ಇರುತ್ತಾನೆ. ನೀನು ನಿನ್ನ ಮಗನೊಡನೆ ತುಸು ಸಮಯವಿದ್ದು ಪರಮ ಸಂತೋಷದಿಂದ ಆತ್ಮ ಸಾಧನೆಯನ್ನು ಮಾಡಿಕೊ. ಈ ಕ್ಷೇತ್ರದಲ್ಲಿ ನೀನು ಇದ್ದು ನನ್ನ ಸೇವೆಯನ್ನು ನಿರಂತರ ಮಾಡಿದರೆ ನನ್ನಂತೆಯೇ ಜನರಿಂದ ಪೂಜ್ಯನಾಗುವೆ. ಸಾಲವೃಕ್ಷದಲ್ಲಿ ನೀನು ನನ್ನನ್ನು ಕಂಡ ಈ ಗ್ರಾಮವು ಸಾಲಿಗ್ರಾಮ ಕ್ಷೇತ್ರ ಎಂದು ಪ್ರಸಿದ್ಧವಾಗುವದು''

ಭೂದೇವಿ, ಆ ಸಾಲಂಕಾಯನ ಮುನಿಗೆ ಹೀಗೆ ವರವನ್ನು ಕೊಟ್ಟು ಅವನು ನೋಡುತ್ತಿದ್ದಂತೆಯೇ ನಾನು ಅಲ್ಲಿಂದ ಕಣ್ಮರೆಯಾದೆನು. ಮುಂದೆ ಆ ಮುನಿಯಾದರೂ ಆ ಸಾಲವೃಕ್ಷವನ್ನು ಪ್ರದಕ್ಷಿಣೆಮಾಡಿ ಹೊರಟು ಹೋದನು. ಆ ಸಾಲಿಗ್ರಾಮ ಕ್ಷೇತ್ರದಲ್ಲಿ

ಮಾನವರನ್ನು ಮುಕ್ತರನ್ನಾಗಿ ಮಾಡುವ ಹದಿನೈದು ತೀರ್ಥಗಳಿವೆ. ಅವುಗಳಲ್ಲಿ ಅತ್ಯಂತ ರಹಸ್ಯವಾದ 'ಬಿಲ್ವಪ್ರಭತೀರ್ಥ'ದಲ್ಲಿ ಸ್ನಾನಮಾಡುವವನಿಗೆ ಸಾವಿರ ಅಶ್ವಮೇಧ ಯಾಗ ಮಾಡಿದ ಫಲವು ಬರುವದು. ಅಲ್ಲಿಯ 'ಚಕ್ರತೀರ್ಥ'ದಲ್ಲಿ ಚಕ್ರಾಂಕಿತ ಕಲ್ಲುಗಳು ಇರುತ್ತವೆ. ಅಲ್ಲಿ ಮೂರು ದಿನ ಉಪವಾಸವಿದ್ದು ಸ್ನಾನಮಾಡುವವರು ಮೂರು ಯಜ್ಞಗಳ ಫಲವನ್ನು ಪಡೆಯುತ್ತಾರೆ. ಹಿಮಶಿಖರದಿಂದ ಮೂರು ಜಲಪ್ರವಾಹಗಳು ಧಾರೆಗಟ್ಟಿ ಬೀಳುವ 'ವಿಷ್ಣುಪದ ತೀರ್ಥ'ದಲ್ಲಿ ಸ್ನಾನ ಮಾಡಿದವನೂ ಅಲ್ಲಿ ನಿಂತು ನನ್ನ ಆರಾಧನೆ ಮಾಡುವವನೂ ನನ್ನ ವೈಕುಂಠ ಲೋಕಕ್ಕೆ ಬರುವನು. ಒಂದು ಬದರೀವೃಕ್ಷದಿಂದ ಹೊರಟ ಜಲಧಾರೆಯಿಂದ ನಿರ್ಮಾಣಗೊಂಡ 'ಶಾಲೀಹೃದ ತೀರ್ಥ'ದಲ್ಲಿ ಸ್ನಾನ ಮಾಡುವವನು 'ನರಮೇಧ ಯಜ್ಞ' ಮಾಡಿದ ಫಲವನ್ನು ಪಡೆಯುವನು. ಮತ್ತು ಅಲ್ಲಿರುವ 'ಶಂಖಪ್ರಭ', 'ಗದಾಕುಂಡ', 'ಅಗ್ನಿಪ್ರಭ', 'ಸರ್ವಾಯುಧ', 'ದೇವಪ್ರಭ', 'ವಿದ್ಯಾಧರ', 'ಪುಣ್ಯನದಿ', 'ಗಂಧರ್ವ', 'ದೇವಹೃದ', ಮುಂತಾದ ದಿವ್ಯಕ್ಷೇತ್ರಗಳಲ್ಲಿ ವಾಸಮಾಡಿ ಉಪೋಷಣೆಗೈದು ಆ ತೀರ್ಥಗಳಲ್ಲಿ ಸ್ನಾನ ಮಾಡುವವರೂ ಉತ್ತಮ ಗತಿಯನ್ನು ಹೊಂದಿ ಕೊನೆಗೆ ನನ್ನ ಲೋಕವನ್ನು ಸೇರುತ್ತಾರೆ. ಭೂದೇವಿ, ಎರಡು ದೇವನದಿಗಳು ಸಂಗಮಿಸಿದ ದಿವ್ಯಕ್ಷೇತ್ರ ಒಂದು ನೇಪಾಳದಲ್ಲಿ ಇರುತ್ತದೆ. ಅಲ್ಲಿ ದೇವತೆಗಳೂ ಗಂಧರ್ವರೂ ಅಪ್ಸರೆಯರಿಂದ ಒಡಗೂಡಿ ಇಳಿದು ಬಂದು ತಪಸ್ಸನ್ನು ಮಾಡುತ್ತಾರೆ. ನೇಪಾಳದಲ್ಲಿರುವ ಈ ಶಿವಮಂದಿರವು ಎಲ್ಲರಿಗೂ ವಿಶೇಷ ಪ್ರಿಯವಾದದ್ದು. ಹಿಮಾಲಯದ ಬೇರೆ ಬೇರೆ ತೀರ್ಥಕ್ಷೇತ್ರಗಳಿಂದಲೂ ಮಹಾದೇವರ ಜಟಾ ಜೂಟದಿಂದಲೂ ನೀಲಕಂಠ ಪರ್ವತದಿಂದಲೂ 'ಶ್ವೇತ ಗಂಗೆ' ಎಂಬ ಹೆಸರಿನಿಂದ ಪ್ರಖ್ಯಾತಳಾದ 'ದೇವನದಿ'ಯಿಂದಲೂ ಅನೇಕಾನೇಕ ಉಪನದಿಗಳು ಹುಟ್ಟಿಹರಿದು ದೃಶ್ಯಾದೃಶ್ಯಗಳಾಗಿ ಪ್ರವಹಿಸಿ ಗಂಡಕೀ ನದಿಯೊಡನೆ ಸಂಗಮವನ್ನು ಹೊಂದುವವು. ಕೃಷ್ಣನ ದೇಹದಿಂದ ಉತ್ಪನ್ನವಾದ ಆ ಗಂಡಕಿಗೆ 'ಕೃಷ್ಣಾ' ಎಂತಲೂ ಹೆಸರು ಇದೆ. ಶಿವನ ದೇಹದಿಂದ ಹುಟ್ಟಿದ 'ತ್ರಿಶೂಲಗಂಗೆ' ಎಂಬುದು ಗಂಡಕೀ ನದಿಯೊಡನೆ ಕೂಡಿ ಹರಿಯುವ ನದಿಗಳಲ್ಲಿ ಎಲ್ಲಕ್ಕಿಂತ ಹಿರಿದಾಗಿದೆ.

ಈ ತ್ರಿಶೂಲ ಗಂಗಾ ಮತ್ತು ಗಂಡಕೀ ನದಿಗಳ ಸಂಗಮದ ಪುಣ್ಯಭೂಮಿಯಲ್ಲಿ 'ಸಿದ್ಧಾಶ್ರಮ' ಎಂಬ ಹೆಸರಿನ ಪ್ರಸಿದ್ಧವಾದ ಈಶ್ವರನ ತಪೋವನವಿರುತ್ತದೆ. ಬಗೆಬಗೆಯ ಹೂ, ಹಣ್ಣು ಕಾಯಿಗಳಿಂದ ಆ ಶಿವ ತಪೋವನವು ಕಂಗೊಳಿಸುತ್ತದೆ. ಬಾಳೆಗಳ ಗುಂಪಿನ ಸೊಂಪುಳ್ಳ ಆ ತಂಪಿನ ತಾಣದಲ್ಲಿ ಬೇವು, ಗಣಿಗಲೆ, ಮರಗಳೂ ಸುರಹೊನ್ನೆ ಸುರಗಿಗಳೂ ತಲೆಎತ್ತಿ ತಮ್ಮ ಹೊಂದಳಿರುಗಳಿಂದ ಹಂದರ ಹಾಕಿವೆ. ಖರ್ಜೂರ, ಮಾವು, ಹವಳದ ಗಿಡ, ಮೆರಟೆಯಗಿಡ, ತೆಂಗು, ಕೊಂಗು, ಅರಳೆ, ನೀರಲೆ, ಕಗ್ಗಲಿ, ಕಿತ್ತಳೆ, ಎಲಚಿ, ನಿಂಬೆ, ಮೊದಳೆ, ಕೇದಿಗೆ, ಮಲ್ಲಿಗೆ, ಜಾಜಿ, ನಂದಿಬಟ್ಟಲು, ಮೊಲ್ಲೆ, ಗೋರಂಟೆ, ನಾಗಕೇಸರ, ಗಿರಿಮಲ್ಲಿಗೆ, ದಾಳಿಂಬೆ ಮೊದಲಾದ ಬಗೆ ಬಗೆಯ ಗಿಡಬಳ್ಳಿಗಳು ಕಂಪಿನ ಭಾರದಿಂದ ಬಳಕುತ್ತ, ಜೇನಿನ ಭಾರದಿಂದ ತುಳಕುತ್ತ ಸೌಗಂಧವನ್ನು ಸೂಸುತ್ತಲಿವೆ. ಈ ಪುಣ್ಯಕ್ಷೇತ್ರದಲ್ಲಿ ವಾಸಮಾಡಿ ಆ ಪಾವನ ತೀರ್ಥಗಳಲ್ಲಿ ಸ್ನಾನಮಾಡುವದರಿಂದ ನರರು ನೂರು ಅಶ್ವಮೇಧ ಯಾಗಮಾಡಿದ ಫಲವನ್ನು ಪಡೆಯುವರು. ಇಲ್ಲಿ ವೈಶಾಖ

ಸ್ನಾನಮಾಡುವವರಿಗೆ ಸಾವಿರ ಗೋದಾನದ ಪುಣ್ಯವೂ, ಮಾಘ ಸ್ನಾನ ಮಾಡುವವರಿಗೆ ಪ್ರಯಾಗ ಸ್ನಾನ ಮಾಡಿದ ಪುಣ್ಯವೂ, ಕಾರ್ತಿಕ ಸ್ನಾನ ಮಾಡುವವನಿಗೆ ಮುಕ್ತಿ ಯೋಗ್ಯತೆಯೂ ಪ್ರಾಪ್ತವಾಗುವದು. ಇಲ್ಲಿ ಯಜ್ಞ, ತಪಸ್ಸು, ದಾನ, ಶ್ರಾದ್ಧ ದೇವತಾರ್ಚನೆ ಅಥವಾ ಯಾವದೇ ಪುಣ್ಯ ಕರ್ಮವನ್ನು ಮಾಡಿದರೂ ತ್ರಿವೇಣೀ ಸಂಗಮದಲ್ಲಿ ಮಾಡಿದಂತೆ ಅಪಾರ ಪುಣ್ಯ ಉಂಟು. ಅನಂತ ಫಲವೂ ಉಂಟು.

ದೇವಿ ವಸುಂಧರೆ, ಆ ಸಾಲಿಗ್ರಾಮ ಕ್ಷೇತ್ರದಲ್ಲಿ ನಾನು ಪೂರ್ವಾಭಿಮುಖನಾಗಿ ನಿಂತಿರುವೆನು. ಶಿವನು ನನ್ನ ಬಲಭಾಗದಲ್ಲಿಯೇ ವಾಸವಾಗಿದ್ದಾನೆ. ನನ್ನನ್ನು ತಿಳಿದವರು ಶಿವನನ್ನು ತಿಳಿಯುವರು. ಶಿವನನ್ನು ತಿಳಿದವರು ನನ್ನನ್ನು ತಿಳಿಯುವರು. ಅವನಿದ್ದಲ್ಲಿ ನಾನು. ನಾನು ಇದ್ದಲ್ಲಿ ಅವ. ಶಿವ. ಶಿವನಿಗೆ ನಮಸ್ಕಾರ ಮಾಡಿದರೆ ನನಗೆ ನಮಸ್ಕಾರ ಮಾಡಿದಂತೆ. ಇದರ ತಾತ್ವಿಕಾರ್ಥವನ್ನು ತಿಳಿದವರು ನಿಜವಾದ ಸಿದ್ಧಿಯನ್ನು ಪಡೆಯುವರು. ಇದು ಹರಿಹರಾತ್ಮಕ ಕ್ಷೇತ್ರವು ಎನಿಸಿದೆ. ಮುಕ್ತಿದಾಯಕವಾದ ಕ್ಷೇತ್ರಗಳಲ್ಲಿ ಈ 'ಹರಿಹರ ಕ್ಷೇತ್ರ', 'ತ್ರಿವೇಣಿ ಸಂಗಮ', 'ರುರುಖಂಡ' ಮತ್ತು 'ಶ್ವೇತ ಗಂಗಾ' 'ಗಂಡಕೀ ನದಿಗಳ ಸಂಗಮ ಸ್ಥಳ' ಇವು ನಾಲ್ಕು ಮುಖ್ಯವಾಗಿರುತ್ತವೆ. ಗಂಡಕಿಯು ಭಾಗೀರಥಿಯಂತೆ ನದಿಗಳಲ್ಲಿ ಶ್ರೇಷ್ಠವಾಗಿರುತ್ತದೆ. ಗಂಗೆ ಮತ್ತು ಗಂಡಕಿ ಎರಡೂ ಮಹಾನದಿಗಳು ಸಂಗಮಿಸುವ ಕ್ಷೇತ್ರವು ಶ್ರೀಹರಿ ಕ್ಷೇತ್ರ ಎನಿಸುವುದು. ಈ ಗಂಡಕಿಯು ಆದಿಯಲ್ಲಿಯೇ ದೇವಗಂಗೆಯೊಡನೆ ಸಂಗಮಿಸಿತು. ಇದರ ಮಹಿಮೆಯು ದೇವಗುಹ್ಯವಾಗಿದೆ. ಮಂಗಳಾಂಗಿಯಾದ ಭೂದೇವಿಯೇ, ಪಾಪ ಪರಿಹಾರಕವಾದ ಈ ಸಾಲಿಗ್ರಾಮ ಕ್ಷೇತ್ರದ ಮಹಿಮೆಯನ್ನು ನಾನು ನಿನಗೆ ತಿಳಿಸಿದ್ದೇನೆ. ಇದನ್ನು ಹೇಳುವವರು ಕೇಳುವವರು ಮತ್ತು ಬೈಗು ಬೆಳಗುಗಳಲ್ಲಿ ಪಾರಾಯಣ ಮಾಡುವವರು ಸಿದ್ಧಿಪಡೆದು ಉದ್ಧಾರ ಹೊಂದುವರು.

*ವರಾಹ ಪುರಾಣದಲ್ಲಿ ನೂರಹದಿನೆಂಟನೇ ಅಧ್ಯಾಯ ಮುಗಿದಿದೆ.*

—o—

**ಭೂದೇವಿ :-** ಪೂಜ್ಯರೇ, ನಿಮ್ಮ ಮುಖದಿಂದ ಸಾಲಿಗ್ರಾಮ ಕ್ಷೇತ್ರದ ಮಹಿಮೆಯನ್ನು ಕೇಳಿ ನನ್ನ ಮನದ ದುಗುಡವೆಲ್ಲವೂ ಕಳೆದು ಹೋಗಿದೆ. ರುರುಖಂಡವು ಒಳ್ಳೇ ಪುಣ್ಯ ಕ್ಷೇತ್ರವೆಂದು ತಿಳಿಸಿದಿರಿ. ಆ ರುರು ಯಾರು ? ಮುಂಚೆ ಅವನು ಏನಾಗಿದ್ದ ? ಈ ನಿನ್ನ ಕ್ಷೇತ್ರಕ್ಕೆ ಅವನ ಹೆಸರೇಕೆ ? ಇದನ್ನೆಲ್ಲ ನನಗೆ ತಿಳಿಸು.

**ವರಾಹ :-** ದೇವಿ, ಹಿಂದೆ ಭೃಗುವಂಶದಲ್ಲಿ ದೇವದತ್ತ ಎಂಬ ಓರ್ವ ಬ್ರಾಹ್ಮಣನು ಜನಿಸಿದನು. ವೇದವೇದಾಂಗಗಳಲ್ಲಿ ಆ ದೇವದತ್ತನಿಗೆ ಒಳ್ಳೇ ಪಾರಂಗತಿ ಇದ್ದಿತು. ಯಜ್ಞ ವಿದ್ಯೆಗಳಲ್ಲಿ ಅವನು ಎತ್ತಿದ ಕೈ. ಬಂದ ಅತಿಥಿಗಳನ್ನು ದೇವರೆಂದು ಸತ್ಕರಿಸುವ ಅವನು ವ್ರತನಿಷ್ಠನಾಗಿದ್ದನು. ಅವನ ಆಶ್ರಮದಲ್ಲಿರುವ ಮೃಗಗಳೂ ಕೂಡ ಮುನಿಯಂತೆ ಶಾಂತರೂಪವಾಗಿ ಅಲ್ಲಿಯ ಮರಬಳ್ಳಿಗಳೂ ಪುಣ್ಯಪ್ರದವಾಗಿದ್ದವು. ಇಂಥ ಪಾವಿತ್ರ್ಯದ ನೆಲೆಯಲ್ಲಿ ನಿಂತು ಉಗ್ರ ತಪವನ್ನು ಕೈಕೊಂಡ ಆ ಮುನಿಯು ತಿನ್ನುವದು ಬರೇ ಗಡ್ಡೆಗೆಣಸು, ಮಾಡುವದು ಘೋರ ತಪಸ್ಸು. ಹೀಗೆ ಸಾವಿರಾರು ವರ್ಷಗಳು ಉರುಳಿದವು. ಇಂದ್ರನಿಗೆ ಚಿಂತೆಯಾಯಿತು. ಕಾಮನನ್ನು ಅವನು ಕುಳಿತಲ್ಲಿಯೇ ನೆನೆದ. ಕೂಡಲೇ ಮದನನು ಗೆಳೆಯ ಗಂದರ್ವರೊಡನೆ ಅಲ್ಲಿಗೆ ಐತಂದ. ಇಂದ್ರನ ಇಂದ್ರಿಯಗಳು ಕ್ಷುಬ್ಧವಾಗಿದ್ದವು. ಆದರೂ ಅವನ ಮಾತಿನಲ್ಲಿ ಮಾಧುರ್ಯವಿದ್ದಿತು. ಅವನ ಮನದ ದುಗುಡವನ್ನು ಗುರುತಿಸಿದ ಕಾಮನು ಹೇಳಿದ. ಕಾರ್ಯವನ್ನು ಯಶಸ್ವಿಯಾಗಿ ಮಾಡಿಕೊಡುವ ಆಶ್ವಾಸನೆಯನ್ನು ನೀಡಿದ. ಎಂಥ ಯೋಗಿಯ ಮನವನ್ನೂ ಕೂಡ ಕದಡುವ ಪ್ರತಿಜ್ಞೆ ಮಾಡಿದ. ಅದರಿಂದ ದೇವೇಂದ್ರನ ಚಿತ್ತದ ಚಿಂತೆ ದೂರಾಯಿತು. ಸಂತಸದ ನಗೆ ನಕ್ಕು ನುಡಿದ. -

''ರಮಣೀಯವಾದ ಹೇಮಗಿರಿಯಲ್ಲಿ ಹೃಷೀಕೇಶ ಕ್ಷೇತ್ರದಲ್ಲಿ ದೇವದತ್ತ ಎಂಬ ಮುನಿಯು ಇರುತ್ತಾನೆ. ಹರಿಯಲ್ಲಿಯೇ ಅವನ ಮನಸ್ಸು. ನಿರಂತರ ನೆಟ್ಟಿ ಅವನ ತಪಸ್ಸು. ಬಹುಶಃ ಅವನ ಮನದಲ್ಲಿ ಇಂದ್ರಪದವಿಯ ಆಶೆ ಅಂಕುರಿಸಿರಬಹುದು. ಆದುದರಿಂದ ನೀವು ಅಲ್ಲಿಗೆ ಹೋಗಿರಿ. ಅವನ ತಪೋಭಂಗ ಮಾಡಿರಿ.'' ದೇವರಾಜನ ಅಣತಿಯನ್ನು ತಲೆಯಮೇಲೆ ಹೊತ್ತು ಅವನ ಮಿತ್ರ ಮಂಡಳಿಯು ವಸಂತ ಮಾಸವನ್ನು ಮುಂದೆ ಮಾಡಿಕೊಂಡು ಹಿಮಾಚಲಕ್ಕೆ ನಿಬ್ಬಣ ಹೊರಟಿತು. ಮಂದಾನಿಲವು ತಾನೇ ಮುಂದಾಗಿ ನಡೆಯಿತು. ದೇವತೆಗಳ ಒಡೆಯನಾದ ಇಂದ್ರನು ಒಬ್ಬ ಅಪ್ಸರೆಯನ್ನು ಬರಮಾಡಿಕೊಂಡ. ಆ ಸುರರ ದೊರೆಯು ಆ ಅಪ್ಸರೆಯನ್ನು ಹೊಗಳಿದ್ದೇ ಹೊಗಳಿದ್ದು. ಮಾತು ಮಾತಿನಲ್ಲಿಯೂ ಪ್ರೀತಿ ಹೂತು ನಿಂತಿತ್ತು. ಆ ಮನದನ್ನೆಯನ್ನು ಮನ್ನಿಸಿ ಮಹೇಂದ್ರನು ಮಾತನಾಡಿದನು. -

''ಸುಂದರೀ, ನೀನು ಹಿಮಗಿರಿಯ ದೇವದತ್ತ ಮುನಿಯ ಆಶ್ರಮಕ್ಕೆ ಹೋಗು. ನಿನ್ನ ಚೆಲುವು ಹೋದಲ್ಲೆಲ್ಲ ಗೆಲುವಿನ ಬಾವುಟವನ್ನು ಎತ್ತಿಕೊಂಡೇ ಬರುವದೆಂದು ನನಗೆ ವಿಶ್ವಾಸವಿದೆ. ನಿನ್ನ ಹಾವ, ಭಾವ, ಬೆಡಗು ಬಿನ್ನಾಣ, ಹಾಸ್ಯಲಾಸ್ಯಗಳಿಂದ ಆ

ಮುನಿಯ ಮನವನ್ನು ಮೋಹಗೊಳಿಸು. ಅವನು ನಿನ್ನ ಸೌಂದರ್ಯಕ್ಕೆ ಮಾರುಹೋಗಿ ತಪಸ್ಸಿನಿಂದ ಹಿಂದೆಗೆದರೆ ನಿನ್ನ ಮೇಲೆ ನನಗೆ ಬಹಳ ಸಂತೋಷವಾಗುವದು.'' ದೇವರಾಜನ ನಿದೇಶದಂತೆ ಪ್ರಮ್ಲೋಚೆಯು ಹಿಮಾಯಲಯದಲ್ಲಿರುವ ದೇವದತ್ತ ಋಷಿಯ ಆಶ್ರಮಕ್ಕೆ ನಡೆದಳು.

ಪರಮ ರಮಣೀಯವಾಗಿದ್ದಿತು ಹಿಮಗಿರಿಯ ನಡುನೆತ್ತಿಯ ಮೇಲೆದ್ದ ಆ ಪುಣ್ಯಾಶ್ರಮ. ಬಗೆಬಗೆಯ ಬಳ್ಳಿಗಳು ಒಂದಕ್ಕೊಂದು ತಳಕುಹಾಕಿ ಹೊಂದಳಿರುಗಳ ಹಂದರಗಳನ್ನು ಸುಂದರವಾಗಿ ನಿರ್ಮಿಸಿದ್ದವು. ಅಲ್ಲಿಯ ಗಿಡಗುಂಪುಗಳಲ್ಲಿ ಒಂದೆಡೆ ಕೋಗಿಲೆಗಳ ಮಧುರಾಲಾಪ ಕೇಳಿ ಬಂದರೆ ಇನ್ನೊಂದೆಡೆ ಮಾಮರದ ತೋಪುಗಳಲ್ಲಿ ಭೃಂಗಗಳ ಸಂಗೀತವು, ಇನ್ನೊಂದೆಡೆ ಗಂಧರ್ವರ ಗೀತಾಲಾಪವು ಕೇಳಿ ಬರುತ್ತಿದ್ದವು. ಕ್ರೂರ ಪಶುಗಳೆಲ್ಲವೂ ವೈರ-ಮತ್ಸರ-ಭಾವವನ್ನು ಮರೆತು ಸ್ನೇಹಸಲುಗೆಯಿಂದ ಕೂಡಿ ಆಡುತ್ತಿದ್ದವು. ಆ ರಮ್ಯ-ವನಾಂತರಾಳದಲ್ಲಿ ಒಂದು ಮಂಜುಲತಾ ಕುಂಜದಲ್ಲಿ ಕುಳಿತುಕೊಂಡು ಆ ಅಪ್ಸರಾಂಗನೆಯು ತನ್ನ ಕಿನ್ನರ ಕಂಠದಿಂದ ಮಧುರ ಮಧುರವಾಗಿ ಹಾಡತೊಡಗಿದಳು. ದೇವದತ್ತ ಮುನಿಯ ಧ್ಯಾನ ಸಮಾಧಿ ಇಳಿಯಿತು. ಇತ್ತ ಪ್ರಮ್ಲೋಚೆಯ ಗಾನ ಸಮಾಧಿ ಏರಿತು. ಅವಳ ಗಾನ ಲಹರಿಯ ತಾನ ವಿತಾನಗಳು ದೇವದತ್ತ ಮುನಿಯ ಕಿವಿಗೆ ಆಪ್ಯಾಯನ ಎನಿಸಿದವು. ಆ ಮಧುರಾಲಾಪವನ್ನು ಕೇಳಿಯೇ ಮುನಿಯ ಮನಸ್ಸು ಕೌತುಕಭರಿತವಾಯಿತು. ''ಯಾರದಾಗಿಬಹುದು ಈ ಹೆಣ್ದನಿ ? ಎಲ್ಲಿಂದ ಬಂದಿತು ಈ ಸುಣ್ದನಿ ?'' ಎಂದು ಸಂಗೀತದ ಸೆಲೆಯನ್ನು ಅರಸುತ್ತ ಹೊರಟನು.

ಅದೇ ವೇಳೆಗೆ ಆ ಪ್ರಮ್ಲೋಚೆಯೊಡನೆ ಅಲ್ಲಿಗೆ ಬಂದ ಕಾಮನು ಬಿಲ್ಲಿಗೆ ಬಾಣ ಹೂಡಿದನು. ಮುನಿಯು ಆ ಸಗ್ಗದ ಮೊಗ್ಗೆಯ ಕಡೆಗೆ ಕಣ್ಣೆತ್ತಿ ನೋಡಿದನು. ಅದೊಂದು ಚೆಲುವಿನ ಚಿಲುಮೆ. ಚಂಡಾಡುವ ಆ ಚಪಲೆಯು ಮುನಿಯು ನೋಡುತ್ತಿರುವಂತೆಯೇ ತನ್ನ ಕೈಯಲ್ಲಿಯ ಕಂದುಕವನ್ನು ಪುಟಿಸುತ್ತ ದೂರ ಓಡಿದಳು. ದಣಿಯದೇ ಚಂಡನ್ನಾಡಿದಳು. ಅವಳ ಚಲುವು ಮುನಿಯ ಚಿತ್ತಸ್ಥೈರ್ಯಕ್ಕೆ ಆಹ್ವಾನವಿತ್ತಿತ್ತು. ಋಷಿಯು ಆ ರಮಣಿ ಇದ್ದಲ್ಲಿ ಹೋದ. ನಡೆದಲ್ಲಿ ನಡೆದ. ಕಾಮನು ತನ್ನ ಐದೂ ಹೂಬಾಣಗಳಿಂದ ಅವನ ಹೃದಯಕ್ಕೆ ಹೊಡೆದ. ಹೃದಯದ ಅನುರಾಗವು ಮುಖದಲ್ಲಿ ಮಂದಹಾಸವಾಗಿ ಮಿನುಗಿತು. ಆ ಗಂಧರ್ವ ಸುಂದರಿಯು ಕುಡಿನೋಟದಿಂದ ಈ ಮುನಿಯೆಡೆಗೆ ಒಮ್ಮೆ ನೋಡಿದಳು. ಲಜ್ಜೆಯು ಅವಳ ಮುಖದಲ್ಲಿ ಹೆಜ್ಜೆ ಇರಿಸಿತು. ಜಾರುವ ಸೆರಗನ್ನು ಅವಳು ಸರಿಪಡಿಸಿದಳು. ಅವಳ ಕೈ ಚಂಡನ್ನು ಪುಟಿಸುತ್ತಿತ್ತು. ಅವಳು ತನ್ನ ಕೇಶಪಾಶದಲ್ಲಿ ಮುಡಿದ ಅರಳು ಮಲ್ಲಿಗೆಗಳು ಆಟದ ರಭಸದಲ್ಲಿ ಉರುಳಿಬೀಳುತ್ತಿದ್ದವು. ಆಗಾಗ ಅವಳು ಮುನಿಯೆಡೆಗೆ ಹೊರಳಿ ನೋಡುತ್ತಿದ್ದಳು. ಆಟದ ರಭಸದಲ್ಲಿ ಅವಳ ಕುಡಿನೋಟಗಳ ಮೈಮಾಟ ಲಲಿತವಿಲಾಸಗಳು ಮುನಿಯ ಮನವನ್ನು ಸೂರೆಗೊಂಡವು. ಇದೇ ಸಮಯದಲ್ಲಿ ಸುಳಿಗಾಳಿ ಬೀಸಿತು. ಅವಳು ಉಟ್ಟ ತಿಳಿಬಟ್ಟೆ ವ್ಯತ್ಯಾಸ ಗೊಂಡಿತು. ಕಾಮನ ಬಾಣ ಮುನಿಹೃದಯದಲ್ಲಿ ಇನ್ನೂ ಆಳವಾಗಿ ನಾಟಿತು. ದೇವದತ್ತ ಮುನಿಯು ಇನ್ನೂ ಅವಳ ಬಳಿ ಸಾರಿದ. ಮುಗ್ಧನಾಗಿ ಆ ಚೆಗರೆ ಗಂಗಳ ಚಲುವೆಯನ್ನು ಮಾತನಾಡಿಸಿದ - ''ಕಲ್ಯಾಣಿ ನೀನು ಯಾರು ? ಎಲ್ಲಿಂದ ಬಂದೆ ? ಈ

ಕಾಡಿನಲ್ಲಿ ಏನು ಮಾಡಬೇಕೆಂದಿರುವೆ? ನೀನು ಯಾರನ್ನು ಕುಡುಕುತ್ತಲಿರುವಿ? ನಮ್ಮಂಥ ಪುರುಷರನ್ನು ನಿನ್ನ ಬಾಹುಪಾಶದಲ್ಲಿ ಕಟ್ಟುವ ಹವಣಿಕೆಯೇ ? ಅದಕ್ಕೆ ನಾವು ಆನಂದದಿಂದ ಸಿದ್ಧರಾಗಿದ್ದೇವೆ ನಾನು ನಿನ್ನ ಅಧೀನನೇ ಆಗಿದ್ದೇನೆ.''

ಮುನಿಯ ಮಾತಿನಲ್ಲಿಯ ಈ ಆತ್ಮನಿವೇದನೆಯನ್ನು ಕೇಳಿ ಆ ಮಾನಿನಿಯ ಹವಳ ತುಟಿಯಲ್ಲಿ ಮಂದಹಾಸವು ಸೂಸಿತು. ಅದರ ಮೇಲಿಂದಲೇ ಅವಳ ಆಶೆಯ ಆಶೆಗಳನ್ನು ತಿಳಿದ ಮುನಿಯು ಅವಳ ಬಲಗೈಯನ್ನು ಹಿಡಿದನು. ಅವಳಲ್ಲಿ ಮೋಹಿತನಾಗಿ ತನ್ನ ತಪಸ್ಸಿಗೆ ತಿಲಾಂಜಲಿಯನ್ನಿತ್ತು ಅವಳೊಡನೆ ಸರಸಕ್ಕೆ ಇಳಿದನು. ಆ ಸ್ವರ್ಗಸುಂದರಿಯೊಡನೆ ದೇವದತ್ತ ಮುನಿಯು ಹಗಲಿರುಳೂ ವಿವಿಧ ಭೋಗಗಳನ್ನು ಅನುಭವಿಸಿದನು. ತಪಃಪ್ರಭಾವದಿಂದ ಅವನಿಗೆ ಬಯಸಿದ ಕಾಮನೆಗಳು ಬೇಡಿದ ಭೋಗಸಾಮಗ್ರಿಗಳು ಇದ್ದಲ್ಲಿಯೇ ಸದ್ಯಃಸಿದ್ಧವಾಗಿರುತಿದ್ದವು.

ಹೀಗೆ ಬಗೆ ಬಗೆಯ ಕಾಮ ಕೇಳೀ ವಿಲಾಸಗಳಲ್ಲಿ ಲಾಲಸನಾದ ಆ ಮುನಿಗೆ ಹಗಲು ಹೊರಳಿದ್ದು ಗೊತ್ತಾಗುತ್ತಿರಲಿಲ್ಲ. ಇರಳು ಉರುಳಿದ್ದು ತಿಳಿಯುತ್ತಿರಲಿಲ್ಲ. ಎಷ್ಟೋ ವರ್ಷಗಳು ಭೋಗಾನುರಾಗಗಳಲ್ಲಿಯೇ ಕಳೆದು ಹೋದ ಬಳಿಕ ಒಂದು ದಿನ ಆ ಮುನಿಯ ಮನದಲ್ಲಿ ಎಚ್ಚರವು ಮೂಡಿತು. ವಿವೇಕವು ಜಾಗ್ರತವಾಯಿತು. ಮಲಗಿ ಎದ್ದವನಂತೆ ಅವನ ಮನಸ್ಸು ನಿದ್ದೆ ತಿಳಿದೆದ್ದು ಪ್ರಬುದ್ಧವಾಗಿ ವೈರಾಗ್ಯವನ್ನು ಪಡೆಯಿತು. ಇಷ್ಟು ದಿನ ಕಾಮಾರ್ತನಾಗಿ ಕಾಲ ಕಳೆದ ಬಗ್ಗೆ ಅವನಿಗೆ ಅತ್ಯಂತ ಪಶ್ಚಾತ್ತಾಪವೂ ಆಯಿತು. ಅವನ ಮುಖದಿಂದ ಅನುಭವದ ಉದ್ಗಾರವು ಇಂತು ಹೊರಟಿತು.

**''ಅಹೋ ಭಗವತೀ ಮಾಯಾ ಯಯಾಹಂ ಭೃಶ ಮೋಹಿತಃ ।**
**ಜಾನನ್ನಪಿ ತಪೋಭ್ರಂಶಂ ಪ್ರಾಪ್ತೋ ದೈವಬಲಾತ್ಕೃತಃ ॥**

**ಅಗ್ನಿಕುಂಡ ಸಮಾ ನಾರೀ ಘೃತ ಕುಂಭ ಸಮಃ ಪುಮಾನ್ ।**
**ಇತಿ ಪ್ರಮಾದೋ ಮೂರ್ಖಾಣಾಂ ವಿಚಾರಾನ್ಮಹದಂತರಂ ॥**

**ಘೃತಕುಂಭೋಽಗ್ನಿಯೋಗೇನ ದ್ರವತೇ ನ ತು ದರ್ಶನಾತ್ ।**
**ಪುಮಾನ್ ಸ್ತ್ರೀದರ್ಶನಾದೇವ ದ್ರವತೇ ಯದ್ವಿಮೋಹಿತಃ ॥**

ಓಹ ! ಭಗವಂತನ ಮಾಯೆಯು ಅಗಾಧವಾಗಿದೆ. ನಾನು ತಿಳಿದು ತಿಳಿದು ಕಾಲು ಜಾರಿದೆ. ನನ್ನ ತಪಸ್ಸು ಹಾಳಾಗಿ ಹೋಗಿದೆ. ಇದೇನು ದೈವೀ ಬಲತ್ಕಾರವೋ ವಿಧಿಯ ಚಮತ್ಕಾರವೋ ? ಹೆಣ್ಣು ಒಂದು ಬೆಂಕಿಯ ಮೊಟ್ಟೆ. ಉರಿಯುವ ಅಗ್ನಿಕುಂಡ. ಗಂಡು ತುಪ್ಪ ತುಂಬಿದಕೊಡ ಎಂದು ಜನರು ಹೇಳುತ್ತಾರೆ. ಇದು ಮೂರ್ಖರ ಮಾತು. ವಿಚಾರ ಮಾಡಿದರೆ ಬಹಳ ಅಂತರವಿದೆ. ತುಪ್ಪದ ಕೊಡವು ಬೆಂಕಿ ತಾಕಿದಾಗಲೆ ಕರಗುತ್ತದೆ. ಬರಿ ದೂರಿಂದ ನೋಡಿದರೆ ಕರಗುವದಿಲ್ಲ. ಆದರೆ ಪುರುಷನು ಮಾತ್ರ ಸ್ತ್ರೀಯನ್ನು ದೂರದಿಂದ ನೋಡಿದರೂ ಸಾಕು. ಚಿತ್ತವು ಚಲಿಸಿ ಮೋಹದಿಂದ ದ್ರವಿಸಿ ಹೋಗುವನು. ಇದರಲ್ಲಿ ಹೆಣ್ಣಿನದು ಏನೂ ತಪ್ಪಿಲ್ಲ. ಸ್ವಯಂ ಗಂಡು ತನ್ನ ಇಂದ್ರಿಯಗಳನ್ನು ಬಿಗಿಹಿಡಿಯದಿದ್ದ ಬಳಿಕ ಇಂಥ ಪ್ರಮಾದಗಳು ಆಗುವದು ಸಹಜವಾಗಿದೆ.'' ಎಂದು

ನುಡಿದು ಆ ದೇವದತ್ತ ಮುನಿಯು ಆ ದೇವಾಂಗನೆಯನ್ನು ಸ್ವರ್ಗಕ್ಕೆ ಕಳಿಸಿಕೊಟ್ಟನು. ಆ ಮುನಿಯು ತನ್ನ ತಪೋನುಷ್ಠಾನಕ್ಕೆ ಅಲ್ಲಿ ವಿಘ್ನಗಳು ಬಹಳ ಬರುತ್ತವೆ. ಎಂದು ಬಗೆದು ಅಲ್ಲಿಂದ ಹೊರಟು ಗಂಡಕೀ ಸಂಗಮದಲ್ಲಿರುವ ಭೃಗುಋಷಿಯ ಆಶ್ರಮಕ್ಕೆ ಬಂದನು. ಅಲ್ಲಿ ಸಂಗಮದಲ್ಲಿ ಸ್ನಾನ ಮಾಡಿ ಪಿತೃದೇವತೆಗಳಿಗೆ ತರ್ಪಣ ಕೊಟ್ಟು ಹರಿಹರದೇವತೆಗಳನ್ನು ಪೂಜಿಸಿ ತನ್ನ ತಪೋನುಷ್ಠಾನಕ್ಕೆ ಯೋಗ್ಯವಾದ ಸ್ಥಾನವನ್ನು ಹುಡುಕಾಡಿದನು. ರಮಣೀಯವಾದ ಭೃಗುಋಷಿಯ ಆಶ್ರಮವನ್ನು ನೋಡಿಕೊಂಡು ಉತ್ತರಕ್ಕೆ ನಡೆದನು. ಗಂಡಕೀನದಿಯ ಪೂರ್ವಭಾಗದಲ್ಲಿರುವ ಏಕಾಂತ ರಮಣೀಯವಾದ ಭೃಗುತುಂಗ ಪರ್ವತವು ತನ್ನ ತಪಶ್ಚರ್ಯೆಗೆ ಯೋಗ್ಯವಾಗಿದೆ ಎಂದು ಅಲ್ಲಿಯೇ ನೆಲೆನಿಂತನು. ಪರಶಿವನನ್ನು ಕಾಣಲು ಉತ್ಕಂಠಿತನಾಗಿ ಘೋರ ತಪಸ್ಸನ್ನು ಮಾಡಿದನು. ಅವನ ಬಹುಕಾಲದ ತಪಸ್ಸಿಗೆ ಮೆಚ್ಚಿ ಶಿವನು ಅವನಿಗೆ ಲಿಂಗರೂಪದಿಂದ ಸಾಕ್ಷಾತ್ಕಾರವನ್ನು ಕರುಣಿಸಿದನು. ಆ ಲಿಂಗದ ಮೇಲೆ ಕೆಳಗೂ ಎಡಬಲಗಳ ಅಕ್ಕಪಕ್ಕಗಳಲ್ಲಿಯೂ ಜಲಧಾರೆಗಳು ಹರಿದು ಸುರಿಯುತ್ತಲಿವೆ. ಪ್ರಸನ್ನನಾದ ಆ ಪರಮೇಶ್ವರನು ಆ ದೇವದತ್ತ ಮುನಿಗೆ ನುಡಿದನು-

''ಮುನಿಯೇ, ಶಿವನಾದ ನನ್ನನ್ನು ನೋಡು. ನನ್ನಲ್ಲಿಯೇ ಶ್ರೀವಿಷ್ಣು ಇರುತ್ತಾನೆಂದು ನೀನು ತಿಳಿದುಕೋ. ನನಗೂ ಅವನಿಗೂ ಅಂತರವಿದೆ ಎಂದು ನೀನು ತಿಳಿಯಬೇಡ. ಈ ಮೊದಲು ನೀನು ನಮ್ಮಿಬ್ಬರನ್ನು ಬಹುದೂರದ ಅಂತರದಿಂದ ನೋಡಿದ್ದರಿಂದ ನಿನಗೆ ಇಷ್ಟೆಲ್ಲ ವಿಘ್ನಗಳು ಒದಗಿ ಬಂದವು. ನಿನ್ನ ತಪಸ್ಸೆಲ್ಲವೂ ಹಾಳಾಯಿತು. ನಮ್ಮಿಬ್ಬರನ್ನು ಏಕೋ ಭಾವದಿಂದ ತಿಳಿದು ಭಜಿಸಿದರೆ ನೀನು ಸಿದ್ಧಿಯನ್ನು ಪಡೆಯುವಿ. ನಿನ್ನ ತಪಃಪ್ರಭಾವದಿಂದ ಲಿಂಗಗಳು ಉದ್ಭೂತವಾದ ಈ ಸ್ಥಳವು ಸಲಿಂಗ ಕ್ಷೇತ್ರವೆಂದು ಪ್ರಸಿದ್ಧವಾಗುವದು. ಇಲ್ಲಿ ಗಂಡಕೀ ನದಿಯಲ್ಲಿ ಸ್ನಾನಮಾಡಿ ನನ್ನ ಲಿಂಗಗಳನ್ನು ಪೂಜೆ ಮಾಡಿದರೆ ಅವನಿಗೆ ಯೋಗ ಯಾಗಗಳ ಫಲವು ದೊರೆಯುತ್ತದೆ.'' ಎಂದು ಹೇಳಿ ಮಹಾ ದೇವರು ಅಲ್ಲಿಯೇ ಅದೃಶ್ಯರಾದರು. ಆ ದೇವದತ್ತ ಮುನಿಯು ಮಹಾದೇವರು ಉಪದೇಶಿಸಿದ ಮಾರ್ಗದಿಂದ ದಿವ್ಯಜ್ಞಾನವನ್ನು ಪಡೆದು ಸಾಯುಜ್ಯ ಪದವಿಯನ್ನು ಹೊಂದಿದನು. ಸ್ವರ್ಗಲೋಕದ ಅಪ್ಸರೆಯಾದ ಪ್ರಮ್ಲೋಚೆಯು ದೇವದತ್ತ ಮುನಿಯೊಡನೆ ಬಹುಕಾಲ ವಿಹರಿಸಿದ ಫಲವಾಗಿ ಗರ್ಭಿಣಿಯಾಗಿದ್ದಳು. ಆಶ್ರಮದ ಸಮೀಪದಲ್ಲಿಯೇ ಒಂದು ಕನ್ಯಾಮಣಿಯನ್ನು ಹೆತ್ತು ಆ ದೇವದತ್ತ ಋಷಿಯ ಪರ್ಣಕುಟೀರದ ಬಳಿಯಲ್ಲಿಯೇ ತನ್ನ ಮಗುವನ್ನು ಮಲಗಿಸಿ ಸ್ವರ್ಗಕ್ಕೆ ನಡೆದಳು. ತನ್ನ ಕೂಸನ್ನು ನೆಲದಲ್ಲಿಯೇ ಬಿಟ್ಟು ಬಂದದ್ದರಿಂದ ಅವಳು ಹೊಸ ಕನ್ಯೆಯಂತೆ ಮಂದಹಾಸ ಮಾಡುತ್ತ ಕೈಕೊಂಡ ಕಾರ್ಯದಲ್ಲಿ ಯಶಸ್ವಿನಿಯಾಗಿ ಸ್ವರ್ಗದಲ್ಲಿ ಮನ್ನಣೆಯನ್ನು ಪಡೆದಳು. ಇತ್ತ ದೇವದತ್ತ ಮುನಿಯ ಆಶ್ರಮ ಸಮೀಪದಲ್ಲಿ ಹುಲ್ಲು ಹಾಸಿನ ಮೇಲೆ ತೊಳೆದ ಮುತ್ತಿನಂತೆ ಕಳೆಕಾಂತಿಗಳಿಂದ ಹೊಳೆಯುವ ಆ ಎಳೆಮಗುವು ತಾಯಿ ತಂದೆಗಳಿಲ್ಲದೆ ತಬ್ಬಲಿಯಾಗಿ ರೋದಿಸತೊಡಗಿತು. ಆಗ ಆ ಕಾಡಿನಲ್ಲಿ ಓಡಾಡುವ ರುರು ಎಂಬ ಹೆಸರಿನ ಜಿಂಕೆಗಳು ಆ ಹೆಣ್ಣು ಶಿಶುವನ್ನು ಬೆಳಿಸಿ ದೊಡ್ಡವಳನ್ನಾಗಿ ಮಾಡಿದವು. ಅದರಿಂದ ಅವಳಿಗೂ ರುರು ಎಂದೇ ಹೆಸರು ಬಂದಿತು. ಅವಳು ತನ್ನ ತಂದೆಯ ಆಶ್ರಮದಲ್ಲಿಯೇ ಬೆಳೆದು ದೊಡ್ಡವಳಾದಳು. ಅವಳು ಪ್ರಾಯಪ್ರಬುದ್ಧಳಾದಾಗ ತನ್ನ

ತಾಯಿಯ ಅಪ್ಸರ ಸೌಂದರ್ಯವು ಹರೆಯದ ಹೂವಾಗಿ ಅವಳ ಅಂಗಾಂಗಗಳಲ್ಲಿ ಅರಳಿತು. ಅನೇಕ ರಾಜಕುಮಾರರೂ ಋಷಿಕುಮಾರರೂ ಅವಳನ್ನು ವರಿಸಬೇಕೆಂದು ಅರಿಸಿಕೊಂಡು ಬಂದರು. ಆದರೆ ಈ ಋಷಿಕುಮಾರಿಯಾದ ರುರುವಿಗೆ ಆ ಯಾವ ವರಗಳೂ ಮನಸ್ಸಿಗೆ ಬರಲಿಲ್ಲ. ಅವಳಿಗೆ ವಿಷಯ ಸುಖದೆಡೆಗೆ ಬಾಲ್ಯದಿಂದಲೂ ಒಲುವು ಇರಲಿಲ್ಲ. ತಾಯಿಯ ಚಲುವಿಕೆಯ ಜೊತೆಗೆ ತಂದೆಯ ತಪೋನಿಷ್ಠೆಯೂ ಅವಳಲ್ಲಿ ಜನ್ಮ ಜಾತ ಗುಣವಾಗಿ ಬೆಳೆದು ಬಂದಿತ್ತು. ಅವಳು ಯಾರನ್ನೂ ಮದುವೆಯಾಗುವ ವಿಚಾರ ಮಾಡದೆ ಯಾವಜ್ಜನ್ಮ ತಪೋನುಷ್ಠಾನವನ್ನು ಮಾಡಬೇಕೆಂದು ನಿರ್ಧರಿಸಿದಳು.

ತನ್ನ ದೃಢ ನಿರ್ಧಾರದಂತೆ ಆ ರುರು ಕನ್ನಿಕೆಯು ಅದೇ ತನ್ನ ತಂದೆಯ ಆಶ್ರಮದಲ್ಲಿ ಘೋರವಾದ ತಪಸ್ಸನ್ನು ಪ್ರಾರಂಭಿಸಿದಳು. ಮನಸ್ಸಿನಲ್ಲಿ ನಿತ್ಯ ನಿರಂತರವೂ ಲಕ್ಷ್ಮೀಪತಿಯಾದ ನಾರಾಯಣನನ್ನು ಭಕ್ತಿಯಿಂದ ಧ್ಯಾನಮಾಡತೊಡಗಿದಳು. ಮೊದಲನೇ ತಿಂಗಳಲ್ಲಿ ಒಂದು ದಿನ ಬಿಟ್ಟು ಒಂದು ದಿನ, ಎರಡನೇ ತಿಂಗಳು ಮೂರು ದಿನಕ್ಕೊಮ್ಮೆ, ಮೂರನೇ ತಿಂಗಳು ಐದು ದಿನಕ್ಕೊಮ್ಮೆ, ನಾಲ್ಕನೇ ತಿಂಗಳು ಏಳು ದಿನಕ್ಕೊಮ್ಮೆ, ಐದನೇ ತಿಂಗಳು ಒಂಭತ್ತು ದಿನಕ್ಕೊಮ್ಮೆ, ಆರನೇ ತಿಂಗಳು ಹದಿನೈದು ದಿನಕ್ಕೊಮ್ಮೆ, ಏಳನೇ ತಿಂಗಳು ಮುವತ್ತು ದಿನಕ್ಕೊಮ್ಮೆ, ಎಲೆ ಚೂರುಗಳನ್ನು ತಿಂದು ಪಾರಣೆ ಮಾಡುತ್ತಿದ್ದಳು. ಮುಂದೆ ಎಂಟನೇ ತಿಂಗಳಲ್ಲಿ ಯಾವ ಆಹಾರವನ್ನೂ ತೆಗೆದುಕೊಳ್ಳದೇ ಬರೇ ಗಾಳಿಯನ್ನು ತಿಂದು ತಪಸ್ಸನ್ನು ಮಾಡತೊಡಗಿದಳು. ಇದೇ ರೀತಿಯಾಗಿ ಏಕಾಗ್ರ ಮನಸ್ಕಳಾಗಿ ನಿಂತುಕೊಂಡು ತಪಃ ಸಮಾಧಿಯಿಂದ ಶ್ರೀಹರಿಯನ್ನು ಆರಾಧಿಸಿದಳು.

ಅವಳ ತಪಸ್ಸನ್ನು ಕಂಡು ನನಗೂ ಕೂಡ ಆಶ್ಚರ್ಯವಾಯಿತು. ನಾನು ಅವಳಿಗೆ ಪ್ರತ್ಯಕ್ಷನಾದೆ. ಎಲ್ಲ ಇಂದ್ರಿಯಗಳನ್ನು ನಿರೋಧಿಸಿದ ಆ ರುರು ತಪಸ್ವಿನಿಯು ಎದುರು ಬಂದು ನಿಂತ ನನ್ನನ್ನು ನೋಡಲಿಲ್ಲ. ಆಗ ಹೊರಗೆ ನಿಂತ ನಾನು ಅವಳ ಹೃದಯದಲ್ಲಿ ಪ್ರವೇಶಿಸಿ ಅವಳ ಕಣ್ಣುಗಳಿಗೆ ಗೋಚರನಾದೆನು. ಅವಳ ಇಂದ್ರಿಯಗಳಲ್ಲಿ (ಹೃಷೀಕ) ಪ್ರವೇಶಿಸಿದ್ದರಿಂದ ನನಗೆ ಹೃಷೀಕೇಶ ಎಂದು ಹೆಸರು ಬಂದಿತು. ಹೊರಗೆ ನಿಂತ ನನ್ನನ್ನು ಅವಳು ಕಾಣದಾದಾಗ ಅವಳ ಹೃದಯ ಗೋಚರನಾಗಿ ಅವಳ ಅಂತರಂಗದಲ್ಲಿದ್ದ ನನ್ನ ಉಪಾಸ್ಯಮೂರ್ತಿಯನ್ನು ಮರೆಮಾಡಿದೆನು. ಅದರಿಂದ ಕೂಡಲೇ ಅವಳು ಕಣ್ಣುಬಿಟ್ಟು ಹೊರಗೆ ನೋಡಿದಳು. ಕಣ್ಣೆದುರು ಸಾಕ್ಷಾತ್ ನಾನೇ ನಿಂತುಕೊಂಡಿದ್ದೆನು. ಕೈಜೋಡಿಸಿ ಅವಳು ನನಗೆ ನಮಸ್ಕಾರ ಮಾಡಿದಳು. ಅವಳ ಕೊರಳು ಗದ್ಗದಿಸಿತ್ತು. ಕಂಬನಿದುಂಬಿ ಕಣ್ಣಿನಿಂದ ಹರಿಯುತ್ತಿತ್ತು. ಮೈಯೆಲ್ಲ ಹಿಗ್ಗಿನ ಮುಳ್ಳು. ಕೈ ಕದಂಬದ ಮೊಗ್ಗೆಯಂತೆ ನನ್ನನ್ನು ವಂದಿಸುತ್ತಿತ್ತು. ಆ ಅಂಗನೆಯನ್ನು ಕುರಿತು ನಾನು ನುಡಿದೆ - ''ಮಂಗಳಾಂಗಿ, ನಿನ್ನ ತಪಸ್ಸಿಗೆ ನಾನು ಮೆಚ್ಚಿದ್ದೇನೆ. ಬಯಸಿದ ವರವನ್ನು ಕೇಳು.'' ಪ್ರಭುವಿನ ವಚನವನ್ನು ಕೇಳಿ ಸಂತುಷ್ಟಳಾದ ಆ ಋಷಿರಮಣಿಯು ನನಗೆ ನಮಿಸಿ ನುಡಿದಳು. -

ಸ್ವಾಮಿ, ನೀನು ನಿಜವಾಗಿಯೂ ಪ್ರೀತನಾಗಿದ್ದರೆ ನೀನು ಇಲ್ಲಿಯೇ ನೆಲೆನಿಲ್ಲು. ನನ್ನನ್ನು ಉದ್ಧರಿಸು. ಈ ಕ್ಷೇತ್ರವು ನನ್ನ ಹೆಸರಿನಿಂದಲೇ ಪ್ರಸಿದ್ಧವಾಗಲಿ.'' ಋಷಿ ಶ್ರೇಷ್ಠಳಾದ ಆ ರುರು ನಾರಿಯ ಬಿನ್ನಹವನ್ನು ಮನ್ನಿಸಿ ನಾನು ಅವಳಿಗೆ ಹೇಳಿದೆ.-

''ದೇವಿ, ನಿನ್ನ ದೇಹವು ಪರಮ ಪವಿತ್ರವಾದ ತೀರ್ಥವಾಗಲಿ. ಈ ಕ್ಷೇತ್ರವು ನಿನ್ನ ಹೆಸರಿನಿಂದಲೇ ಪ್ರಸಿದ್ಧವಾಗಲಿ. ಈ ಕ್ಷೇತ್ರದಲ್ಲಿ ಮೂರು ದಿನ ಇದ್ದು ಉಪವಾಸ ಮಾಡಿ ಈ ನಿನ್ನ ತೀರ್ಥದಲ್ಲಿ ಸ್ನಾನ ಮಾಡುವ ಮನುಷ್ಯನು ಪವಿತ್ರನಾಗಿ ನನ್ನ ಸಾಕ್ಷಾತ್ಕಾರವನ್ನು ಪಡೆಯುವನು. ಅವನಲ್ಲಿ ಬ್ರಹ್ಮಹತ್ಯಾದಿ ಮಹಾ ಪಾಪಗಳಿದ್ದರೂ ಪರಿಹಾರವಾಗುವವು.'' ಹೀಗೆ ವರವನ್ನು ಕೊಟ್ಟು ನಾನು ಅದೃಶ್ಯನಾಗಿ ಅದೇ ಕ್ಷೇತ್ರದಲ್ಲಿಯೇ ನಿಂತುಕೊಂಡೆನು. ಋಷಿ ಮಹಿಳೆಯಾದ ಆ ರುರು ಯೋಗಿನಿಯು ನನ್ನ ವರದಂತೆ ಪಾವನ ತೀರ್ಥಳಾಗಿ ಲೋಕೋದ್ಧಾರ ಕಾರ್ಯವನ್ನು ಮಾಡುತ್ತಲಿದ್ದಾಳೆ. ಅಂದಿನಿಂದ ಈ ರುರು ಕ್ಷೇತ್ರವು ಅವಳ ಹೆಸರಿನಿಂದಲೇ ಪ್ರಸಿದ್ಧವಾಗಿದೆ.

## ಗೋನಿಷ್ಕ್ರಮಣ ಕ್ಷೇತ್ರದ ಮಹಿಮೆ

**ಭೂದೇವಿ -** ಭಗವನ್ ರುರುಕ್ಷೇತ್ರದಂತೆ ಬೇರೆ ಪುಣ್ಯಕ್ಷೇತ್ರಗಳ ಮಹಿಮೆಯನ್ನು ಕೇಳಬೇಕೆಂಬ ಕುತೂಹಲವು ನನ್ನಲ್ಲಿ ಉಂಟಾಗಿದೆ. ನನಗೆ ತಿಳಿಸು. ಮನವನ್ನು ತಣಿಸು.

**ವರಾಹ-** ಭೂಮಿದೇವಿ, ಇದೇ ಹಿಮಾಚಲದ ಶೃಂಗಾಂಗಣದಲ್ಲಿ 'ಗೋನಿಷ್ಕ್ರಮಣ' ಎಂಬ ಒಂದು ಕ್ಷೇತ್ರವಿರುತ್ತದೆ. ಕಾಮಧೇನುವಿನ ಮಕ್ಕಳಾದ ಸುರಭಿ ಮೊದಲಾದ ಗೋವುಗಳನ್ನು ಹಿಂದೆ ನಾನು ಅಲ್ಲಿ ಇಳಿಸಿದ್ದೆನು. ಪೂರ್ವಕಾಲದಲ್ಲಿ ಓರ್ವ ಪ್ರಜಾಪತಿ ಎಂಬ ಮಹರ್ಷಿಯು ಎಪ್ಪತ್ತು ಕಲ್ಪಗಳ ಕಾಲ ಉಗ್ರವಾದ ತಪಸ್ಸನ್ನು ಮಾಡಿದನು. ಅವನ ಈ ಘೋರವಾದ ತಪಸ್ಸನ್ನು ನೋಡಿ ಜನರಿಗೆಲ್ಲ ಕೌತುಕವಾಯಿತು. ಯಾವದೇ ಅಪೇಕ್ಷೆ ಇಲ್ಲದ ಈ ನಿಸ್ಪೃಹನಾದ ಮುನಿಯು ಏತಕ್ಕಾಗಿ ತಪಸ್ಸು ಮಾಡುತ್ತಿದ್ದಾನೆ ? ಎಂದು. ಬಹುಕಾಲದ ಬಳಿಕ ಒಂದು ದಿನ ಮಹಾದೇವನು ಆ ಔರ್ವಮುನಿಯ ಆಶ್ರಮಕ್ಕೆ ಬಂದನು. ಆಗ ಮುನಿಯು ತನ್ನ ದೇವಾತಾರ್ಚನೆಗೆ ಕಮಲಗಳನ್ನು ತರಲು ಗಂಗಾದ್ವಾರಕ್ಕೆ ಹೋಗಿದ್ದನು. ಅದನ್ನು ಕಂಡು ಎಲ್ಲ ತಪಸ್ವಿಗಳೂ ಅಲ್ಲಿಗೆ ಬಂದರು. ಹಣ್ಣು, ಹೂ, ಕಾಯಿಗಳಿಂದ ತುಂಬಿ ತೊನೆದಾಡುವ ಆ ಶಾಂತ ಸುಂದರವಾದ ಆಶ್ರಮವು ಮಹಾದೇವರ ಅತ್ಯಂತ ಉಗ್ರವಾದ ತೇಜಸ್ಸಿನಿಂದ ಸುಟ್ಟುಬೂದಿಯಾಯಿತು. ಹೀಗೆ ಆಶ್ರಮವನ್ನು ಸುಟ್ಟು ಶಿವನು ಕೈಲಾಸಕ್ಕೆ ತೆರಳಿದ ಬಳಿಕ ಹೂವಿನಬುಟ್ಟಿಯನ್ನು ಹೊತ್ತುಕೊಂಡು ಔರ್ವಮುನಿಯು ತನ್ನ ಆಶ್ರಮಕ್ಕೆ ಬಂದನು. ಬರುವಷ್ಟರಲ್ಲಿ ಅವನ ಮನೋಹರವಾದ ಆಶ್ರಮವು ದಗ್ಧವಾಗಿ ಹೋಗಿದ್ದಿತು. ಅದನ್ನು ಕಂಡು ಅತ್ಯಂತ ಕ್ರುದ್ಧನಾದ ಆ ಔರ್ವಮುನಿಯು ಕಂಬನಿದುಂಬಿ ಶಾಪವಿತ್ತನು. '' ಹೂ, ಹಣ್ಣು, ಹಸಿರು ಕುಸಿರುಗಳಿಂದ ಸುಂದರವಾದ ಈ ನನ್ನ ಆಶ್ರಮವನ್ನು ಸುಟ್ಟು ಹಾಕಿದವನು ದುಃಖದಿಂದ ಸಂತಪ್ತನಾಗಿ ಎಲ್ಲ ಲೋಕಗಳಲ್ಲಿ ಅಂಡಲೆಯಲಿ.'' ಇದರಿಂದ ಮಹಾದೇವರ ಮೈಯಲ್ಲಿ ದಾಹ ಸಂತಾಪವು ಕಾಣಿಸಿಕೊಂಡಿತು. ಆ ಮೈಯುರಿಯನ್ನು ತಾಳಲಾರದೆ ಮಹಾದೇವನು ಗೌರಿಗೆ ಹೇಳಿದನು -

''ಪಾರ್ವತಿ, ಔರ್ವಮುನಿಯು ಭೀಕರವಾದ ತಪಸ್ಸನ್ನು ಕೈಕೊಂಡಾಗ ಜಗತ್ತೆಲ್ಲವೂ ಅವನ ತಪೋಜ್ವಾಲೆಗಳಿಂದ ಸುಡತೊಡಗಿತು. ಅವನು ಏನನ್ನೂ ಬಯಸುತ್ತಿರಲಿಲ್ಲ. ನಿಷ್ಕಾಮನಾದ ಅವನಿಗೆ ಏನನ್ನಾದರೂ ಕೊಟ್ಟು ಸಮಾಧಾನ ಪಡಿಸುವಂತಿರಲಿಲ್ಲ.

ನಿಸ್ಪೃಹನಾದ ಅವನು ಹಾಗೇ ತನ್ನ ತಪಸ್ಸನ್ನು ಮುಂದುವರಿಸಿದಾಗ ಸಂಭ್ರಾಂತರಾದ ದೇವತೆಗಳು ನನ್ನ ಬಳಿಗೆ ಬಂದರು. ದೇವತೆಗಳ ಆ ತ್ರಾಸವನ್ನೂ ಎಲ್ಲ ಲೋಕಗಳ ತಾಪವನ್ನೂ ಕಂಡು ನನಗೆ ಆ ಔರ್ವಮುನಿಯ ಮೇಲೆ ಕೋಪ ಬಂದಿತು. ಆಗ ನಾನು ಅವನ ಆಶ್ರಮಕ್ಕೆ ಹೋಗಿ ಸಿಟ್ಟಿನಿಂದ ಕಣ್ತೆಗೆದು ನೋಡಿದ ಮೂಲಕವಾಗಿ ಅವನ ಆಶ್ರಮ ವೆಲ್ಲವೂ ಅರೆಚಣದಲ್ಲಿ ಉರಿದು ಬೂದಿಯಾಗಿ ಬಿದ್ದಿತು. ಆಗ ಹೂ ತರಲು ಹೊರಗೆ ಹೋದ ಆ ಮುನಿಯು ಮರಳಿ ಮನೆಗೆ ಬಂದು ಭಸ್ಮೀಭೂತವಾದ ತನ್ನ ಆಶ್ರಮವನ್ನು ಕಂಡು ನನ್ನನ್ನು ಶಪಿಸಿದನು. ಅದರಿಂದ ನನಗೆ ಈಗ ಮೈತುಂಬ ಉರಿ ಸಂಕಟವು ಹುಟ್ಟಿ ನನ್ನನ್ನು ಸುಡುತ್ತಲಿದೆ. ಈ ದೇಹ ದಾಹದಿಂದ ನನಗೆ ಏನೂ ಮಾಡಲು ಬಾರದಂತಾಗಿದೆ.'' ಮಹಾದೇವರ ಈ ದುಃಖ ಪೂರ್ಣವಾದ ಮಾತನ್ನು ಕೇಳಿ ಪಾರ್ವತಿಯು ''ನಾವು ಶ್ರೀ ಮನ್ನಾರಾಯಣನ ಬಳಿಗೆ ಹೋಗೋಣ. ಅವನ ಮಾತಿನಿಂದಲೇ ನಮ್ಮ ಸಂಕಟ ಪರಿಹಾರವಾಗಿ ಸುಖಪ್ರಾಪ್ತಿಯೂ ಆಗುವದು.'' ಎಂದು ಶಿವನಿಗೆ ಸಲಹೆಯನ್ನು ನೀಡಿದಳು. ಆಗ ಶಿವಪಾರ್ವತಿಯರಿಬ್ಬರೂ ನಾರಾಯಣ ರೂಪಿಯಾದ ನನ್ನ ಬಳಿಗೆ ಬಂದರು. ನಾನು ಅವರೆಲ್ಲರನ್ನೂ ಕರೆದುಕೊಂಡು ಔರ್ವಮುನಿಯ ಬಳಿಗೆ ಹೋದೆನು. ಅವನಿಗೆ ಬಿನ್ನವಿಸಿದೆನು.- ''ಮಹಾರಾಯಾ, ಈ ಮಹಾದೇವರ ಶಾಪವನ್ನು ಹೋಗಲಾಡಿಸು. ಅದರಿಂದ ನಮ್ಮ ದೇಹದಲ್ಲಿಯೂ ಸಂತಾಪವೂ ಉಂಟಾಗಿದೆ. ಅದರಿಂದ ಈ ಶಾಪವನ್ನು ಕೂಡಲೇ ನಿವಾರಿಸು.'' ಅದನ್ನು ಕೇಳಿ ಔರ್ವಮುನಿಯು ಹೇಳಿದನು.-

''ನಾನು ಈವರೆಗೆ ಎಂದೂ ಸುಳ್ಳು ಹೇಳಿಲ್ಲ. ಈಗಲೂ ನನ್ನ ಮಾತು ಸುಳ್ಳಾಗಲಾರದು. ಆದರೂ ನೀವು ಕಾಮಧೇನುವಿನ ಸಂತಾನ ಭೂತವಾದ ಹಸುಗಳನ್ನು ಇಲ್ಲಿಗೆ ಕರೆತಂದು ಅವುಗಳ ಹಾಲಿನಿಂದ ರುದ್ರದೇವರಿಗೆ ಸ್ನಾನವನ್ನು ಮಾಡಿಸಿರಿ. ಆ ದಿವ್ಯಹಸುಗಳ ಹಾಲಿನ ಸ್ನಾನದಿಂದ ಮಹಾದೇವನ ಶಾಪತಾಪಗಳೆರಡೂ ನಿವಾರಣೆ ಹೊಂದುವವು.'' ಆ ಔರ್ವಮುನಿಯ ಸೂಚನೆಯಂತೆ ನಾನು ಕಾಮಧೇನು ಸಂತತಿಯ ಎಪ್ಪತ್ತೇಳು ಹಸುಗಳನ್ನು ಅಲ್ಲಿಗೆ ಬರಮಾಡಿದೆನು. ಅವುಗಳ ಹಾಲಿನಿಂದ ಮಹಾದೇವನನ್ನು ಮೊದಲು ಮಾಡಿ ನಾವೆಲ್ಲರೂ ಸ್ನಾನ ಮಾಡಿದೆವು. ಆ ಕ್ಷೀರಾಭಿಷೇಕದಿಂದ ಶಿವನ ಅಂತಃಸಂತಾಪವು ಸಂಪೂರ್ಣಶಾಂತನಾಗಿ ಅವನು ಮೊದಲಿನಂತೆ ಆನಂದದಿಂದ ಇರತೊಡಗಿದನು. ಈ ಕಾಮಧೇನು ಹಸುವಿನ ಹೊಸ ಹಸುಗಳ ಹಾಲು ಮಡುವು ಗಟ್ಟಿ ರೂಪಿತವಾದ ತೀರ್ಥಕ್ಕೆ 'ಗೋ ನಿಷ್ಕ್ರಮ' ಎಂದು ಹೆಸರು ಬಂದಿದೆ. ಅಲ್ಲಿ ಒಂದು ರಾತ್ರಿ ಇದ್ದು ಸ್ನಾನ ಮಾಡುವವನು ಗೋಲೋಕವನ್ನು ಪಡೆದು ಆನಂದವನ್ನು ಹೊಂದುವನು. ಇದೇ ರೀತಿಯಾಗಿ ಮಾಲವಟಿ, ಪಂಚಪದ, ತೀರ್ಥಕುಂಡ, ಬ್ರಹ್ಮಪದ, ವಿಷ್ಣು ಸರೋವರ ಮುಂತಾದ ಗೋ ನಿಷ್ಕ್ರಮಣ ಕ್ಷೇತ್ರದ ಸುತ್ತಮುತ್ತಲಿನ ಪರಿಸರ ಪ್ರದೇಶದಲ್ಲಿ ಪಾವನ ತೀರ್ಥ ಕ್ಷೇತ್ರಗಳಲ್ಲಿ ಉಪವಾಸ ಮಾಡಿ ಸ್ನಾನಮಾಡುವವರಿಗೆ ಸರ್ವಪಾಪ ಪರಿಹಾರವಾಗಿ ಬ್ರಹ್ಮಲೋಕ ವಿಷ್ಣುಲೋಕ ಮುಂತಾದ ದಿವ್ಯಗತಿಯು ಪ್ರಾಪ್ತವಾಗುವದು. ಪರಮ ಪವಿತ್ರವಾದ ಐದು ಯೋಜನ ಸುತ್ತಳತೆಯುಳ್ಳ ಈ ಗೋನಿಷ್ಕ್ರಮಣ ಕ್ಷೇತ್ರದಲ್ಲಿ ನಾನು ಪೂರ್ವಾಭಿಮುಖನಾಗಿ

ನಿಂತುಕೊಂಡಿದ್ದೇನೆ. ನನ್ನ ಹಿಂದೆಯೇ ಗಂಗಾಪ್ರವಾಹವು ಹರಿಯುತ್ತಾ ಇದೆ. ಗಂಗೆ ಹಾಗೂ ಗೋವಿಂದರ ಸನ್ನಿಧಾನದಿಂದ ಈ ಆಶ್ರಮವು ಎಲ್ಲ ವಿಧವಾದ ಪುಣ್ಯಕರ್ಮಗಳನ್ನು ಮಾಡಲು ಧರ್ಮ ಕೇಂದ್ರದಂತಿರುತ್ತದೆ.

## ಸ್ತುತಸ್ವಾಮಿ ಮಾಹಾತ್ಮ್ಯೆ

**ಭೂದೇವಿ** - ಜಗನ್ನಾಥ, ಈ ಗೋನಿಷ್ಕ್ರಮಣ ಕ್ಷೇತ್ರಕ್ಕಿಂತ ಅತೀ ರಹಸ್ಯವಾದ ಬೇರೆ ಪುಣ್ಯ ಕ್ಷೇತ್ರವು ಇದ್ದರೆ ದಯಮಾಡಿ ನನಗೆ ಹೇಳು.

**ವರಾಹ** - ಸ್ತುತಸ್ವಾಮಿಕ್ಷೇತ್ರದ ಮಹಿಮೆಯನ್ನು ಹೇಳುತ್ತೇನು ಕೇಳು. ದ್ವಾಪರ ಯುಗದಲ್ಲಿ ದೇವಕೀ ವಸುದೇವರ ಹೊಟ್ಟೆಯಲ್ಲಿ ಹುಟ್ಟಿ ವಾಸುದೇವನೆಂದು ಪ್ರಖ್ಯಾತನಾದ ನನಗೆ ಐದು ಜನ ಮಹಾ ವಿದ್ವಾಂಸರಾದ ಋಷಿಗಳು ಶಿಷ್ಯರಾಗುವರು. ಶಾಂಡಿಲ್ಯ, ಜಾಜಲಿ, ಕಪಿಲ, ಉಪಸಾಯಕ, ಭೃಗು ಎಂಬ ಹೆಸರಿನ ಆ ಐವರು ನನ್ನನ್ನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣ ಮುಂತಾದ ರೂಪಗಳಿಂದ ಪ್ರಸಿದ್ಧಿಗೊಳಿಸುವರು. ನಿರಂತರವಾಗಿ ನನ್ನನ್ನು ಪೂಜಿಸುವ ಅವರಿಗೆ ನಿಮಗೆ ಬೇಕಾದ ವರವನ್ನು ಕೇಳಿರಿ ಎಂದು ನಾನು ಹೇಳುವೆನು. ಆಗ ಆ ಮುನಿಗಳು ನನಗೆ ಧರ್ಮೋಪದೇಶವನ್ನು ಮಾಡಲು ಕೇಳಿಕೊಳ್ಳುವರು. ನಾನು ಆ ಮುನಿಗಳಿಗೆ ಉಪದೇಶಿಸುವೆನು. ಆ ನನ್ನ ಉಪದೇಶವೇ 'ವರಾಹ ಶಾಸ್ತ್ರ' ಎಂದು ಪ್ರಸಿದ್ಧವಾಗುವದು. ಅದು ಸರ್ವ ಭಾಗವತ ಪ್ರಿಯವಾಗಲಿ ಎಂದು ಅವರು ನನ್ನನ್ನು ಕೇಳಿಕೊಳ್ಳುವರು. ಅದಕ್ಕೆ ನಾನು 'ತಥಾಸ್ತು' ಎಂದು ಹೇಳಿದಬಳಿಕ ಆ ಐವರೂ ಮುನಿಗಳು ಆ ವರಾಹ ಶಾಸ್ತ್ರವನ್ನು ಪರಮ ಪ್ರಮಾಣವೆಂದು ನಂಬಿ ಅದರಂತೆ ನಡೆದು ಪರಮ ಸಿದ್ಧಿಯನ್ನು ಪಡೆಯುವರು.

ಸರ್ವಶಾಸ್ತ್ರಗಳಲ್ಲಿ ಅತ್ಯಂತ ಶ್ರೇಷ್ಠವಾದ ಆ ನನ್ನ ವರಾಹ ಶಾಸ್ತ್ರವನ್ನು ತಿಳಿದವರಲ್ಲಿ ಕೆಲವರು ಜ್ಞಾನಯೋಗಿಗಳಾಗಿಯೂ ಹಲವರು ಕರ್ಮಯೋಗಿಗಳಾಗಿಯೂ ಕೆಲವರು ತ್ಯಾಗಿಗಳಾಗಿಯೂ, ದಾನಿಗಳಾಗಿಯೂ, ಯೋಗಿಗಳಾಗಿಯೂ ನನ್ನನ್ನು ಸಾಕ್ಷಾತ್ಕರಿಸಿ ಕೊಂಡು ಸಂಸಾರ ಸಾಗರವನ್ನು ದಾಟುವರು. ಮಾತ್ಸರ್ಯ ಗ್ರಸ್ತರಾಗಿ ಯಾರು ನನ್ನ ಶಿಷ್ಯರಲ್ಲಿಯೂ, ನನ್ನ ಶಾಸ್ತ್ರದಲ್ಲಿಯೂ ದೋಷಾರೋಪವನ್ನು ಮಾಡುವರೋ ಅವರು ಸರ್ವ ನಾಶವನ್ನು ಹೊಂದುತ್ತಾರೆ. ಮಾತ್ಸರ್ಯವು ಬಹಳ ದೊಡ್ಡ ದೋಷ. ಘೋರ ಪಾತಕ. ಆ ದೋಷ ಒಂದಿದ್ದರೆ ಎಷ್ಟು ಶಾಸ್ತ್ರಗಳನ್ನು ಅರಿತರೂ ಮಾನವನಿಗೆ ಅಧೋಗತಿಯು ತಪ್ಪಿದ್ದಲ್ಲ. ಎಂಥ ಜ್ಞಾನಿಯೇ ಇರಲಿ, ದಾನಿಯೇ ಇರಲಿ, ತಪಸ್ವಿಯೇ ಇರಲಿ, ಅಸೂಯೆಯು ಒಂದಿದ್ದರೆ ಅವರು ಎಂದೂ ನನ್ನನ್ನು ಕಾಣಲಾರರು. ಆದುದರಿಂದ ನನ್ನ ಶಾಸ್ತ್ರವನ್ನು ಅನುಷ್ಠಾನದಲ್ಲಿ ತರಬೇಕೆಂದು ಬಯಸುವ ಮಾನವರು ಧರ್ಮ ಘಾತಕವಾದ ಅಸೂಯೆಯನ್ನು ಎಂದೂ ಮಾಡಬಾರದು. ಎಂಥೆಂಥ ಪಂಡಿತರೂ ಕೂಡ ಈ ಒಂದು ಮಾತ್ಸರ್ಯ ದೋಷದಿಂದ ಸತ್ಯಾನಾಶವನ್ನೇ ಹೊಂದಿದ್ದಾರೆ. ಸರ್ವ ಭಾಗವತ ಪ್ರಿಯವಾದ ಈ ಶಾಸ್ತ್ರವನ್ನು ನಾನು ವರಾಹ ರೂಪವನ್ನು ಧರಿಸಿ ವಿಧಿಪೂರ್ವಕವಾಗಿ ನಿರ್ಮಿಸಿ ಪ್ರಕಟಗೊಳಿಸಿದ್ದೇನೆ. ಭಾಗ್ಯವತಿಯಾದ ಭೂಮಿದೇವಿ, ಈ ಭೂತಗಿರಿಯಲ್ಲಿ ನನ್ನ ಉಕ್ಕಿನ ಪ್ರತಿಮೆಯು ಇರುತ್ತದೆ. ಈ ಸ್ಥಳಕ್ಕೆ ಮಣಿಪೂರಗಿರಿ ಎಂದು ಹೆಸರು

ಇರುವದು. ಗುರುವಿನ ದಯೆಯನ್ನೂ, ನನ್ನ ಪ್ರಸಾದವನ್ನೂ ಹೊಂದಿದ್ದ ಭಕ್ತರು ನನ್ನ ದರುಶನವನ್ನು ಮತ್ತು ಮೂರ್ತಿ ಸ್ಪರ್ಶವನ್ನು ಪಡೆದು ಪೂಜಿಸಿ ತಮ್ಮ ಪ್ರಾಚೀನಾಚೀರ್ಣವಾದ ಪಾಪ ಪಟಲವನ್ನೆಲ್ಲ ಪರಿಹರಿಸಿಕೊಂಡು ಪರಮಗತಿಯನ್ನು ಹೊಂದುವರು. ಸೌಭಾಗ್ಯವತಿಯಾದ ವಸುಂಧರೆಯೇ, ಸ್ತುತಸ್ವಾಮಿ ಕ್ಷೇತ್ರದಲ್ಲಿ ಉತ್ತರ ದಿಕ್ಕಿನಲ್ಲಿ ಇರುವ ಪಂಚಾರ್ಯ ಕ್ಷೇತ್ರದಲ್ಲಿಯೂ ಮತ್ತು ಅದೇ ಕ್ಷೇತ್ರದ ನನ್ನ ಬಲಬದಿಯಲ್ಲಿರುವ 'ಭೃಗುಕುಂಡ' ಕ್ಷೇತ್ರದಲ್ಲಿಯೂ ಅದರಂತೆ ಅಲ್ಲಿಯೇ ಸಮೀಪದಲ್ಲಿರುವ 'ಮಣಿಕುಂಡತೀರ್ಥ', 'ಸುಗುಹ್ಯತೀರ್ಥ', 'ಧೂತಪಾಪತೀರ್ಥ', 'ಸರ್ವೇಷ್ಟಾರ್ಥ ತೀರ್ಥ' ಮುಂತಾದ ಪವಿತ್ರ ತೀರ್ಥಗಳಲ್ಲಿ ಉಪವಾಸ ಮಾಡಿ ಸ್ನಾನದೇವತಾರ್ಚನೆ ಮುಂತಾದ ಧರ್ಮ ಕಾರ್ಯಗಳನ್ನು ಮಾಡುವವರು ಪರಮ ದುರ್ಲಭವಾದ ದಿವ್ಯ ಸದ್ಗತಿಯನ್ನು ಹೊಂದುವರು ಈ ತೀರ್ಥಗಳಲ್ಲಿ ಕೊನೆಗಾಲದಲ್ಲಿ ದೇಹತ್ಯಾಗ ಮಾಡಿದವರು ನನ್ನ ಲೋಕವನ್ನು ಸೇರುವರು.

**ಭೂದೇವಿ :-** ದೇವಾ, ನಿನಗೆ ಸ್ತುತಸ್ವಾಮಿ ಎಂದು ಹೆಸರು ಏಕೆ ಬಂದಿತು? ಈ ನಿನ್ನ ಶುಭನಾಮ ನಿರ್ವಚನವನ್ನು ಮತ್ತು ಅಲ್ಲಿರುವ ಪವಿತ್ರಸ್ಥಾನಗಳನ್ನೂ ನನಗೆ ನಿರೂಪಿಸು.

**ವರಾಹ :-** ಕ್ಷಮಾದೇವಿ, ದೇವತೆಗಳ ಸುಖದ ದಾರಿಯಲ್ಲಿಯ ಮುಳ್ಳುಗಳಂತಿದ್ದ ದೈತ್ಯರನ್ನೆಲ್ಲ ಕೊಂದ ಬಳಿಕ ದ್ವಾಪರಯುಗವು ಪ್ರಾಪ್ತವಾದಾಗ ನಾನು ಆ ಮಣಿಪುರ ಗಿರಿಯಲ್ಲಿ ವಾಸಮಾಡುವೆನು. ಬ್ರಹ್ಮಾದಿ ದೇವತೆಗಳು ಬಗೆ ಬಗೆಯ ಮಂತ್ರಗಳಿಂದ ನನ್ನನ್ನು ಸ್ತೋತ್ರ ಮಾಡುವರು. ಆಗ ನನ್ನ ಭಕ್ತರಾದ ನಾರದ, ಅಸಿತ, ದೇವಲ, ಪರ್ವತ ಎಂಬ ಋಷಿಗಳು ತಾವು ನನ್ನನ್ನು ಸ್ತೋತ್ರಮಾಡಿ ''ಸ್ತುತಸ್ವಾಮಿ'' ಎಂದು ಅರ್ಥವತ್ತಾದ ಹೆಸರನ್ನು ಇಡುವರು.

## ದ್ವಾರಕಾ ಕ್ಷೇತ್ರದ ಮಹಿಮೆ

**ಭೂದೇವಿ :-** ದೇವಾ, ಸುತ್ತಸ್ವಾಮಿಯ ಗುಣ ಮಹಿಮೆಗಳನ್ನು ಕೇಳಿ ನಾನು ಧನ್ಯಳಾದೆನು. ಇದಕ್ಕಿಂತಲೂ ಒಳ್ಳೆಯದಾದ ಬೇರೊಂದು ಕ್ಷೇತ್ರವಿದ್ದರೆ ದಯಮಾಡಿ ತಿಳಿಸು.

**ವರಾಹ :-** ಭೂಮಿದೇವಿ, ದ್ವಾಪರಯುಗದಲ್ಲಿ ವಿಶ್ವಕರ್ಮನಿಂದ ರಚಿತವಾದ ದ್ವಾರಕಾ ಎಂಬ ಪಟ್ಟಣವು ಸ್ವರ್ಗ ಲೋಕದ ಅಮರಾವತಿಯಂತೆ ಪ್ರಸಿದ್ಧವೂ, ರಮ್ಯವೂ ಆಗಿರುವದು. ಯಾದವ ಕುಲಶ್ರೇಷ್ಠನಾದ ವಸುದೇವನ ಹೊಟ್ಟೆಯಿಂದ ಅವತರಿಸಿ ಬಂದ ನಾನು ಆ ದ್ವಾರಕಾ ಪಟ್ಟಣದಲ್ಲಿ ಬಹು ವರ್ಷಕಾಲ ವಾಸಮಾಡಿ ತಿರೆಯ ಹೊರೆಯನ್ನು ಇಳಿಸುವ ನನ್ನ ಕಾರ್ಯವನ್ನು ಮುಗಿಸಿಕೊಂಡು ಮರಳಿ ಸ್ವರ್ಗಲೋಕಕ್ಕೆ ಬರುತ್ತೇನೆ. ನನ್ನ ಸಾದೃಶ್ಯವಿರುವ ಮಹಾದೇವನು ಅದೇ ಯುಗದಲ್ಲಿ ದುರ್ವಾಸಮುನಿ ಎಂದು ಪ್ರಖ್ಯಾತನಾಗುವನು. ಅವನು ನಮ್ಮ ಯಾದವ ಕುಲವನ್ನು ಶಪಿಸುವನು. ಅವನ ಶಾಪದಿಂದ ದ್ವಾರಕೆಯಲ್ಲಿದ್ದ ವೃಷ್ಣಿ, ಅಂಧಕ, ಭೋಜ ಮೊದಲಾದ ಯಾದವರೆಲ್ಲರೂ ಯಮ ಪಟ್ಟಣವನ್ನು ಸೇರುವರು. ಚಂದ್ರನಂತೆ ಬಿಳಿ ಬಣ್ಣದ ಬಲಿಷ್ಠ ಬಲರಾಮನು ಆ ದ್ವಾರಕಾ ಪಟ್ಟಣವನ್ನು ತನ್ನ ನೇಗಿಲದಿಂದ ಎಳೆದು ತಗ್ಗಿಸಿ ಸಮುದ್ರದಲ್ಲಿ ಒಳಸೇರಿಸುವನು.

ನಿಂತುಕೊಂಡಿದ್ದೇನೆ. ನನ್ನ ಹಿಂದೆಯೇ ಗಂಗಾಪ್ರವಾಹವು ಹರಿಯುತ್ತಾ ಇದೆ. ಗಂಗೆ ಹಾಗೂ ಗೋವಿಂದರ ಸನ್ನಿಧಾನದಿಂದ ಈ ಆಶ್ರಮವು ಎಲ್ಲ ವಿಧವಾದ ಪುಣ್ಯಕರ್ಮಗಳನ್ನು ಮಾಡಲು ಧರ್ಮ ಕೇಂದ್ರದಂತಿರುತ್ತದೆ.

## ಸ್ತುತಸ್ವಾಮಿ ಮಾಹಾತ್ಮ್ಯೆ

**ಭೂದೇವಿ** - ಜಗನ್ನಾಥ, ಈ ಗೋನಿಷ್ಕ್ರಮಣ ಕ್ಷೇತ್ರಕ್ಕಿಂತ ಅತೀ ರಹಸ್ಯವಾದ ಬೇರೆ ಪುಣ್ಯ ಕ್ಷೇತ್ರವು ಇದ್ದರೆ ದಯಮಾಡಿ ನನಗೆ ಹೇಳು.

**ವರಾಹ** - ಸ್ತುತಸ್ವಾಮಿಕ್ಷೇತ್ರದ ಮಹಿಮೆಯನ್ನು ಹೇಳುತ್ತೇನು ಕೇಳು. ದ್ವಾಪರ ಯುಗದಲ್ಲಿ ದೇವಕೀ ವಸುದೇವರ ಹೊಟ್ಟೆಯಲ್ಲಿ ಹುಟ್ಟಿ ವಾಸುದೇವನೆಂದು ಪ್ರಖ್ಯಾತನಾದ ನನಗೆ ಐದು ಜನ ಮಹಾ ವಿದ್ವಾಂಸರಾದ ಋಷಿಗಳು ಶಿಷ್ಯರಾಗುವರು. ಶಾಂಡಿಲ್ಯ, ಜಾಜಲಿ, ಕಪಿಲ, ಉಪಸಾಯಕ, ಭೃಗು ಎಂಬ ಹೆಸರಿನ ಆ ಐವರು ನನ್ನನ್ನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣ ಮುಂತಾದ ರೂಪಗಳಿಂದ ಪ್ರಸಿದ್ಧಿಗೊಳಿಸುವರು. ನಿರಂತರವಾಗಿ ನನ್ನನ್ನು ಪೂಜಿಸುವ ಅವರಿಗೆ ನಿಮಗೆ ಬೇಕಾದ ವರವನ್ನು ಕೇಳಿರಿ ಎಂದು ನಾನು ಹೇಳುವೆನು. ಆಗ ಆ ಮುನಿಗಳು ನನಗೆ ಧರ್ಮೋಪದೇಶವನ್ನು ಮಾಡಲು ಕೇಳಿಕೊಳ್ಳುವರು. ನಾನು ಆ ಮುನಿಗಳಿಗೆ ಉಪದೇಶಿಸುವೆನು. ಆ ನನ್ನ ಉಪದೇಶವೇ 'ವರಾಹ ಶಾಸ್ತ್ರ' ಎಂದು ಪ್ರಸಿದ್ಧವಾಗುವದು. ಅದು ಸರ್ವ ಭಾಗವತ ಪ್ರಿಯವಾಗಲಿ ಎಂದು ಅವರು ನನ್ನನ್ನು ಕೇಳಿಕೊಳ್ಳುವರು. ಅದಕ್ಕೆ ನಾನು 'ತಥಾಸ್ತು' ಎಂದು ಹೇಳಿದಬಳಿಕ ಆ ಐವರೂ ಮುನಿಗಳು ಆ ವರಾಹ ಶಾಸ್ತ್ರವನ್ನು ಪರಮ ಪ್ರಮಾಣವೆಂದು ನಂಬಿ ಅದರಂತೆ ನಡೆದು ಪರಮ ಸಿದ್ಧಿಯನ್ನು ಪಡೆಯುವರು.

ಸರ್ವಶಾಸ್ತ್ರಗಳಲ್ಲಿ ಅತ್ಯಂತ ಶ್ರೇಷ್ಠವಾದ ಆ ನನ್ನ ವರಾಹ ಶಾಸ್ತ್ರವನ್ನು ತಿಳಿದವರಲ್ಲಿ ಕೆಲವರು ಜ್ಞಾನಯೋಗಿಗಳಾಗಿಯೂ ಹಲವರು ಕರ್ಮಯೋಗಿಗಳಾಗಿಯೂ ಕೆಲವರು ತ್ಯಾಗಿಗಳಾಗಿಯೂ, ದಾನಿಗಳಾಗಿಯೂ, ಯೋಗಿಗಳಾಗಿಯೂ ನನ್ನನ್ನು ಸಾಕ್ಷಾತ್ಕರಿಸಿ ಕೊಂಡು ಸಂಸಾರ ಸಾಗರವನ್ನು ದಾಟುವರು. ಮಾತ್ಸರ್ಯ ಗ್ರಸ್ತರಾಗಿ ಯಾರು ನನ್ನ ಶಿಷ್ಯರಲ್ಲಿಯೂ, ನನ್ನ ಶಾಸ್ತ್ರದಲ್ಲಿಯೂ ದೋಷಾರೋಪವನ್ನು ಮಾಡುವರೋ ಅವರು ಸರ್ವ ನಾಶವನ್ನು ಹೊಂದುತ್ತಾರೆ. ಮಾತ್ಸರ್ಯವು ಬಹಳ ದೊಡ್ಡ ದೋಷ. ಘೋರ ಪಾತಕ. ಆ ದೋಷ ಒಂದಿದ್ದರೆ ಎಷ್ಟು ಶಾಸ್ತ್ರಗಳನ್ನು ಅರಿತರೂ ಮಾನವನಿಗೆ ಅಧೋಗತಿಯು ತಪ್ಪಿದ್ದಲ್ಲ. ಎಂಥ ಜ್ಞಾನಿಯೇ ಇರಲಿ, ದಾನಿಯೇ ಇರಲಿ, ತಪಸ್ವಿಯೇ ಇರಲಿ, ಅಸೂಯೆಯು ಒಂದಿದ್ದರೆ ಅವರು ಎಂದೂ ನನ್ನನ್ನು ಕಾಣಲಾರರು. ಆದುದರಿಂದ ನನ್ನ ಶಾಸ್ತ್ರವನ್ನು ಅನುಷ್ಠಾನದಲ್ಲಿ ತರಬೇಕೆಂದು ಬಯಸುವ ಮಾನವರು ಧರ್ಮ ಘಾತಕವಾದ ಅಸೂಯೆಯನ್ನು ಎಂದೂ ಮಾಡಬಾರದು. ಎಂಥೆಂಥ ಪಂಡಿತರೂ ಕೂಡ ಈ ಒಂದು ಮಾತ್ಸರ್ಯ ದೋಷದಿಂದ ಸತ್ಯಾನಾಶವನ್ನೇ ಹೊಂದಿದ್ದಾರೆ. ಸರ್ವ ಭಾಗವತ ಪ್ರಿಯವಾದ ಈ ಶಾಸ್ತ್ರವನ್ನು ನಾನು ವರಾಹ ರೂಪವನ್ನು ಧರಿಸಿ ವಿಧಿಪೂರ್ವಕವಾಗಿ ನಿರ್ಮಿಸಿ ಪ್ರಕಟಗೊಳಿಸಿದ್ದೇನೆ. ಭಾಗ್ಯವತಿಯಾದ ಭೂಮಿದೇವಿ, ಈ ಭೂತಗಿರಿಯಲ್ಲಿ ನನ್ನ ಉಕ್ಕಿನ ಪ್ರತಿಮೆಯು ಇರುತ್ತದೆ. ಈ ಸ್ಥಳಕ್ಕೆ ಮಣಿಪೂರಗಿರಿ ಎಂದು ಹೆಸರು

ಇರುವದು. ಗುರುವಿನ ದಯೆಯನ್ನೂ, ನನ್ನ ಪ್ರಸಾದವನ್ನೂ ಹೊಂದಿದ್ದ ಭಕ್ತರು ನನ್ನ ದರುಶನವನ್ನು ಮತ್ತು ಮೂರ್ತಿ ಸ್ಪರ್ಶವನ್ನು ಪಡೆದು ಪೂಜಿಸಿ ತಮ್ಮ ಪ್ರಾಚೀನಾಚೀರ್ಣವಾದ ಪಾಪ ಪಟಲವನ್ನೆಲ್ಲ ಪರಿಹರಿಸಿಕೊಂಡು ಪರಮಗತಿಯನ್ನು ಹೊಂದುವರು. ಸೌಭಾಗ್ಯವತಿಯಾದ ವಸುಂಧರೆಯೇ, ಸ್ತುತಸ್ವಾಮಿ ಕ್ಷೇತ್ರದಲ್ಲಿ ಉತ್ತರ ದಿಕ್ಕಿನಲ್ಲಿ ಇರುವ ಪಂಚಾರ್ಯ ಕ್ಷೇತ್ರದಲ್ಲಿಯೂ ಮತ್ತು ಅದೇ ಕ್ಷೇತ್ರದ ನನ್ನ ಬಲಬದಿಯಲ್ಲಿರುವ 'ಭೃಗುಕುಂಡ' ಕ್ಷೇತ್ರದಲ್ಲಿಯೂ ಅದರಂತೆ ಅಲ್ಲಿಯೇ ಸಮೀಪದಲ್ಲಿರುವ 'ಮಣಿಕುಂಡತೀರ್ಥ', 'ಸುಗುಹ್ಯತೀರ್ಥ', 'ಧೂತಪಾಪತೀರ್ಥ', 'ಸರ್ವೇಷ್ಟಾರ್ಥ ತೀರ್ಥ' ಮುಂತಾದ ಪವಿತ್ರ ತೀರ್ಥಗಳಲ್ಲಿ ಉಪವಾಸ ಮಾಡಿ ಸ್ನಾನದೇವತಾರ್ಚನೆ ಮುಂತಾದ ಧರ್ಮ ಕಾರ್ಯಗಳನ್ನು ಮಾಡುವವರು ಪರಮ ದುರ್ಲಭವಾದ ದಿವ್ಯ ಸದ್ಗತಿಯನ್ನು ಹೊಂದುವರು ಈ ತೀರ್ಥಗಳಲ್ಲಿ ಕೊನೆಗಾಲದಲ್ಲಿ ದೇಹತ್ಯಾಗ ಮಾಡಿದವರು ನನ್ನ ಲೋಕವನ್ನು ಸೇರುವರು.

**ಭೂದೇವಿ** :- ದೇವಾ, ನಿನಗೆ ಸ್ತುತಸ್ವಾಮಿ ಎಂದು ಹೆಸರು ಏಕೆ ಬಂದಿತು ? ಈ ನಿನ್ನ ಶುಭನಾಮ ನಿರ್ವಚನವನ್ನು ಮತ್ತು ಅಲ್ಲಿರುವ ಪವಿತ್ರಸ್ಥಾನಗಳನ್ನೂ ನನಗೆ ನಿರೂಪಿಸು.

**ವರಾಹ** :- ಕ್ಷಮಾದೇವಿ, ದೇವತೆಗಳ ಸುಖದ ದಾರಿಯಲ್ಲಿಯ ಮುಳ್ಳುಗಳಂತಿದ್ದ ದೈತ್ಯರನ್ನೆಲ್ಲ ಕೊಂದ ಬಳಿಕ ದ್ವಾಪರಯುಗವು ಪ್ರಾಪ್ತವಾದಾಗ ನಾನು ಆ ಮಣಿಪುರ ಗಿರಿಯಲ್ಲಿ ವಾಸಮಾಡುವೆನು. ಬ್ರಹ್ಮಾದಿ ದೇವತೆಗಳು ಬಗೆ ಬಗೆಯ ಮಂತ್ರಗಳಿಂದ ನನ್ನನ್ನು ಸ್ತೋತ್ರ ಮಾಡುವರು. ಆಗ ನನ್ನ ಭಕ್ತರಾದ ನಾರದ, ಅಸಿತ, ದೇವಲ, ಪರ್ವತ ಎಂಬ ಋಷಿಗಳು ತಾವು ನನ್ನನ್ನು ಸ್ತೋತ್ರಮಾಡಿ ''ಸ್ತುತಸ್ವಾಮಿ'' ಎಂದು ಅರ್ಥವತ್ತಾದ ಹೆಸರನ್ನು ಇಡುವರು.

## ದ್ವಾರಕಾ ಕ್ಷೇತ್ರದ ಮಹಿಮೆ

**ಭೂದೇವಿ** :- ದೇವಾ, ಸುತ್ತಸ್ವಾಮಿಯ ಗುಣ ಮಹಿಮೆಗಳನ್ನು ಕೇಳಿ ನಾನು ಧನ್ಯಳಾದೆನು. ಇದಕ್ಕಿಂತಲೂ ಒಳ್ಳೆಯದಾದ ಬೇರೊಂದು ಕ್ಷೇತ್ರವಿದ್ದರೆ ದಯಮಾಡಿ ತಿಳಿಸು.

**ವರಾಹ** :- ಭೂಮಿದೇವಿ, ದ್ವಾಪರಯುಗದಲ್ಲಿ ವಿಶ್ವಕರ್ಮನಿಂದ ರಚಿತವಾದ ದ್ವಾರಕಾ ಎಂಬ ಪಟ್ಟಣವು ಸ್ವರ್ಗ ಲೋಕದ ಅಮರಾವತಿಯಂತೆ ಪ್ರಸಿದ್ಧವೂ, ರಮ್ಯವೂ ಆಗಿರುವದು. ಯಾದವ ಕುಲಶ್ರೇಷ್ಠನಾದ ವಸುದೇವನ ಹೊಟ್ಟೆಯಿಂದ ಅವತರಿಸಿ ಬಂದ ನಾನು ಆ ದ್ವಾರಕಾ ಪಟ್ಟಣದಲ್ಲಿ ಬಹು ವರ್ಷಕಾಲ ವಾಸಮಾಡಿ ತಿರೆಯ ಹೊರೆಯನ್ನು ಇಳಿಸುವ ನನ್ನ ಕಾರ್ಯವನ್ನು ಮುಗಿಸಿಕೊಂಡು ಮರಳಿ ಸ್ವರ್ಗಲೋಕಕ್ಕೆ ಬರುತ್ತೇನೆ. ನನ್ನ ಸಾದೃಶ್ಯವಿರುವ ಮಹಾದೇವನು ಅದೇ ಯುಗದಲ್ಲಿ ದುರ್ವಾಸಮುನಿ ಎಂದು ಪ್ರಖ್ಯಾತನಾಗುವನು. ಅವನು ನಮ್ಮ ಯಾದವ ಕುಲವನ್ನು ಶಪಿಸುವನು. ಅವನ ಶಾಪದಿಂದ ದ್ವಾರಕೆಯಲ್ಲಿದ್ದ ವೃಷ್ಣಿ, ಅಂಧಕ, ಭೋಜ ಮೊದಲಾದ ಯಾದವರೆಲ್ಲರೂ ಯಮ ಪಟ್ಟಣವನ್ನು ಸೇರುವರು. ಚಂದ್ರನಂತೆ ಬಿಳಿ ಬಣ್ಣದ ಬಲಿಷ್ಠ ಬಲರಾಮನು ಆ ದ್ವಾರಕಾ ಪಟ್ಟಣವನ್ನು ತನ್ನ ನೇಗಿಲದಿಂದ ಎಳೆದು ತಗ್ಗಿಸಿ ಸಮುದ್ರದಲ್ಲಿ ಒಳಸೇರಿಸುವನು.

**ಭೂದೇವಿ :-** ಲೋಕನಾಥ, ದೂರ್ವಾಸ ಋಷಿಯು ಯಾದವರಿಗೆ ಇಂಥ ಘೋರ ಶಾಪವನ್ನು ಕೊಡಲು ಕಾರಣವೇನು ತಿಳಿಸು.

**ವರಾಹ :-** ಭೂದೇವಿ, ನಾನು ಕೃಷ್ಣಾವತಾರ ಮಾಡಿದಾಗ ಜಾಂಬವತಿ ಎಂಬ ಒರ್ವ ಮೆಚ್ಚಿನ ಮಡದಿಯಿಂದ ಸಾಂಬ ಎಂಬ ಒಬ್ಬ ಸುಂದರ ಮಗನು ಜನಿಸುವನು. ಹರೆ, ಸಿರಿ, ಸೊಬಗು, ಸೌಭಾಗ್ಯಗಳ ಗರ್ವದಿಂದ ಲೀಲಲೋಲನಾದ ಆ ನನ್ನ ಪ್ರೀತಿಯ ಪುತ್ರನಾದ ಸಾಂಬನು ಒಂದು ದಿನ ವಿನೋದಕ್ಕಾಗಿ ಗರ್ಭಿಣಿಯ ಹೆಣ್ಣು ಮಗಳ ವೇಷವನ್ನು ತೊಟ್ಟುಕೊಂಡು ದುರ್ವಾಸರ ಬಳಿಗೆ ತನ್ನ ಗೆಳೆಯರೊಡನೆ ಹೋಗಿ ನಮಸ್ಕರಿಸಿದನು. ಅವನ ಗೆಳೆಯರು ಹೆಣ್ಣು ವೇಷದ ಸಾಂಬನನ್ನು ತೋರಿಸಿ '' ಈ ಹೆಣ್ಣು ಮಗಳು ಗಂಡು ಹಡೆಯವಳೋ ? ಹೆಣ್ಣು ಹಡೆಯುವಳೋ ? '' ಎಂದು ಕೇಳಿದರು. ಬಸಿರು ಹೆಣ್ಣುಮಗಳ ಸೋಗನ್ನು ಹಾಕಿದ ಸಾಂಬನಾದರೂ ಹೆಣ್ಣಿನಂತೆಯೇ ನುಣ್ಣ ದನಿಯನ್ನು ತೆಗೆದು ತನಗೆ ಗಂಡು ಮಗುವಾಗಬೇಕೆಂದು ಅಪೇಕ್ಷೆ ಇದೆ ಎಂದು ತಿಳಿಸಿದನು. ಇದನ್ನೆಲ್ಲ ನೋಡಿದ ದುರ್ವಾಸ ಋಷಿಗಳಿಗೆ ಆ ಯಾದವ ಕುಮಾರರ ಹುಡುಗಾಟಿಕೆಯ ಹೂಟವೆಲ್ಲವೂ ತಿಳಿದು ಆ ಗರ್ಭಿಣಿ ಹೆಣ್ಣುಮಗಳು ಸಾಂಬ ಎಂದು ನಿಶ್ಚಯವಾಯಿತು. ಸಿಟ್ಟಿನಿಂದ ತಲೆ ಕೆಟ್ಟು ಹೋದ ಅವರು ನುಡಿಕಿಡಿಯನ್ನು ಉಗುಳಿದರು. ''ನಿನ್ನ ಗರ್ಭದಿಂದ ನಿಮ್ಮ ವಂಶವನ್ನೇ ಧ್ವಂಸ ಮಾಡುವ ಒಂದು ಒನಕೆಯು ಜನಿಸುವುದು. ಅದರಿಂದ ವೃಷ್ಣಿ ಅಂಧಕ, ಮುಂತಾದ ಯಾದವ ಕುಲವೆಲ್ಲವೂ ಸಂಹಾರವಾಗುವದು.''

ಚಂಡಕೋಪರಾದ ದುರ್ವಾಸ ಮುನಿಗಳ ಈ ಶಾಪವನ್ನು ಕೇಳಿ ಸಂಭ್ರಾಂತರಾಗಿ ಆ ಯದುಕುಮಾರರೆಲ್ಲರೂ ನನ್ನ ಕಡೆಗೆ ಬರುವರು. ಆಗ '' ನಾನು ಅವರಿಗೆ ದುರ್ವಾಸರ ಶಾಪವು ನಿಜವಾಗುವದರಲ್ಲಿ ಸಂದೇಹವೇ ಇಲ್ಲ'' ಎಂದು ಹೇಳಿದೆನು. ಅದರಂತೆ ಆ ಮುನಿಯ ಶಾಪವೇ ನಿಮಿತ್ತವಾಗಿ ಯದು ಕುಲವು ವಿನಾಶ ಹೊಂದಿತು. ಸೌಭಾಗ್ಯವತಿಯಾದ ಭೂದೇವಿಯೇ, ಸಮುದ್ರ ಮಧ್ಯದಲ್ಲಿರುವ ಆ ದ್ವಾರಕೆಯ ಸಮೀಪದಲ್ಲಿ ಸಮುದ್ರದ ತೀರವನ್ನು ಬಿಟ್ಟು ತುಸು ದೂರದಲ್ಲಿ 'ಪಂಚ ಸರೋವರ' ಎಂಬ ಒಂದು ರಹಸ್ಯ ಕ್ಷೇತ್ರವು ಇರುತ್ತದೆ. ಅಲ್ಲಿ ಬಹುದೊಡ್ಡದಾದ ಮತ್ತು ಕೊಡ ಆಕಾರದ ಹಣ್ಣುಗಳು ತುಂಬಿದ ಒಂದು ಬಸರೀಗಿಡವು ಇರುತ್ತದೆ. ಭಗವದ್‌ಭಕ್ತರಿಗೆ ಮಾತ್ರ ಅದರ ಹಣ್ಣುಗಳು ದೊರಕುತ್ತವೆ. ಅಲ್ಲಿಯೇ ಸಮೀಪದಲ್ಲಿರುವ ಪ್ರಭಾಸತೀರ್ಥದಲ್ಲಿ ಸ್ನಾನೋಪವಾಸ ಮಾಡುವವರೂ ಮತ್ತು ಪ್ರಾಣೋತ್ಕ್ರಮಣ ಹೊಂದಿದವರೂ ವೈಕುಂಠ ಲೋಕವನ್ನು ಸೇರುತ್ತಾರೆ. ಆ ಪ್ರಭಾಸ ತೀರ್ಥದಲ್ಲಿ ಅನೇಕ ಮೊಸಳೆಗಳು ಓಡಾಡುತ್ತಿದ್ದರೂ ಅವು ಯಾವ ಪ್ರಾಣಿಯನ್ನೂ ಹಿಂಸಿಸುವದಿಲ್ಲ. ಯಾತ್ರಿಕರು ತಮ್ಮ ಸ್ನಾನ ಪೂಜಾದಿಗಳ ಅನಂತರ ಆ ತಿಳಿನೀರಿನ ತೀರ್ಥದಲ್ಲಿ ಆ ಮೊಸಳೆಗಳಿಗಾಗಿಯೇ ಪಿಂಡಗಳನ್ನು ಹಾಕಬೇಕು. ಪಾಪಿಗಳು ಹಾಕಿದ ಪಿಂಡಗಳನ್ನು ಆ ಮೊಸಳೆಗಳು ಮುಟ್ಟುವುದಿಲ್ಲ. ಪುಣ್ಯಾತ್ಮರು ಕೊಟ್ಟ ಪಿಂಡಗಳನ್ನು ಮಾತ್ರ ಆ ವಿವೇಕಿ ಮಕರಗಳು ಎಲ್ಲಿದ್ದರೂ ಬಂದು ತಿಂದು ತೇಗುತ್ತದೆ. ಇದರಂತೆ ಆ ದ್ವಾರಕಾ ಕ್ಷೇತ್ರದಲ್ಲಿ 'ಪಂಚ' 'ಪಂಚಪಿಂಡ' 'ಸಂಗಮನಕುಂಡ' 'ಹಂಸಕುಂಡ' ಮೊದಲಾದ ಅನೇಕ

ಕ್ಷೇತ್ರಗಳು ಇರುತ್ತವೆ. ಅವುಗಳಲ್ಲಿ ಸ್ನಾನ ಉಪವಾಸ ಉಪಾಸನೆ, ಜಪ, ತಪಾನುಷ್ಠಾನವನ್ನು ಮಾಡಿದವರು ದಿವ್ಯಗತಿಯನ್ನು ಹೊಂದುವರು

ಈ ಎಲ್ಲ ತೀರ್ಥಗಳಲ್ಲಿಯೂ ಒಂದೊಂದು ವೈಶಿಷ್ಟ್ಯವಿದೆ. ವೈಚಿತ್ರವೂ ಇದೆ. ಪಂಚಕುಂಡ ತೀರ್ಥದಲ್ಲಿ ಮಧ್ಯಾನ್ಹದಲ್ಲಿ ಒಂದು ಬಂಗಾರದ ತಾವರೆಯು ಎದ್ದು ತೋರುತ್ತದೆ. ಮತ್ತು ಸಂಗಮನ ತೀರ್ಥದಲ್ಲಿ ಪುಣ್ಯವಂತರು ಸ್ನಾನ ಮಾಡುವಾಗ ಮೇಲಿನಿಂದ ಒಂದು ಜಲಧಾರೆಯು ಧುಮ್ಮಿಕ್ಕಿ ಸುರಿಯುವದು. ಪಾಪಿಗಳು ಸ್ನಾನ ಮಾಡುವಾಗ ಒಂದು ಹನಿಯೂ ಒಸರುವದಿಲ್ಲ..ಹಂಸ ಕುಂಡದಲ್ಲಿ ಪ್ರತಿ ದ್ವಾದಶಿ ದಿನ ಮಧ್ಯಾನ್ಹದಲ್ಲಿ ಚಂದ್ರ ಧವಲವಾದ ಹಂಸ ಪಕ್ಷಿಗಳು ಕಾಣಿಸಿಕೊಳ್ಳುತ್ತವೆ. ಅವು ಪಾಪಿಗಳ ಕಣ್ಣಿಗೆ ಬೀಳುವುದಿಲ್ಲ. ಅವುಗಳನ್ನು ಕಂಡ ಪುಣ್ಯವಂತರು ಪರಮ ಸಿದ್ಧಿಯನ್ನು ಪಡೆಯುವರು. ಕದಂಬ ಕ್ಷೇತ್ರದ 'ಕದಂಬ ತೀರ್ಥ'ದಲ್ಲಿ ಯಾದವರು ಸ್ನಾನಮಾಡಿ ಶುದ್ಧರಾಗುವರು. ಅಲ್ಲಿಯ ಕದಂಬವೃಕ್ಷದಲ್ಲಿ ಮಾಘಮಾಸದ ದ್ವಾದಶಿಯ ದಿನ ಸೂರ್ಯೋದಯ ಸಮಯಕ್ಕೆ ಸರಿಯಾಗಿ ಅರಳುವ ಹೂಗಳನ್ನು ಪಡೆಯುವವರು ಪರಮ ಸಿದ್ಧಿಯನ್ನು ಐದುವರು. ಮಣಿಪೂರ ಗಿರಿಯಿಂದ ಐದು ಜಲಧಾರೆಗಳು ಧುಮಿಕಿ ರೂಪಗೊಂಡ 'ಚಕ್ರ ತೀರ್ಥ'ದಲ್ಲಿಯೂ ಸುತ್ತಲೂ ಹತ್ತು ದಿಕ್ಕುಗಳಲ್ಲಿ ಅನೇಕ ಗುಹೆಗಳುಳ್ಳ 'ರೈವತಕ ತೀರ್ಥ'ದಲ್ಲಿಯೂ ಸಮುದ್ರದಂತೆ ಮಧ್ಯಾನ್ಹ ಹಾಗೂ ಮಧ್ಯರಾತ್ರಿಗಳಲ್ಲಿ ಏರಿ ಇಳಿಯುವ ಮಹಾದ್ವೈವ ತೀರ್ಥದಲ್ಲಿಯೂ ಕೃಷ್ಣಾವತಾರದಲ್ಲಿ ಬೇಡನ ಬಾಣದ ಏಟಿನಿಂದ ನಾನು ದೇಹತ್ಯಾಗ ಮಾಡಿದ ವಿಷ್ಣು ಸಂಕ್ರಮಣ ಕ್ಷೇತ್ರದ 'ವಿಷ್ಣು ಸಂಕ್ರಮಣ ಕುಂಡ'ದಲ್ಲಿಯೂ ಸ್ನಾನವನ್ನು ಮಾಡಿ ನನ್ನ ಪೂಜೆ ಸೇವೆಗಳನ್ನು ಸಲ್ಲಿಸುವವರಿಗಂ ಸದ್ಗತಿಯಾಗುವದರಲ್ಲಿ ಸಂದೇಹವಿಲ್ಲ. ಧರಾದೇವಿ ಆ ದ್ವಾರಕಾ ಕ್ಷೇತ್ರದಲ್ಲಿ ಬಲರಾಮ ಯೋಗಮಾಯೆ ಇಬ್ಬರಿಂದಲೂ ಒಡಗೂಡಿ ನಾನು ಸಮುದ್ರತೀರದಲ್ಲಿ ಉತ್ತರಾಭಿಮುಖನಾಗಿ ನಿಂತುಕೊಂಡಿದ್ದೇನೆ. ಮೂವತ್ತು ಯೋಜನ ವಿಸ್ತಾರವಾಗಿ ಹತ್ತು ದಿಕ್ಕುಗಳಲ್ಲಿಯೂ ಹರಡಿದ ಆ ದ್ವಾರಕಾ ಕ್ಷೇತ್ರವನ್ನು ಸಂದರ್ಶಿಸುವವರು ಪರಮ ಗತಿಯನ್ನು ಹೊಂದುವರು.

## ಸಾನಂದೂರ ಕ್ಷೇತ್ರ ಮಹಾತ್ಮೆ

**ಭೂದೇವಿ :-** ವರಾಹ ಪ್ರಭು, ನಿನ್ನ ಮುಖದಿಂದ ದ್ವಾರಕಾ ಕ್ಷೇತ್ರದ ಮಹಿಮೆಯನ್ನು ಕೇಳಿ ನಾನು ಪರಮ ಸೌಭಾಗ್ಯವನ್ನೇ ಪಡೆದಿದ್ದೇನೆ. ಇದಕ್ಕಿಂತ ರಹಸ್ಯವಾದ ಪುಣ್ಯ ತೀರ್ಥವಿದ್ದರೆ ನನಗೆ ಹೇಳು.

**ವರಾಹ :-** ಭೂದೇವಿ, ದಕ್ಷಿಣಸಮುದ್ರದ ಉತ್ತರಕ್ಕೆ ಮಲಯ ಪರ್ವತದ ದಕ್ಷಿಣ ಭಾಗದಲ್ಲಿ 'ಸಾನಂದೂರ' ಎಂಬ ಶ್ರೇಷ್ಠವಾದ ಕ್ಷೇತ್ರವು ಇರುತ್ತದೆ. ಆ ಕ್ಷೇತ್ರದಲ್ಲಿ ನಾನು ಉತ್ತರಕ್ಕೆ ಮುಖಮಾಡಿಕೊಂಡು ನಿಂತಿರುತ್ತೇನೆ. ಆ ನನ್ನ ಮೂರ್ತಿಯು ಅಷ್ಟು ಎತ್ತರವೂ ಇಲ್ಲ. ಅಷ್ಟು ಕುಳ್ಳಾಗಿಯೂ ಇಲ್ಲ. ಆ ಭಗವನ್ ಮೂರ್ತಿಯು ಕೆಲವರು ಉಕ್ಕಿನದೆಂದೂ, ಹಲವರು ತಾಮ್ರದ್ದೆಂದೂ, ಇತರರು ಹಿತ್ತಾಳೆಯದೆಂದೂ ಬೇರೆಯವರು ಸೀಸದೆಂದೂ,

ಮಿಕ್ಕವರೆಲ್ಲ ಶಿಲಾಮಯವೆಂದೂ ಹೇಳುತ್ತಾರೆ. ಆ ಸಾನಂದೂರ ಕ್ಷೇತ್ರದ ದಿವ್ಯ ತೀರ್ಥದಲ್ಲಿ ಮಧ್ಯಾನ್ಹ ಕಾಲದಲ್ಲಿ ಬಂಗಾರದ ಕಮಲವು ಕಾಣಿಸಿಕೊಳ್ಳುತ್ತದೆ.

'ರಾಮಗ್ರಹ' ಎಂಬ ನನ್ನ ರಹಸ್ಯಕ್ಷೇತ್ರದಲ್ಲಿ ಹಬ್ಬಿರುವ ಒಂದು ಬಳ್ಳಿಯ ಬೇರು ಸಮುದ್ರದ ಮಧ್ಯದಲ್ಲಿ ಸೇರಿ ಹೆಮ್ಮರವಾಗಿ ಬೆಳೆದು ನಿಂತಿದೆ. ಆ ರಾಮಗ್ರಹ ತೀರ್ಥದಲ್ಲಿ ಅಸಂಖ್ಯ ಮೀನಗಳಿದ್ದು ಅವುಗಳಲ್ಲಿ ಒಂದು ದೊಡ್ಡ ಮೀನು ಚಕ್ರ ಲಾಂಛನವುಳ್ಳದ್ದಾಗಿದೆ. ಆ ನೀರಿನಲ್ಲಿ ಯಾರಾದರೂ ಪಿಂಡ ಹಾಕಿದರೆ ಅದನ್ನು ಈ ಮೀನು ತಿನ್ನುವವರಿಗೆ ಉಳಿದ ಯಾವ ಮೀನುಗಳೂ ಮುಟ್ಟುವದಿಲ್ಲ. ಇದರಂತೆ ಅಲ್ಲಿರುವ 'ರಾಮಸರೋವರ', 'ಬ್ರಹ್ಮಸರೋವರ', 'ಸಂಗಮನ', 'ಶಕ್ರ ಸರೋವರ', 'ಸೂರಪಾರಕ', 'ಜಲಕುಂಡ' ಮುಂತಾದ ಅನೇಕ ತೀರ್ಥಗಳು ಪುಣ್ಯಪ್ರದವೂ, ವೈಶಿಷ್ಟ್ಯಪೂರ್ಣವೂ, ವೈಕುಂಠಾದಿ ಉತ್ತಮ ಲೋಕ ಪ್ರಾಪಕವೂ ಆಗಿರುತ್ತವೆ.

## ಲೋಹಾರ್ಗಲ ಕ್ಷೇತ್ರಮಹಿಮೆ

**ಭೂದೇವಿ :-** ಸಾನಂದೂರ ಕ್ಷೇತ್ರಕ್ಕಿಂತ ಉತ್ತಮವಾದ ಕ್ಷೇತ್ರವು ಯಾವದಾದರೂ ಇದ್ದರೆ ದಯಮಾಡಿ ಅದರ ಮಹಿಮೆಯನ್ನು ನನಗೆ ತಿಳಿಸಬೇಕು.

**ವರಾಹ :-** ಧರಣಿದೇವಿ, ಹಿಮವತ್ ಪರ್ವತದಲ್ಲಿರುವ ಸಿದ್ಧವಟದಿಂದ ಮೂವತ್ತು ಯೋಜನ ದೂರದಲ್ಲಿರುವ ಮ್ಲೇಂಛದೇಶದ ಮಧ್ಯದಲ್ಲಿರುವ ಲೋಹಾರ್ಗಲ ಕ್ಷೇತ್ರದಲ್ಲಿ ನಾನು ನಿವಾಸವನ್ನು ಮಾಡಿದ್ದೇನೆ. ಆ ಕ್ಷೇತ್ರವು ಹದಿನೈದು ಯೋಜನ ಉದ್ದವೂ ಐದು ಯೋಜನ ಅಗಲವೂ ಆಗಿದ್ದು ಪಾಪಿಗಳಿಗೆ ದುರ್ಗಮವಾಗಿರುತ್ತದೆ. ನನ್ನನ್ನೇ ಧ್ಯಾನ ಮಾಡುವ ಭಕ್ತಭಾವುಕರಿಗೆ ಮಾತ್ರ ಆ ಕ್ಷೇತ್ರವು ಸುಲಭಗಮ್ಯವಾಗಿದೆ. ಆ ಕ್ಷೇತ್ರದಲ್ಲಿ ನಾನು ಬಂಗಾರದ ಮೂರ್ತಿಯ ಆಕಾರದಲ್ಲಿ ಉತ್ತರ ದಿಕ್ಕಿಗೆ ಮುಖ ಮಾಡಿಕೊಂಡು ನೆಲೆಸಿರುವೆನು. ದುಷ್ಟರಾದ ದಾನವರೆಲ್ಲರೂ ಮೇಲಿನ ಉತ್ತಮೋತ್ತಮವಾದ ಲೋಕಗಳನ್ನೆಲ್ಲ ಆಕ್ರಮಣ ಮಾಡಬೇಕೆಂದು ಆರೋಹಣ ಮಾಡತೊಡಗಿದರು. ಆಗ ನಾನು ನನ್ನ ವೈಷ್ಣವ ಮಾಯೆಯನ್ನು ಉಕ್ಕಿನ ಪರದೆಯಂತೆ ನಡುವೆ ಇಟ್ಟು ಬ್ರಹ್ಮ, ರುದ್ರ, ಸ್ಕಂದ, ಇಂದ್ರ, ಚಂದ್ರ, ಸೂರ್ಯ ವಸು, ವಾಯು, ಬೃಹಸ್ಪತಿ, ಮೊದಲಾದ ದೇವತೆಗಳನ್ನು ಅಲ್ಲಿ ನಿಲ್ಲಿಸಿದೆನು. ಅವರೆಲ್ಲರ ಕೈಯಲ್ಲಿ ಅಗಳಿಯನ್ನು ಕೊಟ್ಟು ನಾನು ಸುದರ್ಶನ ಚಕ್ರವನ್ನು ಹಿಡಿದು ಆ ಕೋಟಿ ಕೋಟಿ ದಾನವರನ್ನು ಸಂಹಾರ ಮಾಡಿದೆನು. ದುಷ್ಟ ದೈತ್ಯರಿಗೆ ಊರ್ಧ್ವ ಲೋಕಕ್ಕೆ ಹೋಗಲು ಪ್ರತಿಬಂಧಕವಾಗಿ ಕಬ್ಬಿಣದ ಅಗಳಿಯನ್ನು ನಾನು ಇಲ್ಲಿ ದೇವತೆಗಳ ಕೈಯಲ್ಲಿ ಇರಿಸಿದ್ದರಿಂದ ಇದಕ್ಕೆ 'ಲೋಹಾರ್ಗಲ' ಎಂದು ಹೆಸರು ಬಂದಿತು. ದೈತ್ಯರನ್ನು ಕೊಂದು ಆ ದೇವತೆಗಳನ್ನೆಲ್ಲ ಇದೇ ಕ್ಷೇತ್ರದಲ್ಲಿ ಸಂಸ್ಥಾಪಿಸಿದೆನು. ಈ ಕ್ಷೇತ್ರದಲ್ಲಿ ಮೂರು ರಾತ್ರಿ ಉಪವಾಸ ಮಾಡಿ ಇಲ್ಲಿಯ ತೀರ್ಥ ಕುಂಡದಲ್ಲಿ ಸ್ನಾನ ಮಾಡುವವನು ಸಾವಿರಾರು ವರ್ಷ ಸ್ವರ್ಗ ಸುಖವನ್ನು ಅನುಭವಿಸುವನು. ಈ ಕ್ಷೇತ್ರದಲ್ಲಿ ಪ್ರತಿ ದ್ವಾದಶಿಯ ದಿನ ಆ ಮಾಸೋಕ್ತವಾದ ವಿಧಿವಿಧಾನಗಳಿಂದ ನನ್ನ ಪೂಜೆಯು ನಡೆಯುತ್ತದೆ. ಹಿಂದೆ ನಾನು ಉಚ್ಚೈಶ್ರವದಂಥ ಒಂದು ಕುದುರೆಯನ್ನು ಕಲ್ಪಿಸಿ ಬಿಲ್ಲು ಬಾಣ ಜಪ ಮಾಲೆ ಹಾಗೂ

ಕಮಂಡಲವನ್ನು ಹಿಡಿದು ಕೊಂಡು ಅದರ ಮೇಲೆ ಹತ್ತಿದೆನು. ಆ ಶ್ವೇತಾಶ್ವವನ್ನು ಆ ಶ್ವೇತ ಪರ್ವತದ ಶಿಖರ ಸೀಮೆಗೆ ವೈಯ್ದು ಆ ಗುಡ್ಡದ ತುದಿಯಿಂದ ಆ ಕುದುರೆಯೊಡನೆ ಕುರುದೇಶದಲ್ಲಿ ಜಿಗಿದೆನು. ಆ ನನ್ನ ಉಡ್ಡಾಣದಿಂದ ಅನೇಕ ಜನರು ನನ್ನ ಹಾಗೂ ಕುದುರೆಗಳ ಕೆಳಗೆ ಸಿಕ್ಕು ಬಿದ್ದು ಬಿಟ್ಟರು. ಆದರೆ ಅವರಾರಿಗೂ ಗಾಯಗಳಾಗಲಿಲ್ಲ. ಮುಂದೆ ಅನೇಕ ವ್ಯಕ್ತಿಗಳನ್ನು ಕೆಳಗೆ ಬೀಳಿಸಿ ದಣಿದ ಆ ಕುದುರೆಯು ಈಗಲೂ ಸ್ವರ್ಗಲೋಕದಲ್ಲಿರುತ್ತದೆ. ಆ ಕಾಲದಲ್ಲಿ ನಾನು ಕಲ್ಪಿಸಿದ ಆ ಶ್ವೇತ ಕುದುರೆಯ ವಂಶದಲ್ಲಿ ಜನಿಸಿದ ಕುದುರೆಗಳೇ ಈಗಲೂ ನನ್ನನ್ನು ವಹಿಸುತ್ತದೆ. ಬೇರೆಯವರಾರೂ ಆ ಜಾತಿಯ ಕುದುರೆಗಳ ಮೇಲೆ ಸವಾರಿಮಾಡಲಾರರು. ಈ ಲೋಹಾರ್ಗಲ ಕ್ಷೇತ್ರದ ಪರಿಸರದಲ್ಲಿರುವ 'ಪಂಚಸರೋವರ' ತೀರ್ಥದಲ್ಲಿ ನಾಲ್ಕು ಜಲಧಾರೆಗಳು ಧುಮುಕುತ್ತವೆ. ಅಲ್ಲಿ ಅಲ್ಪಾಹಾರವನ್ನು ಸೇವಿಸಿ ಸ್ನಾನ ಪೂಜೆ ಮಾಡುವವನೂ ಕೊನೆಗಾಲದಲ್ಲಿ ಪ್ರಾಣತ್ಯಾಗ ಮಾಡುವವನೂ ನನ್ನ ಲೋಕವನ್ನು ಹೊಂದುತ್ತಾನೆ. ತಾಳವೃಕ್ಷದ ಗಡುತರವಾದ ಐದು ನೀರಿನ ಪ್ರವಾಹಗಳು ಹರಿದು ಬಂದು ನಿರ್ಮಿತಗೊಂಡ ಆ 'ನಾರದ ಕುಂಡ'ದಲ್ಲಿಯೂ, ಮೂರು ವಾರಿಧಾರೆಗಳು ಮೇಳವಸಿ ಹರಿಯುವ 'ವಶಿಷ್ಠಕುಂಡ'ದಲ್ಲಿಯೂ, ಹಿಮಾಚಲ ಶೈಲಶಿಖರದಿಂದ ಚಿಮ್ಮಿ ಬರುವ ಐದು ತಿಳಿನೀರಿನ ಚಿಲುಮೆಗಳು ಸುರಿದು ತೀರ್ಥಗೊಂಡ 'ಪಂಚಕುಂಡ'ದಲ್ಲಿಯೂ ಏಳು ಜಲಜಧಾರೆಗಳು ಕೂಡಿ ಮಡುಗಟ್ಟಿದ 'ಸಪ್ತಋಷಿಕುಂಡ'ದಲ್ಲಿಯೂ, 'ಶರಭಂಗಾನದಿ'ಯು ತುಳಕಿ ತೀರ್ಥಗಟ್ಟಿದ 'ಶರಭಂಗ ಕುಂಡ'ದಲ್ಲಿಯೂ, ನೆಲವನ್ನು ಕೊರೆದು ಆಳಗೊಂಡ ಜಲಾಶಯವಾದ 'ಅಗ್ನಿ ಸರೋವರ'ದಲ್ಲಿಯೂ ಸಕಲ ವೇದ ಜಲದಿಂದ ಕೂಡಿದ 'ಬೃಹಸ್ಪತಿ ಕುಂಡ'ದಲ್ಲಿಯೂ, 'ವೈಶ್ವಾನರ ಕುಂಡ'ದಲ್ಲಿಯೂ, ಹದಿನೈದು ಜಲಧಾರೆಗಳು ಸಂಗಮಿಸಿದ 'ಷಣ್ಮುಖಕುಂಡ'ದಲ್ಲಿಯೂ, 'ಉಮಾಕುಂಡ' ದಲ್ಲಿಯೂ, 'ಮಹೇಶ್ವರಕುಂಡ'ದಲ್ಲಿಯೂ, ವೇದಗಳ ಜನ್ಮಸ್ಥಳವಾದ 'ಬ್ರಹ್ಮಕುಂಡ' ದಲ್ಲಿಯೂ, ಉಪವಾಸವಿದ್ದು ಸ್ನಾನಮಾಡಿ ದೇವರನ್ನು ಪೂಜಿಸುವವನು, ಹಾಗೂ ಅಂತ್ಯಕಾಲದಲ್ಲಿ ಈ ಕ್ಷೇತ್ರಗಳಲ್ಲಿಯೇ ಪ್ರಾಣತ್ಯಾಗ ಮಾಡುವವನೂ ದಿವ್ಯಗತಿಯನ್ನು ಪಡೆದು ಕೊನೆಗೆ ನನ್ನ ಲೋಕಕ್ಕೆ ಬರುವನು. ಕೊನೆಗೆ ಹೇಳಿದ ಈ ಬ್ರಹ್ಮಕುಂಡದಲ್ಲಿ ಹಿಮಾಲಯ ಪರ್ವತದಿಂದ ನಾಲ್ಕು ವೈದಿಕ ಜಲಧಾರೆಗಳು ಧುಮುಕುತ್ತವೆ. ಉತ್ತರದಿಂದ ಭಂಗಾರ ಬಣ್ಣದ ಋಗ್ವೇದ ಧಾರೆಯೂ ಪಶ್ಚಿಮದಿಂದ ಯಜುರ್ವೇದ ಧಾರೆಯೂ ದಕ್ಷಿಣದಿಂದ ಅಥರ್ವಣ ಧಾರೆಯೂ ಪೂರ್ವದಿಂದ ಶುಭ್ರನೀರಿನ ಸಾಮವೇದ ಧಾರೆಯೂ ಹರಿದು ಬರುತ್ತವೆ. ಈ ಬ್ರಹ್ಮಕುಂಡದಲ್ಲಿ ಏಳು ರಾತ್ರಿ ವಾಸಮಾಡಿ ಸ್ನಾನಮಾಡುವವನು ಬ್ರಹ್ಮ ಲೋಕವನ್ನು ಸೇರಿ ಬ್ರಹ್ಮನೊಡನೆ ಆನಂದವನ್ನು ಪಡೆಯುವನು. ಈ ತೀರ್ಥದಲ್ಲಿ ಜನ್ಮನೀಗಿದರೆ ನನ್ನ ವೈಕುಂಠಲೋಕವನ್ನೇ ಹೊಂದುವನು. ಸಿದ್ಧಿಯನ್ನು ಬಯಸುವವರು ಈ ಲೋಹಾರ್ಗಲ ಕ್ಷೇತ್ರಕ್ಕೆ ಹೋಗಲೇಬೇಕು. ಅಲ್ಲಿ ಹೋಗಿ ನನ್ನ ದರ್ಶನ ಮಾಡುವವರಿಗೆ ಕರ್ಮಲೇಪವಿಲ್ಲ.

*ವರಾಹ ಪುರಾಣದಲ್ಲಿ ನೂರಹತ್ತೊಂಬತ್ತೇನೆ ಅಧ್ಯಾಯ ಮುಗಿದಿದೆ.*

——○——

**ಭೂದೇವಿ :-** ಲೋಕನಾಥ, ಲೋಹಾರ್ಗಲ ಕ್ಷೇತ್ರದಲ್ಲಿ ನೆಲೆಸಿರುವ ನಿನ್ನ ಮಹಾಮಹಿಮೆಯನ್ನು ಕೇಳಿ ನಾನು ಧನ್ಯಳಾದೆನು. ನೀನು ಉಪದೇಶಿಸಿದ ಸರ್ವಶಾಸ್ತ್ರವನ್ನು ತಿಳಿದುಕೊಂಡು ನಾನು ಬಂಗಾರದಂತೆ ಬೆಳಗುತ್ತಿದ್ದೇನೆ. ಜಗನ್ಮಾನ್ಯಳೂ ಆಗಿದ್ದೇನೆ. ಈ ಲೋಹಾರ್ಗಲ ತೀರ್ಥಕ್ಷೇತ್ರಗಳಿಗಿಂತ ಉತ್ತಮವಾದ ಬೇರೆ ತೀರ್ಥ ಕ್ಷೇತ್ರಗಳಿದ್ದರೆ ನನಗೆ ದಯಮಾಡಿ ತಿಳಿಸು.

**ವರಾಹ :-** ವಸುಂಧರೆ, ಮಧುರಾ ಪಟ್ಟಣಕ್ಕೆ ಸಮಾನವಾದ ಮತ್ತು ನನಗೆ ಅತ್ಯಂತ ಪ್ರಿಯವಾದಕ್ಷೇತ್ರವು ಪಾತಾಳದಲ್ಲಿಯಾಗಲೀ, ಸ್ವರ್ಗಲೋಕದಲ್ಲಾಗಲೀ ಬೇರೊಂದಿಲ್ಲ.

**ಭೂದೇವಿ :-** ಕಾಶಿ ಪುಷ್ಕರ ನೈಮಿಷಾರಣ್ಯ ಮುಂತಾದ ಪುಣ್ಯ ಧಾಮಗಳನ್ನು ಬಿಟ್ಟು ಈ ಮಧುರಾ ಕ್ಷೇತ್ರವನ್ನೇ ನೀನೇಕೆ ಇಷ್ಟು ಹೊಗಳುವೆ ?

**ವರಾಹ :-** ಭೂದೇವಿ, ಮಧುರೆಗಿಂತ ಉತ್ತಮವಾದ ಕ್ಷೇತ್ರವೇ ಇಲ್ಲ. ಪ್ರಯಾಗ ಕ್ಷೇತ್ರದಲ್ಲಿ ಮಾಘಸ್ನಾನದಿಂದ ಬರುವ ಪುಣ್ಯವನ್ನು ನರನು ಮಧುರೆಯಲ್ಲಿ ಪ್ರತಿದಿನ ಸ್ನಾನದಿಂದಲೇ ಪಡೆಯುವನು. ಪುಷ್ಕರ ಕ್ಷೇತ್ರದಲ್ಲಿ ಕಾರ್ತಿಕ ಮಾಸದಲ್ಲಿ ಸೇವಾನುಷ್ಠಾನಗಳಿಂದ ಬರುವ ಪುಣ್ಯವನ್ನು ಮಧುರೆಯಲ್ಲಿ ಒಂದು ಕ್ಷಣದಲ್ಲಿ ಪಡೆಯುವನು. ಪ್ರಥ್ವಿಯಲ್ಲಿ ಸಮುದ್ರ ಸರೋವರ, ತೀರ್ಥ, ನದಿ ಮುಂತಾದವುಗಳಲ್ಲಿ ಯಾವ ಯಾವ ತೀರ್ಥಗಳು ಇರುತ್ತವೆಯೋ ಅವೆಲ್ಲವೂ ಚಾತುರ್ಮಾಸ್ಯ ಕಾಲದಲ್ಲಿ ಶ್ರೀಹರಿಯು ಶೇಷಶಯನದಲ್ಲಿ ಪವಡಿಸಿದ ಬಳಿಕ ಮಧುರಾ ಮಂಡಲಕ್ಕೆ ಬಂದು ನೆಲೆಸುವವು. ವಿಧಿಪೂರ್ವಕವಾಗಿ ಅಲ್ಲಿ ಸ್ನಾನ ಮಾಡಿ ಶ್ರಾದ್ಧ ಮಾಡುವವನ ಪಿತೃಗಳು ಕಲ್ಪಾಂತ ಕಾಲದವರೆಗೆ ತೃಪ್ತಿ ಪಡೆಯುವರು. 'ಕುಬ್ಜಾಮ್ರಕ' ಕ್ಷೇತ್ರದಲ್ಲಿಯೂ, 'ಸೌಕರ ಕ್ಷೇತ್ರ'ದಲ್ಲಿಯೂ, ಈ 'ಮಧುರಾ ಕ್ಷೇತ್ರ'ದಲ್ಲಿಯೂ ಯಾವ ಯೋಗ ಯಾಗಗಳ ಜಂಜಾಟವಿಲ್ಲದೇ ಪರಮ ಸಿದ್ಧಿಯನ್ನು ನನ್ನ ಅನುಗ್ರಹದಿಂದ ಪಡೆಯುವರು. ದ್ವಾಪರಯುಗದಲ್ಲಿ ಯಾದವ ಕುಲದಲ್ಲಿ ಅವತಾರ ಮಾಡಲಿರುವ ನಾನು ಈ ಮಧುರಾ ಪಟ್ಟಣದಲ್ಲಿಯೇ ಮುಂದೆ ವಾಸಮಾಡಲಿರುವೆನು. ಅದೇ ಕೃಷ್ಣರೂಪದಿಂದ ಕಂಸನೇ ಮೊದಲಾದ ಮೂವತ್ತೆರಡು ರಾಕ್ಷಸರನ್ನು ಸಂಹರಿಸುವೆನು. ಆ ಮಧುರಾ ಪಟ್ಟಣದಲ್ಲಿರುವ ಯಮುನಾನದಿಯ ತ್ರಿವೇಣೀ ಸಂಗಮದಲ್ಲಿರುವ ಗಂಗೆ ಯಮುನೆಯರಿಗಿಂತ ಪವಿತ್ರವೆನಿಸಿದೆ. ಪಾಪರಹಿತಳಾದ ಭೂದೇವಿಯೇ, ಈ ಮಧುರಾಮಂಡಲದಲ್ಲಿಯೂ ಯಮುನೆಯ ತೀರೋಪತೀರಗಳಲ್ಲಿಯೂ ಅನೇಕ ತೀರ್ಥ ಕ್ಷೇತ್ರಗಳು ಉಂಟು. ಅವುಗಳಲ್ಲಿ ಸ್ನಾನ ಮಾಡುವುದರಿಂದ ಹಾಗೂ ಅಲ್ಲಿ ಪ್ರಾಣತ್ಯಾಗ ಮಾಡುವದರಿಂದ ಮಾನವನು ಮುಂದೆಂದೂ ಮರಳಿ ಹುಟ್ಟದೆ ವೈಕುಂಠ ಲೋಕವನ್ನು ಸೇರುವರು. ಅಲ್ಲಿಯ 'ಅವಿಮುಕ್ತ ತೀರ್ಥ', 'ವಿಶ್ರಾಂತಿತೀರ್ಥ', 'ಪ್ರಯಾಗತೀರ್ಥ', 'ಕಲಖಲ ತೀರ್ಥ' ಮುಂತಾದ ಕ್ಷೇತ್ರಗಳು ಮಾನವರ ಸಂಸಾರ ಬಂಧನ ಮೋಚಕ ಪಾವಕ ಕ್ಷೇತ್ರಗಳಾಗಿರುತ್ತವೆ. ಅದೇ ಮಧುರಾ ಮಂಡಲದಲ್ಲಿ

'ತಿಂದುಕ' ಎಂಬ ರಹಸ್ಯವಾದ ಒಂದು ತೀರ್ಥಕ್ಷೇತ್ರವು ಇರುತ್ತದೆ. ಅಲ್ಲಿ ಸ್ನಾನ ಮಾಡುವ ಮನುಷ್ಯನು ನೇರವಾಗಿ ನನ್ನ ಲೋಕವನ್ನೇ ಸೇರುವನು. ಆ ತೀರ್ಥದಲ್ಲಿ ಹಿಂದೆ ನಡೆದ ವೃತ್ತಾಂತ ಒಂದನ್ನು ಹೇಳುತ್ತೇನೆ ಕೇಳು.

'ಪಾಂಚಾಲ ದೇಶದ 'ಕಾಂಪಿಲ್ಯ' ಎಂಬ ಪಟ್ಟಣದಲ್ಲಿ 'ಬ್ರಹ್ಮದತ್ತ' ಎಂಬ ದೊರೆಯು ರಾಜ್ಯವಾಳುತ್ತಿದ್ದನು. ಅವನ ಆ ರಾಜಧಾನಿಯಲ್ಲಿ 'ತಿಂದುಕ' ಎಂಬ ಹೆಸರಿನ ಓರ್ವ ಕ್ಷೌರಿಕನು ಇರುತ್ತಿದ್ದನು. ಬಹು ಕಾಲದ ಮೇಲೆ ಅವನ ಕುಟುಂಬದ ಜನರೆಲ್ಲರೂ ಮರಣ ಹೊಂದಿದರು. ಅದರಿಂದ ದುಃಖ ಪೀಡಿತನಾದ ಆ ತಿಂದುಕನು ಮನೆಮಾರುಗಳನ್ನೆಲ್ಲ ತೊರೆದು ಮಧುರಾ ಪಟ್ಟಣವನ್ನು ಸೇರಿದನು. ಅಲ್ಲಿ ಓರ್ವ ಬ್ರಾಹ್ಮಣನ ಮನೆಯಲ್ಲಿ ವಾಸಿಸಿ ಪ್ರತಿನಿತ್ಯವೂ ಯಮುನೆಯಲ್ಲಿ ಬೆಳಿಗ್ಗೆ ಎದ್ದು ಸ್ನಾನ ಮಾಡುತ್ತಿದ್ದನು. ತಾನು ಮಾಡಬೇಕಾದ ನೂರಾರು ಕಾರ್ಯಗಳನ್ನೆಲ್ಲ ಆ ನಾಪಿತನು ಮೊದಲು ಯಮುನಾ ಸ್ನಾನ ಮಾಡಿದ ಬಳಿಕವೇ ಮಾಡುತ್ತಿದ್ದನು. ಹೀಗೆ ಬದುಕಿರುವವರೆಗೆ ಅವನು ಒಂದು ದಿನವೂ ಯಮುನಾ ನದಿ ಸ್ನಾನವನ್ನು ಬಿಡಲಿಲ್ಲ. ದೇವರ ದರ್ಶನವನ್ನು ಮಾಡದೇ ಇರಲಿಲ್ಲ. ಅವನ ಈ ನಿತ್ಯ ಕಾರ್ಯಕ್ರಮಕ್ಕೆ ಎಂದೂ ವ್ಯತ್ಯಯವೇ ಬರಲಿಲ್ಲ. ಹೀಗೆ ಯಾವಜ್ಜನ್ಮ ಯಮುನಾಸ್ನಾನ ಮಾಡಿದ ಆ ನಾಪಿತನು ವಾರ್ಧಕ್ಯದಿಂದ ಮರಣಹೊಂದಿದನು. ಮರಣಾನಂತರದಲ್ಲಿ ಆ ಕ್ಷೌರಿಕನು ತೀರ್ಥಸ್ನಾನದ ಪ್ರಭಾವದಿಂದ ತಾನಿದ್ದ ಬ್ರಾಹ್ಮಣನ ಮನೆಯಲ್ಲಿಯೇ ಶ್ರೇಷ್ಠ ಬ್ರಾಹ್ಮಣನಾಗಿ ಹುಟ್ಟಿದನು. ಎಳೆವರೆಯದಲ್ಲಿಯೇ ವೇದಶಾಸ್ತ್ರಗಳನ್ನು ಅಧ್ಯಯನ ಮಾಡಿದನು. ಯಾಗಯೋಗಗಳಲ್ಲಿ ಪಾರಂಗತನಾದನು. ಮಹಾಪಂಡಿತನೂ ವಿಷ್ಣುಭಕ್ತನೂ ಆದ ಆ ಬ್ರಾಹ್ಮಣನಿಗೆ ತನ್ನ ಜನ್ಮಾಂತರದ ನೆನಪು ಅಚ್ಚಳಿಯದೇ ಉಳಿದಿತ್ತು. ತೀರ್ಥಸ್ನಾನದ ಮಹಿಮೆಯನ್ನು ಅರಿತ ಅವನು ಈ ಜನ್ಮದಲ್ಲಿಯೂ ಯಮುನಾ ಸ್ನಾನವನ್ನು ಬದುಕಿರುವವರೆಗೆ ಒಂದು ವ್ರತವಾಗಿ ತಪ್ಪದೇ ಮಾಡಿದನು. ಅದರಿಂದ ಆ ಬ್ರಾಹ್ಮಣನಿಗೆ ಅದೇ ಚರಮ ದೇಹವಾಗಿ ಅವನು ಮೋಕ್ಷವನ್ನು ಹೊಂದಿದನು. ಸುಂದರಿ, ಆ ಯಮುನೆಯ ತೀರದಲ್ಲಿಯ ಸರ್ವ ಪಾಪಗಳನ್ನು ಪರಿಹರಿಸುವ ಸೂರ್ಯ ತೀರ್ಥದಲ್ಲಿ ನಡೆದ ಒಂದು ವೃತ್ತಾಂತವನ್ನು ಹೇಳುತ್ತೇನೆ ಕೇಳು- ''ವಿರೋಚನನ ಮಗನಾದ ಬಲಿಚಕ್ರವರ್ತಿಯು ಪೂರ್ವಕಾಲದಲ್ಲಿ ತನ್ನ ರಾಜ್ಯ ಐಶ್ವರ್ಯವನ್ನೆಲ್ಲ ಕಳೆದುಕೊಂಡು ದರಿದ್ರನಾಗಿ ಅವನು ಈ ಕ್ಷೇತ್ರಕ್ಕೆ ಬಂದು ಈ ತೀರ್ಥದಲ್ಲಿ ಸ್ನಾನಮಾಡಿ ಸೂರ್ಯನಾರಾಯಣನನ್ನು ಅನನ್ಯ ಭಕ್ತಿಯಿಂದ ಆರಾಧಿಸಿದನು. ನಿರಾಹಾರನಾಗಿ ನಿಂತುಕೊಂಡು ಎರಡೂ ತೋಳುಗಳನ್ನು ಮೇಲೆತ್ತಿ ಅತ್ಯುಗ್ರವಾದ ತಪಸ್ಸನ್ನು ಒಂದು ವರ್ಷದವರೆಗೆ ಅವನು ಮಾಡಿದ ಬಳಿಕ ಭಗವಾನ್ ಸೂರ್ಯದೇವನು ಅವನಿಗೆ ಪ್ರಸನ್ನನಾಗಿ ಪ್ರತ್ಯಕ್ಷ ದರುಶನವನ್ನು ಇತ್ತನು.

''ಬಲಿರಾಜ, ನೀನು ಏತಕ್ಕಾಗಿ ಇಂಥ ಉಗ್ರತಪಸ್ಸನ್ನು ಕೈಕೊಂಡಿರುವೆ ! ಎಂದು ಕೇಳಿದನು. ಅದಕ್ಕೆ ಬಲಿರಾಜನು ಕೈಮುಗಿದು '' ದೇವೇಶಾ, ನಾನು ರಾಜ್ಯಭ್ರಷ್ಟನಾಗಿ ಈಗ ಪಾತಾಳದಲ್ಲಿ ವಾಸಿಸುತ್ತೇನೆ. ನನ್ನ ಐಶ್ವರ್ಯವೆಲ್ಲವೂ ಕಳೆದು ಹೋಗಿದೆ. ಕಡುಬಡವನಾದ ನಾನು ಈಗ ನನ್ನ ಕುಟುಂಬ ರಕ್ಷಣೆಯನ್ನು ಹೇಗೆ ಮಾಡಲಿ ? '' ಎಂದು ಕೇಳಿದನು.

ಬಲಿರಾಜನ ಈ ಬಡತನದ ಬವಣೆಯನ್ನು ಕೇಳಿದ ಸೂರ್ಯಭಗವಂತನಿಗೆ ಕರುಣೆ ಬಂದು ಅವನು ತನ್ನ ಕಿರೀಟದಿಂದ ಒಂದು ಚಿಂತಾಮಣಿಯನ್ನು ತೆಗೆದು ಅವನ ಕೈಯಲ್ಲಿ ಕೊಟ್ಟನು. ಆದರಿಂದ ಸಂತುಷ್ಟನಾದ ಆ ದೈತ್ಯಕುಲದ ದೊರೆಯು ಭಾಸ್ಕರನಿಗೆ ಪ್ರಣಾಮ ಮಾಡಿ ಕೃತಾರ್ಥನಾಗಿ ಪಾತಾಳಕ್ಕೆ ಹೊರಟು ಹೋದನು. ಇಂಥ ಪರಮ ಪವಿತ್ರವಾದ ಸೂರ್ಯತೀರ್ಥದಲ್ಲಿ ಪ್ರತಿನಿತ್ಯ ವಿಶೇಷತಃ ಭಾನುವಾರ ಮತ್ತು ಸಂಕ್ರಮಣ ಹಾಗೂ ಸೂರ್ಯ ಚಂದ್ರಾದಿ ಗ್ರಹಣ ಕಾಲದಲ್ಲಿ ಸ್ನಾನಮಾಡುವವರು ರಾಜಸೂಯಾದಿ ಯಾಗಗಳನ್ನು ಮಾಡಿದ ಫಲ ಪುಣ್ಯವನ್ನು ಪಡೆಯುವರು. ಅಲ್ಲಿ ಸುದೈವದಿಂದ ಪ್ರಾಣೋತ್ಸರ್ಗವಾದರೆ ಅವರಿಗೆ ವೈಕುಂಠ ಲೋಕ ಪ್ರಾಪ್ತಿಯೇ ನಿಶ್ಚಿತ.

ಪೂರ್ವಕಾಲದಲ್ಲಿ ಧ್ರುವರಾಜನು ತಪಸ್ಸು ಮಾಡಿ ಸಿದ್ಧಿ ಪಡೆದ ಧ್ರುವತೀರ್ಥದಲ್ಲಿ ಸ್ನಾನಮಾಡುವವನೂ ಮುಖ್ಯವಾಗಿ ಪಿತೃಪಕ್ಷದಲ್ಲಿ ಅಲ್ಲಿ ಶ್ರಾದ್ಧಮಾಡುವವನೂ ಪುಣ್ಯಾತ್ಮನಾಗಿ ತನ್ನ ಎಲ್ಲ ಪಿತೃಗಳನ್ನು ಉದ್ಧಾರ ಮಾಡುವನು. ಮತ್ತು ಈ ಮಧುರಾ ಮಂಡಲದಲ್ಲಿರುವ 'ತೀರ್ಥರಾಜ', 'ಋಷಿತೀರ್ಥ', 'ಮೋಕ್ಷತೀರ್ಥ', 'ಕೋಟಿತೀರ್ಥ', 'ವಾಯುತೀರ್ಥ' ಮುಂತಾದ ಪಾವನ ತೀರ್ಥಗಳಲ್ಲಿ ಸ್ನಾನ ದೇವತಾರ್ಚನೆ, ಶ್ರಾದ್ಧ, ದಾನಧರ್ಮ ಮುಂತಾದವುಗಳನ್ನು ಮಾಡಿದರೆ ಮನುಷ್ಯನಿಗೆ ಬ್ರಹ್ಮಲೋಕ, ಪಿತೃಲೋಕ ಮುಂತಾದ ದಿವ್ಯಲೋಕಗಳ ಪ್ರಾಪ್ತಿಯಾಗಿ ಕೊನೆಗೆ ವೈಕುಂಠ ಪ್ರಯಾಣಕ್ಕೆ ಸಾಧನ ಪೂರ್ತಿಯಾಗುವದು. ಈಗ ನಾನು ಹೇಳಿದ ಈ ಹನ್ನೆರಡು ತೀರ್ಥಗಳಲ್ಲಿ ಪ್ರತಿನಿತ್ಯ ಹಾಗೂ ಪುಣ್ಯ ದಿನ ಪರ್ವಕಾಲಗಳಲ್ಲಿ ಸ್ನಾನ ದಾನ ಜಪ ಹೋಮ ಮುಂತಾದ ಧರ್ಮ ಕಾರ್ಯಗಳನ್ನು ಆಚರಿಸಿದರೆ ಸಾಸಿರ ಪಟ್ಟು ಹೆಚ್ಚಿನ ಪುಣ್ಯವು ಪ್ರಾಪ್ತವಾಗುವದು.

## ಮಧುರಾ ತೀರ್ಥದ ಮಹಿಮೆ

**ಶ್ರೀ ವರಾಹ :-** ಧರಾದೇವಿ, ಶಿವ ಕುಂಡದ ಉತ್ತರದಲ್ಲಿ 'ನವತೀರ್ಥ' ಎಂದು ಪ್ರಸಿದ್ಧವಾದ ಒಂಬತ್ತು ಪಾವನ ತೀರ್ಥಗಳು ಇರುತ್ತವೆ. ಅಲ್ಲಿ ಸ್ನಾನ ಮಾತ್ರದಿಂದಲೇ ಮಾನವರಿಗೆ ಇಹದಲ್ಲಿ ಸೌಭಾಗ್ಯವೂ ಪರತ್ರ ಸ್ವರ್ಗಸೌಖ್ಯವೂ ದೊರಕುವದು. ಆ ನವ ತೀರ್ಥಗಳಲ್ಲಿ ಮರಣ ಹೊಂದಿದ್ದರೆ ನನ್ನ ಲೋಕವನ್ನೇ ಹೊಂದುವರು. ಈ ನವತೀರ್ಥಗಳಲ್ಲಿ ಒಂದಾದ 'ಸ್ವಯಂಮನತೀರ್ಥ'ದಲ್ಲಿ ಹಿಂದೆ ನಡೆದ ಒಂದು ವಿಶೇಷ ಘಟನೆಯನ್ನು ಹೇಳುತ್ತೇನೆ ಕೇಳು- ನೈಮಿಷಾರಣ್ಯದಲ್ಲಿ ಹಿಂದೆ ಒಬ್ಬ ಪಾಪಾಚಾರಿಯಾದ ದುಷ್ಟ ಬೇಡನು ವಾಸಮಾಡುತ್ತಿದ್ದನು. ಅತ್ಯಂತ ದುರಾಚಾರಿಯೂ ಆದ ಆ ದುಷ್ಟವ್ಯಾಧನು ಕೆಲವು ದಿನಗಳ ಬಳಿಕ ಒಮ್ಮೆ ಆ ಮಧುರಾ ಪಟ್ಟಣಕ್ಕೆ ಬಂದನು. ಅಂದು ಕೃಷ್ಣಪಕ್ಷದ ಚತುರ್ದಶಿ ಇದ್ದಿತು. ಯಾವದೋ ಒಂದು ಪಾಪ ಕೃತ್ಯಕ್ಕಾಗಿ ಅವನಿಗೆ ಅಂದೇ ಯಮುನೆಯನ್ನು ದಾಟಿ ಮುಂದೆ ಹೋಗಬೇಕಾಗಿತ್ತು. ಆದರೆ ಅವನು ಯಮುನೆಯನ್ನು ದಾಟುತ್ತ ಸಂಯಮನತೀರ್ಥದಲ್ಲಿ ಪ್ರವೇಶಿಸಿದ ಕೂಡಲೇ ಅವನು ನೀರಿನಲ್ಲಿ ಮುಳುಗಿ ಹೋದನು.

ಆ ತೀರ್ಥದಲ್ಲಿ ಅವನ ಪ್ರಾಣವು ಹೋದದ್ದರಿಂದ ಮುಂದಿನ ಜನ್ಮದಲ್ಲಿ ಆ ಬೇಡನು ಸೌರಾಷ್ಟ್ರದೇಶದ ಅರಸನಾಗಿ ಜನಿಸಿದನು. 'ಯಕ್ಷ್ಮಾಧನು' ಎಂಬ ಹೆಸರಿನ ಆ ಸೌರಾಷ್ಟ್ರ ಸಾರ್ವಭೌಮನಿಗೆ ದೇವ ದುರ್ಲಭವಾದ ಸೌಂದರ್ಯವೂ ಮಾನವರಲ್ಲಿ

ಇಲ್ಲದಿರುವ ಶೌರ್ಯವೂ ತೀರ್ಥಸ್ನಾನದ ಮಹಿಮೆಯಿಂದ ಬಾಲ್ಯದಿಂದಲೇ ಬಳುವಳಿಯಾಗಿ ಬೆಳೆದು ಬಂದಿದ್ದವು. ಈ ರಾಜಕುಮಾರನ ರೂಪ, ಸಿರಿ, ಶೌರ್ಯ, ಸಾಹಸಗಳನ್ನು ಕಂಡು ಕಾಶಿಯ ನರೇಶನು 'ಪೀವರಿ' ಎಂಬ ತನ್ನ ಮಗಳನ್ನು ಅವನಿಗೆ ಕೊಟ್ಟು ಮದುವೆ ಮಾಡಿದನು. ಈ ಸೌರಾಷ್ಟ್ರದ ಮಹಾರಾಜನಿಗೆ ನೂರಾರು ಜನ ಮಡದಿಯರಿದ್ದರೂ ಈ ಪೀವರಿಯೊಬ್ಬಳೇ ಅವನ ಪಟ್ಟದರಸಿಯೂ ಹೃದಯ ದರಸಿಯೂ ಆಗಿದ್ದಳು. ರಾಜನು ರಮಣೀಯವಾದ ವನೋಪವನಗಳಲ್ಲಿಯೂ ಅರಮನೆ ಸಿರಿಮನೆಗಳಲ್ಲಿಯೂ ರಮಿಸಿ ವಿಹರಿಸಿ ರಾಗರಸಿಕತೆಯಿಂದಲೂ ಅವಳನ್ನು ಸಂತೋಷ ಪಡಿಸುತ್ತಿದ್ದನು. ಪ್ರಜೆಗಳನ್ನು ಪಾಲಿಸುತ್ತ ದಾನಧರ್ಮಗಳನ್ನು ಮಾಡುತ್ತಲಿರುವ ಆ ದೊರೆಗೆ ಎಲ್ಲರಂತೆ ಭೋಗಾನುಭೋಗಗಳಲ್ಲಿ ರಾಗ ರಕ್ತಿಯೂ ತೀರ್ವಾಸಕ್ತಿಯೂ ಇದ್ದುದರಿಂದ ಅವನು ತನ್ನ ಪ್ರೇಯಸಿಯಾದ ಪೀವರಿಯೊಡನೆ ಸುಖ ಸಂಕಥಾ ಲೀಲಾ ವಿನೋದ ವಿಲಾಸ ವಿಭ್ರಮಗಳಲ್ಲಿ ತನ್ನ ಎಪ್ಪತ್ತೇಳು ವರ್ಷದ ಆಯುಷ್ಯವನ್ನು ಕಳೆದನು. ಅವನಿಗೆ ಮಂಗಳಾಂಗಿಯರಾದ ಐದು ಜನ ಹೆಣ್ಣು ಮಕ್ಕಳೂ, ಏಳು ಜನ ಗಂಡು ಮಕ್ಕಳೂ ಜನಿಸಿದರು. ಕಮಲಗಣ್ಣಿನ ತನ್ನ ಆ ಪಂಚಕನ್ನಿಕೆಯರನ್ನು ಸಂಪನ್ನ ರಾಜಮನೆತನಗಳಿಗೆ ಕೊಟ್ಟು ಮದುವೆ ಮಾಡಿಕೊಟ್ಟನು. ತನ್ನ ಏಳೂ ಗಂಡುಮಕ್ಕಳನ್ನೂ ತಕ್ಕ ಸ್ಥಾನಗಳಲ್ಲಿ ರಾಜಾಧಿಕಾರಿಗಳನ್ನಾಗಿ ನೇಮಿಸಿದನು.

ಒಂದು ದಿನ ರಾತ್ರಿ ಪಟ್ಟಮಹಿಷಿಯಾದ ಪೀವರಿಯೊಡನೆ ಸುಖ ನಿದ್ರೆಯಲ್ಲಿ ಪವಡಿಸಿದ ಆ ಮಹಾರಾಜನು ತಾನು ಜನ್ಮಾಂತರದಲ್ಲಿ ಮುಳುಗಿ ಮರಣ ಹೊಂದಿದ ಮಧುರಾ ಕ್ಷೇತ್ರದ 'ಸಂಯಮನ ತೀರ್ಥ'ವನ್ನು ನೆನೆದು ಅಲ್ಲಿಯೇ ''ಹಾಯ್ ಹಾಯ್'' ''ಅಕಟಕಟಾ'' ಎಂದು ಕೂಗಿದನು. ಅವನ ಕೂಗಾಟಕ್ಕೆ ಪೀವರಿಗೂ ಎಚ್ಚರವಾಯಿತು. ನಿದ್ದೆಯಿಂದ ಎದ್ದು ಕುಳಿತು. ಹಾ ಹಾ ಎಂದು ಉದ್ಗಾರ ತೆಗೆಯುವ ತನ್ನ ಪತಿಯ ಪಕ್ಕಕ್ಕೆ ಸರಿದು ಸ್ನೇಹದಿಂದ ತನ್ನ ನಲ್ಲನ ಗಲ್ಲವನ್ನು ನೇವರಿಸಿ '' ನಾಥಾ, ಇದೇನು ಹೀಗೇಕೆ ಬಡಬಡಸುತ್ತಿರುವಿರಿ ? ನಿದ್ದೆಯಿಂದ ಎಚ್ಚರವಾದ ಬಳಿಕವೂ ಹಾಸಿಗೆಯ ಮೇಲೆ ಕುಳಿತು ನೀವು ಏನನ್ನು ಕನವರಿಸುತ್ತಿರುವಿರಿ'' ಎಂದು ಕೇಳಿದಳು. ಅದಕ್ಕೆ ಮಹಾರಾಜನು ನಕ್ಕು ''ಮಲಗಿದವರೂ, ಮದ್ಯದ ಮದದಲ್ಲಿದ್ದವರೂ, ತಲೆಕೆಟ್ಟವರೂ, ಅಸಂಬದ್ಧವಾಗಿ ಏನೇನೊ ಬಡಬಡಿಸುತ್ತಾರೆ. ಅದರಂತೆ ನಿದ್ದೆಯ ಗುಂಗಿಲ್ಲಿದ್ದ ನಾನು ಏನೇನೋ ಮಾತನಾಡಿರಬಹುದು. ಅದನ್ನು ಏನು ಎಂತು ಎಂದು ನೀನು ಕೇಳಬಾರದು ನಾನು ಹೇಳಬಾರದು. '' ಎಂದು ನುಡಿದನು. ಇದನ್ನು ಕೇಳಿ ಆ ಮಹಾರಾಣಿಗೆ ಬಹಳ ಕುತೂಹಲವೆನಿಸಿತು. ಅವಳು ಕನಸಿನ ಮಾತಿನ ನಿಜಾರ್ಥವನ್ನು ಹೇಳಲೇಬೇಕೆಂದು ಪಟ್ಟುಹಿಡಿದು '' ಪ್ರಿಯಕರ, ನೀವು ಆ ನಿಮ್ಮ ಕನವರಿಕೆಯ ಸತ್ಯಾರ್ಥವನ್ನು ದಯವಿಟ್ಟು ನನಗೆ ತಿಳಿಸಿರಿ. ನಾನು ನಿಮ್ಮ ನಿಜವಾದ ಪ್ರೀತಿಯ ಮಡದಿಯಾಗಿದ್ದರೆ ನನ್ನಿಂದ ಅದನ್ನು ಮುಚ್ಚಿಇಡಬೇಡಿರಿ. ಒಂದು ವೇಳೆ ನೀವು ನನಗೆ ಆ ನಿಮ್ಮ ಸ್ವಪ್ನೋತ್ತರ ಕಾಲದಲ್ಲಿ ನೀವು ತೆಗೆದ ಉದ್ಗಾರದ ಗುಟ್ಟನ್ನು ನೀವು ತಿಳಿಸದಿದ್ದರೆ ನಾನು ಇಲ್ಲಿಯೇ ನಿಮ್ಮೆದುರಿಗೆ ಪ್ರಾಣಬಿಡುತ್ತೇನೆ.'' ಎಂದು ಅಗ್ರಹಪಡಿಸಿದಳು. ಅದನ್ನು ಕೇಳಿ ಮಾಹಾರಾಜನು

''ಸುಂದರಿ, ನಿನಗೆ ಆ ನನ್ನ ಕನವರಿಕೆಯ ರಹಸ್ಯವನ್ನು ಅರಿಯಲು ಇಷ್ಟು ಕುತೂಹಲವಿದ್ದದ್ದೇ ಆದರೆ ನಾವಿಬ್ಬರೂ ಆ ಮಧುರಾಪುರಿಗೆ ಹೋಗೋಣ ನಡೆ. ಆ ದಿವ್ಯ ಕ್ಷೇತ್ರದಲ್ಲಿ ನನ್ನ ಆ ಹಾಹಾಕಾರದ ಗುಟ್ಟನ್ನು ನಿನಗೆ ತಿಳಿಸುತ್ತೇನೆ. ಚಲುವುಗಣ್ಣಿನ ಅರಸಿಯೇ, ಇಲ್ಲಿಂದ ಹೊರಡುವ ಮುನ್ನ ಬ್ರಾಹ್ಮಣರಿಗೆ ವಿಪುಲವಾಗಿ ದಾನ ಕೊಡು, ಧರ್ಮ ಮಾಡು '' ಎಂದು ಹೇಳಿದನು. ಅದರಂತೆ ಆ ರಾಜದಂಪತಿಗಳು ತಮ್ಮ ಮಕ್ಕಳಿಗೂ ಮತ್ತೂ ಹೆಣ್ಣುಮಕ್ಕಳ ಮಕ್ಕಳಿಗೂ ತಮ್ಮ ರಾಜ್ಯಕೋಶ, ಗ್ರಾಮ, ಧಾಮ, ಮುತ್ತು ರತ್ನಗಳನ್ನೆಲ್ಲ ಯಥಾ ಯೋಗ್ಯವಾಗಿ ಹಂಚಿಕೊಟ್ಟರು. ತಮ್ಮ ರಾಜ್ಯದ ಪುರಗ್ರಾಮಗಳಲ್ಲಿರುವ ಪ್ರಜೆಗಳನ್ನೆಲ್ಲ ಕರೆಯಿಸಿ ಸರಿಯಾಗಿ ಸತ್ಕರಿಸಿ ಅವರಿಗೆ ವಿನಯದಿಂದ ನುಡಿದರು.

''ನಮ್ಮ ತಂದೆ, ತಾತ, ಮುತ್ತಾತರಿಂದ ನಡೆದುಬಂದ ಈ ರಾಜ್ಯಾಧಿಕಾರವನ್ನು ನಿಮ್ಮೆಲ್ಲರ ಸಮ್ಮತಿ ಇದ್ದರೆ ನನ್ನ ಮಕ್ಕಳಿಗೆ ಒಪ್ಪಿಸುತ್ತೇನೆ. ನೀವು ಎಂದಿನಂತೆ ಈ ಸಾಮ್ರಾಜ್ಯವನ್ನು ಸಂರಕ್ಷಿಸಿರಿ'' ಮನುಷ್ಯನಿಗೆ ರಾಜ್ಯ ಅಧಿಕಾರ, ಐಶ್ವರ್ಯ, ಹೆಂಡತಿ, ಮಕ್ಕಳು, ಪರಿವಾರ, ಸಂಸಾರ ಇದೆಲ್ಲವೂ ಎಂದೂ ಸಾಕು ಎನಿಸುವುದಿಲ್ಲ. ಶಾಶ್ವತವಾಗಿ ವಿಷಯ ಸುಖವನ್ನು ಅನುಭವಿಸುತ್ತ ಇಲ್ಲಿಯೇ ಇದ್ದು ಬಿಡಬೇಕೆಂದು ಮಾನವನು ಇಚ್ಛಿಸುವನು. ಆದರೆ ಯಮದೇವರ ಇಚ್ಛೆಯು ಬೇರೆಯಾಗಿರುವದು. ಮಾನವರ ಇಚ್ಛೆಯು ನಡೆಯಲಾರದು. ದೇವರ ಇಚ್ಛೆಯು ತಪ್ಪಲಾರದು. ಇದನ್ನೆಲ್ಲ ಅರಿತು ಮಾನವನು ತನ್ನ ಮುಂದಿನ ಕಲ್ಯಾಣ ಪಥದಲ್ಲಿ ಆತ್ಮಸಾಧನೆಯನ್ನು ಮಾಡಿಕೊಳ್ಳಬೇಕು. ಇದನ್ನೆಲ್ಲ ವಿಚಾರಿಸಿಯೇ ನಾವು ಈಗ ಪರಮ ಪುಣ್ಯ ಕ್ಷೇತ್ರವಾದ ಮಧುರಾಪುರಿಗೆ ಹೊರಟಿದ್ದೇವೆ. ನಾವು ಈ ವರೆಗೆ ರಾಜ್ಯವನ್ನಾಳಿದ್ದಾಯಿತು. ವಿಷಯ ಸುಖವನ್ನು ಭೋಗಿಸಿದ್ದೂ ಆಯಿತು. ಆದರೆ ನಮಗೆ ಈಗ ತಿಳಿವಳಿಕೆ ಬಂದಿದೆ. ತ್ಯಾಗಕ್ಕಿಂತ ಹೆಚ್ಚಿನ ಸುಖವಿಲ್ಲ. ವಿದ್ಯೆಗೆ ಸಮನಾದ ಕಣ್ಣಿಲ್ಲ. ಕಣ್ಣಿಗೆ ಸಮವಾದ ಬಲವಿಲ್ಲ. ರಾಗಕ್ಕೆ ಸಮವಾದ ದುಃಖವಿಲ್ಲ. ದಾನ ಸಮವಾದ ಆನಂದವಿಲ್ಲ. ಇದನ್ನೆಲ್ಲ ತಿಳಿದ ಯಾವ ಮನುಷ್ಯನು ಈ ವಿಷಯ ಜಾಲದಲ್ಲಿ ಸಿಕ್ಕು ಬರಿ ಭೋಗಾನುಭೋಗಗಳನ್ನು ಬಯಸುವನು? ಮೋಕ್ಷ ಪ್ರಾಪಕವಾದ ಮುಖ್ಯ ಧರ್ಮಗಳನ್ನು ಯಾವನು ಬಿಟ್ಟಾನು ! ಪ್ರಾಯಿಕವಾದ ಈ ಎಲ್ಲ ಸರ್ವ ಕಾಮಗಳನ್ನು ಬಿಟ್ಟು ಬಿಡುವದೇ ಶ್ರೇಷ್ಠ ಮಾರ್ಗವಾಗಿದೆ''

ಪ್ರಜಾಪರಿವಾರಕ್ಕೆಲ್ಲ ಹೀಗೆ ಹೇಳಿ ಅವರೆಲ್ಲರೂ ತಮ್ಮ ಸಮ್ಮತಿಯನ್ನು ಸೂಚಿಸಿದ ಬಳಿಕ ತನ್ನ ಜ್ಯೇಷ್ಠ ಪುತ್ರನನ್ನು ಸಾಮ್ರಾಜ್ಯ ಸಿಂಹಾಸನದ ಮೇಲೆ ಕೂಡಿಸಿದನು, ಅವನಿಗೆ ಪಟ್ಟಾಭಿಷೇಕವನ್ನು ಮಾಡಿ, ಮಂತ್ರಿ, ಸೇನಾಪತಿ ಮುಂತಾದ ಪ್ರಜಾಧುರೀಣರನ್ನು ಅವನಿಗೆ ಸಹಾಯಕರನ್ನಾಗಿ ಅಧಿಕಾರ ಸ್ಥಾನಗಳಲ್ಲಿ ನೇಮಿಸಿದನು, ಎಲ್ಲ ನಾಗರಿಕರನ್ನು ಕಂಡು ಮಾತನಾಡಿಸಿ ಅವರಿಂದ ಪ್ರೀತಿಯಿಂದ ಬೀಳ್ಕೊಡಲ್ಪಟ್ಟವನಾಗಿ ಚತುರಂಗ ಸೈನ್ಯದೊಂದಿಗೆ ಮಧುರಾ ಪಟ್ಟಣವನ್ನು ಸೇರಿದನು. ಹನ್ನೆರಡು ಪಾವನ ತೀರ್ಥಗಳಿಂದ ಯುಕ್ತವಾದ ಆ ಮಧುರಾ ಪಟ್ಟಣವು ಆ ರಾಜದಂಪತಿಗಳಿಗೆ ಇಂದ್ರ ಪುರಿಯಾದ ಅಮರಾವತಿಯಂತೆ ಅತ್ಯಂತ ಮನೋಹರವಾಗಿ ತೋರಿತು.

ಧರಣಿ, ಮಧುರಾ ಮಂಡಲದ ದ್ವಾದಶ ತೀರ್ಥಗಳಲ್ಲಿ ಒಂದಾದ 'ಸಂಯಮನ ತೀರ್ಥ'ದ ಮಹಿಮೆಯನ್ನು ನಾನು ನಿನಗೆ ತಿಳಿಸಿದೆನು. ಇದರಂತೆ ಉಳಿದ ಹನ್ನೊಂದು ತೀರ್ಥಗಳು ಮಹಾ ಮಹಿಮೋಪೇತವಾಗಿವೆ. ಎರಡನೆಯದಾದ 'ಮಧುವನ'ವು ವಿಷ್ಣುವಿನ ಸ್ಥಾನವಾಗಿದೆ. ಇದರಂತೆ 'ಕುಂದವನ', 'ಕಾಮ್ಯವನ', 'ಬಕುಲವನ', 'ಭದ್ರವನ', 'ಖಾದಿರವನ', 'ಲೋಹಜಂಗವನ', 'ಬಿಲ್ವವನ', 'ಭಾಂಡೀವರನ', 'ವೃಂದಾವನ' ಎಂಬ ಈ ಹನ್ನೆರಡು ವನಗಳು ಪರಮ ಪವಿತ್ರವಾಗಿದ್ದು ಅವುಗಳಲ್ಲಿ ಸ್ನಾನ ಮಾಡುವದರಿಂದ ವಿಷ್ಣುಲೋಕ ಪ್ರಾಪ್ತಿಯಾಗುವದು. ಹನ್ನೆರಡನೆಯದಾದ ವೃಂದಾವನವು ವೃಂದಾದೇವಿಯಿಂದ ರಕ್ಷಿತವಾಗಿದ್ದು ಶ್ರೀ ಕೃಷ್ಣನ ಲೀಲಾ ವಿಹಾರ ಸ್ಥಾನವಾಗಿರುತ್ತದೆ. ಈ ವೃಂದಾವನವನ್ನು ಕಣ್ಣಿನಿಂದ ನೋಡಿ ಗೋವಿಂದನ ಸಂದರ್ಶನವನ್ನು ಮಾಡಿಕೊಂಡವರು ಎಂದೂ ಯಮಪುರಿಗೆ ಹೋಗುವದಿಲ್ಲ.

## ಯಮುನಾತೀರ್ಥ ಮಹಿಮೆ

ಶ್ರೀ ವರಾಹ :- ಇಂಥ ರಮ್ಯವೂ ಪವಿತ್ರವೂ ಆದ ಮಧುರಾಪಟ್ಟಣವನ್ನು ನೋಡಿ ಯಕ್ಷಧನು ಮಹಾರಾಜನಿಗೆ ಪರಮಾನಂದವಾಯಿತು. ಅವನ ಪ್ರೇಯಸಿಯೂ ಪಟ್ಟದರಸಿಯೂ ಆದ ಪೀವರೀ ರಾಣಿಗಂತೂ ಅತ್ಯಂತ ಸಂತೋಷವಾಯಿತು. ಅವರಿಬ್ಬರೂ ಆತ್ಮಸಾಧನೆಯನ್ನು ಮಾಡಿಕೊಳ್ಳುತ್ತ ಕೆಲವುದಿನ ವಾಸಮಾಡಿದರು. ಒಂದು ದಿನ ಪೀವರಿ ತಾನು ಮಹಾರಾಜನ ಬಳಿಗೆ ಹೋಗಿ ವಿನಯದಿಂದ ಬಿನ್ನವಿಸಿದಳು.-

''ಮಹಾರಾಜಾ ಹಿಂದೆ ನಾವು ಸೌರಾಷ್ಟ್ರ ರಾಜಧಾನಿಯಲ್ಲಿದ್ದಾಗ ಮಧುರೆಗೆ ಹೋದ ಬಳಿಕ ತಿಳಿಸುತ್ತೇನೆ ಎಂದು ಹೇಳಿದ, ನಿಮ್ಮ ಕನವರಿಕೆಯ ರಹಸ್ಯವನ್ನು ದಯಮಾಡಿ ತಿಳಿಸಬೇಕು. '' ಅದನ್ನು ಕೇಳಿ ಮಹಾರಾಜನು '' ನೀನು ಮೊದಲು ನಿನ್ನ ಗುಟ್ಟನ್ನು ಹೇಳು. ಅನಂತರ ನಾನು ನನ್ನ ರಹಸ್ಯವನ್ನು ನಿನಗೆ ತಿಳಿಸುವೆನು '' ಎಂದು ಹೇಳಿದನು. ಆಗ ಗುಣಶಾಲಿನಿಯಾದ ಅವನ ಪಟ್ಟಮಹಿಷಿಯು ಮುಗುಳು ನಕ್ಕು ಮಹಾರಾಜನನ್ನು ಕುರಿತು ಮೆಲ್ಲನೆ ಪ್ರೀತಿಯಿಂದ ಮಾತನಾಡಿದಳು.-

''ನಾಥ, ನಾನು ಗಂಗಾ ತೀರದಲ್ಲಿ ಹಿಂದೆ ನನ್ನ ಕಳೆದ ಜನ್ಮದಲ್ಲಿ ಪೀವರಿ ಎಂಬ ಹೆಣ್ಣುಮಗಳಾಗಿ ಹುಟ್ಟಿ ವಾಸಮಾಡುತ್ತಿದ್ದೆನು. ಒಮ್ಮೆ ಮಧುರಾ ಪಟ್ಟಣವನ್ನು ನೋಡಬೇಕೆಂಬ ಹಿರಿ ಆಶೆಯಿಂದ ಇಲ್ಲಿಗೆ ಬಂದೆನು. ಅಂದು ಕಾರ್ತೀಕ ಶುದ್ಧ ದ್ವಾದಶಿಯ ದಿನವಾಗಿದ್ದಿತು. ನೌಕೆಯಲ್ಲಿ ಕುಳಿತು ಯಮುನೆಯ ಪ್ರವಾಹದ ಗುಂಟ ದಂಡೆಗೆ ಬರುವಾಗ ಆ ನಮ್ಮ ಹಡಗು ಬಿರುಗಾಳಿಗೆ ಸಿಕ್ಕು ಬುಡಮೇಲಾಗಿ ಹೊರಳಿ ನೀರಿನ ಪಾಲಾಯಿತು. ನಾನೂ ಇದೇ ಧಾರಾಪತನ ತೀರ್ಥದಲ್ಲಿ ಮುಳುಗಿ ಮರಣ ಹೊಂದಿದೆನು. ಈ ತೀರ್ಥದ ಪ್ರಭಾವದಿಂದ ಮುಂದೆ ನಾನು ಕಾಶೀರಾಜನ ಹೊಟ್ಟೆಯಿಂದ ರಾಜಕುಮಾರಿಯಾಗಿ ಹುಟ್ಟಿ ಬಂದೆನು. ನೀನು ನನ್ನನ್ನು ಮದುವೆಯಾದೆ. ನನಗೆ ಈ ತೀರ್ಥ ಮರಣದ ಪುಣ್ಯದಿಂದ ಹಿಂದಿನ ನೆನಪು ಮಾಸಿರಲಿಲ್ಲ. ಈ ಪುಣ್ಯ ತೀರ್ಥದಲ್ಲಿ ಕಳೆದ ಜನ್ಮದಲ್ಲಿ ಆದ ದೇಹಪಾತದ ಪ್ರಭಾವದಿಂದ ನನ್ನ ಧರ್ಮ ಬುದ್ಧಿಯೂ, ದೇವಭಕ್ತಿಯೂ ಅಕ್ಷತವಾಗಿ ಅಭಿವೃದ್ಧಿಗೊಂಡಿವೆ.'' ಈ ತನ್ನ

ಮನದನ್ನೆಯ ಜನ್ಮಾಂತರದ ಕಥೆಯನ್ನು ಕೇಳಿ ಕೌತುಕಗೊಂಡ ಆ ಸೌರಾಷ್ಟ್ರದ ಅರಸನು ತನ್ನ ಹಿಂದಿನ ಜನ್ಮದ ಹುಟ್ಟು ಗುಟ್ಟುಗಳನ್ನು ಇಂತು ವಿವರಿಸಿದನು-

''ಪ್ರಿಯೇ, ನಿನ್ನಂತೆ ನಾನಾದರೂ ಜನ್ಮಾಂತರದಲ್ಲಿ, ನೈಮಿಷಾರಣ್ಯದಲ್ಲಿ ಒಬ್ಬ ಬೇಡನಾಗಿದ್ದೆ. ಒಂದು ಕೃಷ್ಣಪಕ್ಷದ ಚತುರ್ದಶಿಯಂದು ಯಮುನೆಯನ್ನು ದಾಟುವಾಗ ನದಿಯ ನೀರಿನಲ್ಲಿ ಮುಳುಗಿ ಆ ತೀರ್ಥದ ಪ್ರಭಾವದಿಂದ ಈ ಮರುಜನ್ಮದಲ್ಲಿ ಸೌರಾಷ್ಟ್ರದ ಮಹಾರಾಜನ ಕುಮಾರನಾಗಿ ಜನಿಸಿ ಬಂದೆ. ನಿನ್ನಂಥ ಸಾಧ್ವೀಮಣಿಯನ್ನು ಕೈ ಹಿಡಿದೆ. ನನಗೂ ನಿನ್ನಂತೆ ಮಧುರಾನಾಥನ ದಯೆಯಿಂದ ಕಳೆದ ಜನ್ಮದ ಸ್ಮರಣೆಯು ಜಾಗರೂಕವಾಗಿ ಇದ್ದಿತು. ಆದುದರಿಂದಲೇ ನನ್ನ ಕನವರಿಕೆಯ ರಹಸ್ಯವನ್ನು ನೀನು ಕೇಳಿದಾಗ ಮಧುರಾಪುರಿಗೆ ಹೋಗೋಣ ಎಂದು ಹೇಳಿದೆ. ಆ ನೆವದಿಂದ ಧರ್ಮಪ್ರಾಣಳಾದ ನಿನ್ನನ್ನು ಕರೆದುಕೊಂಡು ಈ ಕ್ಷೇತ್ರಕ್ಕೆ ಬಂದೆ. ಇಲ್ಲಿ ಮಧುರಾನಾಥನ ಸೇವೆಗಾಗಿ ನಿನ್ನೊಡನೆ ನೆಲೆನಿಂತೆ.''

ಹೀಗೆ ಪರಸ್ಪರ ಪೂರ್ವಕಥೆಯನ್ನು ಹೇಳಿ ಕೇಳಿ ಭಕ್ತಿಯುಕ್ತರಾದ ಆ ರಾಜ ದಂಪತಿಗಳಿಬ್ಬರೂ ಆ ಮಧುರಾ ಪಟ್ಟಣದಲ್ಲಿಯೇ ವಾಸಮಾಡಿದರು. ಪ್ರತಿನಿತ್ಯದಲ್ಲಿಯೂ ತಪ್ಪದೇ ಯಮುನೆಯ ತೀರ್ಥದಲ್ಲಿ ಸ್ನಾನಮಾಡಿದರು. ಕ್ಷೇತ್ರಸ್ವಾಮಿಯಾದ ನನ್ನ ದರ್ಶನವನ್ನು ನೇಮದಿಂದ ತೆಗೆದುಕೊಂಡು ನನ್ನ ನಿರಂತರ ಧ್ಯಾನೋಪಾಸನೆಯಲ್ಲಿಯೇ ಜನ್ಮವನ್ನು ಕಳೆದರು. ಮರಣಾಂತರದಲ್ಲಿ ನನ್ನ ಲೋಕವನ್ನೇ ಸೇರಿದರು. ಧರಾದೇವಿ, ಮಧುರೆಯಲ್ಲಿ ನಡೆದ ಮಹಾ ಆಶ್ಚರ್ಯದ ಈ ಘಟನೆಯನ್ನು ನಿನಗೆ ಹೇಳಿದುದಾಯಿತು. ಈ 'ಧಾರಾಪತನ ತೀರ್ಥ'ದಂತೆ ಪರಮ ಪವಿತ್ರವಾದ 'ಯಮುನೇಶ್ವರತೀರ್ಥ', 'ನಾಗತೀರ್ಥ', 'ಘಂಟಾಭರಣತೀರ್ಥ', 'ಬ್ರಹ್ಮತೀರ್ಥ', 'ಚಂದ್ರತೀರ್ಥ', 'ಸರಸ್ವತೀ ಪತನತೀರ್ಥ', 'ದಶಾಶ್ವಮೇಘತೀರ್ಥ', 'ಮಾನಸತೀರ್ಥ', 'ವಿಘ್ನರಾಜತೀರ್ಥ', 'ಕೋಟಿತೀರ್ಥ' ಮುಂತಾದ 'ಪಾವನತೀರ್ಥ'ಗಳಲ್ಲಿ ಪರ್ವಕಾಲ ಪುಣ್ಯ ದಿನಗಳಲ್ಲಿ ಸ್ನಾನ, ಶ್ರಾದ್ಧ, ದೇವತಾರ್ಚನೆ, ದಾನ ಧರ್ಮ, ಮುಂತಾದ ಪುಣ್ಯಕರ್ಮಗಳನ್ನು ಮಾಡುವವರು ಉದ್ಧೃತರಾಗಿ ಸತ್ಯಲೋಕ, ರುದ್ರಲೋಕ, ವಿಷ್ಣುಲೋಕ, ಮುಂತಾದ ದಿವ್ಯಗತಿಯನ್ನು ಹೊಂದುವರು. ವಿಶೇಷವಾಗಿ ಮಧುರೆಯ ಪಶ್ಚಿಮ ಪಾರ್ಶ್ವದಲ್ಲಿ ಹಿಂದೆ ಸೃಷ್ಟಿಕಾಲದಲ್ಲಿ ತಮ್ಮ ಮನಸ್ಸಿನಿಂದಲೇ ನಿರ್ಮಿಸಿದ ಮಾನಸ ತೀರ್ಥದಲ್ಲಿ ಸಿದ್ಧ ತಾಪಸರೂ ಋಷಿಋಷಭರೂ ಯಾವಾಗಲೂ ಸ್ನಾನೋಪಾಸನೆಗಳನ್ನು ಮಾಡುತ್ತಲಿರುತ್ತಾರೆ. ನಾನು ಹೇಳಿದ ವಿಘ್ನರಾಜ ತೀರ್ಥದಲ್ಲಿ ಅಷ್ಟಮೀ ಚತುರ್ದಶೀ ಹಾಗೂ ಚತುರ್ಥೀ ದಿನಗಳಲ್ಲಿ ಸ್ನಾನ ಮಾಡುವವರಿಗೆ ವಿದ್ಯಾರಂಭ ಮತ್ತು ಯಜ್ಞಯಾಗಾದಿ ಪುಣ್ಯಕರ್ಮಗಳಲ್ಲಿ ಎಂದೂ ವಿಘ್ನಬಾರದಂತೆ ಹಾಗೂ ಅವರು ಕೈಹಿಡಿದ ಕಾರ್ಯಗಳೆಲ್ಲವೂ ನಿರ್ವಿಘ್ನವಾಗಿ ಕೊನೆಗಾಣುವಂತೆ ಆ ಗಣಪತಿಯು ಕರುಣಿಸುವನು. ಈ ಎಲ್ಲ ತೀರ್ಥಗಳಲ್ಲಿ ಲೋಭ ಮೋಹಗಳನ್ನು ಬಿಟ್ಟು ದೇವರನ್ನು ಭಕ್ತಿಯಿಂದ ಧ್ಯಾನಮಾಡುತ್ತ ದೇಹ ತ್ಯಾಗ ಮಾಡುವವರು ಸ್ವರ್ಗಾಪವರ್ಗಗಳನ್ನು ಸುಲಭವಾಗಿ ಹೊಂದುತ್ತಾರೆ.

# ಅಕ್ರೂರ ತೀರ್ಥದ ಪ್ರಭಾವ

ಶ್ರೀ ವರಾಹ ಕ್ಷಿತಿದೇವಿ ಮರ್ತ್ಯಲೋಕದಲ್ಲಿ ಅತ್ಯಂತ ದುರ್ಲಭವೂ ಪ್ರಸಿದ್ಧವೂ ಆದ ಅನಂತ ತೀರ್ಥದ ಮಹಿಮೆಯನ್ನು ಹೇಳುತ್ತೇನೆ ಕೇಳು. ಈ ಅನಂತ ತೀರ್ಥದಲ್ಲಿ ಜನರಿಗೆಲ್ಲ ಹಿತವನ್ನು ಉಂಟುಮಾಡಬೇಕೆಂದು ನಾನು ನಿತ್ಯವೂ ಸನ್ನಿಹಿತನಾಗಿರುತ್ತೇನೆ. ಈ ದಿವ್ಯ ಕ್ಷೇತ್ರದಲ್ಲಿ ನನ್ನ ದರ್ಶನ ಮಾಡಿಕೊಂಡವರು ಮೋಕ್ಷಭಾಗಿಗಳು ಆಗುವರು. ಉತ್ತರಾಯಣ ದಕ್ಷಿಣಾಯಣ ಪುಣ್ಯಕಾಲಗಳಲ್ಲಿಯೂ, ಮೇಷ ತುಲಾ ಸಂಕ್ರಮಣ ದಲ್ಲಿಯೂ ಮತ್ತು ವೃಷಭ, ಸಿಂಹ, ವೃಶ್ಚಿಕ, ಕುಂಭರಾಶಿಗಳ ಸಂಕ್ರಮಣ ಕಾಲದಲ್ಲಿಯೂ ಈ ಅನಂತ ತೀರ್ಥದಲ್ಲಿ ಸ್ನಾನಮಾಡಿ ಆ ಅನಂತನ ದರ್ಶನವನ್ನು ತೆಗೆದುಕೊಂಡು ಅವನ ಧ್ಯಾನ ಪೂಜೆಗಳನ್ನು ಮಾಡುವವರೂ ಸರ್ವಪಾಪಗಳಿಂದಲೂ ಮುಕ್ತರಾಗುತ್ತಾರೆ. ವಸುಂಧರೇ, ನನ್ನದೇ ಇನ್ನೊಂದು ಕ್ಷೇತ್ರವಾದ ಅಕ್ರೂರ ತೀರ್ಥದಲ್ಲಿ ಸೂರ್ಯಗ್ರಹಣ ಕಾಲದಲ್ಲಿ ಸ್ನಾನವಾಡುವವರು ರಾಜಸೂಯ ಅಶ್ವಮೇಧಾಧಿ ಯಜ್ಞಗಳನ್ನು ಮಾಡಿದ ಪುಣ್ಯಫಲವನ್ನು ಪಡೆಯುತ್ತಾರೆ. ಆ ತೀರ ರಹಸ್ಯವೂ, ಸರ್ವಶ್ರೇಷ್ಠರೂ ಆದ ಈ ಅಕ್ರೂರ ತೀರ್ಥಕ್ಕೆ ತೀರ್ಥರಾಜ ಎಂಬ ಹೆಸರು ಬಂದಿದೆ. ಈ ಅಕ್ರೂರ ತೀರ್ಥದಲ್ಲಿ ಪೂರ್ವಕಾಲದಲ್ಲಿ ನಡೆದ ಒಂದು ಸಮಾಚಾರವನ್ನು ತಿಳಿಸುತ್ತೇನೆ ಕೇಳು-

ಹಿಂದೆ 'ಸುಧನ' ಎಂಬ ಹೆಸರಿನ ನನ್ನ ನಿತ್ಯಭಕ್ತನು ಒಬ್ಬನಿದ್ದನು. ಅವನು ಪ್ರತಿದಿನವೂ ತಪ್ಪದೇ ದೇವರ ಪೂಜೆಯನ್ನು ವಿಧಿಪೂರ್ವಕವಾಗಿ ಮಾಡುತ್ತಿದ್ದನು. ಅನುದಿನವೂ ಸುಗಂಧಿ ಕುಸುಮಗಳಿಂದಲೂ ಧೂಪದೀಪ ನೈವೇದ್ಯಾದಿ ಉಪಹಾರ ಗಳಿಂದಲೂ ಶಾಸ್ತ್ರೋಕ್ತ ಉಪಚಾರಗಳಿಂದಲೂ ಸಕಾಲದಲ್ಲಿ ಹರಿಪೂಜೆಯನ್ನು ಭಕ್ತಿಯಿಂದ ಮಾಡುತ್ತಿದ್ದನು. ಇದರಿಂದ ಅವನಿಗೆ ಸಂಸಾರದಲ್ಲಿ ಯಾವ ಕೊರತೆಯೂ ಇರಲಿಲ್ಲ. ಮೆಚ್ಚಿನ ಮಡದಿ, ವಿವೇಕಿಯಾದ ಮಕ್ಕಳು, ತುಂಬಿದ ಮನೆ, ಧನಧಾನ್ಯಗಳಿಂದ ತುಳುಕುವ ಮನೆಯಲ್ಲಿಯ ಕಾಳಿನ ಕಣಜಗಳು, ಪ್ರೀತಿಸುವ ನೆಂಟರಿಷ್ಟರು. ಅವನ ಮನೆ ಒಂದು ಸಾನಂದ ನಂದಗೋಕುಲದಂತೆ ನಗೆ ನಲಿವು ಉಲಿವು ಒಲವುಗಳಿಂದ ಸೊಗಯಿಸುತ್ತಿತ್ತು. ಅವನು ಕುಟುಂಬ ನಿರ್ವಹಣೆಗಾಗಿ ಹಣವನ್ನು ಸಂಪಾದಿಬೇಕೆಂದು ವ್ಯಾಪಾರ ಉದ್ಯೋಗಗಳನ್ನು ಮಾಡುತ್ತಿದ್ದನು. ಆದರೆ ತನ್ನ ವ್ಯಾಪಾರ ಉದ್ಯೋಗದಲ್ಲಿ ಅವನು ಎಂದೂ ಯಾರಿಗೂ ಅಳತೆಯಲ್ಲಾಗಲೀ ತೂಕದಲ್ಲಾಗಲೀ ಮೋಸ ಮಾಡುತ್ತಿದ್ದಿಲ್ಲ. ಹುಸಿಯಾಡುತ್ತಿದ್ದಿಲ್ಲ. ಅನ್ಯಾಯವನ್ನು ಮಾಡುತ್ತಿದ್ದಿಲ್ಲ. ಎಷ್ಟೇ ಧನವು ಬಂದರೂ ಅವನು ದೇವರನ್ನು ಮರೆಯಲಿಲ್ಲ. ಧರ್ಮವನ್ನು ಬಿಡಲಿಲ್ಲ. ಪ್ರತಿತಿಂಗಳೂ ಶುಕ್ಲಪಕ್ಷ ಕೃಷ್ಣಪಕ್ಷದ ಎರಡೂ ಏಕಾದಶಿ ದಿನಗಳಲ್ಲಿ ನಿಶ್ಚಕ್ರ ನಿರಾಹಾರವನ್ನು ಮನೆಯ ಜನರೆಲ್ಲರೂ ಮಾಡುತ್ತಿದ್ದರು. ಅಂದು ರಾತ್ರಿ ಜಾಗರಣೆಯನ್ನು ಮಾಡಿ ಶ್ರೀ ಹರಿಯನ್ನು ಹಾಡಿ ಪಾಡಿ ಕೊಂಡಾಡುತ್ತಿದ್ದರು. ಅನಂತರ ಆ ಸುಧನನು ಅಕ್ರೂರ ತೀರ್ಥಕ್ಕೆ ಬಂದು ನನ್ನೆದುರು ನಿಂತು ಹಾಡು ಹೇಳಿ ನರ್ತನ ಸೇವೆಯನ್ನು ಮಾಡುತ್ತಿದ್ದನು.

ಒಂದಾನೊಂದು ಏಕಾದಶಿಯ ದಿನ ಆ ನನ್ನ ಭಕ್ತನು ಸಾಯಂಕಾಲದ ವರೆಗೆ ತನ್ನ ಮನೆಯಲ್ಲಿ ಹೆಂಡರು ಮಕ್ಕಳೊಡನೆ ದೇವರ ಧ್ಯಾನವನ್ನು ಭಜನೆ ಕೀರ್ತನಗಳನ್ನು

ಮಾಡಿದನು. ಅನಂತರ ಸರಿ ರಾತ್ರಿಯವರೆಗೆ ಮನೆಯಲ್ಲಿಯೇ ಜಾಗರಣೆಯ ಕಾರ್ಯವನ್ನು ನೆರವೇರಿಸಿ ಅರ್ಧರಾತ್ರಿಯನಂತರ ಅಕ್ರೂರ ಕ್ಷೇತ್ರದಲ್ಲಿ ನನ್ನ ಎದುರು ನರ್ತನ ಸೇವೆಯನ್ನು ಮಾಡಬೇಕೆಂದು ಹೊರಟನು. ದಾರಿಯಲ್ಲಿ ಅವನು ಕಾಡಿನಲ್ಲಿ ನಡೆದಾಗ ಅವನ ಕಾಲನ್ನು ಬ್ರಹ್ಮರಾಕ್ಷಸ ಬಂದು ಹಿಡಿದಿತು. ಮತ್ತು ಕ್ರೂರವಾಗಿ ನಕ್ಕು ನುಡಿಯಿತು- '' ವಣಜೋತ್ತಮ, ಈ ವನದಲ್ಲಿ ವಾಸಮಾಡಿದ ನಾನು ನಿನ್ನನ್ನು ಕೊಂದು ತಿಂದು ತೃಪ್ತಿಪಡೆಯುತ್ತೇನೆ. ನಿಲ್ಲು ಎಲ್ಲಿಗೆ ಹೊರಟಿದ್ದಿ ?''

ಆ ರಕ್ಕಸನ ಈ ಬಿರುನುಡಿಗಳನ್ನು ಕೇಳಿ ಬೆದರಿ ಹೋಗಿದ್ದರೂ ಆ ಸುಧನನು ಧೈರ್ಯ ತೆಗೆದುಕೊಂಡು ನುಡಿದನು. ''ರಾಕ್ಷಸನೇ, ತುಸು ತಾಳು ನೀನು ಬೇಕಾದಹಾಗೆ ನನ್ನ ದೇಹವನ್ನು ತಿನ್ನುವಿಯಂತೆ. ಆದರೆ ಸ್ವಲ್ಪ ಅವಕಾಶವನ್ನು ಕೊಡು ದೇವ ದೇವೋತ್ತಮವಾದ ಶ್ರೀ ಹರಿಯ ಎದುರು ಇಂದಿನ ಏಕಾದಶಿಯ ನಿಮಿತ್ತವಾಗಿ ಜಾಗರಣೆಮಾಡಿ ಕುಣಿದುಹಾಡಿ ನರ್ತನ ಸೇವೆಯನ್ನು ಸಲ್ಲಿಸಿ ಬರುತ್ತೇನೆ. ಇದು ಒಂದು ನನ್ನ ವ್ರತವಾಗಿರುತ್ತದೆ. ನಾನು ಇಷ್ಟು ದಿವಸ ಮಾಡುತ್ತ ಬಂದ ಆ ನಾರಾಯಣ ವ್ರತಕ್ಕೆ ಭಂಗವನ್ನು ತರಬೇಡ ಜಾಗರವು ಮುಗಿದಕೂಡಲೇ ನಾಳೆ ಪ್ರಾತಃಕಾಲದಲ್ಲಿ ನಾನು ನೀನಿದ್ದಲ್ಲಿ ಬಂದು ನನ್ನ ದೇಹವನ್ನು ನಿನಗೆ ಒಪ್ಪಿಸುತ್ತೇನೆ. '' ಈ ಜಾಗರಣೆ ಸೇವೆ ಅನಂತರ ಬೆಳಗಿನಜಾವ ನಿನ್ನ ಬಳಿಗೆ ಬಂದು ಮೃಷ್ಟಾನ್ನ ಪರಿಪುಷ್ಟವಾದ ಈ ನನ್ನ ಶರೀರವನ್ನು ನಿನ್ನ ಇಷ್ಟಾನುಸಾರವಾಗಿ ಭಕ್ಷಣಮಾಡು'' ಹಸಿವೆಯಿಂದ ಪೀಡಿತನಾದ ಆ ಬ್ರಹ್ಮರಾಕ್ಷಸವು ಆ ವೈಶ್ಯವರೇಣ್ಯನಾದ ಸುಧನನ ಮಾತುಗಳನ್ನು ಕೇಳಿ ಸೌಮ್ಯವಾಗಿ ನುಡಿಯಿತು.- ''ಸಾಧುವೇ ನೀನು ಸುಳ್ಳು ಹೇಳುತ್ತಿರುವೆ. ಈಗ ನನ್ನ ಕೈಯಿಂದ ಪಾರಾಗಿ ಹೋದ ಬಳಿಕ ಮತ್ತೆ ರಾಕ್ಷಸನ ಬಾಯಲ್ಲಿ ಬೀಳಲು ನೀನೇಕೆ ಇಲ್ಲಿಗೆ ಬರುತ್ತಿ ?

**ವೈಶ್ಯ :-** ''ಅಯ್ಯಾ ರಾಕ್ಷಸಾ, ಈ ಜಗತ್ತೆಲ್ಲವೂ ಸತ್ಯ ಮೂಲವಾಗಿದೆ. ಎಲ್ಲವೂ ಸತ್ಯದ ಮೇಲೆಯೇ ನಿಂತಿರುತ್ತದೆ. ವೇದ ಪಾರಂಗತರಾದ ಋಷಿಗಳೆಲ್ಲರೂ ಸತ್ಯದಿಂದಲೇ ಸಿದ್ಧಿಯನ್ನು ಪಡೆದಿರುತ್ತಾರೆ. ಸೂರ್ಯನು ಹೊಳೆಯುವದು ಸತ್ಯದಿಂದ. ಚಂದ್ರನು ಬೆಳೆಯುವದು ಸತ್ಯದಿಂದ, ಇಂದ್ರನು ಬೆಳಗುವದು ಸತ್ಯದಿಂದ ಬ್ರಾಹ್ಮಣರು ಬದುಕಿದ್ದು ಸತ್ಯದಿಂದ. ರಾಜರು ಮೆರೆಯುವದು ಸತ್ಯದಿಂದ. ನೆಲವು ನಿಂತದ್ದೇ ಸತ್ಯದಿಂದ. ಈಗ ನಾನು ನನ್ನ ಮಾತಿನಂತೆ ನಾಳೆ ಬೆಳಿಗ್ಗೆ ನಿನ್ನ ಬಳಿಯಲ್ಲಿ ಬಾರದಿದ್ದರೆ ಆ ಸತ್ಯವು ನನ್ನ ಪಾಲಿಗೆ ಇಲ್ಲದಂತಾದೀತು. ಒಂದು ವೇಳೆ ನಾನು ದೇವರ ಎದುರು ಏಕಾದಶಿಯ ಜಾಗರಣೋತ್ಸವದಲ್ಲಿ ಭಜನೆ, ಕೀರ್ತನೆ, ನರ್ತನಾದಿಗಳ ಸೇವೆಯನ್ನು ಸಲ್ಲಿಸಿ ಮರಳಿ ನಿನಗೆ ವಚನವಿತ್ತಂತೆ ಇಲ್ಲಿಗೆ ಬಾರದಿದ್ದರೆ ಕಾಮಾಂಧನಾಗಿ ವ್ಯಭಿಚಾರಕ್ಕೆ ಇಳಿದ ಜಾರನ ಪಾಪವು ನನಗೆ ತಟ್ಟಲಿ. ಮತ್ತು ಭೂಮಿಯನ್ನು ದಾನಕೊಟ್ಟು ತಿರಿಗಿ ಕಸಿದುಕೊಂಡವನ ಪಾಪವೂ, ಮದುವೆಯಾಗಿ ಮಡದಿಯೊಡನೆ ಚಕ್ಕಂದದಿಂದ ವಿಹರಿಸಿ ಸುಖಿಸಿ ಅನಂತರ ಅವಳನ್ನು ದ್ವೇಷದಿಂದ ಬಿಟ್ಟು ಬಿಟ್ಟ ಕೃತಘ್ನನಿಗೆ ಬರುವ ಪಾಪವೂ, ಪಂಕ್ತಿ ಭೇದವನ್ನು ಮಾಡಿ ಊಟದಲ್ಲಿ ತನಗೊಂದು ಮತ್ತೊಬ್ಬರಿಗೊಂದು ಅಡಿಗೆಯನ್ನು ಬಡಿಸುವವನ ಪಾಪವೂ, ಅಮಾವಾಸ್ಯೆಯಲ್ಲಿ ಶ್ರಾದ್ಧಮಾಡಿ ಸ್ತ್ರೀ

ಸಂಗವನ್ನು ಮಾಡುವವನ ಪಾಪವೂ, ನನಗೆ ಬರಲಿ. ಮತ್ತೂ ನಾನು ನಿನಗೆ ವಚನ ಕೊಟ್ಟ ಪ್ರಕಾರ ನಾನು ನಿನ್ನಲ್ಲಿಗೆ ಬಾರದಿದ್ದರೆ ಗುರುಪತ್ನಿ, ಮಿತ್ರಪತ್ನಿ, ಸೋದರ ಪತ್ನಿ, ಸೋದರ ಮಾವನ ಪತ್ನಿ ರಾಜಪತ್ನಿ, ಬ್ರಾಹ್ಮಣ ಪತ್ನಿ, ಮುಂತಾದ ಪರಸ್ತ್ರೀಗಮನ ಮಾಡವ ಹಾಗೂ ವಿಧವಾ ಗಮನಮಾಡುವ ಪಾತಕಿಯ ಪಾಪವೆಲ್ಲವೂ ನನಗೆ ಉಂಟಾಗಲಿ. ನಾನು ನಿನ್ನ ಹತ್ತಿರ ಪುನಃ ಬಾರದಿದ್ದರೆ ಬ್ರಹ್ಮಹತ್ಯೆ, ಮದ್ಯಪಾನಚೌರ್ಯ, ವ್ರತಭಂಗ ಮುಂತಾದ ದುಷ್ಕೃತ್ಯಗಳನ್ನು ಮಾಡುವ ಶಠನಿಗೆ ಆಗುವ ದುರ್ಗತಿಯು ನನಗೂ ಆಗಲಿ '' ಇಂತು ಮಾತನಾಡಿದ ಸುಧನವೈಶ್ಯನ ಸತ್ಯನಿಷ್ಠೆಯನ್ನು ನೋಡಿ ಆ ಬ್ರಹ್ಮರಾಕ್ಷಸಕ್ಕೆ ಅವನ ಪ್ರಾಮಾಣಿಕತೆಯ ಬಗ್ಗೆ ನಂಬುಗೆ ಉಂಟಾಯಿತು. ಅದು ಅವನಿಗೆ ಹೋಗಲು ಅನುಮತಿಯನ್ನಿತ್ತು '' ಮಹಾನುಭಾವ, ಬೇಗ ಹೋಗು. ನಿನಗೆ ನನ್ನ ನಮಸ್ಕಾರ.'' ಹೀಗೆ ಆ ಬ್ರಹ್ಮರಾಕ್ಷಸನಿಂದ ಬಿಡಿಸಿಕೊಂಡು ಬಂದ ಆ ವೈಶ್ಯನು ನನ್ನ ಬಳಿಗೆ ಬಂದು ಕ್ರಮಪ್ರಕಾರ ಜಾಗರಣೆ ಉತ್ಸವವನ್ನು ಮಾಡಿದನು. ಭಕ್ತಿಯಿಂದ ಹಾಡಿದನು. ನಾಮಸ್ಮರಣೆಗೈಯುತ್ತ ಕುಣಿದಾಡಿದನು. ಹೀಗೆ ಬೆಳಗಾಗುವವರೆಗೆ ದೇವರಧ್ಯಾನ, ಗಾನ, ಭಜನ, ಪೂಜನ, ಕೀರ್ತನ, ನರ್ತನಾದಿ ಸೇವೆಯನ್ನು ಮಾಡಿ ಬೆಳಗಾಗುವ ಸಮಯದಲ್ಲಿ 'ನಮೋ ನಾರಾಯಣಾಯ' ಎಂದು ಉಚ್ಚಕಂಠದಿಂದ ಉಚ್ಚರಿಸುತ್ತ ಮೈಮರೆತು ಮತ್ತೆ ಕುಣಿದನು. ನಾರಾಯಣನ ನಾಮ ಗರ್ಜನದಿಂದ ತಣಿದನು. ಹೀಗೆ ಜಾಗರಣೆಯನ್ನು ಮಾಡಿ ಮುಗಿಸಿ ಯಮುನಾ ತೀರ್ಥದಲ್ಲಿ ಸ್ನಾನಮಾಡಿ ನನ್ನ ದಿವ್ಯಮೂರ್ತಿಯ ಸಂದರ್ಶನವನ್ನು ತೆಗೆದುಕೊಂಡು ಆ ಬ್ರಹ್ಮರಾಕ್ಷಸನ ಬಳಿಗೆ ಹೊರಟನು. ದಾರಿಯಲ್ಲಿ ಓರ್ವ ದಿವ್ಯ ಪುರುಷನು ಅವನಿಗೆ ಭೆಟ್ಟಿಯಾಗಿ ಬೇಡವೆಂದು ಹೇಳಿದರೂ ಕೇಳದೆ ಆ ವೈಶ್ಯನು ತಾನಿತ್ತ ವಚನವನ್ನು ಪಾಲಿಸುವದಕ್ಕಾಗಿ ಸತ್ಯಸಂಧನಾಗಿ ಅಲ್ಲಿಗೆ ಬಂದನು. ಮತ್ತು ರಾಕ್ಷಸನಿಗೆ ಹೇಳಿದನು.- ''ಮಹಾನುಭಾವನೇ, ಶ್ರೀ ಹರಿಯ ಪ್ರೀತಿಕಾರಕವಾದ ಏಕಾದಶೀ ಜಾಗರಣೋತ್ಸವದಲ್ಲಿ ಭಜನ ನರ್ತನಾದಿಗಳನ್ನು ಮಾಡಿ ಭಗವಂತನ ಸೇವಾಕಾರ್ಯವನ್ನು ಮುಗಿಸಿ ನಿನ್ನ ಬಳಿಗೆ ಬಂದಿದ್ದೇನೆ. ಇಕೋ ಈ ನನ್ನ ದೇಹವನ್ನು ನಿನಗೆ ಒಪ್ಪಿಸಿದ್ದೇನೆ. ಎಲೈ ಘೋರ ರಾಕ್ಷಸಾ, ನಾನೆಂದೂ ಸುಳ್ಳುಹೇಳಿಲ್ಲ. ನುಡಿದಂತೆ ನಡೆದಿದ್ದೇನೆ. ಈ ದೇಹವನ್ನೇ ನಿನ್ನ ಮುಂದೆ ಹಿಡಿದಿದ್ದೇನೆ. ಯಥೇಚ್ಛವಾಗಿ ತಿನ್ನು. ಯಥೇಷ್ಟವಾಗಿ ಭಕ್ಷಿಸು''. ಆ ಸುಧನ ವೈಶ್ಯನ ಈ ಮಾತುಗಳನ್ನು ಕೇಳಿ ಆ ಕ್ರೂರ ರಕ್ಕಸವು ಸೌಮ್ಯಶಾಂತವಾಗಿ ಕಿವಿಗೆ ಇಂಪಾಗುವಂತೆ ನುಡಿಯಿತು- ''ವಣಿಕ್ ಶ್ರೇಷ್ಠನೇ, ನಿನ್ನ ಸತ್ಯ ನಿಷ್ಠೆಗೆ ನಾನು ಸಂತುಷ್ಟನಾಗಿದ್ದೇನೆ ನೀನು ಸತ್ಯವನ್ನು ಪಾಲಿಸಿದಿ. ಧರ್ಮವನ್ನು ಅನುಸರಿಸಿದಿ. ನೀನು ಮಹಾಪ್ರಾಜ್ಞನಂತೆ ಕಾಣುತ್ತೀ. ನಿನ್ನ ಜಾಗರಣೆಯ ಪುಣ್ಯವನ್ನೆಲ್ಲ ನನಗೆ ಕೊಟ್ಟು ಬಿಡು. ಆ ಪುಣ್ಯಪ್ರಭಾವದಿಂದ ಈ ರಕ್ಕಸ ಜಾತಿಯಿಂದ ನಾನು ಮುಕ್ತನಾಗುತ್ತೇನೆ. ನಿನಗೆ ಮಂಗಳವಾಗಲಿ.''

**ಸುಧನ :-** ನರಭಕ್ಷಕನೇ, ನಾನು ನಿನಗೆ ನನ್ನ ನೃತ್ಯದ ಪೂರ್ಣ ಪುಣ್ಯವನ್ನಾಗಲೀ, ಅರ್ಧಪುಣ್ಯವನ್ನಾಗಲೀ ಕೊಡಲಾರೆ ಆ ದೇವರ ಸೇವೆಯ ಪುಣ್ಯದಲ್ಲಿಯ ಕಿಂಚಿತ್ ಅಂಶವನ್ನೂ ನಾನು ಬಿಡಲಾರೆ.

**ರಾಕ್ಷಸ :-** ವೈಶ್ಯೋತ್ತಮಾ, ಹಾಗಾದರೆ ನಿನ್ನ ಒಂದು ನರ್ತನದ ಪುಣ್ಯವನ್ನಾದರೂ ನನಗೆ ಕೊಟ್ಟು ನನ್ನನ್ನು ಉದ್ಧರಿಸು.

**ಸುಧನ :-** ಮಹಾನುಭಾವನೇ, ನಿನಗೆ ಈ ರಾಕ್ಷಸ ಜನ್ಮವು ಏಕೆ ಬಂದಿತು ? ಜನ್ಮಾಂತರದಲ್ಲಿ ನೀನು ಯಾವ ಘೋರಕರ್ಮವನ್ನು ಮಾಡಿದೆ ?

**ರಾಕ್ಷಸ :-** ನಿನಗೆ ನನ್ನ ಗುರುತು ಆಗಲಿಲ್ಲವೇ ? ನಾನು ಕಳೆದ ಜನ್ಮದಲ್ಲಿ ನಿನ್ನ ನೆರೆಮನೆಯ 'ಅಗ್ನಿದತ್ತ' ಎಂಬ ಬ್ರಾಹ್ಮಣನೇ ಆಗಿದ್ದೆನು. ವೇದವೇದಾಂತ ಪಾರಂಗತನಾಗಿದ್ದರೂ ನಾನು ಸ್ವಂತ ಮನೆಯನ್ನು ಕಟ್ಟಬೇಕೆಂದು ಇನ್ನೊಬ್ಬರ ದ್ರವ್ಯವನ್ನು ಅಪಹರಿಸಿದೆ. ಹೆರವರ ಮನೆಯ ಇಟ್ಟಿಗೆಗಳನ್ನು ಕದ್ದು ತಂದು ನನ್ನ ಮನೆಯನ್ನು ಕಟ್ಟಿದೆ. ಆ ಪಾಪದಿಂದ ನನಗೆ ಈ ರಾಕ್ಷಸ ಜನ್ಮವು ಬಂದಿದೆ. ಸುದೈವದಿಂದ ನನಗೆ ನಿನ್ನ ಸಹವಾಸ ಲಭಿಸಿತು. ನನಗೆ ಉಪಕಾರ ಮಾಡು. ನಿನ್ನ ನರ್ತನಾದಿ ಹರಿಸೇವೆಯಲ್ಲಿಯ ಒಂದು ನರ್ತನದ ಪುಣ್ಯವನ್ನು ಕೊಟ್ಟು ನನ್ನನ್ನು ಈ ನೀಚ ಯೋನಿಯಿಂದ ಮೇಲಕ್ಕೆ ಎತ್ತು. ರಾಕ್ಷಸನ ಈ ದೀನ ಯಾಚನೆಯನ್ನು ಕೇಳಿ ಸುಧನ ವೈಶ್ಯನ ಅಂತಃಕರಣವು ಕರಗಿತು. ದಯೆತುಂಬಿ ಬಂದಿತು. ಅವನು ಸ್ವಸಂತೋಷದಿಂದ ''ಒಳ್ಳೇದು ರಾಕ್ಷಸನೇ, ನಿನಗೆ ನಾನು ನನ್ನ ಒಂದು ನರ್ತನ ಸೇವೆಯ ಪುಣ್ಯವನ್ನು ಕೊಟ್ಟಿದ್ದೇನೆ'' ಎಂದು ಹೇಳಿದನು. ಆ ಅಕ್ರೂರ ತೀರ್ಥದಲ್ಲಿ ಸುಧನ ವೈಶ್ಯನು ಸಲ್ಲಿಸಿದ ಒಂದು ಕುಣಿತದ ಪುಣ್ಯ ಪ್ರಧಾನದಿಂದ ಆ ಬ್ರಹ್ಮರಾಕ್ಷಸವು ಆ ಪಾಪಿ ಜನ್ಮದಿಂದ ಮುಕ್ತಿಯನ್ನು ಹೊಂದಿತು. ದಿವ್ಯಗತಿಯನ್ನು ಪಡೆಯಿತು. ಇದನ್ನು ನೋಡಿ ಪರಿತುಷ್ಟನಾದ ಆ ಸುಧನವೈಶ್ಯನು ತನ್ನ ಎದುರು ನಿಂತಿರುವ ದೇವದೇವೋತ್ತಮನೂ, ಶಂಖ ಚಕ್ರ ಗದಾಧಾರಿಯೂ ಆದ ಆ ಲಕ್ಷ್ಮೀಪತಿ ನಾರಾಯಣನಿಗೆ ನೆಲೆದುದ್ದ ಮೈ ನೀಡಿ ಸಾಷ್ಟಾಂಗ ನಮಸ್ಕಾರವನ್ನು ಹಾಕಿದನು. ಆಗ ಪರಮಾತ್ಮನು ಮಧುರ ಧ್ವನಿಯಿಂದ '' ಭಕ್ತಾ, ನೀನು ವಿಮಾನವನ್ನು ಏರಿ ನನ್ನ ಲೋಕಕ್ಕೆ ಹೊರಡು'' ಎಂದು ಹೇಳಿ ಅಲ್ಲಿಯೇ ಅದೃಶ್ಯನಾದನು.

ಸುಧನನು ಸಶರೀರನಾಗಿಯೇ, ಕುಟುಂಬ ಸಹಿತನಾಗಿ ವಿಮಾನ ಮೂಲಕ ವಿಷ್ಣು ಲೋಕಕ್ಕೆ ಹೊರಟುಹೋದನು. ಈ ಅಕ್ರೂರ ತೀರ್ಥದ ಮಹಿಮೆಯನ್ನು ನಿನಗೆ ಹೇಳಿದ್ದೇನೆ. ಇದಕ್ಕಿಂತ ಉತ್ತಮವಾದ ತೀರ್ಥವು ಮತ್ತೊಂದಿಲ್ಲ. ಇದರ ಪ್ರಭಾವದಿಂದಲೇ ಸುಧನನು ಮುಕ್ತಿ ಪಡೆದನು. ಕಾರ್ತಿಕ ಮಾಸದ ಶುಕ್ಲಪಕ್ಷದ ದ್ವಾದಶೀದಿನ (ಉತ್ಥಾನ ದ್ವಾದಶಿ) ಇದರಲ್ಲಿ ಸ್ನಾನ ಮಾಡಿದವನಿಗೆ ರಾಜಸೂಯಯಾಗದ ಫಲಪ್ರಾಪ್ತಿಯಾಗುವದು. ಕಾರ್ತಿಕ ಮಾಸದಲ್ಲಿ ಆ ತೀರ್ಥದಲ್ಲಿ ವೃಷೋತ್ಸರ್ಗವನ್ನು ಮಾಡುವ ಮನುಷ್ಯನು ತನ್ನ ಪೂರ್ವಜರನ್ನು ಉದ್ಧರಿಸುವನು. ಈ ಕಾರ್ತಿಕ ಮಾಸದಲ್ಲಿ ಈ ಅಕ್ರೂರ ತೀರ್ಥದಲ್ಲಿ ಶ್ರಾದ್ಧ ಮಾಡುವವನು ಪಿತೃಗಳನ್ನೂ, ಪ್ರಪಿತಾಮಹರನ್ನೂ ಉತ್ತೀರ್ಣಗೊಳಿಸುವನು.

**ಶ್ರೀ ವರಾಹ ದೇವರು :-** ಭೂದೇವಿಯೇ, ಆ ಮಧುರಾಮಂಡಲದಲ್ಲಿ ಕೆಂಪು ಕಲ್ಲುಗಳಿಂದ ಕಟ್ಟಿದ, ಕೆಂಪು ಗಂಧದಿಂದ ಅಲಂಕೃತವಾದ ನನ್ನ ವತ್ಸಕ್ರೀಡನಕನೆಂಬ ಉತ್ತಮ ತೀರ್ಥವನ್ನು ಹೇಳುವೆನು. ಅಲ್ಲಿ ಸ್ನಾನ ಮಾತ್ರದಿಂದಲೇ ಮನುಷ್ಯನು

ವಾಯುಲೋಕವನ್ನು ಸೇರುವನು. ಪ್ರಾಣ ಬಿಟ್ಟರೆ ನನ್ನ ಲೋಕವನ್ನು ಸೇರುವನು. ಭಾಂಡೀರಕವೆಂಬ ಮತ್ತೊಂದು ತೀರ್ಥವನ್ನು ಹೇಳುತ್ತೇನೆ. ಅದು ತಾಳೆ, ಹೊಂಗೆ, ಕೆಂಪುಮತ್ತಿ ಇತ್ಯಾದಿ ಮರಗಳು ಬಿದಿರು ಮೆಳೆಗಳ ಮತ್ತು ಗದ ಮರಗಳು ಮುಂತಾದವು ಗಳಿಂದ ಅತ್ಯಂತ ಮನೋಹರವಾಗಿದೆ. ಆಹಾರದಲ್ಲಿ ನಿಯಮವುಳ್ಳವನಾಗಿದ್ದು ಭಾಂಡೀರ ತೀರ್ಥದಲ್ಲಿ ಸ್ನಾನಮಾಡುವವನು. ಇಂದ್ರಲೋಕಕ್ಕೆ ಹೋಗುವನು ಪ್ರಾಣ ಬಿಡುವವನು ವಿಷ್ಣು ಲೋಕವನ್ನು ಸೇರುವನು.

ಬೃಂದಾವನ ಕ್ಷೇತ್ರದ ಮಹಿಮೆಯನ್ನು ಕೇಳು. ನಾನು ಅಲ್ಲಿ ಗೋ-ಗೋಪಾಲಕರೊಡನೆ ಆಡುವೆನು. ಸುಂದರವಾದ ಅದು ದೇವದಾನರಿಗೆ ಅಗಮ್ಯವಾದುದು. ಮರ, ಟೊಂಗೆ, ಬಳ್ಳಿಗಳಿಂದ ಆವೃತವಾಗಿರುವ ಅಲ್ಲಿಯ ಗುಡ್ಡದ ಹತ್ತಿರ ಒಂದು ರಾತ್ರಿಯಿದ್ದು ಸ್ನಾನಮಾಡುವವನು ಗಂಧರ್ವ ಅಪ್ಸರರೊಡನೆ ಕ್ರೀಡಿಸುವನು. ಅಲ್ಲಿ ಮೃತನಾದರೆ ನನ್ನ ಲೋಕವನ್ನು ಹೊಂದುವನು. ನಾನು ಕೇಶಿಯೆಂಬ ಮಹಾರಾಕ್ಷಸನನ್ನು ಬೀಳಿಸಿದ ಬೃಂದಾವನ ಚಿತ್ರವು ಮಹಾಪಾತಕವನ್ನು ನಾಶಮಾಡುವದು. ಅದಕ್ಕಿಂತ ಕೃಷ್ಣನು ವಿಶ್ರಮಿಸಿಕೊಳ್ಳುವ ಕೇಶಿ ತೀರ್ಥವು ನೂರರಷ್ಟು ಪವಿತ್ರವಾದದು. ಈ ಕೇಶಿ ತೀರ್ಥದಲ್ಲಿ ಪಿಂಡಪ್ರದಾನಮಾಡಿದರೆ, ಗಯೆಯಲ್ಲಿ ಪಿಂಡಪ್ರದಾನ ಮಾಡಿದ ಫಲವೂ ಪ್ರಾಪ್ತವಾಗುವದು. ಇಲ್ಲಿ ಸ್ನಾನ ಅಥವಾ ಹೋಮದಿಂದ ಅಗ್ನಿಷ್ಟೋಮಯಾಗದ ಫಲವುಂಟಾಗುವದು. ಯಮುನೆಯ ಜಲದಲ್ಲಿ ದ್ವಾದಶಾದಿತ್ಯವೆಂಬ ಸೂರ್ಯತೀರ್ಥದಲ್ಲಿ ಕಾಳಿಯನು ಕ್ರೀಡಿಸುತ್ತಿರುವನು. ನಾನು ಕಾಳಿಯನನ್ನು ಮರ್ದಿಸಿ ಆದಿತ್ಯರನ್ನು ನೆಲೆಗೊಳಿಸಿ '' ನಿಮಗೆ ಶುಭವಾಗಲಿ '' ನಿಮಗೆ ಬೇಕಾದ ವರವನ್ನು ಬೇಡಿರಿ ಎಂದೆನು.

**ಆದಿತ್ಯರು** :-''ದೇವಾ, ನಾವು ವರಕ್ಕೆ ಅರ್ಹರಾಗಿದ್ದು ನೀನು ಕೊಡಲಿಚ್ಛಿಸುವ ದಾದರೆ ಈ ಉತ್ತಮತೀರ್ಥದಲ್ಲಿ ಸ್ನಾನವನ್ನು ಅನುಗ್ರಹಿಸು. ''

**ವರಾಹದೇವರು** :- ವಸುಂಧರೆ, ನಾನು ಆದಿತ್ಯರ ಈ ಮಾತನ್ನು ಕೇಳಿ ವಿನೋದವಾಡುತ್ತ ''ತಥಾಸ್ತು'' ಎಂದೆನು. ಆ ಸೂರ್ಯತೀರ್ಥದ ಸ್ನಾನದಿಂದ ಮಾನವನು ಪಾಪರಹಿತನಾಗುವನು ! ಅಲ್ಲಿ ಮಡಿದರೆ ನನ್ನ ಲೋಕವನ್ನು ಸೇರುವನು. ಉತ್ತರದಲ್ಲಿರುವ ಹರಿ ತೀರ್ಥದಲ್ಲಿಯೂ, ದಕ್ಷಿಣದಲ್ಲಿ ಕಾಳಿಯ ತೀರ್ಥದಲ್ಲಿಯೂ ಈ ಇಬ್ಬರು ದೇವರ ತೀರ್ಥಗಳ ನಡುವೆಯೂ ಮೃತರಾದವರು ಪುನರ್ಜನ್ಮವಿಲ್ಲದರಾಗುವರು.

## ಮಲಯಾರ್ಜುನಕ ತೀರ್ಥ ಮಹಿಮೆ

**ಶ್ರೀ ವರಾಹ** :- ಭೂದೇವಿಯೇ, ಯಮುನೆಯ ತೀರವನ್ನು ದಾಟಿದರೆ ಅಲ್ಲಿ 'ಮಲಯಾರ್ಜುನಕ'ವೆಂಬ ತೀರ್ಥವಿದೆ. ನಾನು ಮಡಿಕೆ ಕುಡಿಕೆಗಳೊಡನೆ ತುಂಬಿದ ಚಕ್ಕಡಿಯನ್ನು ಪುಡಿ ಮಾಡಿದುದು ಅಲ್ಲಿಯೇ. ಅಲ್ಲಿ ಸ್ನಾನೋಪಾಸನಾದಿಗಳಿಂದ ಮನುಷ್ಯನು ಅನಂತ ಫಲವನ್ನು ಅನುಭವಿಸುವನು. ಜೇಷ್ಠಮಾಸದ ಶುಕ್ಲಪಕ್ಷದ ದ್ವಾದಶೀದಿನ ಸ್ನಾನದಾನಾದಿಗಳನ್ನು ಅಲ್ಲಿ ಮಾಡಿದರೆ ಪಾಪರಹಿತನಾಗುವನು. ಅದೇ ದಿನ ಜಿತೇಂದ್ರಿಯನು ಅಲ್ಲಿ ಸ್ನಾನಮಾಡಿ ಮಧುರೆಯಲ್ಲಿ ಶ್ರೀ ಹರಿಯನ್ನು

ಸಂದರ್ಶಿಸುವದರಿಂದ ಪರಮಗತಿಯನ್ನು ಹೊಂದುವನು. ಯಮುನೆಯ ತೀರ್ಥದಲ್ಲಿ ಸ್ನಾನಮಾಡಿ ಅಚ್ಯುತನನ್ನು ಪೂಜಿಸುವವನು ಮೋಕ್ಷ ಪಡೆಯುವನು.

''ನಮ್ಮ ಕುಲಜನು ಮಧುರೆಯಲ್ಲಿ ಉಪವಾಸವಿದ್ದು ಯಮುನೆಯಲ್ಲಿ ಸ್ನಾನ ಮಾಡಿ ಕೃಷ್ಣನನ್ನು ಪೂಜಿಸುವನೆ ? ಅವನು ಜೇಷ್ಠ ಶುದ್ಧ ದ್ವಾದಶಿಯಲ್ಲಿ ಜನಾರ್ದನನನ್ನು ಪೂಜಿಸಿ ಯಮುನೆಯಲ್ಲಿ ಪಿಂಡಪ್ರದಾನ ಮಾಡುವನೇ '' ಎಂದು ಪರಲೋಕದಲ್ಲಿಯ ಪಿತೃಗಳು ಸತತವಾಗಿ ನಿರೀಕ್ಷಿಸುವರು. ಅಲ್ಲಿಯ 'ಬಹುಳ'ವೆಂಬ ವನದಲ್ಲಿರುವ ತೀರ್ಥದಲ್ಲಿ ಸ್ನಾನ ಮಾಡಿದವನು ರುದ್ರಲೋಕವಾಸಿಯಾಗುವನು. ಚೈತ್ರಮಾಸದ ಶುದ್ಧ ದ್ವಾದಶಿಯಲ್ಲಿ ಆ ತೀರ್ಥದಲ್ಲಿ ಸ್ನಾನ ಮಾಡುವವನು ವಿಷ್ಣು ಲೋಕಕ್ಕೆ ಹೋಗುವನು. ಯಮುನೆಯ ಆಚೆ ದಡದಲ್ಲಿ 'ಭಾಂಡ ಹ್ರದ'ವೆಂಬ ತೀರ್ಥದಲ್ಲಿ ಪ್ರತಿನಿತ್ಯವೂ ಆದಿತ್ಯರು ಕಾಣಿಸುವರು. ಆ ಕುಂಡದಲ್ಲಿ ಸ್ನಾನ ಮಾಡುವವನು ಪಾಪರಹಿತನಾಗಿ ಸೂರ್ಯಲೋಕ ವನ್ನು ಹೊಂದುವನು. ದೇಹತ್ಯಾಗಿಯು ನಂದನಲೋಕಕ್ಕೆ ಬರುವನು. ಆ ಅರ್ಕಕ್ಷೇತ್ರದ ಸಮೀಪದಲ್ಲಿ ಸಪ್ತ 'ಸಾಮುದ್ರಿಕ'ವೆಂಬ ತೀರ್ಥವಿದೆ. ಅಲ್ಲಿ ಸ್ನಾನ ಮಾಡುವದರಿಂದ ಮಾನವನು ಸ್ವೇಚ್ಛಾಗಮನಿಯಾಗುವನು. ಮಡಿದರೆ ನನ್ನ ಲೋಕವನ್ನು ಹೊಂದುವನು.

ಅಲ್ಲಿಯೇ ಹತ್ತಿರದಲ್ಲಿ 'ವೀರಸ್ಥಳ'ವೆಂಬ ನನ್ನ ರಹಸ್ಯ ಕ್ಷೇತ್ರದಲ್ಲಿ ಒಂದು ರಾತ್ರಿ ಇದ್ದು ತೀರ್ಥದಲ್ಲಿ ಸ್ನಾನ ಮಾಡಿದರೆ ವೀರಲೋಕ ವಾಸಿಯಾಗುವನು. ಪ್ರಾಣತ್ಯಾಗಿ ಯಾದರೆ ನನ್ನ ಲೋಕ ಹೊಂದುವನು. ಅಲ್ಲಿ 'ಪುಷ್ಪಸ್ಥಳ'ವೆಂಬ ಶಿವ ಕ್ಷೇತ್ರದಲ್ಲಿ ಸ್ನಾನಮಾಡುವದರಿಂದ ನರನು ಶಿವಲೋಕವಾಸಿಯಾಗುವನು. ಈ ಪಂಚಸ್ಥಳಗಳು ಪ್ರಸಿದ್ಧವೂ ಪಾಪನಾಶ ಮಾಡುವವೂ ಆಗಿವೆ. ಅಲ್ಲಿ ಸ್ನಾನ ಮಾಡುವವನು ಬ್ರಹ್ಮನೊಡನೆ ಆನಂದಿಸುವನು. ಅಲ್ಲಿರುವ 'ಗೋಪೀಶ್ವರ'ವೆಂಬ ಕ್ಷೇತ್ರವು ಮಹಾ ಪಾತಕವನ್ನು ನಾಶ ಮಾಡುವದು ಆಗಿದೆ. ಅಲ್ಲಿ ಕೃಷ್ಣ ಸಂತೋಷಾರ್ಥವಾಗಿ ಹದಿನಾರು ಸಾವಿರ ಗೋಪಿಯರು ರೂಪಧರಿಸಿದರು. ಕೃಷ್ಣನು ಕ್ರೀಡಿಸಿದನು. ಅವನು ಯಮಳಾರ್ಜುನ ಭಂಗವನ್ನೂ ಮಡಕೆ ಕುಡಿಕೆಗಳಿಂದ ತುಂಬಿದ ಬಂಡಿಯ ರೂಪದಿಂದಿದ್ದ ಶಕಟಾಸುರನ ವಧೆಯನ್ನೂ ಮಾಡಿದನು. ಅಲ್ಲೇ ಆಡುತ್ತಿದ್ದ ಅವನನ್ನು ಗೋಪಿಯರು ಸರಿಯಾಗಿಯೇ ಆಲಿಂಗಿಸಿಕೊಂಡು ಆಕಸ್ಮಿಕವೆಂದು ತೋರಿಸಿ ಆನಂದಿಸಿದರು.

ಇಂದ್ರಸಾರಥಿಯಾದ ಮಾತಲಿಯು ದೇವತೆಗಳು ಹೇಳಿದಂತೆ ಅಲ್ಲಿಗೆ ಬಂದು ಗೋಪವೇಷಧರನಾಗಿದ್ದ ಕೃಷ್ಣನಿಗೆ ಅಭಿಷೇಕ ಮಾಡಿದನು. ಅವನು ರತ್ನೌಷದಿಗಳಿಂದ ತುಂಬಿದ ಸಪ್ತ ಕಲಶಗಳಿಂದ ಕೃಷ್ಣನಿಗೆ ಅಭಿಷೇಕ ಮಾಡಿದಾಗ ಸುತ್ತಲಿದ್ದ ಗೋಪಿಯರು '' ಕೃಷ್ಣಾ ಕೃಷ್ಣಾ '' ಎಂದು ಹಾಡುತ್ತ ನರ್ತನ ಮಾಡಿದರು. ಮಾತಲಿಯು ಅಲ್ಲಿ ಕೃಷ್ಣನನ್ನು ನೆಲೆಗೊಳಿಸಿ ಆ ದೇವನೆದುರಿಗೆ 'ಸಪ್ತ ಸಾಮುದ್ರಿಕ'ವೆಂಬ ಬಾವಿಯನ್ನು ಗೋಪರಿರುವೆಡೆ ಯಲ್ಲಿ ಮಂಗಲ ಕಲಶೋದಕಗಳಿಂದ ಏರ್ಪಡಿಸಿದನು. ಆ ತೀರ್ಥದಲ್ಲಿ ಕೊಡುವ ನೀರನ್ನೂ, ಪಿಂಡವನ್ನೂ ಪಿತೃಗಳು ಪ್ರೀತಿಸುವರು. ಅಲ್ಲಿ ಶ್ರಾದ್ಧ ಮಾಡುವವನು ತನ್ನ ಪಿತೃಗಳನ್ನೂ, ೭೭ ತಲೆಯವರನ್ನೂ ಉದ್ಧರಿಸುವನು. ಸೋಮವಾರ ಕೂಡಿದ ಅಮಾವಾಸ್ಯೆಯಂದು ಅಲ್ಲಿ ಪಿಂಡ ಪ್ರದಾನವನ್ನೂ ಪಡೆಯುವ ಪಿತೃಗಳು ನೂರುಕೋಟಿ

ವರ್ಷಗಳ ಕಾಲ ಪೂರ್ಣ ತೃಪ್ತರಾಗಿರುವರು. ಮತ್ತು 'ಗೋಪೀಶ್ವರರ' ತೀರ್ಥರ ನಡುವೆ ಮೃತನಾದವನು ಇಂದ್ರಲೋಕವನ್ನು ಹೊಂದುವನು. ಈ ರುದ್ರಗೋವಿಂದರ ಮಧ್ಯದಲ್ಲಿಯೂ 'ಬ್ರಹ್ಮಗೋಪೀಶ್ವರರ' ಮಧ್ಯದಲ್ಲಿಯೂ ಪ್ರಾಣತ್ಯಾಗ ಮಾಡುವವನೂ ಹಾಗೆಯೇ 'ಇಂದ್ರಲೋಕ' ಪಡೆಯುವನು. ಇವುಗಳಲ್ಲಿ ಸ್ನಾನಾದಾನಾದಿ ಗಳನ್ನು, ಪಿಂಡಪ್ರದಾನವನ್ನೂ ಮಾಡುವದರಿಂದ ಮನುಷ್ಯನು ತನ್ನ ಹಿಂದಿನ ಮತ್ತು ಮುಂದಿನ ಹತ್ತು ತಲೆಯವರನ್ನು ಉದ್ಧರಿಸುವನು. ಇಲ್ಲಿ ಸ್ನಾನ ಮಾಡುವವನು ದೇವತೆಗಳೊಡನೆ ಸಂತೋಷಿಸುವನು. ಪ್ರಾಣ ಬಿಡವವನು ವಿಷ್ಣುಲೋಕವನ್ನು ಸೇರುವನು.

'ವಸ್ತುಪತ್ರ'ವೆಂಬ ಮಹಾತೀರ್ಥವು ಪವಿತ್ರವೂ ಪರಮೋತ್ತಮವೂ ಆಗಿದೆ. ಮಧುರೆಯ ದಕ್ಷಿಣದಲ್ಲಿರುವ 'ಫಾಲ್ಗುಣಕ'ವೆಂಬ ತೀರ್ಥವು ಪರಮ ದುರ್ಲಭ ವಾದುದು. ಇವೆರಡರಲ್ಲಿ ಸ್ನಾನಪಾನ ಮಾಡುವ ಮಾನವನು ವಿಷ್ಣುಲೋಕವಾಸಿ ಯಾಗುವನು. 'ವೃಷಭಂಜನ'ವೆಂಬ ನನ್ನ ಕ್ಷೇತ್ರವು ಅಲ್ಲಿ ಸ್ನಾನಮಾಡುವವನನ್ನು ದೇವತೆಗಳೊಡನೆ ಸಂತೋಷ ಪಡಿಸಿ, ಪ್ರಾಣಬಿಟ್ಟರೆ ನನ್ನ ಲೋಕವನ್ನು ಸೇರಿಸುವಷ್ಟು ಸಾಮರ್ಥ್ಯವುಳ್ಳದ್ದಾಗಿದೆ. ಮಧುರೆಗೆ ಪಶ್ಚಿಮದಲ್ಲಿ ಅರ್ಧಯೋಜನ ದೂರದಲ್ಲಿ ಧೇನುಕನ ತಾಳೆಯವನವಿದೆ. ಅಲ್ಲಿಯ ಕುಂಡದಲ್ಲಿಯ ಸ್ನಾನ ದಾನಗಳಿಂದ ಮಾನವರು ಇಷ್ಟಾರ್ಥವನ್ನು ಹೊಂದುವರು. ಅಲ್ಲಿಯ 'ಸಂದೀಪಕ'ವೆಂಬ ಕುಂಡದಲ್ಲಿ ಒಂದು ರಾತ್ರಿಯಿದ್ದು ಸ್ನಾನಮಾಡುವವರು ಅಗ್ನಿಷ್ಟೋಮ ಫಲವನ್ನು ಪಡೆಯುವರು. ಪ್ರಾಣಬಿಟ್ಟರೆ ನನ್ನ ಲೋಕವನ್ನು ಸೇರುವರು. ವಸುಧೇವನ ಶುಭಗೃಹದಲ್ಲಿ ದೇವಕೀ ಗರ್ಭದಲ್ಲಿ ಜನಿಸಿದ ನಾನು ಅಲ್ಲಿ ಪರಿಶುದ್ಧನಾಗಿ ಶುಭಕರನಾದ ದಿನಕರನನ್ನು ಆರಾಧಿಸಿದೆ. ಅವನನ್ನು ಅಲ್ಲೆ ಸಂದರ್ಶಿಸಿದೆನು. ಬಳಿಕ ಸುಪುತ್ರನನ್ನು ಪಡೆದೆನು. ಭಾದ್ರಪದ ಬಹುಳ ಸಪ್ತಮಿಯಂದು ಭಾನುವು ಅಲ್ಲಿ ಯಾವಾಗಲೂ ಸನ್ನಿಹಿತನಾಗಿರುವನು. ಆ ದಿನ ಆ ಕುಂಡದಲ್ಲಿ ಸಮಾಹಿತನಾಗಿ ಸ್ನಾನಮಾಡುವವನಿಗೆ ಲೋಕದಲ್ಲಿ ದುರ್ಲಭ ಯಾವುದೂ ಇಲ್ಲ. ಮೇಲೆ ಹೇಳಿದ ಸಪ್ತಮಿಯಂದು ಭಾನುವಾರವಾಗಿದ್ದರೆ ಅಲ್ಲಿ ಸ್ನಾನ ಮಾಡುವ ಪುರುಷ ಸ್ತ್ರೀಯರು ಪೂರ್ಣಫಲವನ್ನು ಪಡೆಯುವರು. ಪೂರ್ವದಲ್ಲಿ ಶಂತನುವೂ ಅಲ್ಲೇ ಸೂರ್ಯನನ್ನು ಕುರಿತು ತಪಸ್ಸು ಮಾಡಿ ಭೀಷ್ಮನೆಂಬ ಪುತ್ರನನ್ನು ಪಡೆದು ಹಸ್ತಿನಾಪುರಕ್ಕೆ ಹೊರಟುಹೋದನು. ಅಲ್ಲಿ ಸ್ನಾನದಾನಾದಿಗಳನ್ನು ಮಾಡುವವರು ಬೇಕಾದ ಫಲವನ್ನು ಪಡೆಯುವರು.

**ವರಾಹ** :- ಭೂದೇವಿ, ನನ್ನ 'ಮಧುರಾಮಂಡಲ' ಕ್ಷೇತ್ರವು ಇಪ್ಪತ್ತು ಯೋಜನ ವಿಸ್ತಾರ ಉಳ್ಳದ್ದಾಗಿದೆ. ಈ ಮಂಡಲದಲ್ಲಿರುವ ಯಾವ ತೀರ್ಥದಲ್ಲಿ ಸ್ನಾನ ಮಾಡಿದರೂ ಮನುಷ್ಯನು ಸರ್ವಪಾಪಗಳಿಂದ ಮುಕ್ತನಾಗುವನು. ನಾನು ಶಯನ ದ್ವಾದಶಿಯಲ್ಲಿ ಮಲಗಿದ ಬಳಿಕ ಸಪ್ತದ್ವೀಪಗಳಲ್ಲಿರುವ ತೀರ್ಥಕ್ಷೇತ್ರಗಳೆಲ್ಲವೂ ಮಧುರೆಗೆ ಬರುವವು. ಉತ್ಥಾನ ದ್ವಾದಶಿಯ ದಿನ ಭೋಗಿ ಶಯನದಿಂದ ಎದ್ದೇಳುವ ನನ್ನ ದರುಶನವನ್ನು ಪಡೆದುಕೊಳ್ಳುವವರು ತಕ್ಷಣದಲ್ಲಿಯೇ ಏಳು ಜನ್ಮದಲ್ಲಿ ಮಾಡಿದ ಪಾಪಗಳನ್ನೆಲ್ಲ ಕಳೆದುಕೊಂಡು ಮುಂದೆ ನನ್ನ ಸಾಕ್ಷಾತ್ ಕಾರಕ್ಕೆ ಅರ್ಹರಾಗುವರು.

ಮಥುರೆಯಲ್ಲಿ ವಾಸಿಸಿದ ಕೇಶವ ರೂಪಿಯಾದ ನನ್ನನ್ನು ಪ್ರದಕ್ಷಿಣೆ ಮಾಡಿದರೆ ಸಪ್ತದ್ವೀಪ ಸಹಿತವಾದ ಭೂಪ್ರದಕ್ಷಿಣೆ ಮಾಡಿದ ಪುಣ್ಯವು ಬರುವದು. ಆ ಕೇಶವ ದೇವರ ಮುಂದೆ ತುಪ್ಪದ ದೀಪವನ್ನು ಹಚ್ಚಿದರೆ ದೀಪಮಾಲೆಗಳಿಂದ ಬೆಳಗುವ ದೇವ ವಿಮಾನಗಳಲ್ಲಿ ಮಾನವನು ಸಂಚರಿಸುವನು. ಈ ಮಥುರಾ ಕ್ಷೇತ್ರವನ್ನು ಪೂರ್ವ ದಿಕ್ಕಿನಲ್ಲಿ ಇಂದ್ರನೂ ದಕ್ಷಿಣದಲ್ಲಿ ಯಮನೂ ಪಶ್ಚಿಮದಲ್ಲಿ ವರುಣನೂ, ಉತ್ತರ ದಿಕ್ಕಿನಲ್ಲಿ ಕುಬೇರನೂ ಮಧ್ಯಭಾಗದಲ್ಲಿ ಶಿವನೂ ರಕ್ಷಣೆ ಮಾಡುತ್ತಲಿರುವರು. ಮಥುರೆಯಲ್ಲಿ ಮನೆ ಮಾಡಿಕೊಂಡು ಇದ್ದವರು ಜೀವನ್ಮುಕ್ತರೆಂದೇ ತಿಳಿಯಬೇಕು. ಈ ಮಥುರೆಯಲ್ಲಿ ಅಡಿಗಡಿಗೆ ತೀರ್ಥದ ಫಲ. ಇಲ್ಲಿಯ ಬಾವಿ, ಮಡುವು, ತೀರ್ಥ, ಹಳ್ಳ, ನದೀ ಸಂಗಮ ಪ್ರವಾಹಗಳಲ್ಲಿ ಪ್ರಯತ್ನ ಪೂರ್ವಕವಾಗಿ ಸ್ನಾನ ಮಾಡಿದವರು ಖಂಡಿತವಾಗಿಯೂ ಪರಮಗತಿಯನ್ನು ಹೊಂದುತ್ತಾರೆ. ಕಾಲಯವನನನ್ನು ಕೊಂದ ಮುಚಕುಂದ ಮಹಾರಾಜನು ಇಲ್ಲಿಯ 'ಮುಚಕುಂದ' ಕ್ಷೇತ್ರದಲ್ಲಿ ಮಲಗಿರುತ್ತಾನೆ. ಆ ಮುಚಕುಂದ ಕ್ಷೇತ್ರದ ತೀರ್ಥಕುಂಡದಲ್ಲಿ ಸ್ನಾನಮಾಡುವವರೂ ಪ್ರಾಣ ಬಿಡುವವರೂ ವಿಷ್ಣುಲೋಕವನ್ನು ಸೇರುತ್ತಾರೆ. ಅಲ್ಲಿಯ 'ಚತುಸ್ಸಾಮುದ್ರಿಕ' ತೀರ್ಥದಲ್ಲಿ ಸ್ನಾನ ಮಾಡುವವರೂ ಅಲ್ಲಿ ಪಿತೃಗಳನ್ನು ಉದ್ದೇಶಿಸಿ ತಿಲೋದಕ ಸಹಿತವಾಗಿ ಪಿಂಡ ಪ್ರದಾನ ಮಾಡುವವರೂ ಪಿತೃಗಳ ಪರಮಾನುಗ್ರಹಕ್ಕೆ ಪಾತ್ರರಾಗುವರು.

**ಭೂದೇವಿ** :- ದೇವಜನಾರ್ದನ, ತೀರ್ಥ ಸೇವೆಯಿಂದ ಮತ್ತು ಭೂ ಪ್ರದಕ್ಷಿಣೆಯಿಂದ ಬರುವಷ್ಟು ಪುಣ್ಯವು ಯಾವ ಯಜ್ಞ ದಾನ ತಪಸ್ಸುಗಳಿಂದಲೂ ಬರಲಾರದು. ಆದರೆ ಸರ್ವ ತೀರ್ಥಗಳಿಗೂ ಹೋಗುವದು ಮನುಷ್ಯರಿಗೆ ಬಹಳ ಕಷ್ಟಕರ. ಆದುದರಿಂದ ಎಲ್ಲ ತೀರ್ಥಗಳ ಸ್ನಾನದಿಂದ ಬರುವ ಫಲವನ್ನು ಪೂರ್ಣವಾಗಿ ಪಡೆಯಲು ಸುಲಭವಾದ ಉಪಾಯವು ಏನಾದರೂ ಇದ್ದರೆ ನನಗೆ ತಿಳಿಸು.

**ಶ್ರೀವರಾಹ** :- ಪೃಥ್ವಿ, ಭೂಲೋಕದಲ್ಲಿರುವ ಒಟ್ಟು ತೀರ್ಥಗಳ ಸಂಖ್ಯೆಯು ಆರು ಅರ್ಬುದ. ಅರ್ಥಾತ್ ಅರವತ್ತು ನೂರು ಕೋಟಿ. ಈ ಎಲ್ಲ ತೀರ್ಥಗಳನ್ನು ಸಂಚರಿಸಿ ಬರಬೇಕಾದರೆ ಅರವತ್ತು ಕೋಟಿ ಸಾವಿರ ಯೋಜನದ ದೂರದಳತೆಯನ್ನು ಸುಳಿದು ಸುತ್ತಿ ಬರಬೇಕಾಗುವದು. ಜಗತ್ ಪ್ರಾಣನಾದ ವಾಯುವು ಆಗಸದಲ್ಲಿರುವ ತೀರ್ಥಗಳ ಗಣನೆಯನ್ನು ಮಾಡಿದ್ದಾನೆ. ಬ್ರಹ್ಮರ್ಷಿಯಾದ ಲೋಮಶ, ನಾರದ, ಧ್ರುವ, ಸಾಂಬ, ರಾವಣ, ಹನುಮಂತ, ಸುಗ್ರೀವ, ಮಾರ್ಕಂಡೇಯ, ಪಂಚಪಾಂಡವರು ಮೊದಲಾದ ದೇವ ಮುನಿಮನುಜ ಮಹಾನುಭಾವರು ಅನೇಕರು ಭೂಪ್ರದಕ್ಷಿಣೆ ಮಾಡಿ ಈ ಎಲ್ಲ ತೀರ್ಥ ಕ್ಷೇತ್ರ ಯಾತ್ರೆಗಳನ್ನು ಮಾಡಿ ಪೂರೈಸಿ ಪುಣ್ಯವಂತರಾಗಿದ್ದಾರೆ. ಆ ಮೊದಲು ಹಾಗೂ ಅನಂತರ ಯಾರೂ ಈವರೆಗೆ ಭೂಪ್ರದಕ್ಷಿಣೆಯನ್ನು ಹಿಂದೆ ಮಾಡಲಿಲ್ಲ ಮುಂದೆ ಮಾಡುವದಿಲ್ಲ. ಸಪ್ತ ದ್ವೀಪಗಳಲ್ಲಿರುವ ಎಲ್ಲ ತೀರ್ಥಗಳ ಪ್ರದಕ್ಷಿಣೆಯಿಂದ ಬರುವ ಪುಣ್ಯಕ್ಕಿಂತ 'ಮಥುರಾಪುರಿಯ' ಪ್ರದಕ್ಷಿಣೆಯಿಂದ ಹೆಚ್ಚಿನ ಪುಣ್ಯವು ಪ್ರಾಪ್ತವಾಗುವದು. ಆ ಮಥುರಾಪುರದ ಪ್ರದಕ್ಷಿಣೆಯ ಕ್ರಮವನ್ನು ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ಸಪ್ತರ್ಷಿಗಳು ಬಂದು ಬ್ರಹ್ಮದೇವರಿಗೆ ಇದೇ ಮಾತನ್ನು ಕೇಳಿದರು. ಆಗ ಬ್ರಹ್ಮದೇವರು ನಸುನಕ್ಕು ನುಡಿದರು -

''ಬ್ರಾಹ್ಮಣರೇ, ಎಲ್ಲ ದೇವರ ಪೂಜೆ ಪುರಸ್ಕಾರ, ಸರ್ವ ತೀರ್ಥಗಳ ಸ್ನಾನ ದಾನ ಯಜ್ಞ, ಯಾಗ, ಇಷ್ಟಾಪೂರ್ತ ಮುಂತಾದ ಬಹುವಿಧ ಧರ್ಮಕಾರ್ಯಗಳಿಂದ ಬರುವ ಪುಣ್ಯದ ನೂರರಷ್ಟು ಪುಣ್ಯವು ಈ ಮಧುರಾ ನಗರದ ಸಂಚಾರ ಪ್ರದಕ್ಷಿಣೆಗಳಿಂದ ಲಭಿಸುವದು.'' ಬ್ರಹ್ಮದೇವರ ಈ ಮಾತನ್ನು ಕೇಳಿ ಆ ಎಲ್ಲ ಬ್ರಹ್ಮರ್ಷಿಗಳು ಮಧುರಾ ನಗರಿಗೆ ಧ್ರುವನೊಡನೆ ಬಂದು ಕಾರ್ತೀಕ ನವಮಿಯ ದಿನ ಮಧುರಾ ಪ್ರದಕ್ಷಿಣೆಯನ್ನು ಮಾಡಿ ವಿಶೇಷ ಪುಣ್ಯ ಫಲವನ್ನು ಪಡೆದರು.

**ಶ್ರೀ ವರಾಹ** :- ಕಾರ್ತೀಕ ಶುಕ್ಲಪಕ್ಷ ಅಷ್ಟಮಿಯ ದಿನ ಯಾತ್ರಿಕನು ಮಧುರೆಗೆ ಹೋಗಿ 'ವಿಶ್ರಾಂತಿ ತೀರ್ಥದಲ್ಲಿ' ಸ್ನಾನಮಾಡಿ ಪಿತೃದೇವತೆಗಳನ್ನು ಪೂಜಿಸಿ ವಿಶ್ರಾಂತಿ ತೀರ್ಥದ ಸಮೀಪದಲ್ಲಿರುವ ಶ್ರೀ ವಿಷ್ಣುವನ್ನು ಕೇಶವನನ್ನು ಸಂದರ್ಶಿಸುವದರಿಂದ ಮಧುರಾ ಪ್ರದಕ್ಷಿಣೆ ಫಲವು ಪ್ರಾಪ್ತವಾಗುತ್ತದೆ. ಅಂದು ಅಲ್ಪೋಪಹಾರವನ್ನು ಮಾಡಿ ಸಾಯಂಕಾಲ ತಿಲಾಕ್ಷತೆ ದರ್ಭೆಗಳಿಂದ ಪಿತೃದೇವತೆಗಳನ್ನು ತರ್ಪಿಸಿ ಜಾಗರಣೆಯನ್ನು ಮಾಡಬೇಕು. ಮರುದಿನ ನವಮಿಯ ತಿಥಿಯಲ್ಲಿ ಧ್ರುವಾದಿ ಋಷಿಗಳು ಮಾಡಿದ ಕ್ರಮದಿಂದಲೇ ಮಧುರಾ ಪ್ರದಕ್ಷಿಣೆಯನ್ನು ಪ್ರಾರಂಭಿಸಬೇಕು. ಸೂರ್ಯೋದಯಕ್ಕಿಂತ ಮೊದಲೇ 'ದಕ್ಷಿಣ ಕೊಟಿಕ' ತೀರ್ಥದಲ್ಲಿ ಸ್ನಾನಮಾಡಿ ಹನಮಂತನನ್ನು ನಮ್ಮ ಯಾತ್ರೆಯು ನಿರ್ವಿಘ್ನವಾಗಿ ಆಗಲಿ ಎಂದು ಪ್ರಾರ್ಥಿಸಿ ಮುಂದುವರೆದು ದೀರ್ಘ ವಿಷ್ಣುವಿನ ಹಾಗೂ ದೇವಿಯರ ಸಂದರ್ಶನವನ್ನು ಮಾಡಿಕೊಳ್ಳಬೇಕು. ವಸುಮತೀ, ಅಪರಾಜಿತಾ, ಕಂಸವಾಸನಿಕಾ, ಔಗ್ರಶೇನೆ, ಚರ್ಚಿಕಾ, ವಧೂಟಿ, ಜಯದಾ ಮುಂತಾದ ಮಾತೆಯರನ್ನು ಪೂಜಿಸಿ ಅನಂತರ ಇಕ್ಷುವಾಸಾದೇವಿಯ ಸನ್ನಿಧಿಗೆ ಹೋಗಬೇಕು.

ಶ್ರೀ ಕೃಷ್ಣನು ಗೋಪಾಲ ಬಾಲಕರೊಂದಿಗೆ ನೀರಾಟವಾಡಿದ ಜಲಾಶಯಗಳೆಲ್ಲ ಪುಣ್ಯತೀರ್ಥಗಳೆಂದು ಋಷಿಗಳು ಗೊತ್ತುಪಡಿಸಿದ್ದಾರೆ. ಯಾತ್ರೆಗೆ ಹೊರಟು ಮಧುರಾ ಪ್ರದಕ್ಷಿಣೆಯನ್ನು ಮಾಡ ಹೊರಟ ಯಾತ್ರಿಕರು ವತ್ಸಪುತ್ರ, ಆರ್ಕಸ್ಥಳ, ವೀರಸ್ಥಲ, ಕುಶಸ್ಥಲ, ಪುಣ್ಯಸ್ಥಲಗಳಿಗೆ ಹೋಗಿ ಸಿದ್ಧಮುಖ ಎಂಬ ಹೆಸರಿನ ಮಹಾದೇವನ ದರ್ಶನ ತೆಗೆದುಕೊಂಡು 'ಹಯ ಮುಕ್ತಿ ಕ್ಷೇತ್ರ'ಕ್ಕೆ ಹೋಗಬೇಕು. ಹಿಂದೊಬ್ಬ ರಾಜಕುಮಾರನು ಕುದುರೆಯ ಮೇಲೇರಿಕೊಂಡು ಯಾತ್ರೆ ಮಾಡಿದನಂತೆ. ಆಗ ಆ ಕುದುರೆಯು ಮುಕ್ತವಾಗಿ ಆ ರಾಜಕುಮಾರನು ಮಾತ್ರ ಅಲ್ಲಿಯೇ ಉಳಿದನಂತೆ. ಆದುದರಿಂದ ಯಾತ್ರೆಯನ್ನು ವಾಹನಗಳನ್ನು ಏರಿಕೊಂಡು ಮಾಡದೇ ಕಾಲನಡಿಗೆಯಿಂದಲೇ ಮಾಡಬೇಕು ಎಂದು ಈ ತೀರ್ಥದಲ್ಲಿ ಈಗಲೂ ಇರುವ ಆ ಕುದುರೆಯ ಪ್ರತಿಮೆಯು ಸಾರುತ್ತದೆ. ಆ ತೀರ್ಥದಲ್ಲಿ ಸ್ನಾನ ಮಾಡಿ ಆ ಕುದುರೆಯನ್ನು ಮುಟ್ಟಿ ಯಾತ್ರಿಕರು ತಮ್ಮ ಪಾಪವನ್ನು ಪರಿಹರಿಸಿಕೊಳ್ಳಬೇಕು. ಮುಂದೆ 'ಶಿವಕುಂಡ', 'ಕದಂಬಕುಂಡ', ಕೃಷ್ಣನು ಆಟದಲ್ಲಿ ನಿರ್ಮಿಸಿದ 'ಕ್ರೀಡಾಸೇತು ಬಂಧ', ಅವನು ಜಲಕ್ರೀಡೆ ಮಾಡಿದ 'ಬಲಹ್ರದ, ತೀರ್ಥ' ಮುಂತಾದವುಗಳಲ್ಲಿ ಸ್ನಾನ ಮಾಡಿ 'ವಿಧಿ, ವಿನಾಯಕ', 'ಗತೇಶ್ವರ', 'ಕುಬ್ಜಾ', 'ಬ್ರಾಹ್ಮಣಸ್ತ್ರೀ', 'ಮಹಾ ವಿದ್ಯೇಶ್ವರಿ' ಮುಂತಾದ ದೇವಾಲಯಗಳಿಗೆ ಹೋಗಿ ನಮಸ್ಕಾರ ಮಾಡಬೇಕು. ಬಲರಾಮಕೃಷ್ಣರು ಕಂಸನನ್ನು ಕೊಲ್ಲಬೇಕೆಂದು ಗೋಪರೊಡನೆ ಮಂತ್ರಾಲೋಚನೆಯನ್ನು ಮಾಡಿ ಈ ವಿದ್ಯೇಶ್ವರಿಯನ್ನು ಪ್ರತಿಷ್ಠಿಸಿದ್ದರಿಂದ ಇವಳು

ಸಿದ್ಧಿದೇವಿ ಮತ್ತು ಸಂಕಟೇಶ್ವರೀ ಎಂಬ ಹೆಸರಿನಿಂದ ಪ್ರಸಿದ್ಧಳಾಗಿ ಜನರಿಗೆಲ್ಲ ಸುಖಪ್ರದಳಾಗಿದ್ದಾಳೆ. ಅಲ್ಲಿಂದ ಗೋಕರ್ಣೇಶ್ವರ, ವಿಘ್ನೇಶ್ವರ, ಗಂಗಾಕ್ಷೇತ್ರ, ರುದ್ರಮಹಾಲಯ, ಗಾರ್ಗ್ಯತೀರ್ಥ, ಭದ್ರೇಶ್ವರ, ಸೋಮತೀರ್ಥ, ಸರಸ್ವತೀ ಸಂಗಮ, ಘಂಟಾಭರಣಕ, ಗರುಡಕೇಶವ, ಧಾರಾಲೋಪನಕ, ಖಂಡಪೀಲಕ, ಮಂದಾಕಿನೀ ಸಂಯಮನ, ಅಗ್ನಿಕುಂಡ, ಗೋಪತೀರ್ಥ, ಮುಕ್ತೇಶ್ವರತೀರ್ಥ, ವೈಲಕ್ಷ ಗರುಡತೀರ್ಥ, ಮುಂತಾದ ಪುಣ್ಯ ಕ್ಷೇತ್ರ ತೀರ್ಥಗಳಲ್ಲಿ ಸ್ನಾನದಾನಾದಿಗಳನ್ನು ಮಾಡಿ ಕ್ಷೇತ್ರ ದೇವತೆಗಳನ್ನು ಪೂಜಿಸಬೇಕು. ಅನಂತರ ಸುಮಂಗಲಾಕ್ಷೇತ್ರಕ್ಕೆ ಹೋಗಿ ಪಾರ್ವತಿಯನ್ನು ಯಾತ್ರಾಸಿದ್ಧಿಗಾಗಿ ಬೇಡಿಕೊಂಡು ಪಿಪ್ಪಲಾದೇಶ್ವರನನ್ನು ನಮಿಸಿ, ಕೃಷ್ಣನಿಂದ ಪ್ರತಿಷ್ಠಿತಳಾದ ದುರ್ಗಾದೇವಿಯನ್ನು ವಂದಿಸಿ, ವರಪ್ರದನಾದ ಸುಖಾವಾಸದೇವನನ್ನು ನೋಡಬೇಕು. ಅನಂತರ ಕೃಷ್ಣನು ಮಧುರಾಪಟ್ಟವನ್ನು ಪ್ರವೇಶಿಸುವಾಗ ಸ್ಮರಿಸಿದ ಅರ್ತಿಹರಾ ಎಂಬ ಹೆಸರಿನ ದುರ್ಗಾದೇವಿಯನ್ನೂ, ಅವನೇ ಸ್ಥಾಪಿಸಿದ ವಜ್ರಾನನ ದೇವತೆಯನ್ನೂ, ಬಳಿಕ ಮಧುರೆಯ ಕುವಲೇಶ್ವರನಾದ ಸೂರ್ಯದೇವನನ್ನೂ ಸಂದರ್ಶಿಸಿ ದಾನಧರ್ಮಾದಿಗಳನ್ನು ಮಾಡಿ ಈ ಮಧುರಾ ಯಾತ್ರೆಯನ್ನು ಮುಗಿಸಬೇಕು. ಅದರಿಂದ ಸರ್ವಪಾಪಗಳು ಪರಿಹಾರವಾಗಿ ಸದ್ಗತಿ ಉಂಟಾಗುವದು.

## ಹನ್ನೆರಡು ವನಗಳ ಮಹಿಮೆ

**ಭೂದೇವಿ** :- ಭಗವಂತ, ಅಜ್ಞಾನಿಗಳಿಗೆ ಸದ್ಗತಿಯಾಗುವ ಉಪಾಯವೇನು ಹೇಳು.

**ವರಾಹ** :- ದೇವಿ, ದುರಾಚಾರಿಗಳಿಗೆ ನರಕದ ಭಯವನ್ನು ತಪ್ಪಿಸಿ ಸದ್ಗತಿಯನ್ನು ನೀಡುವ ಕ್ಷೇತ್ರವೆಂದರೆ 'ಮಧುರಾ ಪುರಿ'. ಈ ಕ್ಷೇತ್ರದಲ್ಲಿಯ ಮಧುವನ, ತಾಲವನ, ಕುಂದವನ, ಕಾಮ್ಯಕವನ, ಬಹುವನ, ಭದ್ರವನ, ಖಾದಿರವನ, ಲೋಹಾರ್ಗಲವನ, ಬಿಲ್ವವನ, ಭಾಂಡೀರವನ, ವೃಂದಾವನ ಈ ಹನ್ನೆರಡು ವನಗಳ ಯಾತ್ರೆ ಮಾಡಿ ಜಿತೇಂದ್ರಿಯರಾಗಿ ಭಗವತ್ ಸೇವೆಯನ್ನು ಮಾಡುವವರು ಪಾಪಮುಕ್ತರಾಗಿ ಇಂದ್ರಲೋಕವನ್ನು ಸೇರುವರು.

## ಚಕ್ರತೀರ್ಥ ಪ್ರಭಾವ

**ಶ್ರೀ ವರಾಹ** - ವಸುಮತಿ, ಮಧುರಾ ಕ್ಷೇತ್ರದ ಉತ್ತರಕ್ಕಿರುವ ಚಕ್ರತೀರ್ಥದ ವಿಷಯವಾಗಿ ಹೇಳುತ್ತೇನೆ ಕೇಳು. ಜಂಬೂದ್ವೀಪಕ್ಕೆ ಅಲಂಕಾರದಂತಿರುವ ಮಹಾಗ್ರಹೋದಯ ಎಂಬ ಪಟ್ಟಣದಲ್ಲಿ ಒಬ್ಬ ವೇದ ಪಾರಂಗತನಾದ ಬ್ರಾಹ್ಮಣನಿದ್ದನು. ಅವನು ತನ್ನ ಮಗನನ್ನು ಹಾಗೂ ತನ್ನ ಮಗಳನ್ನೂ ಕರೆದುಕೊಂಡು 'ಸಾಲಗ್ರಾಮ ಕ್ಷೇತ್ರ'ಕ್ಕೆ ಹೋಗಿ ಜಿತೇಂದ್ರಿಯನಾಗಿ ಹರಿಸೇವೆಯನ್ನು ಮಾಡುತ್ತ ವಾಸಿಸಿದಾಗ ಅವನಿಗೆ ಒಬ್ಬ ಸಿದ್ಧಪುರುಷನ ಸಹವಾಸವಾಯಿತು. ಆ ಸಿದ್ಧನು ಕಾನ್ಯಕುಬ್ಜದ ಮಹೋದಯ ಗ್ರಾಮ ನಿವಾಸಿಯಾದ ಬ್ರಾಹ್ಮಣನಿಗೆ ತನ್ನ ಸ್ವಂತ ಊರಾದ ಕಲ್ಪಗ್ರಾಮದ ಮಹಿಮೆಯನ್ನೂ ಪ್ರಭಾವವನ್ನೂ ಬಹಳವಾಗಿ ಬಣ್ಣಿಸಿ ಹೇಳುತ್ತಿದ್ದನು. ಕಲ್ಪಗ್ರಾಮದ ಅತ್ಯಾಶ್ಚರ್ಯಕರವಾದ ಮಹಿಮಾನು ವರ್ಣನೆಯನ್ನು ಆ ಸಿದ್ಧ ಪುರುಷನ ಬಾಯಿಂದ ಕೇಳಿ ಈ 'ಕಾನ್ಯಕುಬ್ಜದ' ಬ್ರಾಹ್ಮಣನ ಬಾಯಲ್ಲಿ ನೀರು ಬಿಟ್ಟವು.

"ನಮ್ಮನ್ನೂ ನಿಮ್ಮ ಊರಿಗೆ ಕರೆದುಕೊಂಡು ಹೋಗು" ಎಂದು ಆ ಸಿದ್ಧನಿಗೆ ದುಂಬಾಲು ಬಿದ್ದನು. ಅದಕ್ಕೆ ಆ ಸಿದ್ಧನು "ಆ ಕಲ್ಪಗ್ರಾಮಕ್ಕೆ ನಮ್ಮಂತಹ ಸಿದ್ಧರು ಮಾತ್ರ ಹೋಗಬಲ್ಲರು. ನೀವು ಅಲ್ಲಿಯವರೆಗೆ ನಡೆದು ಹೋಗಲಾರಿರಿ. ಆದರೂ ಸದ್ಬ್ರಾಹ್ಮಣನಾದ ನೀನು ಇಷ್ಟ ಪಟ್ಟಿದ್ದರಿಂದ ನಾನು ನನ್ನ ಯೋಗಶಕ್ತಿಯಿಂದ ನಿಮ್ಮನ್ನು ಅಲ್ಲಿಗೆ ಕರೆದೊಯ್ಯುತ್ತೇನೆ ನಡೆಯಿರಿ." ಎಂದು ಹೇಳಿದನು.

ಅದರಂತೆ ಆ ಸಿದ್ಧನು ತನ್ನ ಬಲಗೈಯಿಂದ ಆ ಬ್ರಾಹ್ಮಣನನ್ನೂ ಎಡಗೈಯಿಂದ ಮಹಾಮತಿ ಎಂಬ ಹೆಸರಿನ ಅವನ ಮಗನನ್ನೂ ಎತ್ತಿಕೊಂಡು ಆಕಾಶ ಮಾರ್ಗದಿಂದ ಹಾರಿ ಹೋಗಿ ಆ ಬ್ರಾಹ್ಮಣ ಪಿತಾಪುತ್ರರನ್ನು ಕಲ್ಪಗ್ರಾಮದಲ್ಲಿ ಇಳಿಸಿದನು. ಬಹುಕಾಲದ ವರೆಗೆ ಅವರಿಬ್ಬರೂ ತಂದೆಮಕ್ಕಳುಆ 'ಕಲ್ಪಗ್ರಾಮ'ದಲ್ಲಿ ವಾಸ ಮಾಡಿದರು. ಕೊನೆಗೆ ಒಮ್ಮೆ ಆ ವೃದ್ಧ ಬ್ರಾಹ್ಮಣನಿಗೆ ದೇಹದಲ್ಲಿ ಒಂದು ಬೇನೆ ತಗಲಿತು. ರೋಗಪೀಡಿತನಾದ ಆ ಬ್ರಾಹ್ಮಣನು ತನ್ನ ಮರಣಕಾಲವು ಸಮೀಪಿಸಿತೆಂದು ಮಗನನ್ನು ಕರೆದನು. "ಮಗು, ನನ್ನನ್ನು ಗಂಗಾನದಿಯ ತೀರಕ್ಕೆ ಕರೆದುಕೊಂಡು ಹೋಗು. ತಡಮಾಡಬೇಡಾ" ಎಂದು ಹೇಳಿದನು. ಅದರಂತೆ ಆ ಸತ್ಪುತ್ರನು ತಂದೆಯನ್ನು ಗಂಗಾತೀರಕ್ಕೆ ಕರೆದುಕೊಂಡು ಹೋಗಿ ಅವನ ಸೇವೆಯನ್ನು ಮಾಡುತ್ತಲಿದ್ದನು. ಒಂದು ದಿನ ಅವನು ದೈವಯೋಗದಿಂದ ತಮ್ಮನ್ನು ಹಿಂದೆ ಕಲ್ಪಗ್ರಾಮದಲ್ಲಿ ತಂದಿಟ್ಟ ಸಿದ್ಧಿಯೋಗಿಯ ಬಳಿಗೆ ಹೋದನು. ಆ ಸಿದ್ಧಯೋಗಿಯು ತೇಜಸ್ವಿಯಾದ ಈ ತರುಣ ಬ್ರಾಹ್ಮಣಕುಮಾರನನ್ನು ಸತ್ಕರಿಸಿ ಆತಿಥ್ಯವನ್ನು ನೀಡಿ ಅವನಿಗೆ ತನ್ನ ಸುಂದರಿಯಾದ ಮಗಳನ್ನು ಕೊಟ್ಟು ಶಾಸ್ತ್ರೋಕ್ತವಾಗಿ ಮದುವೆ ಮಾಡಿದನು. ಮದುವೆಯಾದ ಬಳಿಕ ಆ ಬ್ರಾಹ್ಮಣಕುಮಾರನು ಮಾವನ ಮನೆಯಲ್ಲಿಯೇ ನಿತ್ಯವೂ ಊಟಮಾಡುತ್ತ ಸಮೀಪದಲ್ಲಿಯೇ ಇದ್ದ ಗಂಗಾತೀರದ ಗ್ರಾಮದಲ್ಲಿ ಇರುವ ತಂದೆಯ ಸೇವೆಯನ್ನು ತಪ್ಪದೇ ಮಾಡುತ್ತಿದ್ದನು. ಇದರಿಂದಾಗಿ ಅವನು ಪ್ರತಿನಿತ್ಯವೂ ಮಾವನ ಮನೆಗೂ ತಂದೆಯ ಮನೆಗೂ ಓಡಾಡುತ್ತಿದ್ದನು. ಕಾಲಕ್ರಮದಿಂದ ಅವನ ತಂದೆಯು ಬಹಳ ಕ್ಷೀಣನಾದಾಗ ಅವನನ್ನು ನೋಡಿ ಮಹಾಮತಿ ಬ್ರಾಹ್ಮಣಕುಮಾರನು ತನ್ನ ಮಾವನ ಬಳಿಗೆ ಹೋಗಿ " ಮಾವಾ, ನಮ್ಮ ತಂದೆಯು ಎಂದು ಸಾಯುವನು ಹೇಳು " ಎಂದು ಕೇಳಿದನು.

ಅಳಿಯನ ಮಾತನ್ನು ಕೇಳಿ ಮಾವನು ನಕ್ಕು " ಮಹಾಮತಿ, ನಿಮ್ಮ ತಂದೆಯು ನಿತ್ಯವೂ ಶೂದ್ರಾನ್ನವನ್ನು ತಿಂದು ಅಪವಿತ್ರನಾಗಿದ್ದಾನೆ. ಆ ಆಹಾರ ದೋಷದಿಂದ ನಿಮ್ಮ ತಂದೆಯ ಮರಣವು ಮುಂದೆ ಮುಂದೆ ಹೋಗುತ್ತದೆ. ಆ ಶೂದ್ರಾನ್ನವು ಇನ್ನೂ ನಿನ್ನ ತಂದೆಯ ಕಾಲುಗಳಲ್ಲಿದೆ. ಅವನ ಮೊಳಕಾಲುಗಳ ಮೇಲೆ ಮಾತ್ರ ಆ ಶೂದ್ರಾನ್ನದ ಪರಿಣಾಮ ಆಗಿಲ್ಲ" ಎಂದು ಹೇಳಿದನು. ಮರುದಿನ ತಂದೆಗೆ ಈ ಮಾತನ್ನೆಲ್ಲ ತಿಳಿಸಿ ಮಹಾಮತಿಯು ಸೂರ್ಯೋದಯವಾದ ಬಳಿಕ ತಂದೆಯ ಮನೆಯಿಂದ ಮಾವನ ಮನೆಗೆ ಹೋದನು. ಮಗನು ಹೋದ ಬಳಿಕ ಆ ಕಾನ್ಯಕುಬ್ಜದ ವೃದ್ಧಬ್ರಾಹ್ಮಣನು ತನ್ನ ಕಾಲುಬೇನೆಯಿಂದ ನಿರ್ವಿಣ್ಣನಾಗಿ ಆ ಭಯಂಕರ ವೇದನೆಯನ್ನು ತಾಳಲಾರದೆ ಗಂಗೆಯದಂಡೆಯಿಂದ ಎದ್ದು ಸಂಕಟಪಡುತ್ತ ಬೇರೆಡೆಗೆ ಹೋದನು. ಅಲ್ಲಿ ಆಚೀಚೆ ಹುಡುಕಾಡಿ ಆ ರೋಗದ ಉರಿಸಂಕಟಗಳನ್ನು ತಾಳಲಾರದೆ ಒಂದು ದೊಡ್ಡ ಕಲ್ಲಿನಿಂದ

ತನ್ನ ಕಾಲನ್ನು ಜಜ್ಜಿಕೊಂಡು ಮರಣವನ್ನು ಹೊಂದಿದನು. ಇತ್ತ ಮಹಾಮತಿಯು ಮಾವನಮನೆಯಿಂದ ಸ್ನಾನ ಊಟಮಾಡಿ ಬರುವಷ್ಟರಲ್ಲಿ ಅವನ ತಂದೆಯು ಸತ್ತುಬಿದ್ದಿದ್ದನು. ಅದನ್ನು ನೋಡಿ ಅತ್ಯಂತ ದುಃಖಿತನಾದ ಆ ಮಹಾಮತಿಯು ಎದ್ದು ಶಾಸ್ತ್ರಾಲೋಚನೆ ಮಾಡಿದಾಗ ಆತ್ಮಹತ್ಯೆಯನ್ನು ಮಾಡಿಕೊಂಡ ಆ ತಂದೆಗೆ ಯಾವ ಸಂಸ್ಕಾರವನ್ನೂ ಮಾಡಲಿಕ್ಕೆ ಬರುವದಿಲ್ಲವೆಂದು ತಿಳಿದು ಬಂದಿತು.

ಸರ್ಪ-ದಂಷ್ಟ್ರಿ-ಹತಾನಾಂ ಚ ಶೃಂಗಿ-ವಿಪ್ರ-ಹತಸ್ಯ ಚ ।
ಆತ್ಮನಸ್ತ್ಯಾಗಿನಶ್ಚೈವ ಆಪಸ್ತಂಬೋಽಬ್ರವೀದಿದಂ ॥
ಆತ್ಮ-ಘಾತಿ ನರಃ ಪಾಪೋ ನರಕೇ ಪಚ್ಯತೇ ಚಿರಂ ।
ಪ್ರಾಯಶ್ಚಿತ್ತಂ ವಿಧೀಯೇತ ನ ದದ್ಯಾಚ್ಚೋದಕಕ್ರಿಯಾಂ ॥

ಹಾವು, ಹುಲಿ, ಹಸು, ಎತ್ತು, ಬ್ರಾಹ್ಮಣರಿಂದ ಹೊಡೆದು ಕಡಿದು ಕೊಲ್ಲಲ್ಪಟ್ಟವರಿಗೂ ಆತ್ಮಹತ್ಯೆ ಮಾಡಿಕೊಂಡವರಿಗೂ ಪಿಂಡೋದಕವನ್ನು ಕೊಡಕೂಡದು. ಅವರು ನರಕದಲ್ಲಿಯೇ ಬಹುಕಾಲ ನರಳಿ ನವೆಯುವರು. ಆಪಸ್ತಂಬರ ಈ ವಚನವನ್ನು ನೋಡಿ ಆ ಬ್ರಾಹ್ಮಣ ಕುಮಾರನಿಗೆ ಏನು ಮಾಡಬೇಕು ತಿಳಿಯದಾಯಿತು. ದಿಗ್ಭ್ರಮೆಗೊಂಡಂತಾದ ಆ ಮಹಾಮತಿಯು ಏನೂ ತೋಚದೆ ಅಲ್ಲಿಂದ ಹೊರಟು ನೇರವಾಗಿ ಮಾವನಮನೆಗೆ ಬಂದನು. ಅವನನ್ನು ನೋಡಿ ಮಾವನಾದ ಸಿದ್ಧಪುರುಷನು '' ನೀನು ನಮ್ಮ ಮನೆಯಲ್ಲಿ ಬರಬೇಡ, ನಿನಗೆ ಬ್ರಹ್ಮಹತ್ಯಾ ಪಾಪವು ತಗಲಿದೆ. ನೀನು ಬೇಕಾದಲ್ಲಿಗೆ ಹೊರಟು ಹೋಗು '' ಎಂದು ಹೇಳಿದನು. ಮಾವನ ಮಾತನ್ನು ಕೇಳಿ ಮಹಾಮತಿಯು ಗಾಬರಿಯಿಂದ '' ನಾನು ಎಂದೂ ಯಾವ ಬ್ರಾಹ್ಮಣರನ್ನೂ ಕೊಂದಿಲ್ಲ ಅಥವಾ ಕೊಲ್ಲಿಸಿಲ್ಲ. ಅಂದ ಬಳಿಕ ಯಾವ ತಪ್ಪಿನಿಂದ ನನಗೆ ಈ ಬ್ರಹ್ಮಹತ್ಯಾಪಾಪವು ಹೇಗೆ ಬಂದಿದೆ ?'' ಎಂದು ಕೇಳಿದನು.

ಅಳಿಯನ ಮಾತನ್ನು ಕೇಳಿ ಆ ಸಿದ್ಧಪುರುಷನು '' ಮಗು, ನೀನು ನಿನ್ನ ತಂದೆಗೆ ಶೂದ್ರಾನ್ನದ ವಿಷಯವನ್ನು ತಿಳಿಸಿ ಅವನ ಕಾಲುಗಳಲ್ಲಿ ಆ ಪಾಪವು ಕುಳಿತಿದೆ ಎಂದು ಹೇಳಿಬಿಟ್ಟೆ. ಆದರಿಂದ ಅವನಿಗೆ ತನ್ನ ಕಾಲನ್ನೇ ಕಡಿದುಕೊಂಡು ಬಿಡಬೇಕೆಂದು ಪ್ರೇರಣೆಯಾಗಿ ಕಾಲು ಕಡಿದುಕೊಂಡು ಅವನು ಅದರ ಘಾಯದಿಂದ ಸತ್ತುಹೋದನು. ಹೀಗೆ ಮರಣಕ್ಕೆ ಪ್ರೇರಕ ನೀನೇ ಆದದ್ದರಿಂದ ನಿನಗೆ ಬ್ರಹ್ಮಹತ್ಯಾ ದೋಷವು ಬಂದಿದೆ. ಬ್ರಹ್ಮಹತ್ಯಾದೋಷವು ತಗಲಿದ ಮನುಷ್ಯರೊಡನೆ ಸಹವಾಸವು ಪಾಪಕರವಾಗಿದೆ. ಆದರಿಂದ ನೀನು ನನ್ನ ಮನೆಬಿಟ್ಟು ಹೋಗು. ಈ ನಿನ್ನ ಮಹಾಪಾತಕವು ಬೇಗ ಪರಿಹಾರ ವಾಗಬೇಕಿದ್ದರೆ ನೀನು ನೇರವಾಗಿ ಮಧುರಾ ಪಟ್ಟಣಕ್ಕೆ ಪ್ರಯಾಣಮಾಡು'' ಎಂದು ಹೇಳಿದನು.

ಮಾವನ ಈ ಮಾತನ್ನು ಕೇಳಿ ಮಹಾಮತಿಯು ಮಧುರಾಪಟ್ಟಣಕ್ಕೆ ಬಂದು ಬ್ರಾಹ್ಮಣ ಕೇರಿಯ ಹೊರಗೆ ವಾಸಮಾಡಿದನು. ಆಗ ಕುಶಿಕರಾಜನು ಮಧುರೆಯಲ್ಲಿ ಜ್ಞಾನ ಸತ್ರವನ್ನು ಪ್ರಾರಂಭಿಸಿ ಪ್ರತಿದಿನವೂ ಎರಡು ಸಾವಿರ ಬ್ರಾಹ್ಮಣರ ಭೋಜನಮಾಡಿಸುತ್ತಿದ್ದನು. ಪಿತೃಹತ್ಯಾ ಪಾಪವು ತಗಲಿದ ಈ ಮಹಾಮತಿಯು ಆ ಸತ್ರದಲ್ಲಿ ಬ್ರಾಹ್ಮಣರ ಎಂಜಲ ಎಲೆಯನ್ನು ಎತ್ತಿಹಾಕಿ ಚಕ್ರತೀರ್ಥದಲ್ಲಿ ಸ್ನಾನ

ಮಾಡುತ್ತಿದ್ದನು. ಅವನು ಆ ಸತ್ರದಲ್ಲಿ ಊಟವನ್ನು ಕೂಡ ಮಾಡುತ್ತಿದ್ದಿಲ್ಲ. ಹೀಗೆ ಒಂದು ವರ್ಷ ಮಧುರಾ ಪಟ್ಟಣದಲ್ಲಿ ಚಕ್ರತೀರ್ಥಸ್ನಾನ , ಬ್ರಾಹ್ಮಣರ ಸೇವೆ, ಶ್ರೀ ಹರಿಯ ಧ್ಯಾನದರ್ಶನಗಳಿಂದ ಅವನ ಬ್ರಹ್ಮಹತ್ಯಾ ದೋಷವು ಕಡಿಮೆ ಆಯಿತು. ಅವನ ನೆಲೆಬೆಲೆ ಸೇವಾ ಸೌಹಾರ್ದ್ಯಗಳನ್ನು ಕಂಡು ಸಂಪ್ರೀತರಾದ ದ್ವಿಜರು ಅವನನ್ನು ಕರೆದು '' ವಿಪ್ರೋತ್ತಮಾ, ನೀನು ಈ ಚಕ್ರತೀರ್ಥದ ಪ್ರಭಾವದಿಂದ ಮತ್ತೂ ಬ್ರಾಹ್ಮಣ ಸೇವೆಯಿಂದ ಪಾಪಮುಕ್ತನಾಗಿರುವೆ '' ಎಂದು ಹೇಳಿದರು. ಬ್ರಾಹ್ಮಣರ ಈ ಮಾತನ್ನು ಕೇಳಿ ಸಂತುಷ್ಟನಾಗಿ ಅವನು ಎಂದಿನಂತೆ ತನ್ನ ಕಾರ್ಯವನ್ನು ಮುಗಿಸಿಕೊಂಡು ಸ್ನಾನಕ್ಕಾಗಿ ಚಕ್ರತೀರ್ಥಕ್ಕೆ ಬಂದನು. ಇತ್ತ ಆ ಸಿದ್ಧಪುರುಷನು ದಿವ್ಯ ದೃಷ್ಟಿಯಿಂದ ಅಳಿಯನ ಪಾಪವೆಲ್ಲವೂ ಪರಿಹಾರವಾದದ್ದನ್ನು ತಿಳಿದು ಅವನ ಬಳಿಗೆ ತನ್ನ ಮಗಳನ್ನು ಕಳುಹಿಸಿಕೊಟ್ಟನು. ಅವಳು ವಿವಿಧ ಭಕ್ಷ್ಯಭೋಜ್ಯಗಳನ್ನು ಮಾಡಿಕೊಂಡು ಚಕ್ರತೀರ್ಥದಲ್ಲಿ ಸ್ನಾನಾನ್ಹಿಕಗಳನ್ನು ಮುಗಿಸಿ ನಿಂತ ತನ್ನ ಪತಿಯ ಪಾದಗಳಿಗೆ ನಮಸ್ಕರಿಸಿ ''ನಾಥ, ನಿಮ್ಮ ಬ್ರಹ್ಮಹತ್ಯಾ ದೋಷವು ಬಿಟ್ಟುಹೋಗಿದೆ. ನಾನು ಅಡಿಗೆಮಾಡಿ ತಂದಿದ್ದೇನೆ. ಊಟಕ್ಕೆ ಕೂಡಬನ್ನಿರಿ. ನಾನು ನಿಮಗೆ ಬಡಿಸುತ್ತೇನೆ '' ಎಂದು ಪ್ರೀತಿಯಿಂದ ಹೇಳಿದಳು. ಆಗ ಮಹಾಮತಿಯು ತನ್ನ ಮಡದಿಯು ಮಾಡಿ ತಂದ ಅಡಿಗೆಯನ್ನೆಲ್ಲ ಅಲ್ಲಿಯ ಭದ್ರೇಶ್ವರ ದೇವನಿಗೆ ಸಮರ್ಪಿಸಿ ಅನಂತರ ತಾವಿಬ್ಬರೂ ಊಟಮಾಡಿದರು. ಹೀಗೆ ಕೆಲವುದಿನ ಆ ಮಧುರಾ ಕ್ಷೇತ್ರದಲ್ಲಿ ಸ್ನಾನ ಸೇವಾದಿಗಳನ್ನು ಮಾಡಿ ತನ್ನ ಭಾರ್ಯೆಯೊಡನೆ ಕಲ್ಪಗ್ರಾಮಕ್ಕೆ ಮರಳಿಬಂದನು. ಯಾತ್ರಿಕರು ಕಲ್ಪಗ್ರಾಮಕ್ಕಿಂತ ನೂರು ಪಟ್ಟು ಹೆಚ್ಚು ಪುಣ್ಯ ಪವಿತ್ರ ಪ್ರಭಾವ ಉಳ್ಳ ಚಕ್ರತೀರ್ಥದಲ್ಲಿ ಸ್ನಾನಮಾಡಿ ಭದ್ರೇಶ್ವರನ ದರ್ಶನ ಮಧುರಾನಾಥನ ಧ್ಯಾನಗಳನ್ನು ಮಾಡಿದರೆ ಬ್ರಹ್ಮಹತ್ಯಾದಿ ದೋಷಗಳೂ ಕೂಡ ಪರಿಹಾರವಾಗುತ್ತವೆ.

## ಕಪಿಲ ವರಾಹ ಮಹಿಮೆ

**ವರಾಹ** :- ಪೃಥ್ವಿದೇವಿ, ವೈಕುಂಠ ತೀರ್ಥದಲ್ಲಿ ಹಿಂದೆ ನಡೆದ ಸಂಗತಿಯೊಂದನ್ನು ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ಮಿಥಿಲಾಪತಿಯಾದ ಜನಕ ಮಹಾರಾಜನು ತನ್ನ ಪರಿವಾರದೊಂದಿಗೆ ತೀರ್ಥಯಾತ್ರೆಗೆ ಹೊರಟು ಸೌಕರ ಕ್ಷೇತ್ರಕ್ಕೆ ಹೋಗಿ ಮಧುರಾಪುರಿಗೆ ಬಂದರು. ಅವರೆಲ್ಲರೂ ವೈಕುಂಠ ತೀರ್ಥಕ್ಕೆ ಬಂದು ಸ್ನಾನಮಾಡಿದಾಗ ಒಂದು ಚಮತ್ಕಾರವು ಕಂಡಿತು. ಮಿಥಿಲೆಯಿಂದ ಬಂದ ಯಾತ್ರಿಕರಲ್ಲಿ ಬ್ರಹ್ಮಹತ್ಯಾ ಪಾಪವನ್ನು ಮಾಡಿದ ಒಬ್ಬ ಮಹಾಪಾತಕಿಯು ಇದ್ದನು. ಅವನು ಜನಕರಾಜನ ಜೊತೆಗೆ ಬಂದ ಯಾತ್ರಿಕರ ತಂಡದಲ್ಲಿ ಸೇರ್ಪಡೆಯಾಗಿದ್ದನು. ಬ್ರಾಹ್ಮಣನನ್ನು ಕೊಂದ ಅವನ ಕೈಯಿಂದ ಯಾವಾಗಲೂ ರಕ್ತವು ಧಾರಾಕಾರವಾಗಿ ಸೋರುತ್ತಿತ್ತು. ಅವನು ಎಷ್ಟೋ ವೈದ್ಯರಿಗೆ ತೋರಿಸಿ ಉಪಚಾರ ಮಾಡಿದರೂ ಅವನ ಹಸ್ತದಿಂದ ಹರಿಯುವ ರಕ್ತಧಾರೆಯು ನಿಂತಿರಲಿಲ್ಲ. ಜನಕರಾಜನ ಯಾತ್ರಾ ಗುಂಪಿನಲ್ಲಿ ಸೇರಿ ಎಷ್ಟೆಷ್ಟೋ ತೀರ್ಥಕ್ಷೇತ್ರಗಳ ಯಾತ್ರೆಯನ್ನು ಮಾಡಿ ಬಂದಿದ್ದರೂ ಅವನ ಹಸ್ತದಿಂದ ನೆತ್ತರ ಬಸಿಯುವದು ಕಡಿಮೆಯಾಗಿರಲಿಲ್ಲ.

ಆದರೆ ಇಂದು ಮಾತ್ರ ಈ ಮಧುರಾ ಮಂಡಲದ ವೈಕುಂಠ ತೀರ್ಥದಲ್ಲಿ ಸ್ನಾನ ಮಾಡಿದ ಕೂಡಲೇ ಅವನ ಕೈಯಿಂದ ರಕ್ತತೊಟಕಿಕ್ಕುವದು ತಟ್ಟನೇ ನಿಂತುಹೋಯಿತು. ಜನರಿಗೆಲ್ಲ ಅತ್ಯಂತ ಆಶ್ಚರ್ಯವಾಯಿತು. ಇದು ಹೇಗೆ ಎಂದು ಅವರು ಜಿಜ್ಞಾಸೆಯಿಂದ ಒಬ್ಬರನ್ನೊಬ್ಬರು ಪ್ರಶ್ನಿಸಿದರು. ಆಗ ಭಗವಂತನೇ ಅಲ್ಲಿಗೆ ಬ್ರಾಹ್ಮಣರೂಪದಿಂದ ಬಂದು "ಇದಕ್ಕೇಕೆ ಇಷ್ಟು ಅಚ್ಚರಿಪಡುವಿರಿ? ಈ ವೈಕುಂಠ ತೀರ್ಥದ ಮಹಿಮೆಯು ಅಸಾಧಾರಣವಾಗಿದೆ. ಈ ಪಾಪಿಯು ಈ ತೀರ್ಥದಲ್ಲಿ ಮುಳುಗು ಹಾಕಿದ ಕೂಡಲೇ ಅವನ ಬ್ರಹ್ಮಹತ್ಯಾದೋಷವು ಪರಿಹಾರವಾಯಿತು. ಅದರಿಂದಲೇ ಅವನ ಈ ರಕ್ತಾಭಿಸರಣವೂ ಇಲ್ಲದಂತಾಯಿತು" ಎಂದು ಹೇಳಿ ಕಣ್ಮರೆಯಾದನು. ಈ ವೈಕುಂಠ ತೀರ್ಥದಲ್ಲಿ ಸ್ನಾನ ಮಾಡುವವರ ಸರ್ವ ಪಾಪ ಪರಿಹಾರವಾಗುವದು. ಈ ಮಧುರಾಮಂಡಲದಲ್ಲಿರುವ 'ಗಂಧರ್ವಕುಂಡ'ದಲ್ಲಿ ಸ್ನಾನ ಮಾಡಿ ಗೋವರ್ಧನ ಗಿರಿಯಲ್ಲಿರುವ ಶ್ರೀ ಕೃಷ್ಣನನ್ನು ಸಂದರ್ಶಿಸಿ ಈ ಕ್ಷೇತ್ರದ ದಕ್ಷಿಣ ದಿಕ್ಕಿನಲ್ಲಿರುವ ಕೇಶವ ಮೂರ್ತಿಯಂತೆ ಆಕಾರವುಳ್ಳ ನನ್ನ ವರಾಹ ಪ್ರತಿಮೆಯನ್ನು ನೋಡಿ ಧ್ಯಾನ ಮಾಡುವವರು ಬ್ರಹ್ಮಲೋಕವನ್ನು ಹೊಂದುತ್ತಾರೆ. ಶ್ರೀ ರಾಮನ ಸಹೋದರನಾದ ಶತ್ರುಘ್ನನು ಮಧುರೆಗೆ ಹೋಗಿ ಲವಣಾಸುರನನ್ನು ಸಂಹಾರ ಮಾಡಿದ ನಂತರ ಈ ನನ್ನ ವರಾಹ ವಿಗ್ರಹವನ್ನು ಅಲ್ಲಿ ಪ್ರತಿಷ್ಠಾಪಿಸಿದನು.

ಕೃತಯುಗದಲ್ಲಿ ಮಾಂಧಾತಮಹಾರಾಜನು ಮಾಡಿದ ತಪಸ್ಸಿನಿಂದ ಸಂತುಷ್ಟನಾದ ನಾನು ಅವನಿಗೆ ನನ್ನ ಈ ಪ್ರತಿಮೆಯನ್ನು ಕೊಟ್ಟಿದ್ದೆನು. ಮುಂದೆ ಅದೇ ಪ್ರತಿಮೆಯನ್ನು ಕಪಿಲ ಋಷಿಯು ತಾನು ಬಹುಕಾಲ ಪರ್ಯಂತರ ಪೂಜಿಸಿ ಬಳಿಕ ತನ್ನನ್ನು ಅರ್ಚಿಸಿದ ದೇವೇಂದ್ರನಿಗೆ ಕೊಟ್ಟನು. ಇಂದ್ರನು ಅಮರಾವತಿಯಲ್ಲಿ ಅತ್ಯಂತ ಸಂತೋಷದಿಂದ ಆ ವರಾಹ ಮೂರ್ತಿಯನ್ನು ಪೂಜಿಸಿ ಅದರಿಂದ ದಿವ್ಯಜ್ಞಾನವನ್ನು ಪಡೆದನು. ಮುಂದೆ ರಾವಣನು ಬ್ರಹ್ಮದೇವರ ವರದಿಂದ ಬಲಿಷ್ಠನಾಗಿ ಸ್ವರ್ಗಕ್ಕೆ ದಾಳಿ ಇಟ್ಟು ಅಮರಾವತಿಯ ದೇವತೆಗಳನ್ನೆಲ್ಲ ಹೊಡೆದೋಡಿಸಿ ತನ್ನ ಸ್ವಾಧೀನ ಪಡಿಸಿಕೊಂಡನು. ದೇವೇಂದ್ರನನ್ನು ಬಂಧಿಸಿ ಅವನ ಅರಮನೆಯನ್ನು ಸೂರೆಗೊಳ್ಳ ಬೇಕೆಂದು ಹೊರಟ ಆ ರಾವಣನ ಕಣ್ಣಿಗೆ ಅಲ್ಲಿಯೇ ರತ್ನ ಪೀಠದಲ್ಲಿ ಮಂಡಿಸಿದ ವರಾಹ ಮೂರ್ತಿಯು ಗೋಚರಿಸಿತು. ಆ ಮೂರ್ತಿಯ ಲಕ್ಷಣ ಹಾಗೂ ವಿಲಕ್ಷಣವಾದ ಕಳೆ ಕಾಂತಿ ವರ್ಚಸ್ಸುಗಳನ್ನು ಕಂಡು ರಾವಣನು ಮುಗ್ಧನಾಗಿ ಪ್ರಣಮಿಸಿ ಕೈ ಜೋಡಿಸಿ ಪ್ರಾರ್ಥಿಸಿದನು.-

"ದೇವಾ, ನಿನಗೆ ನಮಸ್ಕಾರ, ಭೂಮಿಯನ್ನು ಹೊತ್ತವನೇ ನಿನಗೆ ವಂದನೆ. ವೇದ ಗರ್ಭನೇ, ನಿನ್ನ ಅಡಿದಾವರೆಗೆ ನಮೋನಮಃ ॥ ಹೀಗೆ ಸ್ತೋತ್ರ ಮಾಡಿ ರಾವಣನು ಆ ಮೂರ್ತಿಯನ್ನು ಲಂಕೆಗೆ ಒಯ್ಯಬೇಕೆಂದು ಎತ್ತಹೋದನು. ಆದರೆ ಅದು ಸ್ಥಳ ಬಿಟ್ಟು ಕದಲಲಿಲ್ಲ. ಎಷ್ಟು ಕಿತ್ತಾಡಿ ಎತ್ತಾಡಿದರೂ ತನ್ನ ಪೀಠವನ್ನು ಬಿಟ್ಟು ಆಚೀಚೆ ಅಲೆದಾಡದ ಆ ಭಗವಂತನ ಚಿಕ್ಕದಾದ ಮೂರುತಿಯನ್ನು ನೋಡಿ ಕೌತುಕ ಒಡೆದ ರಾವಣನು ನುಡಿದನು. "ದೇವಾ, ಶಿವಪಾರ್ವತೀ ಸಹಿತವಾದ ಕೈಲಾಸ ಪರ್ವತವನ್ನೇ ಎತ್ತಿ ತೂಗಿದ ನನಗೆ ಈ ಪುಟ್ಟ ಮೂರುತಿಯಾದ ನಿನ್ನನ್ನು ಎತ್ತಲು ಶಕ್ತಿ ಸಾಲದಾಗಿದೆ. ದೇವಾ,

ಪ್ರಸನ್ನನಾಗು. ನನ್ನ ಜೊತೆಗೆ ಲಂಕಾಪಟ್ಟಣಕ್ಕೆ ದಯಮಾಡಿಸು'' ಎಂದು ಬಗೆಬಗೆಯಿಂದ ಮತ್ತೆ ಮತ್ತೆ ಭಕ್ತಿಯಿಂದ ಪ್ರಾರ್ಥಿಸಿದನು.- ''ದೇವ, ದೇವೇಶ, ಪ್ರಸನ್ನನಾಗು. ದೇವರಕ್ಷಕ ನಿನಗೆ ನಮಸ್ಕಾರ. ನಾನು ನಿನ್ನನ್ನು ಅತ್ಯುತ್ತಮವಾದ ಲಂಕಾಪುರಕ್ಕೆ ಎತ್ತಿಕೊಂಡು ಹೋಗಲು ಇಚ್ಛಿಸುತ್ತೇನೆ''ಎಂದನು.

**ಶ್ರೀ ವರಾಹ :-**''ನೀನು ರಾಕ್ಷಸ, ಅವೈಷ್ಣವನಾಗಿದ್ದೀಯೆ. ನಿನಗೆ ಇಂತಹ ಭಕ್ತಿ ಎಲ್ಲಿ ಬಂದಿತು ?'' ಕಪಿಲ ವರಾಹನ ಮಾತನ್ನು ಕೇಳಿ, ರಾವಣನು ಈ ಮಾತನ್ನು ಹೇಳಿದನು.- ''ಮಹಾತ್ಮನೇ, ನಿನ್ನ ದರ್ಶನದಿಂದ ನನಗೆ ನಿನ್ನಲ್ಲಿ ನಿಶ್ಚಲವಾದ ಭಕ್ತಿಯುಂಟಾಯಿತು. ದೇವ-ದೇವ, ನಿನ್ನನ್ನು ಎತ್ತಿಕೊಂಡು ಹೋಗುತ್ತೇನೆ. ನಿನಗೆ ನಮಸ್ಕಾರ.'' ಅತಿ ಭಕ್ತಿಯುಳ್ಳವನಾದ ಆ ರಾವಣನಿಗೆ ದೇವನು ಆಗ ಲಘುವಾದ ವೇಷವುಳ್ಳವನಾದನು. ಅವನು ಮೂರು ಲೋಕಗಳಲ್ಲೂ ಪ್ರಸಿದ್ಧನಾದ ಆ ವರಾಹ ದೇವನನ್ನು ಪುಷ್ಪಕ ವಿಮಾನದಲ್ಲಿ ಏರಿಸಿಕೊಂಡು, ಲಂಕೆಗೆ ಬಂದು, ತನ್ನ ಮನೆಯಲ್ಲಿ ಸ್ಥಾಪಿಸಿದನು. ಆಗ ನಾನು ಲಂಕೆಯಲ್ಲಿ ರಾವಣನಿಂದ ಪೂಜಿತನಾಗಿ ನಿಂತೆನು. ಆಯೋಧ್ಯಾದಿಪತಿಯಾದ ಶ್ರೀರಾಮನು ಆ ರಾಕ್ಷಸೋತ್ತಮನನ್ನು ಕೊಲ್ಲುವದಕ್ಕಾಗಿ ಲಂಕೆಗೆ ಹೋಗಿ, ಪರಾಕ್ರಮದಿಂದಲೇ ಅವನನ್ನು ಕೊಂದನು. ರಾಮನು ವಿಭೀಷಣನಿಗೆ, ಲಂಕಾರಾಜ್ಯದಲ್ಲಿ ಅಭಿಷೇಕವನ್ನು ಮಾಡಿದನು. ವಿಭೀಷಣನು ರಾಮನಿಗೆ ಸರ್ವಸ್ವವನ್ನು ಒಪ್ಪಿಸಿದನು. ಆಗ ರಾಮನು ನುಡಿದನು -

''ರಾಕ್ಷಸೇಶ್ವರನಾದ ವಿಭೀಷಣಾ, ನಿನ್ನ ಈ ಸರ್ವಸ್ವದಿಂದ ನನಗೇನೂ ಕಾರ್ಯವಿಲ್ಲ. ಆದರೆ ಇಂದ್ರಲೋಕದಿಂದ ಬಂದಿರುವ ಆ ವರಾಹದೇವನನ್ನು ನನಗೆ ಕೊಡು. ರಾಕ್ಷಸ, ನೀನು ಬಿಜಮಾಡಿಸಿಕೊಡುವ ವರಾಹ ರೂಪಿಯಾದ ದೇವನನ್ನು ಅಯೋಧ್ಯೆಗೆ ಕರೆದುಕೊಂಡು ಹೋಗಿ, ನಾನು ಪ್ರತಿದಿನವೂ ಪೂಜಿಸುತ್ತೇನೆ. ಬಳಿಕ ವಿಭೀಷಣನು ದಿವ್ಯರೂಪದ ಕಪಿಲ ವರಾಹ ಮೂರ್ತಿಯನ್ನು ಶ್ರೀ ರಾಮನಿಗೆ ಸಮರ್ಪಿಸಿದನು. ಆತನು ಪುಷ್ಪಕ ವಿಮಾನದಲ್ಲಿ ಅಯೋಧ್ಯೆಗೆ ಬಿಜ ಮಾಡಿಸಿಕೊಂಡು ಹೋದನು. ಆಗ ಅಯೋಧ್ಯಾನಗರದಲ್ಲಿ ಆ ದೇವನನ್ನು ಸ್ಥಾಪಿಸಿ, ರಾಮನು ಪೂಜಿಸುತ್ತಿದ್ದನು. ಬಳಿಕ ಒಂದು ಸಾವಿರದ ಹತ್ತು ವರ್ಷಗಳು ಕಳೆದವು. ಆಗ ಶ್ರೀರಾಮನು ಲವಣಾಸುರನ ವಧೆಗಾಗಿ ತಮ್ಮನಾದ ಶತ್ರುಘ್ನನ್ನು ಕಳುಹಿಸಿದನು. ಆತನು ಮಹಾತ್ಮನಾದ ರಾಮನಿಗೆ ಪ್ರಣಾಮಮಾಡಿ ಚತುರಂಗ ಸೈನ್ಯದೊಡನೆ ಮಧುರೆಗೆ ಹೊರಟು ಹೋದನು. ಶತ್ರುಘ್ನನು ಅಲ್ಲಿ ರೌದ್ರರೂಪನಾದ ಲವಣಾಸುರನನ್ನು ಕೊಂದು, ಮಧುರಾ ಪುರಿಯನ್ನು ಹೊಕ್ಕು ಮಹಾಜನರೂ, ವೇದವೇದಾಂಗ ಪಾರಂಗತರೂ ಋಷಿ ಸಮಾನರೂ ಆದ ಇಪ್ಪತ್ತಾರು ಸಾವಿರ ಜನ ಬ್ರಾಹ್ಮಣರನ್ನು ಅಲ್ಲಿ ನೆಲೆಗೊಳಿಸಿದನು.

ಮಧುರೆಯಲ್ಲಿ ಮೊದಲು ವೇದಹೀನನಾದವರಿದ್ದೆಡೆಯಲ್ಲೆಲ್ಲ ಈಗ ಚತುರ್ವೇದ ಪಾರಂಗತರಾದ ಬ್ರಾಹ್ಮಣರಾದರು. ಅಲ್ಲಿಯ ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸಿದರೆ ಕೋಟಿ ಸಂಖ್ಯೆಯ ಬ್ರಾಹ್ಮಣರಿಗೆ ಭೋಜನ ಮಾಡಿಸಿದಂತಾಗುವದು. ವಸುಂಧರೇ, ಲವಣಾಸುರನ ವೃತ್ತಾಂತವನ್ನು ಇದ್ದಂತೆ ನಿನಗೆ ಹೇಳಿದೆನು.

ಲವಣಾಸುರನ ವಧೆಯಾದುದನ್ನು ಕೇಳಿ, ರಾಮನು '' ಶತ್ರುಘ್ನ, ನಿನ್ನ ಮನಸ್ಸಿಗೆ ಬೇಕಾದ ವರವನ್ನು ಕೇಳು. ಕೊಡುತ್ತೇನೆ '' ಎಂದು ಹೇಳಿದನು. ರಾಘವನ ಆ ಮಾತನ್ನು ಕೇಳಿ, ಶತ್ರುಘ್ನನು, '' ದೇವ, ನೀನು ನನ್ನಲ್ಲಿ ಸಂತುಷ್ಟನಾಗಿ ವರವನ್ನು ಕೊಡುವವನಾಗಿದ್ದು, ನಾನು ವರಕ್ಕೆ ಅರ್ಹನಾಗಿರುವೆನಾದರೆ, ನನಗೆ ಈ ವರಾಹದೇವನನ್ನು ಅನುಗ್ರಹಿಸು. ''

ರಾಮನು ಶತ್ರುಘ್ನನ ಆ ಮಾತನ್ನು ಕೇಳಿ, ಹೀಗೆ ಹೇಳಿದನು. ''ಶತ್ರುಘ್ನ, ವರಾಹ ರೂಪಿಯಾದ ದಿವ್ಯ ದೇವನನ್ನು ಬಿಜ ಮಾಡಿಸಿಕೊಂಡು ಹೋಗು. ಧನ್ಯವಾದ ಆ ಮಧುರಾಮಂಡಲವೂ, ಧನ್ಯವಾದ ಆ ಮಧುರಾಪುರಿಯೂ, ಸುಕೃತಿಗಳಾದ ಆ ಮಧುರೆಯ ಜನರೂ ಯಾವಾಗಲೂ ಕಪಿಲ ವರಾಹ ಮೂರ್ತಿಯನ್ನು ಸಂದರ್ಶಿಸುವರು. ಶತ್ರುಘ್ನನೇ, ಪ್ರತಿದಿನವೂ ದೇವನ ದರ್ಶನದಿಂದಲೂ ಸ್ಪರ್ಶನದಿಂದಲೂ, ಧ್ಯಾನದಿಂದಲೂ ಮನುಷ್ಯನ ಸರ್ವ ಪಾಪವೂ ಹೊರಟು ಹೋಗುವದು. ಯಾರು ಪ್ರತಿದಿನವೂ ಈ ದೇವನನ್ನು ಪೂಜಿಸುವರೋ, ಸಂದರ್ಶಿಸುವರೋ, ಅಭಿಷೇಕ ಮಾಡುವರೋ, ಅವರ ಪಾಪವನ್ನು ಅವನು ಪರಿಹರಿಸುವುದಲ್ಲದೆ ಅವರಿಗೆ ಮೋಕ್ಷವನ್ನು ಅನುಗ್ರಹಿಸುವನು.''

ವಸುಂಧರೆ, ರಾಮನು ಹೀಗೆ ಹೇಳಿ, ವರಾಹದೇವನನ್ನು ಶತ್ರುಘ್ನನಿಗೆ ಅನುಗ್ರಹಿಸಿದನು. ಶತ್ರುಘ್ನನು ದೇವನನ್ನು ಬಿಜಯ ಮಾಡಿಸಿಕೊಂಡು ಮಧುರಾಪುರಕ್ಕೆ ಹೋದನು. ಬಂದು ಅಲ್ಲಿ ನಗರ ಮಧ್ಯದಲ್ಲಿ, ವರಾಹಮೂರ್ತಿಯಾದ ನನ್ನನ್ನು ಸ್ಥಾಪಿಸಿ, ನನ್ನ ಸನ್ನಿಧಿಯಲ್ಲಿ ಬ್ರಾಹ್ಮಣನನ್ನು ಇಟ್ಟು ಶತ್ರುಘ್ನನು ಪೂಜಿಸಿದನು. ಈ ಕ್ರಮದಲ್ಲಿ ವರಾಹ ಪ್ರಭುವು ಮಧುರೆಯಲ್ಲಿ ನೆಲೆಸಿದನು. ಗಯೆಯಲ್ಲಿ, ಜ್ಯೇಷ್ಠ ಪುಷ್ಕರದಲ್ಲಿ, ಫಲ್ಗು ತೀರ್ಥದಲ್ಲಿ ಪಿಂಡ ಪ್ರದಾನ ಮಾಡುವುದರಿಂದ ಮನುಷ್ಯನು ಪಡೆಯುವ ಫಲವನ್ನು ಈ ಶ್ವೇತ ವರಾಹ ಮೂರ್ತಿಯ ಸಂದರ್ಶನದಿಂದ ಯಾವಾಗಲೂ ಪಡೆಯುವನು. ವಿಶ್ರಾಂತಿ ಕ್ಷೇತ್ರದೇವನ, ಗೋವಿಂದನ ಹರಿಯ, ಕೇಶವನ ಮತ್ತು ದೀರ್ಘ ವಿಷ್ಣುವಿನ ಸಂದರ್ಶನದಿಂದಲೂ ಈ ಶ್ವೇತ ವರಾಹದೇವ ದರ್ಶನದ ಫಲವನ್ನೇ ಪಡೆಯುವನು. ದೇವಿ, ಪ್ರಾತಃಕಾಲದಲ್ಲಿ ಯಾವಾಗಲೂ ನನ್ನ ತೇಜಸ್ಸು ವಿಶ್ರಾಂತಿ ಕ್ಷೇತ್ರದಲ್ಲಿಯೂ, ಮಧ್ಯಾಹ್ನದಲ್ಲಿ ದೀರ್ಘ ವಿಷ್ಣುವಿನಲ್ಲಿಯೂ ಇರುವದು. ಕೇಶವನಲ್ಲಿ ನನ್ನ ತೇಜಸ್ಸು ಹಗಲಿನ ನಾಲ್ಕನೆಯ ಜಾವ(ಭಾಗ)ದಲ್ಲಿ ಇರುವದು. ದೇವೀ, ಪೂರ್ವದಲ್ಲಿ ಈ ವಿದ್ಯೆಯು ಯಾವಾಗಲೂ ಬಹು ರಹಸ್ಯವಾಗಿದ್ದಿತು. ವಸುಂಧರೇ ನೀನು ನನ್ನ ಭಕ್ತಳೂ, ಶಿಷ್ಯಳೂ, ಆದುದರಿಂದ ನಿನಗೆ ಇದನ್ನು ಹೇಳಿದುದಾಯಿತು.

**ಶ್ರೀವರಾಹ :-** ಮಧುರಾಕ್ಷೇತ್ರದ ಪಶ್ಚಿಮದಲ್ಲಿ 'ಗೋವರ್ಧವ ಕ್ಷೇತ್ರ'ವು ಇರುತ್ತದೆ. ಅದರ ಪೂರ್ವದ ಅಂಚಿನಲ್ಲಿ 'ಇಂದ್ರತೀರ್ಥ', ದಕ್ಷಿಣದಲ್ಲಿ 'ಯಮತೀರ್ಥ', ಪಶ್ಚಿಮದಲ್ಲಿ 'ವರುಣತೀರ್ಥ', ಉತ್ತರದಲ್ಲಿ 'ಕುಬೇರತೀರ್ಥ' ಗಳಿದ್ದು ಅವುಗಳಲ್ಲಿ ಸ್ನಾನಮಾಡಿದವರು ಉದ್ಧಾರ ಹೊಂದುವರು. ಸೋಮವಾರದಿಂದ ಕೂಡಿವಿ ಅಮಾವಾಸ್ಯೆಯಂದು ಗೋವರ್ಧನಗಿರಿಯಲ್ಲಿ ಶ್ರಾದ್ಧ ಮಾಡಿದರೆ ರಾಜಸೂಯ ಯಾಗ ಮಾಡಿದ ಪುಣ್ಯ ಬರುವದು.

ಗೋವರ್ಧನ ಬೆಟ್ಟದ ಶಿಖರವಾದ ಅನ್ನಕೂಟದ ಪ್ರದಕ್ಷಿಣೆಮಾಡಿ ಅದರ ಬಳಿಯಲ್ಲಿಯೇ ಇರುವ ಇಂದ್ರತೀರ್ಥದಲ್ಲಿ ಸ್ನಾನಮಾಡಬೇಕು. ಕೃಷ್ಣನು ಇಂದ್ರಪೂಜೆಯನ್ನು ತಪ್ಪಿಸಿ ಗೋಪಾಲಕರಿಂದ ಗಿರಿಪೂಜೆಯನ್ನು ಮಾಡಿಸಿದ್ದರಿಂದ ಇಂದ್ರನಿಗೆ ಬಹಳ ಕೋಪ ಬಂದು ಭಯಂಕರ ಮಳೆಯನ್ನು ಸುರಿಸಿ ಜಲಪ್ರಲಯವನ್ನೆ ಉಂಟುಮಾಡತೊಡಗಲು ಕೃಷ್ಣನು ಈ ಗೋವರ್ಧನಗಿರಿಯನ್ನು ಕೈಯಿಂದ ಎತ್ತಿ ಎಲ್ಲ ಗೋ ಗೋಪಾಲಕರನ್ನು ರಕ್ಷಿಸಿದನು. ಆ ಬೆಟ್ಟದಲ್ಲಿರುವ ತೀರ್ಥಗಳಲ್ಲಿ ಸ್ನಾನ ತರ್ಪಣಾದಿಗಳನ್ನು ಮಾಡುವದರಿಂದ ನೂರು ಯಜ್ಞಗಳನ್ನು ಮಾಡಿದ ಫಲವು ಪ್ರಾಪ್ತವಾಗುವದು.

ಅಲ್ಲಿರುವ 'ಕದಂಬಕುಂಡ', 'ದೇವಗಿರಿ', 'ಮಹಾದೇವ ಕುಂಡ' ಮುಂತಾದ ತೀರ್ಥಗಳಲ್ಲಿ ಸ್ನಾನ ಮಾಡುವದರಿಂದ ಮಾನವರಿಗೆ ಸದ್ಗತಿಯಾಗುವದು. ಶ್ರೀ ಕೃಷ್ಣನು ಎತ್ತಿನ ರೂಪದಿಂದ ಯುದ್ಧ ಮಾಡಬಂದ ಅರಿಷ್ಟಾಸುರನನ್ನು ಕೊಂದು ಮೈತೊಳೆದುಕೊಂಡ 'ವೃಷಭತೀರ್ಥ' ಮತ್ತು 'ರಾಧಾಕುಂಡ', 'ಮೋಕ್ಷರಾಜ ತೀರ್ಥ', 'ಇಂದ್ರ ಧ್ವಜ ತೀರ್ಥ', 'ಪಂಚತೀರ್ಥ', ಮುಂತಾದವುಗಳಲ್ಲಿ ಹಬ್ಬ ಹರಿದಿನಗಳಲ್ಲಿ ಸ್ನಾನ ಮಾಡುವವರೂ ಪಿತೃಗಳನ್ನು ಉದ್ದೇಶಿಸಿ ತರ್ಪಣ ಪಿಂಡ ಪ್ರದಾನ ಮಾಡುವವರೂ ಉದ್ಧೃತರಾಗಿ ಗಂಗಾಸ್ನಾನ ಮಾಡಿದ ಪುಣ್ಯವನ್ನು ಪಡೆಯುವರು.

*ವರಾಹ ಪುರಾಣದ ನೂರಇಪ್ಪತ್ತನೇ ಅಧ್ಯಾಯ ಮುಗಿದಿದೆ.*



**ಶ್ರೀ ವರಾಹ :-** ವಸುಂಧರೆ, ಭಾರತದ ದಕ್ಷಿಣದಲ್ಲಿರುವ ಪ್ರತಿಷ್ಠಾನ (ಪೈಠಣ) ಕ್ಷೇತ್ರದಲ್ಲಿ ನಡೆದ ಮಹಿಮೆಯನ್ನು ಹೇಳುತ್ತೇನೆ ಕೇಳು. ಆ ಪ್ರತಿಷ್ಠಾನದಲ್ಲಿ ಸುಶೀಲ ಎಂಬ ಕಡು ಲೋಭಿಯಾದ ವೈಶ್ಯನಿದ್ದನು. ಮಹಾಪಾಪಿಯಾದ ಅವನು ಎಂದೂ ದಾನ ಧರ್ಮ ಮಾಡಲಿಲ್ಲ. ದೇವರನ್ನು ವಂದಿಸಲಿಲ್ಲ. ದೊಡ್ಡವರಿಗೆ ಮಣಿಯಲಿಲ್ಲ. ಪುಣ್ಯಕಾರ್ಯಗಳನ್ನು ಮಾಡಲಿಲ್ಲ. ಕೇವಲ ವ್ಯಾಪಾರ ಉದ್ಯೋಗಗಳಿಂದ ಧನವನ್ನು ಗಳಿಸಿ ಕುಟುಂಬ ಪೋಷಣೆಯಲ್ಲಿಯೇ ಕಾಲ ಕಳೆದನು. ಅದರಿಂದ ಅವನು ಮರಣ ಹೊಂದಿ ಪಿಶಾಚನಾಗಿ ನೀರು ನೆರಳಿಲ್ಲದ ಮರುಪ್ರದೇಶದಲ್ಲಿ ಅಲೆದಾಡತೊಡಗಿನು. ಒಂದು ದಿನ ಅವನಿದ್ದ ಆ ಮರುಪ್ರದೇಶಕ್ಕೆ ವರ್ತಕರ ಗುಂಪೊಂದು ಬಂದಿತು. ಆ ಗುಂಪಿನಲ್ಲಿರುವ ಒಬ್ಬ ವ್ಯಾಪಾರಿಯನ್ನು ಅಲ್ಲಿಯೇ ಒಂದು ಗಿಡದಲ್ಲಿದ್ದ ಈ ಪಿಶಾಚವು ಹಿಡಿದುಕೊಳ್ಳ ಹೋಯಿತು. ಆದನ್ನು ನೋಡಿ ಆ ವೈಶ್ಯನು ಗಾಬರಿಯಾಗಿ ನಡುಗಿ ಆ ಪಿಶಾಚಿಗೆ ದೀನನಾಗಿ ಕೇಳಿಕೊಂಡನು. ''ಮಹನೀಯನೇ, ನನ್ನನ್ನು ದಯಮಾಡಿ ಕೊಲ್ಲಬೇಡ. ನೀನು ನನ್ನನ್ನು ಕೊಂದು ತಿಂದರೆ ವೃದ್ಧರಾದ ನನ್ನ ತಾಯಿತಂದೆಗಳು ನಿರಾಶ್ರಿತರಾಗುವರು. ಪತಿವ್ರತೆಯಾದ ನನ್ನ ಪತ್ನಿಯು ಪರದೇಶಿಯಾಗುವಳು. ನೀನು ನನ್ನನ್ನು ಘಾತಮಾಡಿ ನನ್ನ ರಕ್ತ ಹೀರಿದರೆ ನಮ್ಮ ಕುಟುಂಬವೇ ನಾಶವಾಗುವದು. ಮಧುರಾಪಟ್ಟಣದಲ್ಲಿ ವಾಸ ಮಾಡಿದ ನಮ್ಮ ಪಿತ್ರಾರ್ಜಿತವಾದ ಆಸ್ತಿ ಸಂಪತ್ತನ್ನೆಲ್ಲ ಕಳ್ಳರು ದೋಚಿಕೊಂಡು ಹೋದದ್ದರಿಂದ ನಮ್ಮ ಕುಟುಂಬಕ್ಕೆ ಕಡುಬಡತನ ಬಂದಿದೆ. ಉಪಜೀವನಕ್ಕಾಗಿ ವ್ಯಾಪಾರ ಮಾಡಬೇಕೆಂದು ತುಸು ಹಣವನ್ನು ತೆಗೆದುಕೊಂಡು ದೇಶಾಂತರಕ್ಕೆ ಹೊರಟ ನನಗೆ ಈ ಮರುಭೂಮಿಯಲ್ಲೇ ನೀನು ಕಣ್ಣಿಗೆ ಬಿದ್ದೆ. ಪುಣ್ಯಾತ್ಮನೇ, ನನಗೆ ಜೀವದಾನವನ್ನು ಕೊಡು''. ಆ ವೈಶ್ಯನ ಈ ದೀನ ವಚನಗಳನ್ನು ಕೇಳಿ ಆ ಪಿಶಾಚಕ್ಕೆ ದಯೆ ಬಂದಿತು. ಮೇಲಾಗಿ ಆ ವೈಶ್ಯನು ಮಧುರಾಮಂಡಲದ ನಿವಾಸಿಯು ಎಂದು ತಿಳಿದ ಬಳಿಕಂತೂ ಅದಕ್ಕೆ ತನ್ನ ಜನ್ಮಾಂತರದ ನೆನಪು ಮರುಕಳಿಸಿತು. ಅದು ಆ ವೈಶ್ಯನನ್ನು ಕುರಿತು ಇಂತು ನುಡಿಯಿತು-

''ವೈಶ್ಯೋತ್ತಮನೇ, ನಿನ್ನ ಮಾತಿನಂತೆ ನಾನು ನಿನ್ನನ್ನು ತಿನ್ನದೇ ಬಿಟ್ಟು ಬಿಡುತ್ತೇನೆ. ಆದರೆ ಒಂದು ಕರಾರು. ನೀನು ನನ್ನ ಈ ಒಂದು ಮಾತನ್ನು ನಡೆಸಿಕೊಡುವದಾದರೆ ಮಾತ್ರ ನಾನು ನಿನ್ನ ಮೈಗೆ ಕೈ ಹಚ್ಚದೇ ಬಿಟ್ಟು ಕೊಡುತ್ತೇನೆ. ನೀನು ಇಲ್ಲಿಂದ ಮಧುರೆಗೆ ಹೋಗಿ ಅಲ್ಲಿಯ ಚಾತುಸ್ಸಾಮುದ್ರಿಕ ತೀರ್ಥದಲ್ಲಿ ವಿಧಿಪೂರ್ವಕವಾಗಿ ಸ್ನಾನ ಮಾಡಿ ನನ್ನ ಹೆಸರಿನಿಂದ ಪಿಂಡ ಪ್ರದಾನವನ್ನು ಮಾಡು. ಆ ಸ್ನಾನದ ಫಲವನ್ನು ನನಗೆ ಕೊಡು. ಇದರಂತೆ ನೀನು ನನಗೆ ವಚನವಿತ್ತರೆ ನಿನ್ನನ್ನು ನಾನು ಸುಖರೂಪವಾಗಿ ಹೋಗಗೊಡುತ್ತೇನೆ. ಆ ಪಿಶಾಚದ ಈ ಮಾತನ್ನು ಕೇಳಿ ಆ ವೈಶ್ಯನು ನುಡಿದನು.-

'' ಮಹಾನುಭಾವನಾದ ರಾಕ್ಷಸನೇ, ಹಣವಿಲ್ಲದೇ ನಾನು ಆ ಮಧುರಾಮಂಡಲಕ್ಕೆ ಹೋಗುವದು ಸಾಧ್ಯವಿಲ್ಲ. ನೀನು ನನ್ನನ್ನು ಇಲ್ಲಿಯೇ ಕೊಂದು ಬಿಡು. ಮತ್ತು ತಿಂದು

ಬಿಡು. ಹಣವಿಲ್ಲದ ಮನುಷ್ಯ ಹೆಣಕ್ಕಿಂತಲೂ ಕಡೆ. '' ಇದನ್ನು ಕೇಳಿ ಆ ಪಿಶಾಚವು ನಕ್ಕು ನುಡಿಯಿತು. - '' ಭಾಗ್ಯವಂತನಾದ ವೈಶ್ಯನೇ, ನೀನು ಹಣಕ್ಕಾಗಿ ಚಿಂತಿಸಬೇಡ. ನಿನ್ನ ಮನೆಯ ಅಂಗಳದಲ್ಲಿರುವ ಹಗೆಯು ಹೊನ್ನಿನಿಂದ ತುಂಬಿದೆ. ಅದನ್ನು ಅಗೆದು ತೆಗೆದರೆ ನಿನಗೆ ಬೇಕಾದಷ್ಟು ಬಂಗಾರವು ದೊರಕುವದು. '' ಇದನ್ನು ಕೇಳಿ ಆ ವೈಶ್ಯನಿಗೆ ಪರಮಾನಂದವಾಯಿತು. '' ಇಂಥ ದುರವಸ್ಥೆ ಯಲ್ಲಿಯೂ ಪಿಶಾಚ ಜನ್ಮದಲ್ಲಿದ್ದಾಗಲೂ ನಿನಗೆ ಹೇಗೆ ಜ್ಞಾನವು ಉತ್ಪನ್ನವಾಯಿತು.''ಎಂದು ಕೇಳಿದನು. ವೈಶ್ಯನ ಈ ಪ್ರಶ್ನೆಯನ್ನು ಕೇಳಿ ಆ ಪಿಶಾಚವು ತನ್ನ ಜನ್ಮಾಂತರದ ಕತೆಯನ್ನು ನೆನೆಸಿಕೊಂಡು ನಕ್ಕು ನುಡಿಯಿತು-

''ಪ್ರತಿಷ್ಠಾನ ಎಂಬ ಪಟ್ಟಣದಲ್ಲಿ ಒಂದು ಶ್ರೇಷ್ಠವಾದ ವಿಷ್ಣುವಿನ ಗುಡಿ ಇದೆ. ಅಲ್ಲಿ ಒಬ್ಬ ಜ್ಞಾನಿಯಾದ ಬ್ರಾಹ್ಮಣನು ನಿತ್ಯವೂ ದೇವರ ಎದುರು ಪುರಾಣವನ್ನು ಹೇಳುತ್ತಿದ್ದನು.

ನನ್ನ ಓರ್ವ ಮಿತ್ರನ ಒತ್ತಾಯದಿಂದ ನಾನು ಅಲ್ಲಿಗೆ ಹೋಗಿ ಪುರಾಣಶ್ರವಣ ಮಾಡಿದೆನು. ಅವನು ಮಧುರಾ ಮಂಡಲದ ಮಹಿಮೆಯನ್ನೂ 'ಚತುಸ್ಸಾಮುದ್ರಿಕ ತೀರ್ಥದ' ಮಹಿಮೆಯನ್ನೂ ಹೇಳಿದನು, ನಾಲ್ಕು ಸಮುದ್ರಗಳೂ ಆ ತೀರ್ಥದಲ್ಲಿ ಸನ್ನಿಹಿತವಾದುದರಿಂದ ಅಲ್ಲಿ ದಾನ ಮತ್ತು ಪಿಂಡ ಪ್ರದಾನ ಮಾಡಿದರೆ ಸದ್ಗತಿಯಾಗುವದು ಸುನಿಶ್ಚಿತ'' ಎಂದು ಆ ಬ್ರಾಹ್ಮಣನು ನನಗೆ ತಿಳಿಸಿ ಹೇಳಿದನು. ಮಹಾ ಜಿಪುಣನಾದ ನನಗೆ ಅಂದು ಏಕೋ ಏನೋ ಸುಬುದ್ಧಿ ಹುಟ್ಟಿತು. ಎಂದೂ ಯಾರಿಗೂ ಒಂದು ಕುರುಡು ಕಾಸನ್ನೂ ಕೊಡದ ನಾನು ಅಂದು ಆ ಬ್ರಾಹ್ಮಣನು ಬಾಯಿ ಬಿಟ್ಟು ಕೇಳಿದ್ದರಿಂದ ನನ್ನ ಗೆಳೆಯನು ಒತ್ತಾಯಿಸಿದ್ದರಿಂದ ನನ್ನ ಕೈಯಲ್ಲಿರುವ ಒಂದು ಚಿನ್ನದ ನಾಣ್ಯವನ್ನು ದಾನ ಕೊಟ್ಟೆನು. ಮುಂದೆ ನಾನು ಕಾಲಪ್ರಾಪ್ತವಾದ ಮರಣವನ್ನು ಹೊಂದಿದ ಬಳಿಕ ಕಡುಲೋಭಿಯೂ, ಮಹಾಪಾಪಿಯೂ ಆದ ನನ್ನನ್ನು ಯಮದೂತರು ಸೆಳೆದುಕೊಂಡು ಯಮ ಪಟ್ಟಣಕ್ಕೆ ಹೋದರು. ನಾನು ಮಾಡಿದ ದುರ್ವ್ಯಾಪಾರ, ದುರಾಚಾರವನ್ನು ಅನುಲಕ್ಷಿಸಿ ನನ್ನನ್ನು ಈ ಪಿಶಾಚಿ ಜನ್ಮಕ್ಕೆ ತಳ್ಳಿದರು. ಕಳೆದ ಜನ್ಮದಲ್ಲಿ ದಾನ, ಧರ್ಮ, ತೀರ್ಥ ಸ್ನಾನ, ಪಿತೃತರ್ಪಣ ಮುಂತಾದ ಯಾವ ಪುಣ್ಯಕಾರ್ಯವನ್ನೂ ಮಾಡದ ನಾನು ನನ್ನ ಕರ್ಮಾನುಗುಣವಾಗಿ ಈ ಪಿಶಾಚಯೋನಿಯಲ್ಲಿ ಬಳಲುತ್ತಿದ್ದೇನೆ. ಆದರೆ ಆ ಜನ್ಮದಲ್ಲಿ ಪೈಠಣದ ವಿಷ್ಣು ದೇವಾಲಯದಲ್ಲಿ ಪುರಾಣಿಕ ಬ್ರಾಹ್ಮಣನಿಗೆ ಗೆಳೆಯನ ಜುಲುಮೆಯಿಂದಲೂ ಆ ಬ್ರಾಹ್ಮಣನ ಬಲುಮೆಯಿಂದಲೂ ಒಂದು ಚಿನ್ನದ ನಾಣ್ಯವನ್ನು ದಾನ ಕೊಟ್ಟಿದ್ದರಿಂದ ನನಗೆ ಆ ಜನ್ಮಾಂತರದ ಸ್ಮರಣೆಯು ಇನ್ನೂ ಚೆನ್ನಾಗಿ ಉಳಿದಿದೆ. ನಿಮ್ಮಂಥ ಸಜ್ಜನರನ್ನು ಆತ್ಮೋದ್ಧಾರಕ್ಕಾಗಿ ಬೇಡಿಕೊಳ್ಳುವ ಬುದ್ಧಿಯೂ ಬಂದಿದೆ. ದಯಮಾಡಿ ನೀನು ಮಧುರಾಮಂಡಲದ ಆ 'ಚಾತುಸ್ಸಾಮುದ್ರಿಕ ತೀರ್ಥ'ದಲ್ಲಿ ನನ್ನ ಹೆಸರಿನಿಂದ ಒಂದು ಪಿಂಡವನ್ನು ಹಾಕು.''

ಪಿಶಾಚದ ಈ ಕೌತುಕದ ಕತೆಯನ್ನು ಕೇಳಿ ಆ ವೈಶ್ಯನಿಗೆ ಅತ್ಯಾಶ್ಚರ್ಯವಾಯಿತು. 'ಹಾಗೇ ಆಗಲಿ ' ಎಂದು ಅವನು ಆ ಪಿಶಾಚಕ್ಕೆ ಹೇಳಿ ಅದರಿಂದ ಬಿಡುಗಡೆ ಹೊಂದಿ ನೇರವಾಗಿ ಮಧುರೆಗೆ ಬಂದನು. ಆ ತೀರ್ಥದಲ್ಲಿ ಮಿಂದನು. ಆ ಪಿಶಾಚದ ಹೆಸರಿನಿಂದ ಪಿಂಡ ಪ್ರದಾನವನ್ನು ಮಾಡಿದನು. ಅದರಿಂದ ಆ ಪಿಶಾಚಕ್ಕೆ ಆ ಕೆಟ್ಟ ಯೋನಿಯಿಂದ

ಬಿಡುಗಡೆಯಾಗಿ ಅದಕ್ಕೆ ಸ್ವರ್ಗಪ್ರಾಪ್ತಿಯಾಯಿತು. ಭೂದೇವಿ, ಮಧುರಾಮಂಡಲದ ಯಾವ ತೀರ್ಥದಲ್ಲಿ ಮರಣಸಿದರೂ ದಿವ್ಯಲೋಕ ಪ್ರಾಪ್ತಿಯು ನಿಶ್ಚಿತವಾದದ್ದು. ಬೇರೆ ಸ್ಥಳಗಳಲ್ಲಿ ಮಾಡಿದ ಪಾಪವು ಪುಣ್ಯಕ್ಷೇತ್ರ ಯಾತ್ರೆ ಮಾಡಿದರೆ ನಾಶವಾಗುವದು. ಆದರೆ ಪುಣ್ಯ ಕ್ಷೇತ್ರದಲ್ಲಿ ಮಾಡಿದ ಪಾಪವು ಮಾತ್ರ ವಜ್ರಲೇಪವಾಗುವದು ಎಂದು ಶಾಸ್ತ್ರದಲ್ಲಿ ಹೇಳಲಾಗಿದೆ. ಆದರೆ ಈ ಮಧುರಾ ಮಂಡಲದಲ್ಲಿ ಮಾತ್ರ ಹಾಗಲ್ಲ. ಈ ಕ್ಷೇತ್ರದಲ್ಲಿ ಎಂಥ ಪಾಪ ಮಾಡಿದರೂ ಅದು ವಜ್ರಲೇಪವಾಗದೆ ಇಲ್ಲಿಯ ತೀರ್ಥಸ್ನಾನದಿಂದ ತೊಳೆದು ಹೋಗುತ್ತದೆ. ಅಲ್ಲಿ ವಾಸಮಾಡುವದರಿಂದಲೇ ವ್ಯಭಿಚಾರಾದಿ ಪಂಚ ಮಹಾಪಾತಕಗಳು ಕಳೆದು ಹೋಗುತ್ತವೆ.

**ಭೂಮಿದೇವಿ :-** ಪ್ರಭು, ಮಧುರಾ ಮಂಡಲದಲ್ಲಿರುವ 'ಅಸಿಕುಂಡ ತೀರ್ಥ'ದ ವಿಚಾರವನ್ನು ನನಗೆ ದಯವಿಟ್ಟು ತಿಳಿಸಿರಿ.

**ವರಾಹ :-** ಪೂರ್ವ ಕಾಲದಲ್ಲಿ ಸುಮತಿ ಎಂಬ ಧಾರ್ಮಿಕನಾದ ರಾಜನಿದ್ದನು. ಅವನು ತೀರ್ಥಯಾತ್ರೆ ಮಾಡಲು ಹೋದಾಗ ದಾರಿಯಲ್ಲಿಯೇ ಆಕಸ್ಮಿಕವಾಗಿ ಮರಣ ಹೊಂದಿದನು. ಅದರಿಂದ ಅವನ ಮಗನಾದ ವಿಮತಿ ಎಂಬ ರಾಜಕುಮಾರನಿಗೆ ತೀರ್ಥಗಳ ಮೇಲೆ ಬಹಳ ಸಿಟ್ಟು ಬಂದಿತು. ಅವನು ತಂದೆಯ ತರುವಾಯ ಪಟ್ಟಾಭಿಷಿಕ್ತನಾದ ಬಳಿಕ ಒಂದು ದಿನ ನಾರದರು ಬಂದು ''ನೀನು ಪಿತೃ ಋಣವನ್ನು ತೀರಿಸಬೇಕು'' ಎಂದು ಹೇಳಿ ಹೋದರು. ತೀರ್ಥಯಾತ್ರೆಯ ಕಾಲದಲ್ಲಿ ತನ್ನ ತಂದೆಯು ಸತ್ತಿದ್ದರಿಂದ ಆ ತೀರ್ಥಗಳ ಮೇಲೆ ಅದರ ಸೇಡನ್ನು ತೀರಿಸಿಕೊಳ್ಳಬೇಕೆಂದು ಆ ಹುಚ್ಚು ದೊರೆಯು ಹೊಂಚು ಹಾಕಿದನು. ಚಾತುರ್ಮಾಸ್ಯ ಕಾಲದಲ್ಲಿ ಮಧುರಾಮಂಡಲದಲ್ಲಿ ಎಲ್ಲ ತೀರ್ಥಗಳೂ ಮೇಳವಿಸುತ್ತವೆ ಎಂದು ಕೇಳಿ ತಿಳಿದು ಅವನು ಅಲ್ಲಿಗೆ ದಂಡೆತ್ತಿ ಬಂದನು. ಇದನ್ನು ಕೇಳಿ ಗಾಬರಿಯಾದ ಎಲ್ಲ ತೀರ್ಥಗಳು ಕಲ್ಪ ಗ್ರಾಮಕ್ಕೆ ಹೋಗಿ ನನಗೆ ಅಂದರೆ ವರಾಹ ದೇವರಿಗೆ ಶರಣು ಬಂದರು. ತಮ್ಮ ಮೇಲೆ ಯುದ್ಧಕ್ಕೆ ಬಂದ ವಿಮತಿರಾಜನಿಂದ ತಮ್ಮನ್ನು ರಕ್ಷಿಸಬೇಕೆಂದು ಕೇಳಿಕೊಂಡರು. ಆ ತೀರ್ಥಗಳ ಪ್ರಾರ್ಥನೆಯನ್ನು ಕೇಳಿ ನಾನು ಅವುಗಳಿಗೆಲ್ಲ ಅಭಯ ದಾನವನ್ನು ಮಾಡಿದೆನು. ಮತ್ತು ತೀರ್ಥಗಳೊಡನೆ ಹೋರಾಡಲು ಬಂದ ದುರ್ಮತಿಯಾದ ವಿಮತಿ ರಾಜನನ್ನು ನನ್ನ ದಿವ್ಯವಾದ ಅಸಿಯಿಂದ ಅರ್ಥಾತ್ ಖಡ್ಗದಿಂದ ಕೊಂದು ಹಾಕಿದೆನು. ಆ ಕುಮತಿಯನ್ನು ಕೊಂದ ಆ (ಅಸಿ) ಕತ್ತಿಯನ್ನು ಅಲ್ಲಿಯೇ ನೆಲದ ಮೇಲೆ ಇಟ್ಟೆನು. ಅಲ್ಲಿದ್ದ ದೇವತೆಗಳೂ ಋಷಿಗಳೂ ಆ ಅಸಿಯನ್ನು ತೆಗೆದುಕೊಂಡು ಅದರಿಂದ ಒಂದು ತೆಗ್ಗು ತೋಡಿ ತೀರ್ಥವನ್ನು ನಿರ್ಮಿಸಿದರು. ಅದು 'ಅಸಿಕುಂಡ ತೀರ್ಥ' ಎಂದು ಹೆಸರಾಯಿತು. ಅಲ್ಲಿಯ ಆಶ್ಚರ್ಯವೆಂದರೆ ಪ್ರತಿ ದ್ವಾದಶೀ ಹಾಗೂ ಚತುರ್ದಶೀ ದಿನಗಳಲ್ಲಿ ನಾನು ವರಾಹರೂಪದಿಂದ ಅಲ್ಲಿ ಸನ್ನಿಹಿತನಾಗುವೆನು. ಆ ದಿನಗಳಂದು ಪಶ್ಚಿಮಾಭಿಮುಖನಾಗಿ ಅಲ್ಲಿ ನೆಲೆಸಿದ ನನ್ನನ್ನು ಪಾಪ ರಹಿತರಾದ ಜಿತೇಂದ್ರಿಯ ಯೋಗಿಗಳು ಮಾತ್ರ ನೋಡಲು ಸಮರ್ಥರಾಗುವರು. ಅಲ್ಲಿ ಬಂದು ನಾನು ನಾಲ್ಕು ಸುವರ್ಣರೂಪಗಳಿಂದ ಬೆಳಗುವೆನು. ನನ್ನ ಶ್ರೀ ವರಾಹ, ನಾರಾಯಣ, ವಾಮನ, ಶ್ರೀರಾಮ ಹೀಗೆ ನಾಲ್ಕು ಬಂಗಾರಮೂರ್ತಿಗಳು ಅಲ್ಲಿಯ ವರಾಹ ತೀರ್ಥದ ತೀರದಲ್ಲಿ ಇರುವವು. ಯಾತ್ರಿಕರು 'ಅಸಿಕುಂಡ ತೀರ್ಥ'ದಲ್ಲಿ ಸ್ನಾನ ಮಾಡಿ ಈ

ಸುವರ್ಣದ ಚತುರ್ಮೂರ್ತಿಗಳ ದರ್ಶನ ಮಾಡಿಕೊಂಡರೆ ಸರ್ವತೀರ್ಥ ಯಾತ್ರೆಯನ್ನು ಮಾಡಿದ ಪುಣ್ಯವು ಪ್ರಾಪ್ತವಾಗುತ್ತದೆ.

**ಶ್ರೀ ವರಾಹ :-** ಭೂಮಿದೇವಿ, 'ವಿಶ್ರಾಂತಿ ತೀರ್ಥ'ದ ಮಹಿಮೆಯನ್ನು ಹೇಳುತ್ತೇನೆ. ಕೇಳು. ಹಿಂದೆ ಉಜ್ಜಯಿನೀ ಪಟ್ಟಣದಲ್ಲಿ ಅನಾಚಾರಿಯಾದ ಬ್ರಾಹ್ಮಣನೊಬ್ಬನು ಸ್ನಾನ ಸಂಧ್ಯೆ ದೇವಪೂಜೆ ಧರ್ಮಕಾರ್ಯ ಯಾವದನ್ನೂ ಮಾಡದೇ ಮಹಾಪಾಪಿಯಾಗಿದ್ದನು. ಕಳ್ಳರ ಗುಂಪಿನಲ್ಲಿ ಸೇರಿಕೊಂಡು ಕಳವು, ಕೊಲೆ, ಸುಲಿಗೆಗಳನ್ನು ಮಾಡುತ್ತಿದ್ದನು. ಒಂದು ದಿನ ಅವನು ರಾತ್ರಿ ಕಳ್ಳತನ ಮಾಡುವಾಗಲೇ ರಾಜಭಟರು ಅವನನ್ನು ಹಿಡಿಯ ಬಂದರು. ಆಗ ಅವನು ಅವರಿಂದ ಹೇಗೋ ತಪ್ಪಿಸಿಗೊಂಡು ಕಾಡಿನ ದಾರಿಯಲ್ಲಿ ಓಡುವಾಗ ಕತ್ತಲೆಯಲ್ಲಿ ಕಾಲುಜಾರಿ ಒಂದು ಹಾಳು ಬಾವಿಯಲ್ಲಿ ಬಿದ್ದುಬಿಟ್ಟನು. ಘೋರವಾದ ಆ ಹಾಳು ಬಾವಿಯ ಆಳಕ್ಕೆ ಬಿದ್ದ ಅವನು ತತ್‌ಕ್ಷಣವೇ ಮರಣ ಹೊಂದಿ ಬ್ರಹ್ಮರಾಕ್ಷಸನಾದನು. ಆ ಕಾಡಿನಲ್ಲಿ ಹಸಿವೆಯಿಂದ ಕಂಗಾಲಾಗಿ ಅಲೆಯುತ್ತಿದ್ದನು. ಹೀಗೆ ಎಷ್ಟೋ ದಿನಗಳು ಕಳೆದ ಬಳಿಕ ಒಂದು ದಿನ ಯಾತ್ರಿಕರ ಗುಂಪು ಆ ಮಾರ್ಗವಾಗಿ ಹೊರಟಿದ್ದಿತು. ಅದನ್ನು ಕಂಡು ಅವರನ್ನೆಲ್ಲ ಕೊಂದು ತಿಂದು ಬಿಡಬೇಕೆಂದು ಆ ಬ್ರಹ್ಮರಾಕ್ಷಸನು ಅಲ್ಲಿಗೆ ಬಂದಾಗ ಒಬ್ಬ ಬ್ರಾಹ್ಮಣನು ರಕ್ಷೋಘ್ನ ಮಂತ್ರಗಳನ್ನು ಹೇಳಿ ಆ ಗುಂಪನ್ನು ರಕ್ಷಿಸುತ್ತಿದ್ದನು. ಆ ಬ್ರಹ್ಮರಾಕ್ಷಸವು ಅವನ ಬಳಿಗೆ ಹೋಗಿ '' ಅಯ್ಯಾ, ಬ್ರಾಹ್ಮಣಾ, ನಾನು ಬಹಳ ಹಸಿದಿದ್ದೇನೆ. ನೀನು ಸ್ವಲ್ಪ ಇವರನ್ನು ಬಿಟ್ಟು ಹೋಗು. ನಾನು ಇವರನ್ನೆಲ್ಲ ಕೊಂದು ತಿಂದು ತೇಗುತ್ತೇನೆ.'' ಎಂದು ಕೇಳಿಕೊಂಡಿತು. ಅದಕ್ಕೆ ಆ ಬ್ರಾಹ್ಮಣನು ನಾನೆಂದಿಗೂ ಈ ಗುಂಪನ್ನು ಬಿಟ್ಟುಹೋಗಲಾರೆನೆಂದು ಹೇಳಿ ''ನೀನಾರು ? ನಿನಗೆ ಇಂಥ ಪಾಪಿಜನ್ಮವು ಬರಲಿಕ್ಕೆ ಕಾರಣವೇನು ?'' ಎಂದು ಕೇಳಿದನು. ಆಗ ಆ ಬ್ರಹ್ಮರಾಕ್ಷಸವು ತನ್ನ ಹಿಂದಿನ ಜನ್ಮದ ದುಷ್ಕಾರ್ಯ ದುರಾಚಾರಗಳ ಸಮಾಚಾರವನ್ನು ತಿಳಿಸಿ ''ಪುಣ್ಯಾತ್ಮ, ನೀನು ಮಧುರಾ ಕ್ಷೇತ್ರದಲ್ಲಿ ವಿಶ್ರಾಂತಿ ತೀರ್ಥದಲ್ಲಿ ಸ್ನಾನ ಮಾಡಿದ ಪುಣ್ಯವನ್ನು ಕೊಟ್ಟು ಉದ್ಧಾರಮಾಡು.'' ಎಂದು ಬೇಡಿಕೊಂಡಿತು. ಆಗ ದಯಾಳುವಾದ ಆ ಬ್ರಾಹ್ಮಣನು ತಾನು ವಿಶ್ರಾಂತಿ ತೀರ್ಥದಲ್ಲಿ ಒಂದು ದಿನ ಸ್ನಾನ ಮಾಡಿದ ಪುಣ್ಯವನ್ನು ಆ ಬ್ರಹ್ಮರಾಕ್ಷಸಕ್ಕೆ ಕೊಟ್ಟನು. ಆ ಪುಣ್ಯ ಪ್ರಭಾವದಿಂದ ಆ ಬ್ರಹ್ಮರಾಕ್ಷಸವು ತನ್ನ ದುರ್ಜನ್ಮದಿಂದ ಮುಕ್ತಿಹೊಂದಿ ಸದ್ಗತಿಯನ್ನು ಪಡೆಯಿತು.

## ಮಧುರೆಯ ಕ್ಷೇತ್ರಪಾಲನಾದ ಪರಮೇಶ್ವರ

**ಭೂದೇವಿ :-** ಪ್ರಭೋ, ಮಧುರೆಯಲ್ಲಿ ಕ್ಷೇತ್ರಪಾಲನಾಗಿರುವ ಈಶ್ವರನ ಸಂದರ್ಶನದಿಂದ ಯಾವ ಪುಣ್ಯವು ಬರುವದೆಂಬುದನ್ನು ಹೇಳಬೇಕು.

**ವರಾಹ :-** ಭೂತಪತಿಯಾದ ಆ ಪರಮೇಶ್ವರನ ದರ್ಶನ ಮಾತ್ರದಿಂದಲೇ ಮಧುರಾ ಯಾತ್ರೆ ಮಾಡಿದ ಪುಣ್ಯವು ಬರುವದು. ಹಿಂದಕ್ಕೆ ಮಹಾದೇವನು ಸಾವಿರ ವರ್ಷ ನನ್ನನ್ನು ಕುರಿತು ತಪಸ್ಸು ಮಾಡಿದನು. ನಾನು ಪ್ರಸನ್ನನಾಗಿ ಬೇಕಾದ ವರಬೇಡು ಎಂದು ಹೇಳಲು '' ಸ್ವಾಮಿ, ಮಧುರಾ ಮಂಡಲದಲ್ಲಿ ನನಗೆ ನಿರಂತರವಾಗಿ ನೆಲಿಸಲು ಸ್ಥಳವನ್ನು ಕೊಡು '' ಎಂದು ಕೇಳಿಕೊಂಡನು. ಆಗ ನಾನು ಅವನನ್ನು ಮಧುರಾ ಕ್ಷೇತ್ರಪಾಲಕನನ್ನಾಗಿ

ಮಾಡಿ ನಿನ್ನ ದರ್ಶನದಿಂದಲೇ ಮಧುರಾ ಯಾತ್ರೆ ಮಾಡಿದ ಪುಣ್ಯ ಫಲವು ಬರುವದೆಂದು ವರವನ್ನಿತ್ತೆ. ಇಪ್ಪತ್ತು ಯೋಜನ ವಿಸ್ತೀರ್ಣವಾದ ಈ ಮಧುರಾ ಮಂಡಲದಲ್ಲಿ ಹೆಜ್ಜೆ ಹೆಜ್ಜೆಗೂ ತೀರ್ಥಕ್ಷೇತ್ರಗಳಿದ್ದು ಇಲ್ಲಿ ನಡೆದಾಡಿದರೆ ಅಶ್ವಮೇಧ ಯಾಗ ಮಾಡಿದ ಪುಣ್ಯಬರುವದು. ಇಲ್ಲಿ ಒಟ್ಟು ಅರವತ್ತಾರು ಕೋಟಿ ತೀರ್ಥಗಳುಂಟು. ಅವುಗಳಲ್ಲಿ ವೈಕುಂಠ, ವಿಶ್ರಾಂತಿ, ಅಸಿಕುಂಡ, ಅವಿಮುಕ್ತ, ಸೋಮ, ಯಮ, ತಿಂದುಕ, ಚಕ್ರ, ಅಕ್ರೂರ, ದ್ವಾದಶಾದಿತ್ಯ ಮುಂತಾದ ತೀರ್ಥಗಳು ಪ್ರಧಾನವಾಗಿವೆ. ಸರ್ವಪಾಪ ಪ್ರಣಾಶಕವಾಗಿವೆ.

## ಯಜ್ಞೋಪವೀತಕಾರದ ಯಾತ್ರೆ

**ಶ್ರೀ ವರಾಹ** :- ದೇವಿ, ಸರ್ವತೀರ್ಥ ಕ್ಷೇತ್ರಗಳಲ್ಲಿ ಮಧುರೆಯೇ ಸರ್ವ ಶ್ರೇಷ್ಠವಾಗಿದೆ. ಅದಕ್ಕೆ ಕಾರಣ ಪರಬ್ರಹ್ಮ ಪರಮಾತ್ಮನಾದ ಶ್ರೀ ಕೃಷ್ಣನು ಅಲ್ಲಿ ಆಡಿದ್ದಾನೆ. ಅನೇಕ ಲೀಲೆಗಳನ್ನು ಮಾಡಿದ್ದಾನೆ. ಅಲ್ಲಿಯ ಸ್ಥಲ ನೆಲವು ಅಡಿಗಡಿಗೂ ಶ್ರೀ ಕೃಷ್ಣನ ಅಡಿದಾವರೆಗಳು ಮೂಡಿದ ಹುಡಿ ಪುಡಿಗಳಿಂದ ಪಾವನವಾಗಿದೆ. ಅವನ ಚರಣ ಚಿನ್ಹವಾದ. ಚಕ್ರ ಶಂಖಗಳಿಂದ ಆ ಭೂಮಿ ಅಂಕಿತವಾಗಿದೆ. ಅಲ್ಲಿಯ ಚಂದ್ರಮಂಡಲಾಕಾರವಾಗಿರುವ ದಕ್ಷಿಣೋತ್ತರ ಕೋಟೆಗಳಲ್ಲಿ ಮಹಾದೇವರು ನೆಲಿಸಿದ್ದು ಅಲ್ಲಿ ಬಂದು ನಿಂದು ಮಿಂದು ಭಗವದ್ದರ್ಶನ ಪಡೆದ ಭಕ್ತರಿಗೆ ಬಯಸಿದ್ದನ್ನು ಕೊಡುತ್ತಲಿದ್ದಾನೆ. ಈ ಮಧುರಾ ಯಾತ್ರೆಯನ್ನು ಅರ್ಧಚಂದ್ರ ಕ್ಷೇತ್ರದ ದಕ್ಷಿಣದ ಕೊನೆಯಲ್ಲಿ ಮುಗಿಸಬೇಕು. ಯಜ್ಞೋಪವೀತಾಕಾರವಾಗಿ ಯಾತ್ರೆ ಮಾಡುವದರಿಂದ ಯಾತ್ರಿಕರ ಹಿಂದು ಮುಂದಿನ ಕುಲಗಳೆಲ್ಲ ಉದ್ಧಾರ ಹೊಂದುವವು. ಯಾತ್ರಿಕರು ಮನೆಯಿಂದ ಮೌನವಾಗಿ ಹೊರಟು ಸ್ನಾನ ಮಾಡಿ ಕೃಷ್ಣನನ್ನು ಪೂಜಿಸಿದ ಬಳಿಕವೇ ಮಾತನಾಡಬೇಕು. ಕೃಷ್ಣ ಪೂಜೆಯ ಬಳಿಕ ಹಾಲು ಹಿಂಡುವ ಹಸುವನ್ನೂ, ಹೊನ್ನುರತ್ನಗಳನ್ನೂ ದಾನ ಮಾಡಿ ಬ್ರಾಹ್ಮಣ ಭೋಜನ ಮಾಡಿಸಬೇಕು. ಇಲ್ಲಿಯ ಗರ್ತೇಶ್ವರ, ಭೂತೇಶ್ವರ ಕ್ಷೇತ್ರಗಳ ಮಧ್ಯದಲ್ಲಿ ನಾನಿರುತ್ತೇನೆ. ಇಲ್ಲಿಯ ಅರ್ಧಚಂದ್ರ ಕ್ಷೇತ್ರದಲ್ಲಿ ದಹನ ಮಾಡಿದ ಕತ್ತೆಗೂ ಸದ್ಗತಿಯಾಗುವದು. ಮಾನವರು ಎಲ್ಲಿಯೇ ಸತ್ತರೂ ಇಲ್ಲಿಗೇ ತಂದು ಈ ಅರ್ಧ ಚಂದ್ರ ಕ್ಷೇತ್ರದಲ್ಲಿ ಉತ್ತರ ಕ್ರಿಯೆಯನ್ನು ಮಾಡಿದರೆ ಅವರೆಲ್ಲರೂ ಚತುರ್ಭುಜರಾಗಿ ಶ್ರೀ ಹರಿಯ ಸಾರೂಪ್ಯವನ್ನು ಹೊಂದುವರು. ಮಧುರಾ ಪಟ್ಟಣದಲ್ಲಿ ನಾನು ನನ್ನ ಶಂಖ ಚಕ್ರಚಿನ್ಹ (ಶ್ರೀಮುದ್ರೆ) ಗಳಿಂದ ಲಾಂಛಿತರಾದ ನನ್ನ ಭಕ್ತರಂತೆಯೇ ರೂಪಧರಿಸಿ ಸಂಚರಿಸುತ್ತೇನೆ. ಒಮ್ಮೆ ಗರುಡನು ಬಂದು ''ಭಕ್ತವೇಷದಲ್ಲಿದ್ದ ಭಗವಂತನಾರು? ಭಗವದ್ ವೇಷದಲ್ಲಿದ್ದ ಭಕ್ತನಾರು ?'' ಎಂಬುದನ್ನು ಗುರುತಿಸಲಾರದೆ ಶ್ರೀ ಹರಿಗೆ ಬೇಡಿಕೊಂಡನು.

## ಗರುಡ ಉವಾಚ

**ವಿಶ್ವರೂಪ ಜಯಾದಿತ್ಯ ಜಯ ವಿಷ್ಣೋ ಜಯಾಽಚ್ಯುತ ।**
**ಜಯ ಕೇಶವ ಈಶಾನ ಜಯ ಕೃಷ್ಣ ನಮೋಽಸ್ತುತೇ ॥**

ವಿಶ್ವರೂಪಿಯಾದ ಪ್ರಭು, ಕೃಷ್ಣ, ನಿನಗೆ ನನ್ನ ವಂದನೆ. ಸ್ವಾಮಿನ್ ಈ ಮಧುರಾ ಕ್ಷೇತ್ರದಲ್ಲಿರುವ ನಿನ್ನ ಹಾಗೂ ನಿನ್ನ ಭಕ್ತರ ರೂಪಗಳಲ್ಲಿ ಅಂತರವೇ ಇಲ್ಲದಂತಾಗಿದೆ.

ದಯಮಾಡಿ ನನಗೆ ನಿನ್ನ ಸುಸ್ವರೂಪವನ್ನು ತೋರಿಸು.'' ಗರುಡನ ಮಾತುಗಳನ್ನು ಕೇಳಿ ಶ್ರೀ ಕೃಷ್ಣನು ನಸು ನಕ್ಕು ನುಡಿದನು -

'' ಗರುಡ, ಮಧುರೆಯಲ್ಲಿರುವವರಿಗೆ ಯಾವ ರೂಪವಿದೆಯೋ ಅದೇ ರೂಪವು ನನಗೂ ಇರುತ್ತದೆ. ಮಧುರೆಯಲ್ಲಿರುವ ದ್ವಿಜರೆಲ್ಲರೂ ನನ್ನ ರೂಪ ಉಳ್ಳವರಾಗಿರುವರು. ಅಲ್ಲಿಯ ನನ್ನ ಭಕ್ತರನ್ನು ಪೂಜಿಸಿದರೆ ನನ್ನನ್ನು ಪೂಜಿಸಿದಂತೆ '' ಎಂದು ಹೇಳಿ ಗರುಡನನ್ನು ಸಮಾಧಾನಪಡಿಸಿ ಅವನಿಗೆ ತನ್ನ ದಿವ್ಯ ದರ್ಶನವನ್ನಿತ್ತು ಅದೃಶ್ಯನಾದನು. ಆ ಮಧುರಾಮಂಡಲದಲ್ಲಿರುವ ಪದ್ಮನಾಭನನ್ನು ಅಶ್ವಿನಿ ಏಕಾದಶಿ ದ್ವಾದಶಿ ದಿನಗಳಲ್ಲಿ ದರ್ಶನ ಮಾಡಿಕೊಂಡು ಅಲ್ಲಿಯೇ ಇರುವ ಯಮುನಾ ನದಿಯಲ್ಲಿ ಸ್ನಾನ ಮಾಡಿಕೊಂಡು ಅಲ್ಲಿಯೇ ಏಕ ದೇಹರಾಗಿರುವ ಶಿವಕೇಶವರನ್ನೂ ದರ್ಶನ ಮಾಡಿದರೆ ಮಾನವನು ಜನನ ಮರಣ ಜಾಲದಿಂದ ಮುಕ್ತನಾಗುವನು. ಅದರಂತೆ ಅಲ್ಲಿರುವ ಯಶೋದಾದೇವಿ ಮಹಾವಿಂಧ್ಯೇಶ್ವರಿ ಮುಂತಾದ ದೇವತಾಮೂರ್ತಿಗಳ ದರ್ಶನದಿಂದ ಬ್ರಹ್ಮಹತ್ಯಾದಿ ಪಾಪಗಳು ಪರಿಹಾರವಾಗುತ್ತವೆ. ಮಧುರಾ ಮಂಡಲದಲ್ಲಿರುವ ವಿಶ್ರಾಂತಿ ತೀರ್ಥದಲ್ಲಿ ದೀರ್ಘ ವಿಷ್ಣು ಎಂಬ ಹೆಸರಿನ ಶ್ರೀ ಹರಿಯನ್ನು ಭಕ್ತಿಯಿಂದ ಪೂಜಿಸುವದರಿಂದ ಮಾನವನು ಮುಕ್ತಿಯನ್ನು ಹೊಂದುತ್ತಾನೆ.

*ವರಾಹ ಪುರಾಣದ ನೂರಇಪ್ಪತ್ತೊಂದನೇ ಅಧ್ಯಾಯ ಮುಗಿದಿದೆ.*



## ಗೋಕರ್ಣನ ಚಮತ್ಕಾರಿಕ ಚರಿತ್ರೆ

**ಅಧ್ಯಾಯ - ೧೨**

**ಶ್ರೀ ವರಾಹ** :- ಧರಣೀ ದೇವಿ, ಈ ಮಧುರಾ ಕ್ಷೇತ್ರದಲ್ಲಿ ಪೂರ್ವಕಾಲದಲ್ಲಿ ಜರುಗಿದ ಗೋಕರ್ಣ ಎಂಬ ಮಹಾತ್ಮನ ವೃತ್ತಾಂತವನ್ನು ಹೇಳುತ್ತೇನೆ. ಕೇಳು- ಹಿಂದಕ್ಕೆ ವಸುಕರ್ಣ ಎಂಬ ಹೆಸರಿನ ಓರ್ವ ಶ್ರೀಮಂತ ವೈಶ್ಯನಿದ್ದನು. ಅವನ ಮಡದಿಯಾದ ಸುಶೀಲೆಯು ಹೆಸರಿಗೆ ತಕ್ಕಂತೆ ಶೀಲ ಸಂಪನ್ನಳಾಗಿದ್ದಳು. ಅವಳು ಉತ್ತಮ ಗುಣಗಳ ಗಣಿ, ಸತೀಮಣಿ, ಸಾಧ್ವೀಶಿಖಾಮಣಿ ಎನಿಸಿದ್ದಳು. ಪತಿಯ ಸೇವಾ ಶುಶ್ರೂಷೆಯಲ್ಲಿಯೇ ಮೈ ಸವೆಯಿಸಿದ ಅವಳಿಗೆ ಮುಪ್ಪು ಬಂದು ಮೈ ಅಪ್ಪಿದರೂ ಮಕ್ಕಳಾಗಲಿಲ್ಲ. ಸಂತಾನದ ಚಿಂತೆಯು ಅವಳ ಅಂತರಂಗವನ್ನು ಉರಿಯಾಗಿ ಸುಡುತ್ತಿತ್ತು.

ಒಂದು ದಿನ ಆ ಚಲುವೆಯು ಸರಸ್ವತೀ ಸಂಗಮಕ್ಕೆ ಹೋಗಿದ್ದಳು. ಅಲ್ಲಿ ಅನೇಕ ಮುತ್ತೈದೆಯರು ತಮ್ಮ ಮುತ್ತಿನಂತಹ ಮಕ್ಕಳನ್ನು ಎತ್ತಿಕೊಂಡುಬಂದು ವಿನೋದ ಮಾಡುತ್ತಿರುವದನ್ನು ಕಂಡು ಅವಳ ಬಂಜೆಹೃದಯವು ಗೋಳಿಟ್ಟಿತು. ಅವಳು ಆ ನದೀ ದಂಡೆಯಲ್ಲಿ ಕುಳಿತು ತನ್ನ ಬಂಜೆತನಕ್ಕಾಗಿ ರೋದಿಸತೊಡಗಿದಳು. ಅದನ್ನು ಕೇಳಿ ಅಲ್ಲಿಯೇ ಒಂದು ಮರದ ಕೆಳಗೆ ಧ್ಯಾನಾರೂಢನಾಗಿ ಕುಳಿತ ಒಬ್ಬ ಮುನಿ ಪುಂಗವನ ಹೃದಯವು ಕರಗಿತು. ಓರ್ವ ಹೆಣ್ಣಿನ ಕಣ್ಣೀರಿನ ಕರುಣಾಲಾಪವನ್ನು ಕೇಳಿ ಕರುಳು ಕರಗಿಹೋದ ಆ ತಪಸ್ವಿಯು ಆ ಸುಶೀಲೆಯನ್ನು ಕುರಿತು ಅಕ್ಕರೆದುಂಬಿ ನುಡಿದನು.-

'' ಸಾಧ್ವಿ, ನೀನು ಗೋಕರ್ಣ ಕ್ಷೇತ್ರಕ್ಕೆ ಹೋಗಿ ಅಲ್ಲಿಯ ಈಶ್ವರನನ್ನು ಭಕ್ತಿಯಿಂದ ಆರಾಧಿಸು. ದೀಪೋತ್ಸವ ಮಾಡಿಸು. ರುದ್ರಾಭಿಷೇಕವನ್ನು ಹಚ್ಚು. ವಿವಿಧ ಭಕ್ಷಭೋಜ್ಯಗಳನ್ನು ನೈವೇದ್ಯ ತೋರಿಸು. ಆ ಗೋಕರ್ಣೇಶ್ವರನನ್ನು ಬಗೆಬಗೆಯ ಸ್ತೋತ್ರಗಳಿಂದ ಹಾಡಿ ಪಾಡಿ ಕೊಂಡಾಡಿ ಅವನ ನಾಮವನ್ನು ಜಪಿಸು. ಅವನ ಹೆಸರಿನಿಂದಲೇ ತಪಿಸು. ಅದರಿಂದ ನಿನಗೆ ಒಳ್ಳೇ ಮಗ ಹುಟ್ಟುವನು.'' ತಪಸ್ವಿಯ ಈ ನುಡಿಗಳನ್ನು ಕೇಳಿ ಸುಶೀಲಾದೇವಿಗೆ ಹರುಷವಾಯಿತು. ಕೂಡಲೇ ಅವಳು ಎದ್ದು ಆ ಋಷಿಯ ಅಡಿದಾವರೆಗಳಿಗೆ ಅಡ್ಡಬಿದ್ದು ''ಪೂಜ್ಯರೇ, ತಮ್ಮ ಅಪ್ಪಣೆಯಂತೆ ಮಾಡುವೆನು. ಅನುಗ್ರಹ ಮಾಡಿರಿ '' ಎಂದು ಹೇಳಿದಳು. ಮನೆಗೆ ಬಂದು ತನ್ನ ಪತಿಯಾದ ವಸುಕರ್ಣನಿಗೆ ಆ ಮುನಿಪುಂಗವರ ಆಜ್ಞೆ, ಅನುಗ್ರಹದ ಸಮಾಚಾರವನ್ನು ತಿಳಿಸಿದಳು. ಇದನ್ನು ಕೇಳಿ ಪ್ರಮೋದ ಪುಲಕಿತನಾದ ವಸುಕರ್ಣನು ಮಾರನೇ ದಿನವೇ ಗೋಕರ್ಣೇಶ್ವರನ ಸೇವೆಗಾಗಿ ಸನ್ನದ್ಧನಾದನು. ಪ್ರತಿ ದಿನವೂ ಆ ವೈಶ್ಯ ದಂಪತಿಗಳು ಸರಸ್ವತೀ ಸಂಗಮದಲ್ಲಿ ಸ್ನಾನಮಾಡಿ ಗೋಕರ್ಣೇಶ್ವರನನ್ನು ಪೂಜಿಸುತ್ತಿದ್ದರು. ಧೂಪ, ದೀಪ, ಪುಷ್ಪೋಪಹಾರ, ಜಪ, ತಪ, ಭಜನೆ, ಧ್ಯಾನ, ಗಾನ ಮುಂತಾಗಿ ಹಲವಾರು ಬಗೆಗಳಿಂದ ಆ ಪಾರ್ವತೀ ಪರಮೇಶ್ವರರನ್ನು ಭಕ್ತಿಯಿಂದ ಆರಾಧಿಸಿದರು. ಹೀಗೆ ಬಿಟ್ಟೂಬಿಡದೇ ಬೇಸರಿಯದೇ ಹತ್ತು ವರ್ಷಗಳ ಕಾಲ ಅಖಂಡ ಸೇವೆಗಳನ್ನು ಮಾಡಿದ ಬಳಿಕ ಆ ಚಂದ್ರಚೂಡನು ಅವರ ಮೇಲೆ ಸುಪ್ರಸನ್ನನಾದನು.

ಅವರಿಗೆ ಮುತ್ತಿನಂತಹ ಒಂದು ಮಗುವನ್ನು ಕರುಣಿಸಿದನು. ಗೋಕರ್ಣೇಶ್ವರನ ಅನುಗ್ರಹದಿಂದ ಜನಿಸಿದ್ದರಿಂದ ಆ ಕೂಸಿಗೆ ಗೋಕರ್ಣ ಎಂದು ಹೆಸರಿಟ್ಟರು.

ಪುತ್ರಜನನದಿಂದ ಸಂತುಷ್ಟನಾದ ವಸುಕರ್ಣನು ಸಾವಿರಾರು ಹಸುಗಳನ್ನು ಬ್ರಾಹ್ಮಣರಿಗೆ ದಾನವಿತ್ತನು. ಮುಂದೆ ಆ ಮಗು ದೊಡ್ಡದಾದ ಬಳಿಕ ವಿಧಿಪೂರ್ವಕವಾಗಿ ಅವನಿಗೆ ಚೌಲ, ಉಪನಯನ, ವಿವಾಹಗಳನ್ನು ಮಾಡಿದರು. ಅವನಿಗೆ ವಿವಾಹವಾಗಿ ಎಷ್ಟೋ ವರ್ಷಗಳು ಕಳೆದರೂ ಸಂತಾನವಾಗಲಿಲ್ಲ. ಆದರಿಂದ ಮನನೊಂದ ವಸುಕರ್ಣನು ಮತ್ತೆ ಬೇರೆ ಬೇರೆ ಮನೆತನಗಳ ನಾಲ್ಕು ಹೆಣ್ಣುಗಳನ್ನು ತಂದು ತನ್ನ ಮಗ ಗೋಕರ್ಣನಿಗೆ ಮದುವೆ ಮಾಡಿದನು. ಆದರೂ ಒಟ್ಟು ಗೋಕರ್ಣನು ಐದು ಜನ ಮಡದಿಯರನ್ನು ಮದುವೆಯಾದರೂ ಒಬ್ಬಳಿಗೂ ಮಕ್ಕಳಾಗಲಿಲ್ಲ. ತನ್ನ ವಂಧ್ಯಾಸುಂದರಿಯರ ವೃಂದವನ್ನು ಕಂಡು ಮನದಲ್ಲಿಯೇ ನೊಂದು, ಬೆಂದು, ಬಸವಳಿದು ಹೋದ ಗೋಕರ್ಣನು ಸಂತಾನಾಪೇಕ್ಷೆಯಿಂದ ಅನೇಕ ಧರ್ಮಕಾರ್ಯಗಳನ್ನು ಮಾಡತೊಡಗಿದನು. ಅನೇಕ ಕೆರೆ, ಕೊಳ, ಬಾವಿಗಳನ್ನು ಕಟ್ಟಿಸಿದನು. ಅರವಟ್ಟಿಗೆಗಳನ್ನು ಇಟ್ಟನು. ಅನ್ನ ಛತ್ರಗಳನ್ನು ನಡೆಸಿದನು. ಗೋಕರ್ಣ ಕ್ಷೇತ್ರದ ಹತ್ತಿರ ಅದರ ಪಡುವಣ ನಿಟ್ಟಿನಲ್ಲಿ ಚಕ್ರಪಾಣಿಯಾದ ಶ್ರೀ ವಿಷ್ಣುವಿನ ಪಂಚಾಯತನ ದೇವಾಲಯವನ್ನು ಕಟ್ಟಿಸಿದನು. ಆ ದೇವಾಲಯದ ಸಮೀಪದಲ್ಲಿಯೇ ವಿಸ್ತಾರವಾದ ಒಂದು ಹೂದೋಟವನ್ನೂ ಹಾಗೂ ಹಣ್ಣಿನ ಒಂದು ಕೈದೋಟವನ್ನೂ ಮಾಡಿಸಿದನು. ಅವನ ಐದು ಮಡದಿಯರೂ ಮನೆ ಜನರೂ ನೀರು ಹೊತ್ತು ಹಾಕಿ ಅಕ್ಕರೆಯಿಂದ ಅಲ್ಲಿ ಬಗೆ ಬಗೆಯ ಗಿಡಬಳ್ಳಿಗಳನ್ನು ಬೆಳೆಸಿದರು. ಹೂ ಹಣ್ಣು ಕಾಯಿ ಚಿಗುರು ಕುಡಿಮಿಡಿಗಳಿಂದ ದಾಂಗುಡಿಯಿಟ್ಟು ಬೆಳೆದು ಸೌಗಂಧ ಸೂಸುವ ಆ ಉದ್ಯಾನವು ನೆಲಕ್ಕಿಳಿದ ನಂದನ ವನದಂತೆ ಸುಂದರವಾಗಿ ಎಲ್ಲೆಡೆಯೂ ಸೌರಭವನ್ನು ಬೀರುತ್ತಿತ್ತು. ಅಲ್ಲಿಯ ದುಂಬಿ ಕೋಗಿಲೆಗಳ ಗೀತ ಗುಂಜಾರವದ ಮಂಜುಘೋಷದಿಂದ ಮಧುರಾ ಮಂಡಲವೆಲ್ಲ ಮುಖರಿತವಾಗಿತ್ತು. ಹೀಗೆ ಬಗೆ ಬಗೆಯ ದಾನ, ಧರ್ಮ, ಪುಣ್ಯ ಕರ್ಮಗಳಲ್ಲಿ ಗೋಕರ್ಣನ ಹಣವೆಲ್ಲವೂ ವೆಚ್ಚವಾಗಿ ಹೋಯಿತು. ಬಡತನವು ಬಂದಿತು. '' ತಾಯಿ, ತಂದೆ, ಮಡದಿ, ಮಕ್ಕಳು ಮುಂತಾದವರ ಹೊಟ್ಟೆ ತುಂಬಿಸುವದು ಎಂತು '' ಎಂದು ಚಿಂತೆಯು ಅವನ ಅಂತರಂಗದಲ್ಲಿ ಕೀಟವಾಗಿ ಕೊರೆಯಿತು. ಅಗ್ನಿಯಾಗಿ ಉರಿಯಿತು. ಕೊನೆಗೆ ಅವನು ತನ್ನ ಉಪಜೀವನಕ್ಕಾಗಿ ವ್ಯಾಪಾರ ಉದ್ಯೋಗಗಳನ್ನು ಮಾಡಬೇಕೆಂದು ನಿರ್ಧರಿಸಿದನು. ಹಲವಾರು ಉತ್ಸಾಹಿ ವೈಶ್ಯವ್ಯಾಪಾರಿಗಳ ತಂಡದೊಡನೆ ಒಡಗೂಡಿ ಪೂರ್ವ ಮಂಡಲಕ್ಕೆ ವಾಣಿಜ್ಯಾರ್ಥವಾಗಿ ಹೊರಟನು.

ಲಾಭಾಲಾಭ ವಿಚಾರದಲ್ಲಿ ಚತುರಮತಿಯಾದ ಅವನು ಅಲ್ಲಿ ದೊರೆಯುವ ಒಳ್ಳೊಳ್ಳೆ ವಸ್ತುಗಳನ್ನು ಕೊಂಡುಕೊಂಡು ಉತ್ತರದೇಶಕ್ಕೆ ಹೋದನು. ಅಲ್ಲಿ ತಾನು ಕೊಂಡು ತಂದ ಪದಾರ್ಥಗಳನ್ನೆಲ್ಲ ಒಳ್ಳೇ ಲಾಭದಾಯಕವಾದ ಬೆಲೆಯಿಂದ ಮಾರಾಟ ಮಾಡಿದನು. ಬಂದ ವಿಪುಲ ದ್ರವ್ಯದಿಂದ ಆ ದೇಶದಲ್ಲಿ ದೊರಕುವ ಉತ್ತಮೋತ್ತಮ ವಸ್ತುಗಳನ್ನು ವಿವಿಧ ರತ್ನ, ಕುದುರೆ, ವಸ್ತ್ರ, ವಸ್ತು ಒಡವೆ ಮುಂತಾದವುಗಳನ್ನು ಖರೀದಿ ಮಾಡಿ ಆ ವೈಶ್ಯ ವೃಂದದೊಡನೆ ತನ್ನ ಮಧುರಾ ಪಟ್ಟಣಕ್ಕೆ ಮರಳಿ ಬರಬೇಕೆಂದು ಹೊರಟನು. ದಾರಿಯಲ್ಲಿ ಒಂದು ದಿನ ಆ ವ್ಯಾಪಾರಿಗಳ ಗುಂಪು ಪ್ರಯಾಣದ ಪ್ರಯಾಸದಿಂದ ಬಳಲಿ ಒಂದು ಪರ್ವತದ ತಪ್ಪಲಿನಲ್ಲಿ ನೀರು, ನೆರಳು ಹಾಗೂ ಹುಲ್ಲು,

ಹಸಿರು ಇರುವ ಒಂದು ತಂಪಿನ ತಾಣದಲ್ಲಿ ತಂಗಿತು. ಅಲ್ಲಿ ಎಲ್ಲರೂ ವಿಶ್ರಾಂತಿಯನ್ನು ಪಡೆಯತೊಡಗಿದಾಗ ಗೋಕರ್ಣನು ಅಲ್ಲಿಯ ಪರ್ವತದ ಪ್ರಕೃತಿ ಸೌಂದರ್ಯವನ್ನು ಸವಿಯಬೇಕೆಂಬ ಬಯಕೆಯಿಂದ ಕಾಡಿನ ಬೀಡು ಮೇಡುಗಳಲ್ಲೆಲ್ಲ ಅಲೆದಾಡಿದನು. ಅಲ್ಲಿಯ ಮಲೆಗಳ ತಲೆತುದಿಗಳನ್ನು ಮೆಟ್ಟುತ್ತ ಆ ಬೆಟ್ಟವನ್ನು ಏರುತ್ತ ಮೇಲೆ ಮೇಲೆ ನಡೆದನು. ಹಾಗೇ ಅವನು ಮುಂದೆ ಮುಂದೆ ಏರುತ್ತ ಸಾರುತ್ತ ಸಾಗಿದಾಗ ಆ ಶೈಲ ಶಿಖರದ ಶೃಂಗಾಂಗಣದಲ್ಲಿ ಒಂದು ಸುಂದರ ಜಲಸ್ಥಲ ರಮಣೀಯವಾದ ಒಂದು ಪ್ರದೇಶವು ಕಂಗೊಳಿಸುತ್ತಿತ್ತು. ಗೋಕರ್ಣನು ಅಲ್ಲಿ ಪ್ರವೇಶ ಮಾಡಿದ ಕೂಡಲೇ ಅಲ್ಲಿ ಒಂದು ಗಿಳಿಯು ಅವನಿಗೆ ತನ್ನ ಮಧುರ ಕಂಠದಿಂದ ಹೀಗೆ ಹೇಳಿತು.- ''ಅಯ್ಯಾ ಪಾಂಥ, ಬಾ. ನಿನಗೆ ಸುಸ್ವಾಗತ. ಕಾಲು ತೊಳೆದುಕೋ. ಅಕೋ ಅಲ್ಲಿ ನಿನಗಾಗಿ ಒಂದು ಆಸನವನ್ನು ಇರಿಸಲಾಗಿದೆ. ಇತ್ತ ನಿನಗೆ ತಿನ್ನಲು ರುಚಿರುಚಿಯಾದ ಹಣ್ಣು ಕಾಯಿಗಳು. ಅತ್ತ ಕುಡಿಯಲು ಮಧುರವಾದ ಜೇನು, ಸಿಹಿನೀರು, ಎಳೆ ನೀರು. ನಿನಗೆ ಬೇಕಾದುದನ್ನು ಸ್ವೀಕರಿಸಬಹುದು. ಗೃಹಸ್ಥಾಶ್ರಮಿಯು ಬಂದ ಅತಿಥಿಗಳನ್ನು ಸತ್ಕರಿಸದಿದ್ದರೆ ಅವನ ಪಿತೃಗಳು ನರಕದಲ್ಲಿ ನವೆಯಬೇಕಾಗುವದು. ಸತ್ಕರಿಸಿದರೆ ಪಿತೃಗಳು ಸ್ವರ್ಗದಲ್ಲಿ ಸುಖದಿಂದಿರುವದು. ಆದುದರಿಂದ ಗೃಹಸ್ಥನಾದವನು ಸರ್ವ ಪ್ರಯತ್ನದಿಂದ ಕಾಲ ಅಕಾಲವೆನ್ನದೆ ಅತಿಥಿಯನ್ನು ಯಾವಾಗ ಬಂದರೂ ವಿಷ್ಣುವಿನಂತೆ ಪೂಜಿಸಬೇಕು.

ತಸ್ಮಾತ್ ಸರ್ವ ಪ್ರಯತ್ನೇನ ಪೂಜ್ಯೋ ವೈ ಗೃಹಮೇಧಿನಾ ।
ಕಾಲೇ ಪ್ರಾಪ್ತಸ್ತ್ವಕಾಲೇ ವಾ ಯಥಾ ವಿಷ್ಣುಸ್ತಥೈವ ಸಃ ॥
ಅತಿಥೇರಾಗತಸ್ಯೇಹ ಪೂಜಾಯಾ ವಿಮುಖೋ ಭವೇತ್ ।
ಗೃಹಸ್ಥಸ್ತಸ್ಯ ಪಿತರೋ ವಸಂತಿ ನರಕೇ ಧ್ರುವಂ ॥
ಪೂಜಿತೇ ಪೂಜಿತಾಃ ಸ್ವರ್ಗೇ ಮೋದಂತೇ ಕಾಲಮಕ್ಷಯಂ ॥

ಗಿಳಿಯ ಈ ಪ್ರಸನ್ನ ಮಧುರವಾದ ನುಡಿಗಳನ್ನು ಆಲಿಸಿ ಗೋಕರ್ಣನಿಗೆ ಆತ್ಯಾಶ್ಚರ್ಯವಾಯಿತು. ಅವನು ಕೌತುಕದಿಂದ ಆ ಗಿಳಿಯನ್ನು ಪ್ರಶ್ನಿಸಿದನು.-

''ಪುಣ್ಯಜೀವಿಯಾದ ಪ್ರಾಣಿಯೇ, ನೀನು ಯಾರು ? ಮಾನವರಿಗೆ ದುರ್ಲಭವಾದ ಇಂಥ ದಿವ್ಯವಾಣಿ, ಮಧುರಕಂಠ, ಪ್ರಸನ್ನರೂಪ, ಉತ್ತಮ ಬುದ್ಧಿ ಇದೆಲ್ಲವು ನಿನ್ನಲ್ಲಿ ಹೇಗೆ ಬಂದಿತು ? ನೀನು ಪುರಾಣ ಹೇಳುವ ಆ ಶುಕಾಚಾರ್ಯನೋ ? ಅಥವಾ ಬೇರಾವ ದೇವನೋ ? ಯಕ್ಷನೋ ? ಯಾರು ನೀನು ? ನನ್ನೆದುರು ನಿಜ ಹೇಳು.'' ಗೋಕರ್ಣನ ಈ ಪ್ರಶ್ನಾವಳಿಗಳನ್ನು ಕೇಳಿ ಆ ಗಿಳಿಯು ತನ್ನ ಹಿಂದಿನ ವೃತ್ತಾಂತವನ್ನು ಹೇಳತೊಡಗಿತು.

''ಸುಮೇರು ಪರ್ವತದ ಉತ್ತರ ಪಾರ್ಶ್ವದಲ್ಲಿ ಒಂದು ಪುಣ್ಯಾಶ್ರಮದಲ್ಲಿ ಕೃಷ್ಣ ದ್ವೈಪಾಯನರ ಚಿರಂಜೀವಿಯಾದ ಶುಕಮಹರ್ಷಿಯು ತಪಸ್ಸನ್ನು ಮಾಡುತ್ತಲಿದ್ದನು. ಇತಿಹಾಸ ಪುರಾಣಗಳಲ್ಲಿ ಅತ್ಯಂತ ನಿಷ್ಣಾತನಾದ ಆ ಶುಕ ಮುನಿಯಿಂದ ಧರ್ಮ ಸಂಹಿತೆಯನ್ನು ಕೇಳಬೇಕೆಂದು ಒಂದು ಸಲ ಮಂತ್ರ ದ್ರಷ್ಟಾರರಾದ ಗೌತಮ, ವಾಮದೇವ, ಭೃಗು, ಆಂಗಿರಸ, ಮಾರ್ಕಂಡೇಯ, ಅಸಿತ, ದೇವಲ, ಭರದ್ವಾಜ, ಯವಕ್ರೀತ, ತೈತ್ತೀರಿಯ, ಕಾಣ್ವ, ಸುಮಂತು, ಅಶ್ವಶಿರ ಮುಂತಾದ ಋಷಿಗಳೂ,

ಸಿದ್ಧರೂ, ದೇವತೆಗಳೂ ಬಂದು ಕುಳಿತಿದ್ದರು. ಆ ಬ್ರಹ್ಮವಿದ್ಯಾ ಪರಿಷತ್ತಿಗೆ ವಾಮದೇವನ ಶಿಷ್ಯನಾದ ನಾನೂ ಹೋಗಿದ್ದೆನು. ಆಗ ನನ್ನ ಹೆಸರು ಶುಕೋದರ ಎಂದಿತ್ತು. ಆಗ ನನಗೆ ದೇವರಲ್ಲಿ ಶ್ರದ್ಧೆ ಇದ್ದರೂ ಗುರುಗಳಲ್ಲಿ ವಿಶ್ವಾಸವಿರಲಿಲ್ಲ. ಬಾಲ್ಯ ಸಹಜವಾದ ಚಾಪಲ್ಯದಿಂದ ತಳಬುಡ ಇಲ್ಲದ ಅನೇಕ ಪ್ರಶ್ನೆಗಳನ್ನು ಅವರಿಗೆ ಕೇಳುತ್ತಿದ್ದೆ. ಇಂಥ ಅಸಂಬದ್ಧ ಪ್ರಶ್ನೆಗಳನ್ನು ಮಾಡಬಾರದೆಂದು ಗುರುಗಳು ಹೇಳಿದರೂ ನಾನು ಕೇಳದೇ ನನ್ನ ವಾಕ್‌ಚಾಪಲ್ಯ ಹಾಗೂ ನನ್ನ ಪ್ರಶ್ನ ಚಾತುರ್ಯಗಳನ್ನು ಪ್ರದರ್ಶಿಸಲಿಕ್ಕಾಗಿ ಆ ಶುಕಾಚಾರ್ಯರ ಪ್ರವಚನ ಕಾಲದಲ್ಲಿ ಅಡ್ಡತಿಡ್ಡ ಪ್ರಶ್ನೆಗಳನ್ನು ಹಾಕುತ್ತಲೇ ಇದ್ದೆ. ಅದನ್ನು ಕೇಳಿ ತಮ್ಮ ಪಾಠಶ್ರವಣಕ್ಕೆ ಆತಂಕ ಉಂಟಾದುದರಿಂದ ಕುಪಿತರಾದ ಉಳಿದ ಋಷಿಮುನಿಗಳೆಲ್ಲರೂ ನನಗೆ ಛೀಮಾಡಿ ಹೇಳಿದರು.-

''ವಾದ ರಂಗದಲ್ಲಿ ಪರಸ್ಪರ ಗೆಲ್ಲಬೇಕೆಂಬ ಜಿದ್ದಿನಿಂದ ವಾಕ್ಯಾರ್ಥ ವಿಚಾರವನ್ನು ಮಾಡತಕ್ಕ ವಾದಿ ಪ್ರತಿವಾದಿಗಳು ಮಾತ್ರ ಇಂಥ ಸ್ಪರ್ಧಾತ್ಮಕವಾದ ಒಗರಿನ ಭಾಷೆಯನ್ನು ನುಡಿಯಬಹುದು. ಆದರೆ ಪೂಜ್ಯರಾದ ಗುರುಗಳು ಅನುಗ್ರಹ ಪೂರ್ವಕವಾಗಿ ರಹಸ್ಯ ವಿಷಯಗಳ ಉಪದೇಶವನ್ನು ನೀಡುವಾಗ ಇಂಥ ಶಾಠ್ಯದ ಪ್ರಶ್ನೆಗಳನ್ನಾಗಲಿ ಉಪರೋಧಿ ಭಾಷೆಯನ್ನಾಗಲಿ ಆಡಬಾರದು'' ಎಂದು ನುಡಿದು ನನ್ನನ್ನು ತಡೆದರು. ಇಷ್ಟಾದರೂ ನಾನು ಅವರ ಮಾತನ್ನು ಲಕ್ಷಿಸದೇ ಆ ಶುಕಾಚಾರ್ಯರನ್ನು ಮತ್ತೆ ಮತ್ತೆ ಉದ್ಧಟತನದಿಂದ ಆಕ್ಷೇಪಿಸಹತ್ತಲು ಆ ಎಲ್ಲ ಮುನಿಗಳು ಕುಪಿತರಾಗಿ ನನ್ನನ್ನು ಶಪಿಸಿಬಿಟ್ಟರು. ಅದರಂತೆ ಆ ಶುಕಾಚಾರ್ಯರೂ ಕೂಡ ''ಪಕ್ಷಿಯಂತೆ ಬಾಯಿಗೆ ಬಂದಂತೆ ಬಡಬಡಿಸುವ ಈ ಮೂರ್ಖನು ಶುಕಪಕ್ಷಿಯಾಗಲಿ'' ಎಂದು ಕೋಪದಿಂದ ಶಾಪವನ್ನು ಕೊಟ್ಟರು. ಆಗ ಅಲ್ಲಿ ನೆರೆದ ಋಷಿಮುನಿಗಳೆಲ್ಲರೂ ಆ ಶುಕಾಚಾರ್ಯರಿಗೆ ''ಇವನನ್ನು ಕ್ಷಮಿಸಿರಿ ಕ್ಷಮಿಸಿರಿ'' ಎಂದು ಬೇಡಿಕೊಂಡರು. ಅದನ್ನು ಕೇಳಿ ಆ ಶುಕಮುನಿಗಳು ಬಲವಾಗಿ ತಲೆಯನ್ನು ಅಲುಗಾಡಿಸಿ - ''ನನ್ನ ಮಾತು ಎಂದಿಗೂ ಸುಳ್ಳಾಗದು. ಆದರೆ ನೀವೆಲ್ಲರೂ ಬಹಳ ಹೇಳಿಕೊಂಡದ್ದರಿಂದ ಇವನಿಗೆ ಪಕ್ಷಿರೂಪದಲ್ಲಿದ್ದಾಗಲೂ ದಿವ್ಯವಾಣಿ ಮತ್ತೂ ಧರ್ಮ ಜ್ಞಾನ ಹಾಗೂ ಒಳ್ಳೇ ವಿಚಾರ ವಿವೇಕಗಳು ಜಾಗ್ರತವಾಗಿ ಸುರಕ್ಷಿತವಾಗಿ ಉಳಿಯುವಂತೆ ಕರುಣಿಸುತ್ತೇನೆ. ಮತ್ತು ಆ ಗಿಳಿಯ ಜನ್ಮದಲ್ಲಿ ಇವನು ಮಧುರಾ ಮಂಡಲದಲ್ಲಿ ಮರಣವನ್ನು ಹೊಂದಿ ಮೋಕ್ಷಗಾಮಿಯಾಗುವನು'' ಎಂದು ಹೇಳಿದರು. ಹೀಗೆ ಶುಕಾಚಾರ್ಯರಿಂದ ಶಾಪವನ್ನೂ ವರವನ್ನೂ ಪಡೆದ ನಾನು ಈಗ ಗಿಳಿಯಾಗಿ ಅವರು ಹೇಳಿದ ಮಧುರಾ ಕ್ಷೇತ್ರವನ್ನು ನೆನೆಯುತ್ತ ಈ ಹಿಮಗಿರಿಯ ಗುಹೆಯಲ್ಲಿ ವಾಸಮಾಡುತ್ತಲಿದ್ದೇನೆ. ನನ್ನನ್ನು ಈ ಬೇಡನು ಹಿಡಿದು ಇಲ್ಲಿ ಪಂಜರದ ಬಂಧನದಲ್ಲಿರಿಸಿದ್ದಾನೆ. ನನ್ನನ್ನು ನೋಡಿ ಅವನ ಮಡದಿ ಮಕ್ಕಳೆಲ್ಲರೂ ಆನಂದ ಪಡುತ್ತಾರೆ. ಶುಕಾಚಾರ್ಯರ ಅನುಗ್ರಹದಿಂದ ನನಗೆ ಜನ್ಮಾಂತರದ ನೆನಪು ಮಲಿನವಾಗದೆ ಉಳಿದಿದೆ. ಆ ಜನ್ಮದಲ್ಲಿ ದೊಡ್ಡವರಿಗೆ ಮಾಡಿದ ಅಪಚಾರ ಅಪಮಾನ ರೂಪ ಅಪರಾಧದ ಕಟು ಫಲವನ್ನು ನಾನು ಈ ಜನ್ಮದಲ್ಲಿ ಅನುಭವಿಸುತ್ತಲಿದ್ದೇನೆ. ಭಾಗ್ಯವಂತನೇ, ದುರ್ದೈವಿಯಾದ ನನ್ನ ಈ ಕಟು ಕುಟಿಲವಾದ ಕಥೆಯನ್ನು ಕೇಳಿ ನೀನು ಮನದಿ ಮರಗಬೇಡ. ಕರುಳಿನಲ್ಲಿ ಕೊರಗಬೇಡ. ಇದನ್ನೆಲ್ಲ ಮರೆತು ಬಿಡು'' ಎಂದು ಮುಂತಾಗಿ

ಆ ಗಿಳಿಯು ಗೋಕರ್ಣನಿಗೆ ತನ್ನ ಕತೆಯನ್ನೆಲ್ಲ ಬಿತ್ತರಿಸಿ ಹೇಳಿತು. ಅದನ್ನು ಕೇಳಿ ಗೋಕರ್ಣನು ತಾನು ಮಧುರಾಕ್ಷೇತ್ರದವನೇ ಆಗಿದ್ದು ವ್ಯಾಪಾರ ಉದ್ಯೋಗಕ್ಕಾಗಿ ಕಡಲು ಪಯಣಮಾಡಿ ಮೂಡಣ ನಾಡಿನಲ್ಲಿಯೂ, ತೆಂಕಣ ಸೀಮೆಯಲ್ಲಿಯೂ ವ್ಯಾಪಾರ ಮಾಡಿಕೊಂಡು ಸ್ವಸ್ಥಾನವಾದ ಮಧುರಾ ಕ್ಷೇತ್ರಕ್ಕೆ ಹೊರಟಿದ್ದೇವೆ ಎಂದು ತಿಳಿಸಿದನು.

ಅದನ್ನು ಕೇಳಿ ಆ ಗಿಳಿಗೆ ತಾನು ಬಯಸಿದ ಭಾಗ್ಯವು ತನ್ನ ಬದಿಯಲ್ಲಿಯೇ ಬಂದು ನಿಂತುಕೊಂಡಂತಾಯಿತು. ಕೂಡಲೇ ಅದು ಗೋಕರ್ಣನಿಗೆ ಪುತ್ರರೂಪವಾಗಿ ತನ್ನನ್ನು ಸಮರ್ಪಿಸಿ ಬಿಟ್ಟಿತು. ಅಷ್ಟರಲ್ಲಿ ಒಳಗಿನಿಂದ ಆ ಗಿಳಿಯನ್ನು ಸಾಕಿದ ಬೇಡ ಹಾಗೂ ಬೇಡತಿಯರು ಎದ್ದು ಹೊರಗೆ ಬಂದರು. ಕೂಡಲೇ ಆ ಗಿಳಿಯು ಅವರಿಗೆ ಅತಿಥಿಯಾಗಿ ಬಂದ ಗೋಕರ್ಣನನ್ನು ಅತ್ಯಾದರದಿಂದ ಪೂಜಿಸಿ ಆತಿಥ್ಯ ಸೇವೆಯನ್ನು ಸರಿಯಾಗಿ ಮಾಡಬೇಕೆಂದು ತಿಳಿಸಿ ಹೇಳಿತು. ಆ ಗಿಳಿಯ ಬಾಯಿಂದ ಅತಿಥಿ ಸೇವೆಯ ಮಹತ್ವ ಮತ್ತು ಅತ್ಯಾವಶ್ಯಕ ಕರ್ತವ್ಯ ರೂಪತೆಯನ್ನು ತಿಳಿದು ಆ ಬೇಡ ದಂಪತಿಗಳು ಗೋಕರ್ಣನಿಗೆ ಮಧುರನುಡಿಯಿಂದ ಸ್ವಾಗತಕೋರಿದರು. ತನಿವಣ್ಣು ತಣ್ಣೀರು ಹೂಕಾಯಿಗಳನ್ನು ಅವನ ಮುಂದೆ ತಂದಿರಿಸಿ ಸ್ವೀಕರಿಸಬೇಕು ಎಂದು ಬೇಡಿಕೊಂಡರು. ಮತ್ತು ಗಂಡಹೆಂಡಿರಿಬ್ಬರು ಅತ್ಯಂತ ಭಕ್ತಿಯಿಂದ ಅತಿಥಿ ಪೂಜೆ ಮಾಡಿದರು. '' ತಮಗೆ ನಮ್ಮಿಂದ ಮತ್ತೇನು ಸೇವೆಯಾಗಬೇಕು ?'' ಎಂದು ಕೈ ಮುಗಿದು ಕೇಳಿ ಅವರಿಬ್ಬರೂ ವ್ಯಾಧ ದಂಪತಿಗಳು ಗೋಕರ್ಣನನ್ನು ಸತ್ಕರಿಸಿದರು. ಅವರ ಆತಿಥ್ಯದಿಂದ ಪ್ರೀತನಾದ ಗೋಕರ್ಣನು'' ನನಗೆ ಬೇರೇನೂ ಬೇಡ. ನೀನು ಏನನ್ನಾದರೂ ನನಗೆ ಕೊಡುವದಾದರೆ ನೀನು ನಿನ್ನ ಮನೆಯ ಪಂಜರದಲ್ಲಿ ಹಿಡಿದಿರಿಸಿದ ಆ ಗಿಳಿಯನ್ನು ನನಗೆ ಕೊಟ್ಟುಬಿಡು. ಅದನ್ನೇ ನಾನು ಆನಂದದಿಂದ ಮಗನೆಂದು ಸ್ವೀಕರಿಸುತ್ತೇನೆ. ಮತ್ತು ಮಧುರೆಗೆ ನನ್ನ ತಂದೆಯ ಸಮೀಪಕ್ಕೆ ಕರೆದೊಯ್ಯುತ್ತೇನೆ'' ಎಂದು ಹೇಳಿದನು. ಆಗ ಆ ಬೇಡನು ತುಸು ವಿಚಾರಿಸಿ'' ಅಯ್ಯಾ, ನಾನು ನಿನಗೆ ಚತುರಬುದ್ಧಿಯ ಈ ಚೆಲುವಿನ ಹಕ್ಕಿಯನ್ನು ಕೊಡುತ್ತೇನೆ. ಅದಕ್ಕೆ ಪ್ರತಿಯಾಗಿ ನೀನಾದರೂ ನನಗೆ ಯಮುನಾ ಸರಸ್ವತೀ ಸಂಗಮದಲ್ಲಿ ನೀನು ಮಾಡಿದ ಒಂದು ದಿನದ ಸ್ನಾನದ ಪುಣ್ಯವನ್ನು ಕೊಡಬೇಕು'' ಎಂದು ಬಿನ್ನವಿಸಿದನು.

**ಗೋಕರ್ಣ** :- ಆ ಸಂಗಮ ಸ್ನಾನದ ಮಹಿಮೆಯನ್ನು ನಿನಗಾರು ಬಣ್ಣಿಸಿ ಹೇಳಿದರು?

**ಬೇಡ** :- ನನ್ನ ಮನೆಯಲ್ಲಿರುವ ಈ ಗಿಳಿಯು ಮಧುರೆಯ ಮಹಿಮೆಯನ್ನೂ, ಸರಸ್ವತೀ ಯಮುನಾ ಸಂಗಮ ಸ್ನಾನದ ಫಲವನ್ನೂ, ದ್ವಾದಶೀವ್ರತದ ಮಾಹಾತ್ಮ್ಯವನ್ನೂ ನನಗೆ ತಿಳಿಸಿ ಹೇಳಿದೆ. ಎಂಥ ಪಾಪಿಯಾದರೂ ಯಾವದೇ ಪ್ರಾಣಿಯಾದರೂ ರಾಕ್ಷಸನಾದರೂ ಆ ಸಂಗಮ ತೀರ್ಥದಲ್ಲಿ ಸ್ನಾನ ಮಾಡಿ ಏಕಾದಶೀ ಉಪೋಷಣಗೈದು ದ್ವಾದಶೀ ಸ್ನಾನ ಭಗವತ್ಪೂಜೆಯನ್ನು ಮಾಡಿದರೆ ಹರಿಪದವನ್ನೈದುವರಂತೆ. ಆದುದರಿಂದ ನೀನು ನನಗೆ ಆ ಸರಸ್ವತೀ ಸಂಗಮದ ಸ್ನಾನ ಉಪವಾಸ ಉಪಾಸನೆಗಳ ಫಲವನ್ನು ಕೊಟ್ಟು ಕಾಪಾಡಬೇಕು.'' ಗೋಕರ್ಣನು ಆ ಬೇಡನ ಬಿನ್ನಹವನ್ನು ಮನ್ನಿಸಿ ತನ್ನ ಸ್ನಾನಪುಣ್ಯವನ್ನು ಆ ಪುಲಿಂದನಿಗೆ ಕೊಟ್ಟು ಅವನಿಂದ ಆ ಗಿಳಿಯನ್ನು ಪಡೆದು ತನ್ನ ಮಧುರಾಕ್ಷೇತ್ರಕ್ಕೆ ವ್ಯಾಪಾರಿ ಮಿತ್ರರೊಂದಿಗೆ ಮರಳಿ ಬಂದನು.

# ನಡುಗಡ್ಡೆಯಲ್ಲಿ ನಾರಿಯರ ನರ್ತನ

ಶ್ರೀ ವರಾಹ :- ಬಹು ಜಾಣನಾದ ಆ ಗೋಕರ್ಣನು ಆ ಬೆಟ್ಟದ ಬೇಡನಿಂದ ತನಗೆ ಬೇಕಾದ ಆ ಗಿಳಿಯನ್ನು ತೆಗೆದುಕೊಂಡು ಮಧುರಾಪಟ್ಟಣಕ್ಕೆ ಬಂದನು. ತನ್ನ ತಾಯಿತಂದೆಗಳಿಗೆ ಆ ಗಿಳಿಯ ಕೌತುಕದ ಕತೆಯನ್ನೆಲ್ಲ ಬಿತ್ತರಿಸಿದನು. ಹೀಗೆ ಹಲವು ದಿನ ಮಧುರೆಯಲ್ಲಿ ಸುಖದಿಂದ ಇದ್ದು ಕೆಲವು ದಿಗಳ ಬಳಿಕ ಅವನು ಮತ್ತೆ ರತ್ನದ ವ್ಯಾಪಾರಕ್ಕೆಂದು ಹೊರಟನು. ಸಮುದ್ರದ ಆಚೆಗಿರುವ ಅನೇಕ ದ್ವೀಪಗಳಲ್ಲಿ ವ್ಯಾಪಾರವನ್ನು ಮಾಡಿಕೊಂಡು ಬರಬೇಕೆಂದು ಅನೇಕ ಜನ ರತ್ನ ಪರೀಕ್ಷಕರಿಂದ ಒಡಗೂಡಿ ಆ ಗಿಳಿಯನ್ನು ಸಂಗಡ ಕರೆದುಕೊಂಡು ಒಂದು ಶುಭದಿನದಂದು ತಂದೆ ತಾಯಿಗಳ ಆಶೀರ್ವಾದವನ್ನು ಪಡೆದು ಪಯಣವನ್ನು ಬೆಳೆಸಿದನು. ಲವಣಸಾಗರದ ಅಪಾರ ನೀರ ರಾಶಿಯನ್ನು ಕೊರೆಯುತ್ತ ಮುನ್ನಡೆದ ಅವರ ಹಡಗವು ವೇಗದ ನಾಗಾಲೋಟದಿಂದ ಸಾಗಿತು. ಕೆಲವು ದಿನಗಳ ಬಳಿಕ ಒಂದು ದಿನ ಒಮ್ಮೆಲೇ ಬಿರುಗಾಳಿಯು ಬೀಸಿ ಸಾಗರವು ಪ್ರಕ್ಷುಬ್ಧವಾಯಿತು. ಗುಡ್ಡದಂಥ ದೊಡ್ಡ ದೊಡ್ಡತೆರೆಗಳು ರಾಕ್ಷಸಾಕಾರವಾಗಿ ಏರಿ ಬಂದು ಹಡಗವನ್ನು ತೆರೆಯ ತಿರುಗಣಿಯಲ್ಲಿ ತೂರಿ ಒಗೆದವು. ನಾವಿಕರೆಲ್ಲರೂ ಸಂಭ್ರಾಂತರಾಗಿ ಮುಂದೇನು ಗತಿ ಎಂದು ಚಿಂತಾಕ್ರಾಂತರಾದರು. ಅವರ ಗಾಬರಿಗೆಟ್ಟ ಮುಖ ಹಾಗೂ ಕಳವಳದ ಮಾತುಗಳನ್ನು ಕೇಳಿಯೇ ಹಡಗದಲ್ಲಿಯ ಜನರೆಲ್ಲರೂ ಧೈರ್ಯಗೆಟ್ಟು ಕಳೆಗುಂದಿ ಕುಸಿದು ಬಿದ್ದರು. ಹಲವರು ಮೂರ್ಛಿತರಾದರು. ಹೀಗೆಯೇ ಆ ನೌಕೆಯು ನೀರು ಗಾಳಿಗಳೊಡನೆ ಹೋರಾಡುತ್ತ ಸಾವು ಬದುಕುಗಳ ಜೋಕಾಲಿಯಲ್ಲಿ ಜೀಕಾಡುತ್ತ ನೀರನ್ನು ನೂಕುತ್ತ ಹೊಯ್ದಾಡುತ್ತ ನಡೆಯಿತು. ಆ ಹಡಗದಲ್ಲಿದ್ದವರು ''ನಮ್ಮಲ್ಲಿ ಯಾವನೋ ಒಬ್ಬ ಮಹಾ ಪಾಪಿಯು ಇರುತ್ತಾನೆ. ಅವನು ಈ ನೌಕೆಯನ್ನು ಏರಿದ್ದರಿಂದ ಇದು ಇಂಥ ಜಲಗಂಡಾಂತರಕ್ಕೆ ಈಡಾಗಿದೆ'' ಎಂದು ಮಾತನಾಡಿಕೊಳ್ಳತೊಡಗಿದರು. ಇದನ್ನು ಕೇಳಿ ಹೃದಯದಲ್ಲಿ ಕಸಿವಿಸಿಗೊಂಡ ಗೋಕರ್ಣನು ತನ್ನ ಗಿಳಿ ಇರುವಲ್ಲಿ ಬಂದು ದೈನ್ಯದಿಂದ ಹೇಳಿದನು - ''ಗಿಣಿರಾಮ, ಈ ನೌಕೆಯಲ್ಲಿ ಇರುವ ಪಾಪಿ ಎಂದರೆ ನಾನೇ. ಮಗನಿಲ್ಲದ ದೌರ್ಭಾಗ್ಯವ್ಯಕ್ತಿಯಾದ ಈ ಗೋಕರ್ಣನಿಂದಲೇ ಈ ಹಡಗಿನಲ್ಲಿರುವ ಜನರಿಗೆಲ್ಲ ಇಂಥ ದುಃಖ ದುರವಸ್ಥೆಗಳು ಬಂದಿರುತ್ತವೆ. ಶಾಸ್ತ್ರ ಅಭ್ಯಾಸದಿಂದ ಹರಿತಮತಿ ಯುಳ್ಳವನಾದ ನೀನು ಈಗ ನಾನೇನು ಮಾಡಬೇಕು ಹೇಳು.''

ಗೋಕರ್ಣನ ಆ ಭೀತಿಯುಕ್ತವಾದ ಮಾತುಗಳನ್ನು ಕೇಳಿ ಗಿಳಿಯು ಗದ್ಗದಿತವಾಗಿ ನುಡಿಯಿತು.- ''ತಂದೆ ಗೋಕರ್ಣ, ನೀನು ಗಾಬರಿಯಾಗಬೇಡ. ನಾನೆಲ್ಲ ಮಾಡಬೇಕಾದುದನ್ನು ಮಾಡುತ್ತೇನೆ. ನಿನ್ನನ್ನು ಈ ಸಲಿಲ ಸಂಕಟದಿಂದ ಪಾರುಗಾಣಿಸುತ್ತೇನೆ. ಇನ್ನು ಮೇಲೆ ನೀನು ವ್ಯರ್ಥವಾಗಿ ಚಿಂತಿಸುವದು ಬೇಡ. ದುಃಖಿಸುವದೂ ಬೇಡ.'' ಹೀಗೆ ತನ್ನ ತಂದೆಯಾದ ಗೋಕರ್ಣನಿಗೆ ಹೇಳಿ ಸಮಾಧಾನ ಮಾಡಿ ವೀರಧೀರ ಪಕ್ಷಿಯಾದ ಆ ಕೀರವು ಹಕ್ಕನೆ ಗಗನಕ್ಕೆ ಹಾರಿತು. ಧ್ರುವ ನಕ್ಷತ್ರವಿರುವ ದಿಕ್ಕನ್ನು ಪಕ್ಕನೆ ಗುರುತಿಸಿಕೊಂಡಿತು. ಕೂಡಲೇ ಗರಿಗೆದರಿ ಉತ್ತರಾಭಿಮುಖವಾಗಿ

ಹಾರಾಡುತ್ತ ಹೊರಟುಹೋಯಿತು. ಹೀಗೆ ಘೋರವಾದ ವಾರಿಧಿಯ ವಾರಿವಿಸ್ತಾರವನ್ನು ಹಾರುತ್ತ ಸಾರುತ್ತ ಮೀರುತ್ತ ಮುಂದೆ ಹೋದ ಬಳಿಕ ಅದರ ಕಣ್ಣಿಗೆ ದೂರಿಂದ ಒಂದು ಪರ್ವತಮಾಲೆಯು ಕಾಣಿಸಿತು. ಅದನ್ನು ಕಂಡು ಹರ್ಷಭರಿತವಾದ ಆ ಶುಕವು ಹುರುಪುಗೊಂಡು ಹಾರಿ ಅಲ್ಲಿಗೆ ಹೋಯಿತು. ಆ ಪರ್ವತದ ತಪ್ಪಲು ಪ್ರದೇಶದಲ್ಲಿ ಒಂದು ವಿಷ್ಣುವಿನ ದೇವಾಲಯವಿದ್ದಿತು. ಭಾವುಕವಾದ ಆ ಶುಕಪಕ್ಷಿಯು ಆ ಹರಿ ಮಂದಿರದ ಗುಡಿಗೋಪುರ ಪ್ರಾಕಾರಗಳಿಗೆಲ್ಲ ಪ್ರದಕ್ಷಿಣೆ ಹಾಕಿ ಒಳಗೆ ಹೊಕ್ಕಿತು.

ಅಷ್ಟರಲ್ಲಿ ಕೈಯಲ್ಲಿ ಭಂಗಾರದ ಪೂಜೆಯ ಪಾತ್ರೆಯನ್ನು ಹಿಡಿದು ದೇವಿಯೊಬ್ಬಳು ಅಲ್ಲಿಗೆ ಬಂದಳು. '' ನಮೋ ನಾರಾಯಣಾಯ '' ಎಂದು ಹೇಳಿ ಅವಳು ದೇವನಿಗೆ ನಮಿಸಿದಳು. ಭಕ್ತಿಯಿಂದ ಪೂಜಿಸಿದಳು. ಅನಂತರ ಅಲ್ಲಿಯೇ ಇದ್ದ ಒಂದು ಆಸನದ ಮೇಲೆ ಕುಳಿತುಕೊಂಡಳು. ಮುಂದೆ ಅರೆಚಣದಲ್ಲಿ ಅನೇಕ ಜನ ಸುರಸುಂದರಿಯರಂತಿರುವ ತರುಣ ತರಳೆಯರು ತಂಡತಂಡವಾಗಿ ಅಲ್ಲಿಗೆ ಬಂದರು. ಮಧುರವಾಗಿ ಹಾಡಿದರು. ದೇವ ದೇವನನ್ನು ಪಾಡಿದರು. ಭಕ್ತಿಯಿಂದ ಕೊಂಡಾಡಿದರು. ಹೆಜ್ಜೆ ಹಾಕಿದರು. ಗೆಜ್ಜೆ ನುಡಿಸಿದರು. ನೃತ್ಯ ಮಾಡಿದರು. ನಾಟ್ಯವಾಡಿದರು. ಬಗೆಬಗೆಯ ವಾದ್ಯಗಳನ್ನು ಬಾರಿಸಿದರು. ಆರತಿಯನ್ನು ಎತ್ತಿದರು. ಮಂಗಳ ಗೀತೆಗಳನ್ನು ಹೇಳಿದರು. ಹೀಗೆ ಪೂಜಾಸೇವೆಯನ್ನು ಸಲ್ಲಿಸಿ ಮತ್ತೆ ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು.

ಆ ದೇವಾಲಯದ ಬಲಬದಿಯಲ್ಲಿ ದೊಡ್ಡದಾದ ಒಂದು ಜಟಾಯು ಪಕ್ಷಿಗಳ ಗುಂಪು ನೆಲೆಸಿದ್ದು ಕಂಡಿತು. ಕೂಡಲೆ ಈ ಗಿಳಿಯು ಅಲ್ಲಿಗೆ ಹಾರಿಹೋಗಿ ಆ ಜಟಾಯು ಪಕ್ಷಿಗಳಿಗೆ ಮೊರೆ ಹೊಕ್ಕಿತು. ಘೋರ ಗಂಭೀರವಾದ ಸಮುದ್ರದ ಮಧ್ಯದಲ್ಲಿ ಸಂಕಟಕ್ಕೆ ಗುರಿಯಾದ ತನ್ನ ಒಡೆಯನ ಗೋಳು ಗಂಡಾಂತರಗಳನ್ನು ಅವುಗಳಿಗೆ ಹೇಳಿಕೊಂಡಿತು. ''ಈ ಜಲ ಗಂಡಾಂತರದಿಂದ ನನ್ನ ಒಡೆಯನನ್ನು ಹೇಗಾದರೂ ಮಾಡಿ ಪಾರು ಮಾಡಿರಿ'' ಎಂದು ಕೇಳಿಕೊಂಡಿತು. ಗಿಳಿಯ ಆ ದೀನ ಯಾಚನೆಯನ್ನು ಕೇಳಿ ಆ ಹಕ್ಕಿಗಳ ಹೃದಯವು ಹಿಂಡಿ ಹೋಯಿತು. ಅವುಗಳಲ್ಲಿಯ ಒಂದು ಜಟಾಯು ಪಕ್ಷಿಯು ಗೋಕರ್ಣನನ್ನು ಸಮುದ್ರ ಮಧ್ಯದಿಂದ ಪಾರುಮಾಡಲು ಮುಂದಾಯಿತು. ಗಿಳಿಯ ಜೊತೆಗೆ ಸಮುದ್ರದ ಮಧ್ಯದಲ್ಲಿ ಹೊಯ್ದಾಡುತ್ತಿರುವ ಹಡಗಿನ ಬಳಿಯಲ್ಲಿ ಬಂದಿತು. ''ನನ್ನ ಹೆಜ್ಜೆಯ ಮೇಲೆ ಹೆಜ್ಜೆಯನ್ನಿರಿಸುತ್ತ ನೀರಿನ ಮೇಲೆಯೇ ನಡೆದು ಬರಬೇಕು'' ಎಂದು ನಿನ್ನ ಒಡೆಯ ಗೋಕರ್ಣನಿಗೆ ತಿಳಿಸು '' ಎಂದು ಗಿಳಿಗೆ ಹೇಳಿತು.

ಜೀವದ ಆಶೆ ಬಿಟ್ಟು ಹಡಗಿನಲ್ಲಿ ಹೌಹಾರಿ ನಿಂತ ಗೋಕರ್ಣನು ಗಿಳಿಯ ಈ ಸೂಚನೆಗೆ ಒಪ್ಪಿಕೊಂಡನು. ಮೊದಲು ಹಡಗಿನಿಂದ ಜಟಾಯು ಪಕ್ಷಿಯು ಸಾಗರದ ನೀರಿನ ಮೇಲೆ ಹೆಜ್ಜೆ ಇರಿಸಿತು. ಅದರ ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟು ಗಿಳಿಯೂ ನಡೆಯತೊಡಗಿತು. ಅದನ್ನು ನೋಡಿ ಅವೆರಡೂ ಮುಳಗಲಿಲ್ಲ ಎಂದು ಖಾತ್ರಿ ಮಾಡಿಕೊಂಡು ಗೋಕರ್ಣನೂ ತನ್ನ ಕಾಲನ್ನು ಇರಿಸಿದನು. ಅವನ ಕಾಲು ನೀರಿನಲ್ಲಿ ಕುಸಿಯಲಿಲ್ಲ. ಹೀಗೆಯೇ ಮುಂದೆ ಮುಂದೆ ಜಟಾಯು, ಅದರ ಹಿಂದೆ ಗಿಳಿರಾಮ, ಅದರ ಹಿಂದೆ ಗೋಕರ್ಣ, ಮೂವರೂ ನೆಲದ ಮೇಲೆ ನಡೆದಂತೆ ಜಲದ ಮೇಲೆಯೂ

ಮೆಲ್ಲಡಿ ಇಡುತ್ತ ನಡೆಯುತ್ತ ಸಾಗರವನ್ನು ದಾಟಿದರು. ಭಕ್ತನು ಸಂಸಾರವನ್ನು ದಾಟುವಂತೆ ಗೋಕರ್ಣನು ಆ ಕಡಲನ್ನು ದಾಟಿ ಆ ಹಕ್ಕಿಗಳ ಹಿಂದೆ ಹಿಂದೆ ಸಾಗಿ ಸಾಗರ ತೀರದ ಆ ಪರ್ವತವನ್ನು ತಲುಪಿದನು. ಆ ಗುಡ್ಡದ ಮಧ್ಯದಲ್ಲಿರುವ ವಿಷ್ಣು ದೇವಾಲಯದ ಬಳಿ ಸಾರಿದನು. ಅಲ್ಲಿಯ ತುಂಬುತಾವರೆಯ ಪುಷ್ಕರಣಿಯನ್ನು ಕಂಡು ಅದರಲ್ಲಿ ಸ್ನಾನ ಮಾಡಿದನು. ಅನಂತರ ದೇವಪೂಜೆ, ಪಿತೃತರ್ಪಣ ಮುಂತಾದ ತನ್ನ ನಿತ್ಯಾಹ್ನಿಕಗಳನ್ನು ಮುಗಿಸಿಗೊಂಡು ಆ ವಿಷ್ಣುದೇವಾಲಯದಲ್ಲಿ ಗಿಳಿಯು ಹೇಳಿದಂತೆ ಮರೆಯಲ್ಲಿ ನಿಂತುಕೊಂಡನು. ಅಷ್ಟರಲ್ಲಿ ಅಲ್ಲಿ ಒಬ್ಬ ಮಹಾದೇವಿಯು ಬಂದಳು. ಅವಳು ಶ್ರೀ ವಿಷ್ಣುವಿನ ಪೂಜೆ ಮಾಡುತ್ತಲಿರುವಾಗಲೇ ಅನೇಕ ಚಲುವಿನ ಚಿಟ್ಟೆಗಳಂತಿದ್ದ ಲಲನೆಯರು ಅಲ್ಲಿಗೆ ಬಂದು ದುಂಡಾಗಿ ನಿಂತು ತಮ್ಮ ಲೀಲಾ ಲಾಲಿತ್ಯದಿಂದ ದೇವನಿಗೆ ನಮಿಸಿ ನುತಿಸಿದರು. ಹಾಡಿಪಾಡಿದರು. ಮಣಿದು ಕುಣಿದರು. ಭಜಿಸಿ ಪೂಜಿಸಿದರು. ಅವರ ಈ ಎಲ್ಲ ಸಂಗೀತ ಸೇವೆ ನರ್ತನ ಸೇವೆಗಳನ್ನು ಶ್ರೀ ಹರಿಗೆ ಸಲ್ಲಿಸುವದಾದ ಬಳಿಕ ಆ ಎಲ್ಲ ಚಿಗರೆಗಂಗಳ ಚೆಲುವೆಯರ ಒಡತಿಯಾದ ಮೊದಲು ಬಂದ ಮಹಾದೇವಿಯು ಅವರಿಗೆ ಅಣತಿಯನ್ನು ಇತ್ತಳು.-

''ಸಖಿಯರೇ, ಇಲ್ಲಿ ಗೋಕರ್ಣನೆಂಬ ಓರ್ವ ಭಕ್ತನು ಬಂದಿದ್ದಾನೆ. ಅವನಿಗೆ ಸ್ವಾಗತ ಹೇಳಿರಿ. ಹಸಿವೆಯಿಂದ ಕಂಗಾಲನಾದ ಆತನಿಗೆ ಹಣ್ಣುಹಂಪಲಗಳನ್ನು ನೀಡಿರಿ. ಕುಡಿಯಲು ಸಿಹಿ ನೀರನ್ನು ಕೊಡಿರಿ. ಮೂರು ತಿಂಗಳ ವರೆಗೆ ಅವನು ಇಲ್ಲಿದ್ದು ಶ್ರೀ ವಿಷ್ಣುವಿನ ಸೇವೆಯನ್ನು ಮಾಡುವಂತೆ ಅವನಿಗೆ ಸರ್ವ ವಿಧವಾದ ಊಟ ಉಪಹಾರ, ಸ್ನಾನಪಾನ, ಆಸಶನ ವಸನ, ಎಲ್ಲ ಬಗೆಯಾದ ಸೌಕರ್ಯವನ್ನು ಮಾಡಿಕೊಡಿರಿ. ಅವನಿಗೆ ಬೇಕಾಗಬಹುದಾದ ವಸ್ತುಗಳನ್ನೆಲ್ಲ ಇಲ್ಲಿ ಸಿದ್ಧಪಡಿಸಿರಿ. ಇಲ್ಲಿಯ ಶ್ರೀಹರಿಯ ಸೇವೆಯಿಂದ ಅವನ ದುಃಖ ದೈನ್ಯಗಳೆಲ್ಲ ದೂರಾಗಲಿ. ಪಾಪ ಮೋಹಗಳೆಲ್ಲ ಪರಿಹಾರವಾಗಲಿ.''

ಒಡತಿಯ ಅಪ್ಪಣೆಯಂತೆ ಅವಳ ಆ ಸಖೀ ಸುಂದರಿಯರು ಎಲ್ಲ ಸಿದ್ಧತೆಯನ್ನು ಮಾಡಿಟ್ಟು ಗೋಕರ್ಣನಿಗೆ ಹೇಳಿದರು.- '' ನೀನು ಹೆದರಬೇಡ. ಇಲ್ಲಿ ಸುಖವಾಗಿಯೇ ವಾಸಮಾಡಿ ದೇವರ ಸೇವೆ ಮಾಡು. ಸಿದ್ಧಿಯಾಗುವವರೆಗೂ ಸಾಗಲಿ ನಿನ್ನ ದೇವ ಸೇವೆಯು. ಯಾವದಕ್ಕೂ ಸಂಕೋಚಬೇಡ. ನಿನಗೆ ಜೀವಿಸಲು ಮತ್ತೂ ದೇವನನ್ನು ಸೇವಿಸಲು ಬೇಕಾಗಬಹುದಾದ ವಸ್ತುಗಳೆಲ್ಲವೂ ಇಲ್ಲಿ ಅಣಿ ಮಾಡಿ ಇರಿಸಲ್ಪಟ್ಟಿವೆ.''

ಹೀಗೆ ಹೇಳಿ ಆ ದೇವಿಯರು ಎಲ್ಲರೂ ಹೊರಟು ಹೋದರು. ಗೋಕರ್ಣನು ಅಲ್ಲಿಯೇ ವಾಸ ಮಾಡಿ ಶ್ರೀ ವಿಷ್ಣುವಿನ ಸೇವೆಯನ್ನು ಮಾಡತೊಡಗಿದನು. ಆ ಎಲ್ಲ ಮುಗುದೆಯರು ಅನುದಿನವೂ ಅಲ್ಲಿಗೆ ಬಂದು ಎಂದಿನಂತೆ ಶ್ರೀ ವಿಷ್ಣುವಿಗೆ ತನ್ನ ಸೇವೆಯನ್ನು ಸಲ್ಲಿಸಿ ಹೋಗುತ್ತಿದ್ದರು. ಗೋಕರ್ಣನಾದರೂ ಮಧುರೆ ಯಲ್ಲಿದ್ದಂತೆಯೇ ಆ ದೇವಾಲಯದಲ್ಲಿಯಾದರೂ ಹರಿಸೇವೆಯನ್ನು ಮಾಡುತ್ತ ಸುಖವಾಗಿ ವಾಸ ಮಾಡಿದನು. ಇತ್ತ ಅವನು ಬಿಟ್ಟು ಬಂದ ಆ ಹಡಗವು ಗೋಕರ್ಣನು ಸಲ್ಲಿಸುವ ಶ್ರೀ ಹರಿ ಸೇವೆಯ ಪ್ರಭಾವದಿಂದ ಅಂಥ ಜಲ ಪ್ರಳಯದಲ್ಲಿಯೂ ಅಳಿಯದೇ ಉಳಿಯಿತು. ಆ ಭೀಕರ ಬಿರುಗಾಳಿಯು ಒಮ್ಮೆಲೇ ಶಾಂತವಾಯಿತು.

ಮಂಗಳಕರವಾದ ತಂಗಾಳಿಯು ಬೀಸಿ ಆ ನೌಕೆಯನ್ನು ರತ್ನ ದ್ವೀಪದೆಡೆಗೆ ನೂಕಿಕೊಂಡು ಹೋಯಿತು. ಆ ರತ್ನ ದ್ವೀಪದೆಡೆಗೆ ನೂಕಿ ನೆಲಕಂಡ ಹಡಗಿನಲ್ಲಿಯ ಜನರೆಲ್ಲರೂ ಹಿಗ್ಗಿ ಹೂವಾಗಿ ಅಲ್ಲಿರುವ ಮಣಿಮಾಣಿಕ್ಯಗಳ ಗಣಿಗಳಿದ್ದಲ್ಲಿ ನುಗ್ಗಿದರು. ಅನರ್ಘ್ಯವಾದ ಅಸಂಖ್ಯ ರತ್ನಗಳನ್ನು ಹಡಗಿನಲ್ಲಿ ತುಂಬಿದರು. ಹಡಗಿನಲ್ಲಿ ರತ್ನಗಳ ರಾಶಿಯನ್ನೇ ಹಾಕಿಕೊಂಡು ಅವರು ಮರಳಿ ಸ್ವದೇಶಕ್ಕೆ ಹೊರಟರು. ತಮ್ಮ ಗುಂಪಿನಲ್ಲಿಯೇ ನಿಜವಾದ ರತ್ನ ಪರೀಕ್ಷಕನಾದ ಗೋಕರ್ಣನು ಈಗ ತಮ್ಮ ನಡುವೆ ಇಲ್ಲದಿರುವದು ಹಡಗಿನ ಯಾತ್ರಿಕರಿಗೆ ಬಹಳ ದುಃಖವಾಯಿತು. '' ನಮ್ಮನ್ನೆಲ್ಲ ಕರೆದುಕೊಂಡು ಬಂದ ಆ ಗೋಕರ್ಣನನ್ನು ಬಿಟ್ಟು ನಾವು ಊರಿಗೆ ಹೇಗೆ ಹೋಗೋಣ'' ಎಂದು ಅವರೆಲ್ಲರೂ ನೆನೆದು ಅತ್ತರು. '' ನಾವು ತಂದ ರತ್ನ ರಾಶಿಯಲ್ಲಿ ಹೆಚ್ಚಿನ ಭಾಗವನ್ನು ಅವನ ತಂದೆ ತಾಯಿ ಮತ್ತು ಮಡದಿ ಮನೆಯವರಿಗೆ ಒಪ್ಪಿಸಿ ಬಿಡೋಣ '' ಎಂದು ಅವರು ನಿರ್ಧರಿಸಿದರು. ಅತ್ತ ದ್ವೀಪಾಂತರದಲ್ಲಿ ವಿಷ್ಣು ದೇವಾಲಯದಲ್ಲಿ ಹರಿಸೇವೆಯನ್ನು ಮಾಡುತ್ತ ವಾಸಮಾಡಿದ ಗೋಕರ್ಣನಿಗೆ ಮನೆಮಡದಿಯರ ನೆನಪು ಕಾಡತೊಡಗಿತು. '' ನನ್ನನ್ನು ನೆನೆದು ಮುಪ್ಪಿನ ತಾಯಿ ತಂದೆಗಳು ಎಷ್ಟು ದುಃಖ ಪಡುತ್ತಿರುವರೋ ಏನೋ '' ಎಂದು ಅವನು ಮನದಲ್ಲಿ ಪರಿತಪಿಸಿದನು. ಕೊನೆಗೆ ಅವನು ತನ್ನ ಮಗನಂತಿದ್ದ ಆ ಗಿಳಿಮರಿಗೆ ''ಪುತ್ರಾ, ನೀನು ಮಧುರಾ ಪುರಿಗೆ ಹೋಗಿ ನಾನು ಬದುಕಿ ಇದ್ದ ಸಮಾಚಾರವನ್ನು ನನ್ನ ತಾಯಿ ತಂದೆಗಳಿಗೆ ತಿಳಿಸಿ ಬಾ. ನಾನು ನಿನ್ನನ್ನು ಬಿಟ್ಟು ಬಹು ದಿನ ಬದುಕಿ ಇರಲಾರೆ. ಬೇಗನೇ ಮರಳಿ ಬಾ '' ಎಂದು ಹೇಳಿದನು.

ಅವನ ಅಪ್ಪಣೆಯಂತೆ ಆ ಗಿಳಿಯು ಸಮುದ್ರದ ಮೇಲಿಂದ ಹಾರುತ್ತ ಮಧುರಾ ಪಟ್ಟಣಕ್ಕೆ ಬಂದಿತು. ಮಧುರೆಯಲ್ಲಿ ಗೋಕರ್ಣನ ತಾಯಿ ತಂದೆಗಳು ಇಷ್ಟು ದಿನವಾದರೂ ಮಗನ ಸುದ್ದಿಯೇ ಗೊತ್ತಾಗದ್ದರಿಂದ ಅವನು ಸತ್ತೇ ಹೋದನೆಂದು ಭಾವಿಸಿ ದುಃಖ ಪಡುತ್ತಿದ್ದರು. ಆ ಗಿಳಿಯು ಅಲ್ಲಿಗೆ ಬಂದು ಗೋಕರ್ಣನು ಇಂಥ ದ್ವೀಪದ ಹರಿಮಂದಿರದಲ್ಲಿ ಸುರಕ್ಷಿತವಾಗಿ ಇರುವನೆಂಬ ಸಮಾಚಾರವನ್ನು ತಿಳಿಸಿತು. ಅದನ್ನು ಕೇಳಿ ಆ ಮನೆಯ ಜನರಿಗೆಲ್ಲ ಕಳೆದುಹೋದ ಜೀವವು ಮರಳಿ ಬಂದಂತಾಯಿತು. ಅಷ್ಟರಲ್ಲಿ ಗೋಕರ್ಣನ ಜೊತೆಗೆ ಹಡಗಿನಲ್ಲಿ ಹೋದ ವೈಶ್ಯರ ಗುಂಪು ಸುಖ ರೂಪವಾಗಿ ಮಧುರಾಪಟ್ಟಣಕ್ಕೆ ಬಂದು ನೆಲೆಸಿತು. ಅವರೆಲ್ಲರೂ ತಾವು ಹಡಗಿನಲ್ಲಿ ತುಂಬಿಕೊಂಡು ಬಂದ ರತ್ನದ ರಾಶಿಯಲ್ಲಿ ಬಹು ದೊಡ್ಡ ಭಾಗವನ್ನು ಗೋಕರ್ಣನ ತಾಯಿತಂದೆಯರಿಗೆ ಒಪ್ಪಿಸಿದರು. ಇದಲ್ಲದೇ ಪ್ರತಿಯೊಬ್ಬರೂ ತಮ್ಮ ಪಾಲಿನಲ್ಲಿಯ ಒಳ್ಳೊಳ್ಳೆ ಇಪ್ಪತ್ತು ಇಪ್ಪತ್ತು ರತ್ನಗಳನ್ನು ಅವರಿಗೆ ತಂದು ಕೊಟ್ಟರು. ಮತ್ತು ಆ ಎಲ್ಲ ವೈಶ್ಯರೂ ವಸುಕರ್ಣನನ್ನೂ ಮತ್ತು ಅವನ ಮಡದಿಯನ್ನೂ ತಮ್ಮ ತಂದೆ ತಾಯಿಗಳೆಂದು ತಿಳಿದು ಪರಿಪರಿಯಿಂದ ಸೇವೆ ಮಾಡತೊಡಗಿದರು.

## ರೂಪವಳಿದ ಕಾಂತಿಕಳೆದ ಬಳ್ಳಿ ಮೈಯ ಭವಣೆಯು

**ವರಾಹ** :- ಗೋಕರ್ಣನು ಆ ವಿಷ್ಣು ದೇವಾಲಯದಲ್ಲಿ ಒಂದು ಶುಭ ಮಾಸದಲ್ಲಿ ಹದಿಮೂರು ದಿನ ಹರಿಸೇವೆಯನ್ನು ಮಾಡಿದನು. ಪ್ರತಿದಿನವೂ ಸೌಂದರ್ಯದ

ರಾಣಿಯಂತಿರುವ ಆ ತರುಣಿಯರ ತಂಡವು ಅಲ್ಲಿಗೆ ಬಂದು ಹಾಡು ಕುಣಿತಗಳಿಂದ ಆರತಿ ಅಕ್ಷತೆಗಳಿಂದ ದೇವರ ಸೇವೆ ಮಾಡಿ ಹೋಗುತ್ತಿದ್ದರು. ಅವರ ಚೆಲುವು ಚಲ್ಲಾಟ, ಹಾಡು ಕುಣಿತ, ಮಧುರಾಲಾಪ, ಮೋಹಕ ವಿಲಾಸಗಳನ್ನು ಕಂಡು ಗೋಕರ್ಣನಿಗೂ ಪರಮಾನಂದವಾಗುತ್ತಿತ್ತು. ಅವನಿಗೂ ಗಂಧರ್ವ ರಮಣಿಯರಂತಿದ್ದ ಆ ಸುಂದರಿಯರ ಲೀಲಾಲಾಸ್ಯ, ಪೂಜೋಪಾಸನೆ ಮತ್ತು ಮಧುರ ಹಾಸ್ಯಗಳನ್ನು ಕಂಡು ಕೇಳಿ ಮನೆಯ ನೆನಪು ಕಡಿಮೆ ಆಯಿತು. ಆದರೆ ಒಂದುದಿನ ಒಮ್ಮಿಂದೊಮ್ಮೆ ಅವನು ಆ ಎಲ್ಲ ಅಂಗನೆಯರ ಸಂಘವು ತೇಜೋ ಭಂಗವಾದಂತೆ ಕಳೆಗೆಟ್ಟು ಕಾಂತಿಗೆಟ್ಟು ಹೀನದೀನರಾಗಿ ನಿಂತದ್ದನ್ನು ಕಂಡನು. ಅವರ ಮುಖದಲ್ಲಿ ಹಿಂದಿನ ಚೆಲುವು ಇರಲಿಲ್ಲ. ಒಲವು ಇರಲಿಲ್ಲ. ನಲಿವು ಇರಲಿಲ್ಲ. ಗೆಲವು ಇರಲಿಲ್ಲ. ಅವರ ಸೌಂದರ್ಯವು ಅಡಗಿ ಹೋಗಿತ್ತು. ಅವರ ಉತ್ಸಾಹ ಉಡುಗಿ ಹೋಗಿತ್ತು. ಅವರ ಉಡುಗೆ ತೊಡಿಗೆಗಳೆಲ್ಲ ಹರಕು ಚಿಂದೆಯಾಗಿದ್ದವು. ದೇಹವು ಬೀಳಾಗಿತ್ತು. ರೂಪವು ಹಾಳಾಗಿತ್ತು. ತಲೆಯು ಬೋಳಾಗಿತ್ತು. ಕಣ್ಣಿನ ಎವೆ ಉಗುರುಗಳಿಂದ ರಕ್ತವು ಸೋರುತ್ತಿತ್ತು. ಮೈಮೇಲೆ ಅಲ್ಲಲ್ಲಿ ಹುಣ್ಣುಗಳಾಗಿ ರಕ್ತ ಕೀವು ಹರಿಯುತ್ತಿತ್ತು. ಹಿಂದೆ ರೂಪರಾಣಿಯರಂತಿದ್ದ ಆ ಸುಂದರಿಯರೆಲ್ಲರೂ ಇಂದು ಇಂಥ ವೈರೂಪ್ಯದ ಪ್ರೇತಗಳಂತೆ ಬೀತು ಬಾತು ತನ್ನೆದುರು ಸೋತು ನಿಂತದ್ದನ್ನು ಕಂಡು ಗೋಕರ್ಣನಿಗೆ ಗಾಬರಿಯಾಯಿತು. ಇದೆಲ್ಲ ಆ ಶುಭಾಂಗಿನಿಯರಿಗೆ ಇಂಥ ದುರಂತವು ಒದಗಿ ಬಂದದ್ದು ನಿಪುತ್ರಿಕನಾದ ತನ್ನ ಸಹವಾಸದ ಫಲ ಎನಿಸಿತು. ದುರ್ದೈವಿಯಾದ ನನ್ನನ್ನು ನಂಬಿದ ತಂದೆ, ತಾಯಿ, ಮಡದಿ, ಮನೆಯವರ ಪಾಡು ಹಾಗಾದರೆ ಹಡಗಿನಲ್ಲಿ ಜೊತೆಗೆ ಬಂದ ಸಂಗಡಿಗರು ಸಮುದ್ರದ ಪಾಲಾಗುವ ಪ್ರಸಂಗ ಬಂದಿತು. ಈ ನಡುಗಡ್ಡೆಗೆ ಬಂದು ಈ ವಿಷ್ಣುವಿನ ದೇವಸ್ಥಾನದಲ್ಲಿ ನಾನು ವಾಸ ಮಾಡಿದರೆ ನನ್ನ ದುರ್ದೈವದ ಝಳತಾಕಿ ಇಷ್ಟು ದಿನ ಇಲ್ಲಿ ಸುಖವಾಗಿ ಇದ್ದ ಈ ದೇವಿಯರಿಗೆಲ್ಲ ಇಂಥ ದುರವಸ್ಥೆಯು ಪ್ರಾಪ್ತವಾಯಿತು. ಪಾಪಿಯಾದ ನನ್ನ ಸಹವಾಸದಿಂದ ಈ ತರಳೆಯರಿಗೆಲ್ಲ ಪ್ರಾಣಾಂತಿಕ ಪ್ರಸಂಗವು ಬಂದಿತಲ್ಲ '' ಎಂದು ಮಮ್ಮಲನೇ ಮರುಗಿ ಅವನು ಅವರ ಬಳಿಗೆ ಬಂದು ಕೇಳಿದನು.- ''ಪೂಜ್ಯರಾದ ಪ್ರಮದಾ ಮಣಿಗಳೇ, ನಿಮಗೆ ಇಂಥ ದುರವಸ್ಥೆಯು ಬರಲು ಕಾರಣವೇನು ? ತಿಳಿಸಿರಿ ''

**ದೇವಿಯರು** :- ಮಹಾನುಭಾವನೇ ! ಇದರಲ್ಲಿ ಕೇಳುವದೇನಿದೆ ? ಎಲ್ಲದಕ್ಕೂ ಕಾಲರೂಪಿಯಾದ ಆ ಪರಮಾತ್ಮನೇ ಕಾರಣನಾಗಿದ್ದಾನೆ. ನಮ್ಮ ನಮ್ಮ ಕರ್ಮದ ಫಲವನ್ನು ನಾವು ಅನುಭವಿಸುತ್ತಿದ್ದೇವೆ.'' ಗೋಕರ್ಣನು ಈ ರೀತಿಯಾಗಿ ದಿನಾಲೂ ಪ್ರಶ್ನಿಸುತ್ತಿದ್ದರೂ ಅವರು ನಿಜವಾದ ಕಾರಣವನ್ನು ಹೇಳದೇ ತಾವೇ ದುಃಖ ಪಡುತ್ತಲಿದ್ದರು. ಕೊನೆಗೆ ಒಂದು ದಿನ ಗೋಕರ್ಣನು ಪಟ್ಟು ಹಿಡಿದು '' ಆರ್ತನಾದ ನನಗೆ ನೀವು ನಿಮ್ಮ ಈ ವೈರೂಪ್ಯ ಹಾಗೂ ದುರ್ದೆಸೆಯ ಕಾರಣವನ್ನು ಹೇಳದಿದ್ದರೆ ನಾನೀಗ ಕಡಲಿಗೆ ಹಾರಿ ಕೂಡಲೇ ಪ್ರಾಣವನ್ನು ನೀಗುತ್ತೇನೆ '' ಎಂದು ಹೇಳಿದನು. ಅವನ ಈ ಆಗ್ರಹವನ್ನು ನೋಡಿ ಆ ಮಹಿಳೆಯರು ಕಂಬನಿದುಂಬಿ ನುಡಿದರು. ''ಮಗನೇ, ನಮ್ಮ ದುಃಖವನ್ನು ಯಾರು ಪರಿಹರಿಸಬಲ್ಲರೋ ಅವರೆದುರು ಹೇಳಿದರೆ

ಮಾತ್ರ ಸಾರ್ಥಕ. ಕಂಡವರ ಎದುರು ನಮ್ಮ ಹೃದಯ ಕುಂಡದಲ್ಲಿಯ ಅಳಲು ಉರಿಯನ್ನು ತೋಡಿಕೊಂಡರೆ ಏನು ಫಲ ! ಆದರೂ ನೀನು ಬಹಳ ಒತ್ತಾಯ ಪಡಿಸಿದ್ದರಿಂದ ಹೇಳುತ್ತೇವೆ. ಕೇಳು.

ಈ ಭೂಮಂಡಲದಲ್ಲಿ ಮಾನವರಿಗೆ ಮೋಕ್ಷವನ್ನು ತಂದುಕೊಡುವ ಮಧುರಾಪುರಿ ಎಂಬ ರಮಣೀಯವಾದ ಒಂದು ಕ್ಷೇತ್ರವು ಇರುತ್ತದೆ. ಅಯೋಧ್ಯೆಯ ಒಡೆಯನಾದ ಶೂರ ಸಮ್ರಾಟನೊಬ್ಬನು ಯಾತ್ರಾರ್ಥಿಯಾಗಿ ಆ ಮಧುರಾಪುರಿಗೆ ಬಂದನು. ಚಾತುರ್ಮಾಸ್ಯ ಕಾಲದಲ್ಲಿ ಆ ದೊರೆಯು ತನ್ನ ಚತುರಂಗ ಸೈನ್ಯದೊಂದಿಗೆ ಪರಮ ರಮಣೀಯವಾದ ಆ ಮಧುರಾ ಪಟ್ಟಣದಲ್ಲಿ ಬೀಡುಬಿಟ್ಟನು. ಆ ಪಟ್ಟಣದಲ್ಲಿ ಐದು ವಿಷ್ಣು ದೇವಾಲಯಗಳು ಇರುತ್ತವೆ. ಅವುಗಳ ಸುತ್ತುಮುತ್ತು ಉತ್ತಮ ಪ್ರಾಕಾರದಿಂದ ಸುತ್ತುವರಿಯಲ್ಪಟ್ಟ ನಿರ್ಮಲವಾದ ಉದ್ಯಾನಗಳು ಕಂಗೊಳಿಸುತ್ತಿದ್ದವು. ಆ ಉಪವನಗಳಲ್ಲಿ ಅನೇಕ ತಿಳಿನೀರಿನ ಕೊಳಗಳು ಅಲ್ಲಲ್ಲಿ ತಳತಳಿಸುತ್ತಲಿದ್ದವು. ಆ ಸಿಹಿನೀರಿನ ಬಾವಿಗಳಿಂದ ಜಲಯಂತ್ರಗಳ ಮುಖಾಂತರ ಕಿರುಗಾಲುವೆಗಳಲ್ಲಿ ನೀರನ್ನು ತುಂಬಿಸಿ ಅಲ್ಲಿಯ ಎಲ್ಲ ಗಿಡಬಳ್ಳಿಗಳ ಅಡಿ ಹುಡಿಯವರೆಗೆ ನೀರು ತಾನಾಗಿ ತಲುಪುವಂತೆ ವ್ಯವಸ್ಥೆಯನ್ನು ಮಾಡಲಾಗಿತ್ತು. ಅದರಿಂದ ಆ ಉಪವನಗಳಲ್ಲಿ ಎಲ್ಲೆಡೆಗೆ ನಿತ್ಯ ನಿರಂತರವೂ ಹೂ, ಹಣ್ಣು, ಹಸಿರು ಕುಸಿರು, ಚಿಗುರು ಹೊಗರೇರಿ ಕುಡಿಮಿಡಿ ಎಲೆ ತಳಿರು ಮುಂತಾದವುಗಳಿಂದ ಗಿಡಬಳ್ಳಿಗಳು ತೊನೆದು ತೂಗುತ್ತಿದ್ದವು. ಫಲಭಾರದಿಂದ ಬಾಗುತ್ತಿದ್ದವು. ಸುಗಂಧ ವಾಸನೆಯಿಂದ ಅಲ್ಲಿ ಬೀಸುವ ತಂಗಾಳಿಯು ಯಾವಾಗಲೂ ಕಂಪಿಂಪುಗಳ ಸೊಂಪನ್ನೇ ಸೂಸಿ ಸೊಗಯಿಸುತ್ತಿತ್ತು. ಎಲ್ಲ ಋತುಗಳು ಅಲ್ಲಿ ಮೇಳವಿಸಿ ಹನ್ನೆರಡೂ ತಿಂಗಳೂ ಹಣ್ಣು ಹೂ ಸುಗಂಧಗಳ ಸುಗ್ಗಿಯೇ ಅಲ್ಲಿ ಲಾಸ್ಯವಾಡುತ್ತಿತ್ತು.

ಇಂಥ ಚೆಲುವಿನ ಚೈತ್ರವು ಎಲ್ಲೆಡೆಗೂ ಪಲ್ಲವಿಸಿ ನಿಂತ ಆ ನರಲೋಕದ ನಂದನ ವನಗಳನ್ನು ಅಲ್ಲಿ ಯಾತ್ರಾರ್ಥಿಯಾಗಿ ಬಂದ ಅಯೋಧ್ಯೆಯ ಅರಸನ ಭಂಡ ದಂಡಾಳುಗಳು ನುಗ್ಗಿ ಹಾಳು ಮಾಡಿದವು. ಅಲ್ಲಿಯ ತೋಟಗಾರನ ಮಡದಿ ತಾಯ್ತಂದೆಗಳು ಎಷ್ಟು ಬೇಡವೆಂದು ಬೇಡಿಕೊಂಡರೂ ಕೇಳದೇ ಗರ್ವಾಂಧರಾದ ರಾಜಭಟರು ಆ ವನವನ್ನೆಲ್ಲ ತೊತ್ತುಳಿದು, ಗಿಡಬಳ್ಳಿಗಳನ್ನೆಲ್ಲ ಕಿತ್ತು ಬೀಸಾಡಿ, ಆ ನಂದನವನ್ನೆಲ್ಲ ವಿಧ್ವಂಸಗೈದರು. ಆ ಉಪವನಗಳನ್ನೆಲ್ಲ ಈ ರೀತಿಯಾಗಿ ಸುಂದರವಾಗಿ ನಿರ್ಮಾಣ ಮಾಡಿದ ಒಡೆಯನು ದೇಶಾಂತರದ ಪಂಜರದಲ್ಲಿ ಸಿಕ್ಕ ಸಿಂಹದಂತೆ ಒದ್ದಾಡುತ್ತ ಬಿದ್ದಿದ್ದಾನೆ. ಅಯ್ಯೋ, ನಮ್ಮನ್ನು ಈ ಸಂಕಟದಿಂದ ಉಳಿಸುವವರು ಯಾರು? ಬೆಳೆಸುವವರು ಯಾರು ? ಅಪ್ಪ ! ದುರ್ದೈವದಿಂದ ನಾವೆಲ್ಲರೂ ಹಾಳಾದೆವು. ಗತಿ ಇಲ್ಲದೇ ಬೀಳಾದೆವು. ಹುಲ್ಲು ಕಡ್ಡಿಗಿಂತ ಕೀಳಾದೆವು. ಅಕಟಕಟ ! ನಮ್ಮನ್ನು ಇನ್ನು ಕೇಳುವವರು ಯಾರು ? ಕಾಯುವವರು ಯಾರು ? '' ಎಂದು ಹೇಳಿ ಆ ಹೆಣ್ಣು ಮಕ್ಕಳೆಲ್ಲರೂ ದೊಡ್ಡ ದನಿತೆಗೆದು ಅಳಹತ್ತಿದರು.

ಅವರೆಲ್ಲರ ಆ ಆರ್ತ ವಿಲಾಪವನ್ನು ಕೇಳಿ ಗೋಕರ್ಣನ ಕರುಳು ಹಿಂಡಿತು. ಕಂಬನಿದುಂಬಿತು. ದನಿಕೂತಿತು. ಕೊರಳು ಬಿಗಿದು ಬಂದಿತು. ಕೂಡಲೇ ಅವನು ಎದ್ದು

ಪ್ರತಿಯೊಬ್ಬ ಅಂಗನೆಯ ಅಂಗಾಲು ಮುಂಗಾಲುಗಳನ್ನು ಹಿಡಿದು, ಸವರಿ, ನಮಿಸಿ, ರಮಿಸಿ, ಸಂತೈಸಿ, ಶಾಂತರಾಗಬೇಕೆಂದು ಬಿನ್ನವಿಸಿದನು. ಮೂರ್ಛಿತರಾದಂತೆ ನೆಲದುದ್ದಕ್ಕೂ ಉರುಳಿ ಹೊರಳಿ ನರಳುತ್ತಿರುವ, ದುಃಖ ತುಂಬಿ ಗೋಳಿಡುತ್ತಲಿರುವ ಆ ಎಲ್ಲ ಲಲನಾಮಣಿಗಳನ್ನು ಸಮಾಧಾನ ಪಡಿಸುತ್ತ ಇಂತು ನುಡಿದನು.

''ಸಾಧ್ವೀಮಣಿಗಳೇ, ಮಾಡುವದೇನು ! ನಾನು ಆಗ ಅಲ್ಲಿ ಇದ್ದರೆ ಆ ರಾಜದೂತರನ್ನೆಲ್ಲ ತಡೆಯುತ್ತಿದ್ದೆ. ಆ ವನ ವಿನಾಶವನ್ನು ನಿಲ್ಲಿಸುತ್ತಿದ್ದೆ. ನನ್ನ ಜೀವ ನಾಡಿಗಳಿಂತಿದ್ದ ಆ ಗಿಡ ಬಳ್ಳಿಗಳನ್ನೆಲ್ಲ ಕಾಪಾಡುತ್ತಿದ್ದೆ. ಮಾಡುವದೇನು ! ನನ್ನ ದುರ್ದೈವ. ವಿಧಿಯು ಅಲ್ಲಿಂದ ನನ್ನನ್ನು ತೂರಿ ಬೇರೆಲ್ಲಿಯೋ ದೂರ ಬೀಸಿ ಒಗೆದಿದೆ. ಇಲ್ಲಿ ಕುಳಿತಲ್ಲಿಯೇ ನನ್ನ ಅವಸ್ಥೆ, ಅಲ್ಲಿ ಆ ವನದ ಅವಸ್ಥೆ ಎರಡೂ ಮುಗಿದಿದೆ.'' ಗೋಕರ್ಣನ ಈ ಮಾತುಗಳನ್ನು ಕೇಳಿ ನೆಲದುದ್ದ ಶವ ಪ್ರಾಯರಾಗಿ ಬಿದ್ದುಕೊಂಡ ಆ ಬಳ್ಳಿಮೈಬಾಲೆಯರೆಲ್ಲರೂ ಚಟ್ಟನೆ ಚೇತರಿಸಿಕೊಂಡು ಎದ್ದುಕುಳಿತರು. ದುಃಖ ದಟ್ಟಿಸಿ ಬಂದ ಅವರೆಲ್ಲರೂ ಒಟ್ಟಾಗಿ ಅವನನ್ನುಕೇಳಿದರು.- ''ನೀನು ಯಾರು ? ಎಲ್ಲಿಂದ ಬಂದೆ ? ಏಕೆ ಬಂದೆ ? ನೀನು ಇಲ್ಲಿಗೆ ಬರಲು ಕಾರಣವೇನು ? ಅವರ ಈ ಆತುರದ ಪ್ರಶ್ನೆಗಳನ್ನು ಕೇಳಿ ಗೋಕರ್ಣನು ಖಿನ್ನ ವಿಷಣ್ಣನಾಗಿ ನುಡಿದನು.-

''ಮಂಗಲಾಂಗಿಯರೇ, ನನ್ನ ಹೆಸರು ಗೋಕರ್ಣ. ನೀವು ಈ ಮೊದಲು ಸೌಂದರ್ಯದ ರಾಣಿಯರಂತೆ ಅಂಗಾಂಗಗಳಿಂದ ಚೆಲುವು ನಲಿವುಗಳನ್ನು ಸೂಸುತ್ತ ಅನಂಗನ ಅರ್ಧಾಂಗಿನಿಯರಂತೆ ಕಂಗೊಳಿಸುತ್ತಿದ್ದಿರಿ. ಈಗ ಒಮ್ಮೆಲೇ ಬುಡಕಡಿದ ಕಾಡು ಬಳ್ಳಿಗಳು ಸುಡುವ ಬಿಸಲಿಗೆ ಬಾಡಿ ಹುಡಿ ಗೂಡಿ ಹೋಗುವಂತೆ ನೀವೆಲ್ಲರೂ ಕುರೂಪಿಗಳಾಗಿ ಕಳೆಗೆಟ್ಟು ಕಾಂತಿಸುಟ್ಟು ನಿಶ್ಚೇತನರಾಗಿ ಬಿದ್ದಿದ್ದೀರಿ. ಇದಕ್ಕೆಲ್ಲ ನಾನೇ ಕಾರಣ ಎಂದು ಹೇಳಿರಿ.'' ಗೋಕರ್ಣನ ಈ ಮಾತುಗಳನ್ನು ಕೇಳಿ ಆ ಮಹಿಳೆಯರ ಬಳಗದಲ್ಲಿಯೇ ಮಹಾದೇವಿಯಂತೆ ತೋರುವ ಓರ್ವ ಬಳ್ಳಿದೋಳಿನ ಭಾಮಿನಿಯು ಮುಂದೆ ಬಂದು ಗೋಕರ್ಣನಿಗೆ ಹೇಳಿದನು.-

''ಗೋಕರ್ಣ, ಆ ಮಧುರಾ ಪುರಿಯ ಹರಿ ಮಂದಿರಗಳ ಸುತ್ತಮುತ್ತಲು ಹಬ್ಬಿಕೊಂಡಿದ್ದ ಉಪವನಗಳ ವನದೇವಿಯರೇ ನಾವು. ಈ ನನ್ನ ಸಖಿಯರೆಲ್ಲರೂ ಅಲ್ಲಿಯ ಒಂದೊಂದು ಗಿಡಬಳ್ಳಿಗಳ ಅಧಿದೇವತೆಯರೆಂದು ತಿಳಿ. ದುಷ್ಟರಾದ ಆ ರಾಜಭಟರು ಅಲ್ಲಿಯ ಎಲ್ಲ ಹೂವಿನಬಳ್ಳಿಗಳನ್ನೂ ಹರಿದು, ತರಿದು, ಹೊಡೆದು, ಕಡಿದು, ಜಗ್ಗಿನುಗ್ಗಿ, ಎತ್ತಾಡಿ, ಕಿತ್ತಾಡಿ, ಹಾಳುಮಾಡಿದ್ದರಿಂದ ನಮಗೆ ಈ ದುರವಸ್ಥೆಯು ಉಂಟಾಗಿದೆ. ಆ ಉಪವನಗಳು ಮೊದಲು ಹೂ ಚಿಗುರು ಕುಡಿಮಿಡಿಗಳಿಂದ ಕಾತು ಹೂತು ಕಳಿಕಳಿಸುತ್ತಿದ್ದಾಗ ನಾವಾದರೂ ಚೆಲುವು ನಲಿವು ಒನಪು ವೈಯಾರಗಳಿಂದ ತುಳುಕಿ ಬಳಕಾಡುವ ಶೃಂಗಾರಮೂರ್ತಿಗಳಂತೆ ಕಂಗೊಳಿಸುತ್ತಿದ್ದೆವು. ಅಲ್ಲಿ ಅರಸರ ಆಳುಗಳು ಆ ಉಪವನಗಳ ನಾಡಿಗಳಂತಿದ್ದ ಗಿಡಬಳ್ಳಿಗಳನ್ನು ಕಡಿದು ಕತ್ತರಿಸಿ ಕಿತ್ತಾಡಿ ಈಡಾಡಿ ದೌಡು ಮಾಡಿದ್ದರಿಂದ ನಾವೆಲ್ಲರೂ ಈಗ ಹಾಳಾಗಿ ಬೀಳಾಗಿ ಬೋಳಾಗಿ ತೋರುತ್ತಿದ್ದೇವೆ. ನಮ್ಮ ಅಂಗಾಂಗಗಳಿಂದ ರಕ್ತವು ಸೋರುತ್ತಲಿದೆ. ಸತ್ಪುರುಷನೇ, ಆ

ಉದ್ಯಾನವನದ ಪ್ರತಿಯೊಂದು ಗಿಡಬಳ್ಳಿಗಳಿಗೂ ಕಿರುಗಾಲುವೆಗಳ ಮುಖಾಂತರ ಜೀವರಸವನ್ನು ಪೂರೈಸುವ ಅಲ್ಲಿಯ ಸರೋವರ ಮತ್ತು ಬಾವಿಗಳನ್ನು ಯಮದೂತರಂತಿದ್ದ ಆ ರಾಜ ದೂತರು ನಾಶಮಾಡಿಬಿಟ್ಟಿದ್ದರಿಂದ ನಮ್ಮ ಪ್ರಾಣರಸವೇ ಬತ್ತಿದಂತಾಗಿದೆ. ಅದರಿಂದಲೇ ನಮಗೆ ಇಂಥ ವೈರೂಪ್ಯವು ಪ್ರಾಪ್ತವಾಗಿದೆ.'' ಅವರ ಆ ಮಾತುಗಳನ್ನು ಆಲಿಸಿ ಗೋಕರ್ಣನಿಗೆ ''ಗಿಡ ನೆಡುವದು, ಬಳ್ಳಿಗಳನ್ನು ಬೆಳೆಸುವದು, ಬಾವಿಗಳನ್ನು ತೋಡಿಸುವದು, ಕೆರೆ ಕಾಲುವೆಗಳನ್ನು ಕಟ್ಟಿಸುವದು, ಅದರಂತೆ ಹೊಲನೆಲಗಳಲ್ಲಿ ಬೆಳೆ ಬೆಳೆಸುವದು, ಗಿಡಬಳ್ಳಿಗಳನ್ನು ಹಚ್ಚಿ, ಕಾಪಾಡುವದು, ಒಂದೊಂದೂ ಎಂಥ ದೊಡ್ಡ ಪುಣ್ಯದ ಕೆಲಸ !'' ಎಂದು ಅನಿಸಿತು. ಅದರಿಂದ ಅವನು ಆ ವನದೇವತೆಯರಿಗೆ ಪ್ರಶ್ನೆ ಮಾಡಿದನು - ''ಕೈದೋಟ ಮಾಡಿದವನಿಗೂ ಹೂದೋಟ ಬೆಳೆಸಿದವನಿಗೂ ಯಾವ ಫಲ ? ಬಾವಿ ತೋಡಿಸಿದರೆ ಎಂಥ ಪುಣ್ಯ ? ದೇವರ ಗುಡಿಯನ್ನು ಕಟ್ಟಿಸಿದರೆ ಬರುವ ಪುಣ್ಯವಾವದು ? '' ಆಗ ಬಳ್ಳಿ ಭಾಮಿನಿಯರಲ್ಲಿ ಹಿರಿಯಳಾದವಳು ತುಸು ಮುಂದೆ ಸರಿದು ಇಂತು ನುಡಿದಳು-

**ಇಷ್ಟಾಪೂರ್ತಂ ದ್ವಿಜಾತೀನಾಂ ಪ್ರಥಮಂ ಧರ್ಮಸಾಧನಂ ।**
**ಇಷ್ಟೇನ ಲಭತೇ ಸ್ವರ್ಗಂ ಪೂರ್ತೇ ಮೋಕ್ಷಂ ಚ ವಿಂದತಿ ॥**
**ವಾಪೀಕೂಪತಟಾಕಾನಿ ದೇವತಾಯತನಾನಿ ಚ ।**
**ಪತಿತಾನ್ಯುದ್ಧರೇದ್ಯಸ್ತು ಸಪೂರ್ತ ಫಲಮಶ್ನುತೇ ॥**
**ಭೂಮಿದಾನೇನ ಯೇ ಲೋಕಾ ಗೋದಾನೇನ ಚ ಕೀರ್ತಿತಾಃ ।**
**ತೇ ಲೋಕಾಃ ಪ್ರಾಪ್ಯತೇ ಪುಂಭಿಃ ಪಾದಪಾನಾಂ ಪ್ರರೋಹಣೇ ॥**

ಅಶ್ವತ್ಥಮೇಕಂ ಪಿಚುಮಂದಮೇಕಂ ನ್ಯಗ್ರೋಧಮೇಕಂ ದಶ ಪುಷ್ಪಜಾತೀಃ ।
ದ್ವೇ ದ್ವೇ ತಥಾ ದಾಡಿಮ ಮಾತುಲಿಂಗೇ ಪಂಚಾಮ್ರರೋಪೀ ನರಕಂ ನಯಾತಿ ॥
ಯಥಾ ಸುಪುತ್ರಃ ಕುಲಮುದ್ಧರೇದ್ದಿ ಯಥಾತಿಕೃಚ್ಛ್ರಾನ್ನಿಯಮ ಪ್ರಯತ್ನಾತ್।
ತಥಾತ್ರ ವೃಕ್ಷಾಃ ಫಲಪುಷ್ಪ ಭೂತಾಃ ಸ್ವಂ ಸ್ವಾಮಿನಂ ನರಕಾದುದ್ಧರಂತಿ ॥

ಗೋಕರ್ಣ, 'ಇಷ್ಟ ಆಪೂರ್ತ ' ಎಂದು ಧರ್ಮವು ಎರಡು ಬಗೆಯಾಗಿದೆ. ಯಜ್ಞಾದಿ ಕರ್ಮರೂಪವಾದ ಇಷ್ಟದಿಂದ ಸ್ವರ್ಗ ಸುಖವು ದೊರಕುತ್ತದೆ. ಕೆರೆ ಕಾಲುವೆಗಳನ್ನು ಕಟ್ಟಿಸುವದು ಪೂರ್ತ ಎನಿಸುತ್ತದೆ. ಕೆರೆ, ಕೊಳ, ಬಾವಿ, ದೇವಾಲಯಗಳನ್ನು ಕಟ್ಟಿಸುವವರು ಪೂರ್ತ ಕರ್ಮದ ಪೂರ್ತಿಫಲವನ್ನು ಪಡೆಯುತ್ತಾರೆ. ಭೂದಾನ, ಗೋದಾನಗಳಿಂದ ದೊರೆಯುವ ಫಲವು ಬರಿ ಮರಬಳ್ಳಿಗಳನ್ನು ಹಚ್ಚಿ ಬೆಳಸುವದರಿದ ಬರುತ್ತದೆ. ಒಂದು ಅರಳೆಯ ಮರವನ್ನಾಗಲಿ ಒಂದು ಬೇವಿನ ಮರವನ್ನಾಗಲಿ ಒಂದು ಆಲದ ಮರವನ್ನಾಗಲಿ ಅಥವಾ ಹತ್ತು ಜಾತಿಯ ಹೂ ಬಳ್ಳಿಗಳನ್ನಾಗಲಿ ಇಲ್ಲವೆ ಎರಡೆರಡು ದಾಳಿಂಬ ಅಥವಾ ಮಾದಲದ ಗಿಡಗಳನ್ನಾಗಲಿ ಇಲ್ಲವೆ ಐದು ಮಾವಿನ ಮರಗಳನ್ನಾಗಲಿ ಬೆಳಸಿದವನು ಎಂದೂ ನರಕಕ್ಕೆ ಹೋಗುವದಿಲ್ಲ. ಒಳ್ಳೇ ಮಗನು ಹುಟ್ಟಿ ಶಾಸ್ತ್ರೋಕ್ತ ನಿಯಮಗಳನ್ನು ಅನುಷ್ಠಾನ ಮಾಡಿ ತನ್ನ ಕುಲವನ್ನು ಉದ್ಧರಿಸುವಂತೆ ಈ ನೆಲದಲ್ಲಿ ಬೀಜವೂರಿ ಬೆಳಸಿ ಕಾಪಾಡಿದ

ಗಿಡಬಳ್ಳಿಗಳೂ ಕೂಡ ತಮ್ಮ ಒಡೆಯನನ್ನು ಎಂದೂ ನರಕದಲ್ಲಿ ಬೀಳದಂತೆ ಉದ್ಧಾರಮಾಡುವವು.'' ಆ ಲತಾ ಲಲನೆಯರ ಈ ಮಾತುಗಳನ್ನು ಕೇಳಿ ಹುಟ್ಟಿನಿಂದಲೇ ಪ್ರಕೃತಿ ಪೂಜಾರಿಯಾದ ಗೋಕರ್ಣನಿಗೆ ವೃಕ್ಷ ಜಾತಿಯ ವಿಷಯದಲ್ಲಿ ಆದರವು ಇಮ್ಮಡಿಸಿತು. ಅವನು ಮರಬಳ್ಳಿಗಳ ಮಹಿಮೆಯನ್ನು ಮೈದುಂಬಿ ಹೇಳತೊಡಗಿದನು. -

''ಮಾನವರಂತೆ ಮರಗಳೂ ಕೂಡ ಪರೋಪಕಾರ ರೂಪವಾದ ಪಂಚಮಹಾ ಯಜ್ಞವನ್ನು ಮಾಡುತ್ತವೆ. ಗಿಡದ ಕಟ್ಟಿಗೆಗಳನ್ನು ಜನರು ಕಡಿದು ತಂದು ಸ್ನಾನ ಭೋಜನಕ್ಕಾಗಿ ಉರಿಸುವದು ಆ ವೃಕ್ಷಗಳ ಅಗ್ನಿಹೋತ್ರ ಎನಿಸುವದು. ದಾರಿಗಳೆಲ್ಲವೂ ಮರಗಳ ನೆರಳಿನಲ್ಲಿ ವಿಶ್ರಾಂತಿಯನ್ನು ಹೊಂದುವವು. ಹಕ್ಕಿಗಳು ಗಿಡಗಳ ತೋಪುಝಾಡುಗಳಲ್ಲಿ ಗೂಡುಗಟ್ಟಿ ಬೀಡುಬಿಡುವವು. ಗಿಡಬಳ್ಳಿಗಳ ಎಲೆ, ಬೇರು, ತೊಗಟೆ ಮೊದಲಾದವುಗಳು ಪ್ರಾಣಿಗಳಿಗೆ ಔಷಧ ರೂಪವಾಗಿ ಉಪಯೋಗಕ್ಕೆ ಬರುವವು. ಮರಗಳ ಬೊಡ್ಡೆ ಮತ್ತು ಟೊಂಗೆಗಳು ಮನೆಮಾರು, ಪೆಟ್ಟಿಗೆ, ಕಪಾಟು, ಪಲ್ಲಕ್ಕಿ, ಪಾತ್ರೆ, ಆಸನ, ದೇವರಪೀಠ ಮುಂತಾದ ಬಗೆ ಬಗೆಯ ರೀತಿಯಿಂದ ಉಪಯೋಗಕ್ಕೆ ಬರುವವು. ಇದೇ ಆ ವನಸ್ಪತಿ ಪ್ರಪಂಚದ ಪಂಚಮಹಾ ಯಜ್ಞ ಎನಿಸುವದು. ಪ್ರಪಂಚದಲ್ಲಿರುವ ಹಕ್ಕಿಗಳೆಲ್ಲವೂ ಪ್ರಾಯಃವೃಕ್ಷವನ್ನೆ ಆಶ್ರಯಿಸಿ ವರುಷಕ್ಕೆ ಎರಡು ಸಲ ಮೊಟ್ಟೆ ಇಟ್ಟು ಗಿಡದ ಗೂಡುಗಳಲ್ಲಿಯೇ ತಮ್ಮ ಸಂಸಾರ ಹೂಡಿ ತಮ್ಮ ಸಂತಾನವನ್ನು ಬೆಳೆಸುವವು. ಆ ಪಕ್ಷಿ ಪ್ರಪಂಚಕ್ಕೆಲ್ಲ ವೃಕ್ಷವೃಂದವೇ ಮುಖ್ಯ ನಾಡು. ವಾಸಿಸುವ ಬೀಡು. ನಿರ್ಭಯವಾದ ಗೂಡು. ಇದರಂತೆ ಮೇಕೆ, ಜಿರಾಫೆ, ಒಂಟೆ, ಚಿಗರೆ, ಕುದುರೆ, ಆನೆ ಮುಂತಾದ ಹಲವಾರು ಪಶುಗಳಿಗೆ ಮತ್ತು ಹೊಲದ ಬೆಳೆಗಳಿಗೆ ಗಿಡದೆಲೆಗಳು ಆಹಾರವಾದರೆ ಮಾನವ ಮತ್ತು ಅನೇಕ ಪ್ರಾಣಿಗಳು ಗಿಡಗಳಲ್ಲಿಯ ಹಣ್ಣುಹಂಪಲಗಳನ್ನು ತಿಂದು ಜೀವಿಸುತ್ತವೆ. ಹೀಗೆ ಎಲ್ಲ ಪ್ರಾಣಿಗಳಿಗೂ ಪರೋಪಕಾರಕವಾದ ಗಿಡಬಳ್ಳಿಗಳನ್ನು ಹಚ್ಚುವದೂ ಬೆಳೆಸುವದೂ ಒಳ್ಳೇ ಪುಣ್ಯ ಕೆಲಸವಾಗಿರುತ್ತದೆ.'' ಹೀಗೆ ವೃಕ್ಷಗಳ ಮಹಿಮೆಯನ್ನು ಮೈದುಂಬಿ ಬಣ್ಣಿಸುತ್ತ ಗೋಕರ್ಣನು '' ಇಂಥ ಪರಮೋಪಕಾರಕವಾದ ನಮ್ಮ ಉಪವನದಲ್ಲಿಯ ಗಿಡಗಳೆಲ್ಲವೂ ಹಾಳಾಗಿ ಹೋದವಲ್ಲ ! ಇದೆಂಥಹ ಕಠಿಣ ಪ್ರಸಂಗವು ಬಂದಿತು ! '' ಎಂದೆನ್ನುತ್ತ ಮೂರ್ಛಿತನಾಗಿ ಬಿದ್ದು ಬಿಟ್ಟನು. ಆಗ ಆ ದೇವಿಯರೆಲ್ಲರೂ ಅವನ ಬಳಿಗೆ ಬಂದು ಅವನ ಮೈಮೇಲೆ ತಣ್ಣೀರನ್ನು ಚಿಮುಕಿಸಿ ಗಾಳಿ ಬೀಸಿ ಶೈತ್ಯೋಪಚಾರವನ್ನು ಮಾಡಿದರು. ಅದರಿಂದ ಸಾವಧಾನವಾಗಿ ಚೇತರಿಸಿಕೊಂಡು ಎದ್ದು ಕುಳಿತ ಗೋಕರ್ಣನಿಗೆ ಅವರೆಲ್ಲರೂ ಆತುರಾತುರವಾಗಿ ಪ್ರಶ್ನಿಸಿದರು.

''ನೀನು ಯಾರು ? ಎಲ್ಲಿಂದ ಬಂದೆ ? ಏತಕ್ಕೆ ಬಂದೆ ? ಇಲ್ಲಿಗೇಕೆ ಬಂದೆ ? ಎಲ್ಲವನ್ನು ನಮಗೆ ಹೇಳು '' ಎಂದು ಮತ್ತೆ ಕೇಳಿದರು. ಆಗ ಗೋಕರ್ಣನು ಸಾವರಿಸಿಕೊಂಡು ಎದ್ದು ಕುಳಿತು ಆ ಲತಾಂಗಿಯರಿಗೆ ಹೇಳಿದನು-

''ಮಾನಿನಿಯರೇ ! ನಾನು ಮಧುರಾಮಂಡಲದ ವೈಶ್ಯ. ನನ್ನ ಹೆಸರು ಗೋಕರ್ಣ. ಮನೆಯಲ್ಲಿ ಮುದುಕ ತಾಯಿತಂದೆಯರನ್ನು ಬಿಟ್ಟು ವ್ಯಾಪಾರಕ್ಕಾಗಿ ಹೊರಟಿದ್ದೆನು. ನನಗೆ

ಐವರು ಮಡದಿಯರು ಇರುತ್ತಾರೆ. ನೀವು ಹೇಳುವ ಶ್ರೀ ವಿಷ್ಣುವಿನ ಪಂಚಾಯತನ ದೇವಸ್ಥಾನವು ನನ್ನದು. ಅದರ ಸುತ್ತುಮುತ್ತಲಿನ ನಂದನವನದಂತೆ ಸುಂದರವಾದ ಉಪವನಗಳೂ ನನ್ನವೇ. ನನಗೆ ಮತ್ತೆ ಮಧುರಾ ಪಟ್ಟಣಕ್ಕೆ ಹೋಗುವ ಭಾಗ್ಯ ದೊರೆತರೆ ಆ ರಾಜದೂತರನ್ನು ತಡೆದು ನಿಮಗೆ ಬಂದ ಸಾವು ನೋವುಗಳನ್ನು ತಪ್ಪಿಸುವೆನು. ಆ ಅಯೋಧ್ಯೆಯ ಅರಸನಿಗೂ ನನ್ನ ತಂದೆ ತಾಯಿಗಳಿಗೂ ಇಲ್ಲಿ ನೀವೆಲ್ಲ ಲತಾಲಲನೆಯರು ಪಡುತ್ತಲಿರುವ ಬನ್ನ ಬವಣೆಗಳ ಸಮಾಚಾರವನ್ನು ಬಿತ್ತರಿಸುವೆನು.''

ಗೋಕರ್ಣನ ಈ ಮಾತುಗಳನ್ನು ಕೇಳಿ ಲತಾಂಗಿಯರಲ್ಲಿ ಹಿರಿಯಳಾದವಳು ಮುಂದೆ ಬಂದು '' ಮಹಾಶಯ, ನಿನಗೆ ಅಪೇಕ್ಷೆ ಇದ್ದರೆ ನಿನ್ನನ್ನು ಈಗಲೇ ಆ ಮಧುರಾಮಂಡಲಕ್ಕೆ ನಾವು ಕರೆದೊಯ್ಯುತ್ತೇವೆ. ನೀನು ಕೂಡಲೇ ಅಲ್ಲಿಯ ದೇವದೇವಿಯರ ಸಂದರ್ಶನವನ್ನು ಪಡೆದುಕೊಳ್ಳಬಹುದು. ಈಗಲೇ ನೀನು ವಿಮಾನದಂತಿರುವ ಈ ಯಾನವನ್ನು ಏರು. ಇಲ್ಲಿಯ ಅನರ್ಘ್ಯವಾದ ಮುತ್ತು ರತ್ನಗಳನ್ನು ತೆಗೆದುಕೋ. ಇವುಗಳಲ್ಲಿ ಕೆಲವು ರತ್ನಗಳನ್ನು ಆ ಅಯೋಧ್ಯೆಯ ಅಧಿರಾಜನಿಗೂ ಕಾಣಿಕೆಯಾಗಿ ಕೊಡು.''

ಅವರ ಆದೇಶದಂತೆ ಗೋಕರ್ಣನು ಅವರು ಕೊಟ್ಟ ರತ್ನ ಪುಂಜವನ್ನು ಕಟ್ಟಿಕೊಂಡು ವಿಮಾನಕ್ಕೆ ಸಮಾನವಾದ ಅಲ್ಲಿಯೇ ನಿಂತ ದಿವ್ಯ ಯಾನವನ್ನು ಆರೋಹಣ ಮಾಡಿದನು. ಅದು ಆಕಾಶ ಮಾರ್ಗದಿಂದ ಹಕ್ಕಿಯಂತೆ ಹಾರಾಡುತ್ತ ಮನೋವೇಗದಿಂದ ಮಧುರಾಮಂಡಲಕ್ಕೆ ಬಂದಿತು. ಆಗ ಗೋಕರ್ಣನು ಮೊದಲು ನೇರವಾಗಿ ಅಯೋಧ್ಯೆಯ ದೊರೆಯ ಬಳಿಗೆ ಹೋಗಿ ತಾನು ತಂದ ಬೆಲೆಬಾಳುವ ಮುತ್ತುರತ್ನಗಳನ್ನು ಹಿಡಿಹಿಡಿಯಾಗಿ ಕಪ್ಪಕಾಣಿಕೆಯ ರೂಪದಿಂದ ಒಪ್ಪಿಸಿದನು. ಅದನ್ನು ಕಂಡು ಮಹಾರಾಜನಿಗೆ ಪರಮ ಸಂತೋಷವಾಗಿ ಆ ಗೋಕರ್ಣನನ್ನು ಗೌರವಿಸಿ ತನ್ನ ಅರ್ಧಾಸನದ ಮೇಲೆ ಕೂಡಿಸಿಕೊಂಡನು. ಮತ್ತೂ ಆದರದಿಂದ ಅವನಿಗೆ '' ಭದ್ರಮುಖನೇ, ನಿನಗೆ ಸುಸ್ವಾಗತ. ನೀನು ಇಲ್ಲಿಗೆ ಬಂದ ಕಾರಣವೇನು ? ಎಲ್ಲವೂ ಸೌಖ್ಯವಷ್ಟೇ ? '' ಎಂದು ಕೇಳಿದನು. ಆಗ ಗೋಕರ್ಣನು ಅವನಿಗೆ '' ರಾಜನೇ, ಈಗ ನೀನು ಈ ಕ್ಷಣದಲ್ಲಿ ನಿನ್ನ ಚತುರಂಗ ಸೈನ್ಯದೊಂದಿಗೆ ಈ ಸ್ಥಾನವನ್ನು ಬಿಟ್ಟು ಹೊರಟುಹೋಗಬೇಕು. ಅಂದರೆ ನಾನು ನಿನಗೆ ಒಂದು ಅತ್ಯಾಶ್ಚರ್ಯವನ್ನು ಈಗಲೇ ತೋರಿಸಿ ಹೊಸ ವಿಚಾರ ಒಂದನ್ನು ನಿನಗೆ ತಿಳಿಸಿಕೊಡುತ್ತೇನೆ.'' ಎಂದು ಹೇಳಿದನು.- ಅದನ್ನು ಕೇಳಿ ಮಹಾರಾಜನು ಹಾಗೇ 'ಆಗಲಿ' ಎಂದು ಹೇಳಿ ತನ್ನ ಸೇನಾಪತಿಯನ್ನು ಕರೆದು, ಹೇಳಿದನು. ''ಈ ಕ್ಷಣದಲ್ಲಿಯೇ ನೀವು ಈ ಮಧುರಾ ಪಟ್ಟಣವನ್ನು ತೆರವುಮಾಡಿ ನಮ್ಮ ರಾಜಧಾನಿಯೆಡೆಗೆ ಹೊರಡಬೇಕು. ತಡಮಾಡಬಾರದು. ನಮ್ಮ ಚತುರಂಗ ಸೇನೆಯಲ್ಲಿ ಯಾರೊಬ್ಬರೂ ಇಲ್ಲಿ ಉಳಿಯಕೂಡದು.''

ಮಹಾರಾಜನ ಅಪ್ಪಣೆಯಾಗುವದೊಂದೇ ತಡ. ರಾಜನ ಆ ಸೈನಿಕರೆಲ್ಲರೂ ಅಲ್ಲಿಂದ ತಳಕಿತ್ತಿದರು. ಕೆಲಗಳಿಗೆಗಳಲ್ಲಿ ಆ ವಿಷ್ಣುದೇವಾಲಯದ ಸುತ್ತು ಮುತ್ತಲಿನ ಪ್ರದೇಶವೂ ಉದ್ಯಾನ ಉಪವನಗಳ ಪರಿಸರ ಪ್ರದೇಶವೂ ಜನ ಶೂನ್ಯವಾದವು. ಅದನ್ನು

ಕಂಡು ಆ ಲತಾ ಲಲನೆಯರಿಗೆ ಬಹಳ ಸಂತೋಷವಾಯಿತು. ಅವರೆಲ್ಲರೂ ಗೋಕರ್ಣನನ್ನು " ಭಲಾ ಭಾಪು, ಬಹಳ ಒಳ್ಳೇದು ಮಾಡಿದಿ." ಎಂದು ಪ್ರಶಂಸಿಸಿ ಅವನಿಗೆ " ಬೇಕಾದ ವರ ಬೇಡು " ಎಂದು ಹೇಳಿದರು. ಬೇಡಿದ್ದನ್ನೆಲ್ಲ ಕೊಟ್ಟರು. 'ಕಲ್ಯಾಣವಾಗಲಿ' ಎಂದು ಹರಿಸಿದರು. ಕೊನೆಗೆ ಅವನಿಂದ ಬೀಳ್ಕೊಡಲ್ಪಟ್ಟು ಸ್ವರ್ಗ ಲೋಕಕ್ಕೆ ತೆರಳಿದರು. ಹೀಗೆ ವೃಕ್ಷ ಲತಾಭಿಮಾನಿನಿಯರಾದ ದೇವತೆಯರೆಲ್ಲ ಸುರಲೋಕಕ್ಕೆ ಪಯಣವನ್ನು ಬೆಳಸಿದ ಬಳಿಕ ಗೋಕರ್ಣನು ಅಯೋಧ್ಯೆಯ ದೊರೆಯ ಬಳಿಗೆ ಒಂದು ಈ ಎಲ್ಲ ನಡೆದ ಸಮಾಚಾರವನ್ನು ತಿಳಿಸಿದನು. ತನ್ನ ಆತ್ಮ ಚರಿತ್ರೆಯನ್ನೆಲ್ಲ ಅವನಿಗೆ ಹೇಳಿದನು. ದೇವಾಲಯ ಮತ್ತೂ ಕೆರೆ ಕೊಳಗಳನ್ನು ಕಟ್ಟಿಸುವದರಿಂದಲೂ, ಗಿಡಬಳ್ಳಿಗಳನ್ನು ನೆಟ್ಟು ಬೆಳೆಸುವುದರಿಂದಲೂ, ಎಂಥ ಮಹತ್ತರವಾದ ಪುಣ್ಯಫಲವು ಪ್ರಾಪ್ತವಾಗುವ ದೆಂಬುದನ್ನು ಬಣ್ಣಿಸಿ ಹೇಳಿದನು. ಅದನ್ನು ಕೇಳಿ ಆ ಅಯೋಧ್ಯೆಯ ಅಧಿನಾಯಕನು ಗೋಕರ್ಣನಿಗೆ ವಿಪುಲವಾಗಿ ಗ್ರಾಮ , ಧಾಮ, ವಸ್ತ್ರ, ವಸ್ತು, ಒಡವೆ, ಆನೆ, ಕುದುರೆ, ಧನ, ಕನಕ ಮುಂತಾದವುಗಳನ್ನು ಧಾರಾಳವಾಗಿ ಕೊಟ್ಟು ಕಳಿಸಿದನು. ಮತ್ತು ತಾನಾದರೂ ಅಲ್ಲಲ್ಲಿ ಅನೇಕ ಕೆರೆ ಕಾಲುವೆಗಳನ್ನು ಕಟ್ಟಿಸಿದನು. ಉದ್ಯಾನ ಉಪವನಗಳನ್ನು ನಿರ್ಮಿಸಿದನು. ಬಾವಿಗಳನ್ನು ತೋಡಿಸಿದನು. ದೇವಮಂದಿರಗಳನ್ನು ನಿರ್ಮಾಣ ಮಾಡಿಸಿದನು. ಅದರಿಂದ ಕೊನೆಗೆ ದಿವ್ಯಗತಿಯನ್ನು ಹೊಂದಿದನು.

**ವರಾಹ** :- ಗೋಕರ್ಣನು ಅನಂತರ ತನ್ನ ಮನೆಯಲ್ಲಿಯೇ ನಿಂತುಕೊಂಡು ಅನೇಕ ಧರ್ಮ ಕಾರ್ಯಗಳನ್ನು ಮಾಡುತ್ತ ವಾಸಮಾಡಿದನು. ಚತುರಮತಿಯಾದ ಆ ಗಿಳಿಯನ್ನು ಗೆಳೆಯನೆಂದು ಗೌರವಿಸಿದನು. ಪುತ್ರನೆಂದು ಪ್ರೀತಿಸಿದನು. ಸಚಿವನೆಂದು ಸತ್ಕರಿಸಿದನು. ಮತ್ತು ತನ್ನ ಮುದುಕರಾದ ತಾಯಿ ತಂದೆಯರನ್ನು ದೇವರಂತೆ ಸೇವಿಸಿದನು. ತನ್ನ ಐದೂ ಜನ ಮಡದಿಯರನ್ನು ಮೋಹಮಮತೆಯಿಂದಲೂ ಸ್ನೇಹ ಸಮತೆಯಿಂದಲೂ ಮೆಚ್ಚಿಸಿದನು. ತನ್ನ ಐಶ್ವರ್ಯಕ್ಕೆ ಅನುಗುಣವಾಗಿ ದೊಡ್ಡ ದೊಡ್ಡ ಯಜ್ಞಗಳನ್ನೂ ದೇವತಾಕಾರ್ಯಗಳನ್ನೂ ಮಾಡಿಸಿದನು. ತನ್ನ ಉದ್ಯಾನಗಳನ್ನೆಲ್ಲ ಸುಂದರವಾಗಿ ಬೆಳಿಸಿದನು. ಗೋಕರ್ಣನು ಮಾಡಿದ ವಿವಿಧ ಯಜ್ಞಗಳಲ್ಲಿ ಬಗೆ ಬಗೆಯ ಭಕ್ಷ, ಬೋಜ್ಯಗಳಿಂದಲೂ ವಿಪುಲವಾದ ದಾನ ದಕ್ಷಿಣೆಗಳಿಂದಲೂ ಸಂತುಷ್ಟರಾದ ಬ್ರಾಹ್ಮಣರು ಗೋಕರ್ಣನನ್ನು ಹೃದಯತುಂಬಿ ಹರಸಿದರು. ಅನಂತರ ಗೋಕರ್ಣನು ಎಲ್ಲ ಬ್ರಾಹ್ಮಣರನ್ನೂ ಪಾದಮುಟ್ಟಿ ನಮಸ್ಕಾರ ಮಾಡಿ, ತಾಯಿತಂದೆಗಳ ಚರಣದ ಧೂಳಿಯನ್ನು ಶಿರದಲ್ಲಿ ಧರಿಸಿ, ಆ ಗಿಳಿಯನ್ನು ಎದೆಯಲ್ಲಿ ಅಪ್ಪಿಕೊಂಡು, ಅದರ ಪರಮೋಪಕಾರವನ್ನು ನೆನೆದು ಆನಂದ ಬಾಷ್ಪಗಳನ್ನು ಉದುರಿಸಿದನು. "ಈ ಗಿಳಿಯು ನನಗೆ ಪುತ್ರನೂ ಅಹುದು. ಮಿತ್ರನೂ ಅಹುದು. ಇದರಿಂದಲೇ ನಾನು ಈ ಲೋಕದಲ್ಲಿ ಸುಖವನ್ನೂ ಪರಲೋಕದಲ್ಲಿ ಸದ್ಗತಿಯನ್ನು ಪಡೆಯುವಂತಾಯಿತು." ಎಂದು ಉದ್ಗಾರವನ್ನು ತೆಗೆದನು. ಮತ್ತೂ ಗಿಳಿಯು ಮಾಡಿದ ಪರಮೋಪಕಾರವನ್ನು ನೆನೆದು ಆ ಶುಕದ ಹೆಸರಿನಿಂದ ಒಂದು ದೊಡ್ಡ ಶಿವದೇವಾಲಯವನ್ನು ಕಟ್ಟಿಸಿ ಶುಕೇಶ್ವರನನ್ನು ಪ್ರತಿಷ್ಠೆ ಮಾಡಿ ಒಂದು ದಿವ್ಯ ಸತ್ರವನ್ನು ಮಾಡಿದನು. ಆ ಸತ್ರವು ಶುಕಸತ್ರ ಎಂದು ಪ್ರಸಿದ್ಧವಾಯಿತು.

ಮುಂದೆ ಕೆಲವು ವರ್ಷಗಳ ಬಳಿಕ ಗಿಳಿಯು ಮೃತವಾಗಿ ಆ ಜನ್ಮದಿಂದ ಮುಕ್ತಿ ಪಡೆದು ದಿವ್ಯ ವಿಮಾನವನ್ನು ಆರೋಹಣ ಮಾಡಿ ಸ್ವರ್ಗಲೋಕಕ್ಕೆ ತೆರಳಿತು. ಗೋಕರ್ಣನು ಸರಸ್ವತೀ ಸಂಗಮದಲ್ಲಿ ಸ್ನಾನಮಾಡಿ ಅದರ ಫಲವನ್ನು ತನಗೆ ಗಿಳಿಯನ್ನು ಕೊಟ್ಟ ಬೇಡದಂಪತಿಗಳಿಗೆ ದಾನವಿತ್ತನು. ಅದರಿಂದ ಆ ಬೇಡ ದಂಪತಿಗಳು ಆ ಶುಕೋದರ ಎಂಬ ಗಿಳಿಯೊಡನೆಯೇ ಉತ್ತಮವಾದ ವಿಮಾನವನ್ನು ಏರಿ ಸ್ವರ್ಗಲೋಕಕ್ಕೆ ಪ್ರಯಾಣ ಮಾಡಿದರು. ಗೋಕರ್ಣನಿಗೂ ಅನೇಕ ಗಂಡುಮಕ್ಕಳು ಮುಂದೆ ಹುಟ್ಟಿದರು. ಅವನ ಮಕ್ಕಳು ಮೊಮ್ಮಕ್ಕಳು ಎಲ್ಲರೂ ಸಂತಾನ, ಸಂಪತ್ತು, ಸುಖ, ಸೌಭಾಗ್ಯಗಳಿಂದ ಸಮೃದ್ಧವಾದ ಬಾಳನ್ನು ಬದುಕಿದರು. ಗೋಕರ್ಣನಾದರೂ ಇಲ್ಲಿ ಇರುವವರೆಗೆ ಸುಖವನ್ನು ಅನುಭವಿಸಿ ಮರಣದನಂತರ ಮೋಕ್ಷವನ್ನು ಪಡೆದನು.

*ವರಾಹ ಪುರಾಣದಲ್ಲಿ ನೂರಇಪ್ಪತ್ತೆರಡನೇ ಅಧ್ಯಾಯ ಮುಗಿದಿದೆ.*

—o—

## ಪಿಶಾಚ ಬಾಧೆಯು ಹೇಗೆ ತಗಲುವದು ? ಹೇಗೆ ತೊಲಗುವದು ?

**ಅಧ್ಯಾಯ - ೧೨೩**

**ವರಾಹ** :- ಭೂದೇವಿ, ಮಹಾಪಾತಕಗಳನ್ನೆಲ್ಲ ನಾಶಮಾಡುವ ಸಂಗಮ ಪ್ರಭಾವ ಎಂಬ ಬೇರೊಂದು ತೀರ್ಥದ ವಿಚಾರವನ್ನು ಹೇಳುತ್ತೇನೆ ಕೇಳು - ಈ ಮಧುರಾ ಮಂಡಲದಲ್ಲಿ ಮಹಾಮನ ಎಂಬ ಹೆಸರಿನ ಬ್ರಾಹ್ಮಣನು ವೇದಶಾಸ್ತ್ರ ಪಾರಂಗತನಾಗಿ ಹೋಮಹವನಾದಿ ಸ್ವೋಚಿತ ಕರ್ಮಾನುಷ್ಠಾನ ಮಾಡುತ್ತ ವಾಸವಾಗಿದ್ದನು. ಅನಂತರ ತೀರ್ಥಯಾತ್ರೆ ಮಾಡಬೇಕೆಂದು ಅವನು ನಿರ್ಧರಿಸಿ ಮಧುರೆಗೆ ಹೋದನು. ಅವನು ಮರುದಿನ ಸೂರ್ಯೋದಯಕ್ಕೆ ಸರಿಯಾಗಿ ದಕ್ಷಿಣದ ಅಸಿಕುಂಡದಿಂದ ಆರಂಭಿಸಿ, ಉತ್ತರದ ಕೊನೆಯವರೆಗೆ ಮಧುರೆಯಲ್ಲಿರುವ ಎಲ್ಲ ತೀರ್ಥಗಳಲ್ಲಿಯೂ ಕ್ರಮವಾಗಿ ಸ್ನಾನಮಾಡಿ, ನನ್ನನ್ನು ಸಂದರ್ಶಿಸಿ, ಪುಷ್ಕರ ತೀರ್ಥಕ್ಕೆ ಹೋಗಿ, ಅಲ್ಲಿಯೂ ಮಿಂದು, ಮಧುರೆಯಿಂದ ಹಿಂದಿರುಗಿ ತನ್ನ ಮನೆಗೆ ಹೊರಟನು. ದಾರಿಯಲ್ಲಿ ಅವನು ತಿರುಗಿ ಬರುವಾಗ ನಿರ್ಜನ ಗೊಂಡಾರಣ್ಯದಲ್ಲಿ ಭೀಕರ ಆಕಾರವುಳ್ಳ ಐದು ವಿಕಾರರೂಪದ ಪಿಶಾಚಗಳು ಅವನ ಕಣ್ಣಿಗೆ ಬಿದ್ದವು. ಆ ಪಂಚಪಿಶಾಚಗಳನ್ನು ಕಂಡ ಕೂಡಲೇ ಮಹಾಮನನಿಗೆ ತುಸು ಹೆದರಿಕೆಯಾದರೂ ಅವನು ಧೈರ್ಯವನ್ನು ತಂದುಕೊಂಡು ಅವರನ್ನು ಕೇಳಿದನು.- ''ಭೀಕರ ರೂಪಿಗಳಾದ ಪಿಶಾಚಗಳೇ, ನೀವು ಯಾರು ? ಯಾವ ಪಾಪದಿಂದ ನಿಮಗೆ ಇಂಥ ಘೋರರೂಪವು ಬಂದಿರುತ್ತದೆ ? ನೀವು ಎಲ್ಲಿಗೆ ಹೊರಟಿರುವಿರಿ ? ಹೀಗೇಕೆ ಸರ್ವದಾ ಅಂಡಲೆಯುತ್ತಿರುವಿರಿ ? '' ಹೀಗೆ ತಮ್ಮ ಸುಖದುಃಖಗಳನ್ನು ವಿಚಾರಿಸುವ ಆ ತೇಜಸ್ವಿಯಾದ ಬ್ರಾಹ್ಮಣನನ್ನು ಕಂಡು ಆ ಪಿಶಾಚಗಳ ಮನಸ್ಸಿನಲ್ಲಿ ಭಯ ಭಕ್ತಿಗಳು ಮೂಡಿದವು. ಆಗ ಅವು ತಮ್ಮ ಪಾಡನ್ನು ಅವನೆದುರು ತೋಡಿಕೊಂಡವು.-

"ದುರ್ಬುದ್ಧಿಯಿಂದ ಕೂಡಿದ ನಾವು ನಮ್ಮ ದುಷ್ಕರ್ಮದಿಂದ ಈ ದುಷ್ಟಯೋನಿಯಲ್ಲಿ ಹುಟ್ಟಿದ್ದೇವೆ. ಈ ಹೇಸಿ ಜನ್ಮದಲ್ಲಿ ಯಾವಾಗಲೂ ಹಸಿವೆ. ಸರ್ವದಾ ಬಾಯಾರಿಕೆ. ಹೀಗಾಗಿ ನಮಗೆ ಹಗಲಿರುಳೂ ದುಃಖ,ಸಂಕಟ, ನೋವು, ನರಳಿಕೆಗಳು ತಪ್ಪಿದ್ದಲ್ಲ. ಸೂರ್ಯೋದಯವಾದಾಗಲೂ ನಮ್ಮ ಪಾಲಿಗೆ ಪ್ರಪಂಚವೆಲ್ಲವೂ ಅಂಧಕಾರ ಮಯವಾಗಿರುತ್ತದೆ. ಸುತ್ತಲೂ ಕತ್ತಲೆ, ಎತ್ತಲೂ ಕತ್ತಲೆ, ನಮಗೆ ಹಗಲು ಯಾವುದು ? ಇರುಳು ಯಾವದು ? ನೆಲವಾವುದು ? ಮುಗಿಲಾವುದು? ದಿಕ್ಕು ಯಾವುದು ? ದೆಶೆಯಾವುದು ? ಏನೂ ಗೊತ್ತಾಗುವದಿಲ್ಲ. ನನ್ನ ಹೆಸರು 'ಪರ್ಯುಷಿತ', ಇವನು 'ಸೂಚೀಮುಖ', ಅವನು 'ಶೀಘ್ರಗ', ಆತ 'ರೋಧಕ', ಈತ 'ಲೇಖಕ'."

**ಬ್ರಾಹ್ಮಣ** :- ನಿಮಗೆ ಈ ಹೆಸರು ಬರಲು ಕಾರಣವೇನು ?

**ಪಿಶಾಚ** :- ನಾನು ನಿತ್ಯವೂ ರುಚಿ ಭರಿತವಾದ ರಸಭರಿತವಾದ ಬಿಸಿ ಬಿಸಿ ಅನ್ನವನ್ನು ಉಂಡು ಬ್ರಾಹ್ಮಣರಿಗೆ ಮಿಕ್ಕಿ ಉಳಿದ ತಂಗಳನ್ನವನ್ನು ಕೊಡುತ್ತಿದ್ದೆ. ಆದುದರಿಂದ ನನಗೆ ಪಿಶಾಚ ಜನ್ಮ ಬಂದು 'ಪರ್ಯುಷಿತ' ಎಂಬ ಹೆಸರು ಬಂದಿತು. ಇವನು ಬ್ರಾಹ್ಮಣರು ಉಂಡ ಅನ್ನವನ್ನು ಇಷ್ಟು ಅಷ್ಟು ಎಂದು ಎಣಿಸಿ ಗುಣಿಸಿ ಜನರೆದುರು ಸೂಚಿಸಿ ಉಪಹಾಸ ಮಾಡುತ್ತಿದ್ದುದರಿಂದ 'ಸೂಚೀಮುಖ' ಎಂದು ಹೆಸರು ಬಂದಿದೆ. ಆ ಇನ್ನೊಬ್ಬ ಪಿಶಾಚನು ಕಳೆದ ಜನ್ಮದಲ್ಲಿ ಯಾರಾದರೂ ಭಿಕ್ಷುಕರಾಗಲಿ ಬ್ರಾಹ್ಮಣರಾಗಲಿ ಬಂದು ತನ್ನನ್ನು ಬೇಡಬಹುದೆಂದು ಭಾವಿಸಿ ಅವರನ್ನು ಕಂಡ ಕೂಡಲೇ ವೇಗದಿಂದ ದೂರ ಓಡಿಹೋಗುತ್ತಿದ್ದನು. ಆದುದರಿಂದ ಇವನಿಗೆ 'ಶೀಘ್ರಗ' ಎಂದು ಹೆಸರು ಬಂದಿತು. ಈ ಮತ್ತೊಬ್ಬ ನನ್ನ ಮಿತ್ರನು ತಾನು ಊಟ ಮಾಡುವ ಮೊದಲು ಯಾರಾದರೂ ಅತಿಥಿಗಳು ಬಂದಾರೆಂಬ ಹೆದರಿಕೆಯಿಂದ ಬಾಗಿಲು ಹಾಕಿಕೊಂಡು ತಾನೊಬ್ಬನೇ ಊಟಮಾಡುತ್ತಿದ್ದನು. ಆದುದರಿದ ಇವನಿಗೆ ರೋಧಕ ಎಂದು ಹೆಸರಾಯಿತು. ಕೊನೆಯವನಾದ ಇವನು ಯಾರಾದರೂ ಬಂದು ಏನಾದರೂ ಬೇಡಿದರೆ ಕೊಡದೇ ಉತ್ತರವನ್ನು ಕೊಡುವಷ್ಟು ಸೌಜನ್ಯವನ್ನು ಕೂಡ ತೋರಿಸದೇ ತನ್ನ ಶ್ರೀಮದ್ಗಾಂಭೀರ್ಯದಿಂದ ತನ್ನ ಕಾಲುಗುರಿನಿಂದ ನೆಲ ಕೆದರುತ್ತ ನಿಲ್ಲುತ್ತಿದ್ದನು. ಆದುದರಿಂದ ಇವನಿಗೆ 'ಲೇಖಕ' ಎಂದು ಹೆಸರಾಯಿತು. ಇವರಲ್ಲಿ ಕೊನೆಯವನಾದ ಲೇಖಕನು ಜೋಲಾಡುತ್ತ ನಡೆಯುವನು. ರೋಧಕನು ತಲೆ ಕೆಳಗಾಗಿ ತಿರುಗುತ್ತಿರುವನು. ಶೀಘ್ರಗನು ಕುಂಟನಾಗಿರುವನು ಸೂಚೀ ಮುಖನಿಗೆ ಬರೀಗೋಣು ಮೇಲೆದ್ದಿದ್ದು, ಜೋಲ್ಲುಟಿಯಿಂದ ಯಾವಾಗಲೂ ತೇಕಾಡುತ್ತಾನೆ. ಪರ್ಯುಷಿತನ ಅಂಡ ಗುಂಡುಗಲ್ಲಿನಂತೆ ಬೆಳೆದು ಭಾರವಾಗಿದೆ. ಮೈಯೆಲ್ಲ ಒಣಗಿ ಹೋಗಿದೆ. ಹೀಗಾಗಿ ನಾವೆಲ್ಲರೂ ಹಿಂದೆ ಮಾಡಿದ ಪಾಪದ ಫಲವನ್ನು ಅನುಭವಿಸುತ್ತಲಿದ್ದೇವೆ. ಅಪಾತ್ರದಲ್ಲಿ ಮಾಡಿದ ದಾನವೂ, ದುಷ್ಟ ಭ್ರಷ್ಟರಾದ ಬ್ರಾಹ್ಮಣರಿಗೆ ಇಕ್ಕಿದ ಅನ್ನವೂ ನಮಗೆ ಆಹಾರವಾಗಿರುತ್ತದೆ. ದೇವಪೂಜೆ, ಗುರುಪೂಜೆ ಇಲ್ಲದೆ ಪುಣ್ಯ ಕರ್ಮಗಳನ್ನು ಮಾಡುವವರ ಮನೆಯಲ್ಲಿ ನಮಗೆ ಆಹಾರವು ದೊರಕುತ್ತದೆ. ಗಂಡ ಹೆಂಡರುಗಳು ನಿತ್ಯ ಕಲಹವನ್ನು ಮಾಡುತ್ತಿದ್ದರೆ ಅಂಥ ಮನೆಯಲ್ಲಿ ಪಿಶಾಚಗಳು ತಿಂದುಂಡು ಸುಖವಾಗಿ ಇರುತ್ತವೆ. ಮನೆತುಂಬ ಎಂಜಲು ಮುಸುರೆ ಹರಡಿದವರ ಮನೆಯಲ್ಲಿ ನಮಗೆ ಹಬ್ಬ.

ಇಂಥ ಪಾಪಿಗಳ ಮನೆಯಲ್ಲಿ ಪಾಪದ ಪದಾರ್ಥಗಳನ್ನು ತಿಂದು ನಾವು ಯಾವಾಗಲೂ ಸಂಕಟ ಪಡುತ್ತಿದ್ದೇವೆ. ಬ್ರಾಹ್ಮಣ, ಇಂಥ ಪಿಶಾಚ ಜನ್ಮವು ಏನುಮಾಡಿದರೆ ಬರುವುದಿಲ್ಲ ? ದಯಮಾಡಿ ತಿಳಿಸು. ಪಿಶಾಚಿಗಳ ಈ ಮಾತನ್ನು ಕೇಳಿ ಆ ಬ್ರಾಹ್ಮಣನು ನುಡಿದನು - "ಕೃಚ್ಛ್ರ, ಚಾಂದ್ರಾಯಣ ಮುಂತಾದ ಪುಣ್ಯಕಾರಕವಾದ ವ್ರತಗಳನ್ನು ಮಾಡಿದವರಿಗೆ ಎಂದೂ ಪಿಶಾಚಜನ್ಮ ಬರುವುದಿಲ್ಲ. ಯೋಗ್ಯಯತಿಗಳನ್ನು ಪೂಜಿಸುವವರೂ, ಭಕ್ತಿಯಿಂದ ಹರಿಪೂಜೆ ಗುರುಪೂಜೆ ಮಾಡುವವರೂ, ಕಾಮಕ್ರೋಧಾದಿಗಳನ್ನು ಬಿಟ್ಟು ದಾನ ಧರ್ಮ ಮಾಡುವವರೂ, ಏಕಾದಶೀ ಉಪವಾಸ ಮಾಡುವವರೂ, ಗೋಬ್ರಾಹ್ಮಣರನ್ನು ವಂದಿಸುವವರೂ, ತೀರ್ಥಸ್ನಾನ ಮಾಡುವವರೂ, ದೇವರ ಪೂಜೆ ಮಾಡುವವರೂ ಎಂದೂ ಪಿಶಾಚರಾಗುವದಿಲ್ಲ. ಇನ್ನು ಯಾವ ಪಾಪ ಮಾಡಿದರೆ ಪಿಶಾಚ ಜನ್ಮವು ಬರುವದೆಂಬುದನ್ನು ಹೇಳುತ್ತೇನೆ ಕೇಳಿರಿ.

ಬ್ರಾಹ್ಮಣನು ಶೂದ್ರಾನ್ನವನ್ನು ತಿಂದು ಅದು ಹೊಟ್ಟೆಯಲ್ಲಿದ್ದಾಗಲೇ ಮೃತನಾದರೆ ಪಿಶಾಚನಾಗುವನು. ಮತ್ತು ನಾಸ್ತಿಕರಾದ ಪಾಖಂಡಿಗಳ ಜೊತೆಗೆ ಸಹವಾಸ ಸಹಭೋಜನಾದಿ ವ್ಯವಹಾರ ಮಾಡುವವರೂ, ಸೆರೆಗುಡುಕರೂ, ಪರಸ್ತ್ರೀಸಂಗ ಮಾಡುವವರೂ, ಮಾಂಸವನ್ನು ತಿನ್ನುವವರೂ, ದೇವರ ದುಡ್ಡನ್ನು ತಿನ್ನುವವರೂ, ಕನ್ನೆಯನ್ನು ಮಾರುವವರೂ, ತಾಯಿತಂದೆ ಮತ್ತು ಮಡದಿಮಕ್ಕಳನ್ನು ಮನೆಬಿಟ್ಟು ಹೊರದೂಡುವವರೂ, ಬ್ರಹ್ಮಹತ್ಯಾ ಗೋಹತ್ಯಾದಿ ಪಾಪ ಮಾಡಿದವರೂ, ಪಂಚ ಮಹಾಪಾತಕಿಗಳೂ, ಭೂಮಿ ಹಾಗೂ ಕನ್ಯಾಪಹಾರಿಗಳೂ, ಗುರುದ್ರೋಹಿಗಳೂ, ನಾಸ್ತಿಕರೂ, ನಾಸ್ತಿಕರನ್ನು ಆಶ್ರಯಿಸಿದವರೂ ಪಿಶಾಚ ಜನ್ಮವನ್ನು ಪಡೆಯುವರು. ಈ ಪಿಶಾಚ ಜನ್ಮದಿಂದ ಬಿಡುಗಡೆ ಹೊಂದಬೇಕಾದರೆ ಒಂದೇ ಉಪಾಯವುಂಟು. ಭಾದ್ರಪದ ಮಾಸದಲ್ಲಿ ಶ್ರವಣ ದ್ವಾದಶಿಯಂದು ಮಥುರೆಯ ಸರಸ್ವತೀ ಯಮುನಾ ಸಂಗಮ ತೀರ್ಥದಲ್ಲಿ ಸ್ನಾನ ಮಾಡಿ ವಾಮನದೇವರ ಪೂಜೆಯನ್ನು ಗೈದು ಸುವರ್ಣ, ವಸ್ತ್ರ, ಛತ್ರ, ಪಾದುಕಾದಿಗಳನ್ನಿತ್ತು ದಾನ ಹೋಮಗಳನ್ನು ಮಾಡಬೇಕು. ಅದರಿಂದ ಸದ್ಗತಿ ಯಾಗುವದು. ಈ ಸಂಗಮ ತೀರ್ಥದಲ್ಲಿ ಸ್ನಾನ, ಹರಿಧ್ಯಾನ ಮಾಡುವವರೂ, ಈ ಸಂಗಮದ ಮಹಿಮೆಯನ್ನು ಕೇಳುವವರೂ ದುರ್ಯೋನಿಯಿಂದ ಮುಕ್ತರಾಗುತ್ತಾರೆ.

ಸುವರ್ಣದಿಂದ ಅಲಂಕೃತವಾದ ನೂರು ಗೋವುಗಳನ್ನು ದಾನ ಮಾಡಿದ ಪುಣ್ಯವು ಯಮುನಾ ಸಂಗಮದಲ್ಲಿ ಶ್ರವಣ ದ್ವಾದಶಿಯ ದಿನ ಕೇವಲ ಸ್ನಾನ ಮಾಡುವದರಿಂದಲೇ ಪ್ರಾಪ್ತವಾಗವದು. ಆ ಶ್ರಾವಣ ದ್ವಾದಶಿ ವ್ರತವನ್ನು ಆಚರಿಸುವದರಿಂದ ಎಂಥ ಪಾಪಿಯಾದರೂ ರಾಕ್ಷಸ ಪಿಶಾಚಾದಿ ದುರ್ಜನ್ಮಗಳನ್ನು ಎಂದೂ ಪಡೆಯದೆ ಹದಿನಾಲ್ಕು ಜನ ಇಂದ್ರರು ಆಳುವವರೆಗೆ ಸ್ವರ್ಗದಲ್ಲಿ ವಾಸಿಸಿ ಕೊನೆಗೆ ಧ್ಯಾನೋಪಾಸನೆಗಳಿಂದ ಮೋಕ್ಷವನ್ನು ಪಡೆಯುವನು. ತನ್ನ ಶಕ್ತಿಗೆ ಅನುಸರಿಸಿ ರತ್ನಖಚಿತವಾದ ಒಂದು ಪೀಠವನ್ನು ಮಾಡಿಸಿ ಅದರಲ್ಲಿ ಬಂಗಾರದ ವಾಮನಮೂರ್ತಿಯನ್ನು ಕೂಡಿಸಿ ಅದಕ್ಕೆ ವಿಧ್ಯುಕ್ತವಾಗಿ ಮಂತ್ರೋಚ್ಚಾರಣ ಪೂರ್ವಕ ಪಾದುಕೆಗಳನ್ನೂ, ಛತ್ರಗಳನ್ನೂ ಸಮರ್ಪಿಸಬೇಕು. ಸ್ನಾನ ಪೂಜಾದಿಗಳನ್ನು ಮಾಡಬೇಕು. ಶಾಸ್ತ್ರೋಕ್ತವಾದ ಮಂತ್ರಗಳಿಂದ ಹೋಮವನ್ನೂ ಮಾಡಿ

ಬ್ರಾಹ್ಮಣರನ್ನು ಸಿದ್ಧಪಡಿಸಿಕೊಳ್ಳಬೇಕು. ಅನಂತರ ಕೆಳಗೆ ಹೇಳಿದ ಒಂದೊಂದೇ ಮಂತ್ರಗಳಿಂದ ವಾಮನದೇವರಿಗೆ ಆವಾಹನಾದಿ ಪೂಜೆಯನ್ನು ಮಾಡಬೇಕು.

**ಆವಾಹನಂ**

**''ಆಗಚ್ಛ ವರದಾನಂತ ಶ್ರೀಪತೇ ಮದನುಗ್ರಹಾತ್**
**ಸರ್ವಗೋಪಿ ನಿಜಾಂಶೇನ ಸ್ಥಾನಮೇತದಲಂ ಕುರು ''**

ಎಂದು ಆವಾಹಿಸಬೇಕು. ನಂತರ -

**''ಯತ್ವಂ ನಕ್ಷತ್ರ ರೂಪೇಣ ದ್ವಾದಶ್ಯಾಂ ನಭಸಿ ಸ್ಥಿತಃ**
**ತನ್ನಕ್ಷತ್ರ ಮಹಂ ವಂದೇ ಮನೋ ವಾಂಛಿತ ಸಿದ್ಧಯೇ''**

ಎಂಬ ಮಂತ್ರದಿಂದ ಆ ನಕ್ಷತ್ರವನ್ನು ನಮಿಸಬೇಕು.

**''ನಮಃ ಕಮಲನಾಭಾಯ ಕಮಲಾಲಯ ಕೇಶವ**
**ಅಮೂರ್ತೇ ಸರ್ವತೋ ವ್ಯಾಪಿನ್ನಾರಾಯಣ ನಮೋಸ್ತು ತೇ''**

ಎಂಬ ಮಂತ್ರದಿಂದ ಸ್ನಾನವನ್ನು ಮಾಡಿಸಬೇಕು.

**''ಸರ್ವವ್ಯಾಪಿನ್ ಜಗದ್ಯೋನೇ ನಮಃ ಸರ್ವಮಯಾಚ್ಯುತ ।**
**ಶ್ರವಣದ್ವಾದಶೀಯೋಗೇ ಪೂಜಾಂ ಗೃಹ್ಣೀಷ್ವ ಕೇಶವ ॥''**

ಎಂದು ಪೂಜಿಸಬೇಕು.

**''ಧೂಪೋಽಯಂ ದೇವ ದೇವೇಶ ಶಂಖಚಕ್ರ ಗದಾಧರ ।**
**ಅಚ್ಯುತಾನಂತ ಗೋವಿಂದ ವಾಸುದೇವ ನಮೋಽಸ್ತುತೇ ॥''**

ಎಂದು ಧೂಪವನ್ನೂ,

**''ತೇಜಸಾ ಸರ್ವಲೋಕಾಶ್ಚ ವಿವೃತಾಃ ಸಂತು ತ್ವೇಽವ್ಯಯಾಃ ।**
**ತ್ವಂ ಹಿ ಸರ್ವಗತಂ ತೇಜೋ ಜನಾರ್ದನ ನಮೋಽಸ್ತುತೇ ॥''**

ಎಂದು ದೀಪವನ್ನೂ ವಾಮನನಿಗೆ ಬೆಳಗಬೇಕು.

**''ಅದಿತೇರ್ಗರ್ಭಜಾತಾಯ ವೈರೋಚನಿಸಮಾಯ ಚ ।**
**ತ್ರಿಭಿಃ ಕ್ರಮೈರ್ಜಿತಾ ಲೋಕಾ ವಾಮನಾಯ ನಮೋಽಸ್ತುತೇ ॥''**

ಎಂದು ಕಮಂಡಲವನ್ನು ಅರ್ಪಿಸಬೇಕು.

**''ದೇವಾನಾಂ ಸಮ್ಮತಶ್ಚಾಪಿ ಯೋಗಿನಾಂ ಪರಮಾ ಗತಿಃ ।**
**ಜಲಶಾಯೀ ಜಗದ್ಯೋನೇ ಅರ್ಘ್ಯಂ ತೇ ಪ್ರತಿಗೃಹ್ಯತಾಮ್ ॥''**

ಎಂದು ಅರ್ಘ್ಯವನ್ನೂ

**''ಹಿರಣ್ಯವಸ್ತ್ರಂ ತ್ವಂ ದೇವ ಜಲವಸ್ತ್ರಮಯೊ ಭವಾನ್ ''**

ಎಂದು ವಸ್ತ್ರ, ಸುವರ್ಣಪುಷ್ಪ ದಕ್ಷಿಣೆಯನ್ನೂ

**''ಉಪಾನತ್ ಛತ್ರದಾನೇನ ಪ್ರೀತೋಭವ ಜನಾರ್ದನ ''**

ಎಂದು ಪಾದುಕಾ ಛತ್ರಗಳನ್ನೂ,

**"ಅನ್ನಂ ಪ್ರಜಾಪತಿರ್ವಿಷ್ಣೂ ರುದ್ರ ಚಂದ್ರೇಂದ್ರ ಭಾಸ್ಕರಾಃ ।**
**ಅನ್ನಂ ತ್ವಷ್ಟಾ ಯಮೋಽಗ್ನಿಶ್ಚ ಪಾಪಂ ಹರತು ಮೇಽವ್ಯಯಃ ॥"**
ಎಂದು ನೈವೇದ್ಯವನ್ನೂ ವಾಮನ ದೇವರಿಗೆ ಕೊಡಬೇಕು. ಅನಂತರ ಕೈಮುಗಿದು.

**ಪರ್ಜನ್ಯೋ ವರುಣಃ ಸೂರ್ಯಃ ಸಲಿಲಂ ಕೇಶವಃ ಶಿವಃ ।**
**ಅಗ್ನಿರ್ವೈಶ್ರವಣೋ ದೇವಃ ಪಾಪಂ ಹರತು ಮೇಽ ವ್ಯಯಃ ॥**
**ವಾಮನೋ ಬುದ್ಧಿದಾತಾ ಚ ದ್ರವ್ಯಸ್ಥೋ ವಾಮನಃ ಸ್ವಯಂ ।**
**ವಾಮನಸ್ತಾರಕೋ ಭಾಭ್ಯಾಂ ವಾಮನಾಯ ನಮೋನಮಃ ॥ "**

ಎಂದು ಪ್ರಾರ್ಥನೆಯನ್ನು ಮಾಡಿ, ವಾಮನದೇವರನ್ನು ನಮಸ್ಕರಿಸಿ, ಯಜಮಾನನು ವಾಮನದೇವರ ಚಿನ್ನದ ಮೂರ್ತಿಯನ್ನು ಬ್ರಾಹ್ಮಣರಿಗೆ ದಾನ ಕೊಡಬೇಕು. ಅನಂತರ ಆ ಬ್ರಾಹ್ಮಣರು ಈ ಕೆಳಗಿನ ಮಂತ್ರ ಹೇಳಿ ಸ್ವೀಕರಿಸಬೇಕು.

**"ವಾಮನಂ ಪ್ರತಿಗೃಹ್ಣಾಮಿ ವಾಮನೋ ಮೇ ಪ್ರಯಚ್ಛತಿ ।**
**ವಾಮನಸ್ತಾರಕೋಭಾಭ್ಯಾಂ ವಾಮನಾಯ ನಮೋ ನಮಃ ॥"**

"ವಾಮನನೇ ಕೊಡುವವನು, ವಾಮನನೇ ತೆಗೆದುಕೊಳ್ಳುವವನು. ನಾನು ವಾಮನ ದೇವರಿಗೆ ನಮಸ್ಕರಿಸುತ್ತೇನೆ ಎಂದು ಅನುಸಂಧಾನಪೂರ್ವಕವಾಗಿ ನಮಿಸಬೇಕು. ಅನಂತರ ಯಜಮಾನನು ಕಪಿಲಾಧೇನುವನ್ನು ಕೊಟ್ಟು ಮೂರ್ತಿಯನ್ನು ವಿಸರ್ಜನೆ ಮಾಡಬೇಕು. ಹೀಗೆ ಭಾದ್ರಪದ ದ್ವಾದಶಿಯಂದು ವಾಮನದೇವರ ಪೂಜೆ ಮಾಡಿದರೆ ಅದರಲ್ಲಿಯೂ ಯಮುನಾ ಸರಸ್ವತೀ ಸಂಗಮ ಸ್ಥಳದಲ್ಲಿ ಮಾಡಿದರೆ ಸರ್ವ ಪಾಪ ಪರಿಹಾರ, ಸರ್ವಪುಣ್ಯ ಫಲಪ್ರಾಪ್ತಿ ಎರಡೂ ಸುನಿಶ್ಚಿತ." ಹೀಗೆ ಆ ಬ್ರಾಹ್ಮಣೋತ್ತಮನು ಆ ಪಿಶಾಚಗಳ ಎದುರು ಸಂಗಮ ತೀರ್ಥದ ಹಾಗೂ ಶ್ರವಣ ದ್ವಾದಶಿಯ ಮಹಿಮೆಯನ್ನು ಹೇಳತೊಡಗಿದಾಗ ಒಮ್ಮೆಲೇ ದೇವದುಂದುಭಿಗಳು ಮೊಳಗಿದವು. ಕೂಡಲೇ ಸ್ವರ್ಗಲೋಕದಿಂದ ಪುಷ್ಪವೃಷ್ಟಿಯಾಗಿ ರಾಶಿರಾಶಿಯಾಗಿ ಹೂಗಳು ನೆಲದ ಮೇಲೆ ಬಿದ್ದವು. ವಿಮಾನಾರೂಢರಾಗಿ ಅನೇಕ ದೇವತೆಗಳು ಅಲ್ಲಿಗೆ ಬಂದು ಸುತ್ತಲೂ ನಿಂತು ಆ ಪಿಶಾಚಗಳಿಗೆ" ಪುಣ್ಯತೀರ್ಥ ವಿಚಾರ, ಧರ್ಮ ವಿಚಾರ, ದ್ವಾದಶೀದಿನದ ವಿಚಾರಗಳನ್ನು ಈ ತಪಸ್ವಿ ಬ್ರಾಹ್ಮಣನ ಬಾಯಿಂದ ಕೇಳಿದ್ದಕ್ಕಾಗಿ ನೀವೆಲ್ಲರೂ ಈ ಪಿಶಾಚ ಜನ್ಮದಿಂದ ಮುಕ್ತರಾಗಿದ್ದೀರಿ" ಎಂದು ಹೇಳಿದರು. ಕೂಡಲೇ ಆ ಐದು ಪಿಶಾಚಗಳು ತಮ್ಮ ಆ ಪಿಶಾಚ ಜನ್ಮವನ್ನು ನೀಗಿ ದಿವ್ಯ ದೇಹ ಧಾರಣ ಮಾಡಿ ಸದ್ಗತಿಯನ್ನು ಹೊಂದಿದವು. ಭೂದೇವಿ, ಆದುದರಿಂದ ಸಜ್ಜನರ ಉಪದೇಶ ಶ್ರವಣ ಹಾಗೂ ಮಧುರಾಮಂಡಲದಲ್ಲಿಯ 'ಸರಸ್ವತೀ ಸಂಗಮ'ದ ತೀರ್ಥದ ಮಹಿಮಾ ಶ್ರವಣಗಳಿಂದ ಎಂಥೆಂಥ ಪಾಪಿ ಪಿಶಾಚಿಗಳೂ ಉದ್ಧಾರ ಹೊಂದುತ್ತವೆ ಎಂಬುದನ್ನು ತಿಳಿದುಕೊಳ್ಳಬೇಕು. ಈ ಕಥೆಯನ್ನು ಹೇಳುವವರೂ ಕೇಳುವವರೂ ಎಂದೂ ಪಿಶಾಚ ಪ್ರಭಾವಕ್ಕೆ ಒಳಗಾಗುವದಿಲ್ಲ.

*ವರಾಹ ಪುರಾಣದಲ್ಲಿ ನೂರ ಇಪ್ಪತಮೂರನೇ ಅಧ್ಯಾಯ ಮುಗಿದಿದೆ.*

—o—

**ಶ್ರೀ ವರಾಹ** :- ಭೂದೇವಿ, ಕೃಷ್ಣ ಗಂಗಾ ಕ್ಷೇತ್ರದಲ್ಲಿ ನಡೆದ ಮತ್ತೊಂದು ಸಮಾಚಾರವನ್ನು ತಿಳಿಸುತ್ತೇನೆ ಕೇಳು. ಕೃಷ್ಣದ್ವೈಪಾಯನ ಎಂದು ಪ್ರಸಿದ್ಧರಾದ ವೇದವ್ಯಾಸದೇವರು ಮಧುರಾಮಂಡಲಕ್ಕೆ ಬಂದು ತಪಸ್ಸು ಮಾಡಿದ ಸೋಮತೀರ್ಥ ವೈಕುಂಠ ತೀರ್ಥಗಳ ನಡುವಿನ ಪ್ರದೇಶವು ಕೃಷ್ಣಾ ಗಂಗಾ ಕ್ಷೇತ್ರವೆಂದು ಹೆಸರಾಗಿದೆ. ವೇದವೇದಾಂತ ತತ್ವಜ್ಞರೂ, ನಿಯಮನಿಷ್ಠರರಾದ ಋಷಿಗಳೂ, ಕಠೋರ ವ್ರತಗಳನ್ನಾಚರಿಸುವ ಯತಿಗಳೂ ಆ ಕೃಷ್ಣ ಗಂಗಾ ಕ್ಷೇತ್ರದ ದಿವ್ಯವಾದ ವ್ಯಾಸಾಶ್ರಮದಲ್ಲಿ ಪ್ರತಿವರ್ಷ ಒಂದು ಚಾತುರ್ಮಾಸ್ಯ ಸಂಕಲ್ಪ ಮಾಡಿ ನಾಲ್ಕು ತಿಂಗಳ ಕಾಲ ಶ್ರೀ ಹರಿಸೇವೆಯನ್ನು ಮಾಡುವರು. ಮತ್ತೂ ಶ್ರೀ ವೇದವ್ಯಾಸರಲ್ಲಿ ಅಧ್ಯಯನ ಮಾಡುತ್ತ ಶ್ರುತಿ, ಸ್ಮೃತಿ, ಪುರಾಣ, ಶಾಸ್ತ್ರಗಳಲ್ಲಿ ತಮಗೆ ಬಂದ ಸಂಶಯಗಳನ್ನು ಪರಿಹಾರ ಮಾಡಿಕೊಳ್ಳುತ್ತಾರೆ.

ಸರ್ವ ಸಂಗ ಪರಿತ್ಯಾಗ ಮಾಡಿದ ವ್ಯಾಸ ಮುನಿಗಳು ಹಿಂದೆ ಹನ್ನೆರಡು ವರ್ಷ ಈ ಕೃಷ್ಣಾ ಗಂಗಾ ಕ್ಷೇತ್ರದಲ್ಲಿ ನಿಂತು ತಪಸ್ಸು ಮಾಡಿದರು. ಅವರು ಹದಿನೈದು ದಿನಕ್ಕೊಮ್ಮೆ ಫಲಾಹಾರವನ್ನು ಸ್ವೀಕರಿಸಿ ಪೂರ್ಣಿಮಾ ಅಮಾವಾಸ್ಯಾ ದಿನಗಳಲ್ಲಿ ಮಾತ್ರ ಹಿಮಾಲಯ ದಲ್ಲಿರುವ ತಮ್ಮ ಬದರಿಕಾಶ್ರಮ ಕ್ಷೇತ್ರಕ್ಕೆ ಹೋಗಿ ಬರುತ್ತಿದ್ದರು. ತ್ರಿಕಾಲದರ್ಶಿಗಳೂ ಪರಬ್ರಹ್ಮ ಸ್ವರೂಪಿಗಳೂ ಆದ ಆ ವ್ಯಾಸಪ್ರಭುಗಳು ಅದೇ ಕ್ಷೇತ್ರದಲ್ಲಿ ತಪಸ್ಸಿದ್ಧಿಯನ್ನು ಅನುಗ್ರಹಿಸಿದರು. ಅವರ ಆ ದಿವ್ಯಾನುಭವವನ್ನು ಪ್ರತ್ಯಕ್ಷವಾಗಿ ನೋಡಿದ ಪಾಂಚಾಲ ದೇಶದ ಬ್ರಾಹ್ಮಣನೊಬ್ಬನ ಸಮಾಚಾರವನ್ನು ತಿಳಿಸುತ್ತೇನೆ ಕೇಳು.- ಪಾಂಚಾಲ ದೇಶದಲ್ಲಿ ವಸು ಎಂಬ ಹೆಸರಿನ ಬ್ರಾಹ್ಮಣನೊಬ್ಬನು ವಾಸ ಮಾಡುತ್ತಿದ್ದನು. ಹಿಂದೊಮ್ಮೆ ಆ ಪಾಂಚಾಲ ದೇಶದಲ್ಲಿ ಭೀಕರವಾದ ಬರಗಾಲವು ತಲೆದೋರಿತು.

ಆ ಘೋರ ಕ್ಷಾಮದಲ್ಲಿ ಹಸಿವೆಯಿಂದ ಬಳಲಿ ಬೇಗುದಿಗೊಂಡ ಈ ಬ್ರಾಹ್ಮಣನು ಆ ದೇಶವನ್ನೇ ಬಿಟ್ಟು ತನ್ನ ಮಡದಿಯೊಡನೆ ದಕ್ಷಿಣದೇಶಕ್ಕೆ ಪ್ರಯಾಣ ಮಾಡಿದನು. ಅಲ್ಲಿ ಶಿವನದಿಯ ದಕ್ಷಿಣ ತೀರದಲ್ಲಿರುವ ವರಪುರದಲ್ಲಿ ನೆಲಸಿದನು. ಅಲ್ಲಿ ತನ್ನ ಬ್ರಾಹ್ಮಣ ವೃತ್ತಿಯನ್ನೇ ಅನುಸರಿಸಿ ವಾಸಮಾಡಿದನು. ಅಲ್ಲಿ ಅವನಿಗೆ ಆಗ ಹುಟ್ಟಿದ ಮಕ್ಕಳಲ್ಲಿ ಐದು ಗಂಡು ಒಂದು ಹೆಣ್ಣು. ಅವನ ಆ ಕನ್ಯೆಯು ಬೆಳೆದು ಉಪವರಳಾದಾಗ ಅವಳನ್ನು ಓರ್ವ ಬ್ರಾಹ್ಮಣ ಕುಮಾರನಿಗೆ ಕೊಟ್ಟು ಮದುವೆ ಮಾಡಿದನು. ಬೇಕಾದಷ್ಟು ವರದಕ್ಷಿಣೆ ವರೋಪಚಾರಗಳನ್ನು ಕೊಟ್ಟು ಅಳಿಯನನ್ನು ಸಂತೋಷಪಡಿಸಿದನು. ಮುಂದೆ ಕೆಲವು ದಿನಗಳ ಬಳಿಕ ದುರ್ದೈವದಿಂದ ಆ ಕನ್ಯೆಯ ತಾಯಿ - ತಂದೆಗಳು ಮರಣ ಹೊಂದಿದರು. ಪತಿಯೂ ಮೃತನಾದನು. ಅವಳೂ ಪರದೇಶಿಯಾದಳು.

ಮಧುರೆಯ ಅರ್ಧಚಂದ್ರ ಕ್ಷೇತ್ರದಲ್ಲಿ ಸತ್ತವರ ಅಸ್ಥಿಗಳನ್ನು ಹಾಕಿದರೆ ಮೃತರು ಸ್ವರ್ಗವನ್ನು ಪಡೆಯುವರು ಎಂಬುದನ್ನು ಆ ಬಾಲೆಯು ಪುರಾಣದಲ್ಲಿ ಕೇಳಿದ್ದಳು. ಆದುದರಿಂದ ಅವಳು ತನ್ನ ಪತಿಯ ಹಾಗೂ ತಾಯಿತಂದೆಗಳ ಎಲುಬುಗಳನ್ನು ತೆಗೆದುಕೊಂಡು ಮಧುರೆಗೆ ಹೊರಟಳು. ದಾರಿಯಲ್ಲಿ ಅವಳಿಗೆ ಒಂದು ಯಾತ್ರಿಕರ

ಗುಂಪು ಬೆಟ್ಟಿಯಾಯಿತು. ಅವರೊಡನೆ ಅವಳು ಮಧುರೆಯನ್ನು ತಲುಪಿದಳು. ತಾರುಣ್ಯವು ತುಳುಕುವ ಆ ಬಾಲವಿಧವೆಯ ಅಂಗಾಂಗಗಳಲ್ಲಿ ಲಾವಣ್ಯ ಮಿಂಚಿನ ರಸದಂತೆ ಹರಿದಾಡುತ್ತಿತ್ತು. ಅವಳ ಬಂಗಾರದ ಬಣ್ಣ, ಕಾಡಿಗೆ ಗಣ್ಣು, ಕಪ್ಪು ಕೂದಲು, ತಾವರೆಯ ಮುಖ, ಚಿಗುರುದುಟಿ, ಮಾಂಸಲ ಮೈ, ಕಮಲದಂತಿರುವ ಕೈ, ಹಂಸದ ನಡಿಗೆ, ಕೋಗಿಲೆಯ ದನಿ ಎಲ್ಲವೂ ಮೋಹಕವಾಗಿದ್ದವು. ತರುಣ ಮನಂಗಳಿಗೆ ಮಾದಕವೂ, ಮೋದಕವೂ, ಆಗಿದ್ದವು. ಹಸಿವೆ ನೀರಡಿಕೆಗಳಿಂದ ಕಂಗೆಟ್ಟು ಕಂಗಾಲದಂತೆ ಅತ್ತಿತ್ತ ಅಲೆಯುವ ಆ ಗುಂಗುರುಗೂದಲಿನ ಅಂಗನೆಯನ್ನು ನೋಡಿ ಮಧುರಾಪುರಿಯ ಕೆಲವು ವೇಶ್ಯಾ ಸ್ತ್ರೀಯರು ಆಶ್ರಯ ನೀಡಿದರು. ಆಹಾರವನ್ನು ಕೊಟ್ಟರು. ಒಳ್ಳೊಳ್ಳೆ ಬಟ್ಟೆ ಬರೆ, ವಸತಿ, ಊಟ ಉಪಚಾರಗಳ ಏರ್ಪಾಡು ಮಾಡಿದರು.

ಅದೇ ವೇಳೆಯಲ್ಲಿ ಕಾನ್ಯಕುಬ್ಜದ ಧೊರೆಯು ಮಧುರಾಮಂಡಲಕ್ಕೆ ಬಂದು ಅಲ್ಲಿಯ ಗರ್ತೇಶ್ವರ ಕ್ಷೇತ್ರದಲ್ಲಿ ದೊಡ್ಡಯಜ್ಞ ಒಂದನ್ನು ಹೂಡಿದನು. ಆ ಸತ್ರದಲ್ಲಿ ರಾಜಪುರುಷರು ಪ್ರತಿ ದಿನವೂ ಹೋಮ ಧೂಮಾದಿಕಾರ್ಯಗಳು ಮುಗಿದ ಬಳಿಕ ವಿವಿಧ ಮನರಂಜನದ ಕಾರ್ಯಕ್ರಮಗಳನ್ನು ಇಟ್ಟಿರುತ್ತಿದ್ದರು. ಆ ಕಾಲದಲ್ಲಿ ಅನೇಕ ವೇಶ್ಯೆಯರು ಅಲ್ಲಿಗೆ ಬಂದು ಸಂಗೀತ ಸೇವೆಯನ್ನು ಸಲ್ಲಿಸುತ್ತಿದ್ದರು. ನರ್ತನ ಸೇವೆಯನ್ನು ಮಾಡುತ್ತಿದ್ದರು. ಕೊನೆಗೆ ಒಂದು ದಿನ ಆ ಚೆಲೆವೆಣ್ಣುಗಳು ಅಲ್ಲಿಗೆ ಬಂದ ಈ ಬಾಲ ವಿಧವೆಯ ಕಾಲಿಗೂ ಗೆಜ್ಜೆ ಕಟ್ಟಿದರು. ಅವಳಿಗೆ ಬಗೆ ಬಗೆಯಿಂದ ಬೋಧಿಸಿ, ತಿಳಿಸಿ, ಮನಸ್ಸನ್ನು ಒಲಿಸಿ ರಾಜ ದರಬಾರಕ್ಕೆ ತಂದರು. ಅಲ್ಲಿ ಆ ವಿಧವೆಯು ಗೆಜ್ಜೆ ಕಟ್ಟಿಕೊಂಡು ನವಿಲಿನಂತೆ ಕುಣಿದಳು. ಕಿನ್ನರಿಯಂತೆ ಹಾಡಿದಳು. ಹಂಸಿಯಂತೆ ನಡೆದಳು. ಅವಳ ತುಂಬು ತಾರುಣ್ಯದ ಚಾರು ಚಲುವಿಕೆಯು ನೆರೆದ ಎಲ್ಲ ಜನರ ಚಿತ್ತವನ್ನು ಸೂರೆಗೊಂಡಿತು. ಪ್ರಾಯದ ಉಬ್ಬಿನಲ್ಲಿ ಸೌಂದರ್ಯದ ಮಬ್ಬಿನಲ್ಲಿ ಅವಳು ಗೆಳತಿಯರ ಸಲಹೆಗೆ ಕಿವಿಗೊಟ್ಟು ನೀತಿ ನಿಯಮಗಳನ್ನೆಲ್ಲ ಗಾಳಿಯಲ್ಲಿ ತೂರಿದಳು. ಕಂಡ ಕಂಡಲ್ಲಿ ಕುಡಿ ನೋಟ ಬೀರಿದಳು. ತನ್ನ ಕೊಂಕು ನೋಟದಿಂದಲೆ ಬೇಟಕೂಟಗಳ ಕಡೆಗೆ ಒಲವನ್ನು ತೋರಿದಳು. ಅಂತೂ ಇಷ್ಟು ದಿನಗಳವರೆಗೆ ಪರಮ ಪತಿವ್ರತೆಯಾಗಿ ಉಳಿದ ಆ ವಿಧವಾ ಬ್ರಾಹ್ಮಣ ಕುಮಾರಿಯು ಕಾಲು ಜಾರಿದಳು.

**ವರಾಹ** :- ಪಾಂಚಾಲ ದೇಶದ ಬ್ರಾಹ್ಮಣನಾದ ವಸುವಿನ ಏಕಮಾತ್ರ ಪುತ್ರಿಯ ಗತಿಯು ಹೇಗೆ ಅಧೋಗತಿಯಾಯಿತೆಂಬುದನ್ನು ನಾನು ನಿನಗೆ ತಿಳಿಸಿದೆ. ಆ ವಸುವಿನ ಐದು ಜನ ಗಂಡು ಮಕ್ಕಳಲ್ಲಿ ಕೊನೆಯವನು ಮಹಾ ಸಾಹಸಿ ಸ್ವಭಾವದವನಾಗಿದ್ದನು. ಸೌಂದರ್ಯವು ಅವನಿಗೆ ತನ್ನ ತಂದೆತಾಯಿಗಳಿಂದಲೇ ಬಳುವಳಿಯಾಗಿ ಬಂದಿದ್ದಿತು. ತನ್ನ ಗುಣದಿಂದಲೇ ಅವನು ಹಣವನ್ನು ಗಳಿಸಿದನು. ವ್ಯಾಪಾರ ಉದ್ಯೋಗದಿಂದ ಅದನ್ನು ಬೆಳೆಸಿದನು. ಸಾಹಸೈಕ ರಸನಾದ ಅವನು ತಂದೆ ಇದ್ದಾಗಲೇ ವ್ಯಾಪಾರಕ್ಕೆಂದು ವೀರ ವೈಶ್ಯರ ಒಂದು ಗುಂಪಿನೊಡನೆ ದೇಶಾಂತರಕ್ಕೆ ಹೋಗಿದ್ದನು. ಆ ವ್ಯಾಪಾರಿ ತಂಡದವರು ದೇಶ ದೇಶಾಂತರಗಳಲ್ಲಿ ಸಂಚರಿಸಿ, ಎಷ್ಟೋ ಬೆಟ್ಟಗಳನ್ನು ದಾಟಿ, ಬಯಲುಗಳನ್ನು ದಾಟಿ ಕಾಲಕ್ರಮದಲ್ಲಿ ಮಧುರೆಯ ಸಮೀಪಕ್ಕೆ ಬಂದರು. ಆ ಎಲ್ಲ ವೈಶ್ಯ ತರುಣರು ನೆಲ,

ನೀರು, ನೆರಳು, ಅರಳು ಎಲ್ಲ ದೃಷ್ಟಿಯಿಂದ ಅನುಕೂಲವಾದ ಸ್ಥಳವೆಂದು ಗರ್ತೇಶ್ವರ ಕ್ಷೇತ್ರದ ಬಳಿಯಲ್ಲಿಯೇ ಬೀಡು ಬಿಟ್ಟರು. ಆ ಪಾಂಚಾಲ ಪುತ್ರನು ತನ್ನ ಮಿತ್ರರೊಡನೆ ಸ್ನಾನ ಮಾಡಿ ವಸ್ತ್ರಾಲಂಕಾರಗಳಿಂದ ಭೂಷಿತನಾಗಿ ದೇವರ ದರ್ಶನಕ್ಕೆಂದು ಹೋದನು. ದೇವಾಲಯದಲ್ಲಿ ದೇವರ ಎದುರು ಸಂಗೀತ ಸೇವೆಯನ್ನು ಸಲ್ಲಿಸುತ್ತಲಿದ್ದ ಅವನೀತಲದ ಅಪ್ಸರೆಯೊಬ್ಬಳನ್ನು ಕಂಡು ಅವನು ಮೋಹಗೊಂಡನು. ತುಂಬು ತಾರುಣ್ಯದ ಆ ತರಳೆಯ ತಾವರೆಗಣ್ಣು, ತೊಂಡೆ ತುಟಿ, ಸುರುಳಿಗುರುಳು, ತುಂಟು ನಗೆ, ವನಪುವ್ವೆಯಾರಗಳನ್ನು ಕಂಡ ಆ ವೈಶ್ಯ ಕುಮಾರನು ಅವಳೊಬ್ಬ ನೆಲದ ಮೇಲೆ ನಡೆದು ಬಂದ ತಿಲೋತ್ತಮೆಯೆಂದೇ ಭಾವಿಸಿದನು. ಅವಳ ಅಮಾನುಷ ಸೌಂದರ್ಯಕ್ಕೆ ಮಾರು ಹೋದ ಅವನು ಆ ತಿಲೋತ್ತಮೆಯ ದಾಸಿಯನ್ನು ತನ್ನ ಬಳಿಗೆ ಬರಮಾಡಿಕೊಂಡು ''ಹೇಗಾದರೂ ಮಾಡಿ ನಿನ್ನ ಒಡತಿಯನ್ನು ನನ್ನೆಡೆಗೆ ಕರೆದುಕೊಂಡು ಬಾ'' ಎಂದು ಹೇಳಿ ಹೊಳೆಯುವ ರತ್ನಹಾರವನ್ನೂ ನೂರಾರು ಚಿನ್ನದ ಬಳೆಗಳನ್ನು, ಅಗರು 'ಅತ್ತರು' ಕೇಶರ ಕರ್ಪೂರಗಳನ್ನೂ ಕೊಟ್ಟು ಕಳಿಸಿದನು. ಇದರಿಂದ ಆ ಯುವಕನು ಕೇವಲ ಚಲುವಿನ ಚಂದ್ರಾಮನು ಮಾತ್ರವಲ್ಲದೇ ಕುಬೇರಕುಮಾರನೂ ಆಗಿದ್ದಾನೆ ಎಂದು ಚತುರೆ ಚಪಲೆಯಾದ ಆ ತಿಲೋತ್ತಮೆಯು ತರ್ಕಿಸಿದಳು. ದಾಸಿಯ ಮುಖಾಂತರ ತನ್ನ ಮನದಾಸೆಯನ್ನು ಹೇಳಿ ಕಳಿಸಿ ಅವನನ್ನು ತನ್ನ ಮನೆಗೆ ಬರಮಾಡಿಕೊಂಡಳು. ಅವನಿಗೆ ಒಲುಮೆದುಂಬಿ ನಲುಮೆಯಿಂದ ತನ್ನ ಸರ್ವಸ್ವವನ್ನೂ ಅರ್ಪಿಸಿದಳು.

ಆ ರೂಪರಾಣಿಯ ರಾಗ ರಸಿಕತೆಗಳಿಂದ ಲುಬ್ಧನಾದ ಆ ವೈಶ್ಯಕುಮಾರನು ಅನುದಿನವೂ ಅವಳ ಮನೆಯಲ್ಲಿಯೇ ರಾತ್ರಿಯೆಲ್ಲ ಕಳೆಯುತ್ತಿದ್ದನು. ಬೆಳಗಿನ ಜಾವದಲ್ಲಿ ಎದ್ದು ಕೃಷ್ಣ ಗಂಗಾ ತೀರ್ಥದಲ್ಲಿ ಸ್ನಾನ ಮಾಡಿ ಶಿಬಿರಕ್ಕೆ ಬರುತ್ತಿದ್ದನು. ಹೀಗೆಯೇ ಆರು ತಿಂಗಳು ಕಳೆಯಿತು. ಒಂದು ದಿನ ಆ ಕೃಷ್ಣ ಗಂಗಾ ತೀರ್ಥಕ್ಕೆ ಸ್ನಾನ ಮಾಡಲು ಸುಮಂತು ಎಂಬ ಸನ್ಯಾಸಿಯು ಬಂದು ಸ್ನಾನ ಮಾಡಿ ತೀರದಲ್ಲಿ ಆನ್ಹಿಕ ಮಾಡುತ್ತ ಕುಳಿತುಕೊಂಡಿದ್ದನು. ಅದೇ ವೇಳೆಯಲ್ಲಿ ತಿಲೋತ್ತಮೆಯ ಮನೆಯಿಂದ ಎದ್ದು ಬಂದ ತರುಣ ವೈಶ್ಯಕುಮಾರನು ಅಲ್ಲಿಗೆ ಸ್ನಾನಕ್ಕೆಂದು ಐತಂದನು. ಸುಮಂತು ಸ್ವಾಮಿಗಳು ಅವನತ್ತ ಕಣ್ಣೆತ್ತಿ ನೋಡಿದರು. ವೈಶ್ಯನ ಮೈ ತುಂಬ ಹುಳಗಳು ಬುಚಗುಡುತ್ತಿದ್ದವು. ಅವನ ಒಂದೊಂದು ರೋಮಕೂಪಗಳಿಂದಲೂ ಕ್ರಿಮಿಗಳು ಉದುರುತ್ತಿದ್ದವು. ಆ ತರುಣನು ಅದಾವುದರ ಪರಿವೆ ಇಲ್ಲದೇ ನೇರವಾಗಿ ಬಂದು ನೀರಿಗೆ ಇಳಿದನು. ''ಹರಯೇ ನಮಃ'' ಎಂದು ಮುಳುಗು ಹಾಕಿದನು. ಮೇಲಕ್ಕೆ ಎದ್ದನು. ಮತ್ತೊಮ್ಮೆ ಮುಳುಗು ಹಾಕಿದನು. ಮತ್ತೆ ಮೇಲೆದ್ದನು. ಹೀಗೆ ಮೂರು ಬಾರಿ ಮುಳುಗು ಹಾಕಿ ಭಕ್ತಿಯಿಂದ ದೇವರ ನಾಮೋಚ್ಚಾರಣೆ ಮಾಡಿ ನೀರು ಬಿಟ್ಟು ತೀರದಲ್ಲಿ ಆ ತರುಣನು ಬಂದು ನಿಂತನು. ಸುಮಂತು ಮುನಿಯು ಮತ್ತೊಮ್ಮೆ ಕಣ್ಣೆತ್ತಿ ಅವನತ್ತ ನೋಡಿದನು. ಅವನೊಬ್ಬ ಸುಂದರ ಚಂದಿರ. ಮೈತೊಳೆದುನಿಂತ ಮನ್ಮಥ.

ಮುನಿ ಏನೂ ಮಾತನಾಡಲಿಲ್ಲ. ತನ್ನ ಜಪವನ್ನು ಮುಂದುವರೆಸಿದ. ಆ ತರುಣ ಮುನಿಗೊಮ್ಮೆ ವಂದಿಸಿದ ತ್ರಿಗರ್ತೇಶ್ವರನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ. ತನ್ನ ಶಿಬಿರದ ದಾರಿ ಹಿಡಿದ. ತನ್ನ ಸ್ಥಾನಕ್ಕೆ ನಡೆದ.

ಮರುದಿನ ಎಂದಿನಂತೆ ಮಂಜುಳ ಮುಂಜಾವು. ಕೃಷ್ಣ ಗಂಗಾ ತೀರ್ಥದ ತೀರದಲ್ಲಿ ಸುಮಂತುಮುನಿ ಸ್ನಾನಮಾಡಿ ಕುಳಿತ. ಆ ವೈಶ್ಯಕುಮಾರನು ಪುನಗಿನ ಬೆಕ್ಕಿನಂತೆ ಗಮಗಮಿಸುತ್ತ ವೇಶ್ಯೆಯ ರಂಗ ಸಜ್ಜಿಕೆಯಿಂದ ಎದ್ದು ಬಂದ. ನೀರಿನಲ್ಲಿ ಮಿಂದ. ತೀರದಲ್ಲಿ ನಿಂದ. ಮತ್ತೆ ಅವನತ್ತ ಸುಮಂತುವಿನ ದೃಷ್ಟಿಕ್ಷೇಪ. ಮೈತುಂಬ ಹುಳಗಳು. ಬುಳು ಬುಳು, ಗುಳುಗುಳು. ರೋಮರೋಮಕೆ ಕೋಟಿಕ್ರಿಮಿಗಳು ಉದುರಿದವು. ಆ ತರುಣ ತೀರ್ಥಜಲದಲ್ಲಿ ಮೈಯನ್ನು ಅದ್ದಿದ. ದೇಹವನ್ನು ನೆನಸಿದ. ಹರಿಯನ್ನು ನೆನೆದ. ನೀರಲ್ಲಿಯೂ ನೆನೆದ. ಮೇಲೆ ಬಂದ. ದಂಡೆಯಲ್ಲಿ ನಿಂದ. ಏನು ಚಂದ! ಎಂಥ ಅಂದ! ಮುನಿ ಮನದಲ್ಲಿ ಏನೋ ಆನಂದ. ಆ ತರುಣ ಮತ್ತೆ ಈ ಯತಿಯ ಪಾದಗಳಿಗೆ ನಮಿಸಿದ. ಈಶ್ವರನಿಗೂ ನಮಿಸಿದ. ಅಲ್ಲಿಂದ ನಿರ್ಗಮಿಸಿದ.

ಮರುದಿನವೂ ಅದೇ ಹಾಡು. ಹೀಗೆ ಎಷ್ಟೋ ದಿನ ನಡೆಯಿತು. ಕೊನೆಗೆ ಒಂದು ದಿನ ಸುಮಂತು ಮುನಿಯು ಸ್ನಾನ ಮಾಡಿ ಆ ತರುಣನನ್ನು ಕೇಳಿಯೇ ಬಿಟ್ಟನು. -

'' ಕುಮಾರ ನೀನು ಯಾರು ? ಎಲ್ಲಿಯವನು ? ನಿನ್ನ ತಂದೆ ಯಾರು ? ತಾಯಿ ಯಾರು ? ನಿನ್ನ ಜಾತಿ ಯಾವುದು ? ಹಗಲಿರುಳು ನೀನು ಇಲ್ಲಿ ಮಾಡುವ ಉದ್ಯೋಗವೇನು ? ನನ್ನ ಎಲ್ಲ ಪ್ರಶ್ನೆಗಳಿಗೂ ಸರಿಯಾಗಿ ಉತ್ತರಕೊಡು.'' ಅದನ್ನು ಕೇಳಿ ಆ ತರುಣನಾದ ವಿಪ್ರಕುಮಾರನು ಇಂತು ವಿವರವಾಗಿ ಉತ್ತರ ಕೊಟ್ಟನು. -

''ನಾನು ಪಾಂಚಾಲದೇಶದ ವಸು ಬ್ರಾಹ್ಮಣನ ಕಿರಿಯ ಮಗ. ವಾಣಿಜ್ಯ ವೃತ್ತಿಯನ್ನು ಅವಲಂಬಿಸಿ ದೇಶಾಂತರಗಳಲ್ಲಿ ವ್ಯಾಪಾರ ಮಾಡಿಕೊಂಡು ಈಗ ಮಧುರಾ ಮಂಡಲಕ್ಕೆ ಬಂದಿದ್ದೇನೆ. ರಾತ್ರಿ ಶಿಬಿರದಲ್ಲಿದ್ದು ಬೆಳಿಗ್ಗೆ ಇಲ್ಲಿಗೆ ಬಂದು ಸ್ನಾನಮಾಡಿ ಈ ಕಾಲಂಜರ ಕ್ಷೇತ್ರದಲ್ಲಿಯ ತ್ರಿಗರ್ತೇಶ್ವರನ ಸಂದರ್ಶನವನ್ನು ತೆಗೆದುಕೊಂಡು ನಿಮಗೆ ನಮಸ್ಕಾರ ಮಾಡಿ ಮತ್ತೆ ನನ್ನ ಶಿಬಿರಕ್ಕೆ ಹೊರಟು ಹೋಗುತ್ತೇನೆ.'' ಆ ತರುಣ ಕುಮಾರನ ಈ ಮಾತುಗಳನ್ನು ಕೇಳಿ ಸುಮಂತು ಮುನಿಗೆ ಸಮಾಧಾನವಾಗಲಿಲ್ಲ. ಅವನು ಮತ್ತೆ ಆ ಕುಮಾರನನ್ನು ಕುರಿತು ಇಂತು ನುಡಿದನು. -

'' ವತ್ಸ, ನಾನು ಪ್ರತಿನಿತ್ಯವೂ ನಿನ್ನನ್ನು ಪರೀಕ್ಷೆ ಮಾಡುತ್ತಲಿದ್ದೇನೆ. ನೀನು ಇಲ್ಲಿಗೆ ಬಂದಾಗ ನಿನ್ನ ಮೈತುಂಬ ಹುಳಗಳು ಹರಿದಾಡುತ್ತಲಿರುತ್ತವೆ. ಹಾಗೂ ನಿನ್ನ ಮುಖವು ಕಳೆಗೆಟ್ಟು ತೇಜೋಹೀನವಾಗಿ ಬಣ್ಣಗೆಟ್ಟು ಹೋಗಿರುತ್ತದೆ. ಆದರೆ ಅದೇ ನೀನು ಸ್ನಾನ ಮಾಡಿದ ಕೂಡಲೇ ನಿನ್ನ ಮೈಮೇಲಿನ ಹುಳಗಳೆಲ್ಲವೂ ಮಾಯವಾಗಿ ಬಿಡುತ್ತವೆ. ಮತ್ತೂ ಮೈಮುಖಗಳ ಮೇಲೆ ಅಪೂರ್ವವಾದ ಚೆಲುವು ಚಿಮ್ಮುತ್ತದೆ. ಕಾಂತಿಯು ಕುಣಿಯುತ್ತದೆ. ಇದೇನು ಆಶ್ಚರ್ಯ! ನಿನ್ನಲ್ಲಿ ರಹಸ್ಯವಾಗಿ ಸಂಭವಿಸಿರುವ ಯಾವುದೋ ಮಹಾಪಾಪವು ಇರುತ್ತದೆ. ಆ ಭಯಂಕರ ಪಾಪವು ಈ ತೀರ್ಥದ ಪ್ರಭಾವದಿಂದ ಇಲ್ಲಿಯ ನೀರಿನಲ್ಲಿ ನೀನು ಸ್ನಾನ ಮಾಡುತ್ತಲೂ ದೂರವಾಗುತ್ತದೆ. ಈ ಕಾಲಿಂಜರ ಕ್ಷೇತ್ರದ ಸಂಪರ್ಕದಿಂದ ನಿನ್ನ ದೇಹವು ಈಗೇನೊ ತಿಳಿಯಾಗಿ ಹೊಳೆಯುತ್ತದೆ. ಆದರೆ ಸ್ನಾನಕ್ಕೆ ಮುನ್ನ ಹುಳಗಳ ಹೊಳೆಯಾಗಿ ಕೊಳೆಯುತ್ತದೆ. ಈ ಕೊಳೆತ ಹೊಳೆತಗಳ ಕಾರಣವಾದ ನಿನ್ನ ಗುಪ್ತರೋಗವನ್ನೂ ಭೀಕರ ಪಾಪವನ್ನೂ ನನಗೆ ಗುರುತಿಸಬೇಕಾಗಿದೆ. ಅದರ

ಮೇಲಿಂದ ಈ ತೀರ್ಥದ ಮಹಿಮೆಯನ್ನು ತೂಗಿ ತಿಳಿಯಬೇಕಾಗಿದೆ. ವಿಚಾರಿಸಿ ಹೇಳು. ನೀನು ಮಾಡುವ ಘೋರ ಗುಪ್ತವಾದ ಪಾಪವು ಯಾವದು ? '' ತ್ರಿಕಾಲ ಜ್ಞಾನಿಯಾದ ಆ ಮುನಿಯ ಪ್ರಶ್ನೆಗಳನ್ನು ಕೇಳಿ ಆ ಬ್ರಾಹ್ಮಣ ಕುಮಾರನಿಗೆ ನಾಚಿಕೆಯಾಯಿತು. ಹೇಸಿಕೆಯೂ ಎನಿಸಿತು. ಅವನು ಏನೂ ಉತ್ತರ ಕೊಡದೇ ತಲೆ ತಗ್ಗಿಸಿಕೊಂಡು ಅಲ್ಲಿಂದ ಎದ್ದು ಬಂದು ಬಿಟ್ಟನು. ಆ ಯುವಕನು ಅಲ್ಲಿಂದ ನೇರವಾಗಿ ತನ್ನ ನೆಚ್ಚಿನ ನಲ್ಲೆಯಾದ ತಿಲೋತ್ತಮೆಯ ಮನೆಗೆ ಬಂದನು. ಏಕಾಂತದಲ್ಲಿ ಅವಳನ್ನು ಕರೆದು '' ಸುಂದರೀ, ನೀನು ಯಾರು ? ನಿನ್ನ ತಂದೆ ಯಾರು ? ನಿನ್ನ ದೇಶ ಯಾವುದು ? ಇಲ್ಲಿಗೇಕೆ ಬಂದೆ ? '' ಎಂದು ಮುಂತಾಗಿ ಕೇಳಿದನು.

ತನ್ನ ಮನದನ್ನನ ಮಾತಿಗೆ ಆ ಮಾನಿನಿಯು ಮಾತನಾಡದೇ ಕುಳಿತಳು. ಅವನು ಮತ್ತೆ ಕೇಳಿದ. ಅದಕ್ಕೆ ಅವಳ ಉತ್ತರ ಮೌನ. ಆ ತರುಣನ ಪುನಃ ಪ್ರಶ್ನೆ. ಉತ್ತರಕ್ಕಾಗಿ ಮತ್ತೆ ಮತ್ತೆ ಅವಳಿಗೆ ಜುಲುಮೆ. ಒಲುಮೆ. ಏನಾದರೂ ಅವಳ ಗುಂಭ ಗಾಂಭೀರ್ಯ ಇಳಿಯಲಿಲ್ಲ. ತರುಣನ ಕುತೂಹಲ ಅಳಿಯಲಿಲ್ಲ. ಕೊನೆಗೆ ಆ ಯುವಕನಿಗೆ ನಿರಾಶೆಯಾಯಿತು. ಅವನ ಎಲ್ಲ ಒತ್ತಾಯ ಒತ್ತಾಶೆಗಳಿಗೂ ಅವಳ ಮೌನಗುಂಭ, ಆ ಗುಂಭ ಗಂಭೀರವಾಗಿಯೇ ಉಳಿದುಕೊಂಡಾಗ ಅವನು ಸಿಡಿಮಿಡಿಗೊಂಡು ಹೇಳಿದ. '' ನಾನು ಇಲ್ಲಿಯೇ ನಿನ್ನೆದುರು ಪ್ರಾಣ ಕೊಡುತ್ತೇನೆ '' ಎಂದು. ಆಗ ಆ ತಿಲೋತ್ತಮೆಯು ತಾವರೆದಳದಿಂದ ಕಂಬನಿಗಳನ್ನು ಉದುರಿಸುತ್ತ ಬಾಯಿ ಬಿಟ್ಟು ತನ್ನ ಮುಚ್ಚಿದ ಜೀವನವನ್ನು ಬಿಚ್ಚಿ ತೋರಿಸಿದಳು. -

''ಕಾಂತ, ಗಂಗಾ ನದಿಯ ಉತ್ತರ ತೀರದಲ್ಲಿ ರಮ್ಯವಾದ ಪಾಂಚಾಲ ನಗರವಿರುತ್ತದೆ. ನನ್ನ ತಂದೆತಾಯಿಗಳು ಆ ಊರಿನವರು. ಹಿಂದೊಮ್ಮೆ ಅಲ್ಲಿ ಭೀಕರವಾದ ಬರಗಾಲವು ಕಾಲು ಹಾಕಿತು. ಅದರಿಂದ ಆ ನಾಡಿನ ಬಡ ಕುಟುಂಬಗಳೆಲ್ಲ ಅಲ್ಲಿಂದ ಕಾಲು ಕಿತ್ತಬೇಕಾಯಿತು. ಈ ಪಾಪಿ ಜೀವವನ್ನು ಹಡೆದ ಎರಡು ಪುಣ್ಯ ಜೀವಗಳು ಕ್ಷಾಮಕ್ಕೆ ತುತ್ತಾಗಿ ಮಾತೃಭೂಮಿಯನ್ನು ಬಿಟ್ಟು ನರ್ಮದಾ ತೀರದ ಒಂದು ದೂರದ ಊರಿಗೆ ಹೋಗಿ ಕಾಲೂರಿದರು. ಅವರಿಗೆ ಅಲ್ಲಿ ಐದು ಗಂಡು ಒಂದು ಹೆಣ್ಣು ಹುಟ್ಟಿದವು. ನಾನೇ ಆ ಹೆಣ್ಣು (ಹುಣ್ಣು). ಗಂಡುಮಕ್ಕಳಲ್ಲಿ ಕಿರಿಯನು ಹಣಗಳಿಸುವ ಹವ್ಯಾಸದಿಂದ ಎಳೆಮೆಯಲ್ಲಿಯೇ ದೇಶಾಂತರಕ್ಕೆಂದು ವ್ಯಾಪಾರಕ್ಕೆ ಊರು ಬಿಟ್ಟು ಹೊರಟುಹೋದನು. ಅನಂತರ ನನ್ನ ದುರದೃಷ್ಟದಿಂದ ಹಡೆದ ತಾಯಿ ಮಡಿದಳು. ಪಡೆದ ತಂದೆಯೂ ಅದೇ ದಾರಿ ಹಿಡಿದರು. ನನ್ನನ್ನೇನೋ ಅವರು ಬದುಕಿ ಇದ್ದಾಗಲೇ ಮದುವೆ ಮಾಡಿ ಕೊಟ್ಟಿದ್ದರು. ಓರ್ವ ವಿಪ್ರಕುವರರು ನನ್ನ ಕೊರಳಿಗೆ ಮಂಗಳ ಸೂತ್ರವನ್ನು ಕಟ್ಟಿದರು. ಆದರೆ ಆ ಭಾಗ್ಯವೂ ಈ ದುರುಳ ತರಳೆಗೆ ದಕ್ಕಲಿಲ್ಲ. ಅವರೆಲ್ಲರ ಅಸ್ಥಿಯನ್ನು ಮಧುರೆಯ ಅರ್ಧಚಂದ್ರ ಕ್ಷೇತ್ರ ತೀರ್ಥದಲ್ಲಿ ಹಾಕಬೇಕೆಂದು ಯಾತ್ರಿಕರೊಡನೆ ಇಲ್ಲಿಗೆ ಬಂದೆನು.

ಇಲ್ಲಿ ನನಗೆ ಹೊಸದಾದ ಒಂದು ಪಾಪಕೂಪವೇ ಸಿದ್ಧವಾಗಿತ್ತು. ನನ್ನ ರೂಪ ಸೌಂದರ್ಯ ಪ್ರಾಯಗಳು ಅನೇಕ ಗಂಡುಗಳ ಮನಸ್ಸನ್ನು ಸೆಳೆದವು. ಅನೇಕ

ಬೆಲೆವೆಣ್ಣುಗಳ ಬಳಗವೇ ನನ್ನ ಸುತ್ತುಮುತ್ತು ಮುಕುರಿತು. ಅವರ ಬಣ್ಣದ ಬದುಕಿಗೆ, ಬೆಣ್ಣೆಯ ಮಾತಿಗೆ ನಾನು ಮಾರು ಹೋದೆ. ಬಹು ದಿನಗಳಿಂದ ಜತನವಾಗಿ ಕಾದುಕೊಂಡು ಬಂದ ನನ್ನ ಶೀಲವನ್ನು ಮಾರಲಿಕ್ಕೆ ಇಟ್ಟೆ. ಅಯ್ಯೋ ನಾನು ಕೆಟ್ಟೆ ಕೆಟ್ಟೆ. ನನ್ನ ಸತ್ವಸತೀತ್ವಗಳನ್ನೆಲ್ಲ ಕಾಮರಾಗಗಳ ಉರಿಯಲ್ಲಿ ಸುಟ್ಟು ಬಿಟ್ಟೆ. ನನ್ನ ಹಿಂದಿನ ತಲೆತಲಾಂತರದ ಹಿರಿಯರನ್ನೆಲ್ಲ ನರಕದಲ್ಲಿ ನೂಕಿದೆ "ಎಂದು ದೊಡ್ಡ ದನಿ ತೆಗೆದು ಅಳತೊಡಗಿದಳು. ಅವಳ ಮನಸ್ಸಿನಲ್ಲಿ ಮೂಡಿದ ಪಶ್ಚಾತ್ತಾಪವು ಕಣ್ಣೀರಿನ ರೂಪದಿಂದ ಕೋಡಿಯಾಗಿ ಹರಿಯಿತು. ಆ ಪಾಂಚಾಲ ಬ್ರಾಹ್ಮಣನು ತಿಲೋತ್ತಮೆಯ ಕತೆಯನ್ನು ಕೇಳಿ ನಿಂತಲ್ಲಿಯೇ ನೆಲಕ್ಕುರುಳಿದನು. ಕುಳಿತಲ್ಲಿಯೇ ಕುಕ್ಕರಬಿದ್ದನು. ಅವಳು ಗಟ್ಟಿಯಾಗಿ ಧನಿ ತೆಗೆದು ಚಿಟ್ಟನೇ ಚೀರಿದಳು. ಸುತ್ತಲಿನ ಜನರೆಲ್ಲರೂ ಅಲ್ಲಿಗೆ ಓಡಿಬಂದರು. ಗಾಳಿ ಬೀಸಿದರು. ತಲೆಗೆ ತಣ್ಣೀರು ತಟ್ಟಿದರು. ಶೀತೋಪಚಾರ ಮಾಡಿದರು. ಕೊನೆಗೆ ಅವನು ಚೇತರಿಸಿಕೊಂಡು ಕಣ್ಣು ತೆರೆದಾಗ ನೆರದ ನಾರಿಯರೆಲ್ಲರೂ ಆ ತರುಣ ಕುಮಾರನಿಗೆ ಈ ಮೂರ್ಛೆಗೆ ಕಾರಣವನ್ನು ಕೇಳಿದರು. ಆಗ ಅವನು ಕಣ್ಣಿನಿಂದ ಧಾರಾಕಾರವಾಗಿ ಕಂಬನಿಗಳನ್ನು ಉದುರಿಸುತ್ತ ದುಃಖಾತಿಶಯದಿಂದ ಬಿಕ್ಕುತ್ತ ತನ್ನ ಕತೆಯನ್ನು ಹೇಳಿದನು. ಅವನಿಗೆ ತಾನು ಮಾಡಿದ ಘೋರ ಪಾಪಕ್ಕೆ ಏನು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂಬುದೇ ತಿಳಿಯಲಿಲ್ಲ. ಕೇವಲ ಬ್ರಹ್ಮಹತ್ಯಾ, ಸುರಾಪಾನ, ವ್ಯಭಿಚಾರಾದಿ ಪಾಪಗಳಿಗೆ ಅನೇಕ ಪ್ರಾಯಶ್ಚಿತ್ತಗಳನ್ನು ಹೇಳಿದ್ದು ಅವನಿಗೆ ಗೊತ್ತಿತ್ತು. ಆದರೆ ಸೋದರೀ ಸಂಗಮಾಡಿದ ಪಾಪಕ್ಕೆ ಮಾತ್ರ ಯಾವ ಶಾಸ್ತ್ರದಲ್ಲಿಯೂ ಪ್ರಾಯಶ್ಚಿತ್ತವನ್ನು ಹೇಳಿಲ್ಲ ಎಂಬುದು ಅವನಿಗೆ ಖಾತ್ರಿಯಿತ್ತು. ಪ್ರಾಯಶ್ಚಿತ್ತವನ್ನು ಮೀರಿತ್ತು ಈ ಪಾಪ. ಇದಕ್ಕಿರುವ ಒಂದೇ ನಿಷ್ಕೃತಿ ಎಂದರೆ ದೇಹನಾಶ. ಆತ್ಮಹತ್ಯೆ. ತಾಯಿ, ಗುರುಪತ್ನಿ, ಸೋದರಿ, ಮಗಳು, ಸೊಸೆ ಇವರೊಡನೆ ಸಂಗಮಾಡಿದವನು ಬೆಂಕಿಯಲ್ಲಿ ಬೆಂದು ಬೂದಿಯಾಗಿ ಹೋಗಬೇಕು ಎಂಬುದೇ ಶಾಸ್ತ್ರದ ಅನುಶಾಸನವಾಗಿದ್ದಿತು.

ತಿಲೋತ್ತಮೆಗಾದರೂ ಆ ತರುಣ ಕುಮಾರನು ಹೇಳಿದ ಆತ್ಮಕತೆಯನ್ನು ಕೇಳಿದ ಬಳಿಕ ಇವನು ತನ್ನ ಅಣ್ಣನೇ ಎಂದು ಗೊತ್ತಾಯಿತು. ಒಂದು ಕ್ಷಣ ಅವಳ ಮೈಯೆಲ್ಲ ಭಯದಿಂದ ಕಂಪಿಸಿ ಹೋಯಿತು. ಕಣ್ಣು ಕತ್ತಲೆ ಗವಿಯಿತು. ಮೂರ್ಛೆಯ ಮಡಿಲಲ್ಲಿ ಒಂದು ಕ್ಷಣ ಅವಳು ಬಿದ್ದು ತಾನೇ ಎದ್ದಳು. ಜೀವನದಲ್ಲಿಯೇ ಜುಗುಪ್ಸೆ ಮೂಡಿತು. ಉಸಿರಾಡಲಿಕ್ಕೂ ಅವಳಿಗೆ ಓಕರಿಕೆ ಎನಿಸ ತೊಡಗಿತು. ಕೂಡಲೇ ಅವಳು ಅಲ್ಲಿಂದ ಎದ್ದಳು.ತನ್ನ ಮೈಮೇಲೆ ಇರುವ ಲಕ್ಷಾವಧಿ ರೂ. ಬೆಲೆ ಬಾಳುವ ಮುತ್ತುರತ್ನ ಆಭರಣಗಳನ್ನೆಲ್ಲ ಬ್ರಾಹ್ಮಣರನ್ನು ಕರೆಯಿಸಿ ದಾನ ಮಾಡಿದಳು. ಅನೇಕ ಮುತ್ತೈದೆಯರನ್ನು ಕರೆಯಿಸಿ ತನ್ನ ಭೋಗಭಾಗ್ಯವನ್ನೆಲ್ಲ ಬಳಿದು ಕೊಟ್ಟು ಕೈಮುಗಿದಳು. ತನ್ನ ಸ್ಥಿರಚರ ಆಸ್ತಿಯನ್ನೆಲ್ಲ ಕಾಲಿಂಜರ ಕ್ಷೇತ್ರದ ಅಲಂಕಾರ ಅನ್ನಛತ್ರ ಅರವಟ್ಟಿಗೆಗಳಿಗಾಗಿಯೂ ಮತ್ತು ಸುಂದರವಾದ ಉದ್ಯಾನವನ ನಿರ್ಮಾಣಕ್ಕಾಗಿಯೂ ಗೊತ್ತುಪಡಿಸಿ ದಾನ ಕೊಟ್ಟುಬಿಟ್ಟಳು. ಅನಂತರ ಕೃಷ್ಣಾ ಗಂಗಾ ಕ್ಷೇತ್ರ ತೀರ್ಥದ ಬಳಿಯಲ್ಲಿಯೇ ವಿಧಿಪೂರ್ವಕವಾಗಿ ಒಂದು ಚಿತೆಯನ್ನು ತಯಾರು ಮಾಡಿಸಿದಳು. ಆತ್ಮಶುದ್ಧಿಗಾಗಿ ಅದನ್ನು ಹೊತ್ತಿಸಿ ಆತ್ಮಾರ್ಪಣೆ ಮಾಡಬೇಕೆಂದು ಸಂಕಲ್ಪಿಸಿದಳು.

ಅದರಂತೆ ಆ ಬ್ರಾಹ್ಮಣಕುಮಾರನಾದರೂ ಆ ತೀರ್ಥದಲ್ಲಿ ಸ್ನಾನ ಮಾಡಿದನು. ಗರ್ತೇಶ್ವರನಿಗೆ ನಮಿಸಿದನು. ತನಗೆ ಗುರುವಾಗಿ ಒದಗಿದ ಸುಮಂತು ಮುನಿಯನ್ನು ನಮಸ್ಕರಿಸಿ ಅವರ ಮುಂದೆ ಆಶೀರ್ವಾದ ಮಾಡಬೇಕೆಂದು ತಲೆ ಮಣಿಸಿ ಕುಳಿತುಕೊಂಡನು. ಅವರ ಅಪ್ಪಣೆಯಂತೆ ಮುಂದೆಲ್ಲವನ್ನೂ ಏರ್ಪಡಿಸಿದನು. ಸಾಯುವ ಮುನ್ನ ಆ ಶ್ರೀಮಂತನಾದ ಬ್ರಾಹ್ಮಣ ಕುಮಾರನು ಅಗ್ನಿ ಪ್ರವೇಶಕ್ಕೆ ಮೊದಲು ಮಾಡಬೇಕಾದ ವಿಧಾನಗಳನ್ನೆಲ್ಲ ಮಾಡಿಕೊಂಡನು. ತಾನು ವಿವಿಧ ದೇಶಗಳಲ್ಲಿ ವ್ಯಾಪಾರ ಮಾಡಿ ತಂದ ವಿಪುಲವಾದ ಹಣವನ್ನು ಕೊಟ್ಟು ಅನೇಕ ಗ್ರಾಮಗಳನ್ನೂ ಹೊಲಮನೆಗಳನ್ನೂ ಕೊಂಡನು. ಮಧುರೆಯ ಎಲ್ಲ ಬ್ರಾಹ್ಮಣರನ್ನೂ ಕರೆಯಿಸಿ ಅವರಿಗೆಲ್ಲ ಆ ಗ್ರಾಮಧಾಮ ಧನಕನಕ ಮುತ್ತುರತ್ನಗಳನ್ನು ಧಾರಾಳವಾಗಿ ದಾನಕೊಟ್ಟು ಕೈ ಮುಗಿದನು. ಕಾಲಿಂಜರದೇವಾಲಯ ನಿರ್ಮಾಣಕ್ಕೆಂದು ಹಣವನ್ನು ಬೇರೆ ತೆಗೆದಿರಿಸಿದನು. ಛತ್ರಸತ್ರಗಳಿಗಾಗಿಯೂ ದುಡ್ಡನ್ನು ಕೊಟ್ಟನು. ಈಶಾವಾಸ್ಯ ಉಪನಿಷನ್ಮಂತ್ರವನ್ನು ಬ್ರಾಹ್ಮಣರಿಂದ ಜಪ ಮಾಡಿಸಿ ಪ್ರಭೂತವಾಗಿ ದಕ್ಷಿಣೆ ಕೊಟ್ಟನು. ಕೊನೆಗೆ ತನಗೆ ತನ್ನ ಪಾಪದ ಅರಿವನ್ನು ತಂದುಕೊಟ್ಟ ಸುಮಂತುಮುನಿಗಳ ಬಳಿಗೆ ಬಂದು ಅವರ ಪಾದವನ್ನು ಗಟ್ಟಿಯಾಗಿ ಹಿಡಿದು ಬಿಕ್ಕುತ್ತ ಬಿನ್ನವಿಸಿದನು.-

''ಸ್ವಾಮಿ, ನೀವು ನಿಜವಾಗಿಯೂ ತ್ರಿಕಾಲಜ್ಞರು. ನನ್ನ ಅಗಮ್ಯಾಗಮನ ಪಾತಕವನ್ನು ತಿಳಿದೇ ನನಗೆ ಎಚ್ಚರಿಕೆ ಕೊಟ್ಟಿರಿ. ಸಹೋದರೀ ಗಮನದಿಂದ ನನ್ನ ಮೈಯೆಲ್ಲ ಕ್ರಿಮಿಕೀಟ ಮೆತ್ತುತ್ತಿತ್ತು. ಮತ್ತೆ ಕಾಲಿಂಜರ ಕ್ಷೇತ್ರದ ಪ್ರಭಾವ ಹಾಗೂ ಕೃಷ್ಣಗಂಗೆಯ ಸ್ನಾನದ ಮಹಿಮೆಯಿಂದ ಆ ಕ್ರಿಮಿನಾಶವಾಗುತ್ತಿತ್ತು. ಆದಕ್ಕಾಗಿ ನಿಮ್ಮ ಪಾದಗಳಿಗೆ ಬಿದ್ದ ಈ ಪಾಪಿಯನ್ನು ಕ್ಷಮಿಸಿರಿ ಅಪ್ಪಣೆ ಕೊಡಿರಿ '' ಎಂದು ಹೇಳಿ ದೀರ್ಘದಂಡದಂತೆ ಅವರ ಅಡಿ ಹುಡಿಯಲ್ಲಿ ಹೊರಳಾಡಿ ಬಿದ್ದು ಎದ್ದನು. ಉರಿಯುವ ಚಿತೆಗೆ ಮತ್ತೆ ತುಪ್ಪವನ್ನು ಹಾಕಿ ಉರಿಯನ್ನು ಪುಟಗೊಳಿಸಿ ಧಗಧಗಿಸುವ ಆ ಬೆಂಕಿಯ ಬಣಿವೆಯಲ್ಲಿ ಆಚೆಯಿಂದ ಬ್ರಾಹ್ಮಣನೂ ಈಚೆಯಿಂದ ಅವನ ಸಹೋದರಿಯೂ ಬೀಳ ಹೊರಟರು. ಕೂಡಲೇ ಆಕಾಶವಾಣಿಯಾಯಿತು. ' ನಿಲ್ಲಿರಿ. ದೂರ ಸರಿಯಿರಿ. ನೀವು ಮಹಾ ಪಾಪಿಗಳಾದರೂ ಈ ಮಧುರಾಮಂಡಲದ ಕಾಲಿಂಜರ ಕ್ಷೇತ್ರದ ಮಹಿಮೆಯಿಂದಲೂ, ಕೃಷ್ಣಾ ಗಂಗಾತೀರ್ಥದ ಸ್ನಾನದಿಂದಲೂ ನಿಮ್ಮ ಪಾಪಗಳೆಲ್ಲ ಪರಿಹಾರವಾಗಿವೆ. ಶ್ರೀ ಹರಿಯು ಸಂಚರಿಸಿದ ಅವನ ಪಾದ ಚಿನ್ಹ ಲಾಂಛಿತವಾದ ಈ ಸ್ಥಳವು ಬ್ರಹ್ಮಲೋಕ ಸಮಾನವಾಗಿದೆ. ಬೇರೆಡೆಯಲ್ಲಿ ಮಾಡಿದ ಪಾಪವು ಪುಣ್ಯಕ್ಷೇತ್ರಕ್ಕೆ ಬಂದರೆ ನಾಶವಾಗುವದು. ಪುಣ್ಯಕ್ಷೇತ್ರದಲ್ಲಿ ಮಾಡಿದ ಪಾಪವು ವಜ್ರಲೇಪವಾಗುವದು ಎಂಬ ಮಾತು ಇತರ ತೀರ್ಥಕ್ಷೇತ್ರಗಳ ವಿಷಯದಲ್ಲಿ ಸತ್ಯವಾಗಿದೆ. ಆದರೆ ಮಧುರಾ ಕ್ಷೇತ್ರದ ವಿಷಯದಲ್ಲಿ ಮಾತ್ರ ಇಲ್ಲಿಯ ಕೃಷ್ಣ ಗಂಗಾ ಹಾಗೂ ಗಂಗಾಸಾಗರ ಸಂಗಮ ಮುಂತಾದ ಪುಣ್ಯ ತೀರ್ಥಗಳಲ್ಲಿ ಸ್ನಾನ ಮಾಡಿದರೆ ಈ ಪುಣ್ಯ ಕ್ಷೇತ್ರದಲ್ಲಿ ಮಾಡಿದ ಬ್ರಹ್ಮಹತ್ಯಾದಿ ಪಾಪಗಳು ಕಳೆದು ಹೋಗುವವು.

ಕಾರ್ತೀಕ ಮಾಸದ ಶುಕ್ಲ ಕೃಷ್ಣಪಕ್ಷಗಳ ಏಕಾದಶಿಯ ದಿನ 'ವಿಶ್ರಾಂತಿ ತೀರ್ಥ'ದಲ್ಲಿಯೂ ದ್ವಾದಶಿಯ ದಿನ 'ಸೌಕರ ತೀರ್ಥ'ದಲ್ಲಿಯೂ, ತ್ರಯೋದಶಿಯ

ದಿನ 'ನೈಮಿಷಾರಣ್ಯ'ದ ತೀರ್ಥದಲ್ಲಿಯೂ ಚತುರ್ದಶಿಯ ದಿನ ಪ್ರಯಾಗದ 'ತ್ರಿವೇಣೀ ಸಂಗಮ'ದಲ್ಲಿಯೂ, ಪೌರ್ಣಮೆಯ ದಿನ 'ಪುಷ್ಕರ ಕ್ಷೇತ್ರ'ದಲ್ಲಿಯೂ ಸ್ನಾನ ಮಾಡುವದರಿಂದ ಸರ್ವ ಪಾಪವು ಪರಿಹಾರವಾಗುತ್ತದೆ. ಈ ಪಂಚ ತೀರ್ಥಗಳಲ್ಲಿಯೂ ಮತ್ತೂ ಮಧುರಾ ಮಂಡಲದ 'ಅಗ್ನಿಕುಂಡ ತೀರ್ಥ', 'ಸರಸ್ವತೀ ತೀರ್ಥ', 'ಕಾಲಿಂಜರ ತೀರ್ಥ'ಗಳಲ್ಲಿಯೂ ಸ್ನಾನಮಾಡುವದರಿಂದ ಲಭಿಸುವ ಪುಣ್ಯ ಫಲದ ಹತ್ತರಷ್ಟು ಪುಣ್ಯ ಫಲವನ್ನು ಬರೀ ಕೃಷ್ಣ ಗಂಗಾತೀರ್ಥದಲ್ಲಿ ಸ್ನಾನ ಮಾಡುವದರಿಂದ ಪ್ರತಿದಿನವೂ ಪಡೆಯಬಹುದು. ತಿಳಿದಾಗಲಿ, ತಿಳಿಯದೆ ಆಗಲೀ, ಎಲ್ಲಿಯೇ ಆಗಲಿ, ಮಾನವರು ಮಾಡಿದ ಮಹಾ ಮಹಾ ಪಾತಕಗಳೆಲ್ಲವೂ ಈ ಕೃಷ್ಣ ಗಂಗಾತೀರ್ಥದಲ್ಲಿ ಸ್ನಾನ ಮಾಡುವದರಿಂದ ಅನಾಯಾಸವಾಗಿ ಪರಿಹೃತವಾಗುವವು. ಈ ದಿವ್ಯ ತೀರ್ಥದ ಮಹಾ ಮಹಿಮೆಯನ್ನು ಶ್ರೀ ವರಾಹ ಸ್ವಾಮಿಯು ಭೂದೇವಿಗೆ ಹೇಳಿದನು.''

ಹೀಗೆ ಆಕಾಶವಾಣಿಯು ನುಡಿದದ್ದನ್ನು ಕೇಳಿ ಆ ಪಾಂಚಾಲ ಬ್ರಾಹ್ಮಣ ಕುವರನು ಅಲ್ಲಿಯೇ ಕುಳಿತ ಸುಮಂತು ಮುನಿಯನ್ನು ನಮಿಸಿ ಕೇಳಿದನು- ''ಬ್ರಹ್ಮನ್, ನೀವು ನನಗೆ ತಂದೆಯಾಗಿದ್ದೀರಿ. ಗುರುವೂ ಆಗಿದ್ದೀರಿ. ಈಗ ನಾನು ಏನು ಮಾಡಬೇಕು? ನಾನಂತೂ ತಿಳಿಯದೇ ಮಾಡಿದ ಘೋರಪಾಪದ ಪ್ರಾಯಶ್ಚಿತ್ತಕ್ಕಾಗಿ ಅಗ್ನಿಪ್ರವೇಶ ಮಾಡಹೊರಟಿದ್ದೇನೆ. ಆಕಾಶವಾಣಿಯು 'ಬೇಡ' ಎಂದು ನುಡಿಯುತ್ತಲಿದೆ. ಈ ಅಗ್ನಿ ಸ್ನಾನದಿಂದ ನನ್ನನ್ನು ತಡೆಯತ್ತಲಿದೆ. ಈಗ ನಾನು ಏನು ಮಾಡಬೇಕು ತಿಳಿಸಿರಿ, ನಿಮ್ಮ ಅಪ್ಪಣೆಯಂತೆ ನಡೆಯುತ್ತೇನೆ.'' ಆ ಶಿಷ್ಯನ ಬಿನ್ನಹವನ್ನು ಕೇಳಿ ಸುಮಂತು ಮುನಿಯು ಸಾರಾಸಾರ ವಿಚಾರ ಮಾಡಿ ಮಾತನಾಡಿದನು -

''ವತ್ಸ, ಆಕಾಶವಾಣಿಯು ಹೇಳಿದ ಮಾತು ನಿಜವಾಗಿದೆ. ಆ ಅಶರೀರ ವಾಣಿಯು ಎಂದೂ ಹುಸಿ ನುಡಿಯುವದಿಲ್ಲ. ಪ್ರತಿದಿನವೂ ಈ ತೀರ್ಥದಲ್ಲಿ ಸ್ನಾನಮಾಡುವದಕ್ಕಿಂತ ಮೊದಲು ನಿನ್ನ ದೇಹದಲ್ಲಿ ಕಾಣುತ್ತಿದ್ದ ಪಾಪವು ನನ್ನ ಕಣ್ಣೆದುರಿಗೇ ನೀನು ಸ್ನಾನ ಮಾಡಿದಕೂಡಲೇ ಹೊರಟು ಹೋಗುತ್ತಿತ್ತು. ನಿನ್ನ ಪಾಪ ಪರಿಹಾರವು ಈ ತೀರ್ಥ ಸ್ನಾನದಿಂದ ಪ್ರತಿದಿನವೂ ನನ್ನ ಪ್ರತ್ಯಕ್ಷ ಸಿದ್ಧವಾಗಿ ನನ್ನ ಕಣ್ಣೆದುರೆ ನಡೆಯುತ್ತಿತ್ತು. ನೀನು ಮತ್ತೆ ದುಷ್ಕಾರ್ಯ ಮಾಡಿ ದಿನದಿನವೂ ಆ ಪಾಪವನ್ನು ಮೈಗೆ ನೀನಾಗಿ ಅಂಟಿಸಿಗೊಳ್ಳುತ್ತಲಿದ್ದೆ. ಆದರೆ ಈಗ ನಿನಗೆ ನಿನ್ನ ಪಾಪದ ಅರಿವು ಉಂಟಾಗಿದೆ. ಕೃತಕಾರ್ಯಕ್ಕಾಗಿ ಪಶ್ಚಾತ್ತಾಪವೂ ಮನಸ್ಸಿನಲ್ಲಿ ಮೂಡಿದೆ. ಇನ್ನು ನೀನು ಮುಂದೆ ಪುನಃ ಆ ದುಷ್ಕೃತ್ಯವನ್ನು ಮಾಡಲಾರಿ. ಆ ಘೋರ ಪಾಪವು ಇನ್ನು ಮೇಲೆ ನಿನಗೆ ತಗಲಲಾರದು. ತಟ್ಟಲಾರದು. ನಿನ್ನ ಮೈ ಮುಟ್ಟಲಾರದು. ಹಿಂದಿನ ಪಾಪವಂತೂ ಇಂದಿನ ಸ್ನಾನದಿಂದಲೇ ಕಳೆದುಹೋಗಿದೆ. ತೀರ್ಥದಲ್ಲಿ ತೊಳೆದು ಹೋಗಿದೆ. ನಿನ್ನಲ್ಲಿ ಈ ಪುಣ್ಯ ತೀರ್ಥದ ಪ್ರಭಾವದಿಂದ ಆ ಪಾಪ ಲವಲೇಶವೂ ಉಳಿದಿಲ್ಲ.

ಅಂದ ಬಳಿಕ ಇನ್ನೇಕೆ ಈ ಅಗ್ನಿಪ್ರವೇಶ ? ಇನ್ನು ಮೇಲೆ ನೀನೂ ನಿನ್ನ ತಂಗಿಯೂ ಆ ಬೆಂಕಿಯಲ್ಲಿ ಹಾರುವದಕ್ಕಿಂತ ಈ ನೀರಿಗೆ ಹಾರಿರಿ. ಈ ತೀರ್ಥದ ಬಳಿ ಸಾರಿರಿ. ಪ್ರತಿನಿತ್ಯವೂ ಈ ಕೃಷ್ಣಗಂಗಾ ತೀರ್ಥದಲ್ಲಿ ಸ್ನಾನ ಮಾಡಿರಿ. ತ್ರಿಗರ್ತೇಶ್ವರನ ಸೇವೆ

ಮಾಡಿರಿ. ನಿಮಗಿಬ್ಬರಿಗೂ ಈ ತೀರ್ಥಸ್ನಾನ, ಈಶ್ವರಸೇವೆ, ಶ್ರೀ ಹರಿಧ್ಯಾನಗಳಿಂದ ಸಕಲ ಪಾಪಪರಿಹಾರವಾಗಿ ಪುಣ್ಯಲೋಕ ಪ್ರಾಪ್ತಿಯು ಖಂಡಿತವಾಗಿಯೂ ಆಗುವುದು.'' ಆ ಸುಮಂತು ಮುನಿಗಳ ಆದೇಶದಂತೆ ಅಂದಿನಿಂದ ಆ ಅಣ್ಣತಂಗಿಯರಿಬ್ಬರೂ ಆ ಪುಣ್ಯ ತೀರ್ಥದಲ್ಲಿ ಸ್ನಾನ ಸೇವೆ ಮಾಡಲು ಮೊದಲು ಮಾಡಿದರು. ಮೂರು ಹೊತ್ತು ಬೈಗು ಬೆಳಗು ಮಧ್ಯಾಹ್ನ ಕಾಲದಲ್ಲಿ ಕೃಷ್ಣಗಂಗಾ ತೀರ್ಥದಲ್ಲಿ ಮುಳುಗು ಹಾಕಿ ತ್ರಿಗರ್ತೇಶ್ವರನನ್ನು ವಂದಿಸಿ ಶ್ರೀ ಹರಿಯ ಧ್ಯಾನೋಪಾಸನ ರೂಪವಾದ ಜಪ ತಪೋನುಷ್ಠಾನಗಳನ್ನು ಮಾಡುತ್ತಿದ್ದರು. ಹೀಗೆ ಬಹು ವರ್ಷ ಭಕ್ತಿಯಿಂದ ತೀರ್ಥಸ್ನಾನ ಮತ್ತೂ ಹರಿಧ್ಯಾನಗಳನ್ನು ಮಾಡುವದರಿಂದ ಅವರಿಬ್ಬರಿಗೂ ಸಕಾಲ ಮರಣವು ಒದಗಿ ಬಂದು ಒಳ್ಳೇ ಪುಣ್ಯ ಲೋಕಪ್ರಾಪ್ತಿಯಾಯಿತು.

*ವರಾಹ ಪುರಾಣದಲ್ಲಿ ನೂರ ಇಪ್ಪತನಾಲ್ಕನೇ ಅಧ್ಯಾಯ ಮುಗಿದಿದೆ.*



## ನಾರದ ಹೂಡಿದ ನಗೆ ನಾಟಕ

**ಅಧ್ಯಾಯ - ೧೨೫**

**ವರಾಹ** :- ಧರಿತ್ರಿದೇವಿ, ಶ್ರೀ ಕೃಷ್ಣನು ತನ್ನ ಮಗನಾದ ಸಾಂಬನಿಗೆ ಶಾಪವನ್ನು ಕೊಟ್ಟ ಸಮಾಚಾರವನ್ನು ಹೇಳುತ್ತೇನೆ ಕೇಳು -

ಶ್ರೀ ಕೃಷ್ಣನ ಎಂಟು ಪಟ್ಟಮಹಿಷಿಯರಲ್ಲಿ ಜಾಂಬವತಿಯು ಆ ಭಗವಂತನ ಅಚ್ಚುಮೆಚ್ಚಿನ ಮಡದಿಯಾಗಿದ್ದಳು. ಅವಳ ಮಗನಾದ ಸಾಂಬನು ತಂದೆಯಾದ ಶ್ರೀ ಕೃಷ್ಣನನ್ನೇ ತನ್ನ ಅನ್ಯಾದೃಶವಾದ ಸೌಂದರ್ಯ ಸೌಕುಮಾರ್ಯದಿಂದ ಸಂಪೂರ್ಣವಾಗಿ ಹೋಲುತ್ತಿದ್ದನು. ಈ ಸಾಂಬ ಎಂದರೆ ಕೃಷ್ಣನ ಸಾಕ್ಷಾತ್ ಪ್ರತಿಬಿಂಬ ಎಂದೇ ದ್ವಾರಕೆಯ ಜನರು ಮಾತನಾಡುತ್ತಿದ್ದರು. ಕೃಷ್ಣನಿಗೆ ಸಾವಿರಾರು ಜನ ಮಕ್ಕಳಿದ್ದರೂ ಯಾರಿಗೂ ಇಷ್ಟು ತಂದೆಯ ಹೋಲಿಕೆ, ತಾದ್ರೂಪ್ಯ, ಸಾರೂಪ್ಯ, ಸೌರೂಪ್ಯಗಳು ಇರಲಿಲ್ಲ. ಆದರೆ ಸ್ವತಃ ಸುಂದರನಾದ ಸಾಂಬನಲ್ಲಿ ಮಾತ್ರ ವಿಲಕ್ಷಣವಾದ ಶ್ರೀ ಕೃಷ್ಣ ಸಾದೃಶ್ಯವು ಕಂಡು ಬರುತ್ತಿತ್ತು. ಅದೇ ನಿಲವು, ಅದೇ ಚೆಲುವು, ಅದೇ ಬಣ್ಣ, ಅದೇ ಕಣ್ಣು, ಅದೇ ನಡಿಗೆ, ಅದೇ ಥಾಟು, ಅದೇ ಮಾಟ. ತದ್ರೂಪ ಅವನೇ ಇವನು, ಇವನೇ ಅವನು. ಹುಬೇಹೂಬು ಕೃಷ್ಣ. ಒಮ್ಮೊಮ್ಮೆ ಕೃಷ್ಣನ ಹದಿನಾರುಸಾವಿರ ಜನ ಹೆಂಡಂದಿರು ಸಾಂಬನನ್ನು ಕಂಡು ಕೃಷ್ಣನೆಂದೇ ಭಾವಿಸಿ ಅವನತ್ತ ಕಡೆನೋಟ, ಕುಡಿನೋಟಗಳನ್ನು ಬೀರಿ ಮಂದಹಾಸ ಮುಗ್ಧವಿಲಾಸಗಳಿಂದ ಅವನನ್ನು ತಮ್ಮ ವನಪು ವೈಯ್ಯಾರಗಳಿಂದ ಒಲಿಸಬೇಕೆಂದು ಬರುತ್ತಿದ್ದರು. ಇದನ್ನು ಕಂಡು ನಾರದನಿಗೆ ಒಳ್ಳೇ ಮೋಜು ಎನಿಸುತ್ತಿತ್ತು. ಕಲಹಪ್ರಿಯನಾದ ನಾರದನು ಕೃಷ್ಣಕಾಂತೆಯರ ಈ ಭ್ರಾಂತಿ ವಿಲಾಸವನ್ನೇ ಮುಂದೆ ಮಾಡಿಕೊಂಡು ಒಂದು ತುಂಟ ಚೇಷ್ಟೆಯ ವಿನೋದ ನಾಟಕವನ್ನು ಮಾಡಬೇಕೆಂದು ನಿರ್ಧರಿಸಿದನು. ಹೀಗೆ ನಿರ್ಧರಿಸಿ ನಾರದನ ಸ್ವಾರಿಯು ಶ್ರೀ ಕೃಷ್ಣ ಪ್ರಭು ಕುಳಿತತ್ತ ಚಿತ್ತೈಸಿತು. ಆಗ ಕೃಷ್ಣನು ಎದ್ದು ವೀಣಾ

ವಿನೋದ ರಸಿಕನಾದ ಆ ಕಲಹಕೇಳೀಪ್ರಿಯನಾದ ಆ ದೇವಮುನಿಯನ್ನು ಸ್ವಾಗತಿಸಿ ಸತ್ಕರಿಸಿ, ಅರ್ಘ್ಯಪಾದ್ಯ, ಮಧುಪರ್ಕ, ಆಸನ ಮುಂತಾದವುಗಳನ್ನು ಕೊಟ್ಟು, ಗೋದಾನ ದಕ್ಷಿಣೆಗಳನ್ನು ಇತ್ತು, ಕುಶಲ ಪ್ರಶ್ನೆಮಾಡಿ ವಿಶೇಷ ಸಮಾಚಾರವೇನಾದರೂ ಇದ್ದರೆ ತಿಳಿಸಬೇಕು ಎಂದು ಬಿನ್ನವಿಸಿದನು. ಆಗ ನಾರದರು ನಸುನಗುತ್ತ ನುಡಿದರು -

"ಭಗವನ್ ಕೃಷ್ಣಪ್ರಭು, ನಾನು ನಿನಗೊಂದು ರಹಸ್ಯ ವಿಷಯವನ್ನು ತಿಳಿಸಬೇಕಾಗಿದೆ. ಅದನ್ನು ಚಿತ್ತವಿಟ್ಟು ಆಲಿಸು. ನಿನ್ನ ಮಗನಾದ ಸಾಂಬನು ನವತರುಣ. ಅವನ ರೂಪ ಅಪರೂಪ. ಅವನ ಮಾತು ಮಧುರ. ಅವನ ನಗೆ, ಬಗೆ, ಹಾವ, ಭಾವ, ನಿಲುವು ಚೆಲುವು, ಗತಿಸ್ಥಿತಿ ಎಲ್ಲವೂ ಸ್ಪೃಹಣೀಯವಾಗಿವೆ. ಅವನನ್ನು ಕಣ್ಣಿಂದ ಕಂಡ ಯಾವ ಹೆಣ್ಣು ಮೋಹ ಹೊಂದದಿದೆ! ಇಲ್ಲಿ ನೀನು ಕೈಹಿಡಿದ ಹದಿನಾರು ಸಾವಿರ ಮಡದಿಯರೆಲ್ಲರೂ ಸ್ನಿಗ್ಧ ಸುಕುಮಾರನಾದ ಸಾಂಬನ ಸರ್ವಾಂಗ ಸುಂದರವಾದ ಮುಗ್ಧ ಮೂರುತಿಯನ್ನು ಕಂಡು ಹುಚ್ಚರಾಗಿದ್ದಾರೆ. ಅವನನ್ನು ಕಂಡಾಗೆಲ್ಲ ಅವರ ಮನಂಗಳು ಮರುಳಾಗುತ್ತಿವೆ. ಕಂಗಳು ಅರಳಾಗುತ್ತಿವೆ. ನಿನ್ನ ಮಹಿಷಿಯರ ಚಿತ್ತಗಳು ಆ ಚಿಕ್ಕದೊರೆಯ ಚಲುವು ಮೈಯನ್ನು ಕಂಡು ಚಂಚಲಿಸಿ ಹೋದ ಸಮಾಚಾರ ಲೋಕಾಂತರಗಳಲ್ಲಿ ದೇವತೆಗಳ ಮನೆಮಾತಾಗಿದೆ"

ಸರ್ವಜ್ಞನಾದ ಕೃಷ್ಣಪ್ರಭು ಸತ್ಯ ಸಂಗತಿಯನ್ನು ಬಲ್ಲವನಾಗಿದ್ದರೂ ನಾರದರ ನಗೆಮಾತಿಗೆ ಕುತೂಹಲ ಗೊಂಡಂತೆ ನಟಿಸಿದನು. ಲೋಕವಿಡಂಬನಾರ್ಥವಾಗಿ ಬಗೆ ಬಗೆಯ ಲೀಲೆಗಳನ್ನು ಮಾಡಿದ ಶ್ರೀಕೃಷ್ಣನು ವಿನೋದದಿಂದ "ನಾರದ, ಇದರ ಪರೀಕ್ಷೆಯನ್ನು ಮಾಡಿಬಿಡೋಣ" ಎಂದು ನುಡಿದನು. ಅದರಂತೆ ಸಾಂಬನಿಗೂ ಹೇಳಿ ಕಳಿಸಿದನು. ಇತ್ತ ತನ್ನ ಹದಿನಾರು ಸಾವಿರ ಮಡದಿಯರಿಗೂ ತನ್ನ ಅರಮನೆಗೆ ಬರಬೇಕೆಂದು ದೂತರಿಂದ ವಿಶೇಷ ಸಂದೇಶವನ್ನು ಕಳಿಸಿಕೊಟ್ಟನು.

ಕೃಷ್ಣನಾರದರಿಬ್ಬರೂ ಯಾರಿಗೂ ತಾವು ಕಾಣದಂತೆ, ತಮ್ಮ ಕಣ್ಣಿಗೆ ಎಲ್ಲವೂ ಕಾಣುವಂತೆ ಒಂದು ರಹಸ್ಯ ಸ್ಥಳದಲ್ಲಿ ಕುಳಿತುಕೊಂಡನು. ಕೃಷ್ಣನ ಆಜ್ಞೆಯಂತೆ ಪಿತೃಭಕ್ತನಾದ ಸಾಂಬನು ಅಪ್ಪನ ಅರಮನೆಗೆ ಬಂದು ಅವನು ಅಲ್ಲಿ ಇಲ್ಲದ್ದನ್ನು ಕಂಡು ರತ್ನಪೀಠದಲ್ಲಿ ಮಂಡಿಸಿದನು. ಕೆಲವೇ ನಿಮಿಷಗಳಲ್ಲಿ ಕೃಷ್ಣನ ಹದಿನಾರು ಸಾವಿರ ಹೆಂಡಂದಿರು ವಸ್ತ್ರ ಒಡವೆ ಮತ್ತೂ ವಸ್ತ್ರಾಭರಣಗಳಿಂದ ಅಲಂಕೃತರಾಗಿ ಶೃಂಗಾರಮೂರ್ತಿಗಳಂತೆ ಕಂಗೊಳಿಸುತ್ತ ಶ್ರೀ ಕೃಷ್ಣಭವನದ ಅಂಗಳದಲ್ಲಿ ಕಾಲಿರಿಸಿದರು. ಅಲ್ಲಿಂದ ಒಳಗೆ ಬಂದು ಮೊಗಶಾಲೆಯ ಮಣಿಪೀಠದಲ್ಲಿ ಮಂಡಿಸಿದ ಮೋಹನಾಂಗನನ್ನು ಕಂಡು ತಲೆ ತಗ್ಗಿಸಿದರು. ಲಜ್ಜೆಯ ಲಾಲಿಮೆಯು ಅವರ ಫುಲ್ಲಗಲ್ಲಗಳಿಗೆಲ್ಲ ಗುಲಾಬಿಯ ಗುಲ್ಲು ಕೊಟ್ಟಂತೆ ಕೆಂಪನ್ನು ಕಾಣಿಸಿತು. ಅವರು ನಾಚಿಕೆಯಿಂದ ತಲೆ ಬಾಗಿಸಿ ತಮ್ಮ ಸೀರೆಯ ಸೆರಗಿನ ಅಂಚನ್ನು ತೀಡುತ್ತ ಆ ಪೀಠದಲ್ಲಿ ಪ್ರತಿಷ್ಠಿತನಾದ ಪುರುಷನೆಡೆಗೆ ತಮ್ಮ ವಕ್ರದೃಷ್ಟಿಯನ್ನು ಬೀರುತ್ತ ಮುಖದಲ್ಲಿ ಮಂದಹಾಸದ ಮಲ್ಲಿಗೆಯ ಮುಗುಳನ್ನು ಅರಳಿಸಿದರು. ತಮ್ಮ ಸಾಲಸ ವಿಲಾಸ ನೋಟವನ್ನು ಅವನೆಡೆಗೆ ಹೊರಳಿಸಿದರು. ಆ ಎಲ್ಲ ಮಂಗಳಾಂಗಿಯರ ಕಂಗಳಲ್ಲಿ

ಸೂಸುವ ಶೃಂಗಾರ ಭಾವವನ್ನೂ ಭಾವ ಭಂಗಿಯ, ವಿಲಾಸ ವೀಕ್ಷಣವನ್ನೂ ನಾರದರು ತಕ್ಷಣದಲ್ಲಿಯೇ ಕೃಷ್ಣನಿಗೆ ತಿವಿದು ತೋರಿಸಿದನು. ತನ್ನ ಮಡದಿಯರ ಈ ಹುಚ್ಚು ಚೇಷ್ಟೆಯನ್ನು ಕಂಡು ಕೃಷ್ಣನಿಗೆ ಕಡುಕೋಪ ಬಂದಿತು. ಕೂಡಲೇ ಅವನು ಸಾಕಿನ್ನು ಈ ಕಾಮಿನಿಯರ ಪ್ರೇಮಪರೀಕ್ಷೆ ಎಂದು ಅಲ್ಲಿಂದ ಎದ್ದು ಬಂದನು. ಅಲ್ಲಿಂದ ಹೊರಟು ಹೋಗಬೇಕೆಂದು ರಾಣಿಯರಿಗೆಲ್ಲ ಅಪ್ಪಣೆ ನೀಡಿದನು. ಅವರೆಲ್ಲರು ಹೊರಟು ಹೋದ ಬಳಿಕ ಸಾಂಬನು ಅಲ್ಲಿಯೇ ನಡಗುತ್ತ ಕೈ ಮುಗಿದುಕೊಂಡು ನಿಂತನು. ಕೃಷ್ಣನ ಮುಖದ ಮೇಲಿನ ಕ್ರುದ್ಧ ಮುದ್ರೆಯನ್ನು ಕಂಡೇ ಅವನು ಹೆದರಿ ಹೋಗಿದ್ದನು. ಕೃಷ್ಣನು ಸಾಂಬನನ್ನು ಒಮ್ಮೆ ಕಣ್ಣೆತ್ತಿ ನೋಡಿದನು. ಅವನ ಮುಖವು ತನ್ನನ್ನೇ ಅಣಕಿಸುತ್ತಲಿತ್ತು. ಅವನಿಗೆ ಕನ್ನಡಿ ಎದುರಿಗೆ ತಾನು ಬಂದು ನಿಂತಂತೆ ಎನಿಸಿತು. ಅದೊಂದು ತನ್ನದೇ ಪ್ರತಿಚಿತ್ರ, ಪ್ರತಿಧ್ವನಿ, ಪ್ರತಿಬಿಂಬ. ತನ್ನ ರೂಪದ ಪ್ರತಿರೂಪ. ಅವನಿಗೆ ಏಕೋ ಮಗನ ಮುಖವನ್ನು ನೋಡಿಯೇ ನಾಚಿಕೆ ಎನಿಸಿತು. ಕೂಡಲೇ ಅವನು ನಾರದರೆಡೆಗೆ ತಿರುಗಿ, ''ನಾರದ, ನಾರಿಯರು ಸ್ವಭಾವದಿಂದಲೇ ಚಂಚಲರು. ಸುಂದರ ಪುರುಷನನ್ನು ಕಂಡ ಕೂಡಲೇ ಅವರ ಮನಸ್ಸು ಬೆಂಕಿಯ ಬದಿಯಲ್ಲಿಟ್ಟ ಬೆಣ್ಣೆಯಾಗುವದು.

ಕ್ಷಣೋ ನಾಸ್ತಿ ರಹೋ ನಾಸ್ತಿ ನಾಸ್ತಿ ಪ್ರಾರ್ಥಯಿತಾ ನರಃ ।
ತೇನ ನಾರದ ನಾರೀಣಾಂ ಸತೀತ್ವಮುಪಜಾಯತೇ ॥

ಏಕವಾಸಾಸ್ತಥಾ ಗೌರೀ ಶ್ಯಾಮಾ ವಾ ವರವರ್ಣಿನೀ ।
ಮಧ್ಯಂ ಗತಾ ಪ್ರಗಲ್ಭಾ ವಾ ವಯೋತೀತಾ ಸ್ತಥಾ ಸ್ತ್ರಿಯಃ ॥
ಸುರೂಪಂ ಪುರುಷಂ ದೃಷ್ಟ್ವಾಕ್ಷರಂತಿ ಮುನಿಸತ್ತಮ

''ನಾರದ, ಹೆಣ್ಣು ಮಕ್ಕಳು ಪತಿವ್ರತೆಯರಾಗಿ ಉಳಿಯಲಿಕ್ಕೆ ಮುಖ್ಯಕಾರಣವೆಂದರೆ ಅವರಿಗೆ ವ್ಯಭಿಚಾರ ಮಾಡಲಿಕ್ಕೆ ಅನುಕೂಲ ವೇಳೆ ಸಿಗುವದಿಲ್ಲ. ಯಾರೂ ಕಾಣದ ಏಕಾಂತ ಸ್ಥಳವು ಹೊತ್ತಿಗೆ ಸರಿಯಾಗಿ ದೊರಕುವುದಿಲ್ಲ. ತಮ್ಮನ್ನು ಬಯಸುವ ಗಂಡಸು ಬೇಕೆಂದಾಗ ಬರುವುದಿಲ್ಲ. ಅದರಿಂದಲೇ ಅವರು ಪ್ರಾಯಃ ಪತಿವ್ರತೆಯರಾಗಿ ಉಳಿದಿರುತ್ತಾರೆ. ವಸ್ತುತಸ್ತು ಒಂಟಿ ಬಟ್ಟೆ ತೊಟ್ಟ ಎಂಟು ವರ್ಷದ ಹುಡುಗಿಯಾಗಲಿ, ಹದಿನಾರು ವರ್ಷದ ಹರೆಯದ ಹೆಣ್ಣಾಗಲಿ, ಮುಪ್ಪಿನಿಂದ ಹಣ್ಣಾದ ಹೆಂಗಸಾಗಲಿ ಸುಂದರ ಪುರುಷನನ್ನು ಕಂಡಕೂಡಲೇ ಕಾಮದಿಂದ ಕರಗಿ ಪ್ರೇಮದಿಂದ ದ್ರವಿಸಿ ಹೋಗಿ ಬಿಡುತ್ತಾರೆ. ಅದು ಸ್ತ್ರೀ ಸ್ವಭಾವ. ಇದರಲ್ಲಿ ಸಾಂಬನ ತಪ್ಪೇನಿಲ್ಲ'' ಎಂದು ಹೇಳಿದನು.

ಅದನ್ನು ಕೇಳಿ ಭಗವತ್ಸಂಕಲ್ಪವನ್ನು ಅರಿತ ನಾರದರು ನಕ್ಕು '' ಭಗವನ್, ಒಂದೇ ಕೈಯಿಂದ ಎಂದೂ ಚಪ್ಪಾಳೆಯಾಗುವದಿಲ್ಲ. ಒಂದೇ ಚಕ್ರದಿಂದ ಚಕ್ಕಡಿಯು ಚಲಿಸುವದಿಲ್ಲ. ಗಂಡಿನ ಅಭಿಪ್ರಾಯ ಅನುಕೂಲವಿದೆಯೆಂದು ಖಾತ್ರಿಯಿಲ್ಲದೇ ಹೆಣ್ಣು ಎಂದೂ ಕಾಮಚೇಷ್ಟೆಗೆ ತಾನಾಗಿ ಪ್ರವೃತ್ತವಾಗುವದಿಲ್ಲ. ಇದರಲ್ಲಿ ಸಾಂಬನ ಮನೋಲೌಲ್ಯವೂ ಇಲ್ಲದೇ ಇಲ್ಲ. ಅವನ ಕಾಮದೃಷ್ಟಿಯೇ ಅವನ ಪ್ರೇಮೋದ್ದೀಪಕವಾಗಿದೆ'' ಎಂದು ನುಡಿದರು.

ಅದನ್ನು ಕೇಳಿ ಕೃಷ್ಣನಿಗೆ ಕೋಪ ಬಂದು ಅವನು ತನ್ನ ಮಗ ಸಾಂಬನಿಗೆ '' ನಿನ್ನ ಮೈಗೆಲ್ಲ ಕುಷ್ಠರೋಗವು ತಗಲಲಿ'' ಎಂದು ಶಾಪ ಕೊಟ್ಟನು. ಕೂಡಲೇ ಸಾಂಬನ ಸುಂದರ ಶರೀರವು ಆಗಿಂದಾಗ ಅಂದಗೆಟ್ಟಿತು. ಬಿಳುಪು ಅವನ ಮೈಯನ್ನೆಲ್ಲ ಕೆಡಿಸಿಬಿಟ್ಟಿತು. ಆಗ ಸಾಂಬನು ಏನೂ ತೋಚದೇ ಭ್ರಾಂತಿಷ್ಠನಂತೆ ಹುಚ್ಚನಾಗಿ ನಿಂತುಕೊಳ್ಳಲು ನಾರದರು ಅವನಿಗೆ ಸೂರ್ಯಾರಾಧನೆಯನ್ನು ಮಾಡಲಿಕ್ಕೆ ಹೇಳಿದರು.

**ನಾರದ** :- ಸಾಂಬ, ಮಧುರಾಕ್ಷೇತ್ರದಲ್ಲಿ ಕೃಷ್ಣಗಂಗಾ ಕ್ಷೇತ್ರಕ್ಕೆ ನೀನು ಹೋಗು. ಅಲ್ಲಿಯ ತೀರ್ಥ ಜಲದಲ್ಲಿ ಸ್ನಾನ ಮಾಡು. ಸೂರ್ಯೋದಯದಿಂದ ಆರಂಭಿಸಿ ಸೂರ್ಯಾಸ್ತ ಸಮಯದವರೆಗೆ ಅಲ್ಲಿ ನಿಂತು ಸೂರ್ಯ ನಾರಾಯಣನನ್ನು ಕುರಿತು ತಪಸ್ಸನ್ನು ಮಾಡು. ಆರುಸೂರ್ಯರನ್ನು ಭಕ್ತಿಯಿಂದ ಆರಾಧಿಸು. ಸೂರ್ಯಮಂತ್ರವನ್ನು ಜಪಿಸು. ಈ ನಿರಂತರ ಸೂರ್ಯಾರಾಧನೆಯಿಂದ ನಿನಗೆ ಮೊದಲಿನಗಿಂತ ಹೆಚ್ಚಾದ ಕಳೆಕಾಂತಿ ಸೌಂದರ್ಯ ಸೌಭಾಗ್ಯಗಳು ಪ್ರಾಪ್ತವಾಗುತ್ತವೆ. ಕುಷ್ಠಾದಿ ರೋಗಗಳಂತೂ ಕೂಡಲೇ ಪರಿಹಾರವಾಗುತ್ತವೆ. ನಾರದರ ಈ ಮಾತನ್ನು ಕೇಳಿ ಸಾಂಬನು ಮಧುರೆಗೆ ಬಂದು ಕಾಲಿಂಜರ ಕ್ಷೇತ್ರದಲ್ಲಿ ನಿಂದು ಕೃಷ್ಣಗಂಗಾ ತೀರ್ಥದಲ್ಲಿ ಸ್ನಾನಮಾಡಿ ಸೂರ್ಯಾರಾಧನೆಯನ್ನು ಮಾಡಿದನು. ಅವನ ನಿರಂತರ ಧ್ಯಾನೋಪಾಸನೆ ಹಾಗೂ ಷಟ್‌ಸೂರ್ಯೋಪಾಸನೆಗಳಿಂದ ಸೂರ್ಯದೇವನು ಸುಪ್ರಸನ್ನನಾಗಿ ತಾನೊಂದು ಯೋಗ ದೇಹವನ್ನು ಧಾರಣ ಮಾಡಿಕೊಂಡು ಅವನ ಮುಂದೆ ಬಂದು ನಿಂತನು. ಆಗ ಸಾಂಬನು ವೇದ ಸಮ್ಮಿತವಾದ ಐವತ್ತು ಪದ್ಯಗಳಿಂದ ಸೂರ್ಯದೇವನನ್ನು ಸ್ತೋತ್ರಮಾಡಿದನು.

ಅವನ ಆ ದಿವ್ಯ ಸ್ತೋತ್ರದಿಂದ ಸಂತುಷ್ಟನಾದ ಸೂರ್ಯದೇವನು ಸಾಂಬನ ದೇಹವನ್ನು ತನ್ನ ಹಸ್ತದಿಂದ ಸ್ಪರ್ಶಮಾಡಿದನು. ಕೂಡಲೇ ಸಾಂಬನ ದೇಹದಲ್ಲಿ ಮೊದಲಿನ ಕಳೆಕಾಂತಿಗಳು ಸೂಸತೊಡಗಿದವು. ಅವನ ಮೈ ಕೈಗಳಲ್ಲಿ ಮಿಂಚಾಡುವ ದಿವ್ಯದೀಪ್ತಿಯು ಮರುಕಳಿಸಿ ಅವನೊಬ್ಬ ಪ್ರತಿಸೂರ್ಯನಂತೆಯೇ ಕಂಗೊಳಿಸ ಹತ್ತಿದನು. ಸೂರ್ಯನು ತನ್ನ ಭಕ್ತನಾದ ಈ ಸಾಂಬನನ್ನು ತನ್ನ ಬಳಿಯಲ್ಲಿಯೇ ನಿಲ್ಲಿಸಿಗೊಂಡು ಮಧ್ಯಾಹ್ನ ಕಾಲದಲ್ಲಿ ಯಾಜ್ಞ್ಯವಲ್ಕ್ಯರಿಗೆ ಅವರ ಯಜ್ಞಕಾಲದಲ್ಲಿ ವೇದೋಪದೇಶ ಮಾಡಿದನು. ಅದರಿಂದ ಮಾಧ್ಯಂದಿನ ರವಿ ಎನಿಸಿಕೊಂಡನು. ವೈಕುಂಠ ತೀರ್ಥದ ಪಶ್ಚಿಮ ಪಾರ್ಶ್ವದಲ್ಲಿ ಸ್ನಾನಮಾಡಿ ಮಧ್ಯಂದಿನ ಸೂರ್ಯನನ್ನು ದರ್ಶನ ಮಾಡಿಕೊಂಡರೆ ಸರ್ವ ಪಾಪ ಪರಿಹಾರವಾಗುತ್ತದೆ. ಇದರಂತೆ ಆ ಸೂರ್ಯದೇವನು ಮರಿಸೂರ್ಯನಂತಿದ್ದ ಸಾಂಬನೊಡನೆ ಪ್ರಾತಃಕಾಲ ಸಾಯಂಕಾಲಗಳಲ್ಲಿಯೂ ಇದ್ದು ಸಂಧ್ಯಾಕಾಲದಲ್ಲಿ ಕೃಷ್ಣ ಗಂಗಾತೀರ್ಥದ ದಕ್ಷಿಣ ಭಾಗದಲ್ಲಿ ನಿಂತುಕೊಂಡಿದ್ದರಿಂದ ಅಲ್ಲಿ ಅಸ್ತನಾಗುವ ಸೂರ್ಯನನ್ನು ಸಂದರ್ಶಿಸಿದರೆ ಸರ್ವ ಪಾಪ ಪರಿಹಾರ ಎಂದು ಹೇಳಿದ್ದಾರೆ. ಹೀಗೆ ಧರ್ಮಾತ್ಮನಾದ ಸಾಂಬನು ಹಗಲಿರುಳು ಸೂರ್ಯದೇವನ ಜೊತೆಗೆ ಇದ್ದು ಪುರಾಣ ಹೇಳಬೇಕೆಂದು ಬಿನ್ನಹ ಮಾಡಿಕೊಂಡನು. ಅವನ ಪ್ರಾರ್ಥನೆಯಂತೆ ಸೂರ್ಯನು ಸಾಂಬನಿಗೆ ಪುರಾಣ ಹೇಳಿದನು. ಅದೇ ಭವಿಷ್ಯ ಪುರಾಣ ಎಂದು ಪ್ರಸಿದ್ಧವಾಗಿದೆ. ಮುಂದೆ ಸಾಂಬನು ಅಲ್ಲಿ ಸೂರ್ಯದೇವನನ್ನು ಪ್ರತಿಷ್ಠೆಗೊಳಿಸಿದನು. ಅದು 'ಕಾಲಪ್ರಿಯ' ಎಂದು

ಹೆಸರಾಗಿದ್ದು ಇದರಂತೆ ಉದಯಾಚಲ ಅಸ್ತಾಚಲಗಳಲ್ಲಿಯೂ ಸಾಂಬನು ಸೂರ್ಯ ಪ್ರತಿಷ್ಠೆಮಾಡಿದನು. ಇದಲ್ಲದೇ ಸಾಂಬನು ಮಥುರೆಯಲ್ಲಿ ಕುಲೇಶ್ವರನನ್ನೂ ಪ್ರತಿಷ್ಠಿಸಿ ಸಾಂಬ ನಗರವನ್ನು ನಿರ್ಮಾಣ ಮಾಡಿದನು. ಸೂರ್ಯನಾರಾಯಣನು ಮಾಘ ಮಾಸದ ರಥ ಸಪ್ತಮಿಯದಿನ ರಥದಿಂದ ಸಂಚರಿಸುತ್ತ ಆ ಸಾಂಬಪುರಿಗೆ ಪ್ರತಿವರ್ಷವೂ ದಯಮಾಡಿಸುವನು. ಅವನ ಆಜ್ಞೆಯ ಮೇರೆಗೆ ಅಲ್ಲಿ ನಡೆಯುವ ರಥ ಸಪ್ತಮೀ ದಿನದ ಸೂರ್ಯರಥೋತ್ಸವಕ್ಕೆ ಹೋದವರು ಸೂರ್ಯ ಮಂಡಲವನ್ನು ಭೇದಿಸಿಗೊಂಡು ಬ್ರಹ್ಮಪದವನ್ನು ಕುರಿತು ಪ್ರಯಾಣ ಬೆಳೆಸುವರು.

*ವರಾಹಪುರಾಣದ ನೂರಇಪ್ಪತ್ತೈದನೇ ಅಧ್ಯಾಯ ಮುಗಿದಿದೆ*



## ಮಧುರಾ ಪಟ್ಟಣದಲ್ಲಿ ರಾಮಾನುಜ — ಅಧ್ಯಾಯ - ೧೨೬

ಪೂರ್ವಕಾಲದಲ್ಲಿ ಶತ್ರುಘ್ನನು ಅಣ್ಣ ರಾಮನ ಆಜ್ಞೆಯಂತೆ ಲವಣಾಸುರನನ್ನು ಕೊಂದು ಮಾರ್ಗಶೀರ್ಷ ಶುದ್ಧ ಏಕಾದಶೀ ದಿನ ಮಧುರಾಪಟ್ಟಣವನ್ನು ಪ್ರವೇಶ ಮಾಡಿದನು. ಅಂದು ಸುಕುಟುಂಬ ಸಪರಿವಾರ ಉಪೋಷಣ ಮಾಡಿ ದ್ವಾದಶೀದಿನದಂದು ವಿಶ್ರಾಂತಿ ತೀರ್ಥದಲ್ಲಿ ಸ್ನಾನ ಮಾಡಿ ಪಿತೃತರ್ಪಣಕೊಟ್ಟು ಅಸಂಖ್ಯ ಜನ ಬ್ರಾಹ್ಮಣರಿಗೆ ಇಚ್ಛಾಭೋಜನ ಮಾಡಿಸಿ ಸಂತೋಷಗೊಳಿಸಿದನು. ಇದನ್ನು ತಿಳಿದು ಮತ್ತಿಷ್ಟು ಸಂತುಷ್ಟನಾದ ಶ್ರೀ ರಾಮಚಂದ್ರ ಪ್ರಭುವೂ ಅಲ್ಲಿಗೆ ಬಂದು ಕೆಲವು ದಿನ ಇದ್ದನು. ಆದುದರಿಂದ ಮಾರ್ಗಶೀರ್ಷ ಏಕಾದಶೀ ದ್ವಾದಶೀ ದಿನಗಳಲ್ಲಿ ಮಧುರಾಯಾತ್ರೆ ತೀರ್ಥಸ್ನಾನ ಬ್ರಾಹ್ಮಣ ಭೋಜನಾದಿಗಳನ್ನು ಮಾಡಿಸುವವರು ಪಿತೃಗಳೊಡನೆ ಸ್ವರ್ಗದಲ್ಲಿ ಚಿರಕಾಲ ವಾಸಿಸುವರು.

### ಸರ್ವ ಪಾಪಗಳಿಗೆ ಏಕಮಾತ್ರ ಪರಿಹಾರ

**ಭೂದೇವಿ** :- ಸ್ವಾಮಿನ್, ಭಗವದ್ ಭಕ್ತನು ಬಿಡಬೇಕಾದ ಅಪರಾಧಗಳಾವವು? ಕರ್ತವ್ಯ ಅಕರ್ತವ್ಯಕರ್ಮಗಳ ಬಗ್ಗೆ ನನಗೆಸರಿಯಾದತಿಳಿವಳಿಕೆಯನ್ನು ಮಾಡಿಕೊಡಬೇಕು.

**ವರಾಹ** :- ಪಾಪಕೃತ್ಯಗಳಲ್ಲಿ ಆಸಕ್ತಿಯುಳ್ಳ ಜನರು ಮಾತಿನಿಂದ ಕೃತಿಯಿಂದ ಮನಸ್ಸಿನಿಂದ ಮೂರುಬಗೆಯಾಗಿ ಪಾಪಗಳನ್ನು ಮಾಡುತ್ತಲಿರುತ್ತಾರೆ. ಆ ಪಾಪ ಕೃತ್ಯಗಳಾವುವು ಎಂಬುದನ್ನು ಹೇಳುತ್ತೇನೆ ಕೇಳು. ಅರಮನೆಯ ಹಂಗಿನ ಅನ್ನ ಉಣ್ಣುವದು ಪಾಪ. ಹೆಣಮುಟ್ಟಿ, ಹೆಣ್ಣು ಮುಟ್ಟಿ, ಹೊಲಸುಬಿಟ್ಟು, ಹಡೆದ ಕೋಣೆಯಲ್ಲಿ ಹೊಕ್ಕುಬಂದು, ಹೊರಗಾದವಳನ್ನು ನೋಡಿ, ಮೂತ್ರ ವಿಸರ್ಜನೆ ಮಾಡಿ, ಮತ್ತೆ ಸ್ನಾನ ಮಾಡದೇ ದೇವಮಂದಿರಕ್ಕೆ ಹೋಗುವದೂ ಪೂಜಿಸುವದೂ ಪಾಪ. ಇದರಂತೆ ಪೂಜೆ ಮಾಡುವಾಗ ಆಡಬಾರದ ಮಾತುಗಳನ್ನು ಆಡುವದು, ಗುರುಗಳನ್ನು ತನ್ನ ಕೆಲಸಕ್ಕಾಗಿ ಒತ್ತಾಯ ಪಡಿಸುವದೂ, ನಿಷಿದ್ಧ ಪದಾರ್ಥಗಳನ್ನು ತಿನ್ನುವದೂ, ಹೊಸ ಧಾನ್ಯಗಳನ್ನು ದಾನ ಮಾಡದೇ ಉಣ್ಣುವದೂ, ದೇವಾಲಯಕ್ಕೆ

ಪಾದರಕ್ಷೆ ಹಾಕಿಕೊಂಡು ಹೋಗುವದೂ, ಸೆರೆ ಕುಡಿಯುವದೂ, ದೀಪವಿಲ್ಲದೇ ಪೂಜೆಮಾಡುವದೂ ಪಾಪಕೃತ್ಯಗಳಾಗಿರುತ್ತವೆ. ಇಂಥ ಪಾಪಗಳನ್ನು ಒಂದು ವೇಳೆ ಮಾಡಿದರೆ ಅವುಗಳಿಗೆ ಗುರುಗಳನ್ನು ಕೇಳಿ ಉಪವಾಸ, ಪಂಚಗವ್ಯಪ್ರಾಶನ, ಚಾಂದ್ರಾಯಣ, ಗೋದಾನ, ಪಂಚಾಮೃತಾಭಿಷೇಕ, ಭಕ್ತಿಯಿಂದ ಶ್ರೀ ಹರಿಧ್ಯಾನ ಮುಂತಾದ ವಿಧಿಗಳಿಂದ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.

ಶ್ರೀ ವರಾಹ ದೇವನು ಮಾನವರು ಮಾಡುವ ಪಾಪಗಳಿಗೆ ಹೇಳಿದ ಪ್ರಾಯಶ್ಚಿತ್ತ ವಿಧಾನವನ್ನು ಕೇಳಿಯೇ ಭೂದೇವಿಗೆ ಮೂರ್ಛೆ ಬಂದಂತಾಯಿತು. ಆಗ ವರಾಹ ಸ್ವಾಮಿಯು ''ಹೀಗೇಕೆ ಖಿನ್ನಳಾಗಿರುವಿ ?'' ಎಂದು ಕೇಳಲು ಭೂದೇವಿಯು ನುಡಿದಳು.- ''ಸ್ವಾಮಿ, ಮಾನವರು ನೀನು ಹೇಳಿದ ಪಾಪಗಳನ್ನು ಸರ್ವದಾಪಿ ಮಾಡುತ್ತಲೇ ಇರುವರು. ಅವುಗಳ ಪರಿಹಾರಕ್ಕಾಗಿ ನೀನು ಹೇಳಿದ ಕೃಚ್ಛ್ರ ಚಾಂದ್ರಾಯಣಾದಿ ಪ್ರಾಯಶ್ಚಿತ್ತಗಳನ್ನೂ ಯಾವಾಗಲೂ ಮಾಡುತ್ತಲೇ ಇರಬೇಕಾಗುವದು. ಪ್ರಭು, ಇದಕ್ಕೆ ಕೊನೆ ಎಂತು ! ಮತ್ತೆ ಪಾಪ, ಮತ್ತೆ ಪ್ರಾಯಶ್ಚಿತ್ತ ! ಮಾನವರು ಮಾಡುವ ಸರ್ವಾಪರಾಧಗಳಿಗೂ ಶಾಮಕವಾದ ಒಂದು ಪರಿಹಾರೋಪಾಯವಿಲ್ಲವೇ!

**ಶ್ರೀ ವರಾಹ** :- ಭೂದೇವಿ, ಉಂಟು. ಗಂಗಾ ಸ್ನಾನ ಮತ್ತು ಮಧುರಾ ಯಾತ್ರೆ ಇವೆರಡು ನರರ ಸರ್ವ ಪಾಪ ಪರಿಹಾರಕವಾದ ಉತ್ತಮ ಉಪಾಯಗಳಾಗಿವೆ. ಸೌಕರ ಕ್ಷೇತ್ರದಲ್ಲಿ ನನ್ನ ದರ್ಶನ ಮಾಡಿಕೊಂಡು ಗಂಗೆಯಲ್ಲಿ ಸ್ನಾನ ಮಾಡಬೇಕು. ಅಥವಾ ಮಧುರಾ ಪಟ್ಟಣದಲ್ಲಿ ಕೃಷ್ಣನನ್ನು ಕಂಡು ಕೃಷ್ಣಗಂಗಾತೀರ್ಥದಲ್ಲಿ ಸ್ನಾನಮಾಡಬೇಕು. ಇದರಿಂದ ಮನುಷ್ಯನು ಸಾವಿರ ಜನ್ಮಗಳಲ್ಲಿ ಮಾಡಿದ ಅಪರಾಧ ಪಾಪಗಳೆಲ್ಲವೂ ಪರಿಹಾರವಾಗುವವು. ಭೂದೇವಿ, ಕುಬ್ಜಾಮ್ರಕ, ಸೂಕರ ಕ್ಷೇತ್ರ, ಗಂಗಾಸಂಗಮ ಮುಂತಾದ ಎಲ್ಲ ಕ್ಷೇತ್ರಗಳಿಗಿಂತ ಮಧುರಾಕ್ಷೇತ್ರ ಮತ್ತು ಅಲ್ಲಿಯ ವಿಶ್ರಾಂತಿತೀರ್ಥ ಕೃಷ್ಣಗಂಗಾ ತೀರ್ಥಗಳು ಸಾಂಖ್ಯ ಯೋಗ, ಸಿದ್ಧಿ, ಸಾಧನಗಳಿಂದ ಲಭಿಸಬಹುದಾದ ಮೋಕ್ಷಕ್ಕೆ ಮುಖ್ಯ ಪ್ರಾಪಕವಾಗುವವು. ಅಲ್ಲಿ ಸ್ನಾನ ಹರಿಧ್ಯಾನದಿಂದ ಸದ್ಗತಿ ಸುನಿಶ್ಚಿತ.

## ಅರಮನೆಯ ತೊತ್ತು, ಪಿತೃಗಳ ಕುತ್ತು

**ಶ್ರೀ ವರಾಹ** :- ಭೂದೇವಿ, ಪೂರ್ವ ಕಾಲದಲ್ಲಿ ಧ್ರುವತೀರ್ಥದಲ್ಲಿ ನಡೆದ ಪಿತೃಗಳಿಗೆ ಪೂರ್ಣ ತೃಪ್ತಿಯನ್ನು ಉಂಟು ಮಾಡುವ ಬೇರೊಂದು ವೃತ್ತಾಂತವನ್ನು ಹೇಳುತ್ತೇನೆ. ಕೇಳು- ಹಿಂದೆ ಮಧುರಾಪಟ್ಟಣದಲ್ಲಿ ಚಂದ್ರಸೇನ ಎಂಬ ಧಾರ್ಮಿಕನಾದ ರಾಜನು ಇದ್ದನು. ಅವನಿಗೆ ಇನ್ನೂರು ಜನ ಹೆಂಡಂದಿರು. ಅವರಲ್ಲಿ ಚಂದ್ರಪ್ರಭೆ ಎಂಬ ಪಟ್ಟದರಸಿಯು ವೀರವರೇಣ್ಯನಾದ ಒಂದು ಗಂಡು ಮಗುವನ್ನು ಹೆತ್ತು ಸನ್ಯಾಸಿಗಳಂತೆ ವಿರಕ್ತಳಾಗಿದ್ದಳು. ಅವಳ ನೂರಾರು ಜನ ದಾಸಿಯರಲ್ಲಿ ಪ್ರಭಾವತಿ ಎಂಬುವವಳು ಅರಸಿಗೆ ಪ್ರಿಯಳಾಗಿದ್ದಳು. ಆ ಪ್ರಭಾವತಿಯ ಒಬ್ಬ ಸೇವಕಿಯಾದ 'ವಿರೂಪಕನಿಧಿ' ಎಂಬ ಹೆಸರಿನ ದಾಸಿಯು ದಾರಿಬಿಟ್ಟು ಅನಾಚಾರಕ್ಕೆ ಇಳಿದಿದ್ದಳು. ಅವಳ ದುರಾಚಾರದಿಂದ ಅವಳ ಪಿತೃಗಳೆಲ್ಲರೂ ನರಕದಲ್ಲಿ ಬಿದ್ದು ನರಳುತ್ತಿದ್ದರು. ಒಂದಾನೊಂದು ಕಾಲದಲ್ಲಿ ಆ ದಾಸಿಯ ಹಲವಾರು ಪೂರ್ವಜರು ನರಕದಿಂದ

ತಪ್ಪಿಸಿಕೊಂಡು ಸೂಕ್ಷ್ಮವಾದ ಪ್ರಾಣಿಗಳಾಗಿ ಗುಂಪುಗುಂಪಾಗಿ ಮಧುರಾಮಂಡಲದ ಧ್ರುವತೀರ್ಥದಲ್ಲಿ ಬೀಳುತ್ತಿದ್ದರು. ಆ ಧ್ರುವತೀರ್ಥದಲ್ಲಿದ್ದ ತ್ರಿಕಾಲಜ್ಞನಾದ ಒಬ್ಬ ಋಷಿಯು ಕರಿಬಣ್ಣದ ಸೊಳ್ಳೆಗಳಂತೆ ಅತ್ತಿತ್ತ ಹರಿದಾಡುವ ಆ ಪ್ರಾಣಿಗಳನ್ನು ನೋಡಿದನು. ಆ ತ್ರಿಕಾಲಜ್ಞ ಋಷಿಯು ಪ್ರತಿದಿನ ಮಧ್ಯಾಹ್ನದಲ್ಲಿ ತನ್ನ ಜಪ ತಪೋನುಷ್ಠಾನಗಳನ್ನೆಲ್ಲ ಮುಗಿಸಿಕೊಂಡು ಬರೇ ಹಾಲನ್ನು ಮಾತ್ರ ಸೇವಿಸುತ್ತಿದ್ದನು. ಆ ಮಧ್ಯಾಹ್ನ ವೇಳೆಯಲ್ಲಿ ಪೂರ್ವಪಶ್ಚಿಮ ದಕ್ಷಿಣೋತ್ತರ ದಿಕ್ಕುಗಳಿಂದ ಅನೇಕ ಪಿತೃಗಳು ಅಲ್ಲಿ ಇಳಿದು ಬರುತ್ತಿದ್ದರು. ಬರುವಾಗ ಬಡಕಲು ದೇಹದಿಂದ ಒಣಗಿ ಕೊರಗಿ ಕಡ್ಡಿಯಾದಂತಿದ್ದ ಆ ಪಿತೃ ಪರಿವಾರದವರೆಲ್ಲರೂ ಇಲ್ಲಿ ಈ ತೀರ್ಥದಲ್ಲಿ ಬಂದ ಬಳಿಕ ತಮ್ಮ ವಂಶದಲ್ಲಿ ಹುಟ್ಟಿದ ಧಾರ್ಮಿಕ ಸತ್ಸಂತತಿಯವರು ನೀಡಿದ ನೀರಿನ ಅಂಜಲಿ ತರ್ಪಣ, ಪಿಂಡಪ್ರದಾನಾದಿಗಳಿಂದ ತೃಪ್ತರಾಗಿಯೂ, ತುಷ್ಟರಾಗಿಯೂ, ದೇಹದಿಂದ ಪರಿಪುಷ್ಟರಾಗಿಯೂ, ಆನಂದದಿಂದ ಉಬ್ಬಿದವರಾಗಿಯೂ, ನಗುತ್ತ ನಲಿಯುತ್ತ ಆಕಾಶಕ್ಕೆ ಏರುತ್ತಿದ್ದರು. ಮತ್ತೆ ಕೆಲವರು ಸ್ನಾನಧ್ಯಾನ ತಪೋಲೀನರಾಗುತ್ತಿದ್ದರು. ಅವರಲ್ಲಿ ಕೆಲವರು ವಸ್ತ್ರಾಲಂಕಾರಗಳಿಂದ ಭೂಷಿತರಾಗಿ ಹೋದರೆ ಹಲವರು ನಗ್ನರಾಗಿ ಹೋಗುತ್ತಿದ್ದರು. ಕೆಲವರು ಪಾದಚಾರಿಗಳು, ಹಲವರು ವಿಮಾನಾರೂಢರು, ಕೆಲವರು ತುಷ್ಟರು ಹಲವರುದುಷ್ಟರು. ಕೆಲವರು ಪೂರ್ಣೋದರರು ಹಲವರು ಕೃಶೋದರರು. ಹೀಗೆ ಬಗೆ ಬಗೆಯ ರೀತಿಯಿಂದ ಬಂದು ಹೋಗುತ್ತಲಿರುವ ಪಿತೃಗಳನ್ನು ಕಂಡು ತ್ರಿಕಾಲಜ್ಞಮುನಿಗೆ ಆಶ್ಚರ್ಯವಾಯಿತು. ಅವನು ತನ್ನ ಅಂದಿನ ಮಧ್ಯಾಹ್ನದ ಉಪಾಸನೆ ಉಪಾಹಾರಗಳನ್ನೂ ಕೂಡ ಮರೆತು ಈ ಕೌತುಕವನ್ನು ನೋಡುತ್ತ ಕುಳಿತಿದ್ದನು. ಮುಂದೆ ಕೆಲ ಹೊತ್ತಿನಲ್ಲಿಯೇ ಅಲ್ಲಿಗೆ ಇಳಿದು ಬಂದ ಪಿತೃಗಳೆಲ್ಲರೂ ಮೇಲಕ್ಕೆ ಏರಿಹೋದರು. ಶ್ರಾದ್ಧ ಮಾಡಬಂದ ಮಕ್ಕಳೆಲ್ಲರೂ ಮನೆಗೆ ಹೋದರು. ಆ ತೀರ್ಥ ಸ್ಥಳವು ನಿರ್ಜನವಾಯಿತು.

ಆದರೆ ಆ ತೀರ್ಥದ ತೀರದಲ್ಲಿ ಮರೆಯಲ್ಲಿ ಓರ್ವ ಎಲುಬು ತೊಗಲುಗಳು ಮಾತ್ರ ಉಳಿದ ಬಡಪಾಯಿ ಕುಳಿತುಕೊಂಡಿದ್ದನು. ಹಸಿವೆಯಿಂದ ಅವನ ಹೊಟ್ಟೆಯು ಬೆನ್ನಿಗೆ ಹತ್ತಿಕೊಂಡಿತ್ತು. ಕಣ್ಣು ಗುಳಿ ಬಿದ್ದಿದ್ದು ಒಳನಟ್ಟಿದ್ದವು. ಅವನ ದನಿ ಕ್ಷೀಣವಾಗಿ ಆಳಲಿಕ್ಕೂ ಕೂಡ ಅವನಲ್ಲಿ ತ್ರಾಣವಿರಲಿಲ್ಲ. ಅವನನ್ನು ಕಂಡು ತ್ರಿಕಾಲಜ್ಞಮುನಿಯು ''ನೀನಾರು ಇಲ್ಲಿಗೇಕೆ ಬಂದೆ ?'' ಎಂದು ಕೇಳಿದನು. ಅದಕ್ಕೆ ಆ ಬಡಪಾಯಿಯು ಬಿಕ್ಕಿಸುತ್ತಾ ನುಡಿದನು. '' ಈಗ ನಿನ್ನ ಕಣ್ಣೆದುರು ಇಳಿದು ಬಂದವರು ಇದೀಗ ಇಲ್ಲಿ ಶ್ರಾದ್ಧ ಮಾಡಿದ, ಪಿಂಡನೀಡಿದ, ತರ್ಪಣವನ್ನು ಕೊಟ್ಟ ಮಕ್ಕಳು ಮರಿಗಳ ತಂದೆ ತಾತ ಮುತ್ತಾತರು. ಯೋಗ್ಯರಾದ ಮಕ್ಕಳು ಅಥವಾ ಅವರ ವಂಶದವರು ಧ್ರುವತೀರ್ಥದಂಥ ಪುಣ್ಯತೀರ್ಥದಲ್ಲಿ ಸ್ನಾನ ಮಾಡಿ ಪಿತೃಗಳನ್ನು ಉದ್ದೇಶಿಸಿ ಜಲಾಂಜಲಿ ತಿಲಾಂಜಲಿ ಪಿಂಡಪ್ರದಾನ ಮುಂತಾದವುಗಳನ್ನು ಮಾಡಿದ್ದರಿಂದ ಅಂಥ ಮಕ್ಕಳು ಮರಿಗಳನ್ನು ಪಡೆದ ಆ ಭಾಗ್ಯವಂತ ಪಿತೃಗಳು ಮನಸ್ಸಿನಲ್ಲಿ ತುಷ್ಟರಾಗಿ ದೇಹದಿಂದ ಪುಷ್ಟರಾಗಿ ಸ್ವರ್ಗಕ್ಕೆ ಹೋದರು. ಆದರೆ ನನ್ನ ವಂಶದವರಾರೂ ಈ ಧ್ರುವ ತೀರ್ಥಕ್ಕೆ ಬಂದು ಶ್ರಾದ್ಧವನ್ನು ಮಾಡದಿರುವದರಿಂದ ನನ್ನ ಹಸಿವು ಹಿಂಗಲಿಲ್ಲ. ನನ್ನ ಸಂಕಟವೂ ಕಡಿಮೆ

ಆಗಲಿಲ್ಲ. ಈ ದಿನ ಚಂದ್ರಸೇನರಾಜನು ನಿಮ್ಮ ಕಣ್ಣೆದುರೇ ಈ ಧ್ರುವ ತೀರ್ಥದಲ್ಲಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧಮಾಡಿ, ಪಿಂಡಪ್ರದಾನವಿತ್ತು, ಬ್ರಾಹ್ಮಣ ಭೋಜನ ಮಾಡಿಸಿ ಗುರುದಕ್ಷಿಣೆ ಕೊಟ್ಟು, ದಾನಧರ್ಮಗಳನ್ನು ಮಾಡಿದ್ದರಿಂದ ಅವನ ಪಿತೃಗಳು ನೀನು ನೋಡನೋಡುತ್ತಿರುವಂತೆಯೇ ಹೃಷ್ಟಪುಷ್ಟರಾಗಿ ಆನಂದದಿಂದ ಸ್ವರ್ಗಾರೋಹಣ ಮಾಡಿದರು.'' ಅದನ್ನು ಕೇಳಿ ಆ ತ್ರಿಕಾಲಜ್ಞ ಮುನಿಗೆ ಇನ್ನೂ ಕುತೂಹಲವೆನಿಸಿತು. ಅವನು ಸಹಾನುಭೂತಿಯಿಂದ ಆ ಬಡಪಾಯಿಯನ್ನು ಕೇಳಿದನು.-

''ಅಯ್ಯಾ, ನಿನ್ನ ಸಂತತಿಯವರಾರೂ ಈಗ ಭೂಮಂಡಲದಲ್ಲಿಲ್ಲವೇ? ಅವರಾರೂ ಶ್ರಾದ್ಧ ಮಾಡುವದಿಲ್ಲವೇ ? ಅವರು ಎಲ್ಲಿ ಇರುವರು ತಿಳಿಸು. ನಾನು ಅವರನ್ನು ಕರೆತಂದು ಅವರ ಕಡೆಯಿಂದ ನಿನಗೆ ಒಳ್ಳೇದಾಗುವಂತೆ ಪುಣ್ಯ ಕರ್ಮಗಳನ್ನು ಮಾಡಿಸುವೆನು.'' ಅದಕ್ಕೆ ಆ ಬಡಪಾಯಿಯು ದೈನ್ಯದಿಂದ ಹೇಳಿತು-

''ಅಯ್ಯಾ, ದುರ್ದೈವಿಯಾದ ನನ್ನ ಸಂತತಿಯು ಈಗ ನಾಶವನ್ನು ಹೊಂದುತ್ತಲಿದೆ. ನಮ್ಮ ಸಂತತಿಯ ಈಗ ಉಳಿದಿರುವ ಒಂದೇ ಒಂದು ತಂತು ಎಂದರೆ ಚಂದ್ರಸೇನರಾಜನ ಅಂತಃಪುರದ ದಾಸಿಯ ಸೇವಕಿಯಾದ 'ವಿರೂಪಕನಿಧಿ.' ಅವಳೇನಾದರೂ ಪಿತೃಕಾರ್ಯಗಳನ್ನು ಈ ಪುಣ್ಯ ತೀರ್ಥದಲ್ಲಿ ಮಾಡಿಸುವಳೇನೋ ಎಂಬ ಆಸೆಯಿಂದ ನಾನು ಇಲ್ಲಿಗೆ ಬಂದಿದ್ದೆ. ಇಷ್ಟು ಹೊತ್ತಿನವರೆಗೆ ಕಾದು ಕುಳಿತಿದ್ದೆ. ಈಗ ನಿರಾಶೆ ಆಯಿತು. ಅವಳು ಬರಲಿಲ್ಲ. ಶ್ರಾದ್ಧ ಮಾಡಲಿಲ್ಲ. ನಿರಾಶೆಯಿಂದ ನಾನು ನರಕ ಇಲ್ಲದಿದ್ದರೆ ಸಮುದ್ರದಲ್ಲಿಯಾದರೂ ಹಾರಿಕೊಳ್ಳುವೆನು.'' ಈ ಮಾತುಗಳನ್ನು ಕೇಳಿ ಕೆಡುಕೆನಿಸಿದ ಆ ತ್ರಿಕಾಲಜ್ಞಮುನಿಯು ಪ್ರೇತಪ್ರಾಯವಾಗಿ ಅಲ್ಲಿ ಕುಳಿತುಕೊಂಡ ಆ ಪಿತೃಪಕ್ಷೀಯನಿಗೆ ಮತ್ತೆ ಪ್ರಶ್ನೆ ಕೇಳಿದನು.- ''ಹೀನಯೋನಿಯ ಆ ವಿರೂಪಕ ನಿಧಿಯು ಕೊಡುವ ಪದಾರ್ಥವು ಹೇಗೆ ಶ್ರಾದ್ಧಾರ್ಹವಾದ ಹವಿಸ್ಸಾಗುವದು ? ಅವಳು ಹೇಗೆ ನಿಮಗೆ ಪುತ್ರಿಯಾಗುವಳು ? ಅಂಥವರು ಶ್ರಾದ್ಧವನ್ನು ಮಾಡುವ ವಿಧಿ ಯಾವದು ? ''

ಅದಕ್ಕೆ ಆ ಪಿತೃಗಣದ ಪರದೇಶಿಯು ತೇಕಾಡುತ್ತ ಉತ್ತರಿಸಿದನು.- ''ತಮ್ಮ ತಮ್ಮ ಪೂರ್ವಕರ್ಮ ವಿಪಾಕದಿಂದ ಉತ್ತಮ ಗತಿಯನ್ನಾಗಲಿ, ಅಧೋಗತಿಯನ್ನಾಗಲಿ ಪಡೆದಿರುವ ಪಿತೃಗಳು ಮಕ್ಕಳುಳ್ಳವರಾಗಿದ್ದರೆ ಆ ತಮ್ಮ ಸಂತತಿಯವರಿಂದ ಶ್ರದ್ಧೆಯಿಂದ ನೀಡಲ್ಪಟ್ಟ ಪಿಂಡ ತಿಲಾಂಜಲಿ, ಕೊನೆಗೆ ಜಲಾಂಜಲಿಯನ್ನಾದರೂ ಅವರು ಅಪೇಕ್ಷಿಸುವರು. ಯಾವ ಜಾತಿಯವರೇ ಆಗಲಿ ಎಂಥ ಹೀನ ಕುಲದವರೇ ಆಗಲಿ ಇಂಥ ಪುಣ್ಯ ತೀರ್ಥಗಳಲ್ಲಿ ಬಂದು ಜಲಾಂಜಲಿ ತಿಲಾಂಜಲಿ ಪಿಂಡಪ್ರದಾನಾದಿಗಳನ್ನು ಅವರವರ ಜಾತಿಧರ್ಮಗಳಿಗೆ ಹೇಳಿದ ವಿಧಿಯಿಂದ ತರ್ಪಣ ಅರ್ಪಣಗಳನ್ನು ಮಾಡಿದರೆ ಅದರಿಂದ ಪಿತೃಗಳಿಗೆ ನಿಜವಾದ ತುಷ್ಟಿಪುಷ್ಟಿ ಉಂಟಾಗಿ ಅವರಿಗೊಂದು ಬಲ ಬಂದಂತಾಗುವದು. ಭಾಗ್ಯ ದೊರೆತಂತಾಗುವದು.

ವಿಶೇಷವಾಗಿ ತೀರ್ಥದ ಮಧ್ಯದಲ್ಲಿ ಹೊಕ್ಕಳ ವರೆಗೆ ನೀರು ಬರುವಷ್ಟು ಆಳ ಜಲದಲ್ಲಿ ನಿಂತು, ಪವಿತ್ರವನ್ನು ಬೆರಳಿಗಿಟ್ಟು, ಬೆಳ್ಳಿಯಿಂದಲೂ, ಎಳ್ಳಿನಿಂದಲೂ, ಬೊಗಸೆಯ ನೀರನ್ನು ಮೂರು ಮೂರು ಸಾರೆ ಪಿತೃಗಳ ಹೆಸರನ್ನೂ ಗೋತ್ರವನ್ನೂ ಹೇಳಿ ಸ್ವಧಾಕಾರ ಪೂರ್ವಕವಾಗಿ ''ತೃಪ್ತರಾಗಲಿ ತೃಪ್ತರಾಗಲಿ'' ''ತೃಪ್ಯಂತು ತೃಪ್ಯಂತು''

ಎಂದು ಹೇಳಿ ಅರ್ಪಿಸಬೇಕು. ಅಧಿಕಾರಿಗಳಾದವರು ದೇವತರ್ಪಣದಲ್ಲಿ ಒಂದು ಸಾರೆಯೂ, ಋಷಿತರ್ಪಣದಲ್ಲಿ ಎರಡು ಸಾರೆಯೂ, ಪಿತೃ ತರ್ಪಣದಲ್ಲಿ ಮೂರು ಸಾರೆಯೂ ಜಲಾಂಜಲಿಗಳನ್ನು ಅರ್ಪಿಸಬೇಕು.

ಆದಾವೇಕಾಂಜಲಿರ್ದ್ವೇತು ತಿಸ್ರೋ ವೈ ತರ್ಪಣೇ ಸ್ಮೃತಾಃ ।
ದೇವರ್ಷಿ-ಪಿತೃ-ಸಂಘಾನಾಂ ಕ್ರಮಾದ್ ಜ್ಞೇಯಂ ವಿಚಕ್ಷಣೈಃ ॥
ತೃಪ್ಯಧ್ವಮಿತಿ ಚಾಂತೇ ವೈ ಮಂತ್ರಂ ಮಂತ್ರಂ ಪ್ರತಿಕ್ರಿಯಾಃ ।
'ಉದೀರತಾ ಮಂಗೀರಸ ಆಯಂತು ನ' ಇತೀರಯೇತ್ ॥
ಪಿತ್ರೇ ಪ್ರಥಮತೋ ದದ್ಯಾನ್ಮಾತ್ರೇ ದದ್ಯಾತ್ತಥೋಚ್ಚರನ್ ।
ಗೋತ್ರಂ ಮಾತಾನಾಮ ದೇವೀ ತೃಪ್ಯತ್ವೇವಂ ಸ್ವಧೋಚ್ಚರನ್ ॥
ಏವಂ ಮಾತಾಮಹಃ ಶರ್ಮಾ ಗೋತ್ರೇ ಪಿತಾಮಹಸ್ತಥಾ ।
ಊರ್ಧ್ವಂ ಪಿತೃಭ್ಯೋ ಯೇ ಚೇಹ ತೇ ಪಿತರ ಇಹೋಚ್ಯತೇ ॥
ಪಿತಾಮಹೀಂ ಪ್ರಪಿತಾಮಹೀಂ ಪತ್ಯಾಮಾತೃವತ್ಸಹ ।
ಏವಂ ಮಾತಾಮಹಾನಾಂಚ ಪೂರ್ವವತ್ಕ್ರಮಶೋ ಬುಧಃ ॥
ನಮೋ ವ ಇತಿ ಮಂತ್ರೇಣ ಪ್ರತ್ಯೇಕಂ ತ್ರಯ ತ್ರಿಷು ।
ಗೋತ್ರಾಚ್ಚಾರಂ ಪ್ರಕುರ್ವೀತ ಅಸೂರ್ಯಾನ್ನಾಶಯಾಮಹೇ ।
ಗೋತ್ರಾಯ ಪಿತ್ರೇ ಮಹಾಯ ಶರ್ಮಣೇ ಚೇದಮಾಸನಂ ॥
ಗೋತ್ರಾಯೈ ಮಾತ್ರೇ ಮಹ್ಯೈ ದೇವ್ಯೈ ಚಾಸನ ಕರ್ಮಣಿ ।
ಗೋತ್ರಃ ಪಿತಾ ಮಹಃ ಶರ್ಮಾ ಗೋತ್ರಾ ಮಾತಾ ಮಹೀ ಮಹೀ
ಅರ್ಘ್ಯಪಾತ್ರ ಸಂಕಲ್ಪೇ ಪಿಂಡದಾನೇಽವನೇಜನೇ ।
ಗೋತ್ರಸ್ಯ ಪಿತುರ್ಮಹಸ್ಯ ಶರ್ಮಣೋಕ್ತಸ್ಯ ಕರ್ಮಣಿ ॥

ತರ್ಪಣದಲ್ಲಿ ತಂದೆಗೆ ಮೊದಲನೆಯ ಜಲಾಂಜಲಿಯನ್ನರ್ಪಿಸುವಾಗ ''ಉದೀರತಾಂ'' ಇತ್ಯಾದಿ ಮಂತ್ರವನ್ನು, ಎರಡನೆ ಜಲಾಂಜಲಿಯನ್ನು ಅರ್ಪಿಸುವಾಗ ''ಅಂಗಿರಸೋನಃ'' ಎಂಬ ಮಂತ್ರವನ್ನು ಹೇಳಬೇಕು. ಕೊನೆಯಲ್ಲಿ ತೃಪ್ಯಧ್ವಂ (ತೃಪ್ತರಾಗಿರಿ) ಎನ್ನಬೇಕು. ಮುಂದಿನ ಪಿತೃಗಳಿಗೆ ಎಂದರೆ ಪಿತಾಮಹರಿಗೆ 'ಯೇಚೇಹ ಪಿತರೋ ' ಎಂಬ ಮಂತ್ರವನ್ನು ಪೂರ್ವದಂತೆ ಜಲಾಂಜಲಿಯನ್ನರ್ಪಿಸುವಾಗ ಹೇಳಬೇಕು. ಮೊದಲು ಪಿತೃಗಳಿಗೂ ಆ ಮೇಲೆ ಮಾತೃ ಪಿತಾಮಹಿ, ಪ್ರಪಿತಾಮಹಿಯರಿಗೂ ಇಂತಹ ಗೋತ್ರದ ಈ ಹೆಸರಿನ ತಾಯಿ ತೃಪ್ತಳಾಗಲಿ ಸ್ವಧೆ ಎಂದು ತರ್ಪಣವನ್ನು ಮಾಡಬೇಕು. ಬಳಿಕ ಹಾಗೆಯೇ ಗೋತ್ರದಲ್ಲಿ ಮಾತಾಮಹ (ತಾಯಿ ತಂದೆ) ಮಾತುಃ ಪಿತಾಮಹ (ತಾಯಿಯ ಅಜ್ಜ) ಮೊದಲಾದವರಿಗೂ ಪಂಡಿತನಾದವನು ಈ ಶರ್ಮನಿಗೆ ಎಂದು ಕ್ರಮವಾಗಿ ಪೂರ್ವದಂತೆ ತರ್ಪಣ ಮಾಡಬೇಕು.

''ನಮೋ ವಃ ಪಿತರಃ'' ಇತ್ಯಾದಿ ಮಂತ್ರದಿಂದ ಪ್ರತ್ಯೇಕವಾಗಿ ಪಿತ್ರಾದಿಗಳಿಗೆ ಮೂರು ಸಾರಿ ವಂದನೋಕ್ತಿ. ಅಸೂರ್ಯಾನ್ನಾಶಯಾಮಹೇ ಎಂಬ ಮಂತ್ರದಿಂದ ಗೋತ್ರವನ್ನು

ಹೇಳಿ, ಈ ಗೋತ್ರದ ಶರ್ಮನಾದ ಪಿತೃವಿಗೆ, ಪಿತಾಮಹನಿಗೆ, ಪ್ರಪಿತಾಮಹನಿಗೆ ಇದು ಆಸನ ಎಂದು ಪೀಠವನ್ನರ್ಪಿಸಬೇಕು. ಇಂತಹ ಗೋತ್ರದ ಹೆಸರಿನ ತಾಯಿಗೆ, ಅಜ್ಜ (ತಂದೆಯ ತಾಯಿ)ಗೆ, ತಂದೆಯ ಅಜ್ಜಿಗೆ ಎಂದು ಆಸನವನ್ನು ಕೊಡಬೇಕು. ಶ್ರಾದ್ಧ ಕರ್ಮದಲ್ಲೂ ಸಂಕಲ್ಪದಲ್ಲೂ ಅರ್ಘ್ಯಪಾದ್ಯದಲ್ಲೂ ಪಿಂಡದಾನದಲ್ಲೂ ಗೋತ್ರದ ಹೆಸರಿನ ಪಿತೃವಿಗೆ ಗೋತ್ರದ ಹೆಸರಿನ ಪಿತಾಮಹನಿಗೆ, ಪ್ರಪಿತಾಮಹನಿಗೆ, ಗೋತ್ರದ ಹೆಸರಿನ ತಾಯಿಗೆ ಅಜ್ಜಿಗೆ ಎಂದು ಮುತ್ತಜ್ಜಿಗೆ ಎಂದು ಹೇಳಬೇಕು. ಶ್ರಾದ್ಧದಲ್ಲಿ ಪಿತ್ರಾದಿಗಳನ್ನು ಆವಾಹಿಸುವಾಗ ಇಂತಹವರನ್ನು ಕರೆಯುತ್ತೇನೆ. ಎಂದು ದ್ವಿತೀಯಾವಿಭಕ್ತ್ಯಂತಪದವನ್ನು, ಪೂಜಿಸುವಾಗ ಇಂತಹವರಿಗೆ ಎಂದು ಚತುರ್ಥೀವಿಭಕ್ತ್ಯಂತ ಪದವನ್ನು, ಆಸನವನ್ನರ್ಪಿಸುವಾಗ ಷಷ್ಠೀ ವಿಭಕ್ತ್ಯಂತ ಪದವನ್ನೂ ಉಚ್ಚರಿಸಬೇಕು. ಹೀಗೆ ಮಾಡುವದರಿಂದ ಶ್ರಾದ್ಧವು ಅಕ್ಷಯ ಫಲದಾಯಕವಾಗುವದು. ಪಿತ್ರಾದಿಸ್ಥಾನದಲ್ಲಿರುವ ಬ್ರಾಹ್ಮಣರು ಕರ್ತೃಗಳನ್ನು ಆಶೀರ್ವದಿಸುವಾಗ ನೀನು ಇಂತಹವನಾಗು ಎಂದಾಗಲಿ ಇಂತಹವರು ಹೀಗೆ ಏಳ್ಗೆ ಪಡೆಯಲಿ ಎಂದಾಗಲಿ ಪ್ರಥಮಾ ವಿಭಕ್ತ್ಯಂತವಾದ ಪದವನ್ನು ಉಪಯೋಗಿಸಬೇಕು. ತ್ರಿಕಾಲಜ್ಞನೇ, ತಂದೆಗೆ ಶ್ರಾದ್ಧ ಮಾಡುವುದರಿಂದ ಆತನಿಗೆ ಅಕ್ಷಯ ಸುಖವುಂಟಾಗುತ್ತದೆ. ಅದೇ ಕಾಲದಲ್ಲಿ ಪಿತಾಮಹ ಪ್ರಪಿತಾಮಹಾದಿಗಳಿಗೂ ದ್ವಿಜನಾದ ಪುತ್ರನು ಭಕ್ತಿಪೂರ್ವಕವಾಗಿ ಶ್ರಾದ್ಧ ಮಾಡುವದರಿಂದ ಅಕ್ಷಯ ಸುಖವುಂಟಾಗುವದು. ಶ್ರಾದ್ಧವಿಧಿಯಲ್ಲಿ ಹೇಳಿರುವಂತೆ ಶ್ರದ್ಧೆಯಿಂದ ಪಿತ್ರಾದಿಗಳಿಗೆ ಅರ್ಪಿಸುವ ನೀರು ಕೂಡಾ ಅನಂತ ಸುಖಕರವಾಗುವದು. ಆದುದರಿಂದ ಈ ತೀರ್ಥದಲ್ಲಿ ಶ್ರಾದ್ಧವನ್ನು ಪಡೆದ ಪಿತೃಗಳು ಸುಖವನ್ನು ಪಡೆದು, ಸದಾಸಂತೋಷವುಳ್ಳರಾದರು. ಮುನಿಯೇ ಸುಮ್ಮನಿರು. ನಮಗೆ ಅಂತಹ ಶ್ರಾದ್ಧವಿಲ್ಲದಿರುವುದರಿಂದ, ನಾವು ಪೂರ್ವ ಕರ್ಮ ಪರಿಪಾಕದಂತೆ ನರಕದಲ್ಲಿ ಚಿರಕಾಲ ವಾಸ ಮಾಡಲು ಹೋಗುತ್ತೇವೆ.

**ತ್ರಿಕಾಲಜ** :- ಈ ತೀರ್ಥಕ್ಕೆ ಬಂದ ಪಿತೃಗಳಲ್ಲಿ ಹಲವರು ಸಂತೋಷಗೊಂಡು ಮನಸ್ಸುಳ್ಳವರಾಗಿಯೂ, ಹಲವರು ಅಸಮಾಧಾನಗಳಿಂದ ಕೂಡಿದ ಮನಸ್ಸುಳ್ಳವರಾಗಿಯೂ, ಮಕ್ಕಳು ಶ್ರಾದ್ಧದಲ್ಲಿ ಕೊಟ್ಟಿದ್ದನ್ನು ಸಂಗ್ರಹಿಸಿ, ಮೌನದಿಂದ ಹೊರಟು ಹೋದದ್ದನ್ನು ನೋಡಿದೆನು. ಹಾಗೆವ್ಯತ್ಯಾಸವಾಗಲು ನಿಜವಾದ ಕಾರಣವೇನೆಂಬುದನ್ನು ಹೇಳು.

**ದುಃಖಿಯಾದ ಅಗಸ್ತ್ಯ** :- ಈ ವಿಚಾರದಲ್ಲಿ ಮಗನು ಶ್ರಾದ್ಧದಲ್ಲಿ ಮಾಡುವ ಯಾವ ಕಾರ್ಯವು ನಿಜವಾಗಿ ವ್ಯರ್ಥವಾಗುವದೆಂಬುದನ್ನು ಸ್ವಲ್ಪ ಹೇಳುತ್ತೇನೆ ಕೇಳು. ಆದೇಶ (ಸರಿಯಲ್ಲದ ಸ್ಥಳ) ದಲ್ಲಾಗಲಿ, ಅಕಾಲದಲ್ಲಾಗಲಿ, ವಿಧಿಯನ್ನನು ಸರಿಸದೆಯಾಗಲಿ, ಅಶುದ್ಧವಾಗಿಯಾಗಲಿ, ಶ್ರಾದ್ಧ ಮಾಡುವುದೂ ಕೊಡುವುದೂ ಮಹಾ ಪಾಪಕ್ಕೆ ಕಾರಣವಾಗುವುದು. ಶ್ರದ್ಧೆ (ಆಸಕ್ತಿ) ಇಲ್ಲದ ಅಥವಾ ಅಪಾಂಕ್ತೇಯರನ್ನು ಕರೆದು ಮಾಡುವ ಅಥವಾ ದುಷ್ಟರು ನೋಡುವಂತೆ ಮಾಡುವ ಅಥವಾ ಎಳ್ಳು, ದರ್ಭೆ, ಮಂತ್ರ ಇವುಗಳಲ್ಲಾದರೂ ಇಲ್ಲದೆ ಮಾಡುವ ಶ್ರಾದ್ಧವು ಅಸುರ (ರಾಕ್ಷಸ) ಶ್ರಾದ್ಧವಾಗುವದು. ಪೂರ್ವದಲ್ಲಿ ವಾಮನದೇವನು ವಿರೋಚನ ಪುತ್ರನೂ, ಸಚ್ಛೂದ್ರನೂ ಆದ ಬಲಿಚಕ್ರವರ್ತಿಗೆ ಐಶ್ವರ್ಯಕ್ಕಾಗಿ ಅಸುರ ಶ್ರಾದ್ಧದ ಫಲವನ್ನು ಕೊಟ್ಟನಲ್ಲವೇ ! ಅಲ್ಲದೆ ದಶರಥ ಪುತ್ರನಾದ ಶ್ರೀರಾಮನು ಘೋರನೂ,

ರಾಕ್ಷಸೇಶ್ವರನೂ, ಸಪರಿವಾರನೂ ಆದ ರಾವಣನನ್ನು ಕೊಂದು, ಸೀತೆಯೊಡಗೂಡಿ ಸಂತೋಷವುಳ್ಳವನಾದನು. ಬಳಿಕ ರಾಕ್ಷಸಿಯಾದ ತ್ರಿಜಟೆಗೆ ತಮ್ಮಲ್ಲಿರುವ ಭಕ್ತಿಯನ್ನು ಸೀತೆಯಿಂದ ಕೇಳಿ ಅತಿ ಸಂತೋಷಗೊಂಡ ತ್ರಿಲೋಕ ಕರ್ತೃವಾದ ಆ ಪ್ರಭುವು ಆಕೆಗೆ ಈ ವರಗಳನ್ನು ಕೊಟ್ಟನು. "ತ್ರಿಜಟೇ, ಅಶುಚಿಯಾದ ಮನೆಗಳನ್ನೂ, ಶ್ರಾದ್ಧ ಹವಿಸ್ಸುಗಳನ್ನೂ, ವಿಧಿಯಂತೆ ಸತ್ಪಾತ್ರದಲ್ಲಿ ಕೊಟ್ಟರೂ ಕೋಪವುಳ್ಳವರಾಗಿ ಕೊಡುವ ದಾನಗಳನ್ನು ಕಾಲುಗಳನ್ನು ತೊಳೆದುಕೊಳ್ಳದೆಯೂ, ಸ್ನಾನವಿಲ್ಲದೆಯೂ, ಅನುಚಿತವಾದ ಸ್ಥಳದಲ್ಲೂ, ಮಾಡುವ ಭೋಜನವನ್ನೂ, ದಕ್ಷಿಣೆಯಿಲ್ಲದ ಶ್ರಾದ್ಧವನ್ನೂ ನಿನಗೆ ಕೊಡುತ್ತೇನೆ" ಎಂದನು. ಹಾಗೆಯೇ ನಾಗರಾಜನಾದ ವಾಸುಕಿಗೆ ಅವನ ಭಕ್ತಿಯಿಂದ ಸಂತುಷ್ಟನಾದ ಶಂಭುವು ಕೊಟ್ಟ ವರವನ್ನೂ ಹೇಳುತ್ತೇನೆ ಕೇಳು-

'ವ್ರತವನ್ನು ಮಾಡುವುದಾಗಿ ಉದ್ದೇಶಿಸಿ ದೊಡ್ಡವರ ಸಮ್ಮತಿಯನ್ನು ಪಡೆದು ಅದನ್ನು ಮಾಡದೇ ಬಿಡುವವನು ವರ್ಷವೂ ಮಾಡುವ ಸಕಲ ಕರ್ಮಗಳು, ಯಜ್ಞಕ್ಕೆ ತಕ್ಕಂತೆ ದಕ್ಷಿಣೆಯನ್ನು ಕೊಡದೆ ಬ್ರಾಹ್ಮಣನು ಉಳಿಸಿಕೊಂಡ ಹಣ, ದೇವ ಬ್ರಾಹ್ಮಣನು ಉಳಿಸಿಕೊಂಡ ಹಣ, ದೇವ ಬ್ರಾಹ್ಮಣ ಸನ್ನಿಧಿಯಲ್ಲಿ ವ್ಯರ್ಥವಾದ ಶಪಥಗಳನ್ನು ಮಾಡುವ ಮನುಷ್ಯ, ಶ್ರೋತ್ರಿಯರಿಲ್ಲದ ಮತ್ತು ಮಂತ್ರತಂತ್ರಗಳಿಲ್ಲದ ಶ್ರಾದ್ಧಗಳು, ರಾತ್ರಿಯವೇಳೆ ಸಾಮಾನ್ಯ ಪ್ರಾಣಿಗಳು ಮಾಡುವಂತೆ ಎದ್ದು ಬಟ್ಟೆಯೊಂದಿಗೆ ಮಾಡುವ ಸ್ನಾನ, ಜ್ಞಾನ ಪ್ರದಾಯಕನಾದ ಗುರುವನ್ನು ಭಕ್ತಿಯಿಂದ ವಂದಿಸದ ಶಿಷ್ಯ, ಗುರುವಿನ ಪ್ರತ್ಯಕ್ಷದಲ್ಲಿ ನಿಂದ್ಯವಾದ ಕರ್ಮ ಮಾಡುವ ಶಿಷ್ಯ, ಇವೆಲ್ಲವನ್ನೂ ನಾನು ನಾಗರಾಜನಾದ ನಿನಗೆ ಕೊಟ್ಟಿದ್ದೇನೆ ಎಂದು ಶಂಕರನು ಹೇಳಿದನೆಂದು ಇತಿಹಾಸ ಸಹಿತಗಳಾದ ಪುರಾಣಗಳಲ್ಲಿ ಹೇಳಿದೆ. ಹಾಗೆಯೇ ಅಪ್ರಿಯವಾಗಿ ಅಥವಾ ಸುಳ್ಳಾಗಿ ಮಾಡುವ ಶ್ರಾದ್ಧವೂ, ದಾನವೂ ವ್ರತವೂ ಯಾರಿಗೆ ಉದ್ದೇಶವೋ ಅವರಿಗೆ ಸೇರುವುದಿಲ್ಲ. ಆದುದರಿಂದ ಮುನಿಯೇ ನೀನು ಹೇಳಿದ ನಗ್ನರೇ ಮೊದಲಾಗಿ ಇಲ್ಲಿಗೆ ಬಂದು ಹೋದವರು ರಂಧ್ರಾನ್ವೇಷಿಗಳೂ ಆ ದಾನ ಫಲವನ್ನು ಅನುಭವಿಸುವವರೂ ಆದ ರಾಕ್ಷಸಾದಿಗಳಿಂದ ವಂಚಿಸಲ್ಪಟ್ಟರು. ಆದುದರಿಂದ ಶ್ರಾದ್ಧಕ್ಕೆ ಆವಾಹಿತರಾಗಿ ಬಂದ ಅವರು ನಿಷ್ಫಲರಾಗಿ ಮತ್ತೆ ತಾವು ಪಡೆಯಬೇಕಾದುದನ್ನು ಪಡೆಯುವದಕ್ಕಾಗಿ ಮೌನವ್ರತವನ್ನು ಧರಿಸಿ, ಹೇಗೆ ಬಂದರೋ ಹಾಗೆಯೇ ಹೊರಟು ಹೋದರು. ಮಹಾಪ್ರಾಜ್ಞನೆ, ನೀನು ನನ್ನನ್ನು ಕೇಳಿದ ವಿಚಾರವು ಹೀಗಿದೆ.

**ತ್ರಿಕಾಲಜ್ಞ** - ಅಯ್ಯೋ! ನಿನಗೆ ತೃಪ್ತಿಯಾಗುವವರೆಗೂ ನಾನು ಈ ದಿನ ಆರನೆಯ ಕಾಲದ (ಅಪರಾಹ್ಣದ) ಭೋಜನವನ್ನು ಮಾಡಲು ಇಷ್ಟಪಡುವದಿಲ್ಲ. ನೋಡುತ್ತ ನಂಬಿಕೆಯಿಂದ ಇಲ್ಲೇ ಇರು. ನಾನು ಹೋಗಿ ಬರುವವರೆಗೂ ನಿರೀಕ್ಷಿಸು. ನಾನು ಈ ತೀರ್ಥದಲ್ಲಿ ಹಗಲೂ ರಾತ್ರೆಯೂ ಯಾವಾಗಲೂ ಜಾಗರೂಕನಾಗಿ ಜಪತಪಗಳಲ್ಲಿದ್ದೆನು. ಅಂತಹ ನಾನು ನಿನ್ನಲ್ಲಿ ಕರುಣೆಯಿಂದ ತುಂಬಿದವನಾಗಿ ಈಗ ವ್ರತವನ್ನು ಬಿಟ್ಟು ಹೋಗಿ, ನೀನು ಹೇಳಿದ ನಿನ್ನ ಸಂತತಿಯ ಆ ಉತ್ತಮ ಸ್ತ್ರೀಯನ್ನು ಕರೆದುಕೊಂಡು ಬರುವೆನು. ಆಕೆಯಿಂದ ವಿಧ್ಯುಕ್ತವಾಗಿ ಶ್ರಾದ್ಧವನ್ನು ಮಾಡಿಸುವೆನು"

ಎಂದು ಹೇಳಿ, ಅಪರಾಹ್ಣ ಭೋಜಿಯೂ, ಮೌನವ್ರತಿಯೂ ಆದ ಆ ಮುನಿ ಬೇಗನೆ ದೊರೆಯ ಹತ್ತಿರಕ್ಕೆ ಹೋದನು. ಅಕಸ್ಮಾತ್ತಾಗಿ ತನ್ನ ಸಮೀಪಕ್ಕೆ ಬಂದ ಮುನಿಯನ್ನು ನೋಡಿ ಆ ದೊರೆ ನೆಲದ ಮೇಲೆ ಪ್ರಣಾಮ ಮಾಡಿ, ಆತನ ಪಾದಗಳ ಮೇಲೆ ತಲೆಯನ್ನಿಟ್ಟು "ಪೂಜ್ಯನಾದ ನೀನು ನಮ್ಮ ಮನೆಗೆ ಬಂದುದರಿಂದ ನಾನು ಸುಕೃತಿಯಾದೆನು. ನಿನ್ನ ಅನುಗ್ರಹವನ್ನು ಪಡೆದೆನು. ನೀನು ಮನೆಗೆ ಬರಲೆಂದು ನಾನು ಯಾವಾಗಲೂ ಯಜ್ಞವನ್ನು ಮಾಡುವೆನು. ನೀನು ಈ ದಿನ ಇಲ್ಲಿಗೆ ಬಂದುದರಿಂದ ನನ್ನ ಜನ್ಮವು ಸಫಲವಾಯಿತು. ಮುನಿವರ್ಯನೇ, ಈ ಪಾದ್ಯವನ್ನೂ, ಈ ಅರ್ಘ್ಯವನ್ನೂ, ಈ ಮಧುಪರ್ಕವನ್ನೂ, ಈ ಹಸುವನ್ನೂ ಪರಿಗ್ರಹಿಸು. ಇದರಿಂದ ನನಗೆ ಸಮಾಧಾನ ವಾಗುವುದು" ಎಂದು ಬಿನ್ನವಿಸಿದನು. ಆ ಮುನಿ ಆ ದೊರೆಯು ಕೊಟ್ಟದ್ದನ್ನು ಬೇಗನೆ ಪರಿಗ್ರಹಿಸಿ, " ರಾಜನೇ, ನಾನು ಬಂದ ಮಹಾ ಕಾರಣವನ್ನು ನೀನು ಕೇಳು. ಅದನ್ನು ಕೇಳಿ, ಯಾವುದರಿಂದ ನಾನು ಸಂತೋಷಗೊಳ್ಳುವೆನೋ ಅದನ್ನು ಮಾಡು " ಎಂದು ತ್ವರೆಯಿಂದ ಹೇಳಿದನು. ಋಷಿ ಹೀಗೆನಲು ಆ ರಾಜರ್ಷಿ " ಅದೇನು ? ಇರುವ ಕಾರ್ಯವನ್ನು ಹೇಳು. ಅದು ಸಿದ್ಧವಾಗುವುದು " ಎಂದು ಆ ತಪೋಧನನಿಗೆ ಹೇಳಿದನು.

**ತ್ರಿಕಾಲಜ್ಞ:**-ವರಾನನೆಯೂ , ನಿನ್ನ ರಾಣಿಯೂ ಆದ ಚಂದ್ರಪ್ರಭಾದಿಯನ್ನು ಇಲ್ಲಿಗೆ ಕರೆಯಿಸು. ಆ ರಾಣಿಯ ದಾಸಿಯಾದ ಪ್ರಭಾವತಿಯೆಂಬುವವಳೂ ದೇವಿಯೊಡನೆ ನನ್ನ ಸಮೀಪಕ್ಕೆ ಬರಲಿ. ಬಳಿಕ ಅಂತಃಪುರದಿಂದ ದಾಸಿಯೊಡನೆ ಬಂದ ಪತಿವ್ರತೆಯಾದ ರಾಣಿ ನೆಲದ ಮೇಲೆ ಬಾಗಿ ಋಷಿಗೆ ಪ್ರಣಾಮ ಮಾಡಿದಳು. ಆ ಮೇಲೆ ರಾಣಿ ತಲೆಬಾಗಿ ಕುಳಿತುಕೊಂಡಿರಲು ಆ ಬ್ರಾಹ್ಮಣೋತ್ತಮನು "ಧ್ರುವತೀರ್ಥದಲ್ಲಿ ನಾನು ನೋಡಿದ ಆಶ್ಚರ್ಯವನ್ನು ನಿಮಗೆ ಹೇಳುತ್ತೇನೆ. ಲೋಕದಲ್ಲೆಲ್ಲಾ ಇರುವ ಹಲವರ ಪಿತೃಗಳು ತಮ್ಮ ಮಕ್ಕಳು ಶ್ರಾದ್ಧವನ್ನು ಮಾಡಿ ಪೂಜಿಸಲಾಗಿ, ಸಂತುಷ್ಟರಾಗಿ ಸ್ವರ್ಗಕ್ಕೆ ಹೋದರು. ಅಲ್ಲಿ ಒಬ್ಬ ಮುದುಕನು ಮಾತ್ರ ಸೂಕ್ಷ್ಮ ಪ್ರಾಣಿಗಳಿಂದಾವೃತನಾಗಿ ಹಸಿವಿನಿಂದ ಕೃಶವಾದ ಮೈಯ್ಯುಳ್ಳವನೂ, ಒಣಗಿದ ಮುಖವುಳ್ಳವನೂ, ಬತ್ತಿದ ಉದರವುಳ್ಳವನೂ, ಚಿಕ್ಕದಾದ ಕಣ್ಣುಳ್ಳವನೂ ಆಗಿರುವನು. ನಿರಾಶನಾಗಿ ಮತ್ತೆ ಅಶುಚಿಯಾದ ನರಕಕ್ಕೆ ಹೋಗಲು ಸಿದ್ಧನಾಗಿದ್ದ ಅವನನ್ನು ನಾನು ಕರುಣೆಯಿಂದ ' ನೀನು ಯಾರು ? ನಿನಗೇನು ಬೇಕು ? ಹೇಳು ಎಂದು ಕೇಳಿದೆನು. ಅವನು ತನ್ನ ಪೂರ್ವ ಕರ್ಮದಿಂದುಂಟಾದ ಕಷ್ಟವನ್ನು ನನಗೆ ತಿಳಿಸಿದನು. ಅದನ್ನು ಕೇಳಿದ ಮೇಲೆ ಅಲ್ಲೇ ಅವನ ಮೇಲುಂಟಾದ ಕರುಣೆಯಿಂದ ನಾನಿಲ್ಲಿ ಬಂದಿದ್ದೇನೆ. ರಾಣೀ, ನಿನ್ನ ದಾಸಿಯಾದ ಪ್ರಭಾವತಿಯ ದಾಸಿಯಾದ ವಿರೂಪಕನಿಧಿಯೆಂಬವಳು ಆ ಮುದುಕನ ಸಂತತಿಯುವಳಂತೆ. ಅವಳನ್ನು ಇಲ್ಲಿ ಕರೆಯಿಸು " ಎಂದನು. ಶೋಭನಾಂಗಿಯಾದ ಆ ರಾಣಿ ಆ ಮಾತನ್ನು ಕೇಳಿ, ಆ ದಾಸಿಯನ್ನು ಕರೆಯಿಸಲು ತ್ವರೆ ಮಾಡಿದಳು. ಅವಳನ್ನು ಕರೆದುಕೊಂಡು ಬರಲು ಹಲವರನ್ನು ಎಲ್ಲಾ ಕಡೆಗೂ ಕಳುಹಿಸಿದಳು. ಆ ವಿರೂಪಕನಿಧಿ ಗುಟ್ಟಾದೆಡೆಯಲ್ಲಿ ಹಗಲಿನಲ್ಲೇ ಯಾವಾಗಲೂ ಮದ್ಯ ಮಾಂಸಾಸಕ್ತಳಾಗಿ ಮದಿಸಿ ಪುರುಷನೊಡನೆ ಹಾಸಿಗೆಯ ಮೇಲೆ ಕುಳಿತಿರುತ್ತಿದ್ದಳು. ರಾಜಸೇವಕರು ಅವಳನ್ನು ಮುನಿಯ ಸಮೀಪಕ್ಕೆ ಕೈಹಿಡಿದೆಳೆದು ಕರೆದುಕೊಂಡು ಬಂದರು. ಮದ್ಯಪಾನದಿಂದ ಮತ್ತಳಾದ ಅವಳನ್ನು

ನೋಡಿ ಧರ್ಮಜ್ಞನಾದ ಆ ಮುನಿಯು ಕರ್ಮದ ವಿಷಯದಲ್ಲಿ ಅವಳಿಗೆ ನಂಬಿಕೆಯುಂಟಾಗುವುದಕ್ಕಾಗಿ ಹೀಗೆ ಹೇಳಿದನು. ''ನೀನು ಪಿತೃಗಳಿಗಾಗಿ ದಾನವನ್ನಾಗಲಿ, ನೀರನ್ನಾಗಲಿ, ಸ್ವಧೆಯನ್ನಾಗಲಿ, ಕೊಟ್ಟಿಲ್ಲ. ಪಿತೃಗಳಿಗೆ ಉತ್ತಮವಾದ ಮುಕ್ತಿಯನ್ನುಂಟು ಮಾಡುವ ತರ್ಪಣವನ್ನು ಕೊಟ್ಟಿಲ್ಲ.'' ಅವಳು, ''ವಿಭುವೆ, ನಾನು ಏನನ್ನೂ ಮಾಡಿಯೇ ಇಲ್ಲ. ನಮ್ಮ ಪಿತೃಗಳನ್ನಾಗಲಿ, ಕರ್ಮಕ್ರಿಯೆಗಳನ್ನಾಗಲಿ ನಾನು ಅರಿಯೆನು '' ಎಂದು ತೀಕ್ಷ್ಣವ್ರತಿಯಾದ ಆ ಮುನಿಗೆ ಹೇಳಿದನು. ಹಾಗೆ ಹೇಳಿದ ಆ ದಾಸಿಗೆ ತ್ರಿಕಾಲಜ್ಞನಾದ ಆ ಮುನಿ '' ಮಧುರೇಶ್ವರನ ರಾಣಿಯೂ, ಪಟ್ಟಣದ ಸಜ್ಜನರೊಡಗೂಡಿದ ರಾಜನೂ, ನೀನೂ ಕುತೂಹಲವುಳ್ಳ ಮಹಾ ಭಾಗ್ಯರೂ ಎಲ್ಲರೂ ಪಿತೃಗಳಿಗೆ ಸಂತತಿಯಿಂದಾಗುವ ಮಹಿಮೆಯನ್ನೂ, ಫಲವನ್ನೂ, ಶ್ರಾದ್ಧದಾನವನ್ನೂ ನೋಡುತ್ತೀರಿ'' ಎಂದನು. ದೊರೆಯು ಮಧುರಾ ನಗರದಲ್ಲಿದ್ದ ಭಾವಪೂಜಿತರಾದ ಎಲ್ಲಾ ಬ್ರಾಹ್ಮಣರನ್ನೂ, ಪದಾರ್ಥಗಳನ್ನೂ ಶ್ರಾದ್ಧಕ್ಕಾಗಿ ಮುನಿಯೊಡನೆ ಕರೆದುಕೊಂಡು ಜನರೊಡಗೂಡಿ ತಾನೂ ಆ ಧ್ರುವತೀರ್ಥಕ್ಕೆ ಹೋದನು. ಅಲ್ಲಿ ಸಂತತಿಯನ್ನು ಕಳೆದುಕೊಂಡು ಬಹಳ ಹಸಿವಿನಿಂದ ಪೀಡಿತನಾಗಿ ಸಣ್ಣ ಸೊಳ್ಳೆಗಳಿಂದ ಸುತ್ತಿದವನಾಗಿ ವಿಚೇತನನಾಗಿದ್ದ ಆ ಪ್ರಾಣಿಯನ್ನು ಎಲ್ಲರೂ ನೋಡಿದರು. ಆಗ ತ್ರಿಕಾಲಜ್ಞ ಬ್ರಾಹ್ಮಣನು ಆ ವೃದ್ಧನನ್ನು ಕುರಿತು, ''ನಿನ್ನ ಸಂತತಿಯಲ್ಲಿ ಹುಟ್ಟಿದವಳು ಸ್ತ್ರೀಯಾಗಿದ್ದರೂ ನಿನ್ನ ತೃಪ್ತಿಗಾಗಿ ಅವಳನ್ನು ಕರೆದುಕೊಂಡು ಬಂದುದಾಗಿದೆ. ನಿನಗೆ ಹೇಗೆ ಇಷ್ಟವೋ ಹಾಗೆ ಮಾಡು'' ಎಂದು ಹೇಳಿದನು.

**ಅಗಸ್ತ್ಯನೆಂಬ ಆ ವೃದ್ಧ** - ಇವಳು (ವಿರೂಪಕನಿಧಿ) ಧ್ರುವತೀರ್ಥದಲ್ಲಿ ಸ್ನಾನಮಾಡಿ, ಬ್ರಾಹ್ಮಣರು ಹೇಳಿದ ಕರ್ಮದಿಂದ, ಮೊದಲು ಹೇಳಿದ ವಿಧಾನದಿಂದ ಈ ತೀರ್ಥದಲ್ಲೇ ತರ್ಪಣವನ್ನು ಮಾಡಲಿ. ಎಲ್ಲರೂ ಇಲ್ಲೆ ಇದ್ದು ನನ್ನ ಸಂತತಿಯವಳಾದ (ಕರ್ತೃವಾದ) ಇವಳಿಂದ ಶ್ರಾದ್ಧ ದಾನವೆಲ್ಲವನ್ನೂ ಹೇಗೆ ಮಾಡಬೇಕೋ ಹಾಗೆ ಮಾಡಿಸಿ, ಅದರಿಂದ ಸುಖಿಯಾಗುವ ನನ್ನನ್ನು ನೋಡಿರಿ '' ಎಂದನು. ಅವನ ಆ ಮಾತನ್ನು ಕೇಳಿ, ಕೀರ್ತಿವಂತೆಯಾದ ಆ ರಾಣಿಯು ಆ ದಾಸಿಯಿಂದ ಹೆಚ್ಚಾದ ಒಳ್ಳೆಯ ದಕ್ಷಿಣೆಯುಳ್ಳ ಶ್ರಾದ್ಧವನ್ನು ಮಾಡಿಸಿದಳು. ಪಟ್ಟೆಯ ವಸ್ತ್ರ, ಧೂಪ, ಕರ್ಪೂರ, ಅಗುರುಚಂದನ ಶ್ರೇಷ್ಠವಾದ (ಎಳ್ಳು) ತಿಲ, ಬಗೆಬಗೆಯ ಅನ್ನ, ಅನ್ನಗಳ ಪಿಂಡಗಳು ಇವುಗಳಿಂದ ಶ್ರಾದ್ಧವನ್ನು ಮಾಡಿಸಿ ಪಿಂಡಪ್ರದಾನವನ್ನು ಮಾಡಲಾಗಿ ಆ ವೃದ್ಧ ಜಂತು ಪುಣ್ಯಶಾಲಿಯಂತೆ ದಿವ್ಯ ಕಾಂತಿಯುಳ್ಳವನೂ, ಅದೀನಾತ್ಮನೂ, ತನ್ನಂತೆಯೇ ಬೇರೆಯಾದ ಆ ಪ್ರಾಣಿಗಳಿಂದ ಸುತ್ತಿದವನೂ ಆಗಿ ಯಜ್ಞದ ಅವಭೃಥದಲ್ಲಿರುವ ದೀಕ್ಷಿತನಂತೆ ಹೊಳೆಯುತ್ತಿದ್ದನು. ಸ್ವರ್ಗದಿಂದ ಬಂದ ವಿಮಾನಗಳಿಂದ ಅಲ್ಲಿಯ ಆಕಾಶವು ತುಂಬಿಹೋಯಿತು. ಮೊದಲು ಸೊಳ್ಳೆಗಳಾಗಿದ್ದವರು, ಶ್ರಾದ್ಧವಾದಬಳಿಕ ಸುಂದರಾಂಗರೂ, ಸುರೂಪರೂ ಆದರು. ತನ್ನನ್ನು ಸುತ್ತಿದವರಿಗೂ ತನಗೂ ಬಂದ ವಿಮಾನಗಳನ್ನು ನೋಡಿ, ಸಂತೋಷಗೊಂಡ ಮನವುಳ್ಳವನಾದ ಆ ವೃದ್ಧನು ಸ್ವರ್ಗಕ್ಕೆ ಹೋಗಲು ಬಯಸಿ, ತ್ರಿಕಾಲಜ್ಞನಾದ ಆ ಮುನಿಗೂ ರಾಜನಿಗೂ ಹೀಗೆ ಹೇಳಿದನು.

''ಎಲ್ಲರೂ ಪಿತೃಗಳಿಗೆ ತೃಪ್ತಿಕರವಾದ ನನ್ನ ಮಾತನ್ನು ಕೇಳಿರಿ. ತೀರ್ಥಗಳೂ, ಶ್ರೇಷ್ಠವಾದ ನದಿಗಳೂ, ಪರ್ವತಗಳೂ, ಸರೋವರಗಳೂ, ಕುರುಕ್ಷೇತ್ರವೂ, ಗಯೆಯೂ ಪಿತೃಗಳಿಗೆ ಮುಕ್ತಿಯನ್ನುಂಟುಮಾಡುವ ಸ್ಥಳಗಳೂ, ಗೃಹಗಳೂ ಆಗಿವೆ. ಬೇರಾವುದೂ ಆಗಿಲ್ಲ. ಆಗುವುದೂ ಇಲ್ಲ. ಆಷಾಢ ಶುಕ್ಲ ಪೌರ್ಣಿಮೆಯಿಂದ ಐದನೆಯ ಪಕ್ಷದಲ್ಲಿ ಎಂದರೆ ಭಾದ್ರಪದ ಮಾಸದ ಕೃಷ್ಣಪಕ್ಷದಲ್ಲಿ ಪಾಡ್ಯದಿಂದ ಮೊದಲುಗೊಂಡು ಆಶ್ವಯುಜ ಶುಕ್ಲ ಪಾಡ್ಯದವರೆಗೂ ಶ್ರಾದ್ಧಪಿಂಡವನ್ನು ಭುಜಿಸುವ ಪಿತೃಗಳು ಪ್ರೇತಪುರಿಯನ್ನೂ, ಸ್ವರ್ಗವನ್ನೂ ಪಾತಾಳವನ್ನೂ ಬಿಟ್ಟು ಇಲ್ಲಿಗೆ ಬರುವರು. ಸೂರ್ಯನು ಕನ್ಯಾರಾಶಿಗೆ ಹೋಗಲಾಗಿ ಯಾರು ಧ್ರುವತೀರ್ಥದಲ್ಲಿ ಪಿತೃಗಳಿಗೆ ಶ್ರಾದ್ಧವನ್ನು ಅಥವಾ ತರ್ಪಣವನ್ನು ಮಾಡುವನೋ ಅಂತಹ ತಮ್ಮ ಪುತ್ರನನ್ನಾಗಲಿ, ತಮ್ಮನನ್ನಾಗಲಿ ಹದಿನಾರು ತಲೆಯೊಳಗಿರುವ ಗೋತ್ರಜನನ್ನಾಗಲಿ ಬಯಸಿ, ನಿರೀಕ್ಷಿಸುತ್ತ ಧ್ರುವತೀರ್ಥಕ್ಕೆ ತ್ವರೆಯಿಂದ ಬಂದು ನೆಲೆಸಿರುವರು. ನಾವು ಈಗ ಸಂತೃಪ್ತರಾಗಿದ್ದೇವೆ ಪರಮ ಗತಿಯನ್ನು ಪಡೆಯುತ್ತೇವೆ. ಇಲ್ಲಿ ಧ್ರುವತೀರ್ಥದ ಈ ಪ್ರಭಾವವನ್ನು ನಾನು ಹೇಳಿದ್ದೇನೆ. ಮಹಾಮುನಿಯೇ, ನಮಗೆ ನಾಶಪಡಿಸಲೂ ದಾಟಲೂ ಬಹು ಕಷ್ಟವಾಗಿದ್ದ ಪಾಪಸಾಗರವನ್ನು ನಿನ್ನ ಪ್ರಸಾದದಿಂದ ನಾವು ದಾಟಿದೆವು. ಎಲ್ಲವನ್ನೂ ನೀವೆಲ್ಲರೂ ನೋಡಿರುವಿರಿ '' ಎಂದನು. ಹೀಗೆ ರಾಜನಿಗೂ, ಋಷಿಗೂ, ಜನರಿಗೂ, ರಾಣಿಗೂ, ದಾಸಿಗೂ, ತನ್ನ ಮಗಳಿಗೂ ಕೇಳುವಂತೆ ಮಾತನಾಡಿ ತಿಳಿಸಿ, 'ನಿಮಗೆ ಮಂಗಲವಾಗಲಿ ' ಎಂದನು. ಬಳಿಕ ಅವರೆಲ್ಲರೂ ಉತ್ತಮವಾದ ವಿಮಾನಗಳನ್ನೇರಿ ದೇವತೆಗಳಿಂದ ಸುತ್ತಲ್ಪಟ್ಟವರಾಗಿ ಸ್ವರ್ಗಕ್ಕೆ ಹೊರಟು ಹೋದರು.

**ಶ್ರೀ ವರಾಹ :-** ಪತ್ನೀ, ಬಂಧು ಪರಿವಾರದೊಡಗೂಡಿದ ಆ ನೃಪೋತ್ತಮನು ಆ ತೀರ್ಥದ ಮಹಿಮೆಯನ್ನು ನೋಡಿ, ಮುನಿವರ್ಯನಿಗೆ ಪ್ರಣಾಮ ಮಾಡಿ, ನಿತ್ಯನಾದ ವಿಷ್ಣುವನ್ನು ಸ್ಮರಿಸುತ್ತ ಮನೋಹರವಾದ ಮಧುರಾಪುರವನ್ನು ಸೇರಿದನು. ಮಂಗಳೇ, ಸ್ಮರಿಸುವುದರಿಂದಲೇ, ಹಿಂದಿನ ಜನ್ಮದಲ್ಲಿ ಮಾಡಿದ ಪಾಪಗಳನ್ನು ನಾಶಮಾಡುವ ಮಧುರೆಯಈಮಹಿಮೆಯನ್ನು ನಿನಗೆಹೇಳಿದುದಾಯಿತು. ಆಸಕ್ತಿಯುಳ್ಳವರಾಗಿಇದನ್ನು ಬ್ರಾಹ್ಮಣರ ಸನ್ನಿಧಿಯಲ್ಲಿ ಯಾರು ಹೇಳುವರೋ ಅವರು ಗಯೆಯ ಶಿರದಲ್ಲಿ ಹೋಗಿ ಪಿತೃಗಳನ್ನೆಲ್ಲ ತೃಪ್ತಿಪಡಿಸಿದ ಪುಣ್ಯವನ್ನು ಪಡೆಯುವರು. ಮಹಾಭಾಗೇ, ನೀನು ಇದನ್ನು ನಿಯಮವಿಲ್ಲದವನಿಗೂ, ಶುಶ್ರೂಷೆ ಮಾಡದಿರುವವನಿಗೂ, ಹರಿಯನ್ನು ಪೂಜಿಸದಿರುವವನಿಗೂ ಹೇಳಬಾರದು. ಪೂಜ್ಯೇ, ತೀರ್ಥಗಳಲ್ಲಿ ಪರಮತೀರ್ಥವೂ, ಧರ್ಮಗಳಲ್ಲಿ ಉತ್ತಮ ಧರ್ಮವೂ ಜ್ಞಾನಗಳಲ್ಲಿ ಪರಮಜ್ಞಾನವೂ, ಲಾಭಗಳಲ್ಲಿ ಉತ್ತಮ ಲಾಭವೂ ಆದಇದನ್ನು ಪುಣ್ಯಶಾಲಿಗಳಾದ ಭಗವದ್ಭಕ್ತರಿಗೆಯಾವಾಗಲೂಹೇಳಬೇಕು.

**ಸೂತಮುನಿ :-** ವರಾಹ ಪ್ರಭುವಿನ ಈ ಮಾತನ್ನು ಕೇಳಿ, ಆಶ್ಚರ್ಯಗೊಂಡ ಭೂದೇವಿಯು ಸಂತೋಷದಿಂದ ಆತನಲ್ಲಿ ದೇವ ಪ್ರತಿಮೆಗಳ ಸ್ಥಾಪನೆಯ ವಿಚಾರವನ್ನು ಪ್ರಶ್ನಿಸಿದಳು.

*ವರಾಹ ಪುರಾಣದಲ್ಲಿ ನೂರ ಇಪ್ಪತ್ತಾರನೇ ಅಧ್ಯಾಯ ಮುಗಿದಿದೆ*

**ಭೂದೇವಿ :-** ದೇವದೇವ, ಪರಮಾತ್ಮನಾದ ನೀನು ಕಲ್ಲು, ಕಟ್ಟಿಗೆ, ಕಂಚು, ಬೆಳ್ಳಿ, ಬಂಗಾರ ಮಣ್ಣು ತಾಮ್ರ ಮುಂತಾದವುಗಳಲ್ಲಿ ಮೂರ್ತಿ ರೂಪದಿಂದ ಹೇಗೆ ಪ್ರತಿಷ್ಠಿತನಾಗಿ ನಿಂತುಕೊಳ್ಳುವಿ ? ಇದರಂತೆ ಗೋಡೆ, ಆನೆಯ ಕೋರೆದಾಡೆ, ನೆಲಸ್ಥಲಗಳಲ್ಲಿಯೂ ನೀನು ಹೇಗೆ ಸನ್ನಿಹಿತನಾಗುವಿ ? ಇದನ್ನೆಲ್ಲ ತಿಳಿಸು. ನಿನ್ನ ಮೂರ್ತಿ ಪ್ರತಿಷ್ಠಾಪನೆಯ ವಿಧಿವಿಧಾನವನ್ನು ಅರಿಯಲು ಉತ್ಸುಕಳಾಗಿದ್ದೇನೆ. '' ಭೂದೇವಿಯ ಈ ನುಡಿಯನ್ನು ಆಲಿಸಿ ಶ್ರೀ ವರಾಹಸ್ವಾಮಿಯ ಇಂತು ಮಾರ್ನುಡಿದನು.

**ವರಾಹ :-** ಭೂದೇವಿ, ನನ್ನ ಮೂರ್ತಿಯನ್ನು ಮಾಡುವದಾದರೆ ಶಿಲ್ಪ ಶಾಸ್ತ್ರೋಕ್ತವಾಗಿಯೇ ಮಾಡಬೇಕು. ಅನಂತರ ವಿಧಿಪೂರ್ವಕವಾಗಿ ಅದನ್ನು ಸಂಸ್ಕಾರಗೊಳಿಸಿ ಪ್ರತಿಷ್ಠಿಸಿ ಪೂಜಿಸಬೇಕು. ಮರದ ಕಟ್ಟಿಗೆಯಿಂದ ನನ್ನ ಮೂರ್ತಿಯನ್ನು ಮಾಡಬೇಕೆಂದಿದ್ದರೆ ಹಿಪ್ಪೆಯ ಮರ(ಮಧುಕ)ದಿಂದ ಮಾಡಿ ಪ್ರತಿಷ್ಠಾವಿಧಿಯಿಂದ ಪೂಜಿಸಬೇಕು. ಕುಂಕುಮ, ಪಚ್ಚಕರ್ಪೂರ, ಚಂದನ, ಕೇಶರಗಳಿಂದ ಕೂಡಿದ ಗಂಧವನ್ನು ಆ ಮೂರ್ತಿಯ ಮೈಗೆ ತೊಡೆದು ಸ್ವಸ್ತಿಕ, ಶ್ರೀ ವತ್ಸ, ಕೌಸ್ತುಭ ಮುಂತಾದ ಮಂಗಳ ಚಿನ್ಹಗಳನ್ನು ಸರಿಯಾಗಿ ಮಾಡಿ ಪಾಯಸಾದಿ ಪದಾರ್ಥಗಳನ್ನು ನಿವೇದಿಸಬೇಕು. ಪ್ರಾಣಾಯಾಮ ಮಾಡಿ ದೇವರೆದರು ಕೈಮುಗಿದು

**ಯೋಽಸೌ ಭವಾಂಸ್ತಿಷ್ಠತೇ ಸರ್ವಯೋಗ ಪ್ರಧಾನತಃ ।**
**ಸಸಂಭ್ರಮಂ ಲೋಕೋ ಸುಪ್ರತೀತಃ ತಿಷ್ಠ ಕಾಷ್ಠೇ ಸ ತ್ವಂ ಭುವಿ ॥**

ಎಂದು ಮಂತ್ರ ಹೇಳಿ ಮರದ ಮೂರ್ತಿಯಲ್ಲಿ ದೇವರನ್ನು ಪ್ರತಿಷ್ಠೆ ಮಾಡಬೇಕು. ಮತ್ತು ಭಗವದ್ಭಕ್ತರೊಡನೆ ದೇವರಿಗೆ ಪ್ರದಕ್ಷಿಣೆ ಮಾಡಿ, ದೀಪ ಹಚ್ಚಿ ಬೆಳಗಿ ದೇವರ ಎದುರು ನಿಂತು ''ಓಂನಮೋನಾರಾಯಣಾಯ'' ಎಂಬ ಮಂತ್ರದಿಂದ ವಿಧ್ಯುಕ್ತ ಸಂಸ್ಕಾರ ಮತ್ತು ವಿಧಿವಿಧಾನವನ್ನೂ ಮಾಡಬೇಕು. ಅನಂತರ ಭಕ್ತ ಜನರಿಗೆಲ್ಲ ಭೋಜನ ಮಾಡಿಸಬೇಕು.

## ಕಲ್ಲಿನ ಮೂರ್ತಿಯಲ್ಲಿ ದೇವತಾ ಸ್ಥಾಪನೆ

ವರಾಹ :- ಇದರಂತೆ ಕಲ್ಲಿನ ಮೂರ್ತಿಯನ್ನು ಮಾಡುವಾಗಲೂ ಯೋಗ್ಯವಾದ ಶಿಲೆಯನ್ನು ಪರೀಕ್ಷಿಸಿ ತರಬೇಕು. ಕುಶಲವಾದ ಶಿಲ್ಪಿಯನ್ನು ಮೂರ್ತಿ ಮಾಡಲಿಕ್ಕೆ ನಿಯಮಿಸಬೇಕು. ಮೊದಲುಮಿದುವಾದಕಲ್ಲಿನಲ್ಲಿ ಬಿಳಿಯಗೆರೆಬರೆದುಅಕ್ಷತಾದಿಗಳಿಂದ ಪೂಜಿಸಿಪ್ರದಕ್ಷಿಣೆಹಾಕಿನಮಸ್ಕರಿಸಬೇಕು. ದೀಪಹಚ್ಚಿ ಮೊಸರು ಅನ್ನ ನೈವೇದ್ಯ ತೋರಿಸಿ ''ಓಂನಮೋನಾರಾಯಣಾಯ'' ಎಂಬಮಂತ್ರದಿಂದಪ್ರಾರ್ಥನೆಮಾಡಿ

**''ಯೋಽ ಸೌ ಭವಾನ್ ಸರ್ವಜನ ಪ್ರವೀರಃ**
**ಸೋಮಾಗ್ನಿ-ತೇಜಾಃ ಸುಮತಿ-ಪ್ರಧಾನಃ ।**
**ಏತೇನ ಮಂತ್ರೇಣ ತು ವಾಸುದೇವ**
**ಪ್ರತಿಷ್ಠಿತೋ ವರ್ಧಯ ಕೀರ್ತಿರಾಶಿಂ ॥**

ಎಂಬ ಮಂತ್ರದಿಂದ ಪೂರ್ವಾಭಿಮುಖವಾಗಿ ದೇವರ ಪ್ರತಿಷ್ಠೆಗೊಳಿಸಬೇಕು. ಮತ್ತು ದೇವರಿಗೆ ಕೈ ಮುಗಿದು

"ಪ್ರವರ ಆಯತ ವರಾಹ ಜಯಜಯ ವರ್ಧಸ್ವ "

ಎಂದು ಜಯ ಘೋಷವನ್ನು ಉಗ್ಗಡಿಸಬೇಕು. ಹೀಗೆ ಪೂರ್ವಾಭಾದ್ರಪದ ನಕ್ಷತ್ರದಲ್ಲಿ ನನ್ನ ಪ್ರತಿಷ್ಠೆ ಮಾಡಿ ಗಂಧ ಧೂಪಾದಿಗಳಿಂದ ಸಂಸ್ಕರಿಸಬೇಕು. ದೇವರ ಪಾದ ಮೂಲದಲ್ಲಿ ನಾಲ್ಕು ಕಲಶಗಳನ್ನು ಸ್ಥಾಪಿಸಿ ಸುಜ್ಞರಾದ ಬ್ರಾಹ್ಮಣರಿಂದ ವೇದಪಾರಾಯಣ ಮಾಡಿಸಬೇಕು. ಸಮಿಧೆ, ಜೇನುತುಪ್ಪ, ಎಳ್ಳುಗಳಿಂದ ನೂರೆಂಟು ಆಹುತಿಗಳನ್ನು ಅರ್ಪಿಸಿ ಹೋಮಮಾಡಬೇಕು. ಮರುದಿನ ಬೆಳಗಾದ ಬಳಿಕ ಪಂಚಗವ್ಯ ಪ್ರಾಶನ ಮಾಡಿ ಮಂಗಳವಾದ್ಯ ವೈಭವದೊಂದಿಗೆ ಆ ಮೂರ್ತಿಯನ್ನು ದೇವಾಲಯಕ್ಕೆ ಕರೆತಂದು ಗರ್ಭಗೃಹದ ಬಾಗಿಲೆದುರು ಸ್ಥಾಪಿಸಬೇಕು. ದೇವರನ್ನು ಗರ್ಭಗೃಹದಲ್ಲಿ ಪ್ರವೇಶಮಾಡಿಸುವಾಗ

"ಯೋऽಸೌ ಭವಾನ್ ಲಕ್ಷಣ ಲಕ್ಷಿತಶ್ಚ ಲಕ್ಷ್ಮ್ಯಾ ಚ ಯುಕ್ತ:
ಸತತಂ ಪುರಾಣಃ ಅತ್ರ ಪ್ರಾಸಾದೇ ಸುಸಮಿದ್ಧತೇಜಾಃ ಪ್ರವೇಶ
ಮಾ ಯಾಹಿ ನಮೋನಮಸ್ತೇ ॥

ಎಂದು ಮಂತ್ರ ಹೇಳುತ್ತ ಕರೆತರಬೇಕು. ಒಳಗೆ ಕರೆತಂದು ಮೂರ್ತಿಯನ್ನು ಕೂಡಿಸಿ ಪ್ರತಿಷ್ಠಿಸಿದ ಬಳಿಕ ಕುಂಕುಮ ಕೇಸರ ಚಂದನ ಕೃಷ್ಣಾಗರು ಮುಂತಾದ ಚೂರ್ಣ ಮಿಶ್ರಿತವಾದ ಸುಗಂಧಿ ಜಲದಿಂದ ದೇವರಿಗೆ ಅಭಿಷೇಕ ಮಾಡಬೇಕು. ನಂತರ ಗಂಧಪುಷ್ಪ ಮಾಲೆಗಳನ್ನು ಸಮರ್ಪಿಸಿ ಶುಭ್ರವಾದ ವಸ್ತ್ರವನ್ನು ದೇವರಿಗೆ ಉಡಿಸಬೇಕು. ಅನಂತರ ಧೂಪದೀಪ ನೈವೇದ್ಯಗಳನ್ನು ವಿಧಿಪೂರ್ವಕವಾಗಿ ಸಮರ್ಪಿಸಿ ಶಾಂತಿ ಹೋಮ ಮಾಡಬೇಕು. ಅನಂತರ "ಓಂ ತ್ವಂ ವೈ ಸುಶಾಂತಿಂ ಕುರು ಲೋಕನಾಥ"

ರಾಜ್ಞಃ ಸರಾಷ್ಟ್ರಸ್ಯ ಚ ಬ್ರಾಹ್ಮಣಾನಾಂ ।
ಬಾಲೇಷು ವೃದ್ಧೇಷು ಗವಾಂ ಗಣೇಷು
ಕನ್ಯಾಸು ಶಾಂತಿಂ ಚ ಪತಿವ್ರತಾಸು
ರೋಗಾ ವಿನಶ್ಯಂತು ಚ ಸರ್ವತಶ್ಚ
ಕೃಷೀವಲಾನಾಂ ಚ ಕೃಷಿಃ ಸದಾ ಸ್ಯಾತ್
ಸುಭಿಕ್ಷಯುಕ್ತಾಶ್ಚ ಸದಾ ಹಿ ಲೋಕಾಃ
ಕಾಲೇ ಸುವೃಷ್ಟಿ ರ್ಭವಿತಾ ಚ ಶಾಂತಿಃ ॥

ಜಗದೊಡೆಯ, ರಾಜನಿಗೂ ಇಡೀ ರಾಷ್ಟ್ರಕ್ಕೂ ಮತ್ತು ಬ್ರಾಹ್ಮಣರಿಗೂ ಶಾಂತಿ ಸಂತಸಗಳನ್ನು ನೀಡು. ಬಾಲಕರಿಗೂ, ಮುದುಕರಿಗೂ, ಗೋಗಳಿಗೂ, ಕನ್ಯೆಯರಿಗೂ ಪತಿವ್ರತಾ ಸ್ತ್ರೀಯರಿಗೂ ಕಲ್ಯಾಣವಾಗಲಿ. ದೇಶದಲ್ಲೆಲ್ಲ ಕಡೆಗೂ ರೋಗಾದಿ ಉಪದ್ರವಗಳು ಶಾಂತವಾಗಲಿ. ಒಕ್ಕಲು ಮಕ್ಕಳ ಬೇಸಾಯವು ಚೆನ್ನಾಗಿ ಬೆಳೆಯಲಿ. ಜಗತ್ತಿನಲ್ಲಿ ಎಲ್ಲಕಡೆಗೂ ಸುಭಿಕ್ಷವಾಗಲಿ. ಸಕಾಲದಲ್ಲಿ ಮಳೆಯಾಗಲಿ, ಸಮೃದ್ಧವಾಗಿ ಬೆಳೆ ಬರಲಿ. ಲೋಕಕ್ಕೆಲ್ಲ ಶಾಂತಿ ದೊರಕಲಿ. ಹೀಗೆ ದೇವರನ್ನು ಪ್ರತಿಷ್ಠೆಗೊಳಿಸಿ ನಂತರ ಬ್ರಾಹ್ಮಣರ ಭೋಜನ ಮಾಡಿಸಬೇಕು. ಮತ್ತು ದೀನದರಿದ್ರರಿಗೂ ಯೋಗ್ಯತಾನುಗುಣವಾಗಿ ಊಟಕ್ಕೆ ಹಾಕಬೇಕು.

# ಮಣ್ಣಿನ ಮೂರ್ತಿಯಲ್ಲಿ ದೇವತಾಪೂಜೆ

**ವರಾಹ :-** ಭೂದೇವಿ, ಮಣ್ಣಿನಿಂದ ಮಾಡಿದ ಮೂರ್ತಿಗಳಲ್ಲಿಯೂ ನಾನು ನೆಲೆಸಿರುತ್ತೇನೆ. ಜಿಗಟಾದ ಮಣ್ಣಿನಿಂದ ಸೀಳದಂತೆ ಗಟ್ಟಿಯಾಗಿ ನನ್ನ ಮೂರ್ತಿಯನ್ನು ಮಾಡಬೇಕು. ಅದರಲ್ಲಿ ಮೊದಲು ನನ್ನ ಆಕಾರವು ಸ್ಫುಟವಾಗಿ ಎದ್ದು ತೋರುವಂತೆ ಸುಂದರವಾಗಿ ಕೊರೆಯಬೇಕು. ಶಿಲಾಕಾಷ್ಠಾದಿ ಮೂರ್ತಿಗಳನ್ನು ಮಾಡಲು ಸೌಕರ್ಯ ಅವಕಾಶಗಳಿಲ್ಲದಾಗ ಮಣ್ಣಿನ ಮೂರ್ತಿ ಮಾಡಿ ಪೂಜಿಸಬೇಕು. ಈ ಮಣ್ಣಿನ ಮೂರ್ತಿಯನ್ನು ಮಾಡಿ ಶ್ರವಣಾ ನಕ್ಷತ್ರದಲ್ಲಿ ಅದಕ್ಕೆ ಗಂಧ ಧೂಪಾದಿಗಳಿಂದ ಸಂಸ್ಕಾರಮಾಡಿ ಹಿಂದೆ ಹೇಳಿದಂತೆ ಮಂತ್ರಪೂರ್ವಕವಾಗಿ ಪ್ರತಿಷ್ಠೆಗೊಳಿಸಬೇಕು ಪ್ರತಿಷ್ಠಾಕಾಲದಲ್ಲಿ

**"ಯೋಽಸೌ ಭವಾನ್ ಸರ್ವಜಗತ್ ಪ್ರಕರ್ತಾ**
**ಯಸ್ಯ ಪ್ರಸಾದೇನ ಭವಂತಿ ಲೋಕಾಃ**
**ಸ ತ್ವಂ ತಿಷ್ಠ ಚಾರ್ಚಾಸು ಚ ಮೃಣ್ಮಯೀಷು"**

ಎಂಬ ಮಂತ್ರವನ್ನು ಹೇಳಬೇಕು. ಅನಂತರ ಕಲಶಪೂಜೆ ಮಾಡಿ ದೇವರಿಗೆ ಅಭಿಷೇಕ ಮಾಡಿ ಗಂಧಮಾಲ್ಯಾದಿಗಳನ್ನೂ, ವಸ್ತ್ರಾಭರಣಗಳನ್ನೂ ಸಮರ್ಪಿಸಿ ಧೂಪ ದೀಪ ನೈವೇದ್ಯಾದಿ ಸಮರ್ಪಣ ಮಾಡಬೇಕು. ಆ ಬಳಿಕ

**"ಶಾಂತಿರ್ಭವತು ದೇವಾನಾಂ ಬ್ರಹ್ಮ-ಕ್ಷತ್ರ-ವಿಶಾಂ ತಥಾ**
**ಶಾಂತಿರ್ಭವತು ವೃದ್ಧಾನಾಂ ಬಾಲಾನಾಂ ಶಾಂತಿರುತ್ತಮಾ**
**ದೇವೋ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಪೂರಿತಾ ॥**

"ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾದಿ ಸರ್ವ ವರ್ಣದವರಿಗೂ ಶಾಂತಿಯಾಗಲಿ. ಸಕಾಲಕ್ಕೆ ಮಳೆ ಬರಲಿ. ಸಮೃದ್ಧಿವಾಗಿ ಬೆಳೆ ಬರಲಿ" ಎಂಬ ಮಂತ್ರದಿಂದ ಶಾಂತಿ ಹೋಮ ಮಾಡಬೇಕು. ಅನಂತರ ದೇವಾಲಯದಲ್ಲಿಯೇ ಗುರುಪೂಜೆ ಮಾಡಿ ಬ್ರಾಹ್ಮಣರ ಭೋಜನ ಮಾಡಿಸಬೇಕು. ಅನಂತರ ಬಂಧುಬಾಂಧವರಿಗೂ ದೀನದರಿದ್ರರಿಗೂ ಊಟ ಹಾಕಿಸಿ ತಾನೂ ದೇವರ ಪ್ರಸಾದವನ್ನು ಸ್ವೀಕರಿಸಬೇಕು. ಋತ್ವಿಜರಿಗೆ ಯೋಗ್ಯ ದಕ್ಷಿಣೆಯನ್ನು ಕೊಡಬೇಕು.

ಇದರಂತೆ ತಾಮ್ರದ ಮೂರ್ತಿಯನ್ನು ಪ್ರತಿಷ್ಠೆಗೊಳಿಸುವಾಗ-

**"ಓಂ ಯೋಽಸೌ ಭವಾನ್ ಸರ್ವವರಃ ಪ್ರಭುಶ್ಚ ।**
**ಮಾಯಾಬಲೋ ಯೋಗ ಬಲಪ್ರಧಾನಃ ॥**

**ಅಗಚ್ಛ ಶೀಘ್ರಂ ಚ ಮಮ ಪ್ರಿಯಾಯ**
**ಸಂತಿಷ್ಠ ತಾಮ್ರೇಷ್ವಪಿ ಲೋಕನಾಥ ॥**

ಎಂಬ ಮಂತ್ರವನ್ನೂ ಹೇಳಬೇಕು.

ಕಂಚಿನ ಮೂರ್ತಿಯ ಪ್ರತಿಷ್ಠೆಯ ಕಾಲದಲ್ಲಿ

**"ಆದಿರ್ಭವಾನ್ ಬ್ರಹ್ಮಯುಗಾಂತಕಲ್ಪ ।**
**ಸರ್ವೇಷು ಕಾಲೇಷ್ವಪಿ ಕಲ್ಪಭೂತಃ ॥**

**ಏಕೋ ಭವಾನ್ನಾಸ್ತಿ ಕಶ್ಚಿದ್ ದ್ವಿತೀಯಃ।**
**ಉಪಾಗತಸ್ತಿಷ್ಠ ಚ ಲೋಕನಾಥ ॥**

ಎಂಬ ಮಂತ್ರವನ್ನು ಹೇಳಬೇಕು.

ಇದರಂತೆ ಬೆಳ್ಳಿ ಬಂಗಾರದ ದೇವರ ಮೂರ್ತಿಯನ್ನು ಪ್ರತಿಷ್ಠಾಪಿಸುವಾಗ

**"ವೇದೈಕವೇದ್ಯೋ ವೇದವಿದ್ಭಿಶ್ಚ ಪೂಜ್ಯಃ।**
**ಯಜ್ಞಾತ್ಮಕೋ ಯಜ್ಞ-ಫಲ-ಪ್ರದಾತಾ ॥**
**ಯಜ್ಞಾರ್ಥಂ ತ್ವಾಮಾಹ್ವಯೇ ದೇವದೇವ**
**ಮಾರ್ತಾವಸ್ಮಾಂ ತಿಷ್ಠ ಸುಲೋಕನಾಥ**

ಎಂದು ಮಂತ್ರ ಹೇಳಬೇಕು. ಕಲ್ಲು ಕಟ್ಟಿಗೆ ಕಂಚು ತಾಮ್ರ ಬೆಳ್ಳಿಯ ಮೂರ್ತಿಗಳಿಗಿಂತ ಬಂಗಾರದ ಮೂರ್ತಿ ಮಾಡಿಸಿ ಪೂಜಿಸಿದರೆ ಹೆಚ್ಚಿನ ಪುಣ್ಯವುಂಟು.

**ಭೂದೇವಿ** :- ದೇವ, ನೀನು ಹೇಳುವ ಈ ಎಲ್ಲ ಕಲ್ಲು ಮಣ್ಣು ಕಟ್ಟಿಗೆ ಧಾತು ಮಯವಾದ ಪ್ರತಿಮೆಗಳಲ್ಲಿ ವಿಧಿಪೂರ್ವಕವಾಗಿ ಪ್ರತಿಷ್ಠೆ ಮತ್ತು ಆವಾಹನಾದಿಗಳನ್ನು ಮಾಡಿದಾಗ ಮಾತ್ರ ನೀನು ಅವುಗಳಲ್ಲಿ ಸನ್ನಿಹಿತನಾಗುವಿ. ಆದರೆ ಸಾಲಿಗ್ರಾಮ ಶಿಲೆಯಲ್ಲಿ ಯಾವ ಪ್ರತಿಷ್ಠೆ ಆವಾಹನಾದಿಗಳಿಲ್ಲದೇ ಯಾವಾಗಲೂ ವಾಸ ಮಾಡಿರುವಿಯಂತೆ. ಆ ಸಾಲಿಗ್ರಾಮದ ಪೂಜಾವಿಧಿಯನ್ನು ತಿಳಿಸು. ಆ ಸಾಲಿಗ್ರಾಮಗಳು ಪೂಜೆಗೆ ಎಷ್ಟು ಇರಬೇಕು ? ಇದರಂತೆ ಲಿಂಗಪೂಜೆಯ ವಿಧಿ ಏನು ? ತಿಳಿಸು."

**ವರಾಹ** :- ಭೂದೇವಿ, ಮನೆಯಲ್ಲಿ ಎರಡು ಶಿವಲಿಂಗಗಳನ್ನು ಪೂಜಿಸಬಾರದು. ಮೂರು ಸಾಲಿಗ್ರಾಮಗಳನ್ನು ಪೂಜಿಸಬಾರದು. ಎರಡು ದ್ವಾರಕೆಯ ಚಕ್ರಾಂಕಿತಗಳನ್ನೂ, ಎರಡು ಸೂರ್ಯ ಪ್ರತಿಮೆಗಳನ್ನೂ, ಮೂರು ಗಣಪತಿಯ ಪ್ರತೀಕಗಳನ್ನೂ ಮೂರುಶಕ್ತಿಯ ಮೂರ್ತಿಗಳನ್ನೂ ಪೂಜಿಸಬಾರದು. ಸಾಲಗ್ರಾಮಗಳನ್ನು ಯಾವಾಗಲೂ ಸಮಸಂಖ್ಯೆಯಲ್ಲಿಯೇ ಪೂಜಿಸಬೇಕು. ೩-೫-೭-೧೧ ಹೀಗೆ ಬೆಸ ಸಂಖ್ಯೆಯಲ್ಲಿ ಸಾಲಿಗ್ರಾಮ ಪೂಜೆ ಸಲ್ಲದು. ಸಮದಲ್ಲಿಯೂ ಎರಡು ಸಾಲಿಗ್ರಾಮ ಪೂಜೆಯು ನಿಷಿದ್ಧ. ಬೆಸ ಸಂಖ್ಯೆಯಲ್ಲಿ ಒಂದು ಸಾಲಿಗ್ರಾಮ ಪೂಜೆ ಅನಿಷಿದ್ಧ. ದೇವರ ಮೂರ್ತಿಗಳೂ ಸಮಸಂಖ್ಯೆಯಲ್ಲಿಯೇ ಪೂಜಾರ್ಹವಾಗಿವೆ. ವಿಷಮ ಸಂಖ್ಯೆಯಲ್ಲಲ್ಲ. ಒಡೆದ ಅಥವಾ ಭಿನ್ನವಾದ ಮತ್ತು ಬೆಂಕಿಯಲ್ಲಿ ಸುಟ್ಟುಹೋದ ಪ್ರತಿಮೆಗಳನ್ನು ಪೂಜಿಸಬಾರದು.

**ಗೃಹೇಗ್ನಿದಗ್ಧಾ ಭಗ್ನಾ ವಾ ನೈವ ಪೂಜ್ಯಾ ವಸುಂಧರೇ ।**
**ಆಸಾಂ ತು ಪೂಜನಾದ್ ಗೇಹೇ ಉದ್ವೇಗಂ ಪ್ರಾಪ್ನುಯಾದ್ ಗೃಹೀ ॥**
**ಸಾಲಿಗ್ರಾಮ ಯುಗಂ ಪೂಜ್ಯಂ ಯುಗೇಷು ದ್ವಿತಯಂ ನ ಹಿ**
**ವಿಷಮಾ ನೈವ ಪೂಜ್ಯಾಃ ಸ್ಯುಷ ವಿ ಮೇ ಏಕಏವಹಿ**
**ಸಾಲಿಗ್ರಾಮ ಶಿಲಾ ಭಗ್ನಾ ಪೂಜನೀಯಾ ಸಚಕ್ರಕಾ ।**
**ಖಂಡಿತಾ ಸ್ಫುಟಿತಾ ವಾಪಿ ಶಾಲಗ್ರಾಮಶಿಲಾ ಶುಭಾ ॥**

ಸಾಲಿಗ್ರಾಮವು ಒಡೆದರೂ ಚಕ್ರವು ಭಿನ್ನವಾಗಿರದಿದ್ದರೆ ಅದನ್ನು ಪೂಜೆ ಮಾಡಲು ಅಡ್ಡಿ ಇಲ್ಲ. ಒಡಕವಿರಲಿ, ತುಣುಕು ಇರಲಿ ಚಕ್ರವಿದ್ದ ಸಾಲಿಗ್ರಾಮವು ಪೂಜ್ಯವಾಗಿದೆ. ಹನ್ನೆರಡು ಸಾಲಿಗ್ರಾಮಗಳಿಗೆ ಒಂದು ಕ್ಷೇತ್ರ ಎಂದು ಹೆಸರು. ಒಂದು ಕ್ಷೇತ್ರ

ಸಾಲಿಗ್ರಾಮಗಳನ್ನು ಪೂಜಿಸಿದರೆ ಹನ್ನೆರಡು ಕಲ್ಪಕಾಲ ಹನ್ನೆರಡು ಕೋಟಿಲಿಂಗ ಪೂಜೆ ಮಾಡಿದ ಪುಣ್ಯ ಫಲವು ಪ್ರಾಪ್ತವಾಗುತ್ತದೆ. ಕಲ್ಲು ಮಣ್ಣು ಅಥವಾ ಧಾತುಮಯವಾದ ದೇವತಾ ಪ್ರತಿಮೆಗಳನ್ನೂ, ಚಿನ್ನ ಬೆಳ್ಳಿ ರತ್ನದ ಲಿಂಗಗಳ ಪೂಜೆಯನ್ನೂ ಯಾರಾದರೂ ಯಾವ ಜಾತಿಯವರಾದರೂ ಮಾಡಬಹುದು. ಆದರೆ ಸಾಲಿಗ್ರಾಮಗಳನ್ನು ಮಾತ್ರ ಸ್ತ್ರೀಯರೂ, ಶೂದ್ರರೂ ಮುಟ್ಟಕೂಡದು

**"ಸಾಲಿಗ್ರಾಮೋ ನ ಸ್ಪ್ರಷ್ಟವ್ಯಃ ಹೀನ ವರ್ಣೈರ್ವಸುಂಧರೇ ।**
**ಮೋಹಾದ್ಯಃ ಸಂಸ್ಪೃಶೇತ್ ಶೂದ್ರೋ ಯೋಷಿದ್ವಾಪಿ ಕದಾಚನ**
**ಪಚ್ಯತೇ ನರಕೇ ಘೋರೇ ಯಾವದಾಭೂತ ಸಂಪ್ಲವಂ**

ಪಕ್ಕನೆ ಮಟ್ಟಿದರೆ ಕೊನೆಯಿಲ್ಲದ ನರಕದಲ್ಲಿ ಪ್ರಳಯಕಾಲದ ವರೆಗೆ ಕೊಳೆಯ ಬೇಕಾಗುವದು. ಸ್ತ್ರೀ ಶೂದ್ರಾದಿಗಳು ಭಕ್ತಿಯಿಂದ ದೂರಿಂದಲೇ ಬ್ರಾಹ್ಮಣರಿಂದ ಸಾಲಗ್ರಾಮ ಪೂಜೆಯನ್ನು ಮಾಡಿಸಬೇಕು. ಸಾಲಗ್ರಾಮ ದಾನ ಮಾಡಿದರೆ ಭೂದಾನ ಮಾಡಿದ ಫಲವುಂಟು.

**"ಅಭಕ್ಷ್ಯಂ ಶಿವನಿರ್ಮಾಲ್ಯಂ ಪತ್ರಂಪುಷ್ಪಂ ಜಲಂ ಫಲಂ ।**
**ಸಾಲಿಗ್ರಾಮ ಶಿಲಾ ಯೋಗಾತ್ ಪಾವನಂ ತದ್ಭವೇತ್ ಸದಾ ॥**

ಶಿವನಿಗೇರಿಸಿದ ಹೂವನ್ನು ಮುಡಿಯಬಾರದು, ಶಿವನಿಗರ್ಪಿಸಿದ ಹಣ್ಣನ್ನು ತಿನ್ನಬಾರದು, ಶಿವನಿಗೆ ಸ್ನಾನ ಮಾಡಿಸಿದ ನೀರನ್ನು ಪಾನ ಮಾಡಬಾರದು. ಆದರೆ ಅದಕ್ಕೆಲ್ಲ ಸಾಲಿಗ್ರಾಮದ ಸಂಯೋಗ, ಸ್ಪರ್ಶವಾದರೆ ಮಾತ್ರ ತಿನ್ನಲು, ಧರಿಸಲು ಅಡ್ಡಿ ಇಲ್ಲ. ಸಾಲಗ್ರಾಮ ಸ್ಪರ್ಶವಾದದ್ದೆಲ್ಲ ಪಾವನವೇ ಸರಿ. ಸಾಲಿಗ್ರಾಮವನ್ನು ಯಾರೂ ಎಂದೂ ಮಾರಬಾರದು, ಕೊಳ್ಳಬಾರದು.

## ಶ್ರಾದ್ಧಕಲ್ಪ

**ಭೂದೇವಿ :-** ವರಾಹದೇವನೇ, ನೀನು ಹೇಳಿದ ಹನ್ನೆರಡು ಸಾಲಿಗ್ರಾಮಗಳ ಪೂಜೆಯ ಫಲವನ್ನೂ ಹರಿಹರ ಶಿಲೆಗಳ ಮಹಿಮೆಯನ್ನೂ ನಾನು ಕೇಳಿ ಧನ್ಯಳಾದೆ. ಈಗ ಪರಮ ರಹಸ್ಯವಾದ ಪಿತೃಯಜ್ಞದ ಮಹಿಮೆಯನ್ನು ಕೇಳಬೇಕೆಂದಿದ್ದೇನೆ. ಸೋಮದತ್ತನೆಂಬ ರಾಜನು ಬೇಟೆಗೆ ಬಂದು ಮುಂದೇನು ಮಾಡಿದ ಎಂಬುದನ್ನು ತಿಳಿಸು. ಈ ಶ್ರಾದ್ಧದ ಗುಣವೇನು ? ವಿಧಿ ಏನು ? ಮೊದಲು ಇದನ್ನು ಯಾರು ಮಾಡಿದರು ? ಏತಕ್ಕಾಗಿ ಮಾಡಿದರು ? ಹೇಗೆ ಮಾಡಿದರು ? ಇದೆಲ್ಲವನ್ನೂ ನಿನ್ನ ಮುಖದಿಂದ ಕೇಳಿ ತಿಳಿದುಕೊಳ್ಳಬೇಕೆಂಬ ತವಕವು ನನ್ನಲ್ಲಿ ಉಂಟಾಗಿರುತ್ತದೆ. ಭೂದೇವಿಯ ಈ ಶ್ರಾದ್ಧಕಲ್ಪ ಜಿಜ್ಞಾಸೆಯನ್ನು ಕಂಡು ಕೇಳಿ ವರಾಹ ಸ್ವಾಮಿಯು ಆ ಪಿತೃಯಜ್ಞದ ಬೆಲೆ, ನೆಲೆ, ನಿಯಮ, ನಿಬಂಧನೆಗಳನ್ನು, ವಿಧಿವಿಧಾನಗಳನ್ನೂ ಬಿತ್ತರಿಸತೊಡಗಿದನು.-

**ವರಾಹ :-** ಭೂದೇವಿ, ಸೃಷ್ಟಿಯ ಆದಿಕಾಲದಲ್ಲಿ ನಾನು ಹರಿಹರ ಬ್ರಹ್ಮಾದಿ ರೂಪಗಳನ್ನು ಧರಿಸಿ ಶಿವಬ್ರಹ್ಮರಲ್ಲಿಯೂ ನಿಂತುಕೊಂಡು ಸೃಷ್ಟಿ ಸ್ಥಿತಿ ಸಂಹಾರಾದಿ ಕಾರ್ಯಗಳನ್ನು ಕೈಕೊಂಡೆನು. ನನ್ನ ನಾಭೀಕಮಲದಿಂದ ಉದಿಸಿದ ಚತುರ್ಮುಖ ಬ್ರಹ್ಮನಿಗೆ ದೇವಾಸುರ ನರರನ್ನು, ಸೃಷ್ಟಿಸಲು ಆಜ್ಞೆ ಇತ್ತೆ. ಅನಂತರ ನನ್ನ ಅಪ್ಪಣೆಯಿಂದ ಬ್ರಹ್ಮನು ಅವರೆಲ್ಲರನ್ನೂ ನಿರ್ಮಿಸಿದನು. ಅನೇಕ ಜನ ತಪೋಧನರಾದ ಋಷಿಗಳೂ ಆ ಬ್ರಹ್ಮನಿಂದ ಸೃಷ್ಟರಾದರು.

ನಿಮಿ ಎಂಬ ಮುನಿಯ ವಂಶದಲ್ಲಿ ಆತ್ರೇಯನೆಂಬ ಮಹರ್ಷಿಯು ಉತ್ಪನ್ನನಾದನು. ಅವನು ಹಗಲಿರುಳು ಘೋರವಾದ ತಪಸ್ಸನ್ನು ಮಾಡಿದನು. ಕೃಚ್ಛ್ರ, ಚಾಂದ್ರಾಯಣ ಮುಂತಾದ ಕಠಿಣ ವ್ರತಗಳನ್ನೆಲ್ಲ ಮಾಡಿದನು. ತಪಃ ಕೃಶನಾದ ಆ ಆತ್ರೇಯ ಮುನಿಯು ಹೀಗೆ ಸಾವಿರ ವರ್ಷ ಜಪತಪಗಳನ್ನು ಮಾಡಿ ಮರಣ ಹೊಂದಿದನು. ಹೀಗೆ ತನ್ನ ಮುಪ್ಪಿನ ಕಾಲದಲ್ಲಿ ತನ್ನ ಮುಂದಿನ ಮಗುವಾದ ಆತ್ರೇಯನು ಮರಣಿಸಿದುದನ್ನು ಕಂಡು ನಿಮಿಮುನಿಗೆ ಬಹಳ ದುಃಖವಾಯಿತು. ದುಃಖ ದಗ್ಧನಾಗಿ ಭ್ರಾಂತಿಷ್ಟನಂತಾದ ಅವನು ಮರಣ ಹೊಂದಿದ ತನ್ನ ಮಗನಿಗಾಗಿ ಪಿತೃಯಜ್ಞದಲ್ಲಿ ಮಾಡುವಂತೆ ವಿಧಿಪೂರ್ವಕವಾಗಿ ಶ್ರಾದ್ಧ ಮಾಡಿದನು. ಏಳು ಜನ ಬ್ರಾಹ್ಮಣರನ್ನು ಕರೆದು ದಕ್ಷಿಣಾಗ್ರವಾಗಿ ದರ್ಭೆಗಳನ್ನು ಹಾಸಿ ನಾಮಗೋತ್ರೋಚ್ಚಾರಣ ಪೂರ್ವಕವಾಗಿ ಪಿಂಡ ಪ್ರದಾನವನ್ನು ಮಾಡಿದನು. ಬ್ರಾಹ್ಮಣರಿಗೆ ಭೋಜನ ಮಾಡಿಸಿ ದಾನ ದಕ್ಷಿಣೆಗಳನ್ನು ಕೊಟ್ಟನು.

ಹೀಗೆ ಶ್ರಾದ್ಧ ವಿಧಿ ಎಲ್ಲವೂ ಮುಗಿದ ಬಳಿಕ ಆ ನಿಮಿ ಮುನಿಗೆ ಒಮ್ಮೆಲೆ ವಿವೇಕೋದಯವಾಯಿತು. '' ನಾನು ಇದೇನು ಮಾಡಿದೆ ! ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧ ಮಾಡುವಂತೆ ಮಗನನ್ನು ಉದ್ದೇಶಿಸಿಯೂ ಶ್ರಾದ್ಧ ಮಾಡಿಬಿಟ್ಟೆ. ಮಗನ ಮೇಲಿನ ಮೋಹದಿಂದ ಪಿತೃ ಕಾರ್ಯದಲ್ಲಿ ಬಳಸುವ ಮಂತ್ರ ತಂತ್ರ ವಿಧಿ ವಿಧಾನ ಕ್ರಮಗಳೆಲ್ಲ ಪುತ್ರನಿಗಾಗಿ ನನ್ನಿಂದ ಮಾಡಲ್ಪಟ್ಟವು. ಇದರಿಂದ ಪಿತೃಗಳೂ ದೇವತೆಗಳೂ ನನ್ನ ಮೇಲೆ ಕೊಪಗೊಂಡು ಎಲ್ಲಿ ಶಾಪಕೊಟ್ಟು ಬಿಡುವರೋ ಏನೋ ! '' ಹೀಗೆ ಆ ನಿಮಿ ಮುನಿಗೆ ಮಗನ ಮರಣದ ದುಃಖವು ಒಂದು ಕಡೆಯಾದರೆ ಪಿತೃ ಕಾರ್ಯವನ್ನು ಮೋಹದಿಂದ ಪುತ್ರಾರ್ಥವಾಗಿ ಮಾಡಿದ್ದರಿಂದ ಪಶ್ಚಾತ್ತಾಪವು ಇನ್ನೊಂದು ಕಡೆ. ಹೀಗೆ ಉಭಯ ವಿಧವಾದ ಚಿಂತಾ ಸಂತಾಪಗಳು ಇಬ್ಬದಿಯಿಂದಲೂ ಅವನ ಅಂತರಂಗವನ್ನು ದಹಿಸತೊಡಗಿದವು. ಇದೇ ವೇಳೆಯಲ್ಲಿ ನಾರದ ಮುನಿಯು ಆ ನಿಮಿ ಋಷಿಯ ಆಶ್ರಮಕ್ಕೆ ಬಂದನು. ಪುತ್ರ ಶೋಕದಿಂದ ವಿಲಪಿಸುವ ನಿಮಿ ಮುನಿಯನ್ನು ಸಂತೈಸಿದನು. ಆಗ ನಿಮಿ ಋಷಿಯು ನಾರದರನ್ನು ಕುರಿತು ಇಂತು ನುಡಿದನು.-

''ಮುನಿ ಪುಂಗವ, ನನಗೆ ಮಗನು ಮರಣಿಸಿದ ದುಃಖಕ್ಕಿಂತ ಆ ಮಗನ ಮೇಲಿನ ಮೋಹ ಮಮತೆಗಳಿಂದ ಅವನನ್ನು ಉದ್ದೇಶಿಸಿ ಪಿತೃಗಳಿಗೆ ಮಾಡಿದಂತೆ ಶ್ರಾದ್ಧ, ಪಿಂಡಪ್ರದಾನಾದಿಗಳನ್ನು ಮಾಡಿದೆನಲ್ಲಾ ? ಎಂದು ಬಹು ದುಃಖವಾಗಿದೆ. ಇದಕ್ಕೆ ಏನು ಪರಿಹಾರ ? ಯಾವ ಪ್ರಾಯಶ್ಚಿತ್ತ ? ತಾವೇ ಹೇಳಬೇಕು.''

ನಿಮಿಯ ಈ ಮಾತನ್ನು ಆಲಿಸಿ ದೇವಋಷಿಯಾದ ನಾರದರು '' ತಪೋಧನ, ಇದರಲ್ಲಿ ಅಧರ್ಮವೇನೂ ನನಗೆ ಕಾಣುವುದಿಲ್ಲ. ಇದು ಕರ್ತವ್ಯ ಕರ್ಮವೇ ಆಗಿರುತ್ತದೆ. ಈ ವಿಷಯದಲ್ಲಿ ನಿನಗೆ ಸಂಶಯವೇ ಬೇಡ '' ಎಂದು ಹೇಳಿದರು.

ನಾರದರ ಈ ನುಡಿಗಳನ್ನು ಕೇಳಿ ನಿಮಿಯ ನೊಂದ ಹೃದಯಕ್ಕೆ ತುಸು ನೆಮ್ಮದಿ ಎನಿಸಿತು. ಅವನು ಕೂಡಲೇ ಧೈರ್ಯ ಮಾಡಿ ತನ್ನ ತಂದೆಯಾದ ದತ್ತಾತ್ರೇಯನನ್ನು ನೆನಸಿದನು. ನಿಮಿಯವಂಶಕರ್ತಾರನಾದ ಆ ದತ್ತಾತ್ರೇಯನು ದುಃಖದಗ್ಧನಾದ ತನ್ನ ಮಗ ನಿಮಿಯನ್ನು ಸಮಾಧಾನ ಪಡಿಸುತ್ತ ಹೀಗೆ ಹೇಳಿದನು. ''ವತ್ಸಾ, ನೀನು ಮಾಡಿರುವ

ಶ್ರಾದ್ಧವು ಪಿತೃಯಜ್ಞ ಎಂದು ಕರೆಯಿಸುಕೊಳ್ಳಲ್ಪಡುತ್ತದೆ. ಇದನ್ನು ಸ್ವಯಂ ಬ್ರಹ್ಮದೇವರೇಮೃತರಾದವರನ್ನು ಉದ್ದೇಶಿಸಿಅವಶ್ಯವಾಗಿಮಾಡಬೇಕಾದ ಒಂದುಯಜ್ಞ ಎಂದು ಹೇಳಿ ಅದರ ವಿಧಿವಿಧಾನಗಳನ್ನೆಲ್ಲ ತಾವೇ ಶ್ರುತಪಡಿಸಿದ್ದಾರೆ. ನೀನು ಅದೇ ಪಿತೃಯಜ್ಞರೂಪವಾದ ಶ್ರಾದ್ಧ ಕಲ್ಪದಿಂದಲೇ ನಿನ್ನ ಮಗನ ನಾಮಗೋತ್ರೋಚ್ಚಾರಣವನ್ನೂ ಕೂಡವಿಧಿಪೂರ್ವಕವಾಗಿಮಾಡಿದಕ್ಷಿಣಾಭಿಮುಖವಾದದರ್ಭಾಗ್ರದಲ್ಲಿ ಪಿಂಡದಾನ ಮಾಡಿದ್ದು ತಪ್ಪೇನಲ್ಲ. ಅದು ವಿಧಿಬದ್ಧವೂ ಬ್ರಹ್ಮಾದಿ ದೇವಮುನಿ ಮಹಾನುಭಾವರಿಗೆಸಮ್ಮತವೂಶಾಸ್ತ್ರಶುದ್ಧವೂಆಗಿರುತ್ತದೆ.'' ಎಂದುಹೇಳಿದತ್ತಾತ್ರೇಯ ಋಷಿಯುತನ್ನ ಮಗನಾದನಿಮಿಮಹರ್ಷಿಗೆನಾರದರಸಮಕ್ಷವೇಮರಣೋನ್ಮುಖನಾದ ಮನುಷ್ಯನಿಗೆಮತ್ತು ಮರಣವನ್ನು ಹೊಂದಿದಮನುಷ್ಯರಿಗೆಮಾಡಬೇಕಾದಉತ್ತರಕ್ರಿಯೆ ಮತ್ತೂ ಶ್ರಾದ್ಧವಿಧಿವಿಧಾನಗಳಕ್ರಮನಿಯಮಗಳನ್ನೆಲ್ಲ ತಿಳಿಸಿಕೊಟ್ಟನು-

''ಭೂದೇವಿ, ಆ ದತ್ತಾತ್ರೇಯನಿಗೆ ನಾನೇ ವಿಶೇಷಾನುಗ್ರಹ ಮಾಡಿ ನಿಮಿ ನಾರದರಿಗೆ ಹೇಳಿಸಿದ ಆ ಶ್ರಾದ್ಧ ಕಲ್ಪದ ವಿವರ ವಿಷಯಗಳನ್ನು ಬಿತ್ತರಿಸುತ್ತೇನೆ ಕೇಳು. ಹುಟ್ಟಿದವನಿಗೆ ಸಾವು ಕಟ್ಟಿಟ್ಟದ್ದು. ಸತ್ತವನಿಗೆ ಮತ್ತೆ ಹುಟ್ಟು ಮತ್ತೆ ಅಳಿವು ಬಿಟ್ಟಿದ್ದಲ್ಲ. ಈ ಜನನ ಮರಣದ ಚಕ್ರದಿಂದ ಬಿಡುಗಡೆಯನ್ನು ಹೊಂದಬೇಕಾದರೆ ಮೋಕ್ಷ ಒಂದೇ ತಾರಣೋ ಪಾಯವಾಗಿದೆ. ಆ ಮೋಕ್ಷಕ್ಕೆ ಶ್ರೀ ಹರಿಯ ಪ್ರಸಾದವು ಕಾರಣವಾಗಿದೆ. ಆ ಪ್ರಸಾದಕ್ಕೆ ಜ್ಞಾನಕರ್ಮ ಸಹಿತವಾದ ಭಗವದ್ ಭಕ್ತಿಯೇ ಮುಖ್ಯ ಸಾಧನವಾಗಿದೆ. ಆ ಭಕ್ತಿಗೆ ವಿಹಿತ ಕರ್ಮಾನುಷ್ಠಾನ ಸಾಹಿತ್ಯವು ಇರಲೇ ಬೇಕು. ನಿಷಿದ್ಧ ಕರ್ಮಗಳನ್ನು ಮಾಡಿದರೆ ಅವುಗಳಿಂದ ಬಂದ ಪಾಪಗಳ ಪರಿಹಾರಕ್ಕಾಗಿ ಶಾಸ್ತ್ರದಲ್ಲಿ ಪ್ರಾಯಃಶ್ಚಿತ್ತವನ್ನು ಹೇಳಿದ್ದಾರೆ. ಮಾನವರು ತಮ್ಮ ತಮ್ಮ ಸ್ವಭಾವಕ್ಕನುಸರಿಸಿ ಸತ್ಕರ್ಮ ದುಷ್ಕರ್ಮಗಳನ್ನು ಮಾಡುತ್ತಾರೆ. ಆ ಮಾನವೀಯ ಸ್ವಭಾವವು ಸಾತ್ವಿಕ, ರಾಜಸ, ತಾಮಸ, ಎಂದು ಮೂರು ಬಗೆಯಾಗಿದೆ. ಸಾತ್ವಿಕ ಸ್ವಭಾವವು ಮಾನವನ ಧರ್ಮ, ಜ್ಞಾನ, ಐಶ್ವರ್ಯ, ವೈರಾಗ್ಯ ಮುಂತಾದ ಸದ್ಗುಣಗಳನ್ನು ಅಭಿವೃದ್ಧಿಗೊಳಿಸಿ ಮೋಕ್ಷಕ್ಕೆ ಸಾಧನವಾಗುವದು. ಈ ಸಾತ್ವಿಕ ಗುಣ ಉಳ್ಳ ಸಚ್ಚೇತನರಲ್ಲಿ ಕ್ಷಮೆ, ಇಂದ್ರಿಯ ನಿಗ್ರಹ, ಭಗವದ್ಭಕ್ತಿ, ಸ್ವಾಧ್ಯಾಯ, ತಪಸ್ಸು, ಸದಾಚಾರ ಮುಂತಾದ ಗುಣಗಳು ಸ್ವಾಭಾವಿಕವಾಗಿಯೇ ಇದ್ದು ಅವರು ದೇವರ ಆರಾಧನೆಯಲ್ಲಿಯೇ ತಮ್ಮ ದೇಹವನ್ನು ಸವೆಯಿಸುತ್ತಾರೆ.

ರಾಜಸ ಸ್ವಭಾವದ ಮಾನವರು ಒಳ್ಳೇ ಬಲಿಷ್ಠರೂ, ಮಾತಿನಲ್ಲಿ ನಿಪುಣರೂ, ಮನಸ್ಸಿನಲ್ಲಿ ಚಂಚಲರೂ, ಕಾರ್ಯದಲ್ಲಿ ಕುಶಲರೂ, ಎಲ್ಲದರಲ್ಲಿಯೂ ಶೂರರೂ, ಲೋಕದಲ್ಲಿ ಪ್ರಸಿದ್ಧರೂ ಆಗುತ್ತಾರೆ. ತಾಮಸ ಗುಣದ ಮನುಷ್ಯರು ಅತ್ಯಂತ ಕ್ರೂರರೂ, ದೇವರಲ್ಲಿ ನಂಬಿಕೆ ಇಲ್ಲದವರೂ ನಿರ್ಲಜ್ಜರೂ, ಅಜ್ಞಾನಿಗಳೂ, ಉನ್ಮತ್ತರೂ ಆಗಿರುತ್ತಾರೆ. ಇಂಥ ತಾಮಸೀ ಜನರು ರಾಕ್ಷಸೀ ಜನ್ಮವನ್ನು ಹೊಂದುವರು. ನಿಮಿ ಕುಮಾರ, ನೀನು ಸ್ವಭಾವದಿಂದ ಸಾತ್ವಿಕನಾಗಿರುವೆ. ನಿನ್ನಂಥವರು ಶೋಕ ಮೋಹಗಳನ್ನು ಬಿಟ್ಟು ಬಿಡಬೇಕು. ಶೋಕವು ದೇಹವನ್ನು ಕೊರಗಿಸುವದಲ್ಲದೇ ಬುದ್ಧಿಯನ್ನೂ, ಲಜ್ಜೆ, ಧೈರ್ಯ, ಧರ್ಮ, ಐಶ್ವರ್ಯ, ಕೀರ್ತಿ, ಸ್ಮರಣಶಕ್ತಿ ಮುಂತಾದವುಗಳನ್ನೂ ನಾಶ ಮಾಡಿ ಬಿಡುವದು. ಆದುದರಿಂದ ಮಗನೇ, ನೀನು ಮೊದಲು ನಿನ್ನ ದುಃಖವನ್ನು ದೂರ ಮಾಡು.

ಮೋಹವನ್ನು ಬಿಟ್ಟು ಬಿಡು'' ಎಂದು ಉಪದೇಶ ಮಾಡಿದನು. ಶೋಕ ಸಂತಪ್ತನಾದ ಆ ನಿಮಿಯನ್ನು ಸಂತೈಸಿದನು. ಭೂದೇವಿ, ಬ್ರಹ್ಮದೇವರು ಎಲ್ಲ ವರ್ಣದವರಿಗೂ ಅನುಷ್ಠಾನಕ್ಕೆಂದು ತಿಳಿಸಿದ ಶ್ರಾದ್ಧ ವಿಚಾರವನ್ನು ಹೇಳುತ್ತೇನೆ ಕೇಳು. ಮನುಷ್ಯನು ಸಾಯುವ ಪ್ರಸಂಗ ಬಂದಾಗ ಮರಣ ಸಂಕಟದಿಂದ ಹೊರಳಾಡುವಾಗ ಅವನ ಹಿತಚಿಂತಕರಾದ ಇಷ್ಟ ಮಿತ್ರರು ಆ ಮುಮೂರ್ಷುವಾದ ಮನುಷ್ಯನನ್ನು ಮನೆಯಿಂದ ಹೊರಗೆ ತಂದು ದರ್ಭೆಯ ಹಾಸಿಗೆಯ ಮೇಲೆ ಮಲಗಿಸಬೇಕು. ಅವನಿಗೆ ಪರಲೋಕದಲ್ಲಿ ಹಿತವಾಗಲಿಕ್ಕಾಗಿ ಅವನ ಹೆಸರಿನಿಂದ ಸುವರ್ಣ ದಾನ, ಗೋದಾನಗಳನ್ನು ಮಾಡಬೇಕು. ಮತ್ತೂ ಅವನು ಮರಣ ಹೊಂದುವ ಸಂದರ್ಭದಲ್ಲಿ ಅವನ ಕಿವಿಯಲ್ಲಿ ನಾರಾಯಣನ ನಾಮಸ್ಮರಣೆಯನ್ನು ಗಟ್ಟಿಯಾಗಿ ದನಿಮಾಡಿ ಒದರಿ, ಮಧುಪರ್ಕವನ್ನು ನೀಡಬೇಕು. ಅವನು ಮರಣ ಹೊಂದಿದ ಅನಂತರ ಮೃತನ ದೇಹಕ್ಕೆ ಸ್ನಾನ ಮಾಡಿಸಿ ಗಂಧಾದಿಗಳನ್ನು ಲೇಪಿಸಬೇಕು. ಮತ್ತೊಮ್ಮೆ ಅವನ ಜೀವವು ಹೋಗಿದೆಯೋ ಇಲ್ಲವೋ ಪರೀಕ್ಷಿಸಿ ವಿಧಿಪೂರ್ವಕವಾಗಿ ಚಿತೆಯನ್ನು ತಯಾರು ಮಾಡಿ ಅದರ ಮೇಲೆ ಆ ಶವವನ್ನು ದಕ್ಷಿಣಕ್ಕೆ ತಲೆ ಮಾಡಿ ಮಲಗಿಸಿ ಅಗ್ನಿ ನಾರಾಯಣನನ್ನು ಧ್ಯಾನ ಮಾಡಿ ಈ ಮಂತ್ರವನ್ನು ಹೇಳಬೇಕು.

ಕೃತ್ವಾ ಸುದುಷ್ಕರಂ ಕರ್ಮ ಹ್ಯಜಾನತಾ ವಾಸ್ಯ ಜಾನತಾ ।
ಮೃತ್ಯುಂ ಕಾಲವಶಂ ಪ್ರಾಪ್ಯ ನರಃ ಪಂಚತ್ವಮಾಗತಃ
ಧರ್ಮಾಧರ್ಮ ಸವ್ಯಯುಸ್ತೋ ಲೋಭ ಮೋಹ ಸಮಾವೃತ್ತಃ ।
ದಹ ಚೈತಸ್ಯ ಗಾತ್ರಾಣಿ ದೇವಲೋಕಂ ಸ ಗಚ್ಛತು ॥

''ತಿಳಿದೋ ತಿಳಿಯದೆಯೋ ಈ ಮನುಷ್ಯನು ಲೋಭಮೋಹಗಳಿಂದ ಅನೇಕ ದುಷ್ಕರ್ಮಗಳನ್ನು ಮಾಡಿದ್ದಾರೆ. ಕಾಲವಶನಾದ ನೀನು ಇವನನ್ನು ಸುಟ್ಟು ಇವನ ಪಾಪಗಳನ್ನೂ ಸುಟ್ಟು ಇವನು ದೇವಲೋಕಕ್ಕೆ ಹೋಗುವಂತೆ ಮಾಡು'' ಎಂದು ಅಗ್ನಿಗೆ ಬಿನ್ನಹ ಮಾಡಿಕೊಳ್ಳುವ ಮಂತ್ರವನ್ನು ಹೇಳಿ ಸಂಸ್ಕಾರ ಕರ್ತನು ಉರಿಯುವ ಬೆಂಕಿಯನ್ನು ಶವದ ತಲೆಯೆಡೆಗೆ ಇಡಬೇಕು. ಪೂರ್ತಿ ಶವವು ಸುಟ್ಟ ಬಳಿಕ ಬಂಧುಗಳು ಬಟ್ಟೆ ಬರೆ ಸಹಿತ ಸ್ನಾನ ಮಾಡಿ ಮನೆಗೆ ಹಿಂದಿರುಗಬೇಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ನಾಲ್ಕೂ ವರ್ಗದವರೂ ಹೀಗೆ ಅಗ್ನಿ ದಹನ ಮಾಡಿಯೇ ಶವಸಂಸ್ಕಾರವನ್ನು ಮಾಡಬೇಕು. ಮತ್ತು ಮೃತನ ಹೆಸರಿನಿಂದ ನೆಲದ ಮೇಲೆ ಒಂದು ಪಿಂಡವನ್ನು ಹಾಕಬೇಕು. ಅಂದಿನಿಂದಲೇ ಅಂದರೆ ಮರಣ ಹೊಂದಿದ ದಿನದಿಂದಲೇ ಹತ್ತು ದಿನಗಳವರೆಗೆ ಮೃತನ ಏಳು ತಲೆಮಾರಿನ ಸಂಬಂಧಿಗಳಾದ ಜ್ಞಾತಿಗಳಿಗೆಲ್ಲ ಮರಣಾಶೌಚವಿರುತ್ತದೆ. ಆ ಕಾಲದಲ್ಲಿ ದೇವಪೂಜೆಯೇ ಮೊದಲಾದ ಯಾವ ಪುಣ್ಯ ಕರ್ಮವನ್ನೂ ಅವರು ಬಂಧುಬಳಗದವರು ಮಾಡಕೂಡದು.

## ಅಶೌಚಕರ್ಮ ಮತ್ತು ಶ್ರಾದ್ಧಕರ್ಮ

**ಭೂದೇವಿ :-** ದೇವಾ, ನೀನು ದೇವತೆಗಳಿಗೂ ದೇವನೂ, ಲೋಕನಾಥನೂ, ಅನಾದಿಯೂ ಆಗಿದ್ದೀಯೇ. ಮಾಧವ, ಅಶೌಚಕರ್ಮವನ್ನು ವಿಧ್ಯುಕ್ತವಾಗಿ ಕೇಳಲಿಚ್ಛಿಸುತ್ತೇನೆ.

**ಶ್ರೀ ವರಾಹ :-** ಕಲ್ಯಾಣಿ, ಅಶೌಚವನ್ನೂ ಮನುಷ್ಯರು ಅದರಿಂದ ಹೇಗೆ ಶುದ್ಧರಾಗುವರೆಂಬುದನ್ನೂ ಕೇಳು - ಸತ್ತವನ ಕಡೆಯವರು ನದಿಯ ನೀರಿನಲ್ಲಿ

ಮೊದಲನೆಯ ದಿನದಿಂದ ಸ್ನಾನ ಮಾಡಬೇಕು. ಮೃತನಿಗೆ ಪಿಂಡವನ್ನು, ಮೂರು ಜಲಾಂಜಲಿಗಳನ್ನು ಕೊಡಬೇಕು. ನಾಲ್ಕನೆಯ ಐದನೆಯ ಮತ್ತು ಆರನೆಯ ದಿನಗಳಲ್ಲೂ ಒಂದು ಪಿಂಡವನ್ನು ಜಲಾಂಜಲಿಯನ್ನು ಕೊಡಬೇಕು. ಏಳನೆಯ ದಿನ ಸ್ನಾನ ಮಾಡಿ, ಬೇರೆಯ ಸ್ಥಳದಲ್ಲಿ ಪಿಂಡವನ್ನು ಹಾಕಬೇಕು. ಹೀಗೆ ಹತ್ತನೆಯ ದಿನದ ವರೆಗೂ ಪ್ರತಿದಿನವೂ ಮಾಡಬೇಕು. ಹತ್ತನೆಯ ದಿನ ಮೃತನ ದಶರಾತ್ರಜ್ಞಾತಿ ಪುರುಷರು ಕ್ಷೌರ ಮಾಡಿಸಿಕೊಂಡು ಸಚೇಲರಾಗಿ ಸ್ನಾನ ಮಾಡಿ, ತಿಲಾಂಜಲಿಯನ್ನು ಕೊಟ್ಟು ಮತ್ತೆ ಸ್ನಾನ ಮಾಡಬೇಕು. ಉತ್ತರ ಕ್ರಿಯೆ ಮಾಡುವವನು ಪಿಂಡ ದಾನವನ್ನು ಮಾಡಿದ ಬಳಿಕ ಕ್ಷೌರ ಮಾಡಿಸಿಕೊಳ್ಳಬೇಕು. ಆ ಮೇಲೆ ವಿಧಿಯಂತೆ ಸ್ನಾನಮಾಡಿ ಜ್ಞಾತಿಗಳೊಡನೆ ತನ್ನ ಮನೆಗೆ ಹೋಗಬೇಕು. ಹನ್ನೊಂದನೆಯ ದಿನ ಸ್ನಾನ ಮಾಡಿ ಶುದ್ಧನಾಗಿ ವಿಧಿಯಂತೆ ಪ್ರೇತನನ್ನು ಏಕೋದ್ದಿಷ್ಟ ಶ್ರಾದ್ಧಕ್ಕಾಗಿ ಬ್ರಾಹ್ಮಣನಲ್ಲಿ ಆವಾಹಿಸಬೇಕು. ಮಾಧವಿ, ಚತುರ್ವರ್ಣದವರಿಗೂ ಏಕೋದ್ದಿಷ್ಟಶ್ರಾದ್ಧವು ಅವಶ್ಯವಾದುದು. ಅದರಲ್ಲಿ ಯೋಗ್ಯ ಬ್ರಾಹ್ಮಣನಿಗೆ ಶಾಸ್ತ್ರದಲ್ಲಿ ಹೇಳಿರುವಷ್ಟು ದಕ್ಷಿಣೆಯನ್ನು ಕೊಟ್ಟು ಭೋಜನ ಮಾಡಿಸಬೇಕು. ಶೂದ್ರರ ಶ್ರಾದ್ಧದಲ್ಲಿ ಅಪಕ್ವ (ಆಮ) ಪದಾರ್ಥಗಳನ್ನು ಬ್ರಾಹ್ಮಣರು ತೆಗೆದುಕೊಳ್ಳಬೇಕು. ಬ್ರಾಹ್ಮಣಾದಿ ಮೂರು ವರ್ಣಗಳಲ್ಲಿ ಪಕ್ವ ಪದಾರ್ಥಗಳ ಭೋಜನದಿಂದಲೇ ಶ್ರಾದ್ಧವನ್ನು ಮಾಡಬೇಕು. ಸುಂದರಮುಖೀ, ಬ್ರಾಹ್ಮಣಾದಿಗಳ ಶುಶ್ರೂಷೆ ಮಾಡುತ್ತಲಿದ್ದ ಶೂದ್ರರು ಮೃತರಾದರೆ ಹದಿಮೂರನೆಯ ದಿನದಲ್ಲಿ ಚೆನ್ನಾಗಿ ಅಡಿಗೆ ಮಾಡಿದ ಪದಾರ್ಥಗಳಿಂದಲೇ ದ್ವಿಜರಿಗೆ ಭೋಜನ ಮಾಡಿಸಬೇಕು.

ನಿಮಿಯಿಂದ ಮೊದಲುಗೊಂಡು ನಾಲ್ಕು ವರ್ಣದವರಿಗೆಲ್ಲರಿಗೂ ಈ ವಿಧವಾದ ಸಂಸ್ಕಾರ ಮಾಡುವುದರಿಂದ ಶುದ್ಧಿಯುಂಟಾಗುವುದರಲ್ಲಿ ಸಂಶಯವಿಲ್ಲ. ಧರ್ಮವು ಅದರಲ್ಲಿಯೂ ಮುಖ್ಯವಾಗಿ ಪ್ರೇತಕರ್ಮವು ಮೃತರ ಉದ್ದೇಶ ಮಾಡಿ, ಪೂರ್ವದಲ್ಲಿಯೇ ಬ್ರಹ್ಮನಿಂದ ಮಾಡಿರುವುದಾಗಿದೆ. ''ಪುತ್ರನೇ, ಪ್ರೇತಕಾರ್ಯವನ್ನು ನಿನ್ನ ಮಗನಿಗೆ ಮಾಡಿದುದಕ್ಕಾಗಿ ನೀನು ಹೆದರಬೇಕಾದುದಿಲ್ಲ. ನಾರದನೆದುರಿಗೆ ನಾನು ವಿವರವಾಗಿ ಈ ವಿಚಾರವನ್ನು ಹೇಳಿದ್ದೇನೆ. ಮಗುವೇ, ನೀನು ಮಗನಿಗಾಗಿ ಒಂದು ಯಜ್ಞವನ್ನು ಮಾಡಿದಂತಾಯಿತು. ಅದು ಮೊದಲ್ಗೊಂಡು ಮುಂದೆ ಪಿತೃಕರ್ಮವು ಪಿತೃಯಜ್ಞವೆನಿಸುವುದು. ವತ್ಸನೇ, ಇದರಿಂದ ನೀನು ಸಂದೇಹವಿಲ್ಲದೇ ಶಿವಲೋಕಕ್ಕೂ, ಬ್ರಹ್ಮಲೋಕಕ್ಕೂ, ವಿಷ್ಣುಲೋಕಕ್ಕೂ ಹೋಗುವೆ. ದುಃಖಿಸಬೇಡ.''

ದತ್ತಾತ್ರೇಯನು ಹೀಗೆ ಯಥಾವಿಧಿಯಾಗಿ ಪಿತೃಕರ್ಮವನ್ನು ಹೇಳಿ, '' ಮೃತನಿಗೆ ಮೂರನೆಯ ತಿಂಗಳಲ್ಲಿಯೂ, ಏಳನೆಯ ತಿಂಗಳಲ್ಲಿಯೂ, ಒಂಭತ್ತನೆಯ ತಿಂಗಳಲ್ಲಿಯೂ, ಹನ್ನೊಂದನೆಯ ತಿಂಗಳಲ್ಲಿಯೂ, ವರ್ಷದ ಕಡೆಯಲ್ಲಿಯೂ ಒಂದು ವರ್ಷದವರೆಗೆ ಶ್ರಾದ್ಧವನ್ನು ಮಾಡಬೇಕು. ಪ್ರೇತ ಕಾರ್ಯವು ನಡೆದು ವರ್ಷವು ಪೂರ್ಣವಾಗಲು ಕೆಲವು ಜೀವರು ಮುಕ್ತರಾಗುವರು. ಕೆಲವರು ಬೇರೆ ಲೋಕಗಳಿಗೆ ಹೋಗಿಯೋ ಹೋಗದೆಯೋ ಮತ್ತೆ ಭೂಮಿಗೆ ಬರುವರು. ಬ್ರಹ್ಮನು ಪ್ರೇತ ಸಂಸ್ಕಾರಕ್ಕೆ ಬೇಕಾದ ವಿಧಿಯನ್ನು ಹೇಳಿರುವನು. ಪ್ರೇತ ಕಾರ್ಯವು ನಡೆದ ಬಳಿಕ ಮೃತರಿಗೆ

ಪಿತೃತ್ವವುಂಟಾಗುವುದು. ಪ್ರತಿ ತಿಂಗಳ ಅಮಾವಾಸ್ಯೆಯಲ್ಲಿಯೂ ಪಿತೃತರ್ಪಣವನ್ನು ಮಾಡಬೇಕು. ತಂದೆ, ಅಜ್ಜ, ಮುತ್ತಜ್ಜಂದಿ (ಪಿತೃಪಿತಾಮಹ ಪ್ರಪಿತಾಮಹ)ರಿಗೆ ಶ್ರಾದ್ಧದಲ್ಲಿ ಬ್ರಾಹ್ಮಣ ಮುಖದಲ್ಲಿ ಅರ್ಪಿಸುವುದರಿಂದ ಶಾಶ್ವತವಾದ ತೃಪ್ತಿಯುಂಟಾಗುವುದು.'' ಎಂದು ಹೀಗೆ ಆ ಆತ್ರೇಯನು ಪಿತೃಯಜ್ಞ ನಿರ್ಣಯವನ್ನು ಹೇಳಿ, ಸ್ವಲ್ಪ ಹೊತ್ತು ಧ್ಯಾನಾಸಕ್ತನಾಗಿದ್ದು ಅಲ್ಲಿಯೇ ಕಣ್ಮರೆಯಾದನು.

**ನಾರದ** :- ಆತ್ರೇಯನು ಹೇಳಿದ ಮೃತ ಸಂಸ್ಕಾರವನ್ನು ವಿಧ್ಯುಕ್ತವಾಗಿ ಕೇಳಿ ನಾಲ್ಕು ವರ್ಣದವರಿಗೂ ನೀನು ಧರ್ಮವನ್ನು ನೆಲೆಗೊಳಿಸಿದಂತಾಯಿತು. ತಪೋಧನರಾದ ಋಷಿಗಳೂ ಪಿತೃಯಜ್ಞವನ್ನು ಪ್ರತಿತಿಂಗಳ ಅಮಾವಾಸ್ಯೆಯಲ್ಲಿಯೂ, ಉಪಶ್ರಾದ್ಧಗಳನ್ನು ದಿನದಿನವೂ ಮಾಡುವರು. ಬ್ರಾಹ್ಮಣೋತ್ತಮನೂ, ಮುನಿಶ್ರೇಷ್ಠನೂ ಆದ ನಾರದನು ಹೀಗೆ ಹೇಳಿ, ತನ್ನ ಕಾಂತಿಯಿಂದ ದಿಗಂತರಾಲವನ್ನು ಬೆಳಗುತ್ತ, ಇಂದ್ರನ ರಾಜಧಾನಿಯಾದ ಅಮರಾವತಿಗೆ ಹೊರಟು ಹೋದನು. ಮಾಧವಿ, ಹೀಗೆ ಪಿಂಡಸಂಕಲ್ಪವೂ, ಶ್ರಾದ್ಧೋತ್ಪತ್ತಿಯೂ ಬ್ರಾಹ್ಮಣರಲ್ಲಿ ಆತ್ರೇಯ ಮುನಿಯಿಂದಲೇ ಸ್ಥಾಪಿತವಾಯಿತು.

**ಭೂದೇವಿ** :- ದೇವ, ಚತುರ್ವರ್ಣದವರ ಶೌಚಾಚಾರವನ್ನೂ, ಶ್ರಾದ್ಧ ವಿಚಾರವನ್ನೂ, ಪ್ರೇತಭೋಜ್ಯವನ್ನೂ ಹಿಂದೆ ನಡೆದ ವಿಚಾರದೊಡನೆ ಕೇಳಿದೆನು. ಭಗವಂತನೇ, ಪುರುಷೋತ್ತಮಾ, ನನಗೆ ಈಗ ಸ್ವಲ್ಪ ಸಂದೇಹವುಂಟಾಗಿದೆ. ಅದಕ್ಕೆ ನೀನು ಪರಿಹಾರವನ್ನು ಹೇಳಬೇಕಾಗಿದೆ. ಬ್ರಾಹ್ಮಣಾದಿ ಚತುರ್ವರ್ಣದವರೂ ಬ್ರಾಹ್ಮಣೋತ್ತಮರಿಗೆ ದಾನವನ್ನು ಕೊಡಬೇಕು. ಯಾರು ಅನಿಷ್ಟವೂ, ನಿಂದ್ಯವೂ ಆದ ಪ್ರೇತ ಭಾಗವನ್ನು ಪರಿಗ್ರಹಿಸುವರೋ, ಆವಾಹಿತನಾದ ಪ್ರೇತನೊಡನೆ ಊಟ ಮಾಡುವರೋ ಅವರು ಯಾವ ಕರ್ಮದಿಂದ ಆ ಪಾಪವನ್ನು ಕಳೆದುಕೊಳ್ಳುವರು ? ಅವರು ದಾತೃ (ಪ್ರೇತಾಶ್ರಾದ್ಧಕರ್ತೃ) ವನ್ನು ಹೇಗೆ ಪಾರಗಾಣಿಸುವರು ? ಜನಾರ್ದನ, ಪ್ರೀತಿಯಿಂದಲೂ, ಸ್ತ್ರೀಸ್ವಭಾವದಿಂದಲೂ, ನಿನ್ನನ್ನು ಕೇಳುತ್ತಿದ್ದೇನೆ ಹೇಳು. ಭೂದೇವಿಯು ಹೀಗೆ ಕೇಳಲಾಗಿ ವರಾಹ ರೂಪನೂ, ಶಂಖ ದುಂದುಭಿಗಳಂತೆ ಗಂಭೀರವಾದ ಧ್ವನಿಯುಳ್ಳವನೂ ಆದ ಆ ಭಗವಂತನು ಆಕೆಗೆ ಮುಂದಿನಂತೆ ಹೇಳಿದನು.

**ಶ್ರೀ ವರಾಹ** :- ಭೂದೇವಿ, ವರಾರೋಹೇ, ಒಳ್ಳೆಯದು ಆ ಬ್ರಾಹ್ಮಣರು ಹೇಗೆ ಪಾರಗಾಣಿಸುವರೆಂಬುದನ್ನು ನಿನಗೆ ಹೇಳುತ್ತೇನೆ. ಜ್ಞಾನ ದುರ್ಬಲನಾದ ಬ್ರಾಹ್ಮಣನು ಪ್ರೇತಾರ್ಥವಾಗಿ ಭೋಜನ ಮಾಡಿದರೆ ತನ್ನ ದೇಹಶುದ್ಧಿಗಾಗಿ ಒಂದು ಹಗಲೂ, ರಾತ್ರಿಯೂ ಉಪವಾಸವಿದ್ದು ಮಾರನೆಯ ದಿನ ಬೆಳಗ್ಗೆ ಸರಿಯಾದ ಜ್ಞಾನದಿಂದ ಸಂಧ್ಯಾವಂದನೆಯನ್ನೂ ಅಗ್ನಿಕಾರ್ಯವನ್ನೂ ಮಾಡಿ, ಶಾಂತಿ ಮಂಗಳವನ್ನು ಹೇಳುತ್ತ ತಿಲ ಹೋಮವನ್ನು ಮಾಡಬೇಕು. ಪೂರ್ವದಿಕ್ಕಿಗೆ ಹರಿಯುವ ನದಿಗೆ ಹೋಗಿ, ವಿಧ್ಯುಕ್ತವಾಗಿ ಸ್ನಾನಮಾಡಿ, ಆ ಮೇಲೆ ಮಧುಪರ್ಕ ಸಹಿತವಾಗಿ ಪಂಚಗವ್ಯವನ್ನು ಸೇವಿಸಿ, ಅತ್ತಿಯ ಮರದಿಂದ ಮಾಡಿದ ಪಾತ್ರೆಯಲ್ಲಿ ಶಾಂತ್ಯುದಕವನ್ನು ಸಿದ್ದಪಡಿಸಿ (ಬ್ರಾಹ್ಮಣನು) ತಾನಿದ್ದ ಮನೆಗೆಲ್ಲ ಪ್ರೋಕ್ಷಿಸಬೇಕು. ಅಗ್ನಿ ಮುಖರಾದ ದೇವತೆಗಳೆಲ್ಲರನ್ನು ಕ್ರಮವಾಗಿ ತೃಪ್ತಿ ಪಡಿಸಿ, ಭೂತಗಳಿಗೂ ಬಲಿಯನ್ನಿತ್ತು, ಬ್ರಾಹ್ಮಣರಿಗೂ ಭೋಜನವನ್ನು ಮಾಡಿಸಬೇಕು. ಆಗ ಪಾಪನಾಶಕವಾದ ಒಂದು

ಗೋವನ್ನು ದಾನ ಮಾಡಬೇಕು. ಹೀಗೆ ಮಾಡುವವನು ಪರಮಗತಿಯನ್ನು ಪಡೆಯುವನು. ದೇವ ಕಾರ್ಯ, ಜನ್ಮನಕ್ಷತ್ರ, ಶಾದ್ಧ, ಪರ್ವಕಾಲ, ಪ್ರೇತಕಾರ್ಯ ಇವುಗಳಲ್ಲಿ ಬ್ರಾಹ್ಮಣನನ್ನು ಪರೀಕ್ಷಿಸಿ ವೇದ ವಿದ್ಯಾನಿರತನೂ, ವ್ರತಸ್ನಾನ ಪರನೂ, ಯಾವಾಗಲೂ ಬಹು ಧರ್ಮಾಸಕ್ತನೂ, ಶೀಲವಂತನೂ, ಬಹು ಸಂತುಷ್ಟನೂ, ಧರ್ಮಜ್ಞನೂ, ಸತ್ಯವಾದಿಯೂ, ಕ್ಷಮೆಯುಳ್ಳವನೂ, ಶಾಸ್ತ್ರಜ್ಞನೂ, ಅಹಿಂಸಾಪರನೂ ಆದ ಬ್ರಾಹ್ಮಣನನ್ನೇ ಹುಡುಕಿ ಪಡೆದು ಅವನಿಗೆ ಬೇಗನೆ ದಾನ ಮಾಡಬೇಕು. ಅಂತಹ ಬ್ರಾಹ್ಮಣನೇ ಪಾಪಸಾಗರ ಅಥವಾ ಸಂಸಾರ ಸಾಗರದಿಂದ ದಾಟಿಸಲು ಶಕ್ತನು. ಸುಮಂಗಲಿಯಲ್ಲಿಯೇ ಜಾರನಿಂದುದಿಸಿದವನು ಕುಂಡನೆಂದೂ, ವಿಧವೆಯಲ್ಲಿ ಜಾರನಿಂದುದಿಸಿದವನು ಗೋಳಕನೆಂದೂ ಎನಿಸಿಕೊಳ್ಳುವನು. ಕುಂಡರು ಅಥವಾ ಗೋಳಕರಾದ ಬ್ರಾಹ್ಮಣರಿಗೆ ಕೊಡುವ ದಾನವು ನಿಷ್ಫಲವಾಗುವುದು. ಅಲ್ಲದೇ ಅವರು ದಾನ ಮಾಡಿದವರನ್ನು ಅಧೋಗತಿಗೊಯ್ಯುವರು. ಪಿತೃಕರ್ಮದಲ್ಲಿ ಒಬ್ಬ ಕುಂಡನನ್ನಾಗಲಿ, ಗೋಲಕನನ್ನಾಗಲಿ ನೋಡಿದಲ್ಲಿ ಪಿತೃಗಳು ನಿರಾಶರಾಗಿ ಬೇಗನೆ ನರಕಕ್ಕೆ ಹೋಗುವರು. ದೇವ ಕರ್ಮದಲ್ಲಿಯೂ ಹೀಗೆಯೇ ಕುಂಡಗೋಲಕರಿಗೆ ಕೊಡುವ ದಾನವು ನಿಷ್ಫಲವಾಗುವದು.

ಕೀರ್ತಿವಂತೇ, ಆದುದರಿಂದ ಅಪಾತ್ರ (ಅನರ್ಹ)ನಿಗೆ ದಾನ ಮಾಡಬಾರದು. ವಸುಂಧರೇ, ಈ ವಿಚಾರದಲ್ಲಿ ಪೂರ್ವದಲ್ಲಿ ನಡೆದುದನ್ನು ಕೇಳು. ಅವಂತೀ ದೇಶದಲ್ಲಿ ಮನುವಂಶವರ್ಧನನೂ, ಅತಿ ಧಾರ್ಮಿಕನೂ ಆದ ಮೇಧಾತಿಥಿಯೆಂಬ ದೊರೆಯಿದ್ದನು. ಆತನಿಗೆ ಆತ್ರೇಯ ಗೋತ್ರೋತ್ಪನ್ನನೂ ಯಾವಾಗಲೂ ವೇದವಾದಾಸಕ್ತನೂ ಆದ ಚಂದ್ರಶರ್ಮನೆಂಬ ಬ್ರಾಹ್ಮಣೋತ್ತಮನು ಪುರೋಹಿತ ನಾಗಿದ್ದನು. ದೊರೆಯು ಪ್ರತಿದಿನವೂ ಬ್ರಾಹ್ಮಣರಿಗೆ ವಿಧಿಪೂರ್ವಕವಾಗಿ ನೂರು ಹಸುಗಳನ್ನು ದಾನ ಮಾಡಿ ಬಳಿಕ ಭೋಜನ ಮಾಡುತ್ತಿದ್ದನು. ಹಾಗೇ ಬಹುಕಾಲ ಕಳೆಯಲು ವೈಶಾಖ ಮಾಸದಲ್ಲಿ ಆ ಮೇಧಾತಿಥಿಯು ತಂದೆಯ ಶ್ರಾದ್ಧಕ್ಕಾಗಿ ಬ್ರಾಹ್ಮಣ ರನ್ನು ಕರೆಸಿದನು. ನಿರ್ಮಲ ಮನಸ್ಕನಾದ ಆ ಮೇಧಾತಿಥಿಯು ಬಂದ ಬ್ರಾಹ್ಮಣರನ್ನು ಗುರುವನ್ನು ನೋಡಿ ನಮಸ್ಕರಿಸಿ ಬಳಿಕ ಶ್ರಾದ್ಧವನ್ನು ಆರಂಭಿಸಿದನು. ಶ್ರಾದ್ಧವನ್ನು ವಿಧಿಯಂತೆ ಪ್ರಯತ್ನ ಪೂರ್ವಕವಾಗಿ ಮಾಡಿ, ಶ್ರಾದ್ಧೋದ್ದಿಷ್ಟವಾದ ಅನ್ನವನ್ನು ಬೇಕಾದ ಹಾಗೆ ಬ್ರಾಹ್ಮಣರಿಗೆ ದಾನ ಮಾಡಿದನು. ಆಗ ಆ ಬ್ರಾಹ್ಮಣರ ನಡುವೆ ಒಬ್ಬ ಗೋಳಕನೂ ಸೇರಿದ್ದನು. ಶ್ರಾದ್ಧೋದ್ದಿಷ್ಟವಾದ ಅನ್ನವು ವಿಧಿಪೂರ್ವಕವಾಗಿ ಅವನಿಗೂ ದೊರೆಯಿತು. ಹಾಗೆ ಗೋಳಕನನ್ನಿಟ್ಟುಕೊಂಡು ಶ್ರಾದ್ಧ ಮಾಡಿದ ದೋಷದಿಂದ ಆ ದೊರೆಯ ಪಿತೃಗಳು ಸ್ವರ್ಗದಿಂದ ಭ್ರಷ್ಟರಾಗಿ ಮುಳ್ಳಿನಿಂದ ಕೂಡಿದ ದಟ್ಟ ಕಾಡಿನಲ್ಲಿ ಜೋಲಾಡುವವರಾದರು. ಅವರು ಪ್ರತಿದಿನವೂ ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ಅಡಿಗಡಿಗೆ ದುಃಖಿಸುತ್ತಿದ್ದರು. ಒಂದಾನೊಂದು ವೇಳೆ ಆ ಮೇಧಾತಿಥಿಯು ದೈವಯೋಗದಿಂದ ಇಬ್ಬರು ಮೂವರು ಪರಿಜನರಿಂದ ಕೂಡಿ ಬೇಟೆಗೆಂದು ವನಕ್ಕೆ ಹೋದನು. ಅಲ್ಲಿ ಜೋಲಾಡುತ್ತಿರುವ ಅವರನ್ನು ನೋಡಿ, ಬ್ರಾಹ್ಮಣಪ್ರಿಯನಾದ

ಆತನು, "ಈ ದುರ್ದೆಸೆಯನ್ನು ಪಡೆದಿರುವ ನೀವಾರು? ಯಾವ ಕರ್ಮದುರ್ವಿಪಾಕದಿಂದ ನೀವು ಹೀಗೆ ಬಹುದುಃಖಿಗಳಾಗಿರುವಿರಿ? ನನಗೆ ಹೇಳಿ " ಎಂದು ಕೇಳಿದನು.

**ಪಿತೃಗಳು** - ನಮ್ಮ ವಂಶವರ್ಧಕನಾದ ಮೇಧಾತಿಥಿಯೆಂಬ ಪ್ರಭುವಿರುವನು, ನರಕಕ್ಕೆ ಹೋಗಲು ಸಿದ್ಧರಾಗಿರುವ ನಾವು ಅವನ ಪಿತೃಗಳು. ಅವರ ಮಾತನ್ನು ಕೇಳಿ ದುಃಖವುಳ್ಳವನಾದ ದೊರೆಯು ಆ ಪಿತೃಗಳೆಲ್ಲರನ್ನೂ ಕುರಿತು ಸಮಾಧಾನಪೂರ್ವಕವಾಗಿ ಮುಂದಿನ ಮಾತನ್ನು ಹೇಳಿದನು-

**ಮೇಧಾತಿಥಿ :-** "ನಾನೇ ಮೇಧಾತಿಥಿಯೆಂಬುವನು. ನನ್ನ ಪಿತೃಗಳಾದ ನೀವು ಯಾವ ಕರ್ಮದೋಷದಿಂದ ನರಕಕ್ಕೆ ಹೋಗುವವರಾದಿರಿ?"

**ಪಿತೃಗಳು :-** "ಶ್ರಾದ್ಧೋದ್ದಿಷ್ಟವಾದ ಅನ್ನವು ಗೋಳಕನಿಗೆ ಸೇರಿತು. ಆ ಕರ್ಮದೋಷದಿಂದಲೇ ನಾವು ನರಕಕ್ಕೆ ಹೋಗುವಂತಾಗಿರುವುದು. ಅಲ್ಲಿ ಮಹಾ ದುಃಖವನ್ನನುಭವಿಸಿ ಮತ್ತೆ ಸ್ವರ್ಗಕ್ಕೆ ಹೋಗುವೆವು. ಮಗನೇ, ಸರ್ವಲೋಕ ಹಿತಾಸಕ್ತನಾದ ನೀನೇ ದಾತೃವಾಗಿದ್ದೀಯೆ. ಬಹು ದಕ್ಷಿಣೆಯೊಡನೆ ಲೆಕ್ಕವಿಲ್ಲದಷ್ಟು ಗೋವುಗಳನ್ನು ದಾನ ಮಾಡಿದ್ದೀಯೆ. ಆ ಪುಣ್ಯದಿಂದ ಅತಿ ಸುಖಕರವಾದ ಸ್ವರ್ಗಕ್ಕೆ ಹೋಗುವೆವು. ಆದರೆ ಸ್ವರ್ಗದಲ್ಲಿಯೂ ನಮಗೆ ತೃಪ್ತಿಯಾಗುವ ಅನ್ನವು ಇಲ್ಲದಂತಾಗ ಬಹುದು. ಆದುದರಿಂದ ನಮಗೆ ತೃಪ್ತಿಯನ್ನುಂಟು ಮಾಡುವ ಶ್ರಾದ್ಧವನ್ನು ನೀನು ಮತ್ತೆ ಮಾಡಬೇಕಾಗಿದೆ". ಅವರ ಮಾತನ್ನು ಕೇಳಿ, ಮೇಧಾತಿಥಿಯು ಮನೆಗೆ ಹೋಗಿ, ಗುರುವಾದ ಚಂದ್ರಶರ್ಮನನ್ನು ಕರೆಸಿ ಆತನಿಗೆ ಮುಂದಿನ ಮಾತನ್ನು ಹೇಳಿದನು -

**ಮೇಧಾತಿಥಿ :-** ಚಂದ್ರಶರ್ಮನೇ, ನಾನು ಈ ದಿನ ಪಿತೃಗಳಿಗೆ ಪುನಃಶ್ರಾದ್ಧವನ್ನು ಮಾಡುತ್ತೇನೆ. ಕುಂಡ ಗೋಲಕರನ್ನು ಬಿಟ್ಟು ಬೇರೆಯ ಬ್ರಾಹ್ಮಣರೆಲ್ಲರನ್ನು ಕರೆಸು." ದೊರೆಯು ಆ ಮಾತನ್ನು ಹೇಳಿದೊಡನೆಯೇ ವಿಧಿಗಳನ್ನರಿತವರಲ್ಲಿ ಉತ್ತಮನೂ ಪುರೋಹಿತನೂ ಆದ ಚಂದ್ರಶರ್ಮನು ವೇದಭ್ಯಾಸದಲ್ಲಿ ಶ್ರಮಪಟ್ಟಿರುವ ಸಾಧುಗಳೂ, ಶಾಂತರೂ, ಕುಲೀನರೂ ಆದ ಬ್ರಾಹ್ಮಣರನ್ನೆಲ್ಲ ಕರೆಸಿ ದೊರೆಯಿಂದ ಪುನಃ ಶ್ರಾದ್ಧವನ್ನು ಮಾಡಿಸಿದನು. ದೊರೆಯು ಶ್ರಾದ್ಧವನ್ನು ಮಾಡಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ದಕ್ಷಿಣೆಯೇ ಮೊದಲಾದವುಗಳಿಂದ ಅವರನ್ನು ಪೂಜಿಸಿ, ಕಳುಹಿಸಿ ಬಳಿಕ ತಾನೂ ಊಟ ಮಾಡಿದನು. ತಾನೂ ಊಟ ಮಾಡಿ ದೊರೆಯು ಮತ್ತೆ ವನಕ್ಕೆ ಹೋಗಿ ಸಂತುಷ್ಟರೂ, ಪುಷ್ಟರೂ, ಬಲಶಾಲಿಗಳೂ ಆಗಿರುವ ತನ್ನ ಪಿತೃಗಳನ್ನು ನೋಡಿ ಬಹಳವಾಗಿ ಸಂತೋಷಪಟ್ಟನು. ಪಿತೃಭಕ್ತನಾದ ಆ ದೊರೆಯನ್ನು ನೋಡಿ ವಿನಯ ಸಂಪನ್ನರಾದ ಅವರು ಪ್ರೀತಿಪೂರ್ವಕವಾಗಿ ಈ ಮುಂದಿನ ಮಾತನ್ನಾಡಿದರು - "ಪ್ರಭುವೇ, ನಿನಗೆ ಮಂಗಳವಾಗಲಿ. ನಾವು ಸ್ವರ್ಗಲೋಕಕ್ಕೆ ಹೊರಡುತ್ತೇವೆ. ಈಗಲೂ ನೀನು, ನಮಗೆ ಹಿತವಾದ ಉತ್ತಮ ಕಾರ್ಯವನ್ನು ಮಾಡಬೇಕು. 'ದೈವಿಕ ಅಥವಾ ಪೈತೃಕವಾದುದಾವುದನ್ನೂ ಕುಂಡನಿಗೂ, ಗೋಳಕನಿಗೂ ಕೊಡಬಾರದು. ಅವರಿಗೆ ಕೊಟ್ಟು ಮಾಡುವ ಶ್ರಾದ್ಧವು ನಿಷ್ಫಲವಾದುದೆಂದು ಪಂಡಿತರು ಹೇಳುವರು. ದೇವಕರ್ಮ ದಲ್ಲಿಯೂ ಪಿತೃಕರ್ಮದಲ್ಲಿಯೂ ಯೋಗ್ಯರಾದ ಬ್ರಾಹ್ಮಣರು ದೊರೆಯದೆಯೇ

ಇದ್ದರೆ ಸಂಕಲ್ಪ ಮಾಡಿ ವಿಧಿಯಂತೆ ಶ್ರಾದ್ಧಮಾಡಿ ಅನ್ನವನ್ನು ಗೋವುಗಳಿಗೆ ಕೊಡಬೇಕು. ಗೋವುಗಳೂ ದೊರೆಯದಿದ್ದರೆ ಅನ್ನವನ್ನು ಪ್ರಯತ್ನಪೂರ್ವಕವಾಗಿ ನದಿಗಾದರೂ ಹಾಕಬೇಕು. ಅಪಾತ್ರರಾದ ನಾಸ್ತಿಕರಿಗೂ, ಗುರುದ್ರೋಹಿಗೂ, ಮುಖ್ಯವಾಗಿ ಕುಂಡಗೋಲಕರಿಗೂ ಕೊಡಲೇಬಾರದು'' ಎಂದು ಹೇಳಿ ಆ ಪಿತೃಗಳೆಲ್ಲರೂ ಸ್ವರ್ಗಕ್ಕೆ ಹೊರಟು ಹೋದರು. ಬಳಿಕ ಮೇಧಾತಿಥಿಯೂ ತನ್ನ ಪಟ್ಟಣಕ್ಕೆ ಹೊರಟು ಹೋಗಿ ಬ್ರಾಹ್ಮಣರಿಂದ ಪರಿವೃತನಾಗಿ, ಪಿತೃಗಳು ಹೇಳಿದುದೆಲ್ಲವನ್ನು ಸಂತೋಷದಿಂದ ಮಾಡಿದನು. ದೇವಿ, ಆದುದರಿಂದ ಈ ಕಥೆಯನ್ನು ನಿನಗೆ ಹೇಳಿದೆನು. ಬ್ರಾಹ್ಮಣೋತ್ತಮನೊಬ್ಬನಾದರೂ ಕಠಿಣವಾದ ಕಷ್ಟಗಳಿಂದ ಸಂತಾರಣ ಮಾಡಿಸುವುದರಲ್ಲಿ ಸಂಶಯವಿಲ್ಲ. ವಸುಂಧರೆ, ಒಬ್ಬ ಬ್ರಾಹ್ಮಣೋತ್ತಮನೇ ನಾವೆಯಂತೆ ಪಾಪ ಸಾಗರವನ್ನು ದಾಟಿಸುವನು. ಆದುದರಿಂದ ಅರ್ಹನಾದ ಬ್ರಾಹ್ಮಣನಿಗೆ ದಾನ ಮಾಡಬೇಕು. ಧರೇ, ನೇಮಿಯಿಂದ ಮೊದಲ್ಗೊಂಡು ದೇವಾಸುರ ಮನುಷ್ಯ ಗಂಧರ್ವೋರಗಾದಿಗಳಲ್ಲಿ ತಪೋಧನರಾದವರೆಲ್ಲರೂ ಪ್ರತಿತಿಂಗಳಲ್ಲಿಯೂ ಅಲ್ಲದೆ ಪಿತೃಪಕ್ಷದಲ್ಲಿಯೂ ಶ್ರಾದ್ಧವನ್ನು ಮಾಡುವರು.

## ಬಸವನನ್ನು ಬಿಡುವದು

ಪ್ರತಿ ತಿಂಗಳಲ್ಲಿಯೂ ಆ ಪಿಂಡಸಂಕಲ್ಪವನ್ನು ಹೇಗೆ ಮಾಡಬೇಕು ? ಶ್ರಾದ್ಧದಲ್ಲಿ ಪಿಂಡ ಪಿತೃ ಕ್ರಿಯೆಗಳನ್ನು ಪಡೆದು ಅನುಭವಿಸುವವರಾರು ? ಈ ವಿಚಾರದಲ್ಲಿ ನಿಜವನ್ನು ಕೇಳಲು ಬಯಸುತ್ತೇನೆ. ನನಗೆ ಬಹು ಕುತೂಹಲವಾಗಿದೆ.

**ಶ್ರೀ ವರಾಹ :-** ಒಳ್ಳೆಯದು. ಭೂಮಿ, ವರಾರೋಹೇ, ಸರ್ವ ಧರ್ಮನಿಷ್ಠೇ, ದೇವೀ, ನಿನ್ನಲ್ಲಿ ನೀನು ಕೇಳಿದುದನ್ನು ಹೇಳುತ್ತೇನೆ. 'ಮಾಧವಿ', 'ಪಿತೃಯಜ್ಞ'ದಲ್ಲಿ ಭೋಕ್ತೃಗಳು ಪಿತೃಪಿತಾಮಹ ಪ್ರಪಿತಾಮಹರು (ತಂದೆ ಅಜ್ಜ ಮುತ್ತಜ್ಜಂದಿರು). ಪ್ರತಿತಿಂಗಳಲ್ಲಿಯೂ, ಅಮವಾಸ್ಯಾತಿಥಿ ಯೊಂದರಲ್ಲಿಯೂ, ಪಿತೃ ಪಕ್ಷವು ಬಂದಾಗ ನಕ್ಷತ್ರ ಸಂಯೋಗವನ್ನರಿತು ಯಾವ ದಿನ ಮಹಾ ಫಲವೆಂಬುದನ್ನು ತಿಳಿದು ಆ ದಿನವೂ ಶ್ರಾದ್ಧ ಸಂಕಲ್ಪವನ್ನು ಮಾಡಬೇಕು. ಮಾಧವೀ, ದೇವಯಜ್ಞಗಳಲ್ಲಿಯೂ, ಸರ್ವ ಕಾರ್ಯಗಳಲ್ಲಿಯೂ ಪರಿಶುದ್ಧವಾದ ಅಗ್ನಿಯು ನಾನೇ ಆಗಿರುತ್ತೇನೆ. ಸದಾಶುಚಿಯಾದ ಬ್ರಹ್ಮಚಾರಿಯನ್ನು ಶ್ರಾದ್ಧದಲ್ಲಿ ವಿಶ್ವೇದೇವತೆಗಳ ಸ್ಥಾನಕ್ಕೆ ಇಟ್ಟುಕೊಳ್ಳಬಹುದು. ಭಿಕ್ಷುಗಳಾದ ವಾನಪ್ರಸ್ಥನನ್ನೂ, ಯತಿಯನ್ನೂ ವಿಷ್ಣು ಸ್ಥಾನಕ್ಕೆ ಇಟ್ಟುಕೊಳ್ಳಬಹುದು. ಅವರನ್ನು ಪಿತೃಸ್ಥಾನದಲ್ಲಿ ಭೋಜನ ಮಾಡಿಸಬಾರದು. ವಿಶ್ವೇದೇವ ವಿಷ್ಣುಗಳಿಗಾಗಿ ಪೂಜಿಸಬಹುದು. ಮಾಧವೀ, ಶ್ರಾದ್ಧಕ್ಕೆ ಅರ್ಹರಾದ ವ್ರತಸ್ಥರಾದ ಬ್ರಾಹ್ಮಣರನ್ನು ಸರಿಯಾಗಿ ಹೇಳುತ್ತೇನೆ. ಗೃಹಸ್ಥರಾಗಿ ಸಂತುಷ್ಟರೂ, ಕ್ಷಮಾಶೀಲರೂ, ಜಿತೇಂದ್ರಿಯರೂ, ಲಾಭಾಲಾಭಾದಿಗಳಲ್ಲಿ ಉದಾಸೀನರೂ, ಸತ್ಯಸಂಧರೂ, ಶ್ರೋತ್ರಿಯರೂ, ಧರ್ಮವನ್ನರಿತವರೂ, ವೇದ ವಿದ್ಯೆಯನ್ನು ಅಭ್ಯಾಸಮಾಡಿ ವ್ರತಸ್ನಾನ ಮಾಡಿದವರೂ, ಚೆನ್ನಾಗಿ ವಿಮರ್ಶಿಸಿ ಶುದ್ಧವಾದ ಅನ್ನವನ್ನೇ ಊಟ ಮಾಡುವವರೂ ಅಥವಾ ಮೃಷ್ಟಾನ್ನ ಭೋಜನ ಮಾಡುವವರೂ ಆದ ಗೃಹಸ್ಥರು ಉತ್ತಮರು. ಇವರನ್ನೇ

ಶ್ರಾದ್ಧದಲ್ಲಿಯೂ, ಬೇರೆಯ ಪಿತೃಯಜ್ಞಗಳಲ್ಲಿಯೂ ಭೋಜನಕ್ಕೆ ಹೇಳಬೇಕು. ಸುಂದರೀ, ಶ್ರಾದ್ಧದಲ್ಲಿ ಮೊದಲು ಅಗ್ನಿಯಲ್ಲಿ ದೇವತೀರ್ಥದಿಂದ ಹೋಮ ಮಾಡಿ ಬಳಿಕ ಬ್ರಾಹ್ಮಣ ಮುಖದಲ್ಲಿ ಯಥಾವಿಧಿಯಾಗಿ ಪಿತೃತೀರ್ಥದಿಂದ ಪಿತೃಗಳಿಗೆ ಭೋಜನ ಮಾಡಿಸಬೇಕು. ನಾಸ್ತಿಕರಿಗೂ, ಪಾಖಂಡಿಗಳಿಗೂ ಕಾಣುವಲ್ಲಿ ಶ್ರಾದ್ಧ ಮಾಡಬಾರದು. ಅವರು ನೋಡುವ ಶ್ರಾದ್ಧವು ರಾಕ್ಷಸ ಶ್ರಾದ್ಧವೆನಿಸುವುದು. ಅದು ನಾನು ಪೂರ್ವದಲ್ಲಿ ಇಂದ್ರನಿಗಾಗಿ ತ್ರಿವಿಕ್ರಮನಾಗಿ ಮೂರು ಲೋಕಗಳನ್ನೂ ಆಕ್ರಮಿಸಿದಾಗ ಬಲಿಚಕ್ರವರ್ತಿಗೆ ಕಲ್ಪಿಸಿದ ಭಾಗವಾಗುವುದು. ಆದುದರಿಂದ ರಾಕ್ಷಸರು ಮಂತ್ರ ಹೀನವೂ, ಅಕ್ರಮವೂ ಆದ ಶ್ರಾದ್ಧವನ್ನೇ ನಿರೀಕ್ಷಿಸುತ್ತಿರುವರು.

ಭೂಮೀ, ಶ್ರಾದ್ಧದಲ್ಲಿ ಪಿತೃಗಳನ್ನು ಮಂತ್ರದಿಂದ ವಿಧಾನಪೂರ್ವಕವಾಗಿ ಆಹ್ವಾನಿಸಬೇಕು. ವ್ಯಂಜನದೊಡಗೂಡಿದ ಮೂರು ಪಿಂಡಗಳನ್ನು ಪಿತೃಪಿತಾಮಹರಿಗೆ ಅರ್ಪಿಸಬೇಕು. ಪ್ರತಿ ತಿಂಗಳಲ್ಲಿಯೂ ಅಮಾವಾಸ್ಯೆಯಲ್ಲಿ ಪಿತೃಪಿತಾಮಹ ಪ್ರಪಿತಾಮಹರಿಗೆ ಅಪಸವ್ಯದಿಂದ ತಿಲೋದಕವನ್ನರ್ಪಿಸಬೇಕು. ಪಿತೃ ತರ್ಪಣ ಧಾರಣೆಯರಾದ ವೈಷ್ಣವೀ, ಕಾಶ್ಯಪೀ, ಅಜಯಾ ಎಂಬ ಹೆಸರುಗಳ ದೇವಿಯರನ್ನು ತಲೆಬಾಗಿ ವಂದಿಸಿ ತರ್ಪಣವನ್ನು ಅರ್ಪಿಸುವುದರಿಂದ ಪಿತೃಗಳೂ ಸಂಶಯವಿಲ್ಲದೇ ಪ್ರೀತರಾಗುವರು. ವಿಶಾಲಾಕ್ಷಿ, ಪಿತೃಯಜ್ಞವನ್ನು ಮಾಡುವ ಜ್ಞಾನಿಗಳಿಗೆ ಪಿತೃಗಳು ಆಯುಸ್ಸನ್ನೂ, ಕೀರ್ತಿಯನ್ನೂ, ಬಲವನ್ನೂ, ತೇಜಸ್ಸನ್ನೂ, ಧನವನ್ನೂ, ಪುತ್ರರನ್ನೂ, ಪಶುಗಳನ್ನೂ, ಪ್ರಿಯರನ್ನೂ, ಆರೋಗ್ಯವನ್ನೂ, ಕೊಡುವುದರಲ್ಲಿ ಸಂದೇಹವಿಲ್ಲ.

ಮಾನವರು ಪಿತೃಯಜ್ಞದಿಂದ ಪ್ರೇತತ್ವದಿಂದಲೂ, ತಿರ್ಯಗ್ಜನ್ಮದಿಂದಲೂ ವಿಮುಕ್ತರಾಗಿ ಅವರ ಕರ್ಮಾನುಸಾರವಾಗಿ ಶುಭಕರವಾದ ಲೋಕಗಳನ್ನು ಪಡೆಯುವರು. ಅತ್ತಿಯ ಮರದಿಂದ ಮಾಡಿದ ಪಾತ್ರೆಯನ್ನುತೆಗೆದುಕೊಂಡು ತಿಲೋದಕವನ್ನು ಮಾಡಿ, ಬ್ರಾಹ್ಮಣರಿಗೆ ಹೇಳಿ, ಪಿತೃಗಳ ಮೋಕ್ಷಕ್ಕಾಗಿ ಅವರಿಗೆ ಯಥಾಶಕ್ತಿಯಾಗಿ ದಕ್ಷಿಣೆಯನ್ನು ಆ ನೀರಿನಿಂದ ಧಾರಾಪೂರ್ವಕವಾಗಿ ಕೊಡಬೇಕು. ಕಪ್ಪಾದ (ವೃಷ) ಹೋರಿಯನ್ನು ನರಕ ದುಃಖ ವಿನಾಶಕ್ಕಾಗಿ ಬಸವನಾಗಿ ಬಿಡಬೇಕು. ಕಪ್ಪು ಹೋರಿಯ ಬಾಲದಲ್ಲಿ ನೀರನ್ನೆತ್ತಿ ಧಾರೆಯಾಗಿ ಬಿಟ್ಟನಾದರೆ ಅದರಿಂದ ಪಿತೃಗಳಿಗೆ ಅರವತ್ತು ಸಾವಿರ ವರ್ಷ ತೃಪ್ತಿಯಾಗುವದು.

ಸುಂದರೀ, ವರಾರೋಹೇ, ಬಿಟ್ಟ ಕಪ್ಪು ಹೋರಿಯು ಕೆಸರನ್ನು ಅದರ ಕೊಂಬಿನಿಂದ ಎತ್ತಿತಾದರೆ, ಬಿಟ್ಟವನ ಬಂಧುಗಳಾಗಲಿ, ಪಿತೃಗಳಾಗಲಿ ನರಕದಲ್ಲಿ ಬಿದ್ದಿದ್ದರೆ ಅವರನ್ನು ಅಲ್ಲಿಂದ ಉದ್ಧರಿಸಿ ಅದೂ ಸೋಮ ಲೋಕಕ್ಕೆ ಹೋಗುವದು. ಕಪ್ಪು ಹೋರಿಯನ್ನು ಬಸವನಾಗಿ ಬಿಡುವುದರಿಂದ ಲೋಕದಲ್ಲಿ ಯಾವ ಪುಣ್ಯವು ಲಭಿಸುವುದೆಂಬುದನ್ನು ಕೇಳು. ವೃಷೋತ್ಸರ್ಜನ ಮಾಡುವವನ ಪಿತೃಗಳು ಅರವತ್ತೈದು ಸಾವಿರ ವರ್ಷ ಕಾಲ ಹಸಿವು ಬಾಯಾರಿಕೆಗಳಿಲ್ಲದವರಾಗಿ ಸೋಮಲೋಕದಲ್ಲಿ ಆನಂದ ಪಡುವರು. ಗೃಹಸ್ಥ ಧರ್ಮಗಳಲ್ಲಿ ಶ್ರಾದ್ಧದಿಂದಾಗುವ ಫಲವು ಯಜ್ಞ ದಾನ ಅಧ್ಯಯ ನೋಪವಾಸ ಗಳಿಂದಲೂ, ತೀರ್ಥಸ್ನಾನಗಳಿಂದಲೂ, ಅಗ್ನಿ

ಹೋತ್ರಗಳಿಂದಲೂ, ವಿಧಿ ಪೂರ್ವಕವಾದ ಅನೇಕ ದಾನಗಳಿಂದಲೂ ಆಗಲಾರದು. ಬ್ರಹ್ಮ ವಿಷ್ಣು ಶರೀರಗತರಾಗಿದ್ದ ಪಿತೃ ಪಿತಾಮಹ ಪ್ರಪಿತಾಮಹರೆಂಬ ಪಿತೃಗಳು ಅಲ್ಲಿಂದ ಹೊರಗೆ ಹೊರಟರು ? ವಸುಂಧರೆ, ಈ ಕ್ರಮದಿಂದಲೇ ಪಿತೃದೇವತೆಗಳೂ, ಕಶ್ಯಪೋತ್ಪನ್ನರಾದ ದೇವತೆಗಳೂ ಶ್ರಾದ್ಧದಲ್ಲಿ ಪೂಜಿತರಾಗುವರು.

## ಮಧುಪರ್ಕದ ಮಹಿಮೆ ಮತ್ತು ಮಾಧುರ್ಯ

**ಶ್ರೀ ವರಾಹ** :- ಭೂದೇವಿ, ಯಾವುದರ ಉತ್ಪತ್ತಿಯೂ ದಾನವೂ ಕಡಿಮೆ ಯಾದುದಲ್ಲವೋ ಆ ಮಧುಪರ್ಕವು ಹೇಗಾಯಿತೆಂಬುದನ್ನು ಪ್ರಯತ್ನಪೂರ್ವಕವಾಗಿ ಕೇಳು. ಬ್ರಹ್ಮನೇ, ನನಗೆ ಪ್ರಿಯರಾದವರು ಮಧುಪರ್ಕವನ್ನು ಸ್ವೀಕರಿಸುವ ನನಗೆ ಉಪಚಾರವು ನಡೆದ ಬಳಿಕ ಮಧುಪರ್ಕವನ್ನು ಕೈಗೆ ತೆಗೆದುಕೊಂಡು ''ದೇವ, ಭಗವಂತಾ, ಇದು ನಿನ್ನ ಮೋಹದಿಂದ ಉದಿಸಿದುದೂ ಸಂಸಾರ ಮೋಕ್ಷಣಕರವೂ ಆದ ಮಧುಪರ್ಕ. ದೇವೇಶ, ಭಕ್ತಿಯಿಂದ ನಾನು ಈಗ ಅರ್ಪಿಸುವ ಇದನ್ನು ಪರಿಗ್ರಹಿಸು. ನಿನಗೆ ಅನೇಕ ವಂದನೆಗಳು '' ಎಂಬ ಅರ್ಥವುಳ್ಳ ಮೇಲಿನ, 'ಏಷಹಿದೇವ ಭಗವನ್ ನಮಸ್ತೆ' ಎಂಬ ಮಂತ್ರವನ್ನು ಹೇಳಬೇಕು. ಉಚಿತವಾದ ಉಪಚಾರದಿಂದ ನೀನು ಮಧುಪರ್ಕವೆಂಬುದೇನೆಂದು ಕೇಳಿದೆಯಲ್ಲವೆ ? ಉತ್ತಮವಾದ ಸಿದ್ಧಿಯನ್ನು ಬಯಸುವವನು ಜೇನುತುಪ್ಪ, ಮೊಸರು, ತುಪ್ಪ ಇವುಗಳನ್ನು ಸಿದ್ಧಪಡಿಸಿಕೊಂಡು ಮಂತ್ರ ಪವಿತ್ರವಿಧಿಯಿಂದ ಸಮನಾಗಿ ಮಿಶ್ರ ಮಾಡಬೇಕು.

**ಶ್ರೀ ವರಾಹ** :- ಭೂಮಿ, ನೀನು ಮೊದಲು ಹೇಳಿದ ನನ್ನ ಕರ್ಮಗಳನ್ನು ಮಾಡಿ, ಬಳಿಕ ರಾಷ್ಟ್ರಕ್ಕೆ ಸುಖವನ್ನುಂಟು ಮಾಡುವ ಶಾಂತಿಯನ್ನು ಮಾಡಬೇಕು. ಗರ್ಭಿಣಿ ಯರಿಗೂ, ವೃದ್ಧರಿಗೂ, ಒಕ್ಕಲಿಗರಿಗೂ, ಗೋಬ್ರಾಹ್ಮಣರಿಗೂ ಸತತವಾಗಿ ಶಾಂತಿಯನ್ನು ಶುಭವನ್ನು ಮಾಡು. ವಿಭುವೇ, ಸುವೃಷ್ಟಿಯನ್ನೂ, ಸುಭಿಕ್ಷವನ್ನೂ, ಅನ್ನವನ್ನೂ, ಅಭಯವನ್ನು ದಯಪಾಲಿಸು. ರಾಷ್ಟ್ರವು ಬೆಳೆಯಲಿ. ಯಾವಾಗಲೂ ಶಾಂತಿಯಾಗಲಿ. ದೇವತೆಗಳಿಗೂ, ಸರ್ವ ಬ್ರಾಹ್ಮಣರಿಗೂ, ಭಕ್ತರಿಗೂ, ಕನ್ಯೆಯರಿಗೂ, ಪಶುಗಳಿಗೂ, ಸದಾ ಶಾಂತಿಯಾಗಿರಲಿ.'' ನನ್ನ ಕರ್ಮಗಳಲ್ಲಿ ಆಸಕ್ತನಾದವನು ಮೇಲಿನ ಶಾಂತಿಯನ್ನು ಹೇಳಿ, ಮತ್ತೆ ಜಲಾಂಜಲಿಯನ್ನರ್ಪಿಸಿ, ''ದೇವ, ವಾಸುದೇವ, ಸರ್ವ ಜಗಜ್ಜನಕನೂ ದೇವತೆಗಳ ಮತ್ತು ಯಜ್ಞಾದಿಕರ್ಮಗಳ ಸಾಕ್ಷಿಯೂ ಆದ ನೀನು ನನಗೆ ಶಾಂತಿಯನ್ನೂ ಸಂಸಾರ ವಿಮೋಚನೆಯನ್ನೂ ದಯಪಾಲಿಸು. ಇದೇ ಸಿದ್ಧಿಯೂ, ಕೀರ್ತಿಯೂ, ಓಜಸ್ಸುಗಳಲ್ಲಿ ಮಹಾ ಓಜಸ್ಸೂ, ಲಾಭಗಳಲ್ಲಿ ಪರಮಲಾಭವೂ, ಗತಿಗಳಲ್ಲಿ ಪರಮಗತಿಯೂ ಆಗಿದೆ ಎಂಬ ಅರ್ಥದ ಮಂತ್ರವನ್ನು ಹೇಳಬೇಕು. ಹೀಗೆ ಸುಖಕರವಾದ ನನ್ನ ಶಾಂತಿಯನ್ನು ನಿಜವಾಗಿ ಹೇಳುವವರು ಪುನರಾವೃತ್ತಿಯಿಲ್ಲದವರಾಗಿ ನನ್ನಲ್ಲಿ ಲೀನರಾಗುವರು.

*ವರಾಹ ಪುರಾಣದಲ್ಲಿ ನೂರ ಇಪ್ಪತ್ತೇಳನೇ ಅಧ್ಯಾಯ ಮುಗಿದಿದೆ.*

—o—

## ಸಾವಿನೂರಿಗೆ ಹೋಗಿ ಜೀವದಿಂದ ಬದುಕಿದ ನಚಿಕೇತ

ಅಧ್ಯಾಯ - ೧೨೮

ಜನಮೇಜಯ ಮಹಾರಾಜನು ಗಂಗಾ ತೀರದಲ್ಲಿ ಅಶ್ವಮೇಧಯಾಗವನ್ನು ಮಾಡಿ ಹಸ್ತಿನಾವತಿಯಲ್ಲಿ ವಾಸ ಮಾಡಿದಾಗ ವ್ಯಾಸ ಶಿಷ್ಯನಾದ ವೈಶಂಪಾಯನ ಮುನಿಯು ಆಗಮಿಸಿದನು. ವೇದ ವೇದಾಂಗ ಪಾರಂಗತನಾದ ಅವನು ತನಗೆ ಬಂದ ಬ್ರಹ್ಮಹತ್ಯಾ ಪಾಪವನ್ನು ಹನ್ನೆರಡು ವರ್ಷದ ದೀಕ್ಷಾಬದ್ಧನಾಗಿ ಪ್ರಾಯಶ್ಚಿತ್ತ ಮಾಡಿ ಕಳೆದುಕೊಂಡು ಅಲ್ಲಿಗೆ ದಯಮಾಡಿಸಿದ್ದನು. ಪ್ರಾತಃಕಾಲದ ನಿತ್ಯಾಹ್ನಿಕವನ್ನು ಪೂರೈಸಿಕೊಂಡು ತನ್ನ ಬಾಗಿಲ ಬಳಿ ಬಂದಿರುವ ಆ ಪ್ರಾಜ್ಞಪುಂಗವನನ್ನು ಜನಮೇಜಯ ಮಹಾರಾಜನು ಸಂಭ್ರಮದಿಂದ ಸ್ವಾಗತಿಸಿದನು. ಆದರದಿಂದ ಉಪಚರಿಸಿದನು. ಕುರುವಂಶದ ಕೊನೆಯ ಕುಡಿಯಾದ ಆ ಜನಮೇಜಯ ದೊರೆಯು ಜ್ಞಾನ ಸಂಪನ್ನನಾದ ಆ ವೈಶಂಪಾಯನ ಮುನಿಯನ್ನು ಕುರಿತು ಚಿಂತೋದ್ಭ್ರಾಂತನಾಗಿ ಇಂತು ಪ್ರಶ್ನಿಸಿದನು. ''ಭಗವನ್, ಮನುಷ್ಯನು ತಾವು ಮಾಡಿದ ಕರ್ಮಗಳ ಫಲವನ್ನು ಎಲ್ಲಿ ಅನುಭವಿಸುವರು ? ಯಮದೇವರ ಆವಾಸ ಸ್ಥಾನವು ಎಂತಿದೆ ? ಅದರ ಆಳ ಅಗಲಗಳೆಷ್ಟು ? ವ್ಯಾಪ್ತಿ ವಿಸ್ತಾರಗಳೆಷ್ಟು ? ಮಾನವರು ಅದನ್ನೆಂತು ಕಾಣುವರು ? ಇವೆಲ್ಲವನ್ನೂ ದಯವಿಟ್ಟು ನನಗೆ ತಿಳಿಸಬೇಕು.''

ಆ ಕೌರವ ಕುಲದ ಮಹಾರಾಜನ ಈ ಪ್ರಶ್ನೆಯನ್ನು ಕೇಳಿ ವೈಶಂಪಾಯನರು ಉತ್ಸಾಹಗೂಡಿ ಹೇಳಿದರು. - ''ಮಹಾರಾಜ ನಿನ್ನ ಈ ಪ್ರಶ್ನೆಗೆ ಉತ್ತರ ರೂಪವಾಗಿ ಪೂರ್ವಕಾಲದಲ್ಲಿ ನಡೆದ ಪೌರಾಣಿಕ ಪ್ರಸಂಗ ಒಂದನ್ನು ಹೇಳುತ್ತೇನೆ'' ಕೇಳು. ಹಿಂದೆ ಉದ್ದಾಲಕನೆಂಬ ಪ್ರಸಿದ್ಧ ಋಷಿ ಇದ್ದನು. ಅವನು ವೇದದಲ್ಲಿ ಕೋವಿದ, ಶಾಸ್ತ್ರದಲ್ಲಿ ನಿಷ್ಣಾತ, ಧರ್ಮದಲ್ಲಿ ಮರ್ಮಜ್ಞ. ಅವನ ಮಗನಾದ ನಚಿಕೇತನು ತಂದೆಯಂತೆಯೇ ಜಾಣ. ಶಾಸ್ತ್ರಪ್ರವೀಣ. ಯೋಗಾಭ್ಯಾಸದಲ್ಲಿಯೂ ಪಳಗಿದವನಾಗಿದ್ದ ಆ ನಚಿಕೇತ.

ಒಮ್ಮೆ ಒಂದು ಪ್ರಸಂಗದಲ್ಲಿ ಆ ತಂದೆ ಮಕ್ಕಳಲ್ಲಿ ವಿರೋಧವು ತಲೆದೋರಿತು. ವಾದದಲ್ಲಿ ವಿರಸವು ಬೆಳೆದು ವಿಕೋಪಕ್ಕೆ ಹೋಯಿತು. ಆ ತಂದೆ ಸಿಟ್ಟಿನ ಭರದಲ್ಲಿ ಮಗ ನಚಿಕೇತನಿಗೆ''ಬುದ್ಧಿಗೇಡಿಯೇ, ನನ್ನನ್ನು ಇಷ್ಟು ಸಿಟ್ಟಿಗೆತರಿಸಿದ ನೀನು ಬೇಗನೇ ಯಮನ ಬಳಿಗೆ ಹೋಗು ಸಾವಿನ ಊರನ್ನು ಕಂಡು ಬಾ ಹೋಗು'' ಎಂದು ಗದರಿಸಿದನು. ತಂದೆಯು ಕೋಪಾವೇಶದಿಂದ ನುಡಿದ ಆ ಶಾಪಾಕ್ಷರಗಳನ್ನು ಕೇಳಿ ನಚಿಕೇತನು ಕೈ ಮುಗಿದು''ಹಾಗೇ ಆಗಲಿ. ನಿಮ್ಮಂಥ ಧರ್ಮಾತ್ಮರ ಮಾತು ಸುಳ್ಳಾಗುವದು ಬೇಡ. ನಾನು ನಿಮ್ಮ ಮಾತಿನಂತೆ ಯಮನೂರಿಗೆ ಹೋಗಿ ಆ ಧರ್ಮದೇವತೆಯನ್ನು ಕಂಡು ಮಾತನಾಡಿಸಿ ಬರುತ್ತೇನೆ. ನನಗೆ ತಾವು ಅಪ್ಪಣೆ ಕೊಡಬೇಕು'' ಎಂದು ಕೇಳಿಕೊಂಡನು. ತಾನು ಕೋಪಾವೇಶದಲ್ಲಿ ಆಡಿದ ನುಡಿಯನ್ನು ನಿಜವೆಂದೇ ತಿಳಿದು ಮೃತ್ಯುವಿನ ಮಂದಿರಕ್ಕೆ ಹೊರಟು ನಿಂತ ಮಗನನ್ನು ನೋಡಿ ಉದ್ದಾಲಿಕರಿಗೆ ಒಮ್ಮೆಲೇ ಹೆದರಿಕೆಯಾಯಿತು. ಅವರ ಸಿಟ್ಟು ಆಗಲೇ ಇಳಿದು ಹೋಯಿತು. ಕೂಡಲೇ ಅವರು ಶಾಂತರೂ, ಕರುಣಾಕ್ರಾಂತರೂ ಆಗಿತಗ್ಗಿದ ದನಿಯಲ್ಲಿ ತಮ್ಮ ಮಗನಿಗೆನುಡಿದರು.

''ಮಗು, ನನಗೆ ಇರುವವನು ನೀನೊಬ್ಬನೇ ಮಗ. ನಿನ್ನನ್ನು ಬಿಟ್ಟರೆ ನನಗೆ ಬೇರಾವ ಬಂಧುವೂ ಇಲ್ಲ, ಬಳಗವೂ ಇಲ್ಲ. ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟು ನಾನು ಏನೇನೋ ಕೆಟ್ಟ ಮಾತುಗಳನ್ನು ನಿನಗೆ ಆಡಿಬಿಟ್ಟೆ. ಕ್ರೋಧಾವೇಶದಲ್ಲಿ ಇದ್ದಾಗ ನಾನು ಆಡಿದ ಮಾತುಗಳನ್ನು ನೀನು ನಿಜ ಮಾಡುವುದು ಬೇಡ. ನನ್ನ ಮಾತು ಸುಳ್ಳಾಗಲಿ. ನನಗೆ ಸುಳ್ಳು ಮಾತನಾಡುವವ ಎಂದು ಅಪಕೀರ್ತಿಯೂ ಬರಲಿ. ನಾನು ನಿನ್ನನ್ನು ಬಿಟ್ಟು ಇರಲಾರೆ. ಸುಳ್ಳು ಮಾತನಾಡಿದ ನನ್ನನ್ನು ನಿನ್ನಂಥ ಸತ್ಪುತ್ರನು ಆ ಪಾಪದಿಂದ ಸುಲಭವಾಗಿ ಪಾರು ಮಾಡಬಲ್ಲೆ. ಸಿಟ್ಟಿನಲ್ಲಿ ಸುಳ್ಳು ಮಾತನಾಡುವ ಕ್ರೂರ ಮನುಷ್ಯನು ಕುಲಘಾತಕ ನಾಗಿರುತ್ತಾನೆ. ಅವನಿಗೆ ದಯಾ ಧರ್ಮ ಒಂದೂ ಇರುವದಿಲ್ಲ. ಅವನ ಜೊತೆಗೆ ಮಾತನ್ನೂ ಕೂಡ ಆಡಬಾರದು. ಅವನು ನುಡಿದ ಮಾತುಗಳನ್ನು ನಿಜವನ್ನಾಗಿ ಮಾಡಲು ಯಾರೂ ಪ್ರವರ್ತಿಸಬಾರದು. ನಾನು. ಸುಳ್ಳು ಮಾತನ್ನು ಎಂದೂ ಆಡದಷ್ಟು ಸತ್ಯ ಸಂಧನಾದ ಮನುಷ್ಯನೇನಲ್ಲ. ನೀನು ನನ್ನ ಮಾತಿಗೆ ಮಹತ್ವನ್ನು ಕೊಡದೇ ನನ್ನ ಅಂತಃಕರಣಕ್ಕೆ ಮಹತ್ವವನ್ನು ಕೊಡು. ನಾನು ಮನಸ್ಸಿನಿಂದ ಧರ್ಮದೂಷಕನಲ್ಲ. ಪುತ್ರ ದ್ವೇಷಕನೂ ಅಲ್ಲ. ನೀನು ಎಂದಿನಿಂದಲೂ ನನ್ನ ಚಿತ್ತಾನುವರ್ತಿಯಾಗಿರುವೆ. ನಾನು ನನ್ನ ಚಿತ್ತದಲ್ಲಿ ನಿನ್ನಂಥ ಧಾರ್ಮಿಕ ಪುತ್ರನು ಯಮಪಟ್ಟಣಕ್ಕೆ ಹೋಗಲಿ ಎಂದು ಬಯಸಲೇ! ನೀನು ಒಂದು ವೇಳೆ ಆ ಯಮಪುರಿಗೆ ಹೋದರೆ ಆ ಯಮನು ನಿನ್ನನ್ನು ಎಂದಿಗೂ ಇತ್ತಕಡೆಗೆ ಮರಳಿ ಕಳುಹಿಸಲಾರನು. ನಿನ್ನನ್ನು ಯಮಪಟ್ಟಣಕ್ಕೆ ಅಟ್ಟಿದ ನಾನು ನಮ್ಮ ವಂಶ ಘಾತಕನೂ ಎಲ್ಲರಿಂದ ಧಿಕ್ಕೃತನೂ ಆಗಿ ಹಾಳಾಗಿ ಹೋಗುವ ಪ್ರಸಂಗವು ಬರುವದು. ಮುಂದೆ ಅಪುತ್ರಕನಾದ ನಾನು ಹೋಮ ಹವನ, ಜಪ-ತಪ, ದಾನ ಧರ್ಮ ಏನು ಮಾಡಿದರೂ ವ್ಯರ್ಥವಾಗುವದು. ಪುತ್ರಹೀನನಾದ ನನಗೆ ಮುಂದೆ ಸ್ವರ್ಗಾದಿ ಸದ್ಗತಿಯೂ ಆಗುವದಿಲ್ಲ. ಪುತ್ ಎಂಬ ಹೆಸರಿನ ನರಕಕ್ಕೆ ನಾನು ಹೋಗಬೇಕಾಗುವದು. ಆದುದರಿಂದ ನನ್ನ ವಂಶವರ್ಧಕನಾದ ನೀನು ಯಮಪಟ್ಟಣಕ್ಕೆ ಸರ್ವಥಾ ಹೋಗಬೇಡ.'' ಹೀಗೆ ಅಂಗಲಾಚಿ ಅಳುತ್ತ ತನ್ನನ್ನು ಬಿನ್ನಹ ಮಾಡಿಕೊಳ್ಳುವ ತಂದೆಯನ್ನು ಕಂಡು ಎದೆ ಕರಗಿದ ಆ ನಚಿಕೇತ ಕುಮಾರನು ಮಮತೆಯಿಂದ ಮೈದುಂಬಿ ನುಡಿದನು -

''ಅಪ್ಪ, ನೀವು ಶೋಕಿಸಬೇಡಿ. ನನಗೆ ಮೃತ್ಯುವಿನ ಭಯವಿಲ್ಲ. ಲೋಕವಂದ್ಯನಾದ ಆ ಯಮಧರ್ಮನನ್ನು ಕಂಡು ಮಾತನಾಡಿಸಿ ನಾನು ನಿಮ್ಮ ಬಳಿಗೆ ಬಂದು ಬಿಡುತ್ತೇನೆ. ನಿಮ್ಮ ಕರುಣೆಯ ಕವಚವನ್ನು ತೊಟ್ಟು ನಡೆದ ನನ್ನ ಸಮೀಪದಲ್ಲಿಯೂ ಕೂಡ ಸಾವು ಸುಳಿಯಲಾರದು ತಂದೆಯ ವಚನವನ್ನು ಸತ್ಯವನ್ನಾಗಿ ಮಾಡಹೊರಟ ನನಗೆ ಮೃತ್ಯುವಿನಿಂದ ಯಾವ ಕುತ್ತೂ ಬರಲಾರದು. ಯಾವ ಆಪತ್ತನ್ನೂ ತರಲಾರದು. ನೀವು ಸತ್ಯದಿಂದ ಚಲಿಸಿದರೆ ನನ್ನ ಬಲವೇ ಕಡಿಮೆಯಾಗುವದು. ಸತ್ಯದ ಬಲವೇ ನನಗೆ ನಿಜವಾದ ತೇಜಸ್ಸು. ಅದರ ಹಂಬಲವೇ ನನ್ನ ಬೆಂಬಲ. ಆದುದರಿಂದ ನೀವು ಸತ್ಯನಿಷ್ಠರಾಗಿರಿ. ಸತ್ಯಪಾಲರಾಗಿರಿ. ಸತ್ಯಾತ್ಮರಾದ ನಿಮ್ಮ ದಯದಿಂದ ನಾನು ಸತ್ಯಪರಾಕ್ರಮಿಯಾಗಿ ಆ ಸತ್ಯದ ಪ್ರಭಾವದಿಂದಲೇ ಯಮನನ್ನು ಕಂಡು ಯಮಪಟ್ಟಣವನ್ನು ನೋಡಿಕೊಂಡು ಅವನಿಂದ ದಿವ್ಯ ಜ್ಞಾನೋಪದೇಶವನ್ನು

ಪಡೆದುಕೊಂಡು ನಿಮ್ಮ ಚರಣ ಸನ್ನಿಧಿಗೆ ಬೇಗನೇ ಮರಳಿ ಬರುತ್ತೇನೆ. ನಿಮ್ಮಲ್ಲಿ ನನ್ನದು ಒಂದೇ ಬಿನ್ನಹ. ನೀವು ಎಂದೂ ಸತ್ಯಚ್ಯುತರಾಗಬಾರದು. ನಮ್ಮನ್ನು ಸರ್ವಸಂಕಟ ಸಾಗರದಿಂದ ಪಾರು ಮಾಡುವ ನೌಕೆಯಂತಿರುವ ಸತ್ಯವನ್ನು ಎಂದೂ ಕೈ ಬಿಡಬಾರದು. ಸತ್ಯವೆಂದರೆ ಸ್ವರ್ಗದ ಮೆಟ್ಟಿಲು. ಮುಕ್ತಿಯ ತೊಟ್ಟಿಲು. ಸುಖದ ಬಟ್ಟಲು. ಸೂರ್ಯನ ಬೆಳಕಿಗೂ, ವಾಯುವಿನ ಸದಾಗತಿಗೂ, ಅಗ್ನಿಯ ತೇಜಸ್ಸಿಗೂ ಸತ್ಯವೇ ಮೂಲ. ಭೂಮಿಯು ನಿಂತಿದ್ದು ಸತ್ಯದ ಮೇಲೆ. ಸಮುದ್ರವು ಎಲ್ಲೆಯನ್ನು ಮೀರದಿರುವದು ಸತ್ಯ ಪ್ರಭಾವ. ವೇದಗಳ ಹಾಡಿನ ಸೊಲ್ಲು ಸತ್ಯ. ಸತ್ಯದಿಂದಲೇ ಲೋಕಗಳ ಪ್ರತಿಷ್ಠೆ. ಸತ್ಯದಿಂದಲೇ ಧರ್ಮರಕ್ಷಣೆಯಾಗುತ್ತದೆ. ಆ ಸತ್ಯವನ್ನು ನೀನು ಸಂರಕ್ಷಿಸು.'' ಜಿತೇಂದ್ರಿಯನಾದ ಆ ನಚಿಕೇತನು ತಂದೆಯಾದ ಉದ್ದಾಲಕ ಮಹರ್ಷಿಗೆ ಸತ್ಯದ ಮಹಿಮೆಯನ್ನು ಹೇಳಿ ಅವನನ್ನು ಸಂತೈಸಿ ಸಮಾಧಾನಪಡಿಸಿ ಅವನ ಅಪ್ಪಣೆಯನ್ನು ಪಡೆದು ತನ್ನ ಯೋಗ ಶಕ್ತಿಯಿಂದ ಶರೀರ ಸಹಿತವಾಗಿಯೇ ಯಮಪುರಿಗೆ ನಡೆದನು.

## ಮೃತ್ಯುಮಂದಿರದಿಂದ ಮರಳಿ ಬಂದವನನ್ನು ಕುರಿತು

**ವೈಶಂಪಾಯನ** :- ಜನಮೇಜಯರಾಜನೇ, ತರುಣ ತಪಸ್ವಿಯಾದ ಆ ನಚಿಕೇತನು ಉತ್ಸಾಹದಿಂದ ಯಮಪುರಿಗೆ ಹೋದ ಬಳಿಕ ಅಲ್ಲಿ ಯಮಧರ್ಮನು ಇವನನ್ನು ಸ್ವಾಗತಿಸಿದನು. ಆದರದಿಂದ ಉಪಚರಿಸಿದನು. ಪ್ರೀತಿಯಿಂದ ಪೂಜಿಸಿದನು. ಮನೆಗೆ ಬಂದ ಆ ಮುನಿಕುಮಾರನನ್ನು ಸಂಭ್ರಮದಿಂದ ಸತ್ಕರಿಸಿ ಸಂತೋಷಪಡಿಸಿ ಮರಳಿ ಭೂಲೋಕಕ್ಕೆ ಕಳಿಸಿಕೊಟ್ಟನು.

ಸಾವಿನ ನೆಲೆಯಾದ ಯಮಪಟ್ಟಣದಿಂದ ಸುರಕ್ಷಿತವಾಗಿ ಬದುಕಿ ಮನೆಗೆ ಬಂದ ಮಗನನ್ನು ನೋಡಿ ಉದ್ದಾಲಕ ಋಷಿಗೆ ಕಳೆದ ಹೋದ ಪ್ರಾಣವು ತಿರುಗಿ ಬಂದಂತಾಯಿತು. ಹೃದಯದ ತುಂಬ ಹಿಗ್ಗು ಕಡಲಾಡಿ ಸೂಸಿತು. ಆನಂದ ಬಾಷ್ಪವು ಕಣ್ಣಿನಂಚಿನಲ್ಲಿ ತುಳುಕಿತು. ಸಾವಿನ ಬಾಯಿಂದ ಸುರಕ್ಷಿತವಾಗಿ ಪಾರಾಗಿ ಬಂದ ಆ ಪುತ್ರನನ್ನು ನಲುಮೆಯಿಂದ ಬರಸೆಳೆದು ಬಿಗಿದಪ್ಪಿದನು. ಅವನ ನೆತ್ತಿಯನ್ನು ಮಮತೆಯಿಂದ ಮೂಸಿ ನೋಡಿದನು. ಹರ್ಷೋದ್ಗಾರಗಳನ್ನು ತೆಗೆದನು. ದೇಶದಲ್ಲಿಯ ಋಷಿ ಮುನಿಗಳನ್ನೆಲ್ಲ ಬರಮಾಡಿಕೊಂಡು ಅವರೆದುರು ತನ್ನ ಮಗನ ಮಹಿಮೆಯನ್ನು ಕೊಂಡಾಡಿದನು. ''ತಪಸ್ವಿಗಳೇ, ಈ ನನ್ನ ಪುತ್ರನ ಪ್ರಭಾವವನ್ನು ನೋಡಿದಿರಾ ! ಮೃತ್ಯುವಿನ ಪಟ್ಟಣಕ್ಕೆ ಹೋಗಿ ಮರಣ ಹೊಂದದೇ ಮರಳಿ ಮನೆಗೆ ಬಂದಿದ್ದಾನೆ. ಈ ಜಗತ್ತಿನಲ್ಲಿ ನನ್ನಂಥ ಭಾಗ್ಯಶಾಲಿ ಮುನಿಯು ಯಾವನಿರುವನು ? ಮೃತ್ಯುಲೋಕಕ್ಕೆ ಹೋಗಿ ಮೃತ್ಯುವನ್ನು ಕಂಡು ಮಾತನಾಡಿ ಬಂದವರುಂಟೇ ! ಈ ನನ್ನ ಮಗನು ಮಾತ್ರ ಸಾವಿನ ಸಾಕ್ಷಾತ್ಕಾರವನ್ನು ಮಾಡಿಕೊಂಡು ಯಮದೇವರ ಅತಿಥಿಯಾಗಿಯೂ ಅಕ್ಷತಾಂಗನಾಗಿ, ಅವಿನಾಶಿಯಾಗಿ, ಅವಿಕಲವಾದ ಇದೇ ಶರೀರದಿಂದಲೇ ಮರಳಿ ಬಂದಿದ್ದಾನೆ. ಇದೆಲ್ಲವೂ ದೇವನ ದಯೆ. ಬ್ರಾಹ್ಮಣರ ಆಶೀರ್ವಾದ. ಆ ನಚಿಕೇತನು ಈ ವರೆಗೆ ಮಾಡಿದ ಪಿತೃಸೇವೆ, ಪರಮಾತ್ಮನ ಪೂಜೆ ಮತ್ತೂ ಗುರುಭಕ್ತಿ, ಗುರು ಶುಶ್ರೂಷೆಗಳ ಪ್ರಭಾವವೇ ಸರಿ.''

ಉದ್ದಾಲಕ ಋಷಿಯು ಅಲ್ಲಿ ನೆರೆದ ಋಷಿ ಮುನಿಗಳಿಗೆಲ್ಲ ತನ್ನ ಪುತ್ರನು ಮಾಡಿ ತೋರಿದ ಪವಾಡವನ್ನು ಬಣ್ಣಿಸಿ ಹೇಳಿದ ಬಳಿಕ ಮಗನೆಡೆಗೆ ತಿರುಗಿ ಕೌತುಕದಿಂದ ಪ್ರಶ್ನಿಸಿದನು - ''ವತ್ಸಾ, ನೀನು ಆ ಯಮಾಲಯಕ್ಕೆ ಹೇಗೆ ಹೋದೆ ? ಅಲ್ಲಿ ಯಮದೂತರಾರೂ ನಿನ್ನನ್ನು ಹೊಡೆಯಲಿಲ್ಲವೇ ? ಬಂಧಿಸಲಿಲ್ಲವೇ ? ಆ ಲೋಕದ ಭಯಂಕರ ಬೇನೆಗಳಾವೂ ನಿನಗೆ ತಗಲಲಿಲ್ಲವೇ ? ಆ ಯಮನು ನಿನ್ನನ್ನು ಕ್ರೂರ ದೃಷ್ಟಿಯಿಂದ ನೋಡಲಿಲ್ಲವೇ ? ಮರಳಿ ಭೂಲೋಕಕ್ಕೆ ಬರಲು ದಾರಿಯು ಹೇಗೆ ಸಿಕ್ಕಿತು ?''ಎಂದು ಮುಂತಾಗಿ ಪ್ರಶ್ನೆ ಮಾಡಿದನು. ಮೃತ್ಯುಲೋಕದಿಂದ ಯಾವದೇ ಅಪಾಯ, ಆತಂಕ, ನಾಶ, ಹ್ರಾಸಗಳಿಲ್ಲದೇ ಸುಖರೂಪವಾಗಿ ಸಶರೀರವಾಗಿ ತಿರುಗಿ ಬಂದ ನಚಿಕೇತನ ಯಮಪುರಿಯ ಯಾತ್ರೆಯ ಸಮಾಚಾರವನ್ನು ಕೇಳಿ ಕಾತರಗೊಂಡ ದೇಶದ ಮುನಿಮನುಜರೆಲ್ಲರೂ ತಂಡೋಪತಂಡವಾಗಿ ಬಂದು ಉದ್ದಾಲಕನ ಆಶ್ರಮದಲ್ಲಿ ನೆರೆದರು. ಕೌತುಕದ ಕೊನೆ ಏರಿ ನಿಂತ ಆ ತಾಪಸರೆಲ್ಲರೂ ತವಕಗೊಂಡು ತರುಣ ತಪಸ್ವಿಯಾದ ನಚಿಕೇತನಿಗೆ ಪುಂಖಾನು ಪುಂಖವಾಗಿ ಪ್ರಶ್ನೆಗಳ ಸುರಿಮಳೆಯನ್ನೇ ಮಾಡಿದರು - ''ನಚಿಕೇತ, ಯಮಲೋಕದಲ್ಲಿ ನೀನು ಮತ್ತೇನು ಮಾಡಿದೆ ? ಏನು ಕೇಳಿದೆ ? ಆ ಸಾವಿನ ಊರು ನೋವಿನ ನೆಲೆ ಹೇಗಿದೆ ? ಅದರ ಹೆಸರನ್ನು ಉಚ್ಚರಿಸಿದರೇ ನಮಗೆ ಭಯವಾಗುವದು. ಅಂಥ ಘೋರ ಲೋಕಕ್ಕೆ ನೀನು ಹೇಗೆ ಹೋದೆ ? ಪ್ರೇತರಾಜನಾದ ಆ ಯಮಧರ್ಮನ ರೂಪವು ಎಂತಿರುವದು ? ಅಲ್ಲಿಯ ಚಿತ್ರಗುಪ್ತನು ಏನು ಮಾಡುತ್ತಿರುವನು ? ಯಾವ ಪಾಪದಿಂದ ಘೋರವಾದ ಯಮ ಯಾತನೆಯನ್ನು ಮಾನವರು ಅನುಭವಿಸಬೇಕಾಗುವದು ? ಅದರಿಂದ ಪಾರಾಗಲಿಕ್ಕೆ ಉಪಾಯವೇನು ? ದುಷ್ಕರ್ಮಗಳಿಂದ ಅಲ್ಲಿ ಆಗುವ ಅಪಾಯವೇನು ? ಶುದ್ಧಾತ್ಮರು ಅಲ್ಲಿಗೆ ಹೇಗೆ ಹೋಗುವರು ? ಪಾಪಾತ್ಮರು ಹೇಗೆ ಹೋಗುವರು ? ಇದೆಲ್ಲವನ್ನು ಯಮದೇವರ ರಾಜಧಾನಿಯಾದ ಆ ಸಂಯಮನೀಪುರಕ್ಕೆ ಹೋಗಿ ಪ್ರತ್ಯಕ್ಷವಾಗಿ ಕಂಡು ಬಂದ ನೀನು ನಮಗೆ ಅದನ್ನೆಲ್ಲ ತಿಳಿಸು.'' ಆ ಮುನಿಗಳು ಈ ಪ್ರಶ್ನಾವಳಿಗೆ ನಚಿಕೇತನು ಕೊಟ್ಟ ವಿವರವನ್ನು ವೈಶಂಪಾಯನ ಮುನಿಗಳು ಜನಮೇಜಯ ರಾಜನಿಗೆ ತಿಳಿಸಿ ಹೇಳಿದರು.

**ನಚಿಕೇತ :-** ಮುನಿಗಳೇ ದಯಾಳುವಾದ ಧರ್ಮದೇವನಿಗೆ ನಮಸ್ಕರಿಸಿ ಆ ಯಮಧಾಮದ ಸಮಾಚಾರವನ್ನು ನಿಮಗೆ ಹೇಳುತ್ತೇನೆ ಕೇಳಿ. ಮುನಿಗಳೇ ಆ ಯಮಪುರಿಗೆ ಮೊಟ್ಟಮೊದಲು ಹೋಗತಕ್ಕವರು ಸುಳ್ಳು ಮಾತಾಡುವವರೂ ಮತ್ತೂ ವಿಶ್ವಾಸಘಾತಕರು. ಇದರಂತೆ ಬ್ರಾಹ್ಮಣನನ್ನು ಹೆಣ್ಣುಮಕ್ಕಳನ್ನೂ, ಚಿಕ್ಕ ಮಕ್ಕಳನ್ನೂ ಕೊಂದವನಿಗೆ ನರಕವು ತಪ್ಪಿದ್ದಲ್ಲ. ಪರನಾರಿಯ ಜೊತೆಗೆ ಸರಸವಾಡಿದವನು ನರಕದಲ್ಲಿಯ ನೊರಜಾಗಿ ಕೊಳೆಯುವನು. ಕನ್ಯೆಯನ್ನು ಕೆಡಸಿದವನೂ, ವೇದಗಳನ್ನು ನಿಂದಿಸುವವನೂ, ಹಣ ತೆಗೆದುಕೊಂಡು ಯಜ್ಞ ಮಾಡಿಸುವವನೂ, ಮೃತ್ಯುಲೋಕದಲ್ಲಿ ಕುತ್ತುಗಳಿಗೆ ಒಳಗಾಗುವನು. ಇದರಂತೆ ಸೆರೆಗುಡುಕರೂ, ತಲೆಗಡುಕರೂ, ತಾಯಿ ತಂದೆಗಳನ್ನು ಮುಪ್ಪಿನಕಾಲದಲ್ಲಿ ರಕ್ಷಣೆ ಮಾಡದಿರುವವರೂ ಆ ಯಮಪಟ್ಟಣವನ್ನು ಸೇರುವರು. ನಿರಪರಾಧಿಯಾದ ಮಡದಿಯನ್ನು ಬಿಟ್ಟು ಬಿಡವವನೂ, ಗುರುದ್ರೋಹಿಯೂ, ಹೆರವರ ಹೊಲಮನೆಗಳನ್ನು ಅಪಹರಿಸುವವನೂ, ಮಡಿಮೈಲಿಗೆ

ಮಾಡದಿರುವವರೂ, ವೇದಗಳನ್ನು ಮಾರಾಟ ಮಾಡುವವರೂ, ಮದ್ಯವನ್ನು ಮಾರಿ ಉಪಜೀವಿಸುವವರೂ ಆ ನರಕ ಲೋಕಕ್ಕೆ ಹೋಗಿ ಅಲ್ಲಿಯ ನರಕದಲ್ಲಿ ಬೇಯುತ್ತಾರೆ.

**ಋಷಿಗಳು :-** ನಚಿಕೇತನೇ ಪ್ರಾಣಿಗಳು ಕಲ್ಪಾಂತಕಾಲದವರೆಗೆ ಆ ನರಕ ಯಾತನೆಯನ್ನು ಯಾವ ಶರೀರದಿಂದ ಅನುಭವಿಸುತ್ತಾರೆ ? ವೈತರಣಿ ನದೀ ಎಂದರೆ ಏನು ? ಅದರ ಸ್ವರೂಪವೇನು. ಅದರಲ್ಲಿ ಎಂಥ ನೀರು ಹರಿಯುತ್ತದೆ. ರವರವ ನರಕವೆಂದರೇನು ? ಯಮ ದೂತರು ಹೇಗಿರುವರು. ಅವರ ಕಾರ್ಯವೇನು ? ಶಕ್ತಿ ಎಷ್ಟು ? ಅವರು ಏನೇನು ಮಾಡುವರು. ಇದೆಲ್ಲವನ್ನು ತಿಳಿಸು.

## ಸಂಯಮನೀಪುರದ ಸೌಂದರ್ಯ

**ನಚಿಕೇತ :-** ಬ್ರಾಹ್ಮಣೋತ್ತಮರೇ, ಸಂಯಮನೀಪುರ ಎಂದು ಹೆಸರಾದ ಆ ಪ್ರೇತರಾಜನ ಪಟ್ಟಣವು ಒಂದು ಸಾವಿರ ಯೋಜನ ಅಗಲವಾಗಿದೆ. ಅದರ ಉದ್ದಳತೆ ಎರಡು ಸಾವಿರ ಯೋಜನೆ. ಅದರ ಸುತ್ತಳತೆ ಆರು ಸಾವಿರ ಯೋಜನೆ. ಇಂಥ ದಿವ್ಯ ನಗರಿಯಲ್ಲಿ ಅನೇಕ ಬಂಗಾರದ ಭವ್ಯ ಭವನಗಳು ಕಂಗೊಳಿಸುತ್ತವೆ. ಅಲ್ಲಿಯ ನದಿಗಳು ತಿಳಿನೀರಿನ ತೆರೆಗಳಿಂದ ತುಂಬಿ ಸೂಸುತ್ತವೆ. ಅಲ್ಲಿಯ ಕೆರೆ ಬಾವಿ ಸರೋವರಗಳು ಹೊಂದಾವರೆಗಳಿಂದ ಸುಂದರವಾಗಿ ಒಪ್ಪುತ್ತವೆ. ಅಲ್ಲಿಯ ವನೋಪವನಗಳು ನಂದನವನದ ಸೌಂದರ್ಯದಿಂದ ಕಂಪಿಂಪುಗಳಿಂದ ಗಮಗಮಿಸುತ್ತವೆ. ಆ ಧರ್ಮರಾಜನ ನಗರದಲ್ಲಿ ತಮ್ಮ ತಮ್ಮ ಕರ್ಮಗಳಿಂದ ಸ್ಥೂಲ ಸೂಕ್ಷ್ಮ ರೂಪಗಳನ್ನು ಧರಿಸಿದ ಅನೇಕಾನೇಕ ಜೀವಜಂತುಗಳು ಇರುತ್ತವೆ. ಅಲ್ಲಿ ಕೆಲವರು ಆನಂದದಿಂದ ನಕ್ಕು ನಲಿದು ಹಾಡಿಪಾಡಿ ಸಂತಸದಿಂದ ಕುಣಿದಾಡುತ್ತಿದ್ದರು. ಮತ್ತೆ ಹಲವರು ತಮ್ಮ ಘೋರವಾದ ಕರ್ಮ ವಿಪಾಕದಿಂದ ಯಮಯಾತನೆಗಳನ್ನು ಅನುಭವಿಸುತ್ತ ದುಃಖ ಪಡುತ್ತಿದ್ದರು. ಆ ಯಮಧರ್ಮನ ರಾಜ್ಯದಲ್ಲಿ ಪುಷ್ಪೋದಕಾ ಎಂಬ ತಿಳಿನೀರಿನ ತರಂಗಿಣಿಯು ಮಂಜುಳನಾದದಿಂದ ತುಂಬಿ ಹರಿಯುತ್ತದೆ. ಅದರ ದಂಡೆಯಲ್ಲಿ ಫಲಪುಷ್ಪ ಭರಿತವಾದ ಸಹಸ್ರಾರು ಹೆಮ್ಮರಗಳು ಚಿಗಿತು ಚೆಲ್ವರಿದು ಕುಡಿ ಮಿಡಿಗಳಿಂದ ದಾಂಗುಡಿ ಇಟ್ಟು, ಕಣ್ಸೆಳೆಯುತ್ತವೆ. ಆ ನದಿಯ ತಿಳಿನೀರಿನಲ್ಲಿ ದೇವಾಂಗನೆಯರು ಜಲಕ್ರೀಡೆಯನ್ನು ಆಡುವರು. ಗಂಧರ್ವರಮಣಿಯರು ಮಧುರ ಕಂಠದಿಂದ ಅಲ್ಲಿಯ ತೀರದ ಲತಾ ಕುಂಜಗಳಲ್ಲಿ ಕುಳಿತು ಹಾಡುವರು. ಹೀಗೆ ಸಾವಿರಾರು ದೇವತಾ ದಂಪತಿಗಳು ಅಲ್ಲಿಯ ನದೀ ತಟಾಕದ ಭವನೋಪವನಗಳಲ್ಲಿ ಸ್ವಚ್ಛಂದ ವಿಹಾರವನ್ನು ಮಾಡುವರು. ಆ ಧರ್ಮರಾಜನ ರಾಜಧಾನಿಯ ವೈಭವ ಹಾಗೂ ರಮಣೀಯತೆಗಳನ್ನು ಎಷ್ಟು ಬಣ್ಣಿಸಿದರೂ ಸಾಲದು. ಎಷ್ಟು ದಿನ ಹೊಗಳಿದರೂ ತೀರದು.

## ಯಮನೂರಿನ ರುದ್ರ ರಮ್ಯತೆ

**ನಚಿಕೇತ :-** ಆ ಧರ್ಮರಾಜನ ನಗರಿಯ ಗೋಪುರ ದ್ವಾರವು ಹತ್ತು ಯೋಜನ ಅಗಲವೂ ಇಪ್ಪತ್ತು ಯೋಜನ ಉದ್ದವೂ ಆಗಿದ್ದು ಮುಗಿಲಿಗೆ ಮುದ್ದಿಡುತ್ತದೆ. ಪ್ರಾಕಾರದಿಂದ ಸುತ್ತುವರಿಯಲ್ಪಟ್ಟ ಅಲ್ಲಿಯ ಅಗಸಿಯ ಬಾಗಿಲವು ಕಾಂತಿಯಿಂದ

ದೇದೀಪ್ಯಮಾನವಾಗಿ ಕಳಕಳಿಸುತ್ತಲಿದೆ. ದೇವತೆಗಳೂ ಋಷಿಗಳೂ ಈ ಪುರದ್ವಾರದಿಂದ ಈ ಯಮನೂರಿನಲ್ಲಿ ಪ್ರವೇಶ ಮಾಡುತ್ತಾರೆ. ಈ ಪಟ್ಟಣದ ದಕ್ಷಿಣ ಬಾಗಿಲವು ಮಾತ್ರ ಕಬ್ಬಿಣದಿಂದ ನಿರ್ಮಿತವಾಗಿದ್ದು ಬೆಂಕಿಯಿಂದ ಕಾಯ್ದು ಕೆಂಪಗಾದಂತೆ ಜ್ವಲಿಸುತ್ತಿರುತ್ತದೆ. ಪಾಪಿಷ್ಠರೂ ದುರಾತ್ಮರೂ ರಾಕ್ಷಸರೂ ಕೊಲೆಗಾರರೂ ಈ ಮೃತ್ಯು ಪಟ್ಟಣವನ್ನು ಇದೇ ಬಾಗಿಲದಿಂದ ಪ್ರವೇಶಿಸುವರು. ಆ ಪ್ರೇತಪುರಿಯ ಪಶ್ಚಿಮದ ಬಾಗಿಲವು ಅತ್ತಿಯ ಮರದ್ದಿದ್ದು ಅವಿಚೀಕ ಎಂದು ಅದರ ಹೆಸರು. ಬೆಂಕಿಯ ಉರಿಗಳಿಂದ ಧಗಧಗಿಸುತ್ತಿರುವ ಅದನ್ನು ಕಣ್ಣಿನಿಂದ ಕೂಡ ನೋಡಲಿಕ್ಕೆ ಆಗುವದಿಲ್ಲ. ಇದೂ ಕೂಡ ದುಷ್ಕರ್ಮಿಗಳ ಪ್ರವೇಶಕ್ಕಾಗಿ ಯಮದೇವರು ನಿರ್ಮಿಸಿದ ಭಯಂಕರವಾದ ಬಾಗಿಲವಾಗಿದೆ. ರಮಣೀಯವಾದ ಆ ಸಂಯಮನೀಪುರದಲ್ಲಿ ಅತ್ಯಂತ ಮನೋಹರವೂ ರತ್ನ ಖಚಿತವೂ ಆದ ಒಂದು ದಿವ್ಯ ಧರ್ಮ ಸಭೆ ಇದೆ. ಯಮನಿಂದ ನಿಯಮಿತವಾದ ಆ ಸಭೆಯಲ್ಲಿ ಮನು, ಅತ್ರಿ, ಆಪಸ್ತಂಭ, ವೇದವ್ಯಾಸ, ಬೃಹಸ್ಪತಿ, ಶುಕ್ರ, ಗೌತಮ, ಭೃಗು, ಅಂಗಿರಸ ಮೊದಲಾದ ಮುನಿಗಳು ಧರ್ಮದ ವಿಚಾರಗಳನ್ನು ಮಾಡುತ್ತಿರುತ್ತಾರೆ.

ಈ ಎಲ್ಲ ಮುನಿಮಹರ್ಷಿಗಳ ಮಧ್ಯದಲ್ಲಿ ಸರ್ವಾಲಂಕಾರ ಭೂಷಿತನಾಗಿ ಯಮಧರ್ಮನು ಕುಳಿತುಕೊಂಡಿರುತ್ತಾನೆ. ಆ ಧರ್ಮರಾಜನ ತಲೆಯ ಮೇಲೆ ಬ್ರಹ್ಮದೇವರು ಇಟ್ಟ ರತ್ನಕಿರೀಟವು ಹೊಳೆಯುತ್ತದೆ. ಆ ಯಮಧರ್ಮನ ಪಕ್ಕದಲ್ಲಿಯೇ ಹುಬ್ಬುಗಂಟು ಹಾಕಿ ವಿಕಾರ ಮುಖದ ಓರ್ವ ಭೀಕರ ಪುರುಷನು ಕುಳಿತುಕೊಂಡಿರುತ್ತಾನೆ. ಕೆಂಪು ಬಣ್ಣದ ದಪ್ಪ ದೇಹದ ಆ ಧಾಂಡಿಗ ವ್ಯಕ್ತಿಯೇ ಕಾಲ ಪುರುಷ. ಯಮಧರ್ಮನ ಆಜ್ಞೆಯನ್ನು ಅವನು ಕಾರ್ಯಗತಗೊಳಿಸುತ್ತಾನೆ. ಅದೇ ಧರ್ಮರಾಜನ ಸಭೆಯಲ್ಲಿ ಮಹಾತೇಜಸ್ವಿಯೂ, ಮುಪ್ಪು ಮರಣಗಳನ್ನು ಮೀರಿದವನೂ ಆದ ಮೃತ್ಯುವನ್ನು ನಾನು ನೋಡಿದೆನು. ಆ ಮೃತ್ಯುವಿನ ಜೊತೆಗೆ ಸರ್ವ ಜೀವರನ್ನೂ ಎಚ್ಚರಗೊಳಿಸುವ ಗಮಕಿಗಳೂ, ಹಾಸ್ಯಗಾರರೂ, ಜ್ಞಾನಿಗಳೂ ಇರುತ್ತಾರೆ.

ನಾನಾ ಬಗೆಯ ಜ್ವರಗಳೂ, ಬೇರೆ ಬೇರೆ ರೋಗಗಳೂ, ಹಲವಾರು ಪಾಪಗಳೂ ಸ್ತ್ರೀಪುರುಷ ರೂಪದಿಂದ ಆ ಯಮ ಪಟ್ಟಣದಲ್ಲಿ ಓಡಾಡುತ್ತಿದ್ದವು. ವಿಕಾರ ರೂಪ ಉಳ್ಳ ಅನೇಕ ಪಿಶಾಚಗಳೂ, ದೆವ್ವಗಳೂ, ಭೂತಗಳೂ ತಮ್ಮ ಗೂಟಗಿವಿಯನ್ನು ನಿಮಿರಿಸಿ ತಮ್ಮ ಹಲವಾರು ಕೈಗಳನ್ನು ಬೀಸಾಡುತ್ತ ಭಯಂಕರವಾಗಿ ಅಲ್ಲಿ ತಿರುಗಾಡುತ್ತಿದ್ದವು. ಆ ಯಮ ಪಟ್ಟಣದಲ್ಲಿ ಸುರೂಪಿಗಳೂ, ಕುರುಪಿಗಳೂ, ಶಾಂತರೂ ಭೀಕರರೂ, ಸುಖಿಗಳೂ, ಪಾಪಿಗಳೂ, ಪುಣ್ಯವಂತರೂ, ದಾನವರೂ, ಮಾನವರೂ ಮತ್ತು ಪಶುಪಕ್ಷಿಗಳೂ ಎಲ್ಲರೂ ಇದ್ದುದು ನನಗೆ ಕಂಡು ಬಂದಿತು.

## ಯಮಪುರಿಯ ಎರಡು ದೃಶ್ಯಗಳು

**ನಚಿಕೇತ :-** ಯಮ ಪಟ್ಟಣದ ಆ ಧರ್ಮ ಸಭೆಯಲ್ಲಿ ನಾನು ಇಲ್ಲಿಂದ ಹೋಗಿ ನೇರವಾಗಿ ಪ್ರವೇಶ ಮಾಡಿದೆನು. ನನ್ನನ್ನು ಕಂಡ ಕೂಡಲೇ ನಾನೊಬ್ಬ ಋಷಿ ಕುಮಾರನೆಂದು ತಿಳಿದು ಯಮದೇವರು ದಯಮಾಡಿ ದರ್ಶನವನ್ನು ಕೊಟ್ಟದ್ದಲ್ಲದೇ ವಿಧಿಪೂರ್ವಕವಾಗಿ ನನ್ನನ್ನು ಸತ್ಕರಿಸಿದನು. ನನ್ನ ಎದುರು ಕೂಡಲು ಆಸನವನ್ನು

ಇಟ್ಟರು. ಪ್ರೀತಿಯಿಂದ ಅರ್ಘ್ಯವನ್ನೂ ಕೊಟ್ಟರು. ಮಮತೆಯಿಂದ ಮಧುಪರ್ಕವನ್ನು ನೀಡಿದರು. ಸ್ವಾಗತ ಸತ್ಕಾರವನ್ನು ಮಾಡಿದರು. ಅವರು ನನ್ನನ್ನು ಕೂಡಿಸಿದ ಆಸನದ ಮೇಲೆ ದರ್ಭೆಯನ್ನು ಹಾಸಿದ್ದರೂ ಅದು ಕೇವಲ ಬಂಗಾರದಿಂದಲೇ ರಚಿತವಾಗಿತ್ತು. ಅವನ ಕೆಂಪಾದ ಕಣ್ಣುಗಳು ನನ್ನನ್ನು ಕಂಡಕೂಡಲೇ ಉಷಃಕಾಲದಲ್ಲಿ ಅರಳಿದ ತುಂಬು ತಾವರೆಯಂತೆ ಉತ್ಫುಲ್ಲವಾದವು. ಸ್ನೇಹಪೂರ್ಣವಾದ ದೃಷ್ಟಿಯಿಂದ ಆ ಯಮಧರ್ಮ ರಾಯನು ನನ್ನೆಡೆಗೆ ನೋಡಿದಾಗ ನನಗೂ ಧೈರ್ಯಬಂದಿತು. ಆಗ ನಾನು ಧರ್ಮ ದೇವತೆಯಾದ ಆ ಪ್ರೇತ ಪತಿಯನ್ನು ಭಕ್ತಿಯಿಂದ ಸ್ತೋತ್ರ ಮಾಡಿದೆ.

"ತ್ವಂ ಧಾತಾ ಚ ವಿಧಾತಾ ಚ ಶ್ರಾದ್ಧೇ ಚೈವ ಹಿ ಪೂಜ್ಯಸೇ
ಪಿತೃಣಾಂ ಪರಮೋ ದೇವಃ ಚತುಷ್ಪಾದ ನಮೋಸ್ತು ತೇ ॥
ಕಾಲಜ್ಞಶ್ಚ ಕೃತಜ್ಞಶ್ಚ ಸತ್ಯವಾದೀ ದೃಢವ್ರತಃ
ಪ್ರೇತನಾಥ ಮಹಾಭಾಗ ಧರ್ಮರಾಜ ನಮೋಸ್ತು ತೇ ॥
ದಂಡಪಾಣೇ ವಿರೂಪಾಕ್ಷ ಪಾಶಹಸ್ತ ನಮೋಸ್ತುತೇ ।
ಆದಿತ್ಯ ಸದೃಶಾಕಾರ ಸರ್ವ ಜೀವಹರ ಪ್ರಭೋ ॥
ಕೃಷ್ಣ ವರ್ಣ ದುರಾಧರ್ಷ ತೈಲರೂಪ ನಮೋಸ್ತುತೇ ।
ಹವ್ಯಕವ್ಯವಹಸ್ತ್ವಂ ಹಿ ಪ್ರಭು ವಿಷ್ಣೋ ನಮೋಸ್ತು ತೇ ॥

ಹೀಗೆ ಭಕ್ತಿಯಿಂದ ಸ್ತುತಿಸಿದ ನನ್ನ ಪ್ರಾರ್ಥನೆಯನ್ನು ಕೇಳಿ ಪ್ರೀತಪ್ರಸನ್ನನಾದ ಯಮದೇವನು ಇಂತು ನುಡಿದನು - "ಬ್ರಾಹ್ಮಣೋತ್ತಮ, ನಿನ್ನ ಈ ಸ್ತೋತ್ರದಿಂದ ನಾನು ಪ್ರಸನ್ನನಾಗಿದ್ದೇನೆ. ನಿನಗೆ ಏನು ವರಬೇಕು ಕೇಳು." ಯಮಧರ್ಮನ ಆ ಮಾತಿಗೆ ನಾನು ಕೈ ಮುಗಿದು "ದೇವಾ, ನೀನು ನನಗೆ ವರ ಕೊಡುವದಾದರೆ ನಿನ್ನ ಸಮಗ್ರ ಪಟ್ಟಣವನ್ನೆಲ್ಲ ನನಗೆ ತೋರಿಸು. ಪಾಪಿಷ್ಠರಿಗೂ ಪುಣ್ಯವಂತರಿಗೂ ಯಾವ ಗತಿ ಯುಂಟಾಗುವದು ಎಂಬುದನ್ನು ನನಗೆ ಕಾಣಿಸು. ಮತ್ತು ನಿನ್ನ ಕಾರ್ಯಾರ್ಥ ಚಿಂತಕನಾದ ಚಿತ್ರಗುಪ್ತನನ್ನು ತೋರಿಸು. ಅವನ ಕಾರ್ಯವೇನು ಎಂಬುದನ್ನು ನನಗೆ ತಿಳಿಸಿಕೊಡು." ನನ್ನ ಬಿನ್ನಹವನ್ನು ಕೇಳಿ ಯಮದೇವನು ತನ್ನ ಸೇವಕನನ್ನು ಕರೆದು ನನ್ನನ್ನು ಚಿತ್ರಗುಪ್ತನೆಡೆಗೆ ಕರೆದುಕೊಂಡು ಹೋಗಲಿಕ್ಕೆ ಅಪ್ಪಣೆ ಮಾಡಿದನು. ಮತ್ತು ಅವನಿಗೆ "ಭೂಲೋಕದಿಂದ ಬಂದ ಈ ಬ್ರಾಹ್ಮಣನಿಗೆ ನಮ್ಮಲ್ಲಿಯ ಎಲ್ಲ ವ್ಯವಸ್ಥೆ ವಿಧಾನಗಳನ್ನು ಸರಿಯಾಗಿ ತಿಳಿಸಿಕೊಡಬೇಕು" ಎಂದು ಹೇಳಿ ಕಳಿಸಿದನು. ಅವನ ಅಣತಿಯಂತೆ ಆ ದೂತನು ನನ್ನನ್ನು ಕಂಡ ಕೂಡಲೇ ಆದರದಿಂದ ಸ್ವಾಗತಿಸಿ ಸುಖಾಗಮನವನ್ನು ಹೇಳಿ ನನ್ನನ್ನು ಕರೆದೊಯ್ದು ಆ ಪ್ರೇತಪುರಿಯ ಅಧಿಕಾರಿಯಾದ ಚಿತ್ರಗುಪ್ತನನ್ನು ತೋರಿಸಿದನು. ಆ ಚಿತ್ರಗುಪ್ತನು ನನಗೆ ಸುಸ್ವಾಗತವನ್ನು ಕೋರಿ ಯಥೇಷ್ಟವಾಗಿ ಮನಬಂದತ್ತ ಸಂಚರಿಸಬಹುದು ಎಂದು ಹೇಳಿ ತನ್ನ ದೂತರಿಗೆ ಅಪ್ಪಣೆ ಇತ್ತನು -

"ದೂತರೇ, ಭೂಲೋಕದ ಈ ಬ್ರಾಹ್ಮಣನು ಈ ಯಮಪುರಿಯಲ್ಲಿಯ ಪ್ರೇತಾವಾಸವನ್ನು ನೋಡಲಿಕ್ಕಾಗಿ ಬಂದಿದ್ದಾನೆ. ಇವನಿಗೆ ಆಯಾಸವಾಗದಂತೆ ಎಲ್ಲವನ್ನು ತೋರಿಸಿರಿ. ಹಸಿವೆ ಬಾಯಾರಿಕೆಗಳಿಂದ ಬಳಲಿಕೆಯಾಗದಂತೆ ಇವನಿಗೆ ನರಕ

ಲೋಕದ ನರಳಿಕೆ, ಒರಳಿಕೆಗಳೂ, ಸಾವು ನೋವುಗಳೂ ಕಣ್ಣಿಗೆ ಕಾಣುವಂತೆ ಚೆನ್ನಾಗಿ ತೋರಿಸಿರಿ.'' ಚಿತ್ರಗುಪ್ತನು ತನ್ನ ದೂತರಿಗೆ ಹೀಗೆ ಆಜ್ಞೆ ಇತ್ತು ಅನಂತರ ನನ್ನ ಕಡೆಗೆ ತಿರುಗಿ ''ಹೋಗು ಚಿತ್ರವಿಚಿತ್ರವಾದ ಈ ನರಕದ ಪ್ರಪಂಚವನ್ನು ನೋಡಿಕೊಂಡು ಬಾ''ಎಂದು ಹೇಳಿದನು. ಆ ದೂತನು ನನ್ನನ್ನು ಘೋರವಾದ ಅಲ್ಲಿಯ ಯಾತನಾಮಯ ಪ್ರಪಂಚಕ್ಕೆ ಕರೆದುಕೊಂಡು ಹೋದನು.

ಅಲ್ಲಿಯ ನರಕದ ದೃಶ್ಯವು ನನಗೆ ನೋಡಿದ ಕೂಡಲೇ ನಡುಕವನ್ನೇ ಹುಟ್ಟಿಸಿತು. ಮರುಕ್ಷಣದಲ್ಲಿ ಮನದಲ್ಲಿ ಮರಕವೂ ಮೂಡಿತು. ಸಾಕ್ಷಾತ್ ಮೃತ್ಯುದೇವತೆಯಂತೆ ತೋರುವ ವಿಕರಾಳ ವೇಷದ ಯಮದೂತರು ಪಾಪಿಗಳನ್ನು ಬೇಟೆ ಯಾಡಿದಂತೆ ಹಾರಿ ಹಿಡಿಯುತ್ತಿದ್ದರು. ಏರಿ ಹೊಡೆಯುತ್ತಿದ್ದರು. ಮುಷ್ಟಿ ಪ್ರಹಾರಗಳಿಂದ ಅವರ ತಲೆಯನ್ನೇ ಒಡೆಯುತ್ತಿದ್ದರು. ಹೀಗೆ ಕ್ರೂರರಾದ ಯಮಭಟರಿಂದ ಹೊಡೆತ, ಬಡೆತ, ಕಡಿತಗಳನ್ನು ತಿಂದ ಪಾಪಾತ್ಮರು ತಮ್ಮನ್ನು ಪಾರು ಮಾಡುವವರನ್ನು ಕಾಣದೇ ಚೀರಾಡಿ ಅಳುತ್ತಿದ್ದರು. ಆ ಯಮದೂತರಿಂದ ಹೊಡೆದು ಕಡೆದು ಬಡಿಯಲ್ಪಟ್ಟ ಪಾಪಿಷ್ಠ ದುಷ್ಕರ್ಮಿಗಳ ಛಿನ್ನ ವಿಚ್ಛಿನ್ನವಾದ ಅಂಗಾಂಗಳಿಂದ ರಕ್ತವು ಕೋಡಿಟ್ಟು ಹರಿಯುತ್ತಿತ್ತು.

ಪಾತಕಿಗಳ ಯಾತನಾಮಯ ಶರೀರದಿಂದ ಹೊರಟ ರಕ್ತದ ಪ್ರವಾಹವು ವೈತರಣೀ ಎಂಬ ನದಿಯು ಆಗಿದೆ. ಹಲವಾರು ಯಮದೂತರು ಕೆಲವಾರು ಸಹಸ್ರ ಪಾಪಜೀವಿಗಳನ್ನು ಶೂಲಕ್ಕೇರಿಸಿ ಅನಂತರ ಕಾಲುಹಿಡಿದೆತ್ತಿ ಆ ವೈತರಣೀ ನದಿಯಲ್ಲಿ ಬಿಸುಡುವರು. ಆ ನದಿಯ ನೆತ್ತರವು ಜ್ವಾಲಾಮುಖಿಯ ಲಾವಾರಸದಂತೆ ಕಾದು ಕುದಿಯುತ್ತಿರುತ್ತದೆ. ಅದರಲ್ಲಿ ಬಿದ್ದು ಬೇಯುತ್ತಲಿರುವ ಪಾಪಿಗಳನ್ನು ಸಾವಿರಾರು ಸರ್ಪಗಳು ತಮ್ಮ ವಿಷದ ಹಲ್ಲುಗಳಿಂದ ಕಚ್ಚಿಹಾಕುವವು. ಭಯಂಕರವಾದ ವೇದನೆಯಿಂದ ನರಳುತ್ತಿರುವ ಮತ್ತು ಆ ವೈತರಣಿಯ ರಕ್ತದ ಪ್ರವಾಹದ ಕೆಲವು ಸುಳಿವುಗಳಲ್ಲಿ ಸಿಕ್ಕು ಒದ್ದಾಡಿ ಮುಳುಗಿ ಮತ್ತೆ ಮೇಲೆ ಏಳುತ್ತಿರುವ ಆ ಪ್ರಾಣಿಗಳನ್ನು ಅಲ್ಲಿ ಕಾಯುವವರೇ ಇಲ್ಲ.

ಬೇರೆ ಹಲವಾರು ಪಾಪಿಗಳನ್ನು ಘೋರ ಯಮದೂತರು ಉಕ್ಕಿನ ಮುಳ್ಳುಗಳಿಂದ ಭಯಂಕರವಾದ ಬೂರಗದ ಮರಕ್ಕೇರಿಸಿ ಖಡ್ಗಗಳಿಂದ ಹೊಡೆಯುತ್ತಿದ್ದರು. ಆ ಹೊಡೆತವನ್ನು ತಾಳಲಾರದೇ ಪಾಪಿ ಜೀವಿಗಳು ಆ ಮರದ ಮುಳ್ಳುಗಳನ್ನು ಚುಚ್ಚಿಸಿಗೊಳ್ಳುತ್ತ ಮೇಲೇರಿ ಕೊಂಬೆಗಳನ್ನು ಸಾರಿದಾಗ ಅಲ್ಲಿರುವ ಮಾಂಸ ಭಕ್ಷಕರಾದ ರಾಕ್ಷಸರೂ ಪಿಶಾಚಿಗಳೂ ಹಿಡಿದು ಹೊಡೆಯುವರು. ಕೋತಿಗಳಂತೆ ಕಚ್ಚಿ ರಕ್ತ ಹೀರಿ ಮಾಂಸವನ್ನು ತಿಂದು ಮಾವಿನ ಹಣ್ಣಿನ ಗೊರಟದಂತೆ ಸಿಪ್ಪೆ ಮಾಡಿ ನೆಲಕ್ಕೆ ಬಿಸುಟುವರು.

ಇನ್ನೂ ಎಷ್ಟೋ ಪಾಪಿಗಳ ಮೈಮೇಲೆ ಕಲ್ಲು ಮಣ್ಣನ್ನು ಸುರಿಸಲಾಗಿ ಅವರು ಅಲ್ಲಿಂದ ಓಡಿ ಮರದ ನೆರಳಿಗೆ ಹೋಗುವರು. ಆ ನೆರಳಿನಲ್ಲಿ ಅಗ್ನಿ ಜ್ವಾಲೆಗಳು ಎದ್ದು ಅವರ ಅಂಗಾಂಗಗಳನ್ನೆಲ್ಲ ಸುಟ್ಟು ಬಿಡುವವು. ಅವರು ಅಲ್ಲಿಂದ ಅರ್ಧದಗ್ಧರಾಗಿ ಹಾಗೇ ಮುಂದೋಡುತ್ತ ಉರಿಯ ಝಳವನ್ನು ತಾಳಲಾರದೇ ನೀರು ನೀರು ಎಂದು ಚೀರುವರು. ಆಗ ಯಮದೂತರು ಕಾದ ಎಸರು ನೀರನ್ನು ಕುಡಿಯಲು ಕೊಡುವರು. ಆದರಿಂದ ಅವರ ನಾಲಿಗೆ, ಗಂಟಲು, ಹೊಟ್ಟೆ ಎಲ್ಲವೂ ಸುಟ್ಟು ಅವರು ಪರಸ್ಪರ ಅಪ್ಪಿಕೊಂಡು ಅಳುತ್ತ

ದುಃಖದಿಂದ ನೆಲದಮೇಲೆ ಆರ್ತರಾಗಿ ಬೀಳುವರು. ಇವರ ಕಣ್ಣೆದುರೇ ಪುಣ್ಯ ಜೀವಿಗಳು ವಿವಿಧ ಭಕ್ಷ್ಯಭೋಜನಗಳನ್ನು ಮಾಡುತ್ತಲಿರುವರು. ದಿವ್ಯ ಗಂಧವನ್ನು ಲೇಪಿಸಿಕೊಂಡು ಹೂಮಾಲೆಗಳನ್ನು ಹಾಕಿಕೊಂಡ ಆ ಭಾಗ್ಯವಂತರಿಗೆ ಅನೇಕ ಉತ್ತಮ ಸ್ತ್ರೀಯರು ರತ್ನ ಕಲಶಗಳಿಂದ ಸ್ನಾನ ಮಾಡಿಸಿ ಬಂಗಾರದ ಪಾತ್ರೆಗಳಲ್ಲಿ ಮೃಷ್ಟಾನ್ನ ಭೋಜನ ಮಾಡಿಸುವರು. ಹಾಲು ಮೊಸರು, ಪಾಯಸ, ತುಪ್ಪ, ಜೇನುತುಪ್ಪ, ಬಗೆಬಗೆಯ ಭಕ್ಷ್ಯಭೋಜ್ಯ, ದ್ರಾಕ್ಷಾರಸ ಮೊದಲಾದ ವಿವಿಧ ಪಾನೀಯಗಳಿಂದ ಭೋಜನ ಮಾಡುತ್ತಲಿರುವ ಆ ಸುದೈವಿಗಳ ಎಲೆಯಲ್ಲಿ ಬಡಿಸಿದ ಪಕ್ವಾನ್ನಗಳ ಘಮಘಮ ವಾಸನೆಯು ಬಡೆದು ಅವುಗಳನ್ನು ನೋಡಿ ಈ ಪಾಪಿ ಜೀವಿಗಳೆಲ್ಲ ಆಶೆಯಿಂದ ಬಾಯಲ್ಲಿ ನೀರು ಬಿಟ್ಟು ಜೊಲ್ಲು ಸುರಿಸುವವು. ಅವರನ್ನು ಯಮದೂತರು ಹೊಡೆದುಬಡೆದು ''ಪಾಪಿಗಳೇ, ನಿಮಗೆ ದೇವರು ಐಶ್ವರ್ಯ ಕೊಟ್ಟಿದ್ದರೂ ನೀವು ದಾನ ಧರ್ಮ ಮಾಡಲಿಲ್ಲ. ಅಲ್ಪ ಸುಖಕ್ಕಾಗಿ ಮಹಾ ಪಾಪವನ್ನು ಮಾಡಿದಿರಿ. ಜನರನ್ನು ವಂಚಿಸಿದಿರಿ. ಅದಕ್ಕಾಗಿ ಇಂಥ ಘೋರ ನರಕ ಯಾತನೆಯನ್ನು ಅನುಭವಿಸುತ್ತಲಿರುವಿರಿ. ಪುಣ್ಯ ಮಾಡಿದ ಜೀವಿಗಳು ನಿಮ್ಮ ಕಣ್ಣೆದುರೇ ಎಂಥ ಸುಖವನ್ನು ಅನುಭವಿಸುತ್ತಲಿರುವರು ನೋಡಿರಿ'' ಎಂದು ಹೊಡೆದು ಹೇಳುತ್ತಿದ್ದರು. ಹೇಳಿ ಹೊಡೆಯುತ್ತಿದ್ದರು.

## ನರಲೋಕದ ದಾರುಣದೃಶ್ಯ

**ನಚಿಕೇತ :-** ಆ ಯಮಲೋಕದಲ್ಲಿ ಒಂದು ಕಡೆ ನೆಲವೆಲ್ಲವೂ ಹಳ್ಳತಿಟ್ಟುಗಳುಳ್ಳದ್ದಾಗಿ ಉಕ್ಕಿನ ಮುಳ್ಳುಗಳಿಂದ ತುಂಬಿ ಹೋಗಿದೆ. ಮೇಲೆ ಅಲ್ಲಿ ಸುತ್ತಲೂ ಘೋರ ಕತ್ತಲು ಕವಿದಿದೆ. ಅಲ್ಲಿ ಹೋದ ಪಾತಕಿಗಳು ಕೈಕಾಲು ಕತ್ತರಿಸಿಕೊಂಡು ಅಲ್ಲಿಯೇ ಒದ್ದಾಡುತ್ತ ಬಿದ್ದಿರಬೇಕಾಗುವದು. ಅವರಿಗೆ ಈಚೆಗೆ ಬರಲಿಕ್ಕೆ ಆಗುವದಿಲ್ಲ. ಈ ಪ್ರಪಂಚದಲ್ಲಿ ಧರ್ಮಕರ್ಮಗಳನ್ನು ಮಾಡಿದ ಪುಣ್ಯವಂತರು ಮಾತ್ರ ಆ ಯಮಲೋಕದಲ್ಲಿಯೂ ಹೃಷ್ಟಪುಷ್ಟಾಂಗರಾಗಿ ಸುಖದಿಂದಲೇ ಇರುವರು. ಇಂದಿರೆಯಂತೆ ಸುಂದರಿಯಾದ ಚಲುವಿನ ಹೆಂಗಳೆಯರು ಅವರ ಸೇವೆಗೆ ಸದಾ ಸಿದ್ಧರಾಗಿರುವರು. ಬಿಸಿನೀರಿನಿಂದ ಅವರಿಗೆ ಸ್ನಾನ ಮಾಡಿಸಿ ಕುಡಿಯಲು ತಣ್ಣೀರು ತನಿವಣ್ಣುಗಳನ್ನು ಆ ಚಲುವಿನ ಹೆಣ್ಣುಗಳು ಪುಣ್ಯಾತ್ಮರಿಗೆ ನೀಡುವರು. ಮೃಷ್ಟಾನ್ನಗಳನ್ನು ಉಣಿಸುವರು. ಆದರೆ ಪಾಪಿಗಳನ್ನು ಮಾತ್ರ ಬೆಂಕಿಯಲ್ಲಿ ಬೇಯಿಸುವರು. ಕಾದ ಹಂಚಿನ ಮೇಲೆ ಹಾಕುವರು. ಘೋರವಾದ ನಾಯಿಗಳು ಅವರನ್ನು ಮೈತುಂಬ ಕಚ್ಚುವವು. ಭೂಲೋಕದಲ್ಲಿ ವ್ಯಭಿಚಾರ ಮಾಡಿದ ಪಾಪಿಗಳನ್ನು ಬೆಂಕಿಯ ಬೊಂಬೆಗಳು ಬಂದು ಬಿಗಿದಪ್ಪಿ ಅವನು ಹಿಂದೆ ಮಾಡಿದ ಸ್ತ್ರೀ ಸಂಗವನ್ನು ಹಂಗಿಸುವರು. ಬೆಂಕಿಯಲ್ಲಿ ಕಾಯ್ದ ಅತಿ ಭಯಂಕರವಾಗಿರುವ ಉಕ್ಕಿನಿಂದ ನಿರ್ಮಿತ ನಾರಿಯು ಪಾಪಿಯನ್ನು ಆಲಂಗಿಸಿಕೊಂಡು ತಪ್ಪಿಸಿಕೊಂಡೋಡುವ ಅವನನ್ನು ಹಿಂದಟ್ಟಿಸಿಕೊಂಡು ಬರುವಳು, ಹಾಗೆ ಹಿಂಬಾಲಿಸಿ ಓಡುತ್ತ ಆ ಪಾಪಿಗೆ ಹೀಗೆ ಹೇಳುವಳು '' ಪಾಪಿಯೇ, ನಾನು ನಿನ್ನ ಸಹೋದರಿ. ನಾನು ನಿನ್ನ ಸೊಸೆ. ದುರ್ಬುದ್ಧಿಯೇ, ನಾನು ನಿನ್ನ ತಾಯಿಯ ಸಹೋದರಿ. ಸೋದರಮಾವನ ಹೆಂಡತಿ. ಸೋದರತ್ತೆ. ಗುರು ಪತ್ನಿ, ಮಿತ್ರ ಪತ್ನಿ. ಸಹೋದರ ಪತ್ನಿ. ರಾಜಪತ್ನಿ. ಶ್ರೋತ್ರಿಯರಾದ ದ್ವಿಜರ ಪತ್ನಿಯರೊಡನೆ ನೀನು

ಕ್ರೀಡಿಸಿದೆಯಲ್ಲವೇ! ಪಾತಾಳಕ್ಕೆ ಹೋದವನು ಹೇಗೆ ತಪ್ಪಿಸಿಕೊಳ್ಳಲಾರನೋ ಹಾಗೆ ನೀನು ಈ ಪಾಪದಿಂದ ತಪ್ಪಿಸಿಕೊಳ್ಳಲಾರೆ. ನಾಚಿಕೆಗೆಟ್ಟವನೇ, ವ್ಯಸನಗಳಿಗೆ ಸಿಕ್ಕಿದವನಾಗಿ ಏಕೆ ಓಡುತ್ತಿಯೆ ! ಪಾಪಿ ! ನಿನ್ನ ಪಾಪಕ್ಕೆ ತಕ್ಕ ರೀತಿಯಲ್ಲಿ ನಿನ್ನನ್ನು ನಾನು ಹಿಂಸಿಸದೆ ಅಥವಾ ಕೊಲ್ಲದೆ ಬಿಡುವುದೇ ಇಲ್ಲ.'' ಹೀಗೆ ಅವನಿಗೆ ಕೇಳುವಂತೆ ಮತ್ತೆ ಬೋಧಿಸುತ್ತ ಘೋರ ರೂಪವುಳ್ಳ ಭಯಂಕರರಾದ ಸ್ತ್ರೀಯರು ಅಟ್ಟಿಸಿಕೊಂಡು ಓಡುವರು.

ಹಾಗೆಯೇ ಇತರ ಸ್ತ್ರೀಯರೂ ಸಾವಿರಾರು ಜನಜ್ಞಾನಿಗಳ ಮಧ್ಯದಲ್ಲಿ ಸ್ಪಷ್ಟವಾಗಿ ಎಳೆದು ತಂದು ಆ ದುರಾತ್ಮನನ್ನು ಸಮೀಪಿಸಿ ಉಗ್ರವಾಗಿ ಪೀಡಿಸಿ ''ವೃಷಲೀ ಸಂಗದಿಂದ ಅತಿಯಾದ ಸುಖಗಳನ್ನು ಪಡೆದು, ಈಗ ಏಕೆ ಮತ್ತೆ ಮತ್ತೆ ಅಳುತ್ತೀ ! ಬಹು ದುರ್ಬುದ್ಧಿಯೇ, ನಾನಾಗಿ ಆಲಂಗಿಸಿಕೊಂಡಿರುವಾಗ ಏಕೆ ಅಳುತೀಯೆ ! ಪಾಪಿಯೇ, ನಿನ್ನನ್ನು ನಾನು ಹತ್ತುಸಾರಿ ಸೆಳೆದುಕೊಂಡು ಹೋದರೂ ಮತ್ತೆ ಮತ್ತೆ ನನಗೆ ಕೈ ಮುಗಿದು ಬೇಡುವುದಕ್ಕೆ ಲಜ್ಜೆಯಾಗುವುದಿಲ್ಲವೆ ! ಪಾಪತ್ಮನೇ, ನಾನು ನಿನ್ನನ್ನು ಬಿಡುವುದಿಲ್ಲ. ಮೂಢನೇ, ಎಲ್ಲಿ ಹೋಗುತ್ತೀಯೆ ? ಹೀಗೆ ನೀನು ಯಮಾಲಯದಲ್ಲಿ ಎಲ್ಲೆಲ್ಲಿಗೆ ಹೋದರೂ ಪರಸ್ತ್ರೀಗಾಮಿಯಾದ ನಿನ್ನನ್ನು ಹಿಡಿಯದೇ ಬಿಡುವುದಿಲ್ಲ '' ಎಂದು ಬೈದು ಹಿಂಸಿಸುವರು. ಅಲ್ಲಿ ಕೆಲವರು ಪಾಪಿಗಳನ್ನು ಲೋಹದ ಕೋಲುಗಳಿಂದ, ಗೊಲ್ಲರು ಹಸುಗಳನ್ನು ಸಾಮಾನ್ಯವಾದ ಕೋಲಿನಿಂದ ಹೊಡೆಯುವಂತೆ ಮತ್ತೆ ಮತ್ತೆ ಹೊಡೆಯುವರು. ಪಾಪಿಗಳಲ್ಲಿ ಕೆಲವರನ್ನು ಹುಲಿಗಳೂ, ಸಿಂಹಗಳೂ, ನರಿಗಳೂ, ಕತ್ತೆಯ ಆಕಾರದ ರಾಕ್ಷಸರೂ ಉಳಿದವರನ್ನು ಇತರ ಘಾತುಕ ಮೃಗಗಳೂ, ನಾಯಿಗಳೂ, ಕಾಗೆಗಳೂ ತಿನ್ನುವುವು. ಅಲ್ಲಿರುವ ಅಸಿಲತಾವನವೆಂಬುದು ಹೊಗೆಯಿಂದಲೂ, ಉರಿಯಿಂದಲೂ ವ್ಯಾಪ್ತವಾಗಿದೆ. ಕಾಡುಗಿಚ್ಚಿನಂತೆ ಎಲ್ಲಾ ಕಡೆಗಳಲ್ಲಿಯೂ ಉರಿಯಿಂದ ಪ್ರಜ್ವಲಿಸುತ್ತಿದೆ. ಅತಿ ಭೀಷಣರಾದ ಯಮದೂತರು ಪಾಪಿಗಳನ್ನು ಆ ಅಸಿಲತಾವನದಲ್ಲಿ ಹಾಕುವರು. ಅಲ್ಲಿ ಚೆನ್ನಾಗಿ ಉರಿದೂ, ಉರಿಯುತ್ತಲೂ ಇರುವ ಮರಗಳನ್ನು ಆ ಪಾಪಿಗಳು ಅಪ್ಪಿಕೊಳ್ಳುವರು. ಬಳಿಕ ಮರದೊಡನೆ ಸೇರಿಸಿಕೊಂಡಿರುವ ಆ ಮನುಷ್ಯರನ್ನು ಅಸಿಪತ್ರ (ಗರಗಸ)ಗಳಿಂದ ಅನೇಕಸಾರಿ ಕತ್ತರಿಸುವರು. ಅಲ್ಲಿ ಕತ್ತರಿಸಲ್ಪಟ್ಟವರೂ, ಸುಡಲ್ಪಟ್ಟವರೂ, ಹಿಂಸಿಸಲ್ಪಟ್ಟವರೂ, ವಿಕಾರವುಳ್ಳವರೂ ಸಂತಾಪಗೊಂಡು ಎಲ್ಲೆಲ್ಲೂ ಕೂಗಿಕೊಳ್ಳುವರು. ಅಸಿಲತಾವನದ ಬಾಗಿಲಲ್ಲಿರುವ ಅತಿ ಕಠಿಣರಾದ ಮಹಾರಥರು, ಪಾಪಕರ್ಮಗಳಿಂದ ಕೂಡಿದವರನ್ನು ಮುಂದಿನ ಮಾತುಗಳಿಂದ ಧಿಕ್ಕರಿಸುವರು.

''ಎಲೈ ಎಲೈ ಪಾಪಕಾರಿಗಳೇ, ಧರ್ಮಸೇತುವಿನಾಶಕರಾಗಿ ನೀವು ಪಾಪಿಷ್ಠರಾಗಿರುವುದರಿಂದ ಸಾವಿರಾರು ಬಗೆಯ ಯಾತನೆಗಳನ್ನೆಲ್ಲಾ ಅನುಭವಿಸಿ ನೀವು ಮನುಷ್ಯ ಲೋಕಕ್ಕೆ ಹೋದರೆ ಅಲ್ಲಿ ಅತಿ ದರಿದ್ರ ಕುಲಗಳಲ್ಲಿ ಗರ್ಭವಾಸದಿಂದಲೂ ಭೋಗಗಳಿಂದಲೂ ಪೀಡಿತರಾಗಿ ದುರ್ಗತಿಯುಳ್ಳವರಾಗಿ ಜನಿಸುವಿರಿ. ಅಲ್ಲಿ ಅಗ್ನಿ ಜ್ವಾಲೆಯಂತೆ ಉರಿಯುವ, ಅಗ್ನಿಸ್ಪರ್ಶದಂತೆ ಅಸಹ್ಯವಾದ, ಮಹಾ ಧ್ವನಿಯುಳ್ಳ ಅತಿ ಭಯಂಕರವಾದ ಪಕ್ಷಿಗಳೂ, ಹುಲಿಗಳೂ, ನಾಯಿಗಳೂ ಮೊದಲಾದ ಬಹು ವಿಧ

ಮಾಂಸಾಹಾರಿಗಳೂ ಮನುಷ್ಯನನ್ನು ಕೋಪವುಳ್ಳವುಗಳಾಗಿ ತಿನ್ನುವವು. ಹುಲಿ ಕರಡಿಗಳಿಂದಲೂ ಬಹು ದುಃಖಗಳುಳ್ಳ ಆ ಅಸಿಲತಾವನದಲ್ಲಿ ಯಮದೂತರು ಹಾಕಿದ ಬ್ರಾಹ್ಮಣರನ್ನು ನಾನು ನೋಡಿದೆನು. ಅಸಿಪತ್ರ (ಗರಗಸ) ದಿಂದ ಪೂರ್ಣವಾಗಿ ಕತ್ತರಿಸಿ ಹೋಗಿರುವ ಅಂಗಗಳುಳ್ಳವರು ಕೆಲವರು. ಶೂಲದಲ್ಲಿ ಸಿಕ್ಕಿಬಿದ್ದಿರುವರು. ಇದಲ್ಲದೆ ಅಲ್ಲಿ ಮತ್ತೊಂದು ವಿಸ್ತಾರವಾದ ಪ್ರದೇಶವು ಬಹು ವಿಧವಾಗಿ ಭಯಂಕರವಾಗಿದೆ. ಅಲ್ಲಿ ರಕ್ತದ ಕೊಳಗಳೂ, ಬಾವಿಗಳೂ ಸಾವಿರಾರಿವೆ. ಮುನಿವರ್ಯರೇ, ದುರ್ಗಂಧ ಮಾಂಸಕ್ರಿಮಿಗಳ ಮತ್ತು ಅಮೇಧ್ಯದ ಕೊಳ, ನದಿ ಮೊದಲಾದವುಗಳನ್ನು ನಾನು ಅಲ್ಲಿ ನೋಡಿದೆನು. ಅವುಗಳ ಮಧ್ಯದಲ್ಲಿ ಪಾಪಿಗಳು ಸಾವಿರಗಟ್ಟಲೆಯಾಗಿ ಆ ದುರ್ಗಂಧವನ್ನು ಸೇವಿಸುತ್ತಲೂ ಇರುವರು. ರಕ್ತಪಾನಮಾಡುವ ಕ್ರೂರವಾದ ಸಾವಿರಾರು ಪಕ್ಷಿಗಳು ಪಾಪಿಗಳ ಮೇಲೆ ರಕ್ತದಿಂದ ಕೂಡಿರುವ ಅಸ್ಥಿಗಳೆಂಬ ಕಲ್ಲುಗಳ ಮತ್ತು ನಿಜವಾದ ಕಲ್ಲುಗಳ ಮಳೆಯನ್ನು ಸುರಿಸುವುವು. ಹೊಡೆಯಲ್ಪಡುತ್ತಲೂ, ಕೊಲ್ಲಲ್ಪಡುತ್ತಲೂ, ಹಾ ಸತ್ತೆ ಸತ್ತೆ ಎಂದು ಹೇಳುತ್ತಲೂ, ಅಳುತ್ತಿರುವ ಬಹು ಭಯಂಕರವೂ, ಕರುಣಾಜನಕವೂ ಆದ ಶಬ್ದವು ದಿಕ್ಕುಗಳಲ್ಲೆಲ್ಲಾ ತುಂಬಿತು. ಕೆಲವು ಕಡೆ ಕಟ್ಟಲ್ಪಟ್ಟವರೂ ಕೆಲವು ಕಡೆ ತಡೆಯಲ್ಪಟ್ಟವರೂ, ಕೆಲವು ಕಡೆ ಬಹಳ ಹರಿತವಾದ ಆಯುಧಗಳಿಂದ ಕೊರೆಯಲ್ಪಟ್ಟವರೂ, ಕೆಲವೆಡೆ ಸ್ಥೂಲರಾದವರಿಂದ ಬಂಧಿತರಾದವರೂ ಮಾಡುವ ಹಾ ಹಾ ! ಎಂಬ ಭಯಂಕರವಾದ ಶಬ್ದವು ಕೇಳಿಸಿತು. ಮತ್ತೊಂದೆಡೆಯಲ್ಲಿ ಜ್ಞಾಪಿಸಿಕೊಂಡ ಮಾತ್ರದಲ್ಲಿಯೇ ಮನುಷ್ಯನು ಉದ್ವೇಜನ ಗೊಳ್ಳುವಂತಾಗುವ ವಿಚಾರವನ್ನು ನೋಡಿದೆನು.

## ನರಕ ದರ್ಶನ

**ನಚಿಕೇತ :-** ಪಾಪಿಗಳಿಗೆ ತಾಪವನ್ನುಂಟುಮಾಡುವ ಮುಖ್ಯ ನರಕಗಳು ಎಂಟು. ತಪ್ತ, ಮಹಾತಪ್ತ, ರೌರವ, ಮಹಾರೌರವ, ಸಪ್ತತಾಲ, ಕಾಲಸೂತ್ರಕ, ಅಂಧಕಾರ, ಅಂಧಕಾರವರ ಎಂದು. ಈ ಎಂಟೂ ನರಕಗಳಲ್ಲಿ ಒಂದಕ್ಕಿಂತ ಒಂದರಲ್ಲಿ ಹೆಚ್ಚು ದುಃಖ ದುರ್ದೆಶೆಗಳು ಇಮ್ಮಡಿಸುತ್ತಲೇ ಹೋಗುತ್ತವೆ. ಇವುಗಳಲ್ಲಿ ಜೀವಿಗಳು ಹಸಿವೆ ಬಾಯಾರಿಕೆಗಳಿಂದ ಬಳಲಿ ಬೆಂಡಾಗಿ ನೀರನ್ನು ಕಂಡು ಬಾಯಿ ತೆರೆದರೆ ಇವರ ಬಾಯಲ್ಲಿ ಇಳಿಯುವದು ತಣ್ಣೀರಲ್ಲ ಕುದಿಯುವ ಎಸರು ನೀರು. ಲಾವಾರಸವನ್ನು ಇವರ ಹೊಟ್ಟೆಗೆ ಹೊಯ್ಯುವವರು. ಅವರು ಕಾಲಿಟ್ಟಲ್ಲೆಲ್ಲ ನೆಗ್ಗಿನ ಮುಳ್ಳು. ಕೈಚಾಚಿದಲ್ಲೆಲ್ಲ ಉರಿ. ಕಣ್ಣು ತೆರೆದಾಗಲ್ಲೆಲ್ಲ ಮೃತ್ಯು ದೇವತೆಯಂತೆ ವಿಕಟ ಅಟ್ಟ ಹಾಸವನ್ನು ಮಾಡುತ್ತ ಯಮದೂತರು ಹೊಡೆಯಲು ಬರುವರು. ತಮ್ಮ ಮೇಲಿನ ಈ ನರಕ ಯಾತನೆಯನ್ನು ತಪ್ಪಿಸಿಕೊಳ್ಳಲು ಆ ಬಡಪಾಯಿ ಜೀವಗಳು ನೀರಿಗೆ ಹಾರಿಕೊಂಡರೆ ಅಲ್ಲಿಯೂ ಸಾವಿನ ಏಜಂಟರು ಸಿದ್ಧರಾಗಿ ನಿಂತಿರುತ್ತಾರೆ. ಈ ಪಾಪಿಗಳನ್ನು ಗೋಳಹೊಯ್ಯಲಿಕ್ಕಾಗಿ. ಆ ನೀರಿನಲ್ಲಿಯೇ ಅನೇಕ ಮೀನುಗಳು ಕಚ್ಚುವವು. ಕ್ರಿಮಿಕೀಟಗಳು ತಮ್ಮ ಸೂಜಿ ಹಲ್ಲಿನಿಂದ ಮೈತುಂಬ ಚುಚ್ಚುವವು. ಕುಂಭೀಪಾಕವೆಂಬ ಗೊಬ್ಬರ ಗುಂಡಿಯ ಕಸ ಕೆಸರಿನಲ್ಲಿ ಬಿದ್ದು ಒದ್ದಾಡುತ್ತಿರುವ ಪಾಪಿಗಳನ್ನು ರಾಕ್ಷಸರು ಹಿಡಿದು ಹಿಂಸಿಸುವರು.

ಮೈಕೈಗಳನ್ನು ಕರಗಸದಿಂದ ಕೊರೆಯುವರು. ಕಲ್ಲುಗಳಿಂದ ಹೊಡೆದು ತಲೆಯೊಡೆಯುವರು. ಮೈಸೀಳುವರು. ಕ್ರೂರವಾದ ಹುಲಿಯಂಥ ನಾಯಿಗಳನ್ನು ಮೈಮೇಲೆ ಛೂ ಬಿಡುವರು. ಹದನವಾದ ಹಲ್ಲುಳ್ಳ ಹಾವು ಚೇಳುಗಳು, ಮೈತುಂಬ ಕಚ್ಚಿಚುಚ್ಚುವವು. ರಾಕ್ಷಸರು ಬಂದು ಅಸಿಪತ್ರವನ ಶೃಂಗಾಟಕವನ ಎಂಬ ಘೋರ ನರಕಗಳಲ್ಲಿ ಕಾದು ಕೆಂಡವಾದ ಮಳಲ ರಾಶಿಯ ಮೇಲೆ ಪಾಪಿಗಳನ್ನು ಬೀಳಿಸಿ ಎಳೆಯುವರು. ಚೇಳಿನ ಕೊಂಡಿಗಳಂತಿರುವ ಚೂಪಾದ ಮುಳ್ಳುಗಳಿಂದ ಪಲ್ಲವಿಸಿ ನಿಂತ ಕೂಟ ಶಾಲ್ಮಲಿ ಮರದ ಮೇಲೆ ಪಾಪಿಗಳನ್ನು ಒಗೆದು ಅಚೀಚೆ ಎಳೆದಾಡುವರು. ಅದರಿಂದ ಅವನ ಮೈ ಕೈಗಳೆಲ್ಲ ಕಡಿದು ಕತ್ತರಿಸಿ ಛಿದ್ರ ಛಿದ್ರವಾಗಿ ಹೋಗುವವು. ಆದರೆ ಮುಂದಿನ ಪಾಪಭೋಗಕ್ಕಾಗಿ ಕಡಿದುಹೋದ ಮೈಕೈಗಳೆಲ್ಲ ಚಿಗಿತು ಮತ್ತೆ ಮಾಂಸ ತುಂಬಿ ನಿಲ್ಲುವವು.

ಅಲ್ಲಿ ವೈತರಣೀ ಎಂಬ ಕುದಿಯುವ ನೀರಿನ ಮಹಾ ನದಿಯು ಐವತ್ತು ಯೋಜನ ಉದ್ದಳತೆಯಲ್ಲಿ ಹರಿಯುವದು. ವಜ್ರದಂತೆ ಕ್ರೂರ ಹಲ್ಲುಗಳುಳ್ಳ ಅನೇಕ ಏಡಿಗಳೂ ಜಿಗುಳೆಗಳೂ ಅಲ್ಲಿ ಜೀವಿಗಳನ್ನು ಕಚ್ಚಿ ಮೈಯಲ್ಲಿಯ ಮಾಂಸವನ್ನು ತಿಂದು ಎಲುವುಗಳನ್ನು ಕೂಡ ಕೊರೆದು ಬಿಡುವವು. ಅದನ್ನು ದಾಟುವಾಗ ಸಹ ಕಾರವನ ಎಂಬಲ್ಲಿ ದೈತ್ಯಾಕಾರದ ಹಕ್ಕಿಗಳು ಪಾಪಿಗಳನ್ನು ತಮ್ಮ ದೀರ್ಘವಾದ ಕೊಕ್ಕೆಗಳಿಂದ ಕುಕ್ಕಿ ಅವರ ದೇಹದಿಂದ ಪುಟಿಯುವ ನೆತ್ತರವನ್ನು ನೆಕ್ಕುವುವು ಮಾಂಸವನ್ನು ಮುಕ್ಕುವವು.

ಅಲ್ಲಿಂದ ಮುಂದೆ ಆರು ಯೋಜನ ದೂರದಲ್ಲಿ ಯಮಚುಲ್ಲಿ ಎಂಬ ಪ್ರೇತ ಕುಂಡವು ಒಂದು ಇರುತ್ತದೆ. ರಾಕ್ಷಸರು ಜೀವಂತ ಪಾಪಿಗಳ ದೇಹಗಳನ್ನು ತಮ್ಮ ಶೂಲ ಬರ್ಚಿಗಳ ತುದಿಯಲ್ಲಿ ಚುಚ್ಚಿ ಆ ಯಮಚುಲ್ಲಿಯ ಅಗ್ನಿ ಕುಂಡದ ನಿಗಿ ನಿಗಿ ಕೆಂಡದಲ್ಲಿ ಹಿಡಿದುಬೇಯಿಸುವರು. ಅನಂತರ ಆ ಪಾಪಿಗಳನ್ನು ಕಾದ ಎಣ್ಣೆಯ ಕತ ಕತ ಕುದಿಯುವ ತುಂಬಿದ ಕೊಪ್ಪರಿಗೆಯಲ್ಲಿ ಬೇಯಿಸಿ ಕರಿಯುವರು. ಅನಂತರ ಬೆರಣಿಯ ಹಳದಲ್ಲಿ ಮೇದಸ್ಸಿನ ಬೆಂಕಿಯಲ್ಲಿ ಹುರಿಯುವರು.

ಅಲ್ಲಿಂದ ಮುಂದೆ ಆ ಪಾತಕಿಗಳನ್ನು ಮುಂದೆ ಹೊಡೆದುಕೊಂಡು ಹೋಗಿ ಕಾಯ್ದು ಸೀಸಿದ ಲಾವಾರಸವು ಕುದಿಯುವ ಯಮನದಿಯಲ್ಲಿ ಈಸ ಕೆಡವುವರು. ಆ ಯಮನದಿಯಲ್ಲಿ ಏಳು ಯಾತನಾ ಸ್ಥಳಗಳಿವೆ. ಆ ಸಪ್ತ ಯಾತನಾ ಘಟ್ಟಗಳಲ್ಲಿ ಹೊಕ್ಕು ಸಿಕ್ಕು ಸುಟ್ಟು ಸೀಕರಿಗೊಂಡ ಪಾಪಿ ಪ್ರಾಣಿಗಳೂ ಹೇಗೋ ಮುಂದೆ ಸಾಗಿದ ಬಳಿಕ ಒಂದು ದಟ್ಟಾದ ವನವನ್ನು ಕಾಣುವರು. ಆ ಶೀತಲ ಉಪವನದಲ್ಲಿ ಯಮುನಾ ಎಂಬ ತಣ್ಣೀರಿನ ಒಂದು ಸರೋವರವಿರುತ್ತದೆ. ಅಲ್ಲಿ ಸ್ನಾನ ಮಾಡಿದ ಬಳಿಕ ಜೀವಿಗಳು ತಾವು ಹಿಂದೆ ಪಟ್ಟ ಕಷ್ಟ ಬವಣೆಗಳನ್ನೆಲ್ಲ ಮರೆತು ಬಿಡುವರು. ಅನಂತರ ಆ ಪಾಪಿಗಳನ್ನು ಮುಂದೆ ದಬ್ಬಿಕೊಂಡು ಶೂಲಗ್ರಹ ಪರ್ವತಕ್ಕೆ ಸಾಗಿಸುವರು. ಅಲ್ಲಿ ಮೋಡಗಳು ಎಸರು ನೀರಿನಮಳೆಯನ್ನು ಸುರಿಸಿ ಮಾನವರ ದೇಹಗಳನ್ನೆಲ್ಲ ಕುದಿಸಿ ಬಿಡುವವು.

ಈ ಬಿಸಿನೀರಿನ ಜಡಿ ಮಳೆಗಳಿಂದ ಕಸವಿಸಿಗೊಂಡು ಶೃಂಗಾರಕವನ ಎಂಬ ಹಚ್ಚು ಹಸಿರಾದ ಹುಲ್ಲುಗಾವಲಿನಲ್ಲಿ ನರದೇಹಗಳು ನುಗ್ಗಿ ಬರುವವು. ಅಲ್ಲಿ ಬಂದವರನ್ನು

ದೈತ್ಯಾಕಾರದ ಕಾಡು ನೊಣಗಳು ಕಚ್ಚಿ ಕೊಂದು ಹಾಕುವವು. ಚುಚ್ಚಿ ತಿಂದು ಹಾಕುವವು. ಅನಂತರ ಆ ಜೀವಿಗಳಿಗೆ ಕ್ರಿಮಿರೂಪವು ಬರುವದು. ಆ ಕ್ರಿಮಿ ಜನ್ಮದಲ್ಲಿಯೂ ಹೊಡೆತ ಬಡಿತ, ಕಚ್ಚಾಟ, ಚುಚ್ಚಾಟ, ನರಳಿಕೆ, ಬಳಲಿಕೆ, ಸಾವು ನೋವುಗಳು ತಪ್ಪಿದ್ದಲ್ಲ.

ಶೆರೆ ಕುಡಿಯುವದು, ಬ್ರಾಹ್ಮಣರನ್ನು ಕೊಲ್ಲುವದು, ಗುರುವಿನ ಮಡದಿಯೊಡನೆ ಕೂಡುವದು, ಬಂಗಾರವನ್ನು ಕದಿಯುವದು, ಇಂಥ ಪಾಪಗಳಿಗೆಲ್ಲ ಪ್ರೋತ್ಸಾಹನೆಯನ್ನು ನೀಡುವದು. ಇವೇ ಮೊದಲಾದ ಪಂಚ ಮಹಾಪಾತಕಗಳನ್ನು ಮಾಡಿದ ಪಾಪಿಗಳು ನಾನಾ ಬಗೆಯಾದ ಈ ಎಲ್ಲ ನರಕದ ನಿಲ್ದಾಣಗಳಲ್ಲಿ ನಿಂತು, ಕುಂತು, ನವೆದು, ಸವೆದು, ಕೊನೆಗೆ ಇಂಥ ಕ್ರಿಮಿಕೀಟಗಳಾಗಿ ಕೊಟ್ಯಾವಧಿ ಕಷ್ಟ ಕೀಟಲೆಗಳನ್ನು ಅನುಭವಿಸುವರು. ಅನಂತರ ಅವರಿಗೆ ಮರಮೊದಲಾದ ಸ್ಥಾವರ ಜನ್ಮವು ಬರುವದು. ಆ ಸ್ಥಾವರ ಜನ್ಮದ ಅನಂತರ ಪಶು ಜನ್ಮಗಳಲ್ಲಿ ಜನಿಸುವರು. ಹೀಗೆ ಒಂದೊಂದು ಜನ್ಮವು ಕಳೆದ ಬಳಿಕ ಮತ್ತೆ ಪ್ರೇತಗಳಾಗಿ ಅರವತ್ತಾರು ಸಾವಿರ ವರ್ಷ ನರಕಗಳಲ್ಲಿ ಯಮ ಯಾತನೆಯನ್ನು ಅನುಭವಿಸಬೇಕಾಗುವದು. ಹೀಗೆ ದುಷ್ಕರ್ಮಗಳಲ್ಲಿ ಕೆಲಭಾಗ ಸವೆದ ಬಳಿಕ ಬೆವರಿನಿಂದ ಹುಟ್ಟುವ ಹೇನು, ಸೀರು, ಮುಂತಾದ ಕ್ಷುದ್ರ ಜಂತು ಜನ್ಮಗಳನ್ನು ಪಡೆಯುವರು. ಆ ಬಳಿಕ ಸುಕೃತ ವಿಶೇಷದಿಂದ ಮಾನವ ಜನ್ಮವನ್ನು ಪಡೆಯುವರು. ಮಾನವ ಜನ್ಮದಲ್ಲಿಯೂ ಸತ್ಕರ್ಮಮಾಡಿದರೆ ಮುಂದೆ ವೈಶ್ಯತ್ವವನ್ನು ಅನಂತರ ಕ್ಷತ್ರಿಯ ಜನ್ಮವನ್ನೂ ತದನಂತರ ಬ್ರಾಹ್ಮಣ ಜನ್ಮವನ್ನೂ ಪಡೆಯುವರು. ಅವರ ಹಿಂದಿನ ಕರ್ಮಗಳು ಇನ್ನೂ ಘೋರವಾಗಿದ್ದರೆ ಈ ಬ್ರಾಹ್ಮಣ ಜನ್ಮದಲ್ಲಿಯೂ ದುಷ್ಟ ಬುದ್ಧಿಯ ದುರಾತ್ಮರಾಗಿಯೇ ಹೆಚ್ಚಾಗಿ ಪಾಪಸಾಧನ ಮಾಡಿಕೊಳ್ಳುವರು. ಈ ನರಜನ್ಮದಲ್ಲಿ ಕುಷ್ಟರೋಗ ತಗಲಿದವನೂ, ಕಾಕ ದೃಷ್ಟಿಯುಳ್ಳವನೂ ಪೂರ್ವ ಜನ್ಮದಲ್ಲಿ ಬ್ರಹ್ಮಹತ್ಯಾ ಪಾಪವನ್ನು ಮಾಡಿದ್ದಾನೆ ಎಂದು ತಿಳಿಯಬೇಕು. ಬಾಯಿಯು ದುರ್ಗಂಧ ನಾರುತ್ತಿದ್ದರೆ ಅವನು ಹಿಂದಿನ ಜನ್ಮದಲ್ಲಿ ಶೆರೆ ಕುಡಿಯುತ್ತಿದ್ದನೆಂದು ತಿಳಿಯಬೇಕು. ಇಂಥ ನರಜನ್ಮದಲ್ಲಿ ಪಾಪ ಮಾಡಿದ ಜೀವಿಗಳನ್ನು ಯಮದೂತರು ಸೆಳೆದೊಯ್ದು ಮತ್ತೆ ನರಕದಲ್ಲಿ ನೂಕುವರು. ಅಲ್ಲಿ ಬಗೆ ಬಗೆಯ ದುಃಖಗಳನ್ನು ಯಮ ಯಾತನೆಗಳನ್ನೂ ಕೊಟ್ಟು ಹೊಡೆದು ಬಡೆದು ಕಡಿದು ಕತ್ತರಿಸಿ ನೆತ್ತರು ಚಿಮ್ಮುವಂತೆ ಮಾಡುತ್ತಾರೆ.

ಆ ಯಮ ಪಟ್ಟಣದಲ್ಲಿ ಇಂಥ ಅನೇಕ ರಕ್ತದ ನದಿಗಳೇ ಹರಿಯುತ್ತವೆ. ಅಲ್ಲಿ ಎಲ್ಲ ಕಡೆಯಿಂದಲೂ ನರಕ ದುಃಖವನ್ನು ಅನುಭವಿಸುವ ಪಾಪಿಗಳ ಚೀತ್ಕಾರ ಹಾ ಹಾ ಕಾರಗಳು ಕೇಳಿ ಬರುತ್ತವೆ. ಹೀಗೆ ಪಾಪಿ ಜೀವಿಗಳನ್ನು ಹೊಡೆ ಹೊಡೆದು ಬಡೆ ಬಡೆದು ಯಮದೂತರೇ ಕೈಸೋತು ಖಿನ್ನರಾಗಿ ಚಿತ್ರಗುಪ್ತನಿಗೆ ಖಿನ್ನವಿಸುವರು.

## ದೂತ ದೈತ್ಯರಲ್ಲಿ ಯುದ್ಧ

**ಯಮದೂತರು :-**''ಸ್ವಾಮಿ, ಈ ಪಾಪಿಗಳಿಗೆ ಶಾಸನ ಮಾಡುವ ಕಾರ್ಯದಲ್ಲಿ ನಾವು ತುಂಬ ಬಳಲಿ ಬೇಸತ್ತಿದ್ದೇವೆ. ನಮಗೆ ಈ ಪಾಪ ಪುರುಷರ ಶಾಸನದ ಹೊರತು ಬೇರಾವದಾದರೂ ಕೆಲಸ ಕೊಡಿಸಿ. ಈ ಕಾರ್ಯವನ್ನು ನಮ್ಮನ್ನು ಬಿಟ್ಟು ಬೇರೆಯವರಿಗೆ ಒಪ್ಪಿಸಿರಿ. ಇದರಿಂದ ನಮಗೆ ಬಹಳ ಆಯಾಸವಾಗಿದೆ. '' ಯಮದೂತರ ಈ ಮಾತನ್ನು

ಕೇಳಿ ಚಿತ್ರಗುಪ್ತನಿಗೆ ಕೋಪ ಬಂದಿತು. ಅವನು ಈ ಕಾರ್ಯವನ್ನು ನೀವೇ ಮಾಡಬೇಕು ಎಂದು ಯಮಭಟರಿಗೆ ಒತ್ತಾಯ ಪಡಿಸಿದನು. ಅವನ ಈ ಆದೇಶಕ್ಕೆ ಯಮನ ಕಟ್ಟಾಳುಗಳು ತಲೆ ಬಾಗದಿದ್ದಾಗ ಚಿತ್ರಗುಪ್ತನಿಗೆ ಪಿತ್ತವು ನೆತ್ತಿಗೇರಿತು. ತನ್ನ ಆಜ್ಞಾ ಭಂಗವನ್ನು ಮಾಡಿದ ಆ ಯಮ ಕಿಂಕರರನ್ನು ಸದೆ ಬಡೆಯಲು ಮಂದೇಹ ಎಂಬ ರಾಕ್ಷಸನಿಗೆ ಹೇಳಿದನು. ಆ ಮಂದೇಹನು ತನ್ನ ಅನುಚರರಾದ ಸಹಸ್ರ ಸಹಸ್ರ ರಕ್ಕಸರೊಂದಿಗೆ ಯಮನ ಸೇವಕರ ಮೇಲೆ ಎರಗಿದನು. ಆ ಎರಡೂ ಬಣಗಳಲ್ಲಿ ಘನಘೋರವಾದ ಒಂದು ಕದನವೇ ಏರ್ಪಟ್ಟಿತು. ಅದರಲ್ಲಿ ಬಲಿಷ್ಠರಾದ ಯಮಭಟರು ಆ ರಾಕ್ಷಸ ಕುಲವನ್ನೆಲ್ಲ ಸದೆ ಬಡೆದು ಸೋಲಿಸಿ ಹೊಡೆದಟ್ಟಿದರು. ಅದರಿಂದ ಸೋತು ನಿರಾಶರಾದ ಆ ದೈತ್ಯರು ತಮ್ಮ ಆಸುರೀ ಮಾಯೆಯನ್ನು ನಿರ್ಮಿಸಿ ಆ ಯಮ ಭಟರಿಗೆ ತಿರುಗು ಬಾಣವನ್ನು ಹೂಡಿದರು. ಭಯಂಕರವಾದ ರಾಕ್ಷಸೀ ಮಾಯೆಯಿಂದ ಛಿನ್ನ ವಿಚ್ಛಿನ್ನರಾಗಿ ಹತಪತಿತರಾದ ಆ ಧರ್ಮರಾಜನ ದೂತರು ಆ ರಕ್ಕಸ ಮಾಯೆಯ ವಿನಾಶಕ್ಕಾಗಿ ಮಹಾಜ್ವರಕ್ಕೆ ಶರಣು ಹೋದರು. ಅವರ ಪ್ರಾರ್ಥನೆಯನ್ನು ಮನ್ನಿಸಿ ಆ ಮಹಾಜ್ವರವು ಮಂದೇಹನೇ ಮೊದಲಾದ ರಾಕ್ಷಸ ವೃಂದದ ಮೇಲೆ ಎರಗಿ ಅವರೆಲ್ಲರನ್ನೂ ಕೊಂದು ಹಾಕಿತು. ಅರವತ್ತು ಸಾವಿರ ಜನ ರಕ್ಕಸರು ಧಾರಾತೀರ್ಥದಲ್ಲಿ ದೇಹವಿಟ್ಟು ಸತ್ತುಬಿದ್ದರು. ಆಗ ಯಮದೇವರು ಅಲ್ಲಿಗೆ ಬಂದು ಆ ಮಹಾ ಜ್ವರವನ್ನು ಸಂತೈಯಿಸಿ ಶಾಂತಗೊಳಿಸಿದನು. ಆ ಜ್ವರವು ಯಮಧರ್ಮನ ಒಂದು ಸ್ವರೂಪವೇ ಆಗಿದ್ದಿತು. ಆ ಪ್ರೇತ ಪತಿಯ ಆದೇಶದಂತೆ ಆ ಜ್ವರವು ಹಿಂಸಾಕೃತ್ಯದಿಂದ ವಿಶ್ರಾಂತವಾಯಿತು.

ಅನಂತರ ಧರ್ಮದೇವತೆಯಾದ ಯಮರಾಜನು ತನ್ನ ದೂತರಿಗೂ ಚಿತ್ರ ಗುಪ್ತನಿಗೂ ಮೊದಲಿನಂತೆ ಸ್ನೇಹ ಸಂಪರ್ಕವನ್ನು ಏರ್ಪಡಿಸಿದನು. ಆ ಧರ್ಮದೂತರೆಲ್ಲರೂ ಬಂದು ಚಿತ್ರಗುಪ್ತನ ಆದೇಶವನ್ನು ಪಾಲಿಸಲು ಬದ್ಧಕಂಕಣರಾಗಿ ನಿಂತುಕೊಂಡರು. "ನೀನೂ ಈ ಯಮಧರ್ಮರಾಜನೂ ಅವನ ಕಿಂಕರರಾದ ನಾವೆಲ್ಲರೂ ಕಾಲರೂಪಿಯಾದ ಆ ಪರಮಾತ್ಮನ ಕಿಂಕರರು. ಅವನ ರುದ್ರರೂಪದ ಅಪ್ಪಣೆಯನ್ನು ಕೃತಿಯಲ್ಲಿ ಇಳಿಸ ಹೊರಟ ಯಮಧರ್ಮನ ಆದೇಶದಂತೆಯೇ ನೀನು ನಮಗೆ ಕಾರ್ಯ ಮಾಡಲು ಹೇಳಿರುವಿ. ನಿನ್ನ ಅಪ್ಪಣೆಯನ್ನು ಮೀರುವದೆಂದರೆ ಕಾಲ ನಿಯಾಮಕನಾದ ಆ ಪರಮಾತ್ಮನ ಅಪ್ಪಣೆಯನ್ನು ಮೀರಿ ನಡಿದಂತೆ. ಇಂಥ ಭಗವದಾಜ್ಞೆಯ ಉಲ್ಲಂಘನಾರೂಪವಾದ ಘೋರಪಾಪವನ್ನು ಗೈದ ನಮ್ಮನ್ನು ಕ್ಷಮಿಸು. ಇದೋ ನಿಮ್ಮ ಪಾದಗಳಿಗೆ ನಮಿಸುವೆವು." ಎಂದು ಕೇಳಿಕೊಂಡರು.

## *"ಶಾಸ್ತಾ ವೈವಸ್ವತೋ ಮನುಃ"*

**ನಚಿಕೇತ** :- ಆ ನರಕದ ನೆಲೆಯಲ್ಲಿ ಯಮಧರ್ಮನು ಚಿತ್ರಗುಪ್ತನಿಗೆ ಹೇಳಿ ಕೊಟ್ಟ ದಂಡ ವಿಧಾನವು ನನಗೆ ಆಶ್ಚರ್ಯವನ್ನುಂಟುಮಾಡಿತು. ಯಾವ ಯಾವ ಪಾಪಗಳಿಗೆ ಎಂಥ ಎಂಥ ನರಕ ನೋವುಗಳನ್ನು ದಂಡರೂಪವಾಗಿ ವಿಧಿಸಬೇಕು ! ಎಂಬುದನ್ನು ಯಮಧರ್ಮನು ಚಿತ್ರಗುಪ್ತನಿಗೆ ನಾನು ಅಲ್ಲಿ ಇದ್ದಾಗಲೇ ಹೇಳಿಕೊಟ್ಟನು. ಅದು ನಿಜವಾಗಿಯೂ ಉದ್ಬೋಧಕವಾದುದರಿಂದ ನಿಮಗೆ ಹೇಳುತ್ತೇನೆ ಕೇಳಿರಿ.-

**ಯಮಧರ್ಮ** :- ಘೋರಪಾಪಗಳನ್ನು ಮಾಡಿದ ಪಾತಕಿಗಳಿಗೆಲ್ಲ ಶಾಸನವಾಗುವದು ಈ ಯಮಲೋಕದಲ್ಲಿಯೇ. ಆದುದರಿಂದ ಪಾತಕಿಗಳಿಗೆಲ್ಲರಿಗೂ ಸರಿಯಾಗಿ ಶಿಕ್ಷೆ ವಿಧಿಸಿರಿ.

ದುರಾಚಾರಂ ಪಾಪರತಂ ನಿರ್ಘೃಣಂ ಪಾಪಚೇತಸಂ ।
ಶ್ವಾನಸ್ತು ಹಿಂಸಕಾ ಯೇ ಚ ಭಕ್ಷಯಂತು ದುರಾತ್ಮಕಂ ॥
ಪಿತೃಘ್ನೋ ಮಾತೃಗೋಘ್ನಸ್ತು ಸರ್ವದೋಷ ಸಮನ್ವಿತಃ ।
ಆರೋಪ್ಯ ಶಾಲ್ಮಲೀಂ ಘೋರಾಂ ಕಂಟಕೈಸ್ತೈರ್ವಿಪಾಟಯ ॥
ಏನಂ ಪಾಚಯ ತೈಲಸ್ಯ ಘೃತಕ್ಷೌದ್ರಸ್ಯ ವಾ ಪುನಃ ।
ನರಾಧಮಮಿಮಂ ಕ್ಷಿಪ್ತ್ವಾ ಪ್ರದೀಪ್ತೇ ಹವ್ಯವಾಹನೇ ।
ತತೋ ಮನುಷ್ಯತಾಂ ಪ್ರಾಪ್ಯ ಖಣ್ಯೈಸ್ತತ್ರ ಪ್ರದೀಪ್ಯತೇ ॥
ಶಯನಾಸನ ಹರ್ತಾರ ಮಗ್ನಿದಾಯೀ ಚ ಯೋ ನರಃ ।
ವೈತರಣ್ಯಾಮಯಂ ಚೈವ ಕ್ಷಿಪ್ಯತಾಮಚಿರಂ ಪುನಃ ॥

ದಯೆ ಇಲ್ಲದ ದುರಾತ್ಮರ ಮತ್ತೂ ಪಾಪ ಕಾರ್ಯ ಮಾಡುವ ದುಷ್ಟಚೇತನರ ಮೇಲೆ ಯಮಪುರಿಯ ಘೋರ ನಾಯಿಗಳನ್ನು ಛೂ ಬಿಡಿರಿ. ಅವರನ್ನು ಅವು ಹರಿದು ತಿನ್ನಲಿ. ತಾಯಿಯನ್ನು ಕೊಂದವನನ್ನು ಈ ಮುಳ್ಳಿನ ಮರದ ಮೇಲೆ ಹಾಕಿ ಜಗ್ಗಿರಿ. ತಂದೆಯನ್ನು ಗೋಳಾಡಿಸಿದವನನ್ನು ಕುದಿಯುವ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿ ಬೇಯಿಸಿರಿ. ಗೋವುಗಳನ್ನು ಬಳಲಿಸಿದ ನರಾಧಮನನ್ನು ಉರಿಯ ತೆರೆಯಲ್ಲಿ ಹಾಕಿ ಸುಡಿರಿ. ಹಾಸಿಗೆ, ಮಂಚ, ಮಣಿಗಳನ್ನು ಕಳವು ಮಾಡಿದವನನ್ನೂ, ಮನೆಗಳಿಗೆ ಕೊಳ್ಳಿ ಕೊಟ್ಟವನನ್ನೂ ವೈತರಿಣಿಯಲ್ಲಿ ಹಾಕಿರಿ. ಅಲ್ಲಿ ರಕ್ತ, ಕೀವು, ಮಲಮೂತ್ರಗಳಲ್ಲಿ ಬಿದ್ದು ಹೊರಳಾಡುವ ಅವನನ್ನು ವಜ್ರದಂತಹ ಜಿಗಳೆಗಳು ಕಚ್ಚಿ ಕೊಲ್ಲಲಿ. ತೀರ್ಥಗಳನ್ನು ಹೊಲಸು ಮಾಡಿ ಅಪವಿತ್ರಗೊಳಿಸಿದವನನ್ನು ಕಿಚ್ಚಿನ ಕುಂಡದಲ್ಲಿ ತಳ್ಳಿರಿ.

ಪಾಪ ಕರ್ಮಾಯಮತ್ಯರ್ಥಂ ಸರ್ವತೀರ್ಥ ವಿನಾಶಕಃ ।
ತಸ್ಯ ಪ್ರದೀಪ್ತಃ ಕಿಲೋಽಯಂ ವಹ್ನಿತಪ್ತೋಽತಿದುಃಸ್ಪೃಶಃ
ಆದೇಶ್ಯ ಚೋಭಯೋರಸ್ಯ ಕರ್ಣಯೋಃ ಕೂಟಸಾಕ್ಷಿಕಃ ॥
ಯೋ ನರಃ ಪಿಶುನಃ ಕೂಟಸಾಕ್ಷೀ ಚಾಲೀಕಜಲ್ಪಕಃ ।
ಗ್ರಾಮಯಾಜನಕಂ ವಿಪ್ರಮಧ್ರುವಂ ದಾಂಭಿಕಂ ಶಠಂ ॥
ಬಧ್ವಾ ತು ಬಂಧನೇ ಘೋರೇ ದೀಯತಾಂ ತು ನ ಕಿಂಚನ ॥
ಜಿಹ್ವಾಽಸ್ಯ ಛಿದ್ಯತಾಂ ಶೀಘ್ರಂ ವಾಚಾ ದುಷ್ಟಸ್ಯ ಪಾಪಿನಃ ।
ಗಮ್ಯಾಗಮ್ಯಂ ಪುರಾ ಯೇನ ವಿಜ್ಞಾತಂ ನ ದುರಾತ್ಮನಾ ॥
ಕೃತಂ ಲೋಭಾಭಿಭೂತೇನ ಕಾಮಸಮ್ಮೋಹಿತೇನ ಚ ।
ತಸ್ಯ ಛಿತ್ವಾ ತತೋ ಲಿಂಗಂ ಕ್ಷಾರಮಗ್ನಿಂ ಚ ದೀಪಯ ॥
ಇಮಂ ತು ಖಲಕಂ ಕೃತ್ವಾ ದುರಾತ್ಮಾ ಪಾಪಕಾರಿಣಂ ।
ದಾಯಾದಿ ಬಹವೋ ಯೇನ ಸ್ವಾರ್ಥಹೇತೋರ್ವಿನಾಶಿತಾಃ ॥

ಇಮಂ ವಾರ್ಧುಷಿಕಂ ವಿಪ್ರ ಸರ್ವತ್ರಾಂಗೇಷು ಭೇದಯ ।
ತಥಾಯಂ ಯಾತನಾಂ ಯಾತು ಪಾಪಂ ಬಹು ಸಮಾಚರನ್ ॥
ಸುವರ್ಣಸ್ತೇಯಿನಂ ಪಾಪಂ ಕೃತಘ್ನಂ ಚ ತಥಾ ನರಂ ।
ಕ್ರೂರಂ ಪಿತೃಹಣಂ ಚೈನಂ ಬ್ರಹ್ಮಘ್ನೇಷು ಸಮೀಕುರು ॥

ಸುಳ್ಳು ಸಾಕ್ಷಿ ಹೇಳಿದವನ ಕಿವಿಗಳಲ್ಲಿ ಕಾಯ್ದ ಕಬ್ಬಿಣದ ಮೊಳೆಗಳನ್ನು ಜಡಿಯಿರಿ. ಚಾಡಿ ಹೇಳುವವನನ್ನೂ, ಹಣಕ್ಕಾಗಿಯೇ ಪೌರೋಹಿತ್ಯವನ್ನು ಮಾಡಿಸುವ ಬ್ರಾಹ್ಮಣನನ್ನೂ, ಢಂಬಾಚಾರಿಯನ್ನೂ, ಸುಳ್ಳು ಮಾತಾನಾಡುವವನನ್ನೂ, ಘೋರವಾದ ಕತ್ತಲೆಯ ಕೋಣೆಯಲ್ಲಿ ಕೊಳೆ ಹಾಕಿ ಅವನ ನಾಲಿಗೆಯನ್ನು ಸೀಳಿರಿ. ಗಮ್ಯಾಗಮ್ಯ ವಿಚಾರ ಮಾಡದೆ ವ್ಯಭಿಚಾರವನ್ನು ಮಾಡಿದ ಕಾಮಿಗಳ ಜನನೇಂದ್ರಿಯವನ್ನು ಕತ್ತರಿಸಿರಿ. ಆ ಸ್ಥಳವನ್ನು ಉಪ್ಪುಕಾರ ಹಾಕಿ ಬೆಂಕಿಯಿಂದ ಸುಡಿಸಿ ಬಿಡಿರಿ. ಸ್ವಾರ್ಥಕ್ಕಾಗಿ ಬಂಧು ಬಳಗದವರನ್ನು ಘಾತ ಮಾಡಿದ ದುರಾತ್ಮನನ್ನು ಹೊಡೆದು ಅವನ ಅಂಗಾಂಗಗಳನ್ನೆಲ್ಲ ಜೋತಾಡುವಂತೆ ಲಿಕಿಲಿಕಿಯಾಗಿ ಮಾಡಿರಿ. ಬಡ್ಡೀ ವ್ಯವಹಾರ ಮಾಡುವ ಬ್ರಾಹ್ಮಣನ ಅವಯವಗಳನ್ನೆಲ್ಲ ಕಡಿದು ಕೊಚ್ಚಿ ಹಾಕಿರಿ. ಚಿನ್ನ ಕದ್ದವನ ಎಲುಬುಗಳನ್ನು ಕತ್ತರಿಸಿ ಅವುಗಳಲ್ಲಿ ಮೆಣಸಿನ ಪುಡಿ ಉದುರಿಸಿ ಮೇಲೆ ಕೆಂಡ ಕಟ್ಟಿರಿ.

ಅಸ್ಥಿ ಭಿತ್ವಾ ತತಃ ಕ್ಷಿಪ್ರಂ ಕ್ಷಾರಮಗ್ನಿಂ ಚ ದಾಹಯ ।
ಇಮಂ ತು ಮಿಪ್ರಂ ಖಾದಂತು ತೀಕ್ಷ್ಣದಂಷ್ಟ್ರಾಸ್ಸುದಾರುಣಾಃ ॥
ಪಿಶುನಂ ಹಿ ಮಹಾವ್ಯಾಘ್ರಾಃ ಪಂಚ ಘೋರಾಸ್ಸುದಾರುಣಾಃ ।
ಯೇನಾಗ್ನಿರುಜ್ಝಿತಃ ಪೂರ್ವಂ ಗೃಹೀತ್ವಾ ಚ ನ ಪೂಜಿತಃ ।
ಇಮಂ ಪಾಪಸಮಾಚಾರಂ ವೀರಷುಮತಿಪಾಪಿನಂ ॥
ಕರ್ಕಟಸ್ಯ ತು ಘೋರಸ್ಯ ನಿತ್ಯ ಕ್ರುದ್ಧಸ್ಯ ಮೋಚಯ ।
ಇಮಂ ಘೋರೇ ಹ್ರದೇ ಕ್ಷಿಪ್ತಂ ಸರ್ವಯಾಜನಯಾಜಕಂ ॥
ಸರ್ವೇಷಾಂ ತು ಪಶೂನಾಂ ಯೋ ನಿತ್ಯಂ ಧಾರಯತೇ ಜಲಂ ।
ನ ತ್ರಾತಾ ನ ಚ ದಾತಾ ಚ ಪಾಪಾಸ್ಯಾಸ್ಯ ದುರಾತ್ಮನಃ
ಅದಾನ ವ್ರತಿನೋ ವಿಪ್ರಾಃ ವೇದ ವಿಕ್ರಯಿಣಸ್ತಥಾ ।
ಸರ್ವಕರ್ಮಾಣಿ ಕುರ್ಯುರ್ಯೇ ದೀಯತೇನ ಚಕಿಂಚನ ॥
ತೋಯಭಾಜನ ಹರ್ತಾರಂ ಭೋಜನಂ ಯೋನಿವಾರಯನ್ ।
ಹನ್ಯತಾಂ ಸುದೃಢೈರ್ದಂಡೈರ್ಯ ಮದೂತೈರ್ಮಹಾಬಲೈಃ ॥
ವೇಣುದಂಡಕಶಾಭಿಶ್ಚ ಲೋಹದಂಡೈಸ್ತಥೈವಚ ।
ಜಲಮಸ್ಮೈನ ದಾತವ್ಯಂ ಭೋಜನಂ ಚ ಕಥಂಚನ ॥
ತಸ್ಮಾ ಅನ್ನಂ ಚ ಪಾನಂಚ ನ ದಾತವ್ಯಂ ಕದಾಚನ ।
ಹತವಿಶ್ವಾಸ್ಯಹಂತಾರಂ ವಹ್ನೌ ಶೀಘ್ರಂ ಪ್ರಪಾಚಯ ॥
ಬ್ರಹ್ಮದೇಯಂ ಹೃತಂ ಯೇನ ತಂ ವೈ ಶೀಘ್ರಂ ವಿಪಾಚಯ ।
ಬಹುವರ್ಷಸಹಸ್ರಾಣಿ ಪಾತಯೇಃ ಕರ್ಮ ವಿಸ್ತರೇ ॥

**ಗೋಘಾತಕೋ ಹ್ಯಯಂ ಪಾಪಃ ಕೂಟ ಶಾಲ್ಮಲಿ ಮಾರುಹೇತ್ ।**
**ಕೃಷ್ಯತೇ ವಿವಿಧೈರ್ಘೋರೈ ರಾಕ್ಷಸೈ ರ್ಘೋರ ದರ್ಶನೈಃ ॥**

ಮಾಡಿದ ಉಪಕಾರವನ್ನು ಮರೆತವನಿಗೂ, ತಂದೆ-ತಾಯಂದಿರನ್ನು ಪೀಡಿಸಿದವನಿಗೂ, ಬ್ರಾಹ್ಮಣನನ್ನು ಸಾಯ ಹೊಡೆದವನಿಗೂ ಇದರಂತೆ ಎಲವು ಕೊರೆದು ಖಾರ ತುಂಬಿ ಮೇಲೆ ಕೆಂಡವಿಡಿರಿ. ಹೆರವರ ಕಿವಿ ಕಚ್ಚಿ ಚಾಡಿ ಹೇಳುವ ಖೋಡಿ ಬ್ರಾಹ್ಮಣನ ಮೇಲೆ ಐದು ಹಸಿದ ಹುಲಿಗಳನ್ನು ಏರಿ ಬಿಡಿರಿ. ಬ್ರಾಹ್ಮಣನಾಗಿ ದೇವಪೂಜೆ ಅಗ್ನಿಕಾರ್ಯಗಳನ್ನು ಮಾಡದವನನ್ನು ಕಾಡಿನ ಏಡಿಯಿಂದ ಕಡಿಸಿ ಕೊಲ್ಲಿಸಿರಿ. ಹಣದ ಆಶೆಯಿಂದ ಕಂಡವರ ಕಡೆಯಿಂದ ಯಜ್ಞ ಮಾಡಿಸುವ ಬ್ರಾಹ್ಮಣನನ್ನು ಅಗಾಧ ನೀರಿನ ಮಡುವಿನಲ್ಲಿ ಮುಳಗಿಸಿ ಬಿಡಿರಿ. ಪಶುಪಕ್ಷಿಗಳಿಗೆ ನೀರನ್ನೂ, ಅತಿಥಿ ಅಭ್ಯಾಗತರಿಗೆ ಅನ್ನವನ್ನೂ ನೀಡದ ಕಡುಲೋಭಿಯನ್ನೂ ಯಮದೂತರೆ, ಬಡಿಗೆಗಳಿಂದ ಬಡಿಯಿರಿ.

ಸಂಬಳ ತೆಗೆದುಕೊಂಡು ವೇದ ಪಾಠ ಹೇಳುವ ವೇದವಿದ್ಯೆಯ ಮಾರಾಟಗಾರನಾದ ಬ್ರಾಹ್ಮಣನನ್ನು ಕಬ್ಬಿಣ ಸಳಾಕೆಯನ್ನು ಕಾಸಿ ಹೊಡೆಯಿರಿ. ಯಾರಿಗೂ ಅನ್ನ ನೀರುಗಳನ್ನು ಕೊಡದೇ ತಾನೊಬ್ಬನೇ ತಿನ್ನುವ ಸ್ವಾರ್ಥಿಗೆ ಘಟಿಕೀ ಶಿಕ್ಷೆಯನ್ನು ಕೊಟ್ಟು ಚಾವಟಿಗೆಯಿಂದ ಚನ್ನಾಗಿ ಬಾರಿಸಿರಿ. ದೇವಸ್ವ ಅಥವಾ ಬ್ರಹ್ಮಸ್ವಗಳನ್ನು ಹೊತ್ತು ಹಾಕುವ ಕಳ್ಳನನ್ನು ಅಗ್ನಿಕುಂಡದಲ್ಲಿ ಎತ್ತಿ ಹಾಕಿರಿ. ಹಸುವನ್ನು ಕೊಂದ ಹಂತಕನನ್ನು ಮುಳ್ಳಿನ ಮರದ ತುಂಬ ಎಳೆದಾಡಿ ರಕ್ಕಸರೆ, ಅವನ ಮೈಯನ್ನೆಲ್ಲ ಸೀಳಿ ಬಿಡಿರಿ.

ಬ್ರಹ್ಮಸ್ವವನ್ನು ಅಪಹರಿಸಿದ ಪಾಪಿಯೂ, ಉಪ್ಪನ್ನು ಕದ್ದ ಕಳ್ಳನೂ ಐನೂರು ವರ್ಷ ಘೋರ ನರಕದಲ್ಲಿ ಕುಳಿತು ಕೊಳೆತು ಕೊನೆಗೆ ಹೊಲಸಿನಲ್ಲಿಯ ಹುಳವಾಗಿ ಹುಟ್ಟಲಿ. ಪರದ್ರವ್ಯವನ್ನು ಅಪಹರಿಸುವವರನ್ನು ರೌರವ ನರಕದಲ್ಲಿ ಒಗೆಯಿರಿ. ಪಕ್ಷಿಗಳ ಬೇಟೆಯಾಡುವವರನ್ನು ನರಿನಾಯಿ, ಹದ್ದುಗಳು ಮೈಮೇಲೆ ಬಿದ್ದು ಕಚ್ಚಿ ಕೊಂದು ತಿಂದುಬಿಡಲಿ. ತನ್ನ ಎಂಜಲವನ್ನು ಇನ್ನೊಬ್ಬರಿಗೆ ತಿನ್ನಲು ಕೊಟ್ಟ ಪಾಪಿಯನ್ನು ಮುನ್ನೂರು ವರ್ಷ ಕಾಲ ಕೆಂಡದ ಹೊಂಡಗಳಲ್ಲಿ ಹಾಕಿ ಸುಡಿರಿ.

ದಾರಿ ತಪ್ಪಿ ಜಾರತನಕ್ಕೆ ಇಳಿದ ನಾರಿಯ ಸುತ್ತಲು ಏಳು ಉಕ್ಕಿನ ಗಂಡುಮೂರ್ತಿಗಳನ್ನು ನಿರ್ಮಿಸಿರಿ. ಕಾಯ್ದು ಕೆಂಪಗಾದ ಆ ಬೆಂಕಿಯ ಬೊಂಬೆಗಳನ್ನು ಆ ವ್ಯಭಿಚಾರಿಣಿಯಾದ ಸ್ತ್ರೀಯು ಅಪ್ಪಿಕೊಂಡು ಆ ಅಗ್ನಿಚುಂಬನದಿಂದ ಸುಟ್ಟು ಕರಕಾಗಿ ಹೋಗುವಂತೆ ಮಾಡಿರಿ. ಮುಂದೆ ಅವಳು ಹೆಣ್ಣುನಾಯಿಯಾಗಿ ಅನಂತರ ಹೆಣ್ಣು ಹಂದಿಯಾಗಿ ಕೊನೆಗೆ ದುಃಖಿನಿಯಾದ ಮಾನವಳಾಗಿ ಜನಿಸಲಿ. ಶಾಂತರಾದ ಸೇವಕರಿಗೆ ಹೊಟ್ಟೆ ಬಟ್ಟೆಗೆ ಕೊಡದೆ ಬರೀ ದುಡಿಸಿಕೊಳ್ಳುವ ಒಡೆಯರನ್ನು ರೌರವ ನರಕದಲ್ಲಿ ದೂಡಿರಿ. ಸ್ವಾರ್ಥಕ್ಕಾಗಿ ಪ್ರಜೆಗಳ ಹಿಂಸೆ ಮಾಡುವ ರಾಜನನ್ನು ಕುಂಭೀಪಾಕದಲ್ಲಿ ಹಾಯಿಸಿ ಕೊನೆಗೆ ಕಳ್ಳರ ಕುಲದಲ್ಲಿ ಹುಟ್ಟಿಸಿರಿ. ಅನಂತರ ಅವನು ಹಾವಾಗಿ, ಹಂದಿಯಾಗಿ, ಕುರಿಯಾಗಿ, ನರಿಯಾಗಿ, ಆನೆಯಾಗಿ, ಬಕಪಕ್ಷಿಯಾಗಿ ಕೊನೆಗೆ ಸಾವಿರಾರು ವರ್ಷಗಳ ಅನಂತರ ಮಾನವನಾಗಿ ಜನಿಸಲಿ. ಆ ಮಾನವ ಜನ್ಮದಲ್ಲಿಯೂ ಐದು ಬಾರಿ ಗರ್ಭಸ್ರಾವದಲ್ಲಿಯೇ ಸತ್ತು ಹೋಗಲಿ. ಮತ್ತೆ ಐದು ಬಾರೆ ಮಗುವಾಗಿ ಹುಟ್ಟಿದ

ಕೂಡಲೇ ಸಾಯಲಿ. ಮತ್ತೆ ಐದು ಮಾನವ ಜನ್ಮದಲ್ಲಿ ನೀರಿನಲ್ಲಿ ಮುಳಗಿ ಸಾಯಲಿ. ಹೀಗೆ ಕರ್ಮ ಶೇಷವು ಸವೆದ ಬಳಿಕ ಸರಿಯಾದ ಮಾನವನಾಗಿ ಹುಟ್ಟಿ ಬೆಳೆಯಲಿ. ಇದೆಲ್ಲವೂ ವಿಧಿ ವಿಹಿತವಾದ ಜನ್ಮಕರ್ಮಗಳ ಫಲಾಫಲನಿರ್ಣಯವಾಗಿದೆ.

## ಮಾಡಿದ್ದುಣ್ಣೋ ಮಹಾರಾಯ

**ನಚಿಕೇತ :-** ಚಿತ್ರಗುಪ್ತನು ಹಲವಾರು ಬಗೆಯ ಪಾಪಫಲಗಳನ್ನು ನನಗೆ ಹೇಳಿದನು. ಅವುಗಳನ್ನು ನಿಮಗೆ ತಿಳಿಸುತ್ತೇನೆ ಕೇಳಿರಿ. ರಾಜದ್ವೇಷಿಗಳು, ಗುರುದ್ವೇಷಿಗಳು, ಚಾಡಿಕೋರರು, ಗೋಹತ್ಯಾ ಮಾಡುವವರೂ, ಆಡು, ಕುರಿ, ಎಮ್ಮೆ, ಹಂದಿ ಮುಂತಾದ ಪ್ರಾಣಿಗಳ ವಧೆ ಮಾಡುವವರೂ, ಕಾಡಿಗೆ ಬೆಂಕೀ ಹಚ್ಚುವವರೂ ಲೆಕ್ಕವಿಲ್ಲದಷ್ಟು ಕಾಲ ನರಕದಲ್ಲಿ ಬೀಳುವರು. ಮತ್ತೂ ಗರ್ಭಪಾತ ಮಾಡುವವರೂ, ಸ್ತಂಭನ ವಶೀಕರಣ ಮಂತ್ರಮಾಟ ಮುಂತಾದವುಗಳನ್ನು ಮಾಡಿಸುವವರೂ, ವಿಷಹಾಕುವವರೂ, ಶೂಲಕ್ಕೇರಿಸುವವರೂ, ಪ್ರಾಣಿಗಳ ಚರ್ಮವನ್ನು ಸುಲಿದು ಹೊಟ್ಟೆಹೊರೆದು ಕೊಳ್ಳುವರೂ, ಘೋರನರಕದಲ್ಲಿ ಬಿದ್ದು ಬೇಯುವರು. ಅನಂತರ ರೋಗಿಷ್ಠ ಮಾನವರಾಗಿ ಕುರುಡರೂ, ಕುಂಟರೂ, ಕಿವಡರೂ, ಕುಳ್ಳರೂ, ವ್ಯಾಧಿತ ಬಾಧಿತರೂ ಆಗುವರು. ಪಾಪಿಗಳು ಹೆಣ್ಣುಮಕ್ಕಳಾಗಿದ್ದರೆ ಕುಷ್ಠ, ಮಹಾರೋಗ, ಹೃದಯಶೂಲಿ, ಯೋನಿಶೂಲಿ, ಮಧುಮೇಹ ಮುಂತಾದ ಭೀಕರರೋಗಗಳಿಗೆ ತುತ್ತಾಗುವರು.

ಯೋಗ್ಯ ಸ್ತ್ರೀಯರನ್ನು ಯಾರು ಶೀಲಗೆಡಿಸುವರೋ ಮತ್ತು ಚಾಡಿ ಹೇಳಿ ಬೇರೊಬ್ಬರಿಗೆ ಕೇಡನ್ನು ಉಂಟುಮಾಡುವರೋ ಅಂಥ ಚಾರಿತ್ರ್ಯ ಹೀನರಾದ ಜನರನ್ನು ಯಮದೂತರು ಬಂಧಿಸಿ ಸೆಳೆದೊಯ್ದು ನರಕದಲ್ಲಿ ಘೋರ ದಂಡಗಳನ್ನು ವಿಧಿಸಿ ಅನಂತರ ಅವರನ್ನು ಕ್ರಿಮಿಕೀಟಗಳನ್ನಾಗಿ ಹುಟ್ಟಿಸುವರು. ಅನಂತರ ಅವರು ಎಲ್ಲರಿಂದ ನಿಂದಿತರಾದ ಮಾನವರಾಗಿ ಜನಿಸಿ ಬೆಂಕಿಯಲ್ಲಿ ಬಿದ್ದು ಅಥವಾ ನಂಜನ್ನು ನುಂಗಿ ಇಲ್ಲವೇ ಶಸ್ತ್ರಗಳ ಹೊಡೆತಬಿದ್ದು ಅಥವಾ ಸಿಡಿಲು ಎರಗಿ ಇಲ್ಲವೇ ಅಪಘಾತದಿಂದ ದುರ್ಮರಣವನ್ನು ಹೊಂದುವರು. ರಾಜಕೀಯ ಅಧಿಕಾರಿಗಳಾಗಿ ಲಂಚವನ್ನು ತಿಂದರೆ, ನಿರಪರಾಧಿಗಳನ್ನು ದಂಡಿಸಿದರೆ, ಕಳ್ಳತನದಲ್ಲಿ ಪಾಲುಗೊಂಡರೆ, ಕರ ಕೊಟ್ಟದನ್ನು ತಾವೇ ಬಳಸಿಕೊಂಡರೆ, ದರಿದ್ರರಾದ ಪ್ರಜಾ ಜನರನ್ನು ಹಿಂಸಿಸಿದರೆ, ಬೇರೆ ಬೇರೆ ನರಕಗಳಲ್ಲಿ ಕೊಳೆಯುವರು. ಬಂಗಾರ ರತ್ನಗಳಲ್ಲಿ ಮೋಸಮಾಡುವವರೂ, ಮಾಡಿದ ಉಪಕಾರವನ್ನು ಮರೆಯುವವರೂ, ಅಡವು ಇಟ್ಟ ಒಡವೆಗಳನ್ನು ಎತ್ತಿಹಾಕುವವರೂ, ಮಂತ್ರಮಾಟಗಳನ್ನು ಅರಿತು ಅವುಗಳಿಂದ ಜನರಿಗೆ ಅನರ್ಥಗಳನ್ನು ಉಂಟು ಮಾಡುವವರೂ, ಜನರನ್ನು ವಂಚಿಸುವವರೂ ಬಗೆ ಬಗೆಯ ನರಕಗಳಲ್ಲಿ ಬಹುಕಾಲ ದುಃಖಪಡುವರು. ಮುಂದೆ ಜನ್ಮಾಂತರಗಳಲ್ಲಿ ರೋಗಗ್ರಸ್ತವಾದ ಬರಗಾಲ ಪ್ರದೇಶದಲ್ಲಿ ಹುಟ್ಟಿ ರೋಗಿಷ್ಠರೂ ಊನದೀನರೂ ಬಡತನದಲ್ಲಿ ಬಳಲುವವರೂ ಸರ್ವಜನರಿಂದ ತಿರಸ್ಕೃತರೂ ಆಗಿ ಬಗೆ ಬಗೆಯ ಭವಣೆಗಳನ್ನು ಅನುಭವಿಸುವರು.

ಕಳ್ಳತನದಿಂದ ಅಥವಾ ವಶೀಕರಣ ವಿದ್ಯೆಯಿಂದ ಇಲ್ಲವೇ ಬಲತ್ಕಾರದಿಂದ ಪರಸ್ತ್ರೀ ಸಂಗವನ್ನು ಮಾಡಿದ ಪಾಪಿಯು ಸಾವಿರ ವರ್ಷ ನರಕದಲ್ಲಿ ನೊರಜಾಗಿ ನಾರುತ್ತ ಬಿದ್ದು

ನಂತರ ಮಾನವನಾದಾಗಲೂ ನೀಚ ಜಾತಿಯಲ್ಲಿ ಹುಟ್ಟುವನು. ಆ ಜನ್ಮದಲ್ಲಿ ಶೆರೆಗುಡುಕರಾದ ವೇಶ್ಯಾಗಾಮಿಗಳ ಹಾಗೂ ನೀತಿಗೆಟ್ಟ ನಾರಿಯರ ನಿರ್ಲಜ್ಜ ಸೇವಕರಾಗಿ ನರಾಧಮನೆಂದು ಎಲ್ಲರಿಂದಲೂ ತಿರಸ್ಕರಿಸಲ್ಪಡುವನು. ಹೀಗೆ ಸ್ತ್ರೀಲೋಲರಾಗಿ, ಲಂಪಟರನ್ನೇ ಸ್ತ್ರೈಣವೃತ್ತಿಯಿಂದ ಸೇವಿಸಿ, ದೇಹ ಸವಿಸಿದ ಇಂಥ ಪಾಪಿಗಳು ಮರಣಾನಂತರದಲ್ಲಿ ಮತ್ತೆ ನರಕದಲ್ಲಿ ಹುಳುಗಳಿಂದ ಭಕ್ಷಿಸಲ್ಪಡುವರು. ಕುದಿಯುವ ಎಣ್ಣೆಯಲ್ಲಿ ಕರಿಯಲ್ಪಡುವರು. ಕಾದ ಹಂಚಿನಲ್ಲಿ ಹುರಿಯಲ್ಪಡುವರು. ಬೆಂಕಿಯ ಹೊಳೆಯಲ್ಲಿ ಒಗೆಯಲ್ಪಡುವರು. ಮೆಣಸಿನ ಪುಡಿಯಖಾರದ ರಾಸಿಯಲ್ಲಿ ಹೂಳಲ್ಪಡುವರು. ಹೀಗೆ ಸ್ತ್ರೀಲೋಲುಪರಿಗೆ ಭಯಂಕರವಾದ ಘೋರಯಮ ಶಾಸನ ತಪ್ಪಿದ್ದಲ್ಲ.

## ಅಂತಕನ ದೂತರಿಗೆ ಕಿಂಚಿತ್ತು ದಯೆ ಬೇಡ

**ನಚಿಕೇತ :-** ಬ್ರಾಹ್ಮಣೋತ್ತಮರೇ, ಲೋಕ ಶಾಸಕನಾದ ಆ ಚಿತ್ರಗುಪ್ತನು ಯಮದೂತರಿಗೆಯಾವ ದಯಾದಾಕ್ಷಿಣ್ಯಗಳಿಲ್ಲದೇ ಆಯುಷ್ಯವುಕ್ಷೀಣಿಸಿದವರೆಲ್ಲರನ್ನೂ ಎಳೆದು ಯಮಪಾಶದಿಂದ ಬಿಗಿದು ಸೆಳೆದು ತನ್ನಿರಿ ಎಂದು ಕಠೋರವಾದ ಶಾಸನವನ್ನು ವಿಧಿಸಿದನು- ''ದೂತರೇ, ದೂರದೇಶದಲ್ಲಿ ಇರುವನೆಂದು ಸೆಳೆದು ತರಲು ಬೇಸರಿಯಬೇಡಿರಿ. ಪಾಪಗ್ರೈದ ಪ್ರಾಣಿಯು ಮದುಮಗನೆಂದು ದಾಕ್ಷಿಣ್ಯಬೇಡ. ತಪಸ್ವಿ ಎಂದು ಭಿಡೆ ಬೇಡ. ನವವಧುಗಳೆಂದು ಹಿಂಜರಿಯಬೇಡಿರಿ. ಪತಿವ್ರತೆ ಎಂದು ಮರುಕಗೊಳ್ಳದಿರಿ. ಸಣ್ಣಮಗುವೆಂದು ಸಂಕೋಚ ಪಡಬೇಡಿರಿ. ದಾನಶೀಲನೆಂದು ದಾಕ್ಷಿಣ್ಯಕ್ಕೆ ಒಳಗಾಗಬೇಡಿರಿ. ಗೆದ್ದು ಬಂದವನೆಂದು ಸಡಿಲು ಬಿಡಬೇಡಿರಿ. ಯಾರೇ ಆಗಲಿ ಹೇಗೇ ಇರಲಿ. ಆಯುಷ್ಯವು ತುಂಬಿ ಬಂದಿದ್ದರೆ ನಿಶ್ಶಂಕವಾಗಿ ಆ ಎಲ್ಲ ಪ್ರಾಣಿಗಳನ್ನು ಇಲ್ಲಿಗೆ ಎಳೆದು ತನ್ನಿರಿ. ನಡೆಯಿರಿ, ಇದರಲ್ಲಿ ನೀವು ಮಾತ್ರ ದಯಾಪರರಲ್ಲ. ನಾನೊಬ್ಬನೇ ಕ್ರೂರನಲ್ಲ. ಇದೆಲ್ಲವೂ ನಿಯತಿ. ಕಾಲನಾಮಕನಾದ ಆ ಪರಮಾತ್ಮನ ಸಂಕಲ್ಪ. ಅದೆಂದಿಗೂ ವ್ಯತ್ಯಾಸವಾಗದಂತೆ ನೋಡಿಕೊಳ್ಳುವದೇ ನಮ್ಮ ಧರ್ಮ. ನಡೆದುಕೊಳ್ಳುವದೇ ನಮ್ಮ ಕರ್ತವ್ಯಕರ್ಮ. ಬೇಗ ಹೋಗಿರಿ ಮುಂದೆ ಸಾಗಿರಿ. ಸಾಯಲಿರುವವರ ಬಳಿ ಬಗೆ ಬಗೆಯ ರೋಗಗಳಾಗಿ ಸಾಗಿರಿ. ಆತನು ಗಾಳಿಯಲ್ಲಿ ರೋಗಪ್ರಸಾರಕ ಕ್ರಿಮಿ ಆಗಲಿ. ಈತನು ಪ್ಲೇಗ ರೋಗವಾಗಲಿ. ಮತ್ತವನು ಘೋರ ಜ್ವರವಾಗಲಿ, ನೀನು ಕ್ಷಯವಾಗು. ಅವನು ಉದರರೋಗವಾಗಲಿ ಹೀಗೆ ಬಗೆ ಬಗೆಯ ರೋಗಗಳ ರೂಪದಿಂದ ಎಲ್ಲ ಲೋಕಗಳಿಗೆ ಹೋಗಿ ಯಾರದೂ ಮರಣಕಾಲವು ಮೀರದಂತೆ ಜೀವಿಗಳನ್ನು ಯಮಪಾಶದಿಂದ ಬಿಗಿದು ಇಲ್ಲಿಗೆ ಜಗ್ಗಿ ತನ್ನಿರಿ. ಕಾಲಪುರುಷನಾದ ಆ ಭಗವಂತನ ಸೇವಾ ರೂಪವಾದ ಈ ಕರ್ತವ್ಯ ಕರ್ಮವನ್ನು ನೀವು ಮಾಡಿದರೆ ನೀವು ಕೃತಕೃತ್ಯರಾಗುವಿರಿ. ಈ ವಿಹಿತಕರ್ಮಾನುಷ್ಠಾನದಿಂದ ನೀವು ಮೋಕ್ಷವನ್ನೂ ಕೂಡ ಹೊಂದುವಿರಿ. ಅದಕ್ಕಾಗಿ ಬೇಗ ಓಡಿರಿ. ಮುಂದೆ ಸಾಗಿರಿ. ತಡಮಾಡಬೇಡಿರಿ. ಇದು ಧರ್ಮರಾಜನ ಆಜ್ಞೆ

''ಯೂಯಂ ಚ ಕೃತಕರ್ಮಾಣಸ್ತತೋ ಮೋಕ್ಷಮವಾಪ್ಸ್ಯಥ
ದ್ರುತಂ ದ್ರವತ ವೇಗೇನ ಸರ್ವೇ ಗಚ್ಛತ ಮಾ ಚಿರಂ
ವರಾಜ್ಞಾ ಧರ್ಮರಾಜಸ್ಯ ಯಾ ಮಯಾ ಸಮುದಾಹೃತಾ ॥

## ಪುಣ್ಯಾನುರೂಪಂ ಫಲಂ

**ನಚಿಕೇತ :-** ಬ್ರಾಹ್ಮಣರೇ, ಧರ್ಮಾತ್ಮನಾದ ಯಮಧರ್ಮನೂ ಅವನ ಕಾರ್ಯ ನಿರ್ವಾಹಕನಾದ ಚಿತ್ರಗುಪ್ತನೂ ಪಾಪಕೃತ್ಯಗಳಿಗೆ ದಂಡವನ್ನು ವಿಧಿಸುವಂತೆ ಪುಣ್ಯಕಾರ್ಯಗಳಿಗೆ ಒಳ್ಳೊಳ್ಳೆ ಫಲಗಳನ್ನು ನೀಡುವಲ್ಲಿಯೂ ಅಷ್ಟೇ ದಕ್ಷರಾಗಿರುವರು. ಅವರು ಪುಣ್ಯಜೀವಿಗಳಿಗೆ ಆ ಆಫಲ ಪ್ರದಾನ ಮಾಡುವ ಆಜ್ಞೆ ನೀಡುವದನ್ನು ನಾನೇ ನೋಡಿ ಕೇಳಿದ್ದೇನೆ. ಅದನ್ನೆಲ್ಲ ನಿಮಗೆ ತಿಳಿಸುತ್ತೇನೆ ಕೇಳಿ -

''ಪುಣ್ಯ ಕರ್ಮಗಳನ್ನು ಯಾವಜ್ಜನ್ಮ ಮಾಡಿದ ಈ ಮಹಾರಾಜನು, ಈ ಮರವು, ಈ ಕ್ರಿಮಿಯು, ಈ ನರನೂ ಮೋಕ್ಷವನ್ನು ಪಡೆಯಲಿ.'' ಇವನು ಯುದ್ಧದಲ್ಲಿ ಶತ್ರುಗಳನ್ನು ಕೊಂದು ಮರಣವನ್ನು ಅಪ್ಪಿದ್ದಾನೆ. ಇವನು ಸ್ವರ್ಗ ಲೋಕದಲ್ಲಿ ಅಕ್ಷಯ ನಿವಾಸವನ್ನು ಪಡೆಯಲಿ. ಇವನು ತಾನಿರುವ ವರೆಗೆ ಸತ್ಕರ್ಮ ಮಾಡಿ ಕೊನೆಗೆ

**''ಬ್ರಾಹ್ಮಣಾರ್ಥೇ ಗವಾರ್ಥೇ ವಾ ರಾಷ್ಟ್ರಾರ್ಥೇ ನಿಧನಂ ಗತಃ**
**ಶಕ್ರಸ್ಯ ಹ್ಯಮರಾವತ್ಯಾಂ ನಿವೇದಯತ ಮಾ ಚಿರಂ ॥**

ಬ್ರಾಹ್ಮಣರ ಸಲುವಾಗಿ ಇವನು ಪ್ರಾಣ ಕೊಟ್ಟಿದ್ದಾನೆ. ಹಸುವಿನ ಸಲುವಾಗಿ ಇವನು ತನ್ನ ಅಸು ನೀಗಿದ್ದಾನೆ. ಇವನು ರಾಷ್ಟ್ರಕ್ಕಾಗಿ ಪ್ರಾಣಾರ್ಪಣ ಮಾಡಿದ್ದಾನೆ. ಇದನ್ನು ಬೇಗನೇ ಹೋಗಿ ದೇವೇಂದ್ರನಿಗೆ ತಿಳಿಸಿರಿ. ತಡಮಾಡಬೇಡಿರಿ. ಇವನು ಒಂದು ಕಲ್ಪಕಾಲ ಪರ್ಯಂತ ಸ್ವರ್ಗಲೋಕದಲ್ಲಿ ವಾಸ ಮಾಡಲಿ. ವಿಮಾನಾರೂಢನಾಗಿ ಸ್ವಚ್ಛಂದ ಸಂಚಾರ ಗೈಯಲಿ. ಇಕೋ ಈ ಪುಣ್ಯಾತ್ಮನು ಧರ್ಮಾತ್ಮನೇ ಆಗಿದ್ದಾನೆ. ಬದುಕಿ ಇರುವವರೆಗೆ ಇವನು ಮಾಡಿದ ದಾನಗಳಿಗೆ ಲೆಕ್ಕವಿಲ್ಲ. ಪ್ರಾಣಿದಯೆಯು ಇವನ ಸ್ವಭಾವ ಧರ್ಮವೇ ಆಗಿದ್ದಿತು. ಬೇಗ ಬನ್ನಿರಿ ಇವನನ್ನು ಪೂಜಿಸಿರಿ. ಇವನ ಮೈಗೆ ಶ್ರೀಗಂಧದ ಎಣ್ಣೆಯನ್ನು ಪೂಸಿರಿ. ಕೊರಳಿಗೆ ಈ ಸುಗಂಧ ಹೂವಿನ ಹಾರವನ್ನು ಹಾಕಿರಿ. ಇಕೋ ಇತ್ತ ಕಡೆ ಮತ್ತೊಬ್ಬ ಪುಣ್ಯಜೀವಿಯು ಇರುತ್ತಾನೆ. ಇವನಿಗೆ ಚಾಮರ ಬೀಸಿರಿ. ಇವನನ್ನು ರಥದ ಮೇಲೆ ಕೂಡಿಸಿರಿ. ನಾನು ಹೇಳಿದಂತೆ ಪೂಜೆ ಮಾಡಿರಿ. ಅಕೋ ಅತ್ತ ಕಡೆಗಿರುವ ಆ ಪುಣ್ಯಾತ್ಮನು ಈ ಪ್ರೇತಾವಾಸವನ್ನು ಬಿಟ್ಟು ಸ್ವರ್ಗಲೋಕಕ್ಕೆ ತೆರಳಲಿ. ಈ ಜ್ಞಾನಿಗೆ ಇಂದ್ರಲೋಕದಲ್ಲಿ ಸುಖನಿವಾಸವು ದೊರಕಲಿ. ಅಲ್ಲಿರುವ ಮತ್ತೊಬ್ಬ ಪುಣ್ಯ ಪುರುಷನನ್ನು ಶಂಖ, ಮತ್ತು ಉಳಿದ ಮಂಗಳ ವಾದ್ಯಗಳನ್ನು ಊದುತ್ತ ಸ್ವರ್ಗ ಲೋಕಕ್ಕೆ ಮೆರವಣಿಗೆಯಿಂದ ಕರೆದುಕೊಂಡು ಹೋಗಿರಿ. ಇಂದ್ರ ದೇವರು ಈ ಧರ್ಮಾತ್ಮನ ದಾರಿಯನ್ನೇ ಸ್ವರ್ಗದಲ್ಲಿ ನೋಡುತ್ತಲಿರುವರು. ಅವನಿರುವವರೆಗೆ ಇವನೂ ಅಲ್ಲಿದ್ದು ಸುಖಪಡಲಿ. ಇಕೋ ಇವನು ರತ್ನದ ಕೊಳಲನ್ನು ದಾನಮಾಡಿದ್ದಾನೆ ಮತ್ತು ಅನೇಕ ಧರ್ಮಕರ್ಮಗಳನ್ನು ಆಚರಿಸಿದ್ದಾನೆ. ಇವನನ್ನು ಅಶ್ವಿನೀ ದೇವತೆಗಳ ಲೋಕಕ್ಕೆ ಕರೆದುಕೊಂಡು ಹೋಗಿರಿ. ಈ ಮಹನೀಯನು ಶುಚಿರ್ಭೂತರಾದ ಬ್ರಾಹ್ಮಣರಿಗೆ ಹಿಂಡುವ ಹಸುಗಳನ್ನು ದಾನವಿತ್ತಿದ್ದಾನೆ. ಇವನನ್ನು ಕಾಮಿತಾರ್ಥಗಳನ್ನು ನೀಡುವ ಶ್ರೀವಿಷ್ಣುವಿನ ಬಳಿಗೆ ಕರೆದೊಯ್ಯಿರಿ. ಅಕೋ ಅಲ್ಲಿರುವ ಆ ಪುಣ್ಯಾತ್ಮನು ತನ್ನ ಶಕ್ತಿ ಮೀರಿ ಅನ್ನದಾನವನ್ನು ಮಾಡಿದ್ದಾನೆ. ಇವನನ್ನು ರುದ್ರಲೋಕಕ್ಕೆ ಕರೆದುಕೊಂಡು ಹೋಗಿರಿ. ಅಲ್ಲಿ ಒಂದು ಕಲ್ಪಕಾಲದವರೆಗೆ ರಮಣೀಯ ರೂಪ ಉಳ್ಳ ರುದ್ರಲೋಕದ

ರಮಣಿಯರು ಸೇವೆ ಮಾಡಲಿ. ಆ ಮತ್ತೊಬ್ಬ ಗೃಹಸ್ಥನು ಬ್ರಾಹ್ಮಣರಿಗೆ ವಿವಿಧ ರಸಗಳಿಂದ ಒಡಗೂಡಿದ ಸಕ್ಕರೆಯಿಂದ ಬೆರೆಸಿದ ಮಧುಪರ್ಕವನ್ನು ಕೊಟ್ಟಿದ್ದಾನೆ. ಈ ಮಹಾತ್ಮನು ಹಿಂಡುವ ಹಸುವನ್ನು ಕರು ಸಹಿತವಾಗಿ ಪೀತಾಂಬರವನ್ನು ಹೊದಿಸಿ ಬಂಗಾರದೊಡನೆ ದಾನ ಮಾಡಿದ್ದಾನೆ. ಇಲ್ಲಿ ಇನ್ನೊಬ್ಬ ಜ್ಞಾನಿಯು ಕುಳಿತಿರುತ್ತಾನೆ. ಇವನು ಮೂರು ಕೋಟಿ ಅಕ್ಷರಗಳನ್ನು ಜನರಿಗೆ ಕಲಿಸಿ ಉಪದೇಶಿಸಿದ್ದನ್ನು ನಾನು ನೋಡಿದ್ದೇನೆ. ಇವನು ಬಹುಕಾಲ ಸ್ವರ್ಗದಲ್ಲಿ ಇದ್ದು ಋಷಿಗಳ ಕುಲದಲ್ಲಿ ಬ್ರಹ್ಮರ್ಷಿಯಾಗಿ ಹುಟ್ಟಲಿರುವನು. ಈ ಬಂಗಾರ ದಾನ ಮಾಡಲಿರುವ ಪುಣ್ಯಾತ್ಮನ ಹೆಸರನ್ನು ಮಾತ್ರ ದೇವತೆಗಳಿಗೆ ತಿಳಿಸಲು ಮರೆಯಬೇಡಿರಿ. ಇವನು ಅವರ ನಿರೋಪವನ್ನು ತೆಗೆದುಕೊಂಡು ಮಹಾದೇವರ ಬಳಿಗೆ ಹೋಗಲಿ. ಪಿತೃಗಳಿಗೆ ಶಾಸ್ತ್ರೋಕ್ತವಾಗಿ ತರ್ಪಣವನ್ನು ಕೊಟ್ಟವರು ಪಿತೃಲೋಕಕ್ಕೆ ಹೋಗಲಿ. ದಾನ ಮಾಡಿದವರು ಸ್ವರ್ಗ ಸೇರಲಿ. ಸರ್ವ ಪ್ರಾಣಿಗಳಿಗೂ ಉಪಕಾರ ಮಾಡುವ ಇವನು ಇಷ್ಟಾರ್ಥವನ್ನು ಪಡೆಯಲಿ. ಬ್ರಾಹ್ಮಣರಿಗೆ ಭೂದಾನವನ್ನು ಮಾಡಿದ ಈತನು ಸ್ವರ್ಗಕ್ಕೆ ಹೋಗಲಿ. ರಾಷ್ಟ್ರರಕ್ಷಣೆಯನ್ನು ಮಾಡಿದ ಈ ಶೂರನು ತನ್ನ ಅನುಚರರೊಂದಿಗೆ ಬ್ರಹ್ಮಲೋಕಕ್ಕೆ ಹೋಗಲಿ. ಆ ಸತ್ಯ ಲೋಕದಲ್ಲಿ ಮುಪ್ಪು ಇಲ್ಲ, ಮರಣವೂ ಇಲ್ಲ. ಬಯಸಿದ ಭೋಗ ಬೇಡಿದ ಭಾಗ್ಯಗಳು ದೊರಕುವವು.

**ಚಿತ್ರಗುಪ್ತ :-** ಸೇವಕರೇ, ಅತಿಥಿಗಳನ್ನು ಸೇವಿಸುವ ಇವನನ್ನು ಬಿಟ್ಟುಬಿಡಿರಿ. ಇಂದ್ರಿಯಗಳನ್ನು ಗೆದ್ದ ಆತನನ್ನು ಹಿಡಿಯಬೇಡಿರಿ. ಪಂಕ್ತಿಭೇದವಿಲ್ಲದೆ ಅನ್ನದಾನ ಮಾಡುವ ಆ ಮಹನೀಯನನ್ನು ನೀವು ಮುಟ್ಟಬೇಡಿರಿ. ಎಲ್ಲ ಪ್ರಾಣಿಗಳ ಮೇಲೆ ದಯಾಪರನಾದ ಈ ಪ್ರೇಮಳ ಪುರುಷನನ್ನು ನೀವು ಈ ಯಮಲೋಕಕ್ಕೆ ತರದೇ ಸ್ವರ್ಗಲೋಕಕ್ಕೆ ಕಳಿಸಿರಿ. ಈ ವೀರನು ದೇಶಕ್ಕಾಗಿ ದೇಹತ್ಯಾಗ ಮಾಡಿದ್ದರಿಂದ ಇವನಿಗಾಗಿ ಸ್ವರ್ಗಲೋಕದಿಂದ ವಿಮಾನವು ಬರಲಿದೆ. ಆ ವಿಮಾನವು ಬರುವವರೆಗೆ ಇವನಿಗೆ ಇಲ್ಲಿ ಸರಿಯಾದ ಊಟ ಉಪಚಾರವನ್ನು ಮಾಡಿರಿ. ಅನೇಕ ಕನ್ಯಾದಾನಗಳನ್ನು ಮಾಡಿದ ಈತನನ್ನೂ ಅನೇಕ ಯಜ್ಞಯಾಗಗಳನ್ನು ಮಾಡಿದ ಆತನನ್ನೂ ಬೇಡಿದ್ದನ್ನು ಕೊಟ್ಟು ಸಂತೋಷಪಡಿಸಿರಿ. ಈ ವಿದ್ವಾಂಸನು ವೈಷ್ಣವ ಲೋಕಕ್ಕೆ ಹೋಗಿ ಬಹುಕಾಲ ಆನಂದ ಪಡೆಯಲಿ. ಪಾದರಕ್ಷೆಗಳನ್ನೂ, ಕೊಡೆಯನ್ನೂ, ನೀರಿನ ಪಾತ್ರೆಗಳನ್ನೂ ಅನೇಕ ಸಾರೆ ದಾನ ಮಾಡಿದ ಈತನಿಗೆ ಪೂಜೆ ಮಾಡಿರಿ. ಬ್ರಾಹ್ಮಣರಿಗೆ ಹಾಲು, ಮೊಸರು, ತುಪ್ಪಗಳನ್ನು ದಾನ ನೀಡಿದ ಈತನು ನನ್ನ ಪಕ್ಕಕ್ಕೆ ಬರಲಿ. ಈತನನ್ನು ನೀವೆಲ್ಲರೂ ಪೂಜಿಸಿರಿ. ಚಿತ್ರಗುಪ್ತನು ಮತ್ತೊಂದು ರಹಸ್ಯವಾದ ವಿಷಯವನ್ನು ತಿಳಿಸಿದನು. ಲಕ್ಷ್ಯವಿಟ್ಟು ಆಲಿಸಿರಿ.

**ಸರ್ವದೇವಮಯಾ ಗಾವಃ ಸರ್ವವೇದ ಮಯಾಸ್ತಥಾ ।**
**ಅಮೃತಂ ಧಾರಯಂತ್ಯಶ್ಚ ಪ್ರಚರಂತಿ ಮಹೀತಲೇ ॥**
**ತೀರ್ಥಾನಾಂ ಪರಮಂ ತೀರ್ಥಮತಸ್ತೀರ್ಥಂ ನ ವಿದ್ಯತೇ**
**ಪವಿತ್ರಂ ಚ ಪವಿತ್ರಾಣಾಂ ಪುಷ್ಟೀನಾಂ ಪುಷ್ಟಿರೇವ ಚ**
**ತಸ್ಮಾದ್ರಸಸ್ತು ದಾತವ್ಯಃ ಗವಾಂ ವೈ ಮೇಧ್ಯ ಕಾರಣಾತ್ ॥**

ಆಕಳಿನ ದೇಹದಲ್ಲಿ ಎಲ್ಲ ದೇವತೆಗಳೂ ಎಲ್ಲ ವೇದಾಭಿಮಾನಿ ದೇವತೆಗಳೂ ವಾಸ ಮಾಡುವದರಿಂದ ಅವು ದೇವಮಯ, ವೇದಮಯ ಎಂದು ಕರೆಯಲ್ಪಡುತ್ತವೆ.

ಗೋಗಳೆಂದರೆ ಅಮೃತವನ್ನು ಹೊತ್ತು ಕೊಂಡು ತಿರುಗುವ ದೇವಿಯರೇ ಸರಿ. ಗೋವಿಗಿಂತ ಪವಿತ್ರ ತೀರ್ಥವಿಲ್ಲ. ಎಲ್ಲ ರಸಗಳಲ್ಲಿ ಗೊರಸ ಅರ್ಥಾತ್ ಆಕಳ ಹಾಲು ಅತ್ಯಂತ ಪವಿತ್ರವಾಗಿದೆ. ಎಲ್ಲ ಪೌಷ್ಟಿಕ ಆಹಾರಗಳಲ್ಲಿ ಹಸುವಿನ ಹಾಲು, ಮೊಸರು, ತುಪ್ಪ, ಮುಂತಾದ ಗವ್ಯವಸ್ತುಗಳು ಅತ್ಯಂತ ಪೌಷ್ಟಿಕವಾಗಿರುತ್ತವೆ. ಇಂಥ ಪರಿಶುದ್ಧವಾದ ಗೋವಿನ ಹೈನವನ್ನು ಅತಿಥಿಗಳಿಗೆ ದಾನಕೊಡಬೇಕು.

ದಧ್ನಾ ಹಿ ತ್ರಿದಶಾಃ ಸರ್ವೇ ಕ್ಷೀರೇಣ ಚ ಮಹೇಶ್ವರಃ
ಘ್ರುತೇನ ಪಾವಕೋ ನಿತ್ಯಂ ಪಾಯಸೇನ ಪಿತಾಮಹಃ ॥
ಸಕೃದ್ದತ್ತೇನ ಪ್ರೀಯಂತೇ ವರ್ಷಾಣಾಂ ಹಿ ತ್ರಯೋದಶ ।
ತಾಂ ದತ್ವಾ ಚೈವ ಪೀತ್ವಾ ಚ ಪ್ರೀತೇ ಮೇಧ್ಯಶ್ಚ ಜಾಯತೇ ॥

ಒಮ್ಮೆ ದಾನ ಮಾಡಿದ ಆಕಳ ಮೊಸರಿನಿಂದ ದೇವತೆಗಳೂ, ಹಾಲಿನಿಂದ ಶಿವನೂ, ತುಪ್ಪದಿಂದ ಅಗ್ನಿಯೂ, ಪಾಯಸದಿಂದ ಬ್ರಹ್ಮದೇವನೂ ಹದಿಮೂರು ವರ್ಷಗಳವರೆಗೆ ಸುಪ್ರೀತರಾಗುತ್ತಾರೆ. ಆದುದರಿಂದ ಈ ಎಲ್ಲ ಗೋ ರಸಗಳನು ಕೊಟ್ಟು ಕುಡಿದರೆ ಮಾನವರು ತುಷ್ಟ ಪುಷ್ಟರಾಗುವದಲ್ಲದೇ ಪವಿತ್ರತರೂ ಆಗುವರು.

ಪಂಚಗವ್ಯೇನ ಪೀತೇನ ವಾಜಿಮೇಧ ಫಲಂ ಲಭೇತ್ ।
ಗವ್ಯಂ ತು ಪರಮಂ ಮೇಧ್ಯಂ ಗವ್ಯಾದನ್ಯನ್ನ ವಿದ್ಯತೇ ॥

ಹಸುವಿನ ಹಾಲು, ಮೊಸರು, ಬೆಣ್ಣೆ, ತುಪ್ಪ, ಕೆನಿ ಈ ಐದು ಆಕಳಿನ ರಸಗಳಿಗೆ (ಜೇನುತುಪ್ಪ ಸಕ್ಕರೇ ಬಾಳೇ ಹಣ್ಣು ಸೇರಿಸಿ) ಪಂಚಗವ್ಯ ಎಂದು ಹೆಸರು. ಇಂಥ ಪಂಚಗವ್ಯವನ್ನು ಕುಡಿದರೆ ಅಶ್ವಮೇಧಯಜ್ಞ ಮಾಡಿದ ಪುಣ್ಯವು ಲಭಿಸುವುದು. ಈ ಪಂಚಗವ್ಯದಂಥ ಪೌಷ್ಟಿಕ ಹಾಗೂ ಪವಿತ್ರ ಪದಾರ್ಥವೇ ಬೇರೊಂದಿಲ್ಲ.

"ದಂತೇಷು ಮರುತೋ ದೇವಾಃ ಜಿಹ್ವಾಯಾಂ ತು ಸರಸ್ವತೀ ।
ಖುರಮಧ್ಯೇ ತು ಗಂಧರ್ವಾಃ ಖುರಾಗ್ರೇಷು ಚ ಪನ್ನಗಾಃ ॥
ಸರ್ವಸಂಧಿಷು ಸಾಧ್ಯಾಶ್ಚ ಚಂದ್ರಾದಿತ್ಯೌ ಚ ಲೋಚನೇ ।
ಕಕುದೇ ಸರ್ವತೀರ್ಥಾಣಿ ಪ್ರಸ್ರಾವೇ ಜಾನ್ಹವೀ ನದೀ ॥
ಅಪಾನೇ ಸರ್ವತೀರ್ಥಾಣಿ ಲಾಂಗೂಲೇ ಧರ್ಮ ಆಶ್ರಿತಃ ।
ನಾನಾದ್ವೀಪ ಸಮಾಕೀರ್ಣಾಶ್ಚತ್ವಾರಸ್ಸಾಗರಾಸ್ತಥಾ ॥
ಋಷಯೊ ರೋಮ ಕೂಪೆಷುಗೋಮಯೇ ಪದ್ಮಧಾರಿಣೀ
ರೋಮೇ ವಸಂತಿ ವಿದ್ಯಾಶ್ಚ ತ್ವಕ್ಕೇಶೇಷ್ವಯನದ್ವಯಂ ॥
..........................................................
..........................................................
ಯತ್ರ ಗಾವೋ ಜಗತ್ತತ್ರ ದೇವ ದೇವ ಪುರೋಗಮಾಃ
ಯತ್ರ ಗಾವಸ್ತತ್ರ ಲಕ್ಷ್ಮೀಃ ಸಾಂಖ್ಯ ಧರ್ಮಶ್ಚ ಶಾಶ್ವತಃ ।
ಸರ್ವರೂಪೇಷು ಗಾವಸ್ತಿಷ್ಠಂತ್ಯಭಿಮತಾಸ್ತಥಾ
ಭವನೇಷು ವಿಶಾಲೇಷು ಸರ್ವಪ್ರಾಸಾದ ಪಂಕ್ತಿಷು

ಹಸುವಿನ ಹಲ್ಲುಗಳಲ್ಲಿ ಮರುದ್ದೇವತೆಗಳೂ, ನಾಲಿಗೆಯಲ್ಲಿ ಸರಸ್ವತಿಯೂ, ಗೊರಸುಗಳ ನಡುವೆ ಗಂಧರ್ವರೂ ಖುರದ ತುದಿಗಳಲ್ಲಿ ನಾಗರೂ, ಎಲ್ಲ ಸಂಧಿ ಪ್ರದೇಶಗಳಲ್ಲಿ ಸಾಧ್ಯರೂ, ಕಣ್ಣುಗಳಲ್ಲಿ ಚಂದ್ರಸೂರ್ಯರೂ, ಇಣೆಯಲ್ಲಿ ಎಲ್ಲ ಕ್ಷತ್ರಿಯರೂ, ಬಾಲದಲ್ಲಿ ಧರ್ಮವೂ ನೆಲಸಿರುವರು. ಗೋವಿನ ಪೃಷ್ಠದಲ್ಲಿ ಎಲ್ಲ ತೀರ್ಥಗಳೂ, ಗಂಜಲದಲ್ಲಿ ಗಂಗಾನದಿಯೂ, ಅನೇಕ ದ್ವೀಪಗಳಿಂದ ಕೂಡಿದ ನಾಲ್ಕು ಸಮುದ್ರಗಳೂ ಇರುತ್ತವೆ. ಆಕಳಿನ ರೋಮ ಕೂಪಗಳಲ್ಲಿ ಋಷಿಗಳು ಇರುವರು. ಅದರ ಶೆಗಣಿಯಲ್ಲಿ ಲಕ್ಷ್ಮಿಯು ಸನ್ನಿಹಿತಳಾಗಿರುತ್ತಾಳೆ. ಅದರ ತೊಗಲ ಮೇಲಿನ ಕೂದಲುಗಳಲ್ಲಿ ಉತ್ತರಾಯಣ ದಕ್ಷಿಣಾಯಣಗಳೂ ಮತ್ತೂ ಧರ್ಮ, ಶಾಂತಿ ಪುಷ್ಟಿ, ವೃದ್ಧಿ, ಸ್ಮೃತಿ, ಮೇಧಾ, ಲಜ್ಜಾ, ಕೀರ್ತಿ ಎಲ್ಲವೂ ಇರುವುವು. ಈ ಗೋಮಾತೆಯನ್ನು ಸೇವೆ ಮಾಡುವವನಿಗೆ ವಿದ್ಯೆ, ಶಾಂತಿ, ಮತ್ತು ಒಳ್ಳೇಜ್ಞಾನ, ಶ್ರೇಷ್ಠ ಸಂತತಿ ಮೊದಲಾದವುಗಳೆಲ್ಲ ಲಭಿಸುವವು. ಎಲ್ಲಿ ಗೋವುಗಳಿರುವವೊ ಅಲ್ಲಿ ಶ್ರೀಹರಿಯೇ ಮೊದಲಾದ ದೇವತಾ ಪ್ರಪಂಚವೆಲ್ಲವೂ ನಿಂತಿರುತ್ತವೆ. ಎಲ್ಲಿ ಆಕಳುಗಳೋ ಅಲ್ಲಿ ಲಕ್ಷ್ಮಿಯು ಸ್ಥಿರವಾಗಿ ನೆಲಿಸುವಳು. ಅಲ್ಲಿಯೇ ದಿವ್ಯ ಜ್ಞಾನವೂ ಧರ್ಮವೂ ಸ್ಥಿರವಾಗಿ ಇರುವವು. (೩೫)

ಯಮಲೋಕದಲ್ಲಿ ಕಂಗೊಳಿಸುವ ಭವ್ಯ ಭವನಗಳಲ್ಲಿ ಇಂಥ ಗೋವುಗಳು ಇಷ್ಟ ಬಂದ ರೂಪಗಳಲ್ಲಿ ಇರುತ್ತವೆ. ಈ ಗೋವುಗಳ ಹಿಂಡುಗಳಿಗೆ ಸಕಾಲಕ್ಕೆ ನೀರು ಮತ್ತು ಆಹಾರಗಳನ್ನು ಒದಗಿಸಲು ಸಾವಿರಾರು ಜನ ಸ್ತ್ರೀ ಪುರುಷರು ಸಿದ್ಧರಾಗಿ ನಿಂತುಕೊಂಡಿರುತ್ತಾರೆ. ಆ ಯಮ ಲೋಕದಲ್ಲಿ ಹೀಗೆ ಸಹಸ್ರಾರು ಜನ ಪುರುಷರೂ ಸಾವಿರಾರು ಜನ ಸ್ತ್ರೀಯರೂ ಹೂವಿನ ಹಾರಗಳಿಂದ ಅಲಂಕೃತರಾಗಿ ಬಗೆ ಬಗೆಯ ಭಕ್ಷ್ಯಭೋಜ್ಯಗಳನ್ನೂ ಶಯನಾಸನ ಪಾನಭೋಗಗಳನ್ನೂ ಅನುಭವಿಸುತ್ತ ಸ್ವಚ್ಛಂದ ವಿಹಾರ ಮಾಡುತ್ತಲಿರುವರು. ಆ ನರಕ ಲೋಕದ ನಾರೀಮಣಿಗಳಲ್ಲಿ ಕೆಲವು ಕಾಮಿನಿಯರು ಜಲಕ್ರೀಡೆಯನ್ನು ಆಡುತ್ತಲಿದ್ದರು. ಮತ್ತೆ ಹಲವು ಹೆಂಗಳೆಯರು ಸಮೀಪದ ಕೈದೋಟ ಹೂದೋಟಗಳಲ್ಲಿ ವಿಹರಿಸುತ್ತ ತಾವು ನಿಂತ ನೆಲಕ್ಕೆ ಹೆಚ್ಚಿನ ಸೊಬಗನ್ನು ತಂದು ಕೊಟ್ಟಿದ್ದರು. ಹೀಗೆ ಅಸಾಧಾರಣವಾದ ಯಮಪಟ್ಟಣದ ಎಣೆಗಾಣದ ಸೊಗಸು ಸೌಂದರ್ಯವನ್ನೂ ಶಿಲ್ಪಕಲ್ಪಗಳನ್ನೂ ಕೊಂಡಾಡುತ್ತ, ನಾನು ಎಲ್ಲ ಕಡೆಗೂ ತಿರುಗಾಡಿ ನೋಡಿಕೊಂಡು ಮನದಲ್ಲಿಯೇ ಅದನ್ನೆಲ್ಲ ಕೊಂಡಾಡುತ್ತ ಮತ್ತೆ ಯಮದೇವರ ಬಳಿಗೆ ಬಂದೆನು.

## ನರಕಕ್ಕೆ ಯಾರು ಹೋಗುವರು ?

**ನಚಿಕೇತ :-** ಮಹಾ ತೇಜಸ್ವಿಯಾದ ನಾರದ ಮುನಿಯು ಒಂದಾನೊಂದು ದಿನ ಯಮಧರ್ಮನ ರಾಜಧಾನಿಯಾದ ಸಂಯಮನೀಪುರಕ್ಕೆ ಬಂದನು. ಯಮಧರ್ಮನು ಮಾಡಿದ ಸ್ವಾಗತ ಸತ್ಕಾರಗಳನ್ನು ಸ್ವೀಕರಿಸಿ ಅವನಿಗೆ ಕೆಲವು ಪ್ರಶ್ನೆಗಳನ್ನು ಕೇಳಿದನು.- ''ಸುರೋತ್ತಮ, ಯಾವ ವ್ರತ, ದಾನಧರ್ಮ ಅಥವಾ ನಿಯಮದಿಂದ ಮಾನವರು ಅಮರತ್ವವನ್ನು ಪಡೆಯುವರು ? ಮತ್ತೂ ಯಾವದರಿಂದ ಮಾನವರು ಲೋಕನಿಂದ್ಯವಾದ ಘೋರ ನರಕಗಳಲ್ಲಿ ಬೀಳುವರು ?

ನಾರದರ ಈ ಪ್ರಶ್ನೆಗಳಿಗೆ ಧರ್ಮರಾಜನು ಇತ್ತ ಉತ್ತರವನ್ನು ನಿಮಗೆ ಬಿತ್ತರಿಸುತ್ತೇನೆ ಕೇಳಿರಿ. -

**ನಾಗ್ನಿಚಿನ್ನರಕಂ ಯಾತಿ ನ ಪುತ್ರೀ ನ ಚ ಭೂಮಿದಃ ।**
**ಶೂರಶ್ಚ ಶತವರ್ಷೀ ಚ ವೇದಾನಾಂ ಚೈವ ಪಾರಗಃ ॥ (೧೯)**

ಅಗ್ನಿಹೋತ್ರವನ್ನು ಇಟ್ಟವರು, ಒಳ್ಳೆ ಮಕ್ಕಳನ್ನು ಹೆತ್ತವರು, ಭೂದಾನ ಮಾಡಿದವರು, ವೇದಪಾರಂಗತರು, ಶತಾಯುಷಿಯಾದ ಶೂರರು ನರಕಕ್ಕೆ ಹೋಗುವದಿಲ್ಲ.

**ಪತಿವ್ರತಾ ನ ಗಚ್ಛಂತಿ ಸತ್ಯವಾಕ್ಯಾಶ್ಚ ಯೇ ನರಾಃ ।**
**ಜಿತೇಂದ್ರಿಯಾ ಜಿತಾಶಾಶ್ಚ ಸ್ವಾಮಿ ಭಕ್ತಾಶ್ಚ ಯೇ ನರಾಃ ॥ (೨೦)**

ಪತಿವ್ರತೆಯರೂ, ಸತ್ಯವನ್ನು ನುಡಿಯುವವರೂ, ಎಂದೂ ಹಿಂಸೆಯನ್ನು ಮಾಡದವರೂ, ಬ್ರಹ್ಮಚರ್ಯವ್ರತವನ್ನು ಪಾಲಿಸುವವರೂ ನರಕಕ್ಕೆ ಹೋಗುವದಿಲ್ಲ.

**ಸ್ವದಾರ ನಿರತಾ ದಾಂತಾ ಪರದಾರ ವಿವರ್ಜಕಾಃ ।**
**ಸರ್ವಭೂತಾತ್ಮ ಭೂತಾಶ್ಚ ಸರ್ವ ಭೂತಾನುಕಂಪಕಾಃ ॥ (೨೧-೨೨)**

ಹೆರವರ ಹೆಣ್ಣಿಗೆ ಹಂಬಲಿಸದೇ ತನ್ನ ಮಡದಿಯಲ್ಲಿಯೇ ಪ್ರೇಮ ಮಾಡುವ ದಯಾ ಶೀಲರಾದ ಭಗವದ್ಭಕ್ತರೂ ನರಕಕ್ಕೆ ಹೋಗುವುದಿಲ್ಲ.

**ಜ್ಞಾನಿ ದ್ವಿಜಾ ಯೇ ಚ ಯೇ ಚ ವಿದ್ಯಾಂ ಪರಾಂ ಗತಾಃ ।**
**ಉದಾಸೀನಾ ನ ಗಚ್ಛಂತಿ ಸ್ವಾಮ್ಯರ್ಥೇ ಚ ಹತಾ ನರಾಃ॥ (೨೩-೨೪)**

ಆಧ್ಯಾತ್ಮ ವಿದ್ಯೆಯಲ್ಲಿ ಪಾರಂಗತರಾದ ಜ್ಞಾನಿಗಳೂ, ಲಾಭಾಲಾಭ, ಶತ್ರುಮಿತ್ರ, ಹೊನ್ನು ಮಣ್ಣು, ಅರಳು ಮರಳುಗಳಲ್ಲಿ ಸಮಬುದ್ಧಿಯುಳ್ಳ ವಿರಕ್ತರೂ, ಸ್ವಾಮಿಕಾರ್ಯಕ್ಕಾಗಿ ಪ್ರಾಣಾರ್ಪಣ ಮಾಡಿದವರೂ ನರಕಕ್ಕೆ ಹೋಗುವದಿಲ್ಲ.

**ನ ಗಚ್ಛಂತ್ಯತ್ರ ದಾತಾರಃ ಸರ್ವ ಭೂತಹಿತೇ ರತಾಃ**
**ಶುಶ್ರೂಷಕಾ ಮಾತಾಪಿತ್ರೋರ್ನ ಗಚ್ಛಂತಿ ಚ ತೇ ನರಾಃ ॥ (೨೫)**

ಸರ್ವ ಪ್ರಾಣಿಗಳಿಗೂ ಹಿತವನ್ನು ಉಂಟು ಮಾಡತಕ್ಕ ಮತ್ತೂ ವಿಶೇಷವಾಗಿ ದಾನಧರ್ಮಗಳನ್ನು ಮಾಡುವ, ಮುಖ್ಯವಾಗಿ ತಾಯಿತಂದೆಗಳ ಸೇವೆಯನ್ನು ಗೈಯ್ಯುವ ಪುಣ್ಯಾತ್ಮರೂ ನರಕಕ್ಕೆ ಹೋಗುವದಿಲ್ಲ.

**ತಿಲಾನ್ ಗಾಂ ಚ ಹಿರಣ್ಯಂ ಚ ಪೃಥಿವೀಂ ಚಾಪಿ ಶಾಶ್ವತೀಂ**
**ಬ್ರಾಹ್ಮಣೇಭ್ಯಃ ಪ್ರಯಚ್ಛಂತಿ ನ ಗಚ್ಛಂತಿ ನ ಸಂಶಯಃ ॥ (೨೬)**

ಎಳ್ಳು, ಗೋವು ಮತ್ತೂ ಸ್ಥಿರವಾದ ಪೃಥ್ವಿ ಹಾಗೂ ಬಂಗಾರ ಈ ನಾಲ್ಕನ್ನೂ ಬ್ರಾಹ್ಮಣರಿಗೆ ದಾನವಿತ್ತವರು ನರಕಕ್ಕೆ ಹೋಗುವದಿಲ್ಲ.

**ಗುರುಚಿತ್ತಾನು ಸಾರಾಶ್ಚ ಕೃತಿನೋ ಮೌನಯಂತ್ರಿತಾಃ**
**ನಿತ್ಯಸ್ವಾಧ್ಯಾಯಿನೋ ದಾಂತಾ ಸ್ಸದಾ ಸಭ್ಯಾಶ್ಚ ಯೇ ನರಾಃ ॥ (೨೭-೨೮)**

ಗುರುಗಳ ಇಚ್ಛಾನುವರ್ತಿಗಳಾಗಿ ಮೌನದಿಂದಲೇ ಧರ್ಮ ಕಾರ್ಯಗಳನ್ನು ನಡೆಸುವ, ನಿತ್ಯವೂ ಪಾಠ ಪ್ರವಚನ ಪರಾಯಣರಾದ ಭಗವದ್ಭಕ್ತರು ಎಂದೂ ನನ್ನನ್ನು (ಯಮನನ್ನು) ನೋಡುವದಿಲ್ಲ.

**ಮಾಂ ನ ಪಶ್ಯಂತಿ ತೇಚೈವ ಸ್ವಾತ್ಮಭಾವೇನ ಭಾವಿತಾಃ**
**ಅಪರ್ವಮೈಥುನಾ ಯೇ ಚ ನ ಗಚ್ಛಂತಿ ಜಿತೇಂದ್ರಿಯಾಃ ॥(೨೯)**

ಗುರುಗಳ ಇಚ್ಛಾನುವರ್ತಿಗಳಾಗಿ ಮೌನದಿಂದಲೇ ಧರ್ಮ ಕಾರ್ಯಗಳನ್ನು ನಡೆಸುವ, ನಿತ್ಯವೂ ಪಾಠ ಪ್ರವಚನ ಪರಾಯಣರಾದ ಭಗವದ್ಭಕ್ತರು ಎಂದೂ ನನ್ನನ್ನು (ಯಮನನ್ನು) ನೋಡುವದಿಲ್ಲ.

**ಬ್ರಾಹ್ಮಣಾ ಅಮರತ್ವಂ ಚ ಪ್ರಾಪ್ನುವಂತಿ ನ ಸಂಶಯಃ ।**
**ನಿವೃತ್ತಾಃ ಸರ್ವಕಾಮೇಭ್ಯಃ ನಿರಾಶಾಸ್ಸುಜಿತೇಂದ್ರಿಯಾಃ ।**
**ನ ಗಚ್ಛಂತಿ ಹಿ ತದ್ಘೋರಾಂ ಯತ್ರ ತೇ ಪಾಪ ಕರ್ಮಿಣಃ ॥(೩೧)**

ನಿಷಿದ್ಧ ಕಾಲಗಳಲ್ಲಿ ಸ್ತ್ರೀ ಸಂಗಮವನ್ನು ಮಾಡದೇ ಇಂದ್ರಿಯಗಳನ್ನೆಲ್ಲ ಗೆದ್ದು ಎಲ್ಲ ವಿಷಯ ವಾಸನೆ ಹಾಗೂ ಕಾಮಲಾಲಸಗಳಿಂದ ನಿವೃತ್ತರಾಗಿ ಶ್ರೀ ಹರಿಯನ್ನು ಒಳ್ಳೆ ಮನಸ್ಸಿನಿಂದ ಧ್ಯಾನ ಮಾಡುವ ವಿರಾಗಿಗಳೂ, ತ್ಯಾಗಯೋಗಿಗಳೂ ಎಂದೂ ನರಕಕ್ಕೆ ಹೋಗದೇ ಅಮರರಾಗಿ ದಿವ್ಯ ಲೋಕಗಳನ್ನು ಹೊಂದುವರು.

**ನಾರದ :-** ದಾನವು ಶ್ರೇಷ್ಠವೊ ಅಥವಾ ಪಾತ್ರವು ಶ್ರೇಷ್ಠವೋ ? ಯಾವ ಧರ್ಮ ಕರ್ಮಗಳನ್ನು ಮಾಡುವದರಿಂದ ಸ್ವರ್ಗಲೋಕದ ಪ್ರಾಪ್ತಿಯಾಗುವದು ? ಮತ್ತೂ ಯಾವ ದಾನದಿಂದ ಸೌಂದರ್ಯ, ಸೌಭಾಗ್ಯ, ಸಂಪತ್ತು, ಸಂತತಿ ಮುಂತಾದವುಗಳೆಲ್ಲ ದೊರಕುವವು ?

**ಯಮ :-** ನಾರದ, ಈ ಶುಭಾಶುಭ ಗತಿಗಳನ್ನು ಹಾಗೂ ಸತ್ಕರ್ಮ ದುಷ್ಕರ್ಮಗಳ ಫಲಶ್ರುತಿಗಳನ್ನೂ ಹೇಳಲು ನೂರುವರ್ಷಗಳಾದರೂ ಸಾಲದು. ಆದರೂ ಸಂಕ್ಷೇಪದಿಂದ ಕೆಲವು ವಿಷಯಗಳನ್ನು ತಿಳಿಸುತ್ತೇನೆ ಕೇಳು.- ಸ್ವರ್ಗ, ಯಶಸ್ಸು, ದೀರ್ಘಾಯುಷ್ಯ, ಭೋಗಭಾಗ್ಯ, ಜ್ಞಾನವಿಜ್ಞಾನ, ಆರೋಗ್ಯ, ಸೌಭಾಗ್ಯ, ಸಂಪದ ಹಾಗೂ ಸೌಂದರ್ಯ ಮುಂತಾದವುಗಳೆಲ್ಲ ತಪಸ್ಸಿನಿಂದ ದೊರಕುವವು. ಇದರಂತೆ ವಿಶೇಷವಾಗಿ ಮೌನ ವ್ರತದಿಂದ ಅಧಿಕಾರ, ಧ್ಯಾನದಿಂದ ಭೋಗ, ಬ್ರಹ್ಮಚರ್ಯದಿಂದ ದೀರ್ಘಾಯುಷ್ಯ, ಅಹಿಂಸಾ ವ್ರತದಿಂದ ಸೌಂದರ್ಯ, ಯಜ್ಞ ದೀಕ್ಷೆಯಿಂದ ಸತ್ಕುಲದಲ್ಲಿ ಜನ್ಮ, ಗೆಡ್ಡೆ ಗೆಣಸು ಹಣ್ಣುಹಂಪಲಗಳನ್ನು ಮಾತ್ರ ತಿಂದಿರುವರಿಂದ ರಾಜ್ಯ, ಎಲೆಯನ್ನು ತಿಂದಿರುವದರಿಂದ ಸ್ವರ್ಗವು ಪ್ರಾಪ್ತವಾಗುವವು. ಹಾಲಿನ ವ್ರತದಿಂದ ಸ್ವರ್ಗಲೋಕ, ಗುರುಸೇವೆಯಿಂದ ಐಶ್ವರ್ಯ, ಶ್ರಾದ್ಧ ದಾನದಿಂದ ಸಂತಾನ, ರಸಗಳನ್ನು ತ್ಯಾಗ ಮಾಡುವದರಿಂದ ಸೌಭಾಗ್ಯ, ಮಾಂಸ ತ್ಯಾಗದಿಂದ ಆಯುಷ್ಯವಂತರಾದ ಮಕ್ಕಳು, ಅನ್ನದಾನದಿಂದ ಸ್ಮರಣಶಕ್ತಿ ಹಾಗೂ ಬುದ್ಧಿಶಕ್ತಿಗಳೂ ಮಾನವರಿಗೆ ದೊರಕುವವು.

ಛತ್ರಿ (ಕೊಡೆ) ಯನ್ನು ಕೊಡುವದರಿಂದ ಒಳ್ಳೆ ಮನೆ, ಪಾದರಕ್ಷೆಗಳ ದಾನದಿಂದ ರಥ, ವಸ್ತ್ರದಾನದಿಂದ ಸೌಂದರ್ಯ, ಧನದಾನದಿಂದ ಪುತ್ರಸಂತಾನ, ಜಲದಾನದಿಂದ ತೃಪ್ತಿ, ಅನ್ನದಾನದಿಂದ ಭೋಗೋಪಭೋಗ, ಹೂವು, ಹಣ್ಣು ತುಂಬಿದ ಮರವನ್ನು ಬ್ರಾಹ್ಮಣನಿಗೆ ದಾನ ಮಾಡುವದರಿಂದ ಒಳ್ಳೇ ಗೃಹಿಣಿಯಿಂದ ಒಡಗೂಡಿದ ಐಶ್ವರ್ಯ ಭರಿತವಾದ ಗ್ರಹವೂ ದಾನಿಗಳಿಂದ ಹೊಂದಲ್ಪಡುವವು.

ಇದರಂತೆ ಅನ್ನ, ವಸ್ತ್ರ, ಪಾನೀಯ, ರಸದಾನಗಳಿಂದ ಅವೇವಸ್ತುಗಳನ್ನು ಮಾನವನು ವಿಶೇಷವಾಗಿ ಮರಳಿ ಪಡೆಯುವನು. ಸುಗಂಧಿ ಹೂಹಾರಗಳನ್ನು ಬ್ರಾಹ್ಮಣರಿಗೆ ದಾನ ಮಾಡುವದರಿಂದ ನರನ ರೋಗ ಪರಿಹಾರವಾಗಿ ರೂಪವಂತ ನಾಗುವನು. ಧೂಪದಾನದಿಂದ ಗೋಲೋಕ, ಗೋದಾನದಿಂದ ಸ್ವರ್ಗಲೋಕ, ಎತ್ತಿನ ದಾನದಿಂದ ತೇಜಸ್ಸು, ಗಜದಾನದಿಂದ ಗಜಾಂತ ಐಶ್ವರ್ಯ, ತುಪ್ಪದ ದಾನದಿಂದ ತೇಜಸ್ಸು, ಎಣ್ಣೆಯ ದಾನದಿಂದ ಕಾಂತಿ ಹಾಗೂ ಸ್ನೇಹ, ಜೇನುತುಪ್ಪ ದಾನದಿಂದ ರಸತೃಪ್ತಿ, ದೀಪ ದಾನದಿಂದ ಕಾಂತಿ, ಪಾಯಸದಾನದಿಂದ ದೇಹಪುಷ್ಟಿ, ಚಿಗುಳಿಯ ದಾನದಿಂದ ಸೌಮ್ಯ ಲಾವಣ್ಯ, ಹಣ್ಣಿನ ದಾನದಿಂದ ಗಂಡುಮಗು, ಪುಷ್ಪ ದಾನದಿಂದ ಸೌಭಾಗ್ಯ, ವಾಹನ ದಾನದಿಂದ ವಿಮಾನ ಪಲ್ಲಕ್ಕಿ ಗೌರವ, ದೇವ ಗುರುದರ್ಶನದಿಂದ ಸೌಭಾಗ್ಯ, ಪ್ರಾಣಿಗಳಿಗೆ ಅಭಯ ದಾನದಿಂದ ಸಕಲಇಷ್ಟಾರ್ಥಗಳನ್ನೂ ನಿಸ್ಸಂಶಯವಾಗಿಪಡೆಯುವರು.

## ವಿಮಾನ ಸುಂದರಿಯ ಪ್ರಶ್ನೆ ಯಮನ ಉತ್ತರ

**ನಚಿಕೇತ :-** ನಾನು ಯಮಲೋಕದಲ್ಲಿದ್ದಾಗ ಒಂದು ದಿನ ವಿಮಾನದಲ್ಲಿ ಕೆಲವು ತಪಸ್ವಿಗಳಾದ ಬ್ರಾಹ್ಮಣರು ಅಲಂಕೃತರಾದ ತಮ್ಮ ಮಡದಿಯರೊಡನೆ ಕುಳಿತುಕೊಂಡು ಆನಂದದಿಂದ ಬರುತ್ತಿದ್ದರು. ಮುತ್ತು ರತ್ನಗಳ ಬಗೆಬಗೆಯ ಆಭರಣಗಳನ್ನು ಧರಿಸಿದ ಆ ಚಲುವೆಯರಿಗೆ ನರಕ ಲೋಕವನ್ನು ತೋರಿಸುತ್ತ ಆಢ್ಯತೆಯಿಂದ ವಿಮಾನಾರೂಢರಾಗಿ ಬರುತ್ತಿರುವ ಆ ವಿಪ್ರವೃಂದವನ್ನು ಕಂಡು ಯಮಧರ್ಮನು ಖಿನ್ನನಾಗಿ ತಲೆತಗ್ಗಿಸಿದನು. ಅವರಾರಿಗೂ ಯಮದೇವನ ಕಿಮ್ಮತ್ತು ಇರಲಿಲ್ಲ. ಈ ಧರ್ಮ ದೇವತೆಗೆ ಹೆದರದೇ ಹಿಂಜರಿಯದೆ ಆ ವಿಪ್ರರು ಧೈರ್ಯವಾಗಿ ಅವನನ್ನು ಮೂದಲಿಸಿ ಮಾತನಾಡುತ್ತಿದ್ದರು. ತಪೋನಿಷ್ಠರೂ, ಕೃತಕಾರ್ಯರೂ, ಜಿತೇಂದ್ರಿಯರೂ ಆದ ಆ ಬ್ರಾಹ್ಮಣರು ಯಮ ಧರ್ಮನ ಅರಿವು ಪರಿವೆ ಇಲ್ಲದೇ ಅವನ ರಾಜಧಾನಿಯ ಮೇಲೆ ಸಾಹಂಕಾರದಿಂದ ಸಂಚಾರ ಮಾಡುತ್ತಿದ್ದರು. ಜನ್ಮಾವಧಿ ಮಾಡಿದ ಪುಣ್ಯ ಸಾಧನೆಯಿಂದ ಭಗವದ್ ಅನುಗ್ರಹವನ್ನು ಪಡೆದು ಯಮನ ಅಂಜಿಕೆಯೇ ಹಾರಿಹೋದಂತಾದ ಆ ಧೀರ ಬ್ರಹ್ಮವೃಂದವನ್ನು ಕಂಡು ಧರ್ಮರಾಜನಿಗೆ ತುಸು ಅಸೂಯೆಯೂ ಆಯಿತು. ದುಃಖವೂ ಆಯಿತು. ''ಈ ಮಹಾತ್ಮರ ಮೇಲೆ ನಿಗ್ರಹ ಮಾಡಲಿಕ್ಕಾಗಲಿ, ಅನುಗ್ರಹ ಮಾಡಲಿಕ್ಕಾಗಲಿ ನನಗೆ ಸಾಧ್ಯವಿಲ್ಲದಾಗಿದೆ. ಅವರಿಗೆ ವಿಧಾನ ಮಾಡುವದೂ, ನಿಷೇಧ ಮಾಡುವದೂ ನನ್ನ ಅಧಿಕಾರ ಕಕ್ಷೆಯಲ್ಲಿಯೇ ಇಲ್ಲ. ಇದು ನನಗೆ ಒಳ್ಳೇ ತಾಪದಾಯಕವಾಗಿದೆ'' ಎಂದು ಮನಸ್ಸಿನಲ್ಲಿಯೇ ಕುದಿಯತೊಡಗಿದನು. ಅಷ್ಟರಲ್ಲಿ ಓರ್ವ ವಿಮಾನ ಸುಂದರಿಯು ತನ್ನ ನಲ್ಲನೊಡನೆ ಕೂಡಿ ಅಲ್ಲಿಗೆ ಐತಂದಳು. ಧರ್ಮರಾಜನ ಮನದ ದುಗುಡವನ್ನು ಅರಿತ ಅವಳು ಅವನನ್ನು ಕುರಿತು ಇಂತು ನುಡಿದಳು. -

''ಧರ್ಮರಾಜ, ತಪಸ್ವಿ ಬ್ರಾಹ್ಮಣರಲ್ಲಿ ಹೀಗೆ ಹೊಟ್ಟೆಕಿಚ್ಚು ಪಡುವದು ನಿನ್ನ ಧರ್ಮವಲ್ಲ. ವೇದ ಪಾರಂಗತರಾದ ತಪಸ್ವಿ ಬ್ರಾಹ್ಮಣರು ಸರ್ವ ದೇವತಾ ಸ್ವರೂಪರಾದುದರಿಂದ ಅವರನ್ನು ಪೂಜಿಸುವದೇ ದೊಡ್ಡ ವರ ಕರ್ತವ್ಯವಾಗಿದೆ.''

ಹೀಗೆ ಹೇಳಿ ಆ ಪತಿವ್ರತೆಯಾದ ಪ್ರಮದಾಮಣಿಯು ಮುಗಿಲಂಚಿನಲ್ಲಿ ಮಿಂಚಿನ ಮೂರ್ತಿಯಂತೆ ಕಂಚು ಮಿಂಚಾಗಿ ಮಿಂಚಿ ಮುನ್ನಡೆದಳು. ಇದನ್ನೆಲ್ಲ ನೋಡಿ ನಾರದರು ಕೌತುಕ ಭರಿತರಾಗಿ ಧರ್ಮರಾಜನನ್ನು ಕುರಿತು ''ಇವಳು ಯಾರು ? ಇಲ್ಲಿಗೇಕೆ ಬಂದಿದ್ದಳು ? ಹೇಳು '' ಎಂದು ಕೇಳಿದರು. ಆಗ ಯಮಧರ್ಮರು ವಿಮಾನ ವಾಹಿನಿಯಾದ ಆ ಪತಿವ್ರತೆಯ ಕೌತುಕದ ಕತೆಯನ್ನು ಬಿತ್ತರಿಸಿದರು. ಅದನ್ನು ನಿಮಗೆ ಹೇಳುತ್ತೇನೆ ಕೇಳಿರಿ.-

''ಹಿಂದೆ ಕೃತಯುಗದಲ್ಲಿ ಸತ್ಯ ಸಂಧನಾದ ನಿಮಿ ರಾಜನಿಗೆ ಜನಕ ಎಂಬ ಹೆಸರಿನ ಸತ್ಪುತ್ರನಿದ್ದನು. ಆ ಜನಕ ರಾಜನ ಮಡದಿಯಾದ ರೂಪವತಿಯು ಹೆಸರಿಗೆ ತಕ್ಕಂತೆ ಬರೀ ರೂಪವತಿಯಾಗದೇ ಗುಣವತಿಯೂ ಆಗಿದ್ದಳು. ಪತಿಗೆ ಹಿತಾಚರಣೆಯೇ ಅವಳ ವ್ರತವಾಗಿತ್ತು. ಗಂಡನ ಮಾತನ್ನು ಸಂತೋಷದಿಂದ ಅವಳು ಪಾಲಿಸುತ್ತಿದ್ದಳು. ಅವಳು ಮಾಡುವ ಕಾರ್ಯಗಳೆಲ್ಲವೂ ಪತಿ ಭಕ್ತಿಯಿಂದಲೇ ಪ್ರೇರಿತವಾಗಿರುತ್ತಿದ್ದವು. ಆ ರಾಜನಾದರೂ ದಯಾ ಪರನಾಗಿ ಭೂಮಿಯನ್ನು ಆಳುತ್ತಿದ್ದನು. ಆ ಧರ್ಮಾತ್ಮನ ಆಳಿಕೆಯಲ್ಲಿ ಸಮಗ್ರ ರಾಷ್ಟ್ರದಲ್ಲಿ ಎಲ್ಲಿಯೂ ರೋಗ, ರುಜಿನ, ಬರಗಾಲ, ಕರಿಗಾಲ, ಸಾವು ನೋವು, ಯಾವದೂ ಇರಲಿಲ್ಲ. ರಾಜ ರಾಣಿಯರು ಕೈಗೆ ಬಂದಂತೆ ದಾನಧರ್ಮವನ್ನು ಮಾಡಿ ಬೊಕ್ಕಸವನ್ನೆಲ್ಲ ಬರಿದು ಮಾಡಿದ್ದರು. ಒಂದು ದಿನ ಆ ರಾಜ ಸುಂದರಿಯು ದೊರೆಯನ್ನು ಕುರಿತು ಮಂದಹಾಸವನ್ನು ಬೀರುತ್ತ ಮಾತನಾಡಿದಳು -

''ನಾಥ, ಅರಮನೆಯ ಭಂಡಾರದಲ್ಲಿದ್ದ ಹಣವನ್ನೆಲ್ಲ ದಾನಕೊಟ್ಟು ಬರಿದಾಗಿದೆ. ಮುಂದೆ ಭೋಜನಕ್ಕೆ ಏನು ಗತಿ ? ಮನೆಯಲ್ಲಿ ಧನಧಾನ್ಯಗಳಾಗಲಿ, ಬಟ್ಟೆ ಬರೆಗಳಾಗಲಿ, ಆಕಳು ಕರುಗಳಾಗಲಿ ಇಲ್ಲ. ದೇವರ ಪೂಜೆಗೆ ಹೂ ಹಣ್ಣುಗಳನ್ನು ಕೊಳ್ಳಲು ನಮ್ಮಲ್ಲಿ ಹಣವಿಲ್ಲ. ನಮಗೆ ಬೇರೆ ವಾರ್ಷಿಕ ಆ ಆದಾಯವೂ ಇದ್ದಂತಿಲ್ಲ. ಮುಂದೆ ನಮ್ಮ ಹೊಟ್ಟೆಯ ಗತಿ ಏನು ? ಎಂದು ಕೇಳಿದಳು. ಅದನ್ನು ಕೇಳಿ ಮಹಾರಾಜನು ನಲುಮೆ ದುಂಬಿ ನುಡಿದನು -

''ಪ್ರಿಯೆ, ಯಜ್ಞ ಯಾಗಾದಿಗಳನ್ನು ಮಾಡುತ್ತಲೇ ಇದ್ದ ನಮ್ಮ ನೂರು ವರ್ಷದ ಆಯುಷ್ಯವು ಕಳೆದಿದೆ. ಸತ್ಕಾರ್ಯಕ್ಕಾಗಿ ನಮ್ಮ ಐಶ್ವರ್ಯವೆಲ್ಲವೂ ವಿನಿಯೋಗ ವಾದದ್ದರಿಂದ ಚಿಂತಿಸುವ ಕಾರಣವಿಲ್ಲ. ಈ ರಾಜಧಾನಿಯ ಸಮೀಪದಲ್ಲಿಯೇ ಇರುವ ಕಾಡು ಭೂಮಿಯನ್ನು ಸಲಿಕೆ, ಗುದ್ದಲಿ, ಕೊಡಲೆಗಳಿಂದ ಕಡಿದು ಅಗಿದು ನೇಗಿಲದಿಂದ ನೇಗಿಲ ಹೊಡೆದು ಹದ ಗೊಳಿಸಿ ಹೊಲವನ್ನಾಗಿ ಮಾಡೋಣ. ಅಲ್ಲೆ ಕಾಳು ಬಿತ್ತಿ ಬೆಳೆ ಬೆಳೆಯೋಣ. ಆ ಧಾನ್ಯದಿಂದ ಧರ್ಮಕಾರ್ಯ ಮಾಡಿ, ದಾನ ನೀಡಿ, ನಾವೂ ಉಂಡು ಬದುಕೋಣ. ನಾವು ಬೆಳೆದ ಕಾಳು ಕಡಿಗಳಿಂದ ಬೇಕು ಬೇಕಾದ ಭಕ್ಷ ಭೋಜ್ಯಗಳನ್ನು ತಯಾರು ಮಾಡಿ ಅತಿಥಿಗಳಿಗೆ ಉಣ ಬಡಿಸಿ ನೀನು ಉಂಡು ಬಯಸಿದ ಸುಖವನ್ನು ನೀನು ಪಡೆಯುವೆ. ಮಹಾರಾಜನ ಈ ಮಾತುಗಳನ್ನು ಕೇಳಿ ಮಹಾರಾಣಿಗೆ ಖೇದವೆನಿಸಿತು. ಅವಳ ರಾಜ ಪಿಂಡವು ನೆಲದ ಮಣ್ಣಿನಲ್ಲಿ ಮೈಮಣಿಸಿ ಬೆವರು ಸುರಸಿ ದುಃಖದ ದುಡಿಮೆಗೆ ಇಳಿಯಲು ಒಮ್ಮೆಲೇ ಸಿದ್ಧವಾಗಲಿಲ್ಲ. ಅವಳು ತನ್ನ ಪತಿಯನ್ನು ಸಲುಗೆಯಿಂದ ಕೇಳಿದಳು.-

''ಪ್ರಭು, ನಿಮ್ಮ ಅರಮನೆಯಲ್ಲಿ ಸೇವಕರಿಗೆ ಏನು ಕೊರತೆ ! ಸಾವಿರಾರು ಜನ ಆಳು ಹೋಳುಗಳು ಇರುತ್ತಾರೆ. ಅದರಂತೆ ಆನೆ, ಕುದುರೆ, ಒಂಟೆ, ಕೋಣ, ಕತ್ತೆ ಎತ್ತು ಮುಂತಾದ ಪ್ರಾಣಿಗಳು ಸಾವಿರ ಸಾವಿರ ಸಂಖ್ಯೆಯಲ್ಲಿ ಇರುತ್ತವೆ. ಇಷ್ಟೆಲ್ಲ ಸಾಧನೆ ಸಲಕರಣೆ ಹಾಗೂ ಅವುಗಳಿಂದ ಕೆಲಸ ಮಾಡಿಸುವ ಸೇವಕ ವರ್ಗವು ಸಾಕಷ್ಟು ಇರುವಾಗ ನಾನೇಕೆ ದುಡಿಯಬೇಕು ! ನೀನೇಕೆ ಗುದ್ದಲಿ ಹಿಡಿಯಬೇಕು. ? ಮಹಾರಾಣಿಯ ಈ ಮಾತುಗಳನ್ನು ಕೇಳಿ ನಿಷ್ಕುರನಾದ ಮಹಾರಾಜನು ಹೀಗೆ ನುಡಿದನು.

''ಸುಂದರಿ, ನನ್ನ ರಾಜಧಾನಿಯಲ್ಲಿ ಇರುವ ಭೃತ್ಯ ಸೇವಕ ಪರಿವಾರ ವರ್ಗದವರಿಗೆಲ್ಲ ಕೆಲಸವಿತ್ತು. ಅದಕ್ಕೆ ಒಂದೊಂದು ವರ್ಷದ ಅವಧಿಯನ್ನು ಗೊತ್ತು ಪಡಿಸಲಾಗಿದೆ. ಇದಲ್ಲದೇ ಅವರಿಗೆ ತಮ್ಮ ವೈಯಕ್ತಿಕ ಕಾರ್ಯಗಳೂ ಬೇರೆ ಇರಬಹುದು. ಅವರಾರಿಗೂ ನನ್ನ ಸಲುವಾಗಿ ದುಡಿಯಲು ಅವಕಾಶವಿರುವುದಿಲ್ಲ. ಇದರಂತೆ ಎತ್ತು, ಕತ್ತೆ, ಆನೆ, ಕುದುರೆ, ಒಂಟೆ, ಕೋಣಗಳನ್ನೂ ಕೂಡ ಬೇರೆ ಬೇರೆ ಕಾರ್ಯಗಳಲ್ಲಿ ತೊಡಗಿಸಲಾಗಿದೆ. ಹಾಗೂ ರಾಜ್ಯದಲ್ಲಿರುವ ಕಬ್ಬಿಣ, ಉಕ್ಕು ಸೀಸ, ತವರ, ತಾಮ್ರ ಬೆಳ್ಳಿ, ಬಂಗಾರ ಮುಂತಾದ ಧಾತುಗಳನ್ನೆಲ್ಲ, ಪ್ರಜಾಜನರಿಗೆಲ್ಲ ಉಪಯುಕ್ತವಾದ ಪಾತ್ರ ಪರಡಿ ಆಯುಧ, ಆಭರಣ ಮುಂತಾದವುಗಳನ್ನು ಮಾಡಲಿಕ್ಕಾಗಿ ಉಪಯೋಗಿಸಲಿಕ್ಕೆಂದು ಗೊತ್ತು ಪಡಿಸಲಾಗಿದೆ. ಉದ್ದಿಷ್ಟ ಕಾರ್ಯಗಳಿಗಾಗಿ ಮೀಸಲಾಗಿಡಿಸಿದ ಆ ಪದಾರ್ಥಗಳನ್ನು ನಾನು ನನ್ನ ಸ್ವಾರ್ಥಕ್ಕಾಗಿ ಬಳಸಲಾರೆ. ಆದುದರಿಂದಲೇ ಕಟ್ಟಿಗೆಯಿಂದ ಗುದ್ದಲಿಯನ್ನು ಮಾಡಿ ಆ ಕಾಡನ್ನು ಕಡಿದು ಹೊಲವನ್ನು ಹದ ಮಾಡಿ ಉತ್ತಿ, ಬಿತ್ತಿ, ಬೆಳೆಯನ್ನು ಪಡೆಯೋಣ.'' ಮಹಾರಾಜನ ಈ ಮಾತುಗಳನ್ನು ಕೇಳಿ ರಾಣಿಗೆ ಪರಮಸಂತೋಷವಾಯಿತು. ಅವಳು ತನ್ನ ಪತಿಯ ಉದಾರ ದೃಷ್ಟಿ ಪ್ರಜಾಹಿತಾಕಾಂಕ್ಷೆಗಳನ್ನು ಕಂಡು ಉಬ್ಬಿ ಹೋದಳು. ಹಾಗೂ ಉತ್ಸಾಹದಿಂದ ನುಡಿದಳು- ''ಪ್ರಾಣನಾಥ, ನೀವು ನಿಮ್ಮ ಮನಬಂದಲ್ಲಿಗೆ ನಡೆಯಿರಿ. ನಾನು ನಿಮ್ಮ ಬೆನ್ನ ಹಿಂದೇ ಬರುತ್ತೇನೆ'' ಎಂದು ಹೇಳಿದಳು. ಆಗ ಆ ಭೂಪತಿಯು ಮಡದಿಯೊಡನೆ ಮನೆ ಬಿಟ್ಟು ಹೊರಬಿದ್ದನು. ಅವರಿಬ್ಬರೂ ಹೊಲ ಮಾಡಲು ಯೋಗ್ಯವಾದ ನೆಲವನ್ನು ಶೋಧಿಸುತ್ತ ನಡೆದರು. ಬಹು ದೂರ ಹೋದ ಬಳಿಕ ಒಂದು ವಿಶಾಲವಾದ ಸ್ಥಳವನ್ನು ನೋಡಿ ಆ ದೊರೆಯು ತನ್ನ ಪಟ್ಟ ಮಹಿಷಿಗೆ ಇಂತು ನುಡಿದನು.-

''ಪ್ರಿಯೇ, ಇದೋ ಈ ನೆಲವು ನಮ್ಮ ಹೊಲವಾಗಲು ಯೋಗ್ಯವಿದೆ. ಇದರಲ್ಲಿಯ ಗಿಡಗಂಟಿಗಳನ್ನು ಮುಳ್ಳುಕಂಟಿಗಳನ್ನೂ ನಾನು ಕಡಿದು ಬಿಡುತ್ತೇನೆ. ಅವುಗಳನ್ನೆಲ್ಲ ನೀನು ಬಳಿದು ಒಟ್ಟಿ ಹೊರಗೆ ಹಾಕಿ ಈ ಭೂಮಿಯನ್ನು ಸ್ವಚ್ಛ ಮಾಡು. ಇದೇ ನಿಜವಾದ ಕರ್ಮಯೋಗ. ಇದರಿಂದ ನಮ್ಮ ಇಷ್ಟಾರ್ಥಗಳನ್ನೆಲ್ಲ ನಾವು ಪಡೆಯಬಲ್ಲೆವು.'' ಮಹಾರಾಜನ ಮಾತುಗಳನ್ನು ಕೇಳಿ ಅರಸಿಗೆ ನಗೆ ಬಂದಿತು. ಅವಳು ಮಿದುವಾಗಿ ನಕ್ಕು ಮಧುರವಾಗಿ ನುಡಿದಳು.-

''ನಾಥ, ಇಲ್ಲಿಯೇ ಪಕ್ಕದಲ್ಲಿ ಒಂದು ಬನ್ನಿಯ ಗಿಡವು ಕಾಣುತ್ತದೆ. ಇಲ್ಲೆಲ್ಲಿಯೂ ನೀರಿನ ಶೆಲೆ ಕಾಣುವುದಿಲ್ಲ. ಇಲ್ಲಿ ಹೊಲವನ್ನು ಮಾಡುವದು ಹೇಗೆ ? ಇಲ್ಲಿ ಮಾಡಿದ

ನಮ್ಮ ಬೇಸಾಯವು ಲಾಭಕಾರಕವು ಎಂತಾದೀತು ? '' ಮಡದಿಯ ಈ ಹಿತನುಡಿಗಳನ್ನು ಆಲಿಸಿದ ಆ ಪೊಡವಿಯೊಡೆಯನು ತುಸು ವಿಚಾರ ಮಾಡಿ ಮಾರ್ನುಡಿದನು- ''ಪ್ರೇಯಸಿ, ಈ ಹೊಲದ ಸುತ್ತುಮುತ್ತು ನಾಲ್ಕು ಯೋಜನದವರೆಗೆ ಯಾವ ಜಲಾಶಯವೂ ತೋರುವುದಿಲ್ಲ. ಆದರೆ ಈ ಕ್ಷೇತ್ರದ ಪೂರ್ವ ಭಾಗವನ್ನು ನೋಡಿದರೆ ಮತ್ತು ಅಲ್ಲಿ ಬೆಳೆದ ಈ ಗಿಡವನ್ನೂ ಮಿದುವಾಗಿ ಹದಗೊಂಡಂತಿರುವ ಮಣ್ಣನ್ನೂ ನೋಡಿದರೆ ಇಲ್ಲಿ ಸಮೀಪದಲ್ಲಿಯೇ ನೀರು ಇರಬಹುದು ಎಂದು ನಿಶ್ಚಿತವಾಗಿ ತಿಳಿದು ಬರುವದು. ಕೃಷಿಗೆ ಈ ನೆಲವು ಬಹಳ ಒಳ್ಳೇದು ಎಂದು ಕಾಣುತ್ತದೆ. ಬೇರಾವ ಆತಂಕವೂ ಇರುವುದಿಲ್ಲ ''

ಎಂದು ಹೇಳಿ ಮಹಾರಾಜನು ಆ ಹೊಲದಲ್ಲಿಯ ಬಳ್ಳಿ ಕಳ್ಳಿಗಳನ್ನೂ, ಗಿಡ ಗುಂಪುಗಳನ್ನೂ, ಮುಳ್ಳಿನ ಪೊದೆಗಳನ್ನು ಕಡಿಕಡಿದು ರಾಶಿ ಹಾಕಿದನು. ಅವನ ಪಟ್ಟದರಸಿಯು ಬಹು ಕಷ್ಟಪಟ್ಟು ಪತಿಯು ಕಡಿದೊಗೆದ ಗಿಡಗಂಟೆಗಳ ಹೊರೆಗಳನ್ನು ದೂರ ತೆಗೆದೊಗೆದು ಭೂಮಿಯನ್ನು ಸ್ವಚ್ಛ ಮಾಡಿದಳು.

ಅಷ್ಟರಲ್ಲಿ ಸೂರ್ಯನು ನಡುನೆತ್ತಿಗೇರಿದನು. ಬಿಸಿಲು ಬೆಂಕಿಯಾಗಿ ಸುಡತೊಡಗಿತು. ಬೆವರು ಕೋಡಿಟ್ಟು ಹರಿಯಿತು. ಆ ಭಯಂಕರವಾದ ಬಿಸಿಲಲ್ಲಿಯೇ ನಿಬಿಡವಾದ ಕಾಡಿನಲ್ಲಿ ದುಡಿದುಡಿದು ಮಹಾರಾಣಿಯ ಗಂಟಲು ಒಣಗಿತು. ನೀರಡಿಕೆಯಿಂದ ನಾಲಿಗೆ ಸೇದತೊಡಗಿತು. ಅವಳ ಕೆಂಪಗಾದ ಅಂಗಾಲುಗಳಿಂದ ರಕ್ತವು ಚಿಮ್ಮತೊಡಗಿತು. ಸೂರ್ಯನ ಕಿರಣಗಳು ಮಧ್ಯಾಹ್ನದಲ್ಲಿ ಕೆಂಡದ ಉಂಡೆಗಳನ್ನೇ ತೂರಿದಂತೆ, ಬೆಂಕಿಯನ್ನೇ ಬೀರಿದಂತೆ ಸಂತಾಪವನ್ನು ಹುಟ್ಟಿಸುತ್ತಲಿದ್ದವು. ಅದರಿಂದ ಕಸವಿಸಿಗೊಂಡ ಆ ಅರಸಿಯು ದೀನಳಾಗಿ ಪತಿಯನ್ನು ಕೇಳಿದಳು.-

''ಮಹಾರಾಜ, ಬಿಸಿಲಿನ ಬೇಗೆಯಿಂದ ಬಾಯಾರಿ ಬಳಲಿ ಬಸವಳಿದಿದ್ದೇನೆ. ಕೂಡಲೇ ನೀರನ್ನು ಕೊಡಿರಿ. ಬೇಗ ದಯೆದೋರಿರಿ. '' ಹೀಗೆ ಹೇಳಿ ದಾಹ ದುಃಖ ಪರವಶಳಾದ ದೇವಿಯು ನೆಲಕ್ಕೆ ಬಿದ್ದು ಬಿಟ್ಟಳು.

ಅವಳು ನೆಲಕ್ಕೆ ಉರುಳುವಾಗ ಅತ್ತತ್ತು ಅವಳ ಕಣ್ಣು ಕೆಂಪಗಾಗಿದ್ದವು. ಅತ್ಯಂತ ಉಗ್ರವಾದ ಸೂರ್ಯನ ಕಿಡಿಕಿರಣಗಳೇ ತನ್ನ ಕ್ಲೇಶ ಹಾಗೂ ಬಾಯಾರಿಕೆಗಳಿಗೆ ಕಾರಣ ಎಂಬ ಭಾವನೆಯಿಂದ ಅವಳಿಗೆ ಸೂರ್ಯನ ಮೇಲೆಯೂ ಬಹಳ ಕೋಪ ಬಂದಿತು. ಕೆಂಗಣ್ಣಿನಿಂದ ಅವಳು ಸೂರ್ಯನನ್ನು ಕೆಕ್ಕರಿಸಿ ನೋಡಿದಳು. ಆ ಸಿಟ್ಟಿನ ಭರದಲ್ಲಿ ಕೆಂಪಗಾದ ಅವಳ ದೃಷ್ಟಿಕ್ಷೇಪದಿಂದಲೇ ಸೂರ್ಯನೂ ಕೂಡ ಉರುಳಿ ನೆಲದ ಮೇಲೆ ಬಿದ್ದನು. ಅದನ್ನು ಕಂಡು ಅಶ್ಚರ್ಯ ಚಕಿತನಾದ ಜನಕರಾಜನು ತಿರೆಗುರುಳಿದ ಆ ತೇಜಃಪಿಂಡವನ್ನು ಕುರಿತು ಇಂತು ಪ್ರಶ್ನಿಸಿದನು.- ಎಲ್ಲ ಜನರಿಂದಲೂ ವಂದಿತನಾದ ಸೂರ್ಯದೇವನೇ, ಆಕಾಶವನ್ನು ಬಿಟ್ಟು ಭೂಲೋಕಕ್ಕೆ ನೀನೇಕೆ ಬಂದೆ ? ನಿನಗಾಗಿ ನಾನೇನು ಮಾಡಲಿ ? ಆಗ ಸೂರ್ಯನು ಆ ದೊರೆಯನ್ನು ಕುರಿತು ವಿನಯದಿಂದ ಅನುನಯದ ದನಿಯಲ್ಲಿ ಮಾತನಾಡಿದನು -

''ಮಹಾರಾಜ, ನಿನ್ನ ಪತ್ನಿಯಾದ ಈ ಪತಿವ್ರತೆಯು ನನ್ನ ಮೇಲೆ ಸಿಟ್ಟಾಗಿ ನೋಡಿದ್ದರಿಂದ ನಾನು ನೆಲದ ಮೇಲೆ ಬಿದ್ದು ಬಿಟ್ಟೆನು. ಇಂಥ ಪತಿವ್ರತೆಯಾದ

ನಾರಿಯನ್ನು ನಾನು ನೆಲದಲ್ಲಿ ನೋಡಿಲ್ಲ. ನಾಕದಲ್ಲಿ ಕಂಡಿಲ್ಲ. ನಿನ್ನ ಚಿತ್ತಾನುವರ್ತಿನಿಯಾದ ಇವಳಲ್ಲಿ ನಿನ್ನ ಧೈರ್ಯವೂ ಇದೆ. ನನ್ನ ಸ್ಥೈರ್ಯವೂ ಇದೆ. ಇಂದ್ರನಿಗೆ ಶಚಿಯಂತೆ ಈ ಸಾಧ್ವಿಯು ನಿನಗೆ ಅನುರೂಪಳಾದ ಸತಿಯು ಆಗಿದ್ದಾಳೆ. ನಿಮ್ಮಿಬ್ಬರ ಸುದೈವದಿಂದಲೇ ನ್ಯಾಯನಿಷ್ಠನಾದ ನಿನಗೆ ಈ ಬೇಸಾಯದ ವ್ಯವಸಾಯ ವನ್ನು ಮಾಡಬೇಕೆಂದು ಬುದ್ಧಿಯು ಉತ್ಪನ್ನವಾಗಿರುತ್ತದೆ. ನಿನ್ನ ಅನ್ನವನ್ನು ನೀನೇ ಉತ್ಪಾದಿಸಿಕೊಳ್ಳುವ ಕಾರ್ಯವನ್ನು ಕೈಕೊಂಡ ನಿನಗೆ ಸಮನಾದ ನೀತಿವಂತರು ಬೇರಾರೂ ಇಲ್ಲ. ಇದರಿಂದ ನಿನ್ನ ಕಾಮನೆಯು ಪೂರ್ಣವಾಗುವದಲ್ಲದೆ ನಿನಗೆ ಕೀರ್ತಿಯೂ ಬರುವುದು'' ಎಂದು ಹೇಳಿದನು. ಹೀಗೆ ನುಡಿದು ಆ ಸೂರ್ಯದೇವನು ಆ ಬಿಸಿಲಿನಲ್ಲಿ ಬರೆಗಾಲು ಬಕ್ಕನೆತ್ತಿಯಿಂದ ಬಿಸಿಲಲ್ಲಿ ದುಡಿಯುವ ಆ ರಾಜದಂಪತಿಗಳಿಗೆ ಕರುಣೆಯಿಂದ ಒಂದು ಕೊಡೆಯನ್ನೂ ಪಾದರಕ್ಷೆಯ ಜೋಡುಗಳನ್ನೂ ಮತ್ತು ಒಂದು ನೀರು ತುಂಬಿದ ಪಾತ್ರೆಯನ್ನೂ ಅಲ್ಲಿಯೇ ನಿರ್ಮಿಸಿ ಕೊಟ್ಟು ಅನುಗ್ರಹಿಸಿದನು.

ಅದರಿಂದ ಸಂತುಷ್ಟನಾದ ಮಹಾರಾಜನು ಮೂರ್ಛಾಕ್ರಾಂತಳಾಗಿ ಬಿದ್ದ ತನ್ನ ಕಾಂತೆಯನ್ನು ಬದುಕಿಸಬೇಕೆಂದು ಬಯಸಿ ಅವಳ ಮುಖಕ್ಕೆ ತಣ್ಣೀರನ್ನು ಚಿಮಕಿಸಿದನು. ಬಗೆಬಗೆಯ ಶೈತ್ಯೋಪಚಾರವನ್ನು ಮಾಡಿದನು. ಆ ತಣ್ಣೀರಿನ ಶೀತಸ್ಪರ್ಶದಿಂದ ಮೂರ್ಛೆ ತಿಳಿದು ಎಚ್ಚತ್ತ ಮಹಾರಾಣಿಯ ತನ್ನ ಪತಿಯ ಬಳಿಯಲ್ಲಿರುವ ತಣ್ಣೀರು ತುಂಬಿದ ಪೂರ್ಣಪಾತ್ರೆಯನ್ನೂ, ಬಿಸಿಲನ್ನು ತಡೆಹಿಡಿಯುವ ಕೊಡೆಯನ್ನೂ ಕಾಲುಗಳನ್ನು ರಕ್ಷಿಸುವ ಯಕ್ಕಡಗಳನ್ನೂ ನೋಡಿದಳು. ಮಣ್ಣಿನ ಮಕ್ಕಳಾಗಿ ದುಡಿಮೆಯ ದೀಕ್ಷೆಯನ್ನು ತಳೆದ ಅವಳಿಗೆ ಹೊಸದಾಗಿ ದೊರೆತ ಆ ಮೂರು ವಸ್ತುಗಳಿಂದ ಭಾರೀ ಐಶ್ವರ್ಯವೇ ದೊರೆತಂತಾಯಿತು. ಅದರಿಂದ ಅವಳ ಗಲ್ಲ ಗುಲಾಬಿಯು ಉತ್ಫುಲ್ಲವಾಗಿ ಮೆಲ್ಲನೆ ನುಡಿದಳು.-

''ನಾಥ, ನಿಮಗೆ ಈ ತಂಪಾದ ನೀರನ್ನು, ನೆರಳು ನೀಡುವ ಈ ಛತ್ರಿಯನ್ನು, ಕಾಲಿಗೆ ಮುಳ್ಳು ಚುಚ್ಚದಂತಹ ಈ ಪಾದ ರಕ್ಷೆಯನ್ನು ಯಾರು ಕೊಟ್ಟರು ? '' ಆಗ ಆ ಭೂಪತಿಯು ಅವಳಿಗೆ '' ದೇವಿ ಸೂರ್ಯದೇವನು ನಿನ್ನ ಮೇಲೆ ಕೃಪೆಮಾಡಿ ನಭೋಮಂಡಲವನ್ನು ಬಿಟ್ಟು ನಮಗಾಗಿ ಭೂಮಂಡಲಕ್ಕೆ ಬಂದು ಇವುಗಳನ್ನು ಕೊಟ್ಟಿದ್ದಾನೆ'' ಎಂದು ಹೇಳಿದನು. ಆಗ ಭಗವಾನ್ ಭಾಸ್ಕರನಲ್ಲಿ ಭಕ್ತಿ ಭಾವವು ಇಮ್ಮಡಿಸಿದ ಆ ರಾಣಿಯು ''ಕರುಣಾಳು ಆದ ಆ ಬೆಳಕಿನ ಒಡೆಯನಿಗೆ ಪ್ರೀತಿಯನ್ನುಂಟುಮಾಡಲು ನಾನೇನು ಮಾಡಲಿ ? ಅವನ ಅಪೇಕ್ಷೆ ಏನಿದೆ ? ಎಂದು ಕೇಳಿದಳು ? ಆಗ ಆ ಜನಕ ಭೂಪಾಲನು ಅಲ್ಲಿಯೇ ಇದ್ದ ಸೂರ್ಯದೇವನಿಗೆ ''ನಿಮಗಾಗಿ ನಾವು ಏನು ಮಾಡೋಣ ?'' ಎಂದು ಕೈಮುಗಿದು ಕೇಳಿಕೊಂಡನು. ಅದಕ್ಕೆ ಆ ತೇಜೋಮೂರ್ತಿಯು '' ಮಹಾರಾಜ, ನನಗೆ ಸ್ತ್ರೀಯರಿಂದ ಅಭಯ ದಾನವು ಬೇಕಾಗಿದೆ'' ಎಂದು ಹೇಳಿದನು. ದೊರೆಯು ತನ್ನ ದಯಿತೆಗೆ ಆದಿತ್ಯ ದೇವನ ಈ ಅಭಿಲಾಷೆಯನ್ನು ತಿಳಿಸಿದಾಗ ಅವಳು ಪರಮ ಸಂತೋಷದಿಂದ ಹೇಳಿದಳು- ''ಪೂಜ್ಯನೇ, ಬಿಸಿಲಿನ ಬಾಧೆಯ ಪರಿಹಾರಕ್ಕಾಗಿ ಈ ಕೊಡೆಯನ್ನೂ, ಬಾಯಾರಿಕೆಯನ್ನು ಪರಿಹರಿಸಲು

ಈ ಜಲಪಾತ್ರೆಯನ್ನೂ, ಕಾಲಿನ ರಕ್ಷಣೆಗಾಗಿ ಈ ಜೋಡುಗಳನ್ನೂ ನಮಗೆ ಕೊಟ್ಟ ಬಳಿಕ ನೀನು ಬಯಸಿದಂತೆ ಅಭಯವು ನಿನಗೆ ಇದ್ದೇ ಇರುತ್ತದೆ '' ಎಂದು ತಿಳಿಸಿದಳು. ಹೀಗೆ ಜನಕರಾಜನ ಪತ್ನಿಯಾದ ರೂಪವತಿ ಎಂಬ ಹೆಸರಿನ ಪತಿವ್ರತೆಯಾದ ನಾರಿಯಿಂದ ಅಭಯ ದಾನವನ್ನು ಪಡೆದು ಸೂರ್ಯದೇವನು ತನ್ನ ಲೋಕಕ್ಕೆ ತೆರಳಿದನು. ಅವನ ಅನುಗ್ರಹದಿಂದ ರಾಜರಾಣಿಯರೂ ತಮ್ಮ ಹೊಲಗಳಲ್ಲಿ ವಿಪುಲವಾದ ಮಳೆಬೆಳೆಗಳಿಂದಾಗಿ ಸಮೃದ್ಧವಾದ ಕಾಳುಕಡಿಗಳನ್ನು ಪಡೆದು ಸಂಪನ್ನರಾಗಿ ದಾನ ಧರ್ಮ ನೀಡಿ ತಾವೂ ಭೋಗ ಭೋಜನ ಮಾಡಿ ಕೃತಕೃತ್ಯರಾದರು.

## ಯಮಧರ್ಮ ಹೇಳಿದ ಸ್ತ್ರೀ ಧರ್ಮ

**ನಾರದ :-** ಯಮಧರ್ಮ, ತಪೋಧನರಾದ ನಾರಿಯರು ಯಾವ ಕರ್ಮದಿಂದ ಉತ್ತಮ ಗತಿಯನ್ನು ಪಡೆಯ ಬಲ್ಲರು ? ಎಂಬುದನ್ನು ನನಗೆ ತಿಳಿಸು.

**ಯಮಧರ್ಮ :-** ಸ್ತ್ರೀಯರಿಗೆ ಸದ್ಗತಿಯನ್ನು ಹೊಂದಲು ಯಾವ ಯಮ ನಿಯಮಗಳೂ ಬೇಕಿಲ್ಲ. ಉಪವಾಸ ವನವಾಸಗಳ ಅಗತ್ಯವಿಲ್ಲ. ದಾನ ಅಥವಾ ದೇವತಾ ಆರಾಧನೆಗಳ ಅವಶ್ಯಕತೆ ಇಲ್ಲ. ಆ ನಾರಿಯರು ಇರಬೇಕಾದ ರೀತಿ ಮತ್ತು ನಡೆಯಬೇಕಾದ ಮಾರ್ಗವನ್ನು ತಿಳಿಸಿಕೊಡುತ್ತೇನೆ ಕೇಳು-

''ಗಂಡನು ಮಲಗಿದ ಬಳಿಕ ತಾನು ಮಲಗಬೇಕು. ಅವನು ಏಳುವುದಕ್ಕಿಂತ ಮೊದಲು ತಾನು ಏಳಬೇಕು. ಅವನು ಊಟ ಮಾಡಿದ ಬಳಿಕವೇ ತಾನು ಊಟ ಮಾಡಬೇಕು. ಪತಿಯು ಮೌನಿಯಾಗಿದ್ದಾಗ ಮಾತನಾಡಬಾರದು. ಅವನು ಎದ್ದು ನಿಂತಾಗ ತಾನು ಕೂಡಬಾರದು. ಇಂಥ ಮಡದಿಯು ಮೃತ್ಯುವನ್ನು ಜಯಸುವಳು.

ಪತಿಯ ಅಭಿಪ್ರಾಯವೇ ಸತಿಯ ಅಭಿಪ್ರಾಯವಾಗಬೇಕು. ಅವನ ಅಭಿಪ್ರಾಯಕ್ಕೆ ಅನುಗುಣವಾಗಿಯೇ ತನ್ನ ವಿಚಾರವನ್ನು ರೂಪಿಸಿಕೊಳ್ಳಬೇಕು. ಅವನ ಮಾತಿನಂತೆ ನಡೆಯಬೇಕು. ಅವನು ನುಡಿದಂತೆ ನುಡಿಯಬೇಕು. ಇಂಥ ಪತಿವ್ರತೆಯಾದ ಮಹಿಳೆಯನ್ನು ಕಂಡರೆ ಯಮಧರ್ಮನಾದ ನಾನೂ ಕೂಡ ಹೆದರಿ ಹೋಗುತ್ತೇನೆ. ಉಳಿದವರೂ ಕೂಡ ಹೆದರುವರು. ಗಂಡನು ಹೇಳಿದ್ದಕ್ಕೆ ಎಂದೂ ಎದುರಾಡದಿರುವ ಸಾಧ್ವೀಮಣಿಯು ದೇವತೆಗಳಿಗೂ ಕೂಡ ಪೂಜ್ಯಳಾಗುತ್ತಾಳೆ. ಪತಿಯ ಸರ್ವದಾ ತಿರಸ್ಕಾರ ಮಾಡಿದರೂ ಬೈದರೂ ಕೂಡ ಕೋಪಗೊಳ್ಳದೇ ಆ ಪತಿಯನ್ನೇ ಪರದೇವತಾ ಎಂದು ತಿಳಿದು ಅವನಿಗೆ ಎರಡು ಬಗೆಯದೇ ಸೇವೆ ಮಾಡುವ ಹೆಣ್ಣುಮಗಳು ಪರಮ ಪತಿವ್ರತೆ ಎನಿಸುವಳು. ಅಂಥ ಹೆಣ್ಣುಮಗಳು ಸಾವಿನ ಮೋರೆಯನ್ನು ಎಂದೂ ನೋಡುವದಿಲ್ಲ. ಯಾವ ಮಹಿಳೆಯು ತನ್ನ ಕೈಹಿಡಿದ ಕಾಂತನನ್ನು ತಾಯಿ ಎಂದು ಪ್ರೀತಿಸುವಳೋ, ತಂದೆ ಎಂದು ಸೇವಿಸುವಳೋ, ಬಂಧು ಎಂದು ಭಾವಿಸುವಳೋ ದೇವರೆಂದು ಪೂಜಿಸುವಳೋ ಅಂಥ ಸತೀಮಣಿಗೆ ನಾನು ಕೈ ಮುಗಿಯುವೆನು. ಪತಿಯ ಧ್ಯಾನ ಮಾಡಿ, ಪತಿಯ ನೆರಳಾಗಿ ಸುಖ ದುಃಖಗಳಿಗೆಲ್ಲಾ ಭಾಗಿಯಾಗಿರುವ ನಾರಿಯು ಮೃತ್ಯುವಿನ ಬಾಗಿಲವನ್ನೇ ಕಾಣುವುದಿಲ್ಲ. ಯಾವಳಿಗೆ ಪತಿಯ ಮಾತೇ ಸಂಗೀತ, ಅವನ ನಡಿಗೆಯೇ ನೃತ್ಯ, ಅವನ ಮುಖವೇ ದೃಶ್ಯ, ಅವನೇ ಸರ್ವಸ್ವ ಆಗಿ ಬೇರ್‍ಯಾವದನ್ನೂ ಯಾವಳು ನೋಡುವದಿಲ್ಲವೊ

ಕೇಳುವದಿಲ್ಲವೊ ಅವಳು ಮೃತ್ಯುವಿನ ದ್ವಾರವನ್ನು ನೋಡುವದಿಲ್ಲ. ಕುಳಿತಾಗ, ನಿಂತಾಗ, ಅಲಂಕಾರ ಮಾಡಿಕೊಳ್ಳುವಾಗ, ಮೈತೊಳೆಯುವಾಗ ಪತಿಯ ಹೊರತು ಮನಸ್ಸಿನಿಂದ ಬೇರಾರನ್ನೂ ಭಾವಿಸಿದ ಭಾಮಿನಿಯು ಸಾವಿನ ನಿಟ್ಟನ್ನು ನಿರುಕಿಸುವದಿಲ್ಲ. ದೇವರನ್ನು ಪೂಜಿಸುತ್ತ ಇರಲಿ, ಬ್ರಾಹ್ಮಣರನ್ನು ಸೇವಿಸುತ್ತಲಿರಲಿ, ಸ್ವಯಂ ಊಟ ಮಾಡುತ್ತ ಇರಲಿ ಅಥವಾ ಮಾಡಿಸುತ್ತ ಇರಲಿ ಪತಿಯಿಂದ ಮನಸಾ ಅಗಲದಿರುವ ಸತೀಮಣಿಯು ಮೃತ್ಯುವಿನ ದ್ವಾರವನ್ನು ನೋಡುವದಿಲ್ಲ. ಸೂರ್ಯನು ಉದಯಿಸುವದಕ್ಕಿಂತ ಮೊದಲೇ ಎದ್ದು ತನ್ನ ಮನೆಯನ್ನು ಗುಡಿಸಿ ಸ್ವಚ್ಛಗೊಳಿಸಿ ಶುಚಿರ್ಭೂತಳಾಗಿ ದೇವತಾ ಕಾರ್ಯವನ್ನು ಮಾಡಬೇಕು. ಹೆಣ್ಣು ಮಕ್ಕಳು ತನ್ನ ದೇಹದ ಬಹು ಭಾಗವನ್ನು ಬಟ್ಟೆಯಿಂದ ಯಾವಾಗಲೂ ಮುಚ್ಚಿಕೊಂಡೇ ಇರಬೇಕು. ಕಣ್ಣು ಮತ್ತೂ ಮನಸ್ಸುಗಳನ್ನು ಕಂಡಕಂಡಲ್ಲಿ ಹರಿಬಿಡದಂತೆ ನಿಯಂತ್ರಿಸಬೇಕು. ಅವಳ ನೋಡುವದಾದರೆ ಗಂಡನ ಮುಖವನ್ನೇ ನೋಡಬೇಕು. ಅವನ ಒಲವಿನಂತೆಯೇ ನಡೆಯಬೇಕು. ಅವನ ಹಿತಾಚರಣವೇ ತನ್ನ ವ್ರತವೆಂದು ಭಾವಿಸಬೇಕು. ಹಗಲಿರುಳೂ ಅವನನ್ನೇ ಸೇವಿಸಬೇಕು. ಇಂತು ನಡೆದು ಕೀರ್ತಿ ಪಡೆದ ನಾರಿಯರು ಸ್ವರ್ಗದಲ್ಲಿ ದೇವತೆಗಳೆಂದು ಕಾಣಲ್ಪಡುವರು. ಮನುಷ್ಯ ಲೋಕದಲ್ಲಿ ಪತಿವ್ರತೆಯರೆಂದೂ ಗೌರವಿಸಲ್ಪಡುವರು. ಪತಿವ್ರತಾ ಸ್ತ್ರೀಯರ ಈ ಚಾರಿತ್ರ್ಯ ಚರ್ಯೆಗಳನ್ನು ಹಿಂದೆ ಸೂರ್ಯನು ಹೇಳಿದ್ದನು. ಅದನ್ನೇ ನಾನು ನಿಮಗೆ ಹೇಳಿದ್ದೇನೆ. ಈ ರಹಸ್ಯವಾದ ತತ್ವವನ್ನು ನಾನು ತಿಳಿದದ್ದರಿಂದಲೇ ನಾನು ಪತಿವ್ರತಾ ಸ್ತ್ರೀಯರನ್ನು ಕಂಡಲ್ಲೆಲ್ಲ ಪೂಜಿಸುತ್ತೇನೆ.

*ವರಾಹ ಪುರಾಣದಲ್ಲಿ ನೂರಇಪ್ಪತ್ತೆಂಟನೇ ಅಧ್ಯಾಯ ಮುಗಿದಿದೆ.*



## ಸಂಸಾರದಿಂದ ಬಿಡುಗಡೆ, ಪುಣ್ಯಕಾರ್ಯಗಳಿಗೆ ಅಡತಡೆ ಹೇಗೆ ? ಏಕೆ ?

ಅಧ್ಯಾಯ - ೧೨೯

**ನಾರದ :-** ದುಃಖಸಂತಪ್ತರಾದ ಭೂಲೋಕದ ಜನರು ಶ್ರೇಯಃಪ್ರಾಪ್ತಿಗಾಗಿ ಬಗೆಬಗೆಯ ವ್ರತ, ತಪಸ್ಸು, ದೇವತಾರಾಧನೆ ಮುಂತಾದ ಹಲವಾರು ಉಪಾಯಗಳನ್ನು ಕೈಕೊಳ್ಳುವರು. ಆದರೆ ಅವರ ಆ ಧರ್ಮ ಕಾರ್ಯಗಳಿಗೆಲ್ಲ ಮಧ್ಯದಲ್ಲಿಯೇ ಭಂಗವು ಉಂಟಾಗುವದು. ಒಮ್ಮೊಮ್ಮೆ ಪುಣ್ಯಕಾರ್ಯಗಳನ್ನು ಕೈಕೊಂಡವರಿಗೆ ಪಾಪ ಬುದ್ಧಿಯು ಹುಟ್ಟುವದು. ಹೀಗಾಗಲು ಕಾರಣವೇನು ? ಮಾನವರ ಈ ಬುದ್ಧಿಭೇದಕ್ಕೂ ಮತ್ತು ಅವರ ಕಾರ್ಯಗಳ ಪೂರ್ತಿ ಅಥವಾ ವಿನಾಶಕ್ಕೆ ಕರ್ತಾರರು ಯಾರು ಇದನ್ನು ತಿಳಿಸಬೇಕು.'' ನಾರದರ ಈ ಪ್ರಶ್ನೆಗಳನ್ನು ಕೇಳಿ ಧರ್ಮರಾಜನು ಇಂತು ಉತ್ತರಿಸಿದನು-

''ದೇವಋಷಿಯೇ, ಯಾವನಲ್ಲಿ ಜಗತ್ತಿನ ಧರ್ಮ ಕರ್ಮಗಳೆಲ್ಲವೂ ಪ್ರತಿಷ್ಠಿತ ವಾಗಿವೆಯೋ ಅಂಥ ಪರಮಾತ್ಮನ ಹೊರತು ಬೇರಾರೂ ಕರ್ತನಾಗಲೀ ಪ್ರೇರಕನಾಗಲೀ ಇರುವುದಿಲ್ಲ. ವೇದ ಶಾಸ್ತ್ರಗಳಲ್ಲಿ ಆ ಭಗವಂತನೇ ಸರ್ವಕರ್ತನೆಂದು ಹೊಗಳಲ್ಪಟ್ಟಿದ್ದಾನೆ. ಅವನ ಆಜ್ಞೆಯಂತೆಯೇ ಜಗತ್ತಿನ ವ್ಯವಹಾರವೆಲ್ಲವೂ ನಡೆಯುತ್ತವೆ.

ಪ್ರಾಣಿಗಳು ತಮ್ಮ ಪೂರ್ವ ಕರ್ಮಾನುಸಾರವಾಗಿ ಬಂದದ್ದನ್ನೇ ಅನುಭವಿಸುತ್ತಾರೆ. ಮಾನವನ ಅಧಃಪಾತಕ್ಕೂ ಉತ್ಕರ್ಷಕ್ಕೂ ಅವನ ಕರ್ಮವೇ ಕಾರಣ. ಜೀವಿಯ ಕರ್ಮಾನುಸಾರವಾಗಿ ಅವನ ಭವಿತವ್ಯವನ್ನು ವಾಯುದೇವರು ನಿರ್ಧರಿಸುತ್ತಾರೆ. ಸಂಸಾರದಲ್ಲಿ ಅದೇ ದೃಢವಾಗುತ್ತದೆ. ಅದೇ ತನ್ನ ಪುಣ್ಯ ಪಾಪದ ಫಲವನ್ನು ಪ್ರಾಣಿಯು ಅನುಭವಿಸುತ್ತಾನೆ. ಸಂಕಟಗಳು ಒದಗಿ ಬಂದಾಗ ಜೀವಾತ್ಮನು ಪರಮಾತ್ಮನಿಗೇ ಶರಣು ಹೋಗಿ ಆತ್ಮೋದ್ಧಾರವನ್ನು ಮಾಡಿಕೊಳ್ಳಬೇಕು. ಅಪದ್ಬಾಂಧವನಾದ ಆ ಭಗವಂತನ ಹೊರತು ಬೇರೆ ಬಂಧುಗಳೇ ಇಲ್ಲ. ಜೀವಾತ್ಮನು ಅವನನ್ನು ನಂಬಿದರೆ ಆತ್ಮೋದ್ಧಾರ ಮಾಡಿಕೊಂಡಂತೆ. ಅವನನ್ನು ನಂಬದಿದ್ದರೆ ಆತ್ಮಘಾತ ಮಾಡಿಕೊಂಡಂತೆ. ಹೀಗೆ ಜೀವಾತ್ಮನಿಗೆ ತನ್ನ ಆತ್ಮವೇ ಶತ್ರುವೂ ಆಗಿದೆ. ಬಂಧುವೂ ಆಗಿದೆ. ಮನುಷ್ಯನ ದುಷ್ಕರ್ಮ ಸವೆದಂತೆ ಸದ್ಬುದ್ಧಿಯು ಹುಟ್ಟುತ್ತದೆ. ಅವನ ಹಿಂದಿನ ಶುಭಾಶುಭ ಕರ್ಮಗಳಿಂದಲೇ ಅವನಿಗೆ ಶುಭಾಶುಭ ಬುದ್ಧಿ ಶುಭಾಶುಭ ಫಲಗಳು ಪ್ರಾಪ್ತವಾಗುತ್ತವೆ.

### ಶುಭ ಕರ್ಮದ ಫಲವೇ ಸ್ವರ್ಗ. ಅಶುಭ ಕರ್ಮದ ಫಲವೇ ನರಕ.

**ನಾರದ :-** ಯಾವ ಜಪತಪ ಧರ್ಮಕರ್ಮಾನುಷ್ಠಾನ ಮತ್ತೂ ಸದ್ಬುದ್ಧಿಯಿಂದ ಈ ಸಂಸಾರ ಬಂಧನದಿಂದ ಬಿಡುಗಡೆಯಾಗುವದು ? ಮತ್ತು ಯಾವುದರಿಂದ ಶಾಶ್ವತ ಪದ ಪ್ರಾಪ್ತಿಯಾಗುವದು ? ನಾರದರ ಈ ಪ್ರಶ್ನೆಯನ್ನು ಕೇಳಿ ಆ ಧರ್ಮದೇವತೆಯು ಚರಾಚರ ಪ್ರಪಂಚದ ಸೃಷ್ಟಿಕಾರನಾದ ಶ್ರೀ ಹರಿಯನ್ನು ಕೈ ಮುಗಿದು ತಲೆ ಬಾಗಿಸಿ ವಂದಿಸಿ ಹೇಳತೊಡಗಿದನು.-

ಯಾವನು ''ಚಿತ್ತಕೃತಿ, ಅಚಿತ್ತಕೃತಿ, ಕ್ಷರ ಪುರುಷ, ಅಕ್ಷರ ಪುರುಷ ಇವೆಲ್ಲವುಗಳಿಗೆ ನಾಯಕನೂ ನಿಯಾಮಕನೂ ಆದ ಆ ಪರಮಾತ್ಮನೇ ಪುರುಷೋತ್ತಮ. ಅವನೇ ಸ್ವತಂತ್ರ

ತತ್ವ'' ಎಂಬ ಸಿದ್ಧಾಂತವನ್ನು ಚನ್ನಾಗಿ ತಿಳಿದಿದ್ದಾನೋ, ತಿಳಿದುಕೊಂಡ ಬಳಿಕ ಎಂದೂ ಈ ವಿಷಯದಲ್ಲಿ ಸಂದೇಹ ಪಡುವದಿಲ್ಲವೋ ಅಂಥ ತತ್ವಜ್ಞಾನಿಯು ಶ್ರೀ ಹರಿಯ ನಿರಂತರ ಧ್ಯಾನದಿಂದ ಎಲ್ಲ ಪಾಪಗಳಿಂದ ಮುಕ್ತನಾಗಿ ಶಾಶ್ವತ ಪದವಾದ ಮೋಕ್ಷವನ್ನು ಹೊಂದುತ್ತಾನೆ. ಯಾವನು ಪ್ರಾಣಿಗಳನ್ನು ಹಿಂಸೆಮಾಡದೇ ಆಶೆ ಕೋಪಗಳನ್ನು ಬಿಟ್ಟು ಶುಭಕರವಾದ ನ್ಯಾಯ ಮಾರ್ಗದಲ್ಲಿ ನೀತಿವಂತನಾಗಿ ಇರುವನೋ ಅವನು ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ. ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಮುಂತಾದ ಅಷ್ಟಾಂಗ ಯೋಗಗಳಿಂದ ಏಕಾಗ್ರ ಚಿತ್ತದಿಂದ ಭಗವಂತನನ್ನು ಧ್ಯಾನಮಾಡುವವನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಯಾವ ಆಶೆ ಆಮಿಷಗಳಿಗೂ ಒಳಗಾಗದೇ ಯಾವ ವಿಷಯಗಳಲ್ಲಿಯೂ ಲೋಲುಪನಾಗದೇ ವಿರಕ್ತನಾಗಿ ಭಗವದೈಕ ನಿಷ್ಠೆಯಿಂದ ಪ್ರಾಣಾರ್ಪಣ ಮಾಡುವವನು ಪಾಪಮುಕ್ತನಾಗುತ್ತಾನೆ. ಶ್ರದ್ಧೆಯಿಂದ ದೇವರ ಆರಾಧನೆ ಮಾಡಿ ಕಾಮಕ್ರೋಧಗಳನ್ನು ಗೆದ್ದು ಪರದ್ರವ್ಯವನ್ನು ಮುಟ್ಟದೇ ಅಸೂಯಾದಿ ದೋಷಮುಕ್ತನಾದ ಮಾನವನು ಪಾಪಮುಕ್ತನಾಗುತ್ತಾನೆ. ಗುರುಹಿರಿಯರ ಸೇವಾ ಶುಶ್ರೂಷಾದಿಗಳನ್ನು ಮಾಡುತ್ತ, ಅಹಿಂಸಾ ವ್ರತವನ್ನು ಅಂಗೀಕಾರಮಾಡಿ ಒಳ್ಳೇ ಉದಾತ್ತವಾದ ಶೀಲಸಂಪದವನ್ನು ಬೆಳೆಸಿಕೊಂಡ ಭಗವದ್ಭಕ್ತನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಶುದ್ಧ ಮನಸ್ಸಿನಿಂದ ತೀರ್ಥ ಕ್ಷೇತ್ರಯಾತ್ರೆಯನ್ನು ಮಾಡಿ ಪಾಪಗಳನ್ನೆಲ್ಲ ಕಳೆದುಕೊಂಡು ಮತ್ತೆ ಪಾಪ ಮಾಡದಿರುವ ಪುಣ್ಯಾತ್ಮನು ಮುಕ್ತನಾಗುತ್ತಾನೆ. ಬೆಳಿಗ್ಗೆ ಎದ್ದು ಕೂಡಲೇ ಜ್ಞಾನ ಭಕ್ತಿ ಸಂಪನ್ನನಾದ ಬ್ರಾಹ್ಮಣನ ಬಳಿಗೆ ಹೋಗಿ ಭಕ್ತಿಯಿಂದ ಅವನಿಗೆ ನಮಸ್ಕಾರ ಮಾಡಿ ದಾನ ದಕ್ಷಿಣೆಗಳನ್ನು ಕೊಡುವವನು ಪಾಪಗಳಿಂದ ಮುಕ್ತನಾಗುತ್ತಾನೆ.

**ನಾರದ :-** ಧರ್ಮದೇವತೆಯೇ, ಪಾಪಗಳನ್ನು ಹೋಗಲಾಡಿಸಲು ಇದಕ್ಕಿಂತ ಸುಲಭೋಪಾಯಗಳು ಏನಾದರೂ ಇದ್ದರೆ ದಯವಿಟ್ಟು ತಿಳಿಸು.

**ಯಮಧರ್ಮ :-** ಪೂರ್ವಕಾಲದಲ್ಲಿ ಬ್ರಹ್ಮದೇವರು ಹೇಳಿದ ಧರ್ಮಸಾಧನೆಯ ಸುಲಭೋಪಾಯವನ್ನು ಅವನಿಗೆ ವಂದಿಸಿ ನಿನಗೆ ಹೇಳುತ್ತೇನೆ ಕೇಳು- ''ಮೋಕ್ಷಫಲದ ಏಕೈಕ ದಾತಾರನಾದ ಶ್ರೀ ಹರಿಯಲ್ಲಿ ಪೂರ್ಣ ಶ್ರದ್ಧೆಯನ್ನು ಇರಿಸಿ ಅನನ್ಯ ಭಕ್ತಿಯಿಂದ ಅವನ ಧ್ಯಾನಮಾಡುತ್ತ ಸ್ವಧರ್ಮಾಚರಣೆಯನ್ನು ಯಥಾಶಕ್ತಿ ಅನುಷ್ಠಾನಮಾಡಬೇಕು.

ಶುದ್ಧಾಂತಃಕರಣದಿಂದ ಧರ್ಮವನ್ನು ಆಚರಿಸುವವರು ಪಾಪ ಮುಕ್ತರಾಗಿ ಬೇಕಾದ ಇಷ್ಟಾರ್ಥಗಳನ್ನು ಪಡೆಯುತ್ತಾರೆ. ಯಾರು ಸರ್ವಗ್ರಹಮಯನಾದ ಪರಮಾತ್ಮನ ಎಲ್ಲ ನಕ್ಷತ್ರಗಳಿಗೆ ಆಧಾರ ಭೂತವಾದ ಶಿಂಶುಮಾರ ರೂಪವನ್ನು ಬರೆಯಿಸಿ ಅದರ ದರ್ಶನ ತೆಗೆದುಕೊಂಡು ನಮಸ್ಕಾರ ಮಾಡವರೋ ಅವನ ಪಾಪ ಪರಿಹಾರವಾಗುವದು.

ಆ ಜಗದೀಶ್ವನ ದೇಹದಲ್ಲಿರುವ ಸೂರ್ಯಚಂದ್ರರನ್ನು ಮತ್ತು ಗುರು, ಶುಕ್ರ, ಬುಧ, ಶನಿ, ಮಂಗಳ ಮುಂತಾದ ಗ್ರಹಗಳನ್ನು ದರ್ಶನಮಾಡಿಕೊಂಡು ಅಕ್ಷರ ನಾಮಕನಾದ ಆ ಪರಮಾತ್ಮನನ್ನು ಧ್ಯಾನ ಮಾಡುತ್ತ ಪ್ರದಕ್ಷಣೆ ನಮಸ್ಕಾರಗೈಯುವವರು ಪಾಪಗಳಿಂದ ಮುಕ್ತರಾಗುತ್ತಾರೆ. ಸೂರ್ಯಚಂದ್ರರು ಒಬ್ಬರನ್ನೊಬ್ಬರು ನೋಡುವ ದಿನ

## ಸಂಸಾರದಿಂದ ಬಿಡುಗಡೆ, ಪುಣ್ಯಕಾರ್ಯಗಳಿಗೆ ಅಡತಡೆ ಹೇಗೆ ? ಏಕೆ ?

**ಅಧ್ಯಾಯ - ೧೨೯**

**ನಾರದ :-** ದುಃಖಸಂತಪ್ತರಾದ ಭೂಲೋಕದ ಜನರು ಶ್ರೇಯಃಪ್ರಾಪ್ತಿಗಾಗಿ ಬಗೆಬಗೆಯ ವ್ರತ, ತಪಸ್ಸು, ದೇವತಾರಾಧನೆ ಮುಂತಾದ ಹಲವಾರು ಉಪಾಯಗಳನ್ನು ಕೈಕೊಳ್ಳುವರು. ಆದರೆ ಅವರ ಆ ಧರ್ಮ ಕಾರ್ಯಗಳಿಗೆಲ್ಲ ಮಧ್ಯದಲ್ಲಿಯೇ ಭಂಗವು ಉಂಟಾಗುವದು. ಒಮ್ಮೊಮ್ಮೆ ಪುಣ್ಯಕಾರ್ಯಗಳನ್ನು ಕೈಕೊಂಡವರಿಗೆ ಪಾಪ ಬುದ್ಧಿಯು ಹುಟ್ಟುವದು. ಹೀಗಾಗಲು ಕಾರಣವೇನು ? ಮಾನವರ ಈ ಬುದ್ಧಿಭೇದಕ್ಕೂ ಮತ್ತು ಅವರ ಕಾರ್ಯಗಳ ಪೂರ್ತಿ ಅಥವಾ ವಿನಾಶಕ್ಕೆ ಕರ್ತಾರರು ಯಾರು ಇದನ್ನು ತಿಳಿಸಬೇಕು.'' ನಾರದರ ಈ ಪ್ರಶ್ನೆಗಳನ್ನು ಕೇಳಿ ಧರ್ಮರಾಜನು ಇಂತು ಉತ್ತರಿಸಿದನು-

''ದೇವಋಷಿಯೇ, ಯಾವನಲ್ಲಿ ಜಗತ್ತಿನ ಧರ್ಮ ಕರ್ಮಗಳೆಲ್ಲವೂ ಪ್ರತಿಷ್ಠಿತ ವಾಗಿವೆಯೋ ಅಂಥ ಪರಮಾತ್ಮನ ಹೊರತು ಬೇರಾರೂ ಕರ್ತನಾಗಲೀ ಪ್ರೇರಕನಾಗಲೀ ಇರುವುದಿಲ್ಲ. ವೇದ ಶಾಸ್ತ್ರಗಳಲ್ಲಿ ಆ ಭಗವಂತನೇ ಸರ್ವಕರ್ತನೆಂದು ಹೊಗಳಲ್ಪಟ್ಟಿದ್ದಾನೆ. ಅವನ ಆಜ್ಞೆಯಂತೆಯೇ ಜಗತ್ತಿನ ವ್ಯವಹಾರವೆಲ್ಲವೂ ನಡೆಯುತ್ತವೆ.

ಪ್ರಾಣಿಗಳು ತಮ್ಮ ಪೂರ್ವ ಕರ್ಮಾನುಸಾರವಾಗಿ ಬಂದದ್ದನ್ನೇ ಅನುಭವಿಸುತ್ತಾರೆ. ಮಾನವನ ಅಧಃಪಾತಕ್ಕೂ ಉತ್ಕರ್ಷಕ್ಕೂ ಅವನ ಕರ್ಮವೇ ಕಾರಣ. ಜೀವಿಯ ಕರ್ಮಾನುಸಾರವಾಗಿ ಅವನ ಭವಿತವ್ಯವನ್ನು ವಾಯುದೇವರು ನಿರ್ಧರಿಸುತ್ತಾರೆ. ಸಂಸಾರದಲ್ಲಿ ಅದೇ ದೃಢವಾಗುತ್ತದೆ. ಅದೇ ತನ್ನ ಪುಣ್ಯ ಪಾಪದ ಫಲವನ್ನು ಪ್ರಾಣಿಯು ಅನುಭವಿಸುತ್ತಾನೆ. ಸಂಕಟಗಳು ಒದಗಿ ಬಂದಾಗ ಜೀವಾತ್ಮನು ಪರಮಾತ್ಮನಿಗೇ ಶರಣು ಹೋಗಿ ಆತ್ಮೋದ್ಧಾರವನ್ನು ಮಾಡಿಕೊಳ್ಳಬೇಕು. ಅಪದ್ಬಾಂಧವನಾದ ಆ ಭಗವಂತನ ಹೊರತು ಬೇರೆ ಬಂಧುಗಳೇ ಇಲ್ಲ. ಜೀವಾತ್ಮನು ಅವನನ್ನು ನಂಬಿದರೆ ಆತ್ಮೋದ್ಧಾರ ಮಾಡಿಕೊಂಡಂತೆ. ಅವನನ್ನು ನಂಬದಿದ್ದರೆ ಆತ್ಮಘಾತ ಮಾಡಿಕೊಂಡಂತೆ. ಹೀಗೆ ಜೀವಾತ್ಮನಿಗೆ ತನ್ನ ಆತ್ಮವೇ ಶತ್ರುವೂ ಆಗಿದೆ. ಬಂಧುವೂ ಆಗಿದೆ. ಮನುಷ್ಯನ ದುಷ್ಕರ್ಮ ಸವೆದಂತೆ ಸದ್ಬುದ್ಧಿಯು ಹುಟ್ಟುತ್ತದೆ. ಅವನ ಹಿಂದಿನ ಶುಭಾಶುಭ ಕರ್ಮಗಳಿಂದಲೇ ಅವನಿಗೆ ಶುಭಾಶುಭ ಬುದ್ಧಿ ಶುಭಾಶುಭ ಫಲಗಳು ಪ್ರಾಪ್ತವಾಗುತ್ತವೆ.

### ಶುಭ ಕರ್ಮದ ಫಲವೇ ಸ್ವರ್ಗ. ಅಶುಭ ಕರ್ಮದ ಫಲವೇ ನರಕ.

**ನಾರದ :-** ಯಾವ ಜಪತಪ ಧರ್ಮಕರ್ಮಾನುಷ್ಠಾನ ಮತ್ತೂ ಸದ್ಬುದ್ಧಿಯಿಂದ ಈ ಸಂಸಾರ ಬಂಧನದಿಂದ ಬಿಡುಗಡೆಯಾಗುವದು ? ಮತ್ತು ಯಾವುದರಿಂದ ಶಾಶ್ವತ ಪದ ಪ್ರಾಪ್ತಿಯಾಗುವದು ? ನಾರದರ ಈ ಪ್ರಶ್ನೆಯನ್ನು ಕೇಳಿ ಆ ಧರ್ಮದೇವತೆಯು ಚರಾಚರ ಪ್ರಪಂಚದ ಸೃಷ್ಟಿಕಾರನಾದ ಶ್ರೀ ಹರಿಯನ್ನು ಕೈ ಮುಗಿದು ತಲೆ ಬಾಗಿಸಿ ವಂದಿಸಿ ಹೇಳತೊಡಗಿದನು.-

ಯಾವನು ''ಚಿತ್ತಕೃತಿ, ಅಚಿತ್ತಕೃತಿ, ಕ್ಷರ ಪುರುಷ, ಅಕ್ಷರ ಪುರುಷ ಇವೆಲ್ಲವುಗಳಿಗೆ ನಾಯಕನೂ ನಿಯಾಮಕನೂ ಆದ ಆ ಪರಮಾತ್ಮನೇ ಪುರುಷೋತ್ತಮ. ಅವನೇ ಸ್ವತಂತ್ರ

ತತ್ವ '' ಎಂಬ ಸಿದ್ಧಾಂತವನ್ನು ಚನ್ನಾಗಿ ತಿಳಿದಿದ್ದಾನೋ, ತಿಳಿದುಕೊಂಡ ಬಳಿಕ ಎಂದೂ ಈ ವಿಷಯದಲ್ಲಿ ಸಂದೇಹ ಪಡುವದಿಲ್ಲವೋ ಅಂಥ ತತ್ವಜ್ಞಾನಿಯು ಶ್ರೀ ಹರಿಯ ನಿರಂತರ ಧ್ಯಾನದಿಂದ ಎಲ್ಲ ಪಾಪಗಳಿಂದ ಮುಕ್ತನಾಗಿ ಶಾಶ್ವತ ಪದವಾದ ಮೋಕ್ಷವನ್ನು ಹೊಂದುತ್ತಾನೆ. ಯಾವನು ಪ್ರಾಣಿಗಳನ್ನು ಹಿಂಸೆಮಾಡದೇ ಆಶೆ ಕೋಪಗಳನ್ನು ಬಿಟ್ಟು ಶುಭಕರವಾದ ನ್ಯಾಯ ಮಾರ್ಗದಲ್ಲಿ ನೀತಿವಂತನಾಗಿ ಇರುವನೋ ಅವನು ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ. ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಮುಂತಾದ ಅಷ್ಟಾಂಗ ಯೋಗಗಳಿಂದ ಏಕಾಗ್ರ ಚಿತ್ತದಿಂದ ಭಗವಂತನನ್ನು ಧ್ಯಾನಮಾಡುವವನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಯಾವ ಆಶೆ ಆಮಿಷಗಳಿಗೂ ಒಳಗಾಗದೇ ಯಾವ ವಿಷಯಗಳಲ್ಲಿಯೂ ಲೋಲುಪನಾಗದೇ ವಿರಕ್ತನಾಗಿ ಭಗವದೈಕ ನಿಷ್ಠೆಯಿಂದ ಪ್ರಾಣಾರ್ಪಣ ಮಾಡುವವನು ಪಾಪಮುಕ್ತನಾಗುತ್ತಾನೆ. ಶ್ರದ್ಧೆಯಿಂದ ದೇವರ ಆರಾಧನೆ ಮಾಡಿ ಕಾಮಕ್ರೋಧಗಳನ್ನು ಗೆದ್ದು ಪರದ್ರವ್ಯವನ್ನು ಮುಟ್ಟದೇ ಅಸೂಯಾದಿ ದೋಷಮುಕ್ತನಾದ ಮಾನವನು ಪಾಪಮುಕ್ತನಾಗುತ್ತಾನೆ. ಗುರುಹಿರಿಯರ ಸೇವಾ ಶುಶ್ರೂಷಾದಿಗಳನ್ನು ಮಾಡುತ್ತ, ಅಹಿಂಸಾ ವ್ರತವನ್ನು ಅಂಗೀಕಾರಮಾಡಿ ಒಳ್ಳೇ ಉದಾತ್ತವಾದ ಶೀಲಸಂಪದವನ್ನು ಬೆಳೆಸಿಕೊಂಡ ಭಗವದ್ಭಕ್ತನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಶುದ್ಧ ಮನಸ್ಸಿನಿಂದ ತೀರ್ಥ ಕ್ಷೇತ್ರಯಾತ್ರೆಯನ್ನು ಮಾಡಿ ಪಾಪಗಳನ್ನೆಲ್ಲ ಕಳೆದುಕೊಂಡು ಮತ್ತೆ ಪಾಪ ಮಾಡದಿರುವ ಪುಣ್ಯಾತ್ಮನು ಮುಕ್ತನಾಗುತ್ತಾನೆ. ಬೆಳಿಗ್ಗೆ ಎದ್ದು ಕೂಡಲೇ ಜ್ಞಾನ ಭಕ್ತಿ ಸಂಪನ್ನನಾದ ಬ್ರಾಹ್ಮಣನ ಬಳಿಗೆ ಹೋಗಿ ಭಕ್ತಿಯಿಂದ ಅವನಿಗೆ ನಮಸ್ಕಾರ ಮಾಡಿ ದಾನ ದಕ್ಷಿಣೆಗಳನ್ನು ಕೊಡುವವನು ಪಾಪಗಳಿಂದ ಮುಕ್ತನಾಗುತ್ತಾನೆ.

**ನಾರದ :-** ಧರ್ಮದೇವತೆಯೇ, ಪಾಪಗಳನ್ನು ಹೋಗಲಾಡಿಸಲು ಇದಕ್ಕಿಂತ ಸುಲಭೋಪಾಯಗಳು ಏನಾದರೂ ಇದ್ದರೆ ದಯವಿಟ್ಟು ತಿಳಿಸು.

**ಯಮಧರ್ಮ :-** ಪೂರ್ವಕಾಲದಲ್ಲಿ ಬ್ರಹ್ಮದೇವರು ಹೇಳಿದ ಧರ್ಮಸಾಧನೆಯ ಸುಲಭೋಪಾಯವನ್ನು ಅವನಿಗೆ ವಂದಿಸಿ ನಿನಗೆ ಹೇಳುತ್ತೇನೆ ಕೇಳು- ''ಮೋಕ್ಷಫಲದ ಏಕೈಕ ದಾತಾರನಾದ ಶ್ರೀ ಹರಿಯಲ್ಲಿ ಪೂರ್ಣ ಶ್ರದ್ಧೆಯನ್ನು ಇರಿಸಿ ಅನನ್ಯ ಭಕ್ತಿಯಿಂದ ಅವನ ಧ್ಯಾನಮಾಡುತ್ತ ಸ್ವಧರ್ಮಾಚರಣೆಯನ್ನು ಯಥಾಶಕ್ತಿ ಅನುಷ್ಠಾನಮಾಡಬೇಕು.

ಶುದ್ಧಾಂತಃಕರಣದಿಂದ ಧರ್ಮವನ್ನು ಆಚರಿಸುವವರು ಪಾಪ ಮುಕ್ತರಾಗಿ ಬೇಕಾದ ಇಷ್ಟಾರ್ಥಗಳನ್ನು ಪಡೆಯುತ್ತಾರೆ. ಯಾರು ಸರ್ವಗ್ರಹಮಯನಾದ ಪರಮಾತ್ಮನ ಎಲ್ಲ ನಕ್ಷತ್ರಗಳಿಗೆ ಆಧಾರ ಭೂತವಾದ ಶಿಂಶುಮಾರ ರೂಪವನ್ನು ಬರೆಯಿಸಿ ಅದರ ದರ್ಶನ ತೆಗೆದುಕೊಂಡು ನಮಸ್ಕಾರ ಮಾಡವರೋ ಅವನ ಪಾಪ ಪರಿಹಾರವಾಗುವದು.

ಆ ಜಗದೀಶ್ವನ ದೇಹದಲ್ಲಿರುವ ಸೂರ್ಯಚಂದ್ರರನ್ನು ಮತ್ತು ಗುರು, ಶುಕ್ರ, ಬುಧ, ಶನಿ, ಮಂಗಳ ಮುಂತಾದ ಗ್ರಹಗಳನ್ನು ದರ್ಶನಮಾಡಿಕೊಂಡು ಅಕ್ಷರ ನಾಮಕನಾದ ಆ ಪರಮಾತ್ಮನನ್ನು ಧ್ಯಾನ ಮಾಡುತ್ತ ಪ್ರದಕ್ಷಣೆ ನಮಸ್ಕಾರಗೈಯುವವರು ಪಾಪಗಳಿಂದ ಮುಕ್ತರಾಗುತ್ತಾರೆ. ಸೂರ್ಯಚಂದ್ರರು ಒಬ್ಬರನ್ನೊಬ್ಬರು ನೋಡುವ ದಿನ

ಅಂದರೆ ಪೌರ್ಣಿಮಾ ತಿಥಿ. ಅಂದು ಅಷ್ಟಾಕ್ಷರ ದಶಾಕ್ಷರ ಮಂತ್ರಗಳಿಂದ ಆ ಪರಮಾತ್ಮನ ಧ್ಯಾನಮಾಡುವವರು, ಪಾಪಮುಕ್ತರಾಗುವರು. ವಟುವೇಷಧಾರಿಯಾದ ವಾಮನನನ್ನೂ ನೀರಿನಿಂದ ಎದ್ದು ನೆಲದಾಯಿಯನು ಉದ್ಧರಿಸಿದ ವರಾಹಮೂರ್ತಿಯನ್ನೂ ಹಾಗೂ ಶ್ರೀ ನರಸಿಂಹದೇವರನ್ನೂ ಬರಿ ಹಾಲಿನ ಮೇಲಿದ್ದು ಧ್ಯಾನಮಾಡುವವನೂ ಮತ್ತು ನಮಸ್ಕರಿಸುವವನೂ ಸರ್ವಪಾಪಗಳಿಂದ ಮುಕ್ತನಾಗುತ್ತಾನೆ.

## ಸರ್ವ ಸಾಮಾನ್ಯ ಧರ್ಮಗಳು

**ನಾರದ :-** ಮಹಾನುಭಾವನಾದ ಯಮರಾಜನೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ವರ್ಣದವರು ವೇದಾಧಿಕಾರಿಗಳೂ ಯಜ್ಞಯಾಗಾದಿಗಳಲ್ಲಿ ಸಮನಾಗಿ ಭಾಗವಹಿಸುವವರೂ ಆಗಿರುತ್ತಾರೆ. ಆದರೆ ಶೂದ್ರರಿಗೆ ವೇದಾಧಿಕಾರವಿಲ್ಲವೆಂದು ಬ್ರಾಹ್ಮಣ ಗ್ರಂಥಗಳಲ್ಲಿ ಹೇಳಿದ್ದಾರೆ. ಯಜ್ಞ ಯಾಗಾದಿ ಕಾರ್ಯಗಳಲ್ಲಿ ಶೂದ್ರರಿಗೆ ಬ್ರಾಹ್ಮಣಗ್ರಂಥಗಳೂ ಮತ್ತೂ ಬ್ರಾಹ್ಮಣರೂ ಬಹಿಷ್ಕಾರವನ್ನೇ ಹಾಕಿದ್ದಾರೆ. ಆದರೆ ಯಮಧರ್ಮನೇ, ನೀನು ಸಮವರ್ತಿ ಎಂದು ಹೆಸರಾಗಿರುವಿ. ನಿನಗೆ ಯಾವದೇ ಜಾತಿ ಧರ್ಮದವರ ಮೇಲೆ ಪಕ್ಷಪಾತವೂ ಇಲ್ಲ, ದ್ವೇಷವೂ ಇಲ್ಲ. ಆದುದರಿಂದ ಶೂದ್ರರಿಗೆ ಶ್ರೇಯಸ್ಸಾಗುವ ಧರ್ಮವು ಯಾವದು ? ಕಲ್ಯಾಣಕಾರಕವಾದ ಕರ್ಮವು ಯಾವದು ? ಎನ್ನುವದನ್ನು ದಯವಿಟ್ಟು ತಿಳಿಸಬೇಕು. ನಾರದ ಮುನಿಯ ಈ ಮಾರ್ಮಿಕವಾದ ಪ್ರಶ್ನೆಯನ್ನು ಕೇಳಿ ಧರ್ಮದೇವತೆಯಾದ ಯಮರಾಜನು ಸಂತುಷ್ಟನಾಗಿ ಎಲ್ಲ ಜಾತಿ ಜನಾಂಗದವರಿಗೂ ಸಾಮಾನ್ಯವಾದ, ವಿಶೇಷತಃ ಶೂದ್ರರೂ ಕೂಡ ಮಾಡಬಹುದಾದ ಧರ್ಮಕರ್ಮಗಳನ್ನೂ ಹೇಳತೊಡಗಿದನು.

**ಯಮಧರ್ಮ :-** ಗೋವುಗಳು ಅತ್ಯಂತ ಪವಿತ್ರವೂ ಮಂಗಳಕಾರಕವೂ ಆಗಿರುತ್ತದೆ. ದೇವ ಗಣದವರಿಗೆಲ್ಲ ದೇವತೆ ಎಂದರೆ ಗೋಮಾತೆಯೇ ಸರಿ. ಭಕ್ತಿಯಿಂದ ಗೋಸೇವಾ ಮಾಡುವ ಮನುಷ್ಯನು ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ. ಇದರಂತೆ ಸುಮುಹೂರ್ತದಲ್ಲಿ ಪಂಚಗವ್ಯವನ್ನು ಪ್ರಾಶನಮಾಡುವವನೂ, ಹಸುವಿನ ಬಾಲದಿಂದ ಸೋರುವ ನೀರನ್ನು ತಲೆಯಮೇಲೆ ಪ್ರೋಕ್ಷಣಮಾಡಿಕೊಳ್ಳುವವನೂ, ಗೋವಿನ ಮೊಲೆಯಿಂದ ಹೊರಟ ಕ್ಷೀರಧಾರೆಯನ್ನು ಶಿರಸಾ ಧಾರಣಮಾಡುವವನೂ, ಪ್ರತಿನಿತ್ಯವೂ ಸ್ನಾನಮಾಡಿ ಆಕಳವನ್ನು ನಮಸ್ಕರಿಸುವವನೂ ಪಾಪಗಳಿಂದ ಮುಕ್ತರಾಗುವರು. ಉದಯ ಹೊಂದುವ ಸೂರ್ಯನನ್ನು ಭಕ್ತಿಯಿಂದ ವಂದಿಸಿ ಮೊಸರು, ಅಕ್ಷತೆಗಳನ್ನು ಮೂರು ಬೊಗಸೆ ತುಂಬಿ ಅರ್ಪಣೆಮಾಡಿ ಸೂರ್ಯನನ್ನು ಪೂಜಿಸುವವರ ಪಾಪಗಳು ಪರಿಹಾರವಾಗುವವು. ಇದರಂತೆ ಅರುಂಧತೀ ಸಹಿತರಾದ ಎಲ್ಲ ಋಷಿಗಳನ್ನೂ, ಬುಧನೇ ಮೊದಲಾದ ಗ್ರಹಗಳನ್ನೂ ಏಕಾಗ್ರ ಮನಸ್ಸಿನಿಂದ ಪೂಜಿಸುವವರ ಪಾಪಪರಿಹಾರವಾಗುವದು. ಗ್ರಹಣ ಸಂಕ್ರಮಣಾದಿ ಕಾಲಗಳಲ್ಲಿ ಬ್ರಾಹ್ಮಣರಿಗೆ ದಾನ ದಕ್ಷಿಣೆಗಳನ್ನಿತ್ತು ಪಯೋದಾನ ಮಾಡುವದರಿಂದ ಪಾಪ ಪರಿಹಾರವಾಗುವದು. ಪೂರ್ವವಾಹಿನಿಯಾದ ನದಿಗಳಲ್ಲಿ ಪ್ರವಾಹಕ್ಕೆ ಎದುರಾಗಿ ನಿಂತು, ವಿಧಿ ಪೂರ್ವಕವಾಗಿ ಸ್ನಾನ

ಮಾಡುವುದರಿಂದಲೂ, ಬಲ ಮುಡಿಶಂಖದಿಂದ ಕೈಯ ತೀರ್ಥ ತೆಗೆದುಕೊಂಡು ಪ್ರೋಕ್ಷಿಸಿಕೊಳ್ಳುವುದರಿಂದಲೂ, ಪೂರ್ವವಾಹಿನಿಯಾದ ನದಿಯಲ್ಲಿ ಸ್ನಾನ ಮಾಡಿ ಹೊಕ್ಕಳವರೆಗೆ ನೀರಲ್ಲಿ ನಿಂತು ಪ್ರಾಣಾಯಾಮ ಸಂಧ್ಯಾವಂದನಾದಿಗಳನ್ನು ಮುಗಿಸಿ ಕರಿಯ ಎಳ್ಳಿನಿಂದ ಕೂಡಿದ ಏಳು ಬೊಗಸೆ ನೀರನ್ನು ದಾನಮಾಡುವ ಬ್ರಹ್ಮಚಾರಿಯ ಪಾಪಗಳೆಲ್ಲವೂ ಪರಿಹಾರವಾಗುವವು. ರಂಧ್ರವಿಲ್ಲದ ತಾವರೆ ಎಲೆಯಲ್ಲಿ ರತ್ನ ತೊಳೆದ ನೀರನ್ನು ತುಂಬಿ ಅದರಿಂದ ಮೂರು ಬಾರಿ ಸ್ನಾನಮಾಡುವವರು ಸರ್ವ ಪಾಪಗಳಿಂದ ಮುಕ್ತರಾಗುತ್ತಾರೆ. ಮುನಿಪುಂಗವನಾದ ನಾರದ, ರಹಸ್ಯವಾದುದರಲ್ಲಿಯೂ ಅತ್ಯಂತ ರಹಸ್ಯವಾದ ಬೇರೊಂದು ವಿಚಾರವನ್ನು ನಿನಗೆ ತಿಳಿಸುತ್ತೇನೆ ಕೇಳು. -

ಕಾರ್ತೀಕಮಾಸದಲ್ಲಿ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಗೆ ಪ್ರಬೋಧಿನಿ ಎಂದು ಹೆಸರಿದ್ದು ಅದು ಮೋಕ್ಷದಾಯಕವಾದ ಏಕಾದಶಿಯು ಎಂದು ಹೆಸರಾಗಿದೆ. ಮರುದಿನ ಉತ್ಥಾನ ದ್ವಾದಶಿಯು ಶ್ರೀವಿಷ್ಣುವಿನ ವಿಶೇಷ ಸನ್ನಿಧಾನದಿಂದ ಅವನ ಒಂದು ಮೂರ್ತಿಯೇ ಎನಿಸಿದೆ. ಈ ಕಾರ್ತೀಕ ಶುದ್ಧ ಏಕಾದಶಿ ದಿನದಂದು ಉಪವಾಸ ಮಾಡಿ ನಾರಾಯಣನಲ್ಲಿಯೇ ಮನಸ್ಸನ್ನಿಟ್ಟು ಧ್ಯಾನಮಾಡುವವರು ತಮ್ಮ ಕೋಟಿ ಜನ್ಮದ ಪಾಪಗಳನ್ನೆಲ್ಲ ಕಳೆದುಕೊಂಡು ಉದ್ಧೃತರಾಗುವರು. ಏಕಾದಶಿಯ ವಿಷಯದಲ್ಲಿ ಹಿಂದೆ ಭೂದೇವಿಯು ಪ್ರಶ್ನೆ ಮಾಡಿದಾಗ ಆ ಪರಮಾತ್ಮನು ಅದರ ಮಹಿಮೆಯನ್ನು ನಿರೂಪಿಸಿದಂತೆ ನಾನು ನಿಮಗೆ ಹೇಳುತ್ತೇನೆ ಕೇಳಿರಿ -

**ವರಾಹ :-** ಈ ಕಲಿಯುಗದಲ್ಲಿ ಬ್ರಹ್ಮಹತ್ಯಾ, ವ್ಯಭಿಚಾರ, ಮಿತ್ರದ್ರೋಹ, ಅಭಕ್ಷ್ಯಭಕ್ಷಣ, ಸುರಾಪಾನ, ಮುಂತಾದ ಅನೇಕಾನೇಕ ಪಾತಕಗಳ ಪರಿಹಾರಕ್ಕಾಗಿ ಮತ್ತು ಆ ಎಲ್ಲ ಪಾಪಿಗಳ ಉದ್ಧಾರಕ್ಕಾಗಿ ಶ್ರೀ ಹರಿಯು ತನ್ನ ಶಕ್ತಿಯಿಂದ ದ್ವಾದಶೀ ವ್ರತವನ್ನು ನಿರ್ಮಿಸಿದ್ದಾನೆ. ಆದುದರಿಂದ ಏಕಾದಶಿ ದಿನ ಉಪವಾಸ ಮಾಡಿ ದ್ವಾದಶಿಯ ದಿನ ವಿಧಿಪೂರ್ವಕವಾಗಿ ಶ್ರೀ ಹರಿಯನ್ನು ಪೂಜೆ ಮಾಡಿ ಪಾರಣೆಯನ್ನು ಮಾಡಿದರೆ ಸರ್ವ ಪಾಪಗಳು ಪರಿಹಾರವಾಗಿ ಹರಿಪದ ಪ್ರಾಪ್ತಿಯಾಗುವದು. ಕಾರ್ತೀಕ ಶುಕ್ಲ ಪಕ್ಷ ಏಕಾದಶಿಯಂತೆ ಕೃಷ್ಣಪಕ್ಷ ಏಕಾದಶಿಯ ದಿನಸಹ ಉಪವಾಸವನ್ನು ತಪ್ಪದೇ ಮಾಡಬೇಕು. ಶುಕ್ಲ ಏಕಾದಶಿಯು ಭಕ್ತಿಯನ್ನು ಕೊಟ್ಟರೆ ಕೃಷ್ಣ ಏಕಾದಶಿಯು ಮುಕ್ತಿಯನ್ನೇ ಕೊಡುತ್ತದೆ.

**ಯಥಾ ಶುಕ್ಲಾ ತಥಾ ಕೃಷ್ಣಾ ಹ್ಯುಪೋಷ್ಯಾ ಸಾ ಪ್ರಯತ್ನತಃ ।**
**ಶುಕ್ಲಾ ಭಕ್ತಿ ಪ್ರದಾ ನಿತ್ಯಂ ಕೃಷ್ಣಾ ಮುಕ್ತಿಂ ಪ್ರಯಚ್ಛತಿ ॥**

ವಿಷ್ಣುಲೋಕವನ್ನು ಪಡೆಯ ಬಯಸುವವರೆಲ್ಲರೂ ಸರ್ವಪ್ರಯತ್ನದಿಂದ ಕಾರ್ತೀಕ ಏಕಾದಶಿ ಉಪವಾಸ ಮತ್ತು ದ್ವಾದಶಿ ಪಾರಣೆಯನ್ನು ಸಾಧಿಸಬೇಕು. ಎಂಥ ಪ್ರಸಂಗದಲ್ಲಿಯೂ ಏಕಾದಶಿ ದಿನ ಊಟ ಮಾಡಬಾರದು. ಅಂದು ಊಟ ಮಾಡಿದರೆ ಪಂಚ ಮಹಾಪಾತಕಗಳನ್ನು ಮಾಡಿದ ಪಾಪಕ್ಕೆ ಗುರಿಯಾಗಬೇಕಾಗುವದು. ಕಾರ್ತೀಕ ಏಕಾದಶಿ ಉಪವಾಸ ಮತ್ತೂ ದ್ವಾದಶಿ ಪಾರಣೆಗಳಿಂದ ಹನ್ನೆರಡು ದ್ವಾದಶಿ ವ್ರತಗಳನ್ನು ವಿಧಿಪೂರ್ವಕವಾಗಿ ಮಾಡಿದ ಪುಣ್ಯವು ಪ್ರಾಪ್ತವಾಗುವದು. ಆ ಕಾಲದಲ್ಲಿ ದ್ವಾದಶಿಗೆ ಪೂರ್ವಾಭಾದ್ರಪದ ಏಕಾದಶಿಗೆ ಉತ್ತರಾ ಭಾದ್ರಪದ ನಕ್ಷತ್ರಯೋಗವಿದ್ದರೆ ಆ ಕಾಲದಲ್ಲಿ

ಮಾಡಿದ ದಾಮೋದರಪೂಜೆಗೆ ಕೋಟಿಗುಣ ಅಧಿಕ ಪುಣ್ಯ ಫಲವುಂಟು. ಕಾರ್ತೀಕಮಾಸದ ಉತ್ಥಾನ ಏಕಾದಶಿ ದ್ವಾದಶಿಗಳಂತೆ ವಿಷ್ಣು ವು ಶಯನ ಮಾಡುವ ಆಷಾಢ ಶುದ್ಧ ಏಕಾದಶಿ ದ್ವಾದಶಿಗಳೂ, ಮಲಗಿದ ಭಗವಂತನು ಮಗ್ಗ ಲಾಗುವ ಭಾದ್ರಪದ ಶುಕ್ಲ ಏಕಾದಶಿಗಳೂ ವಿಶೇಷ ಪುಣ್ಯಪ್ರದಗಳಾಗಿವೆ. ಈ ಎಲ್ಲ ಹರಿದಿನಗಳಲ್ಲಿ ಏಕಾದಶಿ ಉಪೋಷಣೆ ಮಾಡಿ ಪಂಚರತ್ನಗಳಿಂದ ಕೂಡಿದ ಕಲಶವನ್ನು ಪ್ರತಿಷ್ಠಾಪಿಸಿ ಅದರ ಮೇಲೆ ಬಂಗಾರದ ಮಚ್ಛ್ಯರೂಪಿ ಶ್ರೀಹರಿಯನ್ನು ಪ್ರತಿಷ್ಠೆ ಮಾಡಬೇಕು. ಆ ದೇವನಿಗೆ ಪಂಚಾಮೃತದಿಂದ ಅಭಿಷೇಕಮಾಡಿ ಅರಿಷಿಣ ಕುಂಕುಮ ಏರಿಸಿ ಎರಡು ಪೀತಾಂಬರಗಳನ್ನು ಹೊದಿಸಿ ಛತ್ರ ಪಾದುಕೆಗಳನ್ನು ಅರ್ಪಿಸಿ ಕಮಲ ಪುಷ್ಪಗಳಿಂದ ಪೂಜೆಮಾಡಬೇಕು. ಹೀಗೆ ಮಚ್ಛ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ ಕೃಷ್ಣ, ಬುದ್ಧ,ಕಲ್ಕಿ ಮುಂತಾದ ದಶಾವತಾರಗಳು ಭಕ್ತಿಯಿಂದ ಪೂಜಿಸಬೇಕು. ಮರುದಿನ ದ್ವಾದಶಿಯಂದು ಶ್ರೀಹರಿಯನ್ನು ಹೂ, ತುಳಸಿ, ಗಂಧಗಳಿಂದ ಪೂಜಿಸಿ, ಧೂಪ ತೋರಿಸಿ, ದೀಪವಿರಿಸಿ, ನಾನಾವಿಧವಾದ ಫಲಪಾಯಸಾದಿಗಳನ್ನು ನೈವೇದ್ಯ ವಿಟ್ಟು ಪೂಜೆ ಮಾಡಬೇಕು. ಅನಂತರ ಗುರುಪೂಜೆ ಮಾಡಿ ಬಂಗಾರದ ಆದಿತ್ಯಮೂರ್ತಿಯನ್ನು ಭಕ್ತಿಯಿಂದ ಗುರುವಿಗೆ ದಾನಕೊಡಬೇಕು. ಹೀಗೆ ವಿಧಿಪೂರ್ವಕವಾಗಿ ಉತ್ಥಾನ ಏಕಾದಶಿ ದ್ವಾದಶಿ ವ್ರತವನ್ನು ಮಾಡಿದವರು ವಿಷ್ಣು ಲೋಕವನ್ನು ಸೇರುವರು. ಈ ಉತ್ಥಾನ ಏಕಾದಶಿವ್ರತದ ಮಹಿಮೆಯನ್ನು ಕೇಳುವ ಮಾತ್ರದಿಂದಲೇ ಮನುಷ್ಯರ ದುಃಸ್ವಪ್ನಗಳೆಲ್ಲ ನಾಶವಾಗಿ ಪಾಪಪರಿಹಾರವಾಗುವದೆಂದ ಬಳಿಕ ಈ ದ್ವಾದಶಿ ವ್ರತವನ್ನು ಆಚರಿಸುವದರಿಂದ ವಿಶೇಷ ಫಲಪ್ರಾಪ್ತಿಯಾಗುವದೆಂದು ಹೇಳಬೇಕಾದುದೇನು? ಈ ವಿಷ್ಣು ವ್ರತದಿಂದ ವೈಷ್ಣವತ್ವವು ಪ್ರಾಪ್ತವಾಗುವದು. ಮೂರು ಲೋಕಗಳಲ್ಲಿಯೂ ಅತ್ಯಂತ ದುರ್ಲಭವಾದವಸ್ತು ಎಂದರೆ ವೈಷ್ಣವತ್ವ. ಸಾವಿರಾರು ಜನ್ಮಗಳಲ್ಲಿ ಮಹಾದೇವರನ್ನು ಆರಾಧನೆ ಮಾಡಿದ ಬಳಿಕ ಯಾವನೋ ಒಬ್ಬನಿಗೆ ಮಾತ್ರ ವೈಷ್ಣವತ್ವವು ಬರುವದು.

ದುರ್ಲಭಂ ವೈಷ್ಣವತ್ವಂ ಹಿ ತ್ರಿಷು ಲೋಕೇಷು ಸುಂದರಿ ।
ಜನ್ಮಾಂತರ ಸಹಸ್ರೇಷು ಸಮಾರಾಧ್ಯ ವೃಷಧ್ವಜಂ ॥
ವೈಷ್ಣವತ್ವಂ ಲಭೇತ್ಕಶ್ಚಿತ್ ಸರ್ವಪಾಪಕ್ಷಯೇ ಸತಿ ।

ಜ್ಞಾನ ಬಯಸುವವರು ಶಿವನನ್ನು ಪೂಜಿಸಬೇಕು. ಮೋಕ್ಷವನ್ನು ಬಯಸುವವರು ನನ್ನನ್ನು ಪೂಜಿಸಬೇಕು. ವಿಷ್ಣುಭಕ್ತನಾದ ವೈಷ್ಣವರು ಬ್ರಾಹ್ಮಣನಾದರೂ ಸರಿ ಚಂಡಾಲನಾದರೂ ಸರಿ. ಅವರನ್ನು ನೆನೆದ ಮಾತ್ರಕ್ಕೆ ಪಾಪಪರಿಹಾರವಾಗುವದು. ನಿಜವಾದ ವೈಷ್ಣವನ ದರ್ಶನ, ಸಂಭಾಷಣ, ಸ್ಮರಣ, ಕೀರ್ತನ ಅಥವಾ ನಾಮೋಚ್ಚಾರಣೆಯೂ ಕೂಡ ಜನರನ್ನು ಪುನೀತಗೊಳಿಸುತ್ತದೆ. (ಇದೇ ಅಭಿಪ್ರಾಯವನ್ನು ಮುಂದಿನ ಪದ್ಯಗಳಲ್ಲಿ ಹೇಳಿದ್ದಾರೆ.)

ವೈಷ್ಣವಾ ಹಿ ಮಹಾಭಾಗಾಃ ಪುನಂತಿ ಸಕಲಂ ಜಗತ್
ಸಂಸ್ಮೃತಃ ಕೀರ್ತಿತೋ ವಾಪಿ ದೃಷ್ಟಃ ಪೃಷ್ಟೋಽಪಿ ವಾ ಪುನಃ
ಪುನಾತಿ ಭಗವದ್ಭಕ್ತಶ್ಚಂಡಾಲೋಪಿ ಯದೃಚ್ಛಯಾ ॥

ಧರಣೀದೇವಿಯು ವರಾಹ ದೇವರ ಬಾಯಿಂದ ಉತ್ಥಾನ ದ್ವಾದಶಿ ವ್ರತದ ವಿಧಾನವನ್ನು ಕೇಳಿಕೊಂಡು ತಾನೂ ಅದರಂತೆ ಆಚರಿಸಿ ಆ ಜಗನ್ನಾಥನ ಪಾದಗಳಲ್ಲಿ ವಿಲೀನಳಾದಳು. ಆದುದರಿಂದ ನಾರದ ಮುನಿಯೇ ಬಲ್ಲವನು ಸರ್ವ ಪ್ರಯತ್ನದಿಂದ ವೈಷ್ಣವತ್ವವನ್ನು ಹೊಂದಬೇಕು. ವಿಷ್ಣುವಿನ ದಿನವಾದ ಏಕಾದಶಿಯಂದು ಉಪವಾಸ ಮಾಡಬೇಕು. ದ್ವಾದಶಿಯಂದು ಪೂಜಾಪಾರಣೆಗಳನ್ನು ತಪ್ಪದೆ ಮಾಡಬೇಕು. ಅದರಿಂದ ಅವರಿಗೆ ನರಕದ ಭಯ ತಪ್ಪಿ ನನ್ನ ಮುಖವನ್ನು ನೋಡುವ ಪ್ರಸಂಗವೇ ಎಂದಿಗೂ ಬರುವದಿಲ್ಲ.

**ನಚಿಕೇತ :-** ದೇವಮುನಿಯಾದ ನಾರದನು ಧರ್ಮ ದೇವತೆಯಾದ ಯಮರಾಜನಿಂದ ಈ ಎಲ್ಲ ಧರ್ಮಕರ್ಮ ವಿಚಾರವನ್ನೂ ತಿಳಿದು ಅವನ ನಿರೋಪವನ್ನು ತೆಗೆದುಕೊಂಡು ಅವನಿಗೆ ಮಂಗಳಾಶಂಸನೆಯನ್ನು ಮಾಡಿ ಆಕಾಶ ಮಾರ್ಗವಾಗಿ ಸ್ವರ್ಗಕ್ಕೆ ತೆರಳಿದನು. ನಾರದರು ಸ್ವರ್ಗಕ್ಕೆ ಪ್ರಯಾಣ ಮಾಡಿದ ಬಳಿಕ ಆ ಯಮದೇವರು ನನ್ನೆಡೆಗೆ ನೋಡಿ ಪ್ರೀತಿಯ ಮಾತುಗಳನ್ನು ಆಡಿ ಉಚಿತ ರೀತಿಯಲ್ಲಿ ನನ್ನನ್ನು ಪೂಜಿಸಿ ಗೌರವಿಸಿ ಸ್ತುತಿಸಿ ಅತ್ಯಂತ ಪ್ರೀತಿಯಿಂದ ಕಳಿಸಿಕೊಟ್ಟರು. ಬ್ರಾಹ್ಮಣರೇ, ಆ ಯಮ ರಾಜನ ಪಟ್ಟಣದಲ್ಲಿ ನಾನು ನೋಡಿದುದನ್ನೂ, ಕೇಳಿದುದನ್ನೂ, ನಾನು ಇಲ್ಲಿಗೆ ಹೇಗೆ ಬಂದೆನೆಂಬುದನ್ನೂ ತಿಳಿಸಿದುದಾಯಿತು.

**ವೈಶಂಪಾಯನ :-** ನಚಿಕೇತನ ಈ ಮಾತುಗಳನ್ನು ಕೇಳಿ ಅಲ್ಲಿ ನೆರೆದ ತಪಸ್ವಿಗಳೆಲ್ಲರೂ ಆನಂದದಿಂದ ಉಬ್ಬಿಹೋದರು. ನರಕದ ದರ್ಶನವೂ ಕೂಡ ತಮಗಾಗಬಾರದೆಂದು ಬಯಸಿ ಕೂಡಲೇ ಉಗ್ರತಪಸ್ಸನ್ನು ಕೈಕೊಂಡರು. ಕೆಲವರು ಫಲಾಹಾರಿಗಳಾದರು. ಹಲವರು ಜಲಾಹಾರಿಗಳಾದರು. ಕೆಲವರು ಪಂಚಾಗ್ನಿ ಮಧ್ಯದಲ್ಲಿ ನಿಂತರು. ಕೆಲವರು ಧ್ಯಾನ ವ್ರತಿಗಳಾದರೆ ಹಲವರು ಮೌನವ್ರತಿಗಳಾದರು. ಧರ್ಮಾತ್ಮನಾದ ಉದ್ಧಾಲಕನು ಯಮಲೋಕದಿಂದ ಮರಳಿ ಬಂದು ಅಲ್ಲಿಯ ವಿಚಾರವನ್ನೆಲ್ಲ ತಿಳಿಸಿದ ತನ್ನ ತಪಸ್ವಿ ಮಗನನ್ನು ಕಂಡು ಅತ್ಯಂತ ಸಂತುಷ್ಟನಾಗಿ ಅಪ್ರಮೇಯನೂ ಚಿನ್ಮಯನೂ ಆದ ಆ ವಿಷ್ಣುವಿನನ್ನು ಧ್ಯಾನ ಮಾಡತೊಡಗಿದನು. ಭಗವದ್ಭಕ್ತಿಯನ್ನು ಉಂಟುಮಾಡತಕ್ಕ ಈ ಪರಮಾಖ್ಯಾನವನ್ನು ಹೇಳುವವರೂ ಕೇಳುವವರೂ ಸರ್ವ ಇಷ್ಟಾರ್ಥವನ್ನು ಪಡೆಯುವರು.

*ವರಾಹ ಪುರಾಣದಲ್ಲಿ ನೂರಇಪ್ಪತ್ತೊಂಬತ್ತನೇ ಅಧ್ಯಾಯ ಮುಗಿದಿದೆ.*

—o—

## ಶಿವಕ್ಷೇತ್ರಗಳ ಉಗಮಾಗಮ

## ಅಧ್ಯಾಯ - ೧೩೦

**ಸೂತರು** :- ಪೂರ್ವಕಾಲದಲ್ಲಿ ದೇವದಾನವರ ನಡುವೆ ನಡೆದ ತಾರಕಾಮಯ ಸಂಗ್ರಾಮದಲ್ಲಿ ದೈತ್ಯರೆಲ್ಲರು ಸೋತು ಸತ್ತುಹೋದರು. ದೇವೇಂದ್ರನು ನಿಷ್ಕಂಟಕವಾದ ಸ್ವರ್ಗಸಾಮ್ರಾಜ್ಯದ ಐಸಿರಿಯನ್ನು ಪಡೆದು ತ್ರಿಲೋಕಾಧಿಪತಿಯಾಗಿ ಮೆರೆಯ ತೊಡಗಿದನು. ಆ ಕಾಲದಲ್ಲಿ ಬಂಗಾರದ ಬೆಟ್ಟವಾದ ಮೇರುಪರ್ವತದಲ್ಲಿ ದೇವತೆಗಳ ಸಭೆಯು ನಡೆದಿದ್ದಿತು. ರತ್ನಖಚಿತವಾದ ಆ ಹೇಮಾಚಲದ ಶಿಖರದಲ್ಲಿ ಕಮಲ ಪೀಠದ ಮೇಲೆ ಬ್ರಹ್ಮದೇವರು ಕುಳಿತುಕೊಂಡಿದ್ದರು. ಅವರ ಪ್ರಸನ್ನಮುಖಮುದ್ರೆಯನ್ನು ಕಂಡು ಧನ್ಯನಾದ ಚಿರಂಜೀವ ಸನತ್ಕುಮಾರನು ಅವರ ಅಡಿದಾವರೆಗಳ ಮೇಲೆ ಶಿರವಿಟ್ಟು ವಿನಯದಿಂದ ಕೇಳಿದನು.-

''ಪೂಜ್ಯರೇ, ಪುರಾಣ ಪ್ರಸಿದ್ಧವಾದ ಗೋಕರ್ಣ ಕ್ಷೇತ್ರವು ಹೇಗೆ ಪ್ರತಿಷ್ಠಿತವಾಯಿತು ? ಶ್ರೀ ಲಿಂಗೇಶ್ವರ ಕ್ಷೇತ್ರದ ಪ್ರಮಾಣವೆಷ್ಟು ? ಆ ಕ್ಷೇತ್ರದಲ್ಲಿ ಮಹಾದೇವರು ಮೃಗರೂಪವನ್ನು ಧರಿಸಿ ಹೇಗೆ ಇರುವರು ? ಮೃಗರೂಪಧಾರಿಯಾದ ಆ ಪರಶಿವನ ಶರೀರವು ಎಲ್ಲಿ ಇದ್ದಿತು ? ಅದು ದೇವತೆಗಳಿಗೆ ಹೇಗೆ ದೊರಕಿತು ?'' ಇದೆಲ್ಲವನ್ನು ದಯವಿಟ್ಟು ನನಗೆ ತಿಳಿಸಬೇಕು. ಸನತ್ಕುಮಾರನ ಈ ಪ್ರಶ್ನೆಯನ್ನು ಕೇಳಿ ಬ್ರಹ್ಮದೇವರು ಎಂದಿನಿಂದಲೂ ಗುಟ್ಟಾಗಿಯೇ ಉಳಿದ ಆ ವಿಷಯವನ್ನು ಬ್ರಹ್ಮವನ್ನು ಅರಿತವರಲ್ಲಿ ಶ್ರೇಷ್ಠನಾದ ಅವನಿಗೆ ಹೇಳಿದರು -

''**ಬ್ರಹ್ಮ** - ವತ್ಸ, ಗಿರಿಗಳಲ್ಲಿ ಹಿರಿದೆನಿಸಿದ ಮಂದರಾಚಲದ ಉತ್ತರ ನಿಟ್ಟಿನಲ್ಲಿ ಮುಂಜವಂತ ಎಂಬ ಬೆಟ್ಟವು ಇರುತ್ತದೆ. ವಜ್ರದ ಹರಳುಗಲ್ಲುಗಳಿಂದಲೂ, ಸಣ್ಣಸಣ್ಣ ಹವಳ ಶಕಲಗಳಿಂದ ನಿರ್ಮಿತವಾದ ಮರಳು ರಾಶಿಗಳಿಂದಲೂ, ಇಂದ್ರ ನೀಲಮಣಿಯ ಶಿಲೆಗಳಿಂದ ರೂಪಿತವಾದ ಗುಹೆಗಳಿಂದಲೂ, ಆ ಪರ್ವತವು ಅತ್ಯಂತ ಸುಂದರವಾಗಿದ್ದಿತು. ಅದರ ಒಂದೆಡೆಗೆ ಝರಿ ತೊರೆಗಳು ಕುಲುಕುಲು ಮಂಜುಳ ಧ್ವನಿಯೊಂದಿಗೆ ಧುಮ್ಮಿಕ್ಕಿ ಹರಿಯುತ್ತಿದ್ದರೆ ಇನ್ನೊಂದೆಡೆಗೆ ಕುಂಜನಿಕುಂಜಗಳ ಮೇಲೆ ಹೊಂದಳಿರ ಹಂದರಗಳನ್ನು ನಿರ್ಮಿಸಿದ ಲತಾ ಪ್ರತಾನಗಳ ಕುಸುಮ ಮಂಜರಿಗಳಲ್ಲಿ ಕುಳಿತು ಹಾಡುವ ದುಂಬಿಗಳ ಗುಂಜಾರವು ಇಂಪಾಗಿ ಕೇಳಿ ಬರುತ್ತಿತ್ತು.

ಪ್ರಸ್ಫುಟಿತವಾದ ಇಂದ್ರನೀಲ ಮಣಿಗಳ ಕಪ್ಪು ಕಾಂತಿಯನಾಂತು ಹಾವಸೆ ಗಟ್ಟಿದ ಬಂಡೆಗಲ್ಲುಗಳನ್ನು ಬಳಸಿಕೊಂಡು ಹರಿದು ಮೊರೆಯುತ್ತಿರುವ ನಿರ್ಝರಣಿಗಳಿಂದಲೂ, ಬಣ್ಣ ಬಣ್ಣದ ಹೂಗೊಂಚಲಗಳಿಂದ ಹೆಣೆದುಕೊಂಡ ಹಾಸುಗಲ್ಲುಗಳ ಮೇಲೆ ಇಂದ್ರ ಚಾಪದ ಚಲುವಿನ ಭಾವಣಿಗಳಂತೆ ಒಪ್ಪುತ್ತಿರುವ ಬಳ್ಳಿವಾಡಗಳಿಂದಲೂ, ರಮ್ಯ ತಾಣಗಳಲ್ಲಿ ವಿಹರಿಸುವ ದೇವತಾ ದಂಪತಿಗಳಿಂದಲೂ, ಹಾಡುವ ಗಂಧರ್ವರಿಂದಲೂ, ಕುಣಿಯುವ ಅಪ್ಸರೆಯರಿಂದಲೂ, ಕುಕಿಲುವ ಕೋಗಿಲೆಗಳಿಂದಲೂ, ಗರಿಗೆದರಿ ನರ್ತಿಸುವ ನವಿಲುಗಳ ಕೇಕಾಧ್ವನಿಗಳಿಂದಲೂ ಆ ಪರ್ವತವು ನಂದನವನದಂತೆ ಸುಂದರವಾಗಿ ತೋರುತ್ತದೆ.

ರಮಣೀಯವಾದ ಆ ಮುಂಜವಂತ ಬೆಟ್ಟದಲ್ಲಿ ಮಹಾದೇವನು ಸ್ಥಾಣು ಎಂಬ ಹೆಸರಿನಿಂದ ಪಾರ್ವತಿ ಷಣ್ಮುಖ ಮತ್ತು ಪ್ರಮಥಗಣದೊಂದಿಗೆ ನಿರಂತರ ನೆಲಿಸಿರುವನು. ತ್ರೇತಾಯುಗದಲ್ಲಿ ನಂದಿ ಎಂಬ ಮಹರ್ಷಿಯು ಆ ಶಿವನನ್ನು ಮೆಚ್ಚಿಸಲಿಕ್ಕಾಗಿ ಅತ್ಯುಗ್ರವಾದ ತಪಸ್ಸನ್ನು ಕೈಕೊಂಡಿದ್ದನು. ಅವನ ಆ ಘೋರವಾದ ತಪಸ್ಸಿಗೆ ಮೆಚ್ಚಿದ ಮಹಾದೇವನು ಅವನೆದುರು ಪ್ರತ್ಯಕ್ಷನಾಗಿ ಪ್ರೀತಿಯಿಂದ ನುಡಿದನು.-

''ವತ್ಸ, ನಾನು ನಿನ್ನ ಮೇಲೆ ಪ್ರಸನ್ನನಾಗಿದ್ದೇನೆ. ನನ್ನನ್ನು ಕಾಣಲು ನಿನಗೆ ದಿವ್ಯ ಚಕ್ಷುಸ್ಸನ್ನು ಕೊಡುತ್ತೇನೆ. ಸಾಮಾನ್ಯರ ದೃಷ್ಟಿಗೆ ಕಾಣದಿರುವ ಜ್ಞಾನಿಗಮ್ಯವಾದ ಆ ನನ್ನ ದಿವ್ಯ ರೂಪವನ್ನು ನೀನು ನೋಡು. ಸಾವಿರ ಸೂರ್ಯರಿಗೆ ಸಮಾನವಾಗಿದೆ ಅದರ ಕಾಂತಿ. ಚಂದ್ರನ ಮರಿಯೊಂದು ಆ ಜಡೆಯ ಮುಡಿಯಲ್ಲಿ ಜೋತಾಡುತ್ತಲಿದೆ. ಜಗತ್ತಿನ ಕಣ್ಣಾದ ಆ ಶಿವಮೂರ್ತಿಗೆ ಹೊಳಪುಗಣ್ಣುಗಳು ಮೂರು. ತಲೆಗಳು ನೂರು. ಹೊಟ್ಟೆಗಳೂ ಅಷ್ಟೇ. ಕೈ ಕಾಲುಗಳು ಸಾವಿರ, ಕಣ್ಣು ಬಾಯಿಗಳು ಅದರಷ್ಟೇ, ಚಿಕ್ಕದಕ್ಕಿಂತ ಚಿಕ್ಕದು ಅವನ ಮೂರ್ತಿ ದೊಡ್ಡದಕ್ಕಿಂತ ದೊಡ್ಡದು. ಕೈಯಲ್ಲಿ ಕಮಂಡಲು, ಕೊರಳಲ್ಲಿ ಅಕ್ಷಮಾಲೆ, ಸಿಂಹದ ತೊಗಲು ಬಟ್ಟೆಯಂತೆ ಮೈಗೆ ತಗಲಿದೆ. ಹಾವು ಜನಿವಾರದಂತೆ ಮೈ ಕೈಗಳನ್ನು ಬಳಸಿ ಹೆಗಲಮೇಲೆ ಹೆಡೆಬಿಚ್ಚಿ ಆಡುತ್ತಲಿದೆ.

ಮಹಾದೇವರ ಈ ದಿವ್ಯರೂಪವನ್ನು ನೋಡಿ ಆ ನಂದಿ ಬ್ರಾಹ್ಮಣನಿಗೆ ಮೈ ತುಂಬ ಮುಳ್ಳು ಮೂಡಿದವು. ಹಿಗ್ಗು ಹಿಗ್ಗಿತು. ತಲೆ ತಗ್ಗಿತು. ಬಾಯಿಚಿರಿಯಿತು, ಭಕ್ತಿರಸವು ಸ್ತೋತ್ರರೂಪದಿಂದ ಹರಿಯಿತು.

**ನಮೋ ಧಾತ್ರೇ ವಿಧಾತ್ರೇ ಚ ಶಂಭವೇ ವರದಾಯ ಚ**
**ಜಗದ್ವ್ಯೋಕ್ತ್ರೇ ತ್ರಿಣೇತ್ರಾಯ ಶಂಕರಾಯ ಶಿವಾಯ ಚ**
**ಕಪಾಲ ಮಾಲಿನೇ ತಸ್ಮೈ ಹರಿತ್‌ಶ್ಮಶ್ರು ಭರಾಯ ಚ**
**ಭಕ್ತಪ್ರಿಯಾಯ ಸತತಂ ನಮೋಽಸ್ತು ಪರಮಾತ್ಮನೇ**

ಜಗತ್ತಿನ ಧಾತಾವಿಧಾತಾ ಎನಿಸಿದ ಕಪಾಲಗಳ ಮಾಲೆ ಧರಿಸಿ ಮುಕ್ಕಣ್ಣ ರೂಪಿಯಾದ ಪರಮಾತ್ಮನಿಗೆ ನಮ್ಮ ನಮಸ್ಕಾರ. ಆ ನಂದಿ ಮುನಿಯ ಪ್ರಣಾಮ ಪೂರ್ವಕವಾದ ಈ ಪ್ರಾರ್ಥನೆಯನ್ನು ಕೇಳಿ ಪರಮೇಶ್ವರನು ಪ್ರೀತ ಪ್ರಸನ್ನನಾಗಿ '' ನಿನಗೆ ಬೇಕಾದ ವರವನ್ನು ಕೇಳು. ನಿನಗೆ ಇಂದ್ರ ಪದಿವಿಬೇಕೋ ? ಚಂದ್ರಪದವಿಬೇಕೋ ? ಅಥವಾ ಬ್ರಹ್ಮತ್ವ-ಬ್ರಹ್ಮಪ್ರಾಪ್ತಿ ಅಥವಾ ಮೋಕ್ಷವು ಬೇಕೋ? ಅಥವಾ ಅಷ್ಟೈಶ್ವರ್ಯಬೇಕೋ ? ಇಲ್ಲವೆ ಗಣಾಧಿಪತ್ಯವು ಬೇಕೋ ? ಬೇಗ ಹೇಳು. ಏನು ಬೇಕು ? ಬೇಗಹೇಳು. '' ಎಂದು ಕೇಳಿದನು. ಅದನ್ನು ಕೇಳಿ ಸಂತುಷ್ಟನಾದ ಆ ನಂದಿಮುನಿಯು ಆನಂದದಿಂದ ಇಂತು ನುಡಿದನು. '' ಪ್ರಭು, ನನಗಾವ ಇಂದ್ರಪದವಿಯು ಬೇಡ. ಚಂದ್ರಪದವಿಯೂ ಬೇಡ. ಸ್ವರ್ಗವೂ ಬೇಡ. ಅಪವರ್ಗವೂ ಬೇಡ ನನಗೆ ಬೇಕಾದುದು ಕೇವಲ ನಿನ್ನ ಭಕ್ತಿ. ನಿನ್ನನ್ನು ಬಿಟ್ಟು ಬೇರೆ ಯಾರಲ್ಲಿಯೂ ನನಗೆ ಭಕ್ತಿ ಉಂಟಾಗದಂತಿರಲಿ ಮತ್ತು ನಿನ್ನನ್ನು ಕುರಿತು ಒಂದು ಕೋಟಿ ರುದ್ರಮಂತ್ರ ಜಪವನ್ನು ನಾನು ಕೈಕೊಳ್ಳಬೇಕೆಂದಿದ್ದೇನೆ. ನನ್ನ ಈ ಶಿವರಾಧನೆಯು ನಿರ್ವಿಘ್ನವಾಗಿ

ನೆರವೇರುವಂತೆ ನೀನು ಅನುಗ್ರಹಿಸಬೇಕು. '' ನಂದಿಮುನಿಯ ಮಾತನ್ನು ಕೇಳಿ ಮಹೇಶ್ವರನಿಗೆ ಅತಿಶಯ ಹರ್ಷವಾಯಿತು. ಅವನು ಪ್ರೀತಿಪೂರ್ವಕವಾಗಿ ತನ್ನ ಭಕ್ತನಾದ ನಂದಿಯನ್ನು ಕುರಿತು ಇಂತು ನುಡಿದನು-

''ಬ್ರಹ್ಮರ್ಷಿಯೇ, ನೀನು ಮಾಡಿದ ಘೋರ ತಪಸ್ಸಿನಿಂದ ನಾನು ಹರ್ಷಿತನಾಗಿದ್ದೇನೆ. ನೀನು ಈಗಾಗಲೇ ಮಾಡಿದ ತಪಸ್ಸು ಸಾಕಷ್ಟಾಗಿದೆ. ಇದಕ್ಕೂ ಮೊದಲು ಒಂದು ಸಾವಿರ ವರ್ಷದ ಸುಧೀರ್ಘ ತಪೋನುಷ್ಠಾನವನ್ನು ನೀನು ಕೈಕೊಂಡು ಮೂರು ಕೋಟಿ ರುದ್ರ ಮಂತ್ರವನ್ನು ಜಪಿಸಿರುತ್ತಿ. ಈ ಮೊದಲು ದೇವ ದಾನವ ಮುನಿ ಮಾನವರಲ್ಲಿ ಯಾರೂ ಮಾಡದ ಮಹಾ ಪುಣ್ಯಕಾರ್ಯವನ್ನು ನೀನು ಮಾಡಿದುದರಿಂದ ನಿನಗೆ ನನ್ನ ಸಮಾನವಾದ ರೂಪವು ಪ್ರಾಪ್ತವಾಗುವದು. ನನ್ನಂತೆ ಮೂರು ಕಣ್ಣು ನನ್ನಂತೆ ದಿವ್ಯ ತೇಜಸ್ಸು ನಿನಗೂ ಲಭಿಸುವವು. ನೀನು ದೇವ ಪೂಜ್ಯನಾಗುವಿ. ಮುಪ್ಪು ಮರಣಗಳಿಲ್ಲದ ಈ ಮಾನವೀ ದೇಹದಿಂದಲೇ ನೀನು ದೇವ ದುರ್ಲಭವಾದ ಗಣೇಶ್ವರ ಪದವಿಯನ್ನು ಹೊಂದುವಿ. ನಂದೀಶ್ವರನೆಂದು ಪ್ರಖ್ಯಾತನಾದ ನಿನ್ನಲ್ಲಿಯೂ ನನ್ನಲ್ಲಿಯೂ ಯಾವ ವಿಶೇಷ ಅಂತರವೂ ಇಲ್ಲ. ಆಕಾಶ ಮತ್ತು ವಾಯುಗಳಂತೆ ನಮ್ಮಿಬ್ಬರಲ್ಲಿ ಯಾವ ಅಂತರವೂ ಇಲ್ಲ. ನಿನ್ನನ್ನು ದ್ವೇಷ ಮಾಡಿದವನು ನನ್ನನ್ನು ದ್ವೇಷ ಮಾಡಿದಂತೆ. ನಿನ್ನ ಭಕ್ತನು ನನ್ನ ಭಕ್ತನೂ ಅಹುದು. ನೀನು ಯಾವಾಗಲೂ ನನ್ನ ಮಂದಿರದ ದಕ್ಷಿಣ ಬಾಗಿಲಲ್ಲಿರಬೇಕು. ಉತ್ತರ ಬಾಗಿಲದಲ್ಲಿ ಮಹಾಕಾಲನು ಇರಬೇಕು. ನೀವಿಬ್ಬರೂ ನನ್ನ ಅಂಗರಕ್ಷಕರಾಗಿ ಇರಿ.

ನನ್ನ ಪ್ರಿಯ ಭಕ್ತನೆ, ನಾನು ಹೇಳಿದ ಮಾತು ಇನ್ನು ದೇವತೆಗಳ ಕಿವಿಗೆ ಬಿದ್ದಿಲ್ಲ. ಅವರೆಲ್ಲರೂ ಶ್ರೀ ಹರಿಯನ್ನು ಮುಂದೆ ಮಾಡಿಕೊಂಡು ನಮ್ಮೀರ್ವರ ಪ್ರೇಮವರವನ್ನು ಪಡೆಯಲಿಕ್ಕಾಗಿ ಬರಲಿರುವರು. ನನ್ನ ಅನುಗ್ರಹದಿಂದ ನಿನಗೆ ದೊರೆತ ಈ ಅಪೂರ್ವವಾದ ಸಿದ್ಧಿಯನ್ನು ಕಂಡು ಅನೇಕ ಋಷಿಗಳೂ, ಗಂಧರ್ವರೂ, ಯಕ್ಷರೂ, ಸಿದ್ಧರೂ ಘೋರ ತಪಸ್ಸನ್ನು ಕೈಕೊಂಡು ನನ್ನಿಂದ ತಾವೂ ವಿಶೇಷವಾದ ವರಪ್ರಸಾದವನ್ನು ಪಡೆಯಲು ಪ್ರವೃತ್ತರಾಗುವರು. ನನಗೆ ಬೇಗನೆ ಬ್ರಹ್ಮಾದಿ ದೇವತೆಗಳನ್ನು ಕಾಣಬೇಕಾಗಿದೆ '' ಎಂದು ಹೇಳಿ ಅವನು ಕೇಳಿದ ವರಗಳನ್ನು ಕೊಟ್ಟು ಪರಶಿವನು ಅಲ್ಲಿಂದ ಅದೃಶ್ಯನಾದನು.

## ದೇವತೆಗಳು ಕಾಣಬಯಸಿದ ಶಿವರಹಸ್ಯ

ಶಂಕರನು ಅದೃಶ್ಯನಾದ ಬಳಿಕ ಅವನ ಕಿಂಕರನಾದ ನಂದೀಶ್ವರನು ಗಣಸೇನಾಧಿಪತಿಯಾದನು. ನಾಲ್ಕು ತೋಳು, ಮೂರು ಕಣ್ಣು, ದಿವ್ಯವರ್ಣಗಳುಳ್ಳ ಆ ದ್ವಿಜ ವೃಷಭನು ಭಯಂಕರ ರೂಪವನಾಂತು ಮೂರು ಲೋಕಗಳನ್ನು ಆಕ್ರಮಿಸುವ ತ್ರಿವಿಕ್ರಮನಂತೆ ಬಾನುದ್ದ ಬೆಳೆದು ಕಾಲಿನಿಂದ ನೆಲವನ್ನು ಕೆರೆಯುತ್ತ ನಿಂತು ಕೊಂಡನು. ಅದನ್ನು ಕಂಡು ಇಂದ್ರಾದಿ ದೇವತೆಗಳು ಗಾಬರಿಯಾಗಿ ಶ್ರೀ ವಿಷ್ಣುವನ್ನು ಮುಂದುಮಾಡಿಕೊಂಡು ನಂದೀಶ್ವರನು ಇದ್ದಲ್ಲಿಗೆ ಬಂದರು. ಶ್ರೀ ಹರಿಯ ಸಂದರ್ಶನದಿಂದ ಆನಂದಿತನಾದ ಆ ನಂದೀಶ್ವರನು ವಿನಯ ಪೂರ್ವಕವಾಗಿ ನುಡಿದನು-

''ಇಂದು ನನ್ನ ಜನ್ಮವು ಸಾರ್ಥಕವಾಯಿತು. ನನ್ನ ದೇಹವು ಪವಿತ್ರವಾಯಿತು. ಸರ್ವದೇವತಾ ಅಧ್ಯಕ್ಷನಾದ ಶ್ರೀ ಹರಿಯು ಇಂದು ದೃಷ್ಟಿಗೋಚರನಾದುದರಿಂದ ನನ್ನ ತಪಸ್ಸು ಕೂಡ ಇಂದು ಸಫಲವಾದಂತಾಯಿತು. ಶಿವನ ಅನುಗ್ರಹದಿಂದ ಕೃತಕೃತ್ಯನಾದ ನನ್ನ ತಪಸ್ಸು ಇಂದು ಸಿದ್ಧಿಯ ಪರಿಪೂರ್ಣತೆಯನ್ನು ಪಡೆದಂತಾಯಿತು. ದೇವರ್ಷಿಗಳೂ ಬ್ರಹ್ಮದೇವರೂ ಪ್ರೀತಿಯಿಂದ ಇಲ್ಲಿಯವರೆಗೆ ಬಂದು ನನ್ನ ಮೇಲೆ ಅನುಗ್ರಹಮಾಡಿದ್ದಕ್ಕಾಗಿ ನಿಜವಾಗಿಯೂ ನನಗೆ ಸಂತೋಷನಾಗಿದೆ.'' ಆಗ ದೇವತೆಗಳು ''ನಿನ್ನ ತಪಸ್ಸಿಗೆ ಮೆಚ್ಚಿ ವರವನ್ನು ಕರುಣಿಸಿದ ಆ ಪರಶಿವನು ಎಲ್ಲಿ ? ಆ ದೇವನನ್ನು ನಾವು ಎಲ್ಲಿ ನೋಡಬಹುದು ?'' ಎಂದು ಕೇಳಿದನು.

**ನಂದಿ :-** ಶಂಕರನು ನನಗೆ ವರವನ್ನಿತ್ತು ಅಲ್ಲಿಯೇ ಅದೃಶ್ಯನಾದನು. ಈಗ ಆತನು ಎಲ್ಲಿರುವನೆಂಬುದನ್ನು ನಾನು ಅರಿಯೆನು. ನೀವೇ ಅವನನ್ನು ಹುಡುಕಿರಿ.

**ಸನತ್ ಕುಮಾರ :-** ತಂದೆ ಬ್ರಹ್ಮದೇವನೇ, ನಂದೀಶ್ವರನು ಶಂಕರನು ಇರುವ ಸ್ಥಾನವನ್ನು ದೇವತೆಗಳಿಗೆ ಏಕೆ ತಿಳಿಸಲಿಲ್ಲ? ಇದರಲ್ಲಿ ಅಡಕವಾದ ಶಿವರಹಸ್ಯವು ಏನು ನನಗೆ ಹೇಳಿರಿ.

**ಬ್ರಹ್ಮ :-** ಮಹಾದೇವನು ದೇವತೆಗಳಿಗೆ ಹೇಳಿದ್ದನ್ನು ನಾನು ನಿನಗೆ ಹೇಳುವದಿಲ್ಲ. ಆದರೆ ನಂದಿಯನ್ನು ಕುರಿತು ಆ ಚಂದ್ರಚೂಡನು ಹೇಳಿದ ಮಾತನ್ನು ಮಾತ್ರ ನಿನಗೆ ಅರಹುತ್ತೇನೆ ಕೇಳು.

**ಶಂಕರ :-** ಹಿಮಾಲಯ ಪರ್ವತದ ಆಚೆಯ ಬದಿಯಲ್ಲಿ ಶ್ಲೇಷ್ಮಾತಕ ಎಂಬ ನಾಗರಾಜನು ಇರುತ್ತಾನೆ. ಅವನಿರುವ ತಪೋವನವು ಅದೇ ಹೆಸರಿನಿಂದ ಪ್ರಸಿದ್ಧವಾಗಿ ಪುಣ್ಯಕ್ಷೇತ್ರ ಎನಿಸಿದೆ. ಆ ಶ್ಲೇಷ್ಮಾತಕವನದಲ್ಲಿ ಚಿಗರೆ ರೂಪದಿಂದ ನಾನು ಸಂಚರಿಸುವಾಗ ದೇವತೆಗಳು ನನ್ನನ್ನು ಹುಡುಕಲು ಬರುತ್ತಾರೆ. ನನ್ನನ್ನು ಕಾಣಲಾರದೆ ಮಿಡುಕುತ್ತಾರೆ. ನನ್ನನ್ನು ಅರಸುತ್ತ ಹೊರಟು ನನ್ನನ್ನು ಕಾಣದೆ ಆರ್ತರಾದ ಆ ದೇವತೆಗಳನ್ನು ನೋಡಬೇಕೆಂದು ನನಗೆ ಅಪೇಕ್ಷೆಯಾಗಿದೆ.

ಇದನ್ನು ಕೇಳಿ ದೇವೇಂದ್ರನು ಜಿಂಕೆಯ ರೂಪದಿಂದ ಶಿವನು ಸಂಚರಿಸುವ ಆ ತಪೋವನಕ್ಕೆ ರಥಾರೂಢನಾಗಿ ಬಂದನು. ಅವನ ಜೊತೆಗೆ ವಿಮಾನಾರೂಢನಾಗಿ ವರುಣ, ಕುಬೇರ, ಯಮ, ಚಂದ್ರ, ಸೂರ್ಯ, ಷಣ್ಮುಖ, ವಿನಾಯಕ, ನಾರದ, ತುಂಬುರು, ಮುಂತಾದ ಎಲ್ಲ ದೇವತೆಗಳೂ, ಗಂಧರ್ವರೂ, ವಶಿಷ್ಠಾದಿ ಋಷಿಗಳೂ, ಊರ್ವಶೀ ಮೇನಕಾದಿ ಅಪ್ಸರೆಯರೂ, ಗಂಗಾದಿ ತೀರ್ಥಗಳೂ, ಕೈಲಾಸಾದಿ ಪರ್ವತಗಳೂ, ಆದಿಶೇಷ ಮೊದಲಾದ ಪನ್ನಗೇಶ್ವರರೂ ಅಲ್ಲಿಗೆ ಬಂದಿಳಿದರು. ಆ ಗಿರಿ ಶಿಖರವು ಹುಣ್ಣಿಮೆಯ ಸಮುದ್ರತೀರದಂತೆ ತುಂಬಿ ಹೋಯಿತು. ದೇವ ಗಂಧರ್ವರು ಹಾಡಿದರು. ಅಪ್ಸರೆಯರು ಕುಣಿದರು. ಮಂದಮಾರುತವು ಗಂಧಭಾರದಿಂದ ಕಂಪಿಂಪುಗಳನ್ನು ತೀಡಿತು. ಆ ಎಲ್ಲ ದೇವೋತ್ತಮರ ಮುಂಭಾಗದಲ್ಲಿ ಸಾಕ್ಷಾತ್ ಶ್ರೀ ಹರಿಯೇ ಬಂದು ನಿಂದುದನ್ನು ನಂದೀಶ್ವರನು ಮೊದಲು ನೋಡಿದನು. ಕೂಡಲೇ ಅವನು ಆನಂದ·ಭರಿತನಾಗಿ ಆ ಮುಕುಂದನ ಪಾದಾರವಿಂದಗಳಲ್ಲಿ ಭಕ್ತಿಯಿಂದ ಬಾಗಿ ವಂದಿಸಿದನು. ಇತರ

ದೇವತೆಗಳಿಗೂ ನಮಸ್ಕರಿಸಿ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಆಸನಗಳನ್ನು ತಂದಿಟ್ಟು ಎಲ್ಲರನ್ನೂ ಆದರಿಸಿದನು. ಉಳಿದ ದೇವ ಗಂಧರ್ವ ಮುನಿಮನುಜರು ಆ ನಂದಿಯನ್ನು ಪೂಜಿಸಿದರು. ಅನಂತರ ದೇವತೆಗಳು ಆ ನಂದೀಶ್ವರನು ನೀಡಿದ ಸ್ವಾಗತ ಸತ್ಕಾರಗಳನ್ನು ಸ್ವೀಕರಿಸಿ ಮತ್ತೆ ಅವನನ್ನು ಕುರಿತು ''ನಿನಗೆ ವರವನ್ನು ಕೊಟ್ಟು ಕರುಣಿಸಿದ ಆ ಪರಮೇಶ್ವರನು ಎಲ್ಲಿ ಇರುವನು ? ಹೇಳು'' ಎಂದು ಕೇಳಿದರು. ಅದಕ್ಕೆ ಆ ನಂದೀಶ್ವರನು ''ಸ್ವರ್ಗಾಧಿಪತಿಯಾದ ಇಂದ್ರದೇವನೆ, ಮುಂಜವಂತ ಪರ್ವತದಲ್ಲಿ ನನ್ನನ್ನು ಅನುಗ್ರಹಿಸಿ ವರವಿತ್ತ ಬಳಿಕ ಆ ಪರಮೇಶ್ವರನು ಎಲ್ಲಿಗೆ ಹೋದನು ಎನ್ನುವದು ನನಗೂ ಗುರುತಿಲ್ಲ. ನಾನು ನಿನ್ನ ಆಜ್ಞಾಧಾರಕನಾಗಿದ್ದೇನೆ. ನಾನೂ ನೀವೂ ಕೂಡಿಯೇ ಆ ಪರಶಿವನನ್ನು ಹುಡುಕೋಣ'' ಎಂದು ಬಿನ್ನವಿಸಿದನು.

## ಮೃಗರೂಪದಲ್ಲಿ ಮಹಾದೇವರು

**ಬ್ರಹ್ಮ :-** ಅನಂತರ ದೇವೇಂದ್ರನು ಶಂಕರನನ್ನು ಹುಡುಕಬೇಕೆಂದು ನಂದೀಶ್ವರ ಮತ್ತು ತನ್ನ ದೇವತಾ ಪರಿವಾರದೊಂದಿಗೆ ಅಲ್ಲಿಂದ ಹೊರಟನು. ಅವರು ಆಕಾಶ ಮಾರ್ಗದಿಂದ ಮನೋವೇಗದಿಂದ ಹೊರಟು ಸ್ವರ್ಗ ಪಾತಾಳ, ಬ್ರಹ್ಮಲೋಕ, ಭೂಲೋಕದ ಗಿರಿ, ದರಿ, ಗವ್ಹರ, ಗೊಂಡಾರಣ್ಯಗಳಲ್ಲಿ ಎಲ್ಲ ಕಡೆಗೂ ಹುಡುಕಿದರು. ಎಲ್ಲಿಯೂ ಶಿವನ ಗುರುತು ಅವರಿಗೆ ಸಿಕ್ಕಲಿಲ್ಲ. ಕೊನೆಗೆ ಅವರೆಲ್ಲರೂ ಬ್ರಹ್ಮದೇವನನ್ನು ವಿಚಾರಿಸಬೇಕೆಂದು ನನ್ನ ಕಡೆಗೆ ಬಂದರು. ನಾನು ಆ ಎಲ್ಲ ದೇವತೆಗಳನ್ನು ಕರೆದುಕೊಂಡು ರುದ್ರರಮಣೀಯವಾದ ಆ ಶ್ಲೇಷ್ಮಾತಕವನವನ್ನು ಪ್ರವೇಶಮಾಡಿದೆನು. ಕ್ರೂರಪಶುಗಳಿಂದಲೂ, ಶಾಂತಆಶ್ರಮಗಳಿಂದಲೂ, ಏಕಾಂತ ಅರಣ್ಯಗಳಿಂದಲೂ, ಕಿಲಕಿಲ ಸಪ್ಪಳಮಾಡುವ ಪಶುಪಕ್ಷಿಗಳಿಂದಲೂ, ಅಚಲ ಶೃಂಗಗಳಿಂದಲೂ, ನೀರಿನ ಭಾರವನ್ನು ಹೊತ್ತು ಓಡುವ ಝರಿ ತೊರೆಗಳಿಂದಲೂ, ಭೀಷ್ಮ ಬಂಧುರವಾಗಿ, ಪರಮ ಸುಂದರವಾಗಿ ಕಾಣುವ ಆ ವನಾಂತರದಲ್ಲಿ ತಮ್ಮ ತಮ್ಮ ವಿಮಾನಗಳಿಂದ ಇಳಿದ ದೇವತೆಗಳು ಒಳಹೊಕ್ಕು ಗಿರಿದರಿ, ಸಾನುಕಾನು, ಕಾಡು, ಮೇಡು, ಗುಹೆ ಆಶ್ರಮ ಎಲ್ಲ ತಾಣಗಳಲ್ಲಿಯೂ ಹುಡುಕತೊಡಗಿದರು. ಅವರು ಹಾಗೆಯೇ ಮುಂದುವರೆದಾಗ ಒಂದು ನಿಬಿಡವಾದ ಬಾಳೇಬನವನ್ನು ಬಳಸಿಕೊಂಡು ಬೆಳೆದು ನಿಂತ ಗಿಡಗುಂಪಿನ ಅಡಿಯಲ್ಲಿ ಗಿರಿ ತೊರೆಯೊಂದು ತಿಳಿ ನೀರಿನ ತುಂತುರ ಹನಿಯನ್ನು ಚಿಮುಕಿಸುತ್ತ ಹರಿಯುತ್ತಲಿತ್ತು. ಉದುರಿಬಿದ್ದ ಹೂಗಳ ಜೇನು ಹಾಗೂ ಕಂಪುಗಳ ಸರಿಬೆರಿಕೆಯಿಂದ ಆ ನದಿಯ ನೀರಿಗೆ ಮದಿರೆಯ ಸ್ವಾದ, ಆಮೋದ ಎರಡೂ ಒದಗಿ ಬಂದಿತ್ತು. ಆ ನದಿಯ ತಟಾಕದಲ್ಲಿ ಮುತ್ತಿನ ಪುಡಿಯನ್ನೇ ಒಟ್ಟಿಸಿದಂತೆ ಮಳಲು ರಾಶಿಯು ಅತ್ತಿತ್ತ ಬಿತ್ತರಗೊಂಡುಬಿದ್ದಿತ್ತು. ಆ ಪುಲಿನ ಪೀಠದಲ್ಲಿ ಜಿನ್ಮಯ ಮೂರುತಿಯಂತಿದ್ದ ಚೆಲುವಿನ ಕನ್ನೆಯೊಬ್ಬಳು ಮಳಲು ಮುಟ್ಟಿಗೆಯಿಂದ ಆಟವಾಡುತ್ತಿದ್ದಳು.

ಅಂಥ ನಿಲುವನ್ನಾಗಲಿ, ಚೆಲುವನ್ನಾಗಲಿ ಎಂದೂ ಕಂಡರಿಯದ ದೇವತೆಗಳು ಚಕಿತಚಿತ್ತರಾಗಿ ಅವಳಾರೆಂಬುದನ್ನು ತಿಳಿಯಬೇಕೆಂದು ನನಗೆ ಬಿನ್ನವಿಸಿದರು. ಎಲ್ಲ ದೇವತೆಗಳನ್ನು ಹುಟ್ಟಿನ ಕಟ್ಟಿಗೆ ಒಳಪಡಿಸಿದ ನಾನು ತುಸು ಹೊತ್ತು ಆಲೋಚಿಸಿ ಇವಳು

ಶೈಲರಾಜ ಹಿಮವಂತನ ಕುಮಾರಿಯಾದ ಉಮಾದೇವಿಯೇ ಎಂದು ಗುರುತು ಹಿಡಿದೆನು. ಅಲ್ಲಿಂದ ಎಲ್ಲ ದೇವತೆಗಳು ಆ ಬೆಟ್ಟದ ತುತ್ತ ತುದಿಯನ್ನೇರಿ ಅಲ್ಲಿಂದ ಕೆಳಗೆ ನೋಡಿದರು. ಕೆಳಗಡೆ ಚಿಗುರೆಗಳ ಗುಂಪಿನಲ್ಲಿ ಅವರು ಕಾಣಬಯಸಿದ ಶಂಕರನು ತಾನೂ ಒಂದು ಮೃಗವಾಗಿ ನಿಂತುಕೊಂಡಿದ್ದನು. ಬಂಗಾರ ಬಣ್ಣದ ಸುಂದರ ಕಣ್ಣಿನ ಆ ಜಿಂಕೆಯನ್ನು ಕಂಡಕೂಡಲೇ ದೇವತೆಗಳೆಲ್ಲರೂ ಆ ಶಿವನನ್ನು ಹಿಡಿಯಬೇಕೆಂದು ಶಿಖರದಿಂದ ಒಮ್ಮೆಲೇ ಓಡಿದರು. ಇಂದ್ರನು ಮೊದಲು ಹೋಗಿ ಆ ಶಿವ ಮೃಗದ ಕೊಂಬಿನ ತುದಿಯನ್ನೂ, ನಾನು ಮಧ್ಯ ಭಾಗವನ್ನೂ, ವಿಷ್ಣುವು ಮೊದಲ ಭಾಗವನ್ನೂ ಹಿಡಿದುಕೊಂಡೆವು. ನಾವು ಮೂವರು ಹಿಡಿದ ಕೂಡಲೆ ಆ ಚಿಗುರೆಯ ಕೋಮಲವಾದ ಕೋಡು ಮುರಿದು ಮೂರು ಭಾಗವಾಗಿ ನಾವು ಮೂರು ಜನರ ಕೈಯಲ್ಲಿ ಒಂದೊಂದು ಭಾಗವು ಉಳಿಯಿತು. ಆದರೆ ಆ ವಿಚಿತ್ರವಾದಮೃಗವು ಮಾತ್ರ ಅಲ್ಲಿಯೇ ಅದೃಶ್ಯವಾಯಿತು.

ಆಗ ಆ ದೇವನು ಅದೃಶ್ಯನಾಗಿ ನಿಂತುಕೊಂಡು ''ದೇವೋತ್ತಮರೇ, ನಿಮ್ಮ ಕೈಯಲ್ಲಿ ಉಳಿದುಕೊಂಡು ನನ್ನ ಆ ಮುರಿದ ಕೋಡಿನ ಭಾಗಗಳನ್ನು ಜನರ ಮೇಲೆ ಅನುಗ್ರಹ ಮಾಡುವ ಇಚ್ಛೆಯಿಂದ ಇದೇ ಶ್ಲೇಷ್ಮಾತ್ಮಕ ವನದಲ್ಲಿ ಸ್ಥಾಪನ ಮಾಡಿರಿ, ಶಶಿಧರನಾದ ನನ್ನನ್ನು ನೀವು ಹಿಡಿದು ಇಡಿಯಾಗಿ ಭೂಮಿಯಲ್ಲಿ ನೆಲೆಗೊಳಿಸಿದ್ದರೆ ನಾಲ್ಕು ಪಾದಗಳುಳ್ಳ ಪೂರ್ಣ ಧರ್ಮವೇ ಇಲ್ಲಿ ಸುಪ್ರತಿಷ್ಠಿತವಾಗುತ್ತಿತ್ತು. ಆದರೆ ನಾನು ನಿಮ್ಮನ್ನು ವಂಚಿಸಿ ಒಮ್ಮೆಲೇ ಮಾಯವಾಗಿ ಬಿಟ್ಟೆ. ಈಗ ನೀವು ನಿಮಗೆ ದೊರೆತ ಆ ನನ್ನ ಶೃಂಗ ಮಾತ್ರದಿಂದಲೇ ತೃಪ್ತಿಪಟ್ಟು ಇಲ್ಲಿಯೇ ಸ್ಥಾಪಿಸಿರಿ. ನನ್ನ ಪ್ರಭಾವದಿಂದ ಈ ಮಹಾ ಪುಣ್ಯಕ್ಷೇತ್ರದಲ್ಲಿ ಫಲ ಸಮೃದ್ಧಿಯು ಆಗುವದರಲ್ಲಿ ಸಂದೇಹವಿಲ್ಲ. ಭೂಲೋಕದಲ್ಲಿಯ ಎಲ್ಲ ನದಿ ಸಮುದ್ರ ಸರೋವರ ಮೊದಲಾದ ಎಲ್ಲ ಪುಣ್ಯ ತೀರ್ಥಗಳೂ ನನಗಾಗಿ ಈ ಪುಣ್ಯಕ್ಷೇತ್ರಕ್ಕೆ ಬರುವವು. ಈ ಹಿಮಾಲಯ ಪರ್ವತದ ಪಾದ ಪ್ರದೇಶವಾದ ನೇಪಾಳ ದೇಶದಲ್ಲಿ ಭೂತಲದಿಂದ ನಾನಾಗಿಯೇ ಆವಿರ್ಭವಿಸುವೆನು. ನಾಲ್ಕು ಮುಖವುಳ್ಳ ದಿವ್ಯ ತೇಜೋಮಯವಾದ ಶಿರಸ್ಸುಗಳಿಂದ ನಾನು ಶರೀರಿಯೆಂದು ಪ್ರಖ್ಯಾತಿಯನ್ನು ಪಡೆಯುವೆನು. ಅಲ್ಲಿಯ ನಾಗ ಮಡುವಿನಲ್ಲಿ ನೀರಿನೊಳಗೆ ಲೋಕ ಕ್ಷೇಮಕ್ಕಾಗಿ ನಾನು ಮೂವತ್ತು ಸಾವಿರ ವರ್ಷಕಾಲ ಇರುವೆನು.

ಮುಂದೆ ಯಾದವ ಕುಲದಲ್ಲಿ ಅವತಾರ ಮಾಡಿದ ಶ್ರೀ ಕೃಷ್ಣನು ದೇವೇಂದ್ರನ ಅಪೇಕ್ಷೆಯಂತೆ ತನ್ನ ಸುದರ್ಶನ ಚಕ್ರದಿಂದ ಇಲ್ಲಿಯ ಶೈಲ ಮಾಲೆಗಳನ್ನು ಒಡೆದು ಅಲ್ಲಿ ಅಡಗಿರುವ ದೈತ್ಯರನ್ನು ಕೊಂದು ಹಾಕುವನು. ಅನಂತರ ಈ ನೇಪಾಳ ದೇಶವು ಮ್ಲೇಂಛರ ನೆಲೆಯಾಗುವುದು. ಮುಂದೆ ಹಲವಾರು ವರ್ಷಗಳ ಬಳಿಕ ಸೂರ್ಯವಂಶದ ಬೇರೆಯ ಕ್ಷತ್ರಿಯ ರಾಜರು ಆ ಮ್ಲೇಛರನ್ನು ಕೊಂದು ಅಲ್ಲಿ ಮತ್ತೆ ಧರ್ಮರಾಜ್ಯವನ್ನು ಸ್ಥಾಪಿಸುವರು. ಆ ಶೂರವಂಶದ ಕ್ಷತ್ರಿಯರಾಜರು ಈ ಶೂನ್ಯ ಪ್ರದೇಶದಲ್ಲಿ ಲಿಂಗಾರ್ಚನೆಯನ್ನು ನೆಲೆಗೊಳಿಸಿ ನನ್ನನ್ನು ಪೂಜಿಸತೊಡಗುವರು. ಅನಂತರ ಈ ಪ್ರದೇಶವು ಬಹುಜನ ಬ್ರಾಹ್ಮಣರ ಮತ್ತು ರಾಜಮಹಾರಾಜರ ಹಾಗೂ ಉಳಿದೆಲ್ಲ ಆಸ್ತಿಕ ಜನರ ಆವಾಸಸ್ಥಾನವಾಗುವದು. ಗಂಗೆಯ ಉತ್ತರದಲ್ಲಿಯೂ, ಅಶ್ವಿನೀಮುಖದ

ದಕ್ಷಿಣದಲ್ಲಿಯೂ ಇರುವ ಹದಿನಾಲ್ಕು ಯೋಜನ ಪ್ರದೇಶವನ್ನು ನನ್ನ ಶೈವಕ್ಷೇತ್ರವೆಂದು ತಿಳಿಯಬೇಕು. ಸುರ ಸಂಘಗಳಿಂದ ಗಗನಾಂಗಣದಲ್ಲಿ ತಲೆಯೆತ್ತಿ ನಿಂತ ಹಿಮಾಚಲದಿಂದ ವಾಗ್ಮತಿ ಎಂಬ ಒಂದು ನದಿಯು ಉತ್ಪನ್ನವಾಗಿರುತ್ತದೆ. ಆ ನದಿಯ ನೀರು ಗಂಗೆಗಿಂತ ನೂರುಪಟ್ಟು ಪವಿತ್ರವೆಂದು ಹೇಳುತ್ತಾರೆ.

ಆ ವಾಗ್ಮತಿಯ ತೀರದಲ್ಲಿ ನನ್ನ ಪಾದ ಮೂಲದಿಂದ ಹೊರಟಿರುವ ಒರತೆಯ ನೀರಿನ ಮೃಗ ಶೃಂಗೋದಕ ಎಂಬ ತೀರ್ಥದಲ್ಲಿ ಸ್ನಾನ ಮಾಡುವದರಿಂದ ಜೀವಾವಧಿ ಮಾಡಿದ ಪಾಪವೆಲ್ಲವೂ ನಾಶವಾಗುವವು. ಆ ವಾಗ್ಮತೀನದಿಯ ತೀರದಲ್ಲಿ ಶೈಲೇಶ್ವರ ಮೂಲಕ್ಷೇತ್ರದಲ್ಲಿ ರುದ್ರದೇವರು ಸಾಕ್ಷಾತ್ತಾಗಿ ನೆಲೆಸಿರುವನು. ಆ ಕ್ಷೇತ್ರದ ಈಶಾನ್ಯ ಭಾಗದಲ್ಲಿ ನಾಗರಾಜನಾದ ವಾಸುಕಿಯು ವಾಸಿಸಿರುತ್ತಾನೆ. ಮೊದಲು ಆ ನಾಗರಾಜನಿಗೆ ವಂದಿಸಿ ನನ್ನನ್ನು ಬಳಿಕ ವಂದಿಸುವವನು ಜಗದ್ವಂದ್ಯನಾಗುವನು. ಭಕ್ತಿಯಿಂದ ಪೂಜೆಮಾಡುವವನು ದೇವತಾ ಗಣದಲ್ಲಿ ಸೇರ್ಪಡೆಯಾಗುವನು. ಬ್ರಹ್ಮಹತ್ಯಾ, ಗುರುಹತ್ಯಾ, ಗೋಹತ್ಯಾ ಮುಂತಾದ ಮಹಾಪಾಪಗಳನ್ನೆಲ್ಲ ಪರಿಹರಿಸುವ ಈ ಶೈಲೇಶ್ವರ ಕ್ಷೇತ್ರದಲ್ಲಿ ಅನೇಕ ತೀರ್ಥಗಳು ಇರುತ್ತವೆ. ಕ್ರೋಶೋದಕ, ಅನಾಶಕ, ಬ್ರಹ್ಮೋದ್ಭೇದ, ಗೋರಕ್ಷಕ, ಗೌರೀಶಿಖರ, ಉಮಾದೇವಿಸ್ತನ ಕುಂಡ, ಪಂಚನದ, ಪಾವಕ ಪಾನೀಯ, ಬ್ರಹ್ಮೋದಯ ಸುಂದರಿಕಾತೀರ್ಥ ಮುಂತಾದ ಅನೇಕ ತೀರ್ಥಗಳಿದ್ದು ಅವುಗಳಲ್ಲಿ ಸ್ನಾನ ಮಾಡುವದರಿಂದ ಮಾನವರ ಬಂಧಮೋಚನವಾಗಿ ಭಗವದನುಗ್ರಹ ಪ್ರಾಪ್ತಿಯಾಗುತ್ತದೆ.

ವಾಗ್ಮತೀ, ಮಣಿಮತೀ ಈ ಎರಡೂ ನದಿಗಳ ಸಂಗಮ ಕ್ಷೇತ್ರದಲ್ಲಿ ಸ್ನಾನಮಾಡಿ ರುದ್ರಜಪವನ್ನು ಮಾಡುವ ದ್ವಿಜನು ತನ್ನ ಕುಲವನ್ನೆಲ್ಲ ಉದ್ಧರಿಸುವನು. ಆದುದರಿಂದ ಸರ್ವಪ್ರಯತ್ನದಿಂದ ಆಸ್ತಿಕರು ಈ ತೀರ್ಥ ಕ್ಷೇತ್ರಯಾತ್ರೆಯನ್ನು ಮಾಡಬೇಕು. ದೇವತೆಗಳೇ, ನಿಮ್ಮಿಂದ ಸೇವಿತವಾದ ಆ ಶ್ಲೇಷ್ಮಾತಕವನದಲ್ಲಿ ಮೃಗರೂಪದಿಂದ ನಾನು ಸಂಚಾರಮಾಡುವಾಗ ನಿಂತ ನೆಲ, ಕುಳಿತ ಸ್ಥಳ, ಮಲಗಿದ ಜಾಗ, ಓಡಾಡಿದ ನಾಡು, ವಿಶ್ರಮಿಸಿದ ಕಾಡು, ವಿಹರಿಸಿದ ತಾಣಗಳೆಲ್ಲವೂ ಪುಣ್ಯಕ್ಷೇತ್ರವೆನಿಸಿವೆ. ದೇವತೆಗಳೇ, ರುದ್ರದೇವರು ಮೃಗರೂಪದಲ್ಲಿದ್ದಾಗ ಮುರಿದು ಮೂರುಭಾಗವಾಗಿ ರೂಪುಗೊಂಡ ಆ ಶೃಂಗವಿರುವ ಸ್ಥಾನವು ಗೋಕರ್ಣೇಶ್ವರ ಎಂಬ ಪ್ರಸಿದ್ಧ ಕ್ಷೇತ್ರವಾಗುವದು'' ಎಂದು ಹೇಳಿ ಆ ಮಹಾದೇವನು ಅಲ್ಲಿಂದ ಅದೃಶ್ಯನಾಗಿ ಉತ್ತರ ದಿಕ್ಕಿಗೆ ಪ್ರಯಾಣ ಬೆಳೆಸಿದನು.

**ಬ್ರಹ್ಮದೇವ** - ಆ ಶ್ಲೇಷ್ಮಾತಕ ವನದಿಂದ ಮೃಗರೂಪಧಾರಿಯಾದ ಈಶ್ವರನು ಹೊರಟುಹೋದ ಬಳಿಕ ನನ್ನ ಜೊತೆಗೆ ವಿಚಾರಮಾಡಿ ದೇವೇಂದ್ರನು ತನ್ನ ಕೈಯಲ್ಲಿದ್ದ ಶೃಂಗದ ತುದಿಯ ಭಾಗವನ್ನು ಸ್ವರ್ಗಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಪ್ರತಿಷ್ಠೆಮಾಡಿದನು. ನನ್ನ ಕೈಯಲ್ಲಿದ್ದ ಮಧ್ಯಭಾಗವನ್ನು ನಾನು ಆ ಕ್ಷೇತ್ರದಲ್ಲಿಯೇ ವಿಧಿಪೂರ್ವಕವಾಗಿ ಸ್ಥಾಪನೆ ಮಾಡಿದೆನು. ನಾನು ಸ್ಥಾಪಿಸಿದ ಈ ಕ್ಷೇತ್ರವು ಗೋಕರ್ಣ ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ವಿಷ್ಣುವು ತನ್ನ ಕೈಯಲ್ಲಿದ್ದ ಆ ಕೋಡಿನ ಮೂಲಭಾಗವನ್ನು ಶೃಂಗೇಶ್ವರ ಕ್ಷೇತ್ರದಲ್ಲಿ ಸ್ಥಾಪನೆ ಮಾಡಿದನು. ಈ ಮೂರೂ

ಸ್ಥಳಗಳಲ್ಲಿಯೂ ಈಶ್ವರನು ಸನ್ನಿಹಿತನಾಗಿರುತ್ತಾನೆ. ಹೀಗೆ ಮೃಗರೂಪಿಯಾದ ಪರಮೇಶ್ವರನ ಕೊಂಬು ಮೂರು ಕ್ಷೇತ್ರಗಳಲ್ಲಿ ಇಂಬು, ಆಸರೆ ಪಡೆದು ಶ್ರೇಷ್ಠ ಶಿವಸ್ಥಾನವೆಂದು ಪ್ರಖ್ಯಾತಿ ಪಡೆದು ಬಳಿಕ ಅಲ್ಲಿ ಎಲ್ಲ ಕಡೆಗೂ ದೇವ, ದಾನವ, ಗಂಧರ್ವ, ಸಿದ್ಧ ಯಕ್ಷ, ರಾಕ್ಷಸ, ನಾಗ, ಮತ್ತೂ ಮಾನವರು ಅಲ್ಲಿಗೆ ಹೋಗಿ ಯಾತ್ರೆ ಮಾಡಿ ತಪಸ್ಗೈದು ಪರಮೇಶ್ವರನನ್ನು ಮೆಚ್ಚಿಸಿ ಬೇಕಾದ ವರಗಳನ್ನು ಪಡೆದರು. ಬ್ರಹ್ಮಪುತ್ರನಾದ ಪುಲಸ್ತ್ಯ ಮಹರ್ಷಿಯ ಮಗನಾದ ರಾವಣನೂ ಕೂಡ ತನ್ನ ಸಹೋದರರೊಡನೆ ಇಲ್ಲಿಗೆ ಬಂದು ಗೋಕರ್ಣೇಶ್ವರನನ್ನು ಆರಾಧಿಸಿದನು. ಪ್ರಸನ್ನನಾದ ಶಂಕರನಿಂದ ತ್ರಿಲೋಕ ವಿಜಯದ ವರವನ್ನು ಪಡೆದು ಮಗನಾದ ಇಂದ್ರಜಿತನೊಡನೆ ಸ್ವರ್ಗಲೋಕಕ್ಕೆ ದಾಳಿ ಇಟ್ಟನು.

ಆ ಯುದ್ಧದಲ್ಲಿ ದೇವೇಂದ್ರನನ್ನು ಗೆದ್ದು ಅವನು ಸ್ವರ್ಗದಲ್ಲಿ ಸ್ಥಾಪಿಸಿದ ಮೃಗ ರೂಪಧಾರಿ ಶಿವನ ಶೃಂಗದ ಅಗ್ರಭಾಗವನ್ನು ಕಿತ್ತಿ ತಂದನು. ತನ್ನ ಮಗ ಇಂದ್ರಜಿತುವಿನೊಡನೆ ಇಂದ್ರಲೋಕದಿಂದ ಕಿತ್ತಿ ತಂದ ಆ ಶೃಂಗದ ಅಗ್ರ ಭಾಗವನ್ನು ಪಶ್ಚಿಮ ಸಮುದ್ರ ತೀರದಲ್ಲಿ ಇಟ್ಟು ರಾವಣನು ಸಂಧ್ಯಾವಂದನೆಗೆ ಹೋಗಿದ್ದನು. ಅವನು ಮರಳಿಬಂದು ಭೂಮಿಯಲ್ಲಿ ತಾನಿಟ್ಟು ಹೋದ ಆ ಶೃಂಗದ ತುದಿಯನ್ನು ಎತ್ತಿಕೊಂಡು ಹೋಗಬೇಕೆಂದು ಎಷ್ಟು ಪ್ರಯತ್ನಿಸಿದರೂ ಅದನ್ನು ಕೀಳಲು ಶಕ್ಯವಾಗಲಿಲ್ಲ. ಇಟ್ಟ ನೆಲದಲ್ಲಿಯೇ ಗಟ್ಟಿಯಾಗಿ ನಾಟಿಕೊಂಡ ಆ ಶಿವನ ಕೊಂಬನ್ನು ಎಷ್ಟೋ ಹೊತ್ತು ಒದ್ದಾಡಿ ಗುದ್ದಾಡಿದರೂ ಕೀಳಲು ಸಮರ್ಥನಾಗದೆ ರಾವಣನು ನಿರುಪಾಯನಾಗಿ, ನಿರಾಶನಾಗಿ ಕೊನೆಗೆ ಲಂಕೆಗೆ ಅದನ್ನು ಬಿಟ್ಟು ನಡೆದನು. ಹೀಗೆ ಮೃಗರೂಪಿಯಾದ ಶಿವನ ತಾನಾಗಿ ನಾಟಿದ ರಾವಣಾನೀತವಾದ ಶೃಂಗವು ನೆಲೆಸಿದಲ್ಲಿಯೇ ಒಂದು ಕ್ಷೇತ್ರವಾಗಿ ದಕ್ಷಿಣ ಗೋಕರ್ಣ ಎನಿಸಿದೆ. ಭೂತಪತಿಯಾದ ಮಹಾದೇವನು ಅಲ್ಲಿ ತಾನಾಗಿ ಪ್ರತಿಷ್ಠಿತನಾಗಿದ್ದಾನೆ.

ಬ್ರಹ್ಮರ್ಷಿಯೇ, ಉತ್ತರ ಗೋಕರ್ಣೇಶ್ವರ, ದಕ್ಷಿಣ ಗೋಕರ್ಣೇಶ್ವರ ಮತ್ತು ಶೃಂಗೇಶ್ವರ, ಶೈಲೇಶ್ವರ ಮುಂತಾದ ಮುಖ್ಯ ಮುಖ್ಯ ಶೈವ ಕ್ಷೇತ್ರಗಳ ನಿರ್ಮಾಣ ಮತ್ತು ಆ ಕ್ಷೇತ್ರ ಪತಿಗಳ ಮಹಿಮೆ ಮತ್ತು ಪ್ರಭಾವಗಳನ್ನೂ ಮತ್ತೂ ಅಲ್ಲಿಯ ತೀರ್ಥಗಳ ಮಹಿಮೆಗಳನ್ನೂ ಈ ಕ್ಷೇತ್ರಪತಿಯಾದ ಪರಮೇಶ್ವರನ ಆರಾಧನೆಯಿಂದ ಲಭಿಸಬಹುದಾದ ಪುಣ್ಯ, ಫಲ ಸಮೃದ್ಧಿಯನ್ನೂ ನಿಮಗೆ ನಾನು ತಿಳಿಸಿದ್ದೇನೆ.

**ಸನತ್ಕುಮಾರ** :- ಜಗತ್‌ಪೂಜ್ಯನಾದ ಮಹಾಪ್ರಭು ಬ್ರಹ್ಮದೇವನೇ, ನಾನು ಕೇಳಿದ ಮೃಗರೂಪಿಯಾದ ಪರಮೇಶ್ವರನ ಶ್ರೀ ಲೀಲಾಕೌತುಕದ ಕತೆಯನ್ನೂ, ಆ ಮೃಗ ಶೃಂಗದ ಪ್ರತಿಷ್ಠಾದಿ ವಿಷಯಗಳನ್ನೂ ಮತ್ತೂ ಅದರಿಂದ ನಿರ್ಮಿತವಾದ ತೀರ್ಥ ಕ್ಷೇತ್ರಗಳ ವಿಷಯವನ್ನೂ ನೀವು ನನಗೆ ಸರಿಯಾಗಿ ತಿಳಿಸಿ ಹೇಳಬೇಕು.

**ಬ್ರಹ್ಮ** :- ಮುನಿಪುಂಗವ, ನನ್ನ ಮಾನಸ ಪುತ್ರನೂ, ವೇದವೇದಾಂಗ ತತ್ವಜ್ಞನೂ ಆದ ಪುಲಸ್ತ್ಯನು ಕುರುರಾಜ್ಯದ ವಿಚಾರವನ್ನು ಮೊದಲು ಮಾಡಿ ಸರ್ವ ತೀರ್ಥಗಳ ಮಹಾ ಮಹಿಮೆಯನ್ನೂ ಅವುಗಳಿಂದ ಬರತಕ್ಕ ಪುಣ್ಯ ಫಲಪ್ರಯೋಜನಾದಿಗಳನ್ನೂ

ವಿಶದವಾಗಿ ನಿರೂಪಿಸಲಿರುವನು. ಮಹರ್ಷಿ ಪುಲಸ್ತ್ಯನು ನಿರೂಪಿಸಲಿರುವ ಆ ತೀರ್ಥಕ್ಷೇತ್ರ ಮಹಿಮೆ ಶ್ರವಣವು ಧರ್ಮಾರ್ಥ-ಕಾಮ-ಸಾಧಕವೂ, ಐಶ್ವರ್ಯ ಪ್ರದವೂ, ಆಯುಷ್ಕರವೂ, ಮಾಂಗಲ್ಯದಾಯಕವೂ ಆದುದರಿಂದ ಎಲ್ಲ ವರ್ಣದವರೂ ಅದನ್ನು ಕೇಳಿ ಉದ್ಧೃತರಾಗಬೇಕು.

**ಸೂತಮುನಿ** :- ಭಗವಂತನಾದ ಬ್ರಹ್ಮದೇವನು ಮಹಾ ಮಹರ್ಷಿಯಾದ ಸನತ್ಕುಮಾರ ಮುನಿಗೆ ಹೀಗೆ ಉಪದೇಶವನ್ನು ನೀಡಿ ವಿಶ್ರಾಂತಿಯನ್ನು ಹೊಂದಿದನು. ಸಜ್ಜನರೇ, ಶ್ರೀ ವರಾಹ ದೇವರು ಮತ್ತೂ ಭೂದೇವಿಯ ಸಂವಾದ ರೂಪವಾದ ಈ ವರಾಹ ಮಹಾಪುರಾಣವನ್ನು ಸಾರಸಂಗ್ರಹ ರೂಪವಾಗಿ ನಿಮಗೆ ನಾನು ಈವರೆಗೆ ಯಥಾರ್ಥವಾಗಿ ನಿರೂಪಿಸಿದ್ದಾಯಿತು. ಇದನ್ನು ನಿತ್ಯವೂ ಭಕ್ತಿಯಿಂದ ಕೇಳುವವರೂ, ಹೇಳುವವರೂ ಸರ್ವ ಪಾಪಗಳಿಂದ ಮುಕ್ತರಾಗಿ ದಿವ್ಯ ಗತಿಯನ್ನು ಹೊಂದುವರು. ಪ್ರಭಾಸ ಕ್ಷೇತ್ರ, ನೈಮಿಷಾರಣ್ಯ, ಗಂಗಾದ್ವಾರ, ಪುಷ್ಕರ ಕ್ಷೇತ್ರ, ಪ್ರಯಾಗ, ಬ್ರಹ್ಮತೀರ್ಥ ಮುಂತಾದ ಪುಣ್ಯ ಕ್ಷೇತ್ರ ತೀರ್ಥ ಯಾತ್ರೆಗಳಿಂದ ಪಡೆಯಬಹುದಾದ ಪುಣ್ಯ ಫಲದ ಕೋಟಿಪಟ್ಟು ಹೆಚ್ಚಿನ ಪುಣ್ಯವನ್ನು ಶ್ರೀ ವರಾಹ ಪುರಾಣದ ಶ್ರವಣ ಪಠಣದಿಂದ ಪಡೆಯಬಹುದು. ದಿವ್ಯವಾದ ಗೋದಾನ ಅಗ್ನಿಷ್ಟೋಮಾದಿ ಯಜ್ಞಯಾಗಾದಿಗಳಿಂದ ಬರುವ ಫಲವು ಈ ವರಾಹ ಪುರಾಣದ ಒಂದು ಅಧ್ಯಾಯ ಶ್ರವಣದಿಂದಲೇ ಬರುವದರಲ್ಲಿ ಸಂಶಯವಿಲ್ಲ. ಈ ವಿಚಾರದಲ್ಲಿ ವರಾಹದೇವರು ಸ್ವಂತ ಹೇಳಿದ ಮಾತನ್ನು ಕೇಳಿ-

**ವರಾಹ** - ''ನನ್ನ ಮಹಾಮಹಿಮೆಯ ವರ್ಣನಾನುರೂಪವಾದ ಈ ವರಾಹ ಪುರಾಣವನ್ನು ಹೇಳುವವನು ಅಥವಾ ಹೇಳಿಸುವವನು ಅಪುತ್ರಿಕನಾಗಿದ್ದರೂ ಪುತ್ರನನ್ನು ಪಡೆಯುತ್ತಾನೆ. ಪುತ್ರವಂತನಾಗಿದ್ದರೆ ಮೊಮ್ಮಕ್ಕಳನ್ನು ಪಡೆಯುತ್ತಾನೆ. ಈ ವರಾಹ ಪುರಾಣ ಗ್ರಂಥವನ್ನು ಮನೆಯಲ್ಲಿ ಇಟ್ಟುಕೊಂಡು ಶ್ರೀ ಮನ್ ನಾರಾಯಣನನ್ನು ಪೂಜಿಸುವಂತೆಯೇ ಗಂಧ ಪುಷ್ಪಾದಿಗಳಿಂದ ಪೂಜಿಸಬೇಕು. ಈ ಪುರಾಣವನ್ನು ಹೇಳಿದ ಬ್ರಾಹ್ಮಣರನ್ನು ಕೂಡ ವಸ್ತ್ರದಾನ, ಭೂದಾನ, ಗ್ರಾಮದಾನ ಮುಂತಾದವುಗಳಿಂದ ಯಥಾಶಕ್ತಿ ಪೂಜಿಸಬೇಕು. ಅದರಿಂದ ಈ ಪುರಾಣ ಪ್ರತಿಪಾದ್ಯನಾದ ಶ್ರೀ ವಿಷ್ಣು ಸಂತುಷ್ಟನಾಗಿ ತನ್ನ ಪಾದ ಸಾನ್ನಿಧ್ಯವನ್ನು ಕರುಣಿಸುವನು. ಮನಸ್ಸು ಸರಿಯಾಗಿದ್ದಾಗ, ದೇಹವು ಸುಸ್ವಸ್ಥವಾಗಿರುವಾಗಲೇ ದೇಹ ಘಟಕವಾದ ಧಾತುಗಳು ಸಮನಾಗಿ ಇರುವಾಗಲೇ, ವಿಶ್ವರೂಪಿಯಾದ ನನ್ನನ್ನು ಯಾವ ಮನುಷ್ಯನು ಸ್ಮರಣ ಮಾಡುತ್ತಾನೋ ಅಂಥ ಮನುಷ್ಯನು ಮರಣ ಕಾಲದಲ್ಲಿ ಎಚ್ಚರವಿಲ್ಲದೇ ಕಲ್ಲು ಕಟ್ಟಿಗೆಯಂತೆ ನಿಶ್ಚೇಷ್ಟನಾಗಿ ನನ್ನನ್ನು ಸ್ಮರಿಸದಿದ್ದರೂ, ನಾನು ಮಾತ್ರ ಅವನನ್ನು ನೆನಸುತ್ತೇನೆ. ಮತ್ತೂ ಅವನು ನನ್ನ ಭಕ್ತನೆಂದು ನೆನಪಿಟ್ಟು ಅವನನ್ನು ದಿವ್ಯಗತಿಗೆ ಕೊಂಡೊಯ್ಯುತ್ತೇನೆ.

> ''ಸ್ಥಿತೇ ಮನಸಿ ಸುಸ್ವಸ್ಥೆ ಶರೀರೇ ಸತಿ ಯೋ ನರಃ ।
> ಧಾತುಸಾಮ್ಯೇ ಸ್ಥಿತೇ ಸ್ಮರ್ತಾ ವಿಶ್ವರೂಪಂ ಚ ಮಾಮಜಂ ॥
> ತತಸ್ತಂ ಮ್ರಿಯಮಾಣಂ ತು ಕಾಷ್ಠ ಪಾಷಾಣ ಸನ್ನಿಭಂ
> ಅಹಂಸ್ಮರಾಮಿ ಮದ್ಭಕ್ತಂ ನಯಾಮಿ ಪರಮಾಂಗತಿಂ ॥

ಇತಿ ಭಗವಚ್ಛಾಸ್ತ್ರ ಎನಿಸಿದ ಧರಣೀ ವರಾಹ ಸಂವಾದ ರೂಪವಾದ ಕನ್ನಡ ವರಾಹ ಪುರಾಣ ಮುಗಿದುದು. ಸರ್ವಮಾನ್ಯವೂ, ಋಷಿಪೂಜ್ಯವೂ, ಮಂಗಳಪ್ರದವೂ ಆದ ಈ ವರಾಹ ಮಹಾ ಪುರಾಣದಲ್ಲಿ ಬಂದಿರುವ ವೃತ್ತಾಂತಗಳನ್ನು ಅನುಕ್ರಮವಾಗಿ ಈಗ ನಿರೂಪಿಸಲಾಗುತ್ತಿದೆ. ಆದಿಯಲ್ಲಿ ಸಂಬಂಧವನ್ನು ಎಂದರೆ ಪುರಾಣವು ಜನಿಸಲು ಕಾರಣವನ್ನು ಹೇಳಿ ಬಳಿಕ ಆದಿಕರ್ಮ ವೃತ್ತಾಂತವನ್ನು ಹೇಳಿದೆ. ಬಳಿಕ ಆದಿಸೃಷ್ಟ್ಯಾದಿ ವಿಚಾರವನ್ನೂ, ದುರ್ಜಯನೆಂಬ ರಾಜನ ಚರಿತ್ರೆಯನ್ನೂ ಹೇಳಿದೆ. ಆಮೇಲೆ ಶ್ರಾದ್ಧಕಲ್ಪವಿದೆ. ಆದಿ ವೃತ್ತಾಂತಗಳಲ್ಲಿ ಪರಮೋಪಾಖ್ಯಾನವನ್ನೂ, ಮಹಾತಪ ಮುನಿಯ ಚರಿತ್ರೆಯನ್ನೂ, ಅಗ್ನಿಯ ಉತ್ಪತ್ತಿ ವಿಚಾರವನ್ನೂ ಆಮೇಲೆ ಹೇಳಿದೆ.

ಅನಂತರ ಅಶ್ವಿನೀ ದೇವತೆಗಳ ಉತ್ಪತ್ತಿ ವಿಚಾರ, ಗೌರ್ಯುತ್ಪತ್ತಿ ವಿಚಾರ (ಷಣ್ಮುಖ) ಜನನ ವಿಚಾರ, ಆದಿತ್ಯ ಸೃಷ್ಟಿ ವಿಚಾರ, ಕಾಮಾದಿಗಳು ಅಷ್ಟದ ವಿಚಾರ, ದುರ್ಗಾದೇವಿಯ ವಿಚಾರ, ಇವುಗಳನ್ನು ಹೇಳಿದೆ. ಅನಂತರ ಕುಬೇರ ಜನ್ಮ ವಿಚಾರವೂ, ಪರಾಪರ ನಿರ್ಣಯ ವಿಚಾರವೂ, ಧರ್ಮೋತ್ಪತ್ತಿ ವಿಚಾರಗಳೂ ಬಂದಿವೆ. ಅನಂತರ ಸೋಮೋತ್ಪತ್ತಿ ರಹಸ್ಯವನ್ನೂ, ಪ್ರಾಚೀನೇತಿಹಾಸವನ್ನು ವ್ಯಾಧೋಪಾಖ್ಯಾನವನ್ನೂ, ಸತ್ಯತಪೋಪಾಖ್ಯಾನವನ್ನೂ, ಮತ್ಸ್ಯ ದ್ವಾದಶೀ, ಕೂರ್ಮ ದ್ವಾದಶೀ, ವರಾಹ ದ್ವಾದಶೀ, ನರಸಿಂಹ ದ್ವಾದಶೀ, ವಾಮನ ದ್ವಾದಶೀ, ಪರಶುರಾಮ ದ್ವಾದಶೀ, ಶ್ರೀ ರಾಮ ದ್ವಾದಶೀ, ಶ್ರೀ ಕೃಷ್ಣ ದ್ವಾದಶೀ, ಬುದ್ಧ ದ್ವಾದಶೀ, ಕಲ್ಕಿ ದ್ವಾದಶೀ, ಪದ್ಮನಾಭ ದ್ವಾದಶೀ ವ್ರತಗಳ ವಿಚಾರವನ್ನೂ ನಿರೂಪಿಸಲಾಗಿದೆ. ಆಮೇಲೆ ಧರಣೀವ್ರತ ಅಥವಾ ದಾಮೋದರ ದ್ವಾದಶೀ ವ್ರತವನ್ನು ಹೇಳಿ ಉತ್ತಮವಾದ ಅಗಸ್ತ್ಯ ಗೀತೆಯಲ್ಲಿ ಪಶುಪಾಲೋಪಾಖ್ಯಾನವನ್ನು, ಉತ್ತಮಪತಿ ಪ್ರಾಪ್ತಿ ವ್ರತವನ್ನು ಹೇಳಲಾಗಿದೆ. ಬಳಿಕ ಶುಭವ್ರತ, ಧನ್ಯವ್ರತ, ಕಾಂತಿವ್ರತ, ಸೌಭಾಗ್ಯವ್ರತ, ಅವಿಘ್ನವ್ರತ, ಶಾಂತಿವ್ರತ, ಕಾಮವ್ರತ, ಆರೋಗ್ಯವ್ರತ, ಪುತ್ರಪ್ರಾಪ್ತಿವ್ರತ, ಶೌರ್ಯವ್ರತ, ಸಾರ್ವಭೌಮವ್ರತ ಇವುಗಳ ವಿಚಾರವು ಬಂದಿದೆ. ಅನಂತರ ಪುರಾಣ ಪ್ರಶಂಸೆ, ರುದ್ರಗೀತೆ, ಪ್ರಕೃತಿ ಪುರುಷ ನಿರ್ಣಯ ವಿಚಾರ, ಭುವನಕೋಶವರ್ಣನೆ, ಜಂಬೂದ್ವೀಪಮರ್ಯಾದಾ ವರ್ಣನೆ ಮುಂತಾದವು ಬರುತ್ತವೆ. ಆ ಮೇಲೆ ಭಾರತಾದಿ ವರ್ಷಗಳ ವಿಚಾರ, ನಾರದ ಮಹಿಷಾಸುರರ ಸಂವಾದ, ಶಕ್ತಿಮಹಿಮೆ, ಮಹಿಷಾಸುರವಧೆ, ಪರ್ವಾಧ್ಯಾಯ ಇವುಗಳನ್ನು ಹೇಳಿದೆ.

ಬಳಿಕ ಶ್ವೇತೋಪಾಖ್ಯಾನ, ತ್ರಿಧೇನುದಾನ, ಜಲಧೇನುದಾನ, ರಸಧೇನು ದಾನ, ಗುಡಧೇನುದಾನ, ಶರ್ಕರಾಧೇನುದಾನ, ಮಧುಧೇನುದಾನ, ದಧಿಧೇನುದಾನ, ಲವಣಧೇನುದಾನ, ಕಾರ್ಪಾಸ (ಹತ್ತಿ) ಧೇನುದಾನ, ಧಾನ್ಯಧೇನುದಾನ ಇವುಗಳ ವಿಚಾರವನ್ನು, ಭಗವಚ್ಛಾಸ್ತ್ರ ಲಕ್ಷಣವನ್ನು, ವಿಷ್ಣುಸ್ತೋತ್ರವನ್ನು ಭೂದೇವಿಯು ಶ್ರೀ ವರಾಹದಲ್ಲಿ ಕೇಳಿದ ವಿವಿಧ ಪ್ರಶ್ನೆಗಳನ್ನೂ ಹೇಳಿದೆ. ಅದೂ ಆದ ಮೇಲೆ ಭಗವದ್ಭಕ್ತರ ಲಕ್ಷಣಗಳೂ, ಸುಖದುಃಖಗಳ ಸ್ವರೂಪವೂ, ಪೂಜಾದಿ ಕರ್ಮಪರರು ತ್ಯಜಿಸಬೇಕಾದ ಮೂವತ್ತೆರಡು ಅಪರಾಧಗಳೂ, ನಾನಾ ಮಂತ್ರಗಳೂ, ದೇವಪೂಜೋಪಸ್ಕರಣ ವಿಧಿಯೂ ಭೋಜ್ಯಾಭೋಜ್ಯ ವಿಧಿಯೂ ಸಂಧ್ಯೋಪಸ್ಥಾನ

ಮಂತ್ರವೂ ಉಕ್ತವಾಗಿದೆ. ಬಳಿಕ ಯೋಗಿಗಳಲ್ಲದವರೂ ಪುನರ್ಜನ್ಮವನ್ನು ತಪ್ಪಿಸಿಕೊಳ್ಳುವ ಮಾರ್ಗವನ್ನೂ, ಕೋಕಾಮುಖವೆಂಬ ಕ್ಷೇತ್ರದ ಮಹಿಮೆಯನ್ನೂ, ಭಗವಚ್ಛಾಸ್ತ್ರದಲ್ಲಿಯ ಪುಷ್ಪಗಳ ಮಹಿಮೆಯನ್ನೂ, (ಋತೂಪಸ್ಕರ) ಭಿನ್ನ ಋತುಗಳಲ್ಲಿ ಪೂಜೆಮಾಡುವಂಥವಾದ ಪುಷ್ಪಾದಿಗಳ ವಿಚಾರವನ್ನೂ, ಮಾಯಾಚಕ್ರವನ್ನೂ, ಕುಬ್ಜಾಮ್ರಕ ಕ್ಷೇತ್ರದ ಮಹಾತ್ಮ್ಯವನ್ನೂ, ವರ್ಣದೀಕ್ಷಾ ವಿಚಾರವನ್ನೂ ಬಿತ್ತರಿಸಲಾಗಿದೆ. ಅನಂತರ ದೇವರಿಗೆ ಅಂಜನದ ಪರ್ಣಾದಿಗಳನ್ನು ಅರ್ಪಿಸುವ ಮಂತ್ರಗಳನ್ನೂ ರಾಜಾನ್ನಭಕ್ಷಣ ಪ್ರಾಯಶ್ಚಿತ್ತವನ್ನೂ, ಹಲ್ಲುಜ್ಜದೇ ಕರ್ಮಗಳನ್ನಾಚರಿಸಿದರೆ ಮಾಡಬೇಕಾದ ಪ್ರಾಯಶ್ಚಿತ್ತವನ್ನೂ, ಶವಾದಿ ಸ್ಪರ್ಶಮಾಡಿ ವಿಧಿಯಂತೆ ಪರಿಶುದ್ಧನಾಗದೆ ದೇವಪೂಜಾದಿಗಳನ್ನು ಮಾಡಿದುದಕ್ಕೂ, ಮಂತ್ರತ್ಯಾಗ ಮಾಡಿದುದಕ್ಕೂ, ನೀಲವಸ್ತ್ರವನ್ನು ಧರಿಸಿ, ಕೋಪವುಳ್ಳವನಾಗಿ ರಕ್ತವಸ್ತ್ರಧಾರಿಯಾಗಿ ಅಥವಾ ಕತ್ತಲೆಯಲ್ಲಿ ದೇವಪೂಜೆ ಮಾಡಿದುದಕ್ಕೂ ಪ್ರಾಯಶ್ಚಿತ್ತವನ್ನೂ ಹೇಳಿದ್ದಾರೆ. ಆಮೇಲೆ ಕಪ್ಪು ಬಟ್ಟೆಯನ್ನು ಅಥವಾ ಮೈಲಿಗೆಯ ಬಟ್ಟೆಯನ್ನುಟ್ಟು ದೇವರನ್ನು ಪೂಜಿಸಿದುದಕ್ಕೂ, ವರಾಹಾದಿ ಮಾಂಸ ಭಕ್ಷಣಕ್ಕೂ, ದೀಪದ ಎಣ್ಣೆಯನ್ನು ಮುಟ್ಟಿ ಹಸ್ತಶುದ್ಧಿ ಮಾಡಿಕೊಳ್ಳದೆಯೂ, ಸ್ಮಶಾನಕ್ಕೆ ಹೋಗಿ ಸ್ನಾನ ಮಾಡದೆಯೂ ದೇವಸ್ಪರ್ಶ ಪೂಜಾದಿಗಳನ್ನು ಮಾಡಿದುದಕ್ಕೂ ಪ್ರಾಯಶ್ಚಿತ್ತವು ವಿಹಿತವಾಗಿದೆ. ಬಳಿಕ ತಿಂಡಿಯನ್ನು ತಿಂದು ದೇವರ ಪೂಜೆಯನ್ನುಮಾಡಿದರೂ, ಪಾದರಕ್ಷೆಯನ್ನು ಹಾಕಿಕೊಂಡು ದೇವಾಲಯಾದಿಗಳಿಗೆ ಹೋದರೂ, ಭಗವಚ್ಛಾಸ್ತ್ರದಲ್ಲಿ ಹೇಳಿರುವಂತೆ ಪೂಜಾದಿಗಳನ್ನು ಮಾಡದಿದ್ದರೂ ಆಚರಿಸಬೇಕಾದ ಪ್ರಾಯಶ್ಚಿತ್ತವು ಉಕ್ತವಾಗಿದೆ.

ಆ ಮೇಲೆ ವರಾಹ ಅಥವಾ ಸೌಕರ ಕ್ಷೇತ್ರ ಮಹಿಮೆಯನ್ನೂ, ನರಿಹದ್ದುಗಳ ಮತ್ತು ಖಜರೀಟವೆಂಬ ಹಕ್ಕಿಯ ಕಥೆಯನ್ನೂ ಮತ್ತೆ ಕೋಕಾಮುಖಕ್ಷೇತ್ರದ ಮಹಿಮೆಯನ್ನೂ, ರಹಸ್ಯಧರ್ಮವನ್ನೂ, ಮಂದಾರ ಮಹಿಮೆಯನ್ನೂ, ಶಾಲಗ್ರಾಮ ಪ್ರಹಶೆಯನ್ನೂ ಹೇಳಿದೆ. ಬಳಿಕ ಸೋಮೇಶ್ವರ ಕ್ಷೇತ್ರ, ಮುಕ್ತಿಕ್ಷೇತ್ರ, ತ್ರಿವೇಣಿ, ಗಂಡಕಿ ಇವುಗಳ ಮಹಿಮೆಯೂ, ಚಕ್ರ ತೀರ್ಥ, ಹರಿಕ್ಷೇತ್ರ, ದೇವಹ್ರದ, ಕುರುಕ್ಷೇತ್ರ ಇವುಗಳ ಮಹಿಮೆಯೂ ಉಕ್ತವಾಗಿದೆ. ಅನಂತರ ಗೋನಿಷ್ಕ್ರಮಕ್ಷೇತ್ರ, ದ್ವಾರಕೀ ಮತ್ತು ಅಲ್ಲಿರುವ ತೀರ್ಥಗಳು ಲೋಹಾರ್ಗಲ (ವೆಂಬ) ಕ್ಷೇತ್ರ ಇವುಗಳ ಮಹಿಮೆಯನ್ನು ಹೇಳಿದೆ. ಬಳಿಕ ಮಧುರಾ ತೀರ್ಥ ಮಹಿಮೆ, ಮಧುರೆಯ ಪ್ರಾದುಭಾಜ, ಯಮುನಾ ತೀರ್ಥಗಳ ಮಹಿಮೆ, ಚಕ್ರತೀರ್ಥ ಪ್ರಾಶಸ್ತ್ಯ, ಕಪಿಲ ಗೋವರ್ಧನ ಕ್ಷೇತ್ರಗಳ ಮಹಿಮೆ, ಉಪಾಖ್ಯಾನ ಸಹಿತವಾದ ವಿಶ್ರಾಂತಿತೀರ್ಥ ಮಹಿಮೆ, ಗೋಕರ್ಣತೀರ್ಥ ಮಹಿಮೆ, ಸರಸ್ವತಿಯ ಮಹಿಮೆ ಇವುಗಳನ್ನು ಹೇಳಿದೆ. ಯಮುನಾ ಸಂಗಮಹಿಮೆ, ಕಾಲಿಂಜರ ಕ್ಷೇತ್ರ ಮಹಿಮೆ ವಿಚಾರ ಇವುಗಳನ್ನು ಹೇಳಿದೆ.

ಮಧುಕ ಪ್ರತಿಮೆ ಶಿಲಾಮೂರ್ತಿಯ, ಮೃಣ್ಮರು ತಾಮ್ರ ಮೂರ್ತಿಯ, ಕಾರಿಸ್ಯಮೂರ್ತಿಯ. ರಜತ ಮೂರ್ತಿಯ ಅನುಷ್ಠಾನಾದಿ ಕ್ರಮವನ್ನು ಹೇಳಿದೆ. ಬಳಿಕ ಶ್ರಾದ್ಧೋತ್ಪತ್ತಿ ಪಿಂಡಸಂಕಲ್ಪ, ಪಿಂಡೋತ್ಪತ್ತಿ, ಪಿತೃಯಜ್ಞ ನಿರ್ಣಯ ಇವುಗಳ ವಿಚಾರವಿದೆ. ಅನಂತರ ಮಧುಪರ್ಕೋತ್ಪತ್ತಿ, ಮಧುಪರ್ಕದಾನವಿಧಿಫಲಾದಿಗಳ

ವಿಚಾರವೂ ಸಂಸಾರ ಚಕ್ರ ವರ್ಣನೆಯೂ, ದುಷ್ಕೃತ ಸುಕೃತಗಳ ಮತ್ತು ಸುಖ ದುಃಖಗಳ ವರ್ಣನೆಯೂ ಇವೆ. ಬಳಿಕ ಯಮದೂತರ ಮತ್ತು ಅವರ ಯಾತನೆಯ ಸ್ವರೂಪವನ್ನೂ, ನರಕಗಳ ಮತ್ತು ಅಲ್ಲಿಯ ಕಿಂಕರರ ವರ್ಣನೆಯನ್ನೂ, ಕರ್ಮಾನುಸಾರವಾದ ಪರಿಣಾಮ ಅಥವಾ ಫಲ ವಿಚಾರವನ್ನೂ, ಪಾಪಕರ್ಮಗಳನ್ನೂ, ಯಮನು ದೂತರನ್ನು ಆಜ್ಞಾಪಿಸಿ ಕಳುಹಿಸುವುದನ್ನೂ ಹೇಳಿದೆ. ಅನಂತರ ಶುಭಾಶುಭ ವಿಚಾರವೂ, ಶುಭಕರ್ಮ ಫಲೋದಯ ವಿಚಾರವೂ, ಮನುಷ್ಯ ಪ್ರಲೋಭನ ವಿಚಾರವೂ, ನಿಮಿಚಕ್ರವರ್ತಿಯ ಅದ್ಭುತ ಕಥೆಯೂ ಇವೆ. ಆಮೇಲೆ ಪಾಪನಾಶಮಾರ್ಗಗಳನ್ನೂ, ದಿವ್ಯ ಕತೆಗಳನ್ನೂ, ಗೋಕರ್ಣೇಶ್ವರ ಕ್ಷೇತ್ರ ಮಹಿಮೆಯನ್ನೂ, ನಂದಿಗೆ ಶಂಕರನ ವರದಾನವನ್ನೂ, ಜಲೇಶ್ವರ, ಶೈಲೇಶ್ವರ, ಶೃಂಗೇಶ್ವರ ಮಹಿಮೆಯನ್ನೂ, ವರಾಹ ಪುರಾಣ ಶ್ರವಣ ಪಠನಾದಿಗಳ ಫಲವನ್ನೂ ಹೇಳಿದೆ. ಇದು ವರಾಹ ಪುರಾಣದ ವೃತ್ತಾಂತ ಸಂಗ್ರಹ. ಇದನ್ನು ಕೇಳುವವರು ವರಾಹಪುರಾಣ ಶ್ರವಣದ ಫಲವನ್ನು ಪಡೆಯುವರು.

ಇತಿ ಶ್ರೀ ವೇದವ್ಯಾಸಪ್ರಣೀತ ವರಾಹ ಮಹಾಪುರಾಣ ಸಂಪೂರ್ಣ

ಓಂ ಶಾಂತಿ ಶಾತಿ ಶಾತಿಃ



